# ನಾನಿಕಾಕಾ
# ಎನ್ಕೆ ಬದುಕು-ಬರೆಹ

ಶ್ರೀ ಎನ್. ಕೆ. ಕುಲಕರ್ಣಿ ಅವರ

ಜೀವನ ಹಾಗೂ ಸಾಹಿತ್ಯ ಪರಿಚಯ

ಸಂಪಾದಕರು

**ಸಿದ್ಧಲಿಂಗ ಪಟ್ಟಣಶೆಟ್ಟಿ**

ಎನ್ಕೆ ಸನ್ಮಾನ ಸಮಿತಿ

ಪರವಾಗಿ

ಸುಂದರ ಪುಸ್ತಕ ಪ್ರಕಾಶನ

ಮಾಳಮಡ್ಡಿ, ಧಾರವಾಡ - ೭

ನಾನಿಕಾಕಾ : ಎನ್ಕೆ ಬದುಕು-ಬರೆಹ

ಶ್ರೀ ಎನ್. ಕೆ. ಕುಲಕರ್ಣಿ ಅವರ ಜೀವನ ಹಾಗೂ ಸಾಹಿತ್ಯ ಪರಿಚಯ

ಸಂಪಾದಕರು : ಸಿದ್ಧಲಿಂಗ ಪಟ್ಟಣಶೆಟ್ಟಿ



ಎನ್ಕೆ ಸನ್ಮಾನ ಸಮಿತಿ ಪರವಾಗಿ
ಸುಂದರ ಪುಸ್ತಕ ಪ್ರಕಾಶನ,
ಮಾಳಮಡ್ಡಿ, ಧಾರವಾಡ - ೭

ಹೊದಿಕೆ : ಶಶಿ ಸಾಲಿ ಮತ್ತು ಸುರೇಶ ಕುಲಕರ್ಣಿ
ಪುಟ : ೫೨೪

ಮುದ್ರಕರು : ತ್ವರಿತ ಮುದ್ರಣ, ಗದಗ ಮತ್ತು ಆದರ್ಶ ಮುದ್ರಣ, ಕಿಲ್ಲೆ, ಹುಬ್ಬಳ್ಳಿ



**NANIKAKA : ENKE BADUKU-BAREHA**

Articles on the Life & Literature of Shri N. K. Kulkarni
Editor : Siddhaling Pattanshetti

Published in September 1983 by
Sundara Pustaka Prakashana,
Malamaddi, Dharwad - 7

Price : Rs. 75/-

# ನನ್ನ ಮಾತು

೧೯೮೩ರ ಆಗಸ್ಟ್ ೨೮/೨೯ಕ್ಕೆ ತಮ್ಮ ಆಯುಷ್ಯದ ಎಪ್ಪತ್ತೊಂದರಲ್ಲಿ ಕಾಲಿಡುತ್ತಿರುವ ಎನ್. ಕೆ. ಕುಲಕರ್ಣಿ ಅವರ ವ್ಯಕ್ತಿತ್ವ ಹಾಗೂ ಕೃತಿತ್ವಗಳನ್ನು ಕುರಿತು ಪುಸ್ತಕವೊಂದನ್ನು ಸಂಪಾದಿಸಬೇಕು, ಆ ಕಾರ್ಯವನ್ನು ನಾನು ವಹಿಸಿಕೊಳ್ಳಬೇಕು ಎಂದು ಶೇ. ಗೋ. ಕುಲಕರ್ಣಿ ಅವರು ತಮ್ಮ ಕಳಕಳಿಯನ್ನು ನನ್ನೆದುರು ವ್ಯಕ್ತಪಡಿಸಿದರು. ಆ ವೊದಲು ಈ ಪುಸ್ತಕದ ಬಗ್ಗೆ ಯಾವ ಹೊಳಹೂ ನನಗಿರಲಿಲ್ಲ. ಮುಂದೆ ಒಂದೆರಡು ತಿಂಗಳಲ್ಲಿ ಆದರ ಬಗ್ಗೆ ನಾನು ಸಾವಕಾಶ ಯೋಜನೆ ಹಾಕಿದಾಗ ಅದನ್ನು ಕೇಳಲು, ಇದನ್ನು ನೋಡಲು ಶೇ. ಗೋ. ಇಲ್ಲದ್ದು ಬಹಳ ನೋವಿನ ಸಂಗತಿ.

ಸಾಹಿತ್ಯದ ಸುಮಾರು ಎಲ್ಲ ಪ್ರಕಾರಗಳಲ್ಲಿ ಕೈಯಾಡಿಸಿ ತಮ್ಮ ದುಃಖ-ದುಮ್ಮಾನ, ಕಲೆಗಾರಿಕೆ, ವಿಚಾರ-ವಿಸ್ತಾರಗಳನ್ನು ಐವತ್ತಕ್ಕಿಂತ ಹೆಚ್ಚು ಕೃತಿಗಳಲ್ಲಿ ಹರವಿಕೊಂಡಿರುವ ಎನ್ಕೆಯವರ ವ್ಯಕ್ತಿತ್ವಕ್ಕೆ ಮುಖಗಳು ಹಲವು : ಶಿಕ್ಷಕ, ಪತ್ರಿಕಾ ಸಂಪಾದಕ, ಸಂಶೋಧಕ, ನಟ, ಲೇಖಕ ಇತ್ಯಾದಿ. ನಾನಿಕಾಕಾ ಎನ್ನುವ ಆಕಾಶವಾಣಿ ಅಭಿಧಾನದಿಂದಲೆ ಹಿರಿಕಿರಿಯರಿಗೆ ಪರಿಚಿತರಿರುವ ಎನ್ಕೆ ಹಲವು ಭಾಷೆಗಳಲ್ಲಿ ಅಧಿಕಾರ ಹೊಂದಿರುವ ವಿದ್ವಾಂಸ, ರಸಿಕ, ನಗೆಗಾರ, ಕುಶಲ ಮಾತುಗಾರ. ಎಲ್ಲರನ್ನು ಸುಪ್ರೀತಗೊಳಿಸುವ ವಿಶಿಷ್ಟ ಸ್ವಭಾವ ಹೊಂದಿದ ಎನ್ಕೆ ಮುಖ್ಯವಾಗಿ ಹಾಸ್ಯ ಸಾಹಿತಿ, ಯಶಸ್ವೀ ಭಾಷಣಕಾರ ಹಾಗೂ ಆಕಾಶವಾಣಿಯ ಸಫಲ ಪ್ರಸಾರಕ. ಕನ್ನಡ ಪ್ರಸಾರ ವ್ಯವಸಾಯದಲ್ಲಿ ಬಹುಶಃ ಅವರಷ್ಟು ಬಹುಶ್ರುತ ಹಾಗೂ ಬಹುಕೃತರು ಕಡಿಮೆ.

ಎನ್ಕೆ ಅವರ ಅನೇಕ ಕೃತಿಗಳು ಪ್ರಕಟವಾಗಿದ್ದರೂ ಸಾಕಷ್ಟು ಜನರನ್ನು ಮುಟ್ಟದಿದ್ದುದು, ಮರುಮುದ್ರಣಗೊಳ್ಳದಿದ್ದುದು ಹಾಗೂ ಅವರ ಕೆಲವು ಕೃತಿಗಳು ಪ್ರಕಟಗೊಳ್ಳದೇ ಉಳಿದಿರುವುದು-ಅವರಷ್ಟು ಹೆಸರು ಮಾಡಿಕೊಂಡವರಿಗೂ ಇದು ಘಟಿಸಿದುದು-ಆಶ್ಚರ್ಯಕಾರಕ ಸತ್ಯ. ಸಾಹಿತಿಗಳು, ವಿಮರ್ಶಕರು ತಮ್ಮನ್ನು ಉಪೇಕ್ಷಿಸಿದ್ದನ್ನು ಅವರು ನೊಂದುಕೊಂಡು ಬರೆದಿದ್ದಾರೆ. ಸಾಹಿತ್ಯ ಜೀವನದಲ್ಲಿ ಇಷ್ಟು ದೀರ್ಘ ಪಥವನ್ನು ಕ್ರಮಿಸಿದ ಒಬ್ಬ ಬರೆಹಗಾರನನ್ನು ಕುರಿತು ಉಪೇಕ್ಷೆ, ಅಲಕ್ಷ್ಯ ಮಾಡುವುದಕ್ಕಿಂತ ಆತ್ಮೀಯವಾಗಿ ಅವನನ್ನು ವಿಮರ್ಶಿಸಿ ಸ್ಪಷ್ಟವಾಗಿ ಅವನ ಸ್ಥಾನವನ್ನು ಕಂಡುಕೊಳ್ಳುವುದು, ತೋರಿಸುವುದು ಸರಿಯಾದೀತು.

ಕುಮಾರವ್ಯಾಸನ ಜೀವನ ಹಾಗೂ ಕಾವ್ಯವನ್ನು ಕುರಿತು ಎನ್ಕೆ ಬಹಳಷ್ಟು ವಿವೇಚಿಸಿದ್ದಾರೆ. ನಾಟಕ ಕ್ಷೇತ್ರದಲ್ಲಿ ತಮಗಿದ್ದ ಅಪಾರ ಅನುಭವವನ್ನು ಕೃತಿಗಳಲ್ಲಿ ಮೂಡಿಸಿದ್ದಾರೆ. ತಮ್ಮ ವ್ಯಕ್ತಿಗತ ಬದುಕಿನ ಸಾವು-ನೋವುಗಳನ್ನು ಕಾದಂಬರಿಗಳಲ್ಲಿ ನಿರೂಪಿಸಿದ್ದಾರೆ. ಬೇಂದ್ರೆ, ಶ್ರೀರಂಗ, ಮುಗಳಿ, ಗೋಕಾಕ ಮುಂತಾದವರ ಸಮೀಪ ಸಂಬಂಧದಿಂದ ಸಾಕಷ್ಟು ದೊಡ್ಡ ವಲಯದಲ್ಲಿ ಪ್ರಚಾರ ಪಡೆದಿದ್ದಾರೆ. ಆದರೂ ಅವರಿಗೆ ಹೆಚ್ಚಿನ ಮನ್ನಣೆ ಸಿಗಬೇಕು.

ಇಲ್ಲಿ ಅವರ ಬದುಕು ಬರೆಹಗಳನ್ನು ಕುರಿತು ಅವರ ಅನೇಕ ಮಿತ್ರರು, ಹಿರಿಯ ಆತ್ಮೀಯರು, ಶಿಷ್ಯರು, ಸಂಬಂಧಿಕರು ಮುಂತಾದವರಿಂದ ಲೇಖನಗಳನ್ನು ಸಂಪಾದಿಸಿದ್ದೇನೆ. ಬದುಕು ಬರೆಹಗಳಲ್ಲಿ ಎನ್ಕೆ ಅಭಿನ್ನರಾಗಿರುವುದರಿಂದ ಅನೇಕರು ಅವರನ್ನು ಕುರಿತು ಬರೆದಾಗ ಅವರ ಬರೆಹವನ್ನು, ಅವರ ಬರೆಹದ ಬಗ್ಗೆ ಬರೆದಾಗ ಅವರ ಬದುಕನ್ನು ನೆನೆಯುತ್ತ, ಮೂಡಿಸುತ್ತ ಅನಿವಾರ್ಯ ಗೊಂದಲವೊಂದರಲ್ಲಿ ಸಿಲುಕಿ ಮಿಶ್ರ ಲೇಖನಗಳನ್ನು ನೀಡಿದ್ದಾರೆ. ಅವರ ಹೆಚ್ಚಿನ ಕೃತಿಗಳ ಬಗ್ಗೆ ಪರಿಚಯ ಲೇಖನಗಳು ಇಲ್ಲಿವೆ.

ಈ ಗ್ರಂಥ ರೂಪುಗೊಳ್ಳಲು ಅನೇಕ ದೃಷ್ಟಿಯಿಂದ ಸಹಕಾರ ನೀಡಿದ ಎನ್ಕೆ; ಪ್ರಕಾಶನ ಹಾಗೂ ಪ್ರಚಾರದ ಹೊಣೆ ಹೊತ್ತ ಶಿವಾನಂದ ಗಾಳಿ, ಎನ್ಕೆ ಸಮಿತಿ; ಕೆಲವು ಬ್ಲಾಕ್ಸ್ ನೀಡಿ ಸಹಕರಿಸಿದ ಸಂಯುಕ್ತ ಕರ್ನಾಟಕ; ಫ. ಶಿ. ಭಾಂಡಗೆ, ಶಶಿ ಸಾಲಿ, ಸುರೇಶ ಕುಲಕರ್ಣಿ, ರವೀಂದ್ರ ಆಕಳವಾಡಿ, ಶಾಲಿವಾಹನ; ಹಾಗೂ ಮುಖ್ಯವಾಗಿ ಲೇಖನಗಳನ್ನು ನೀಡಿದ ಎಲ್ಲ ಮಹನಿಯರಿಗೆ ನಾನು ಕೃತಜ್ಞ.

೨೮-೮-೧೯೮೩
ಶ್ರೀದೇವಿನಗರ, ವಿದ್ಯಾಗಿರಿ
ಧಾರವಾಡ – ೪

— ಸಿದ್ಧಲಿಂಗ ಪಟ್ಟಣಶೆಟ್ಟಿ

# ಪರಿವಿಡಿ



ಎನ್ಕೆ ಅವರ ತಂದೆ ಕೃಷ್ಣರಾಯರು



ನಾನಿಮಾಸ್ತರ್ : ೧೯೪೦



ಮೂವರು ಸೋದರರು

ಗುಂಡೇರಾವ್. ಎನ್ಕೆ. ನರಸಿಂಗ್‌ರಾವ್



ಮೊದಲನೆಯ ಪತ್ನಿ ಇಂದಿರಾ



ಎರಡನೆಯ ಪತ್ನಿ ನಾಗವೇಣಿ ಎನ್ಕೆ



ನಿಂತವರು : ಅರವಿಂದ (ಹಿರಿಯ ಮೊಮ್ಮಗ), ಪ್ರಲ್ಹಾದ (ಹಿರಿಯ ಮಗ), ಮುರಲಿ ಎರಡನೆಯ ಮಗ), ರವಿ (ಮೂರನೆಯ ಮಗ), ಇಂದಿರಾ (ಹಿರಿಯ ಮೊಮ್ಮಗಳು)
ಕುಳಿತವರು : ಕಮಲಾ (ಹಿರಿಯ ಸೊಸೆ), ಎನ್ಕೆ, ಸುಹಾಸ (ಕಿರಿಯ ಮೊಮ್ಮಗ), ವಿಮಲಾ (ಎರಡನೆಯ ಸೊಸೆ) ಮಾಯಾ (ಮೂರನೆಯ ಸೊಸೆ)



ನಿಂತವರು : ಜಿ. ಜಿ. ಹೆಗಡೆ, ಎನ್ಕೆ
ಕುಳಿತವರು : ಅ. ನ. ಕೃ., ವೆಂಕಟಾಚಲಪತಿ, ಮಾ. ನಾ. ಚೌಡಪ್ಪ
ಗದಗ, ೧೯೩೯



ಡಾ. ಬೇಂದ್ರೆ, ಡಾ. ಗೋಕಾಕ ಮುಂತಾದವರೊಂದಿಗೆ
ಬೀದರದಲ್ಲಿ ಝರಸಾಸ್ನಾನ : ಫೆಬ್ರುವರಿ, ೧೯೬೬



ಬೇಂದ್ರೆ ಅವರೊಂದಿಗೆ : ೧೯೮೦

ಆಕಾಶವಾಣಿಯ 'ಗೃಹಗೋಷ್ಠಿ' :

ಗುರಣ್ಣ (ರೇಡಿಯೋಕಾಕಾ ಹಿರೇಮಠ), ನಾನಿಕಾಕಾ (ಎನ್ಕೆ), ಪ್ರಭಾ (ಪ್ರಭಾ ಸಿರು



ಕೇಂದ್ರ ಪ್ರಸಾರಮಂತ್ರಿ ಶ್ರೀ ವಿದ್ಯಾಚರಣ ಶುಕ್ಲ ಅವರಿಂದ 'ದಲಿತ ದುಂದುಭಿ' ರೂಪಕಕ್ಕೆ
ಅ. ಭಾ. ಆಕಾಶವಾಣಿಯ ಪ್ರಥಮ ಪ್ರಶಸ್ತಿ ಸ್ವೀಕಾರ : ಮಾರ್ಚ್, ೧೯೭೬

ಕನ್ನಡ ಸಾಹಿತ್ಯ ಪರಿಷತ್ತಿನಿಂದ 'ಹಾಸ್ಯ ಸಾಹಿತಿ' ಗೌರವ
ಎನ್ಕೆ, ಜಿ. ನಾರಾಯಣ, ಡಾ. ಮಾಸ್ತಿ : ೧೯೭೧




ರಾಜ್ಯಪಾಲ ಶ್ರೀ ಗೋವಿಂದನಾರಾಯಣ ಅವರಿಂದ
ರಾಜ್ಯ ಸಾಹಿತ್ಯ ಅಕಾದೆಮಿ ಪ್ರಶಸ್ತಿ ಸ್ವೀಕಾರ : ಫೆಬ್ರುವರಿ, ೧೯೮೨



ಎನ್ಕೆ : ೧೯೮೩

# ಪ್ರೀತಿಯ ಕಾಣಿಕೆ

## ಮಾಸ್ತಿ ವೆಂಕಟೇಶ ಅಯ್ಯಂಗಾರ್

ಶ್ರೀ ಎನ್. ಕೆ. ಕುಲಕರ್ಣಿಯವರ ಎಪ್ಪತ್ತನೆಯ ವರ್ಧಂತಿಯ ಸಂದರ್ಭದಲ್ಲಿ ಹಿರಿಯರೂ ಗೆಳೆಯರೂ ಅವರಿಗೆ ಒಂದು ಗೌರವಗ್ರಂಥವನ್ನು ಒಪ್ಪಿಸಲು ಯೋಚನೆ ಮಾಡಿರುವುದು ತುಂಬ ಉಚಿತ, ತುಂಬ ಯುಕ್ತ. ಬಾಳಿನ ಪಾಡು ಹೇಗೇ ಇರಲಿ, ಮುಖದ ಮೇಲಿನ ನಗೆಯನ್ನು ಇಂಗಲು ಬಿಡದೆ, ಇಷ್ಟರಾದವರನ್ನು ಮಾತ್ರ ಅಲ್ಲ, ಎಲ್ಲರನ್ನೂ ಹರ್ಷದಿಂದ ಕಂಡು ಮಾತನಾಡಿಸುವ ಈ ನಮ್ಮ ಮಿತ್ರರು ಇತರರಿಗೆ ಒಂದು ಆದರ್ಶವಾಗಿದ್ದಾರೆ. ಸೌಜನ್ಯವನ್ನು ಒಂದು ಆಸ್ತಿಯಾಗಿ ಬೆಳಸಿಕೊಂಡಿರುವ ಈ ಮಿತ್ರರಿಗೆ ಭಗವಂತನು ಆಯುರಾರೋಗ್ಯಗಳನ್ನು ಅನುಗ್ರಹಿಸಲಿ, ಇವರ ಜೀವನವನ್ನು ಶುಭ ಸಂತೋಷಗಳಿಂದ ತುಂಬಲಿ ಎಂದು ಜೊತೆಯ ಹಿರಿಯರು ಮಿತ್ರರೊಂದಿಗೆ ನಾನೂ ಪ್ರಾರ್ಥಿಸುತ್ತೇನೆ.

# ಅಂದಿನ ಆ ವಿದ್ಯಾರ್ಥಿ

## ಶ್ರೀರಂಗ

ಎನ್ಕೆಯವರ ಶೈಲಿಯಲ್ಲಿಯೇ ಪ್ರಾರಂಭಿಸುವುದಾದಲ್ಲಿ ಎರಡು ತರದ ಪ್ರಸಿದ್ಧ ಪುರುಷರಿದ್ದಾರೆಂದು ಹೇಳಬಹುದು. ಒಂದು, ಸಂಸ್ಕೃತದ ಸುಭಾಷಿತ ಹೇಳುವಂತೆ 'ಯೇನ ಕೇನ ಪ್ರಕಾರೇಣ' ಪ್ರಸಿದ್ಧರಾದವರು; ಇನ್ನೊಂದು ಕನ್ನಡದ ಎನ್ಕೆ ನಿದರ್ಶಿಸುವಂತೆ ಎಲ್ಲ ಪ್ರಕಾರಗಳಿಂದ ಪ್ರಸಿದ್ಧರಾದವರು.* ನಾಟಕ, ಕತೆ, ಕಾದಂಬರಿ, ಹರಟೆ, ಪ್ರಬಂಧ, ಭಾಷಣ, ಸಂಭಾಷಣ, ವಿಮರ್ಶೆ– ಯಾವುದರಲ್ಲೂ ನುರಿತ ಪ್ರತಿಭೆ ಎನ್ಕೆಯವರದು.

ಬರುವ ಅಗಸ್ಟ ೨೯ಕ್ಕೆ ಇವರಿಗೆ ೭೦ ವಯಸ್ಸು ಪೂರ್ತಿಯಾಗುವುದೆಂದು ತಿಳಿದೊಡನೆ ಚಕಿತನಾದೆ, 'ಈ ಹುಡುಗನಿಗೆ ಇಷ್ಟರಲ್ಲಿಯೇ ಇಷ್ಟು ವಯಸ್ಸಾಯಿತೆ?' ಎಂದು. ಯಾಕೆಂದರೆ, ಎನ್ಕೆ ಎಂದೊಡನೆ ನನ್ನ ಕಣ್ಮುಂದೆ ಬರುವ ಚಿತ್ರವೆ ಬೇರೆ. ನಾನು ಕರ್ನಾಟಕ ಕಾಲೇಜದಲ್ಲಿ ಲೈಬ್ರರಿಯಿಂದ ಕೆಳಗೆ ಬರುತ್ತಿದ್ದೆ. ನಾನು ಕೊನೆಯ ಮೆಟ್ಟಿಲನ್ನು ಇಳಿಯುವಾಗ ಆ ಮೆಟ್ಟಲುಗಳ ಕೆಳಗೆ ಪಕ್ಕದಲ್ಲಿದ್ದ ಕೋಣೆಯಿಂದ ಬಂದ ವಿದ್ಯಾರ್ಥಿಯೊಬ್ಬ ತೀರ ಮೆತ್ತನ್ನ ದನಿಯಲ್ಲಿ 'ನಾನು ಏಕಾಂಕ ಬರೀಬೇಕಂತೀನಿ' ಎಂದ. ನನಗೆ ಆಶ್ಚರ್ಯ. ಅವಕ್ಕೆ ನನ್ನ ಪರವಾನಿಗೆ ಅಗತ್ಯವಿದ್ದಿರಲಿಲ್ಲ. ತುಸು ಕೆದರಿ ಮಾತಾಡಿದ ಮೇಲೆ 'ಒಂದೆರಡು ಬರ್ದೀನಿ, ನೀವು ನೋಡಿದರ...' ಎಂದ. ಸರಿ, ನಾಟಕಕಾರ ಎಂದಲ್ಲದಿದ್ದರೂ ಪ್ರೊಫೆಸರ್ ಎಂಬುದಕ್ಕೆ ವಿದ್ಯಾರ್ಥಿಗಳು ಬರೆದುದನ್ನು ನೋಡಿ, ತಿದ್ದುವ, ಮಾರ್ಕ್ಸ ಕೊಡುವ (ಅಗತ್ಯವಿದ್ದಲ್ಲಿ) ಅಧಿಕಾರ ನನಗಿತ್ತಲ್ಲ? ಆ ಅಧಿಕಾರದಿಂದ ನೋಡಿದೆನಲ್ಲದೆ ತುಸು 'ಮಾಸ್ತರಿಕೆ'ಯನ್ನು ಮಾಡಿ ಮತ್ತೂ ಒಂದೆರಡನ್ನು ಬರೆಯಿಸಿ ಸಂಗ್ರಹಕ್ಕೆ ಮುನ್ನುಡಿಯನ್ನು ಬರೆದಂತೆ ನೆನಪು. ಈ ನೆನಪು ಒಂದು ವೇಳೆ ತಪ್ಪಾಗಿದ್ದರೂ 'ಮಾಸ್ತರಿಕೆ'ಯನ್ನು ಮಾಡಿದ್ದು ನಿಜ.

ಇಲ್ಲಿ ನಾನು ಎನ್ಕೆಯವರ ಏಕಾಂಕ ಇಲ್ಲವೆ ಸಾಹಿತ್ಯದ ಬಗ್ಗೆ ಬರೆಯುವುದಿಲ್ಲ. ಮುಂದೆ ಇದೇ ವಿದ್ಯಾರ್ಥಿ ಆಕಾಶವಾಣಿಯಲ್ಲಿ ನನ್ನ ಸಹೋದ್ಯೋಗಿಯಾದ. ಆಗ

---

* 'ಎನ್ಕೇನ ಪ್ರಕಾರೇಣ' ಎಂದೂ ಹೇಳುತ್ತಾರೆ ಎನ್ಕೆ— ಸಿ.ಪ.

ನಿಕಟ ಪರಿಚಯವಾಯಿತು: ಎನ್ಕೆಯವರು ತಮ್ಮ ವ್ಯಕ್ತಿತ್ವ ಮತ್ತು ಸ್ವಭಾವದಿಂದಲೂ ನನ್ನ ಮೆಚ್ಚುಗೆಯನ್ನು ಗಳಿಸಿದ್ದಾರೆ (ಅದಕ್ಕೇ ಪ್ರಾರಂಭದಲ್ಲಿ 'ಎಲ್ಲ ಪ್ರಕಾರಗಳಿಂದ ಪ್ರಸಿದ್ಧ' ಎಂಬ ಮಾತನ್ನು ಬಳಸಿದ್ದೇನೆ). ಎನ್ಕೆಯವರ ಮುಖದಲ್ಲಿ ಯಾವಾಗಲೂ ಮುಗುಳ್ನಗೆ. ಅವರೊಡನೆ ಚರ್ಚಿಸಿ ನೋಡಿರಿ. ನಿಮ್ಮ ಮಾತನ್ನು ಪೂರ್ತಿ ಕೇಳಿ ಕೊಳ್ಳುವ ಮುಂಚಿತವೆ ತಲೆದೂಗುತ್ತಿರುವರು. ನೀವು ಹೇಳುವುದನ್ನು ಪೂರ್ತಿ ಒಪ್ಪಿ ದ್ದಾರೆ ಎಂದು ಸಹಜವಾಗಿಯೇ ನೀವು ಉಬ್ಬಬಹುದು. ತರುವಾಯ ನಗೆಮೊಗ ದಿಂದಲೆ ಮೆತ್ತನ್ನ ದನಿಯಲ್ಲಿ ತಮಗೊಂದು ಸಂಶಯ ಬಂದಿದೆ, ನಿಮ್ಮಿಂದ ಅದರ ನಿವಾರಣೆ ಬಯಸುತ್ತಾರೆ ಎಂಬಂತೆ ತಮ್ಮ ಅಭಿಪ್ರಾಯವನ್ನು ಸೂಚಿಸುತ್ತಾರೆ. ಎಷ್ಟೋ ಸಲ ನಿಮ್ಮನ್ನು ಪೂರ್ತಿ ಖಂಡಿಸಬಹುದು ಆ ಅವರ ಅಭಿಪ್ರಾಯ. ಆದರೆ ಅವರ ಮಾತಿನ ಶೈಲಿ ಮತ್ತು ತಲೆದೂಗುವಿಕೆಗಾಗಿ ನಿಮಗೆ ಹಾಗೆ ಎನ್ನಿಸುವುದೆ ಇಲ್ಲ.

ಆಕಾಶವಾಣಿ ಎಂದರೆ ಒಂದು ಪತ್ರಿಕೆ ಇದ್ದಂತೆ. ಅದರಲ್ಲಿ ಪ್ರಕಟ (ಪ್ರಸಾರ) ವಾಗುವ ವಿಷಯ ನಿಯಮಿತ ವೇಳೆಗೆ ಪೂರ್ತಿ ಸಿದ್ಧವಾಗಿರಲೇಬೇಕು. ಅನೇಕ ಸಲ ಹಾಗೆ ಆಗುವುದಿಲ್ಲ, ಒಮ್ಮೊಮ್ಮೆ ಪ್ರಸಾರಕ್ಕೆ ವಿಷಯವೆ ಇಲ್ಲದಂತಾಗಬಹುದು. ಇಂತಹ ಅನುಭವ ಬಂದ ಪ್ರತಿಯೊಬ್ಬನು ಎನ್ಕೆ ಅವರ ಕಡೆ ಧಾವಿಸುತ್ತಿದ್ದನು. ಹರಟೆ ಬೇಕೆ? ಕವಿತೆ ಬೇಕೆ? ಹಾಡು ಬೇಕೆ? ಎಷ್ಟೊತ್ತಿಗೆ? ಎಷ್ಟು ಮಿನಿಟುಗಳ ಅವಧಿಗಾಗಿ? ಸರಿ. ಈ ಪ್ರಶ್ನೆಗಳಿಗೆ ನೀವು ಮಾಹಿತಿ ಕೊಟ್ಟರೆ ಕಾಂಪ್ಯೂಟರ್‌ದಂತೆ ಎನ್ಕೆಯವರ ಪ್ರತಿಭೆ ನಿಮ್ಮ ಸಮಸ್ಯೆಗೆ ಪರಿಹಾರವನ್ನು ಒದಗಿಸುತ್ತಿತ್ತು. ಇದಕ್ಕೆ ಕಾರಣವೆಂದರೆ ಕನ್ನಡ ಸಾಹಿತ್ಯದಲ್ಲಿದ್ದ ಅವರ ಪಾಂಡಿತ್ಯ. ಆಕಾಶವಾಣಿಯ ಎಲ್ಲ ಶ್ರೋತೃಗಳೂ ಪಂಡಿತರಲ್ಲ. ಬಹುಭಾಗ ಸಾಮಾನ್ಯರೆ, ಕೆಲವರಂತೂ ನಿರಕ್ಷರಿಗಳು. ಇಂತಹರಿಗೆ ತಿಳಿಯುವಂತೆ ಹೇಳುವುದು. ಇವರೊಬ್ಬರಿಗೆ ಮಾತ್ರ ಶಕ್ಯವಾಗಿತ್ತು. (ದಿಲ್ಲಿಯಿಂದ ಬರುವ ಕನ್ನಡ ವಾರ್ತೆಗಳನ್ನು ಕೇಳಿದ್ದೀರಾ? ಯಾರಿಗೂ ತಿಳಿಯುವುದಿಲ್ಲ. ಇಂಗ್ಲಿಶದ ಜಾರಪುತ್ರನಂತಿದ್ದ ಇದು ಕನ್ನಡ ಎಂದು ಕೂಡ ಎನ್ನಿಸುವುದಿಲ್ಲ. ಆದರೆ) ಎನ್ಕೆ ಯವರ ಕನ್ನಡ ಕುಮಾರವ್ಯಾಸನ ಕನ್ನಡ. ಅವರು ಕುಮಾರವ್ಯಾಸನ ಬಗ್ಗೆ ಕೆಲವು ಕಾರ್ಯಕ್ರಮಗಳನ್ನು ಪ್ರಸಾರ ಮಾಡಿದ್ದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

ನನ್ನ 'ಮಾಸ್ತರಿಕೆ'ಯಿಂದ ಉತ್ಸಾಹಗೊಂಡು ಸಾಹಿತ್ಯಕ್ಕೆ ಕಾಲಿಟ್ಟ ಎನ್ಕೆಯವರ ಭವಿಷ್ಯ ಇನ್ನೂ ಉಜ್ವಲವಾಗಲಿ, ಇವರಿಂದ ಕನ್ನಡಕ್ಕೆ ಇನ್ನಷ್ಟು ಪೋಷಣೆ ದೊರೆಯಲಿ ಎಂದು ಹಾರೈಸುತ್ತೇನೆ.

# ಎನ್ಕೆ ಸಿಂಧು

**ಸ. ಸ. ಮಾಳವಾಡ**

ಕರ್ನಾಟಕ ಕಾಲೇಜಿನಲ್ಲಿ ಎನ್ಕೆ ನನಗೆ ಕಿರಿಯ ಸಹಪಾಠಿ. ಮೂರು ವರುಷಗಳ ಅಂತರವಿದ್ದಿತಾಗಿ ಆಗ ನಮ್ಮಿಬ್ಬರ ಸಂಪರ್ಕಕ್ಕೆ ಹೆಚ್ಚಿನ ಅವಕಾಶವೊದಗಿರಲಿಲ್ಲ. ನಾನು ಬಿ.ಎ. ಮುಗಿಸಿದ ನಂತರ ಅವರು ಬಿ. ಎ. ವರ್ಗ ಪ್ರವೇಶಿಸಿದರು. ಕನ್ನಡ ಆನರ್ಸ್ ಅವರ ಐಚ್ಛಿಕ. ಆಗ ಕನ್ನಡ ಪ್ರೊಫೆಸರ್ ಆಗಿದ್ದ ಎ. ಟಿ. ಸಾಸನೂರರು ನನ್ನ ಸಲಿಗೆಯ ಸ್ನೇಹಿತರಾಗಿದ್ದರು. ಅವರ ಜತೆಯಲ್ಲಿ ನಾನು ಎನ್ಕೆ ಅವರನ್ನು ನೋಡಿದ್ದೆ. ಪ್ರೊ. ಜಾಗಿರದಾರ (ಶ್ರೀರಂಗ)ರ ನಾಟಕದ ಗುಂಪಿನಲ್ಲಿಯೂ ಕಾಣುತ್ತಿದ್ದೆ.

ನಾನು ಅಧ್ಯಾಪಕನಾಗಿ ಕಾಲೇಜ್ ಸೇರಿದ ವರುಷ (೧೯೩೬) ಎನ್ಕೆ ಬಿ.ಎ. ಮುಗಿಸಿ ಎಂ.ಎ. ಓದಿಗಾಗಿ ಕಾಲೇಜಿನಲ್ಲಿ ಸುತ್ತಾಡುತ್ತಿದ್ದರು. ಅವರು ನನ್ನನ್ನು ಹಿರಿಯ ನೆಂದು, ತಮ್ಮ ಕಾಲೇಜಿನ ಪ್ರೊಫೆಸರನೆಂದು ಕಂಡರು. ಇಂದಿಗೂ ಆ ಬಗೆಯ ಭಾವನೆಯನ್ನು ಉಳಿಸಿಕೊಂಡು ನನ್ನ ನಿಕಟವರ್ತಿಗಳಾಗಿದ್ದಾರೆ.

ಈ ಕಿರಿಯ ಸಹಪಾಠಿ ಕಾಲೇಜ್ ಪ್ರವೇಶಿಸಿದ ಆರಂಭದಲ್ಲಿಯೇ ಸಾಹಿತ್ಯವಲಯದಲ್ಲಿ 'ಮುಂಗಾಲ್ ಪುಟಿಗೆ'ಯಿಟ್ಟವರೆಂದು ವಿದ್ಯಾರ್ಥಿಗಳಿಗೆ ಪರಿಚಿತರಾದರು.'ಇಲೆಕ್ಶನ್' ನಾಟಕ ಅವರ ಸಾಹಿತ್ಯ ರಚನೆಯ ಶಕ್ತಿಯನ್ನು ಆಗಲೇ ತೋರ್ಪಡಿಸಿತು. ವಿದ್ಯಾರ್ಥಿಗಳಲ್ಲಿ ಅವರ ಜನಪ್ರಿಯತೆಯನ್ನು ಹೆಚ್ಚಿಸಿತು. ಇಂದಿಗೂ ಅವರು ಕರ್ನಾಟಕದ ಜನಪ್ರಿಯ ಲೇಖಕ, ವಾಗ್ಮಿ, ವ್ಯಾಸಂಗಿ ಎಂದು ಹೆಸರು ಪಡೆದಿದ್ದಾರೆ. ಶ್ರೀ ಅರವಿಂದ-ಮಾತೆಯರ ತತ್ತ್ವಗಳ ಚಿಂತನೆಯಲ್ಲಿ ಅವರು ನನಗೆ ತೀರ ಹತ್ತಿರದವರಾಗಿದ್ದಾರೆ.

ಕನ್ನಡ ಪ್ರೊಫೆಸರನಾಗಿ–ಅಂದಿನ ಮುಂಬಯಿ ರಾಜ್ಯದ ಸರಕಾರೀ ಕಾಲೇಜುಗಳ ಏಕೈಕ ಕನ್ನಡ ಅಧ್ಯಾಪಕನಾಗಿ–ನಾನು ಕನ್ನಡ ಸಾಹಿತ್ಯ ಭಾಷೆಗಳಿಗೆ ಸಂಬಂಧಪಟ್ಟ ಹಲವಾರು ಸಮಿತಿಗಳಲ್ಲಿ ಪದಸಿದ್ಧ ಸದಸ್ಯನಾಗಿದ್ದೆ. ಆ ಸನ್ನಿವೇಶಗಳಲ್ಲಿ ಎನ್ಕೆ ಅವರು ನನ್ನನ್ನು ಕಾಣುತ್ತಿದ್ದರು. ಅವರು ಅಭ್ಯರ್ಥಿಯಾಗಿಯೋ ವ್ಯಾಸಂಗಿಯಾಗಿಯೋ ಅವುಗಳ ಸಂಬಂಧ ಪಡೆಯುತ್ತಿದ್ದರು. ನನ್ನ ಕಟ್ಟುನಿಟ್ಟಿನ ಕಾರ್ಯಪದ್ಧತಿ, ನಿರ್ಣಯದ ಕ್ರಮಗಳಿಂದಾಗಿ ನಾನು ಅವರಿಗೆ 'ಆತ್ಮೀಯ'ನೆಂದು ಆಗ ತೋರಿರಲಿಕ್ಕಿಲ್ಲ. ಆದರೆ ಮುಂದೆ ನನ್ನ ಆ ಬಗೆಯ ನಿಲುವೆಯನ್ನು ಮೆಚ್ಚಿಕೊಂಡದ್ದುಂಟು. ಆ ದಿಸೆಯಲ್ಲಿ

ಅವರು ನನ್ನ ಬಗೆಗೆ ಗೌರವಭಾವನೆಯನ್ನು ವ್ಯಕ್ತಪಡಿಸಿದ್ದುಂಟು. ನಮ್ಮಿಬ್ಬರ ಸಂಬಂಧ ಬೆಳೆಯುವಲ್ಲಿ ಇಂತಹ ಸನ್ನಿವೇಶಗಳು ಕಾರಣವಾದವು.

ಪದವೀಧರರಾದ ನಂತರ ಕೆಲಕಾಲದ ಮೇಲೆ ಅವರು ಕರ್ನಾಟಕ ಹಾಯ್ ಸ್ಕೂಲಿನ ಶಿಕ್ಷಕರಾಗಿ ಧಾರವಾಡದಲ್ಲಿ ನೆಲೆಸಿದರು. ಆಗ ನಮ್ಮಿಬ್ಬರ ಸಂಬಂಧ ಬೆಳೆಯು ವಂತಾಯಿತು. ಸರಕಾರೀ ಕಾಲೇಜಿನ ಪ್ರೊಫೆಸರ್ ಖಾಸಗಿ ಶಾಲೆಯ ಶಿಕ್ಷಕ ಎಂಬ ಅಂತರವನ್ನು ಅವರು ಹೆಚ್ಚಾಗಿ ಗಮನಿಸಿರಬಹುದು. ನಿಯಮಗಳ ಪಾಲನೆಯ ಅಧಿಕಾರಸ್ಥಾನ, ವ್ಯಕ್ತಿಗತ ಸಂಬಂಧಗಳನ್ನು ತೀರ ಪ್ರತ್ಯೇಕವಾಗಿ ಇಡುತ್ತಿದ್ದ ನನ್ನ ಧೋರಣೆಯು ಅಂದು ಹಲವರಲ್ಲಿ ನನ್ನ ಬಗೆಗೆ ನಿರಾಶೆ, ತಪ್ಪು ಕಲ್ಪನೆಗಳನ್ನು ಮೂಡಿ ಸಿರಬೇಕು. ಅಂತಹರಲ್ಲಿ ಅಂದು ಎನ್ಕೆ ಅವರೂ ಒಬ್ಬರಾಗಿರಬೇಕು. ನನ್ನ ಬಗೆಗೆ "ಸಾಹೇಬಿಕಿ" ಎಂಬ ಪದವೂ ಆಗ ಅವರಿಗೆ ಹೊಳೆದಿರಬೇಕು. ನಿಯಮಪಾಲನೆಯ ವೇದಿಕೆಯಿಂದ ಇಳಿದು ಕೇವಲ ಮಾನವೀಯ ಪಾತಳಿಯಲ್ಲಿ ನಾನು ವ್ಯವಹರಿಸುತ್ತಿರುವು ದನ್ನು ಅವರು ಬೇಗನೇ ಗುರುತಿಸಿಕೊಂಡರು. ಎರಡು ಸನ್ನಿವೇಶಗಳು ಇದನ್ನು ಸಾಧ್ಯ ವಾಗಿಸಿದವು :

೧. ಮದ್ರಾಸ್ ಸಾಹಿತ್ಯ ಸಮ್ಮೇಲನಕ್ಕೆ ಬರಬೇಕೆಂದು ಎನ್ಕೆ ಅವರಿಗೆ ಅವರ ಆತ್ಮೀಯ ಸ್ನೇಹಿತ ಶ್ರೀನಿವಾಸ ಕುಲಕರ್ಣಿ ಅವರ ಒತ್ತಾಯದ ಆಮಂತ್ರಣ ಬಂದಿತ್ತು. ಸಾಹಿತ್ಯ ಗೋಷ್ಠಿಯ ಅಧ್ಯಕ್ಷನಾಗಿ ನಾನು ಅಲ್ಲಿಗೆ ಹೋಗಲಿದ್ದೆ. ಎನ್ಕೆ ಅವರಿಗೆ ಬರ ಬೇಕೆಂಬ ಮನಸ್ಸಿದ್ದರೂ ಪಯಣದ ವೆಚ್ಚವನ್ನು ಭರಿಸುವಂತಿರಲಿಲ್ಲ. ಆಗ ನಾನು ಎನ್ಕೆ ಅವರನ್ನು ಅಂದಿನ "ಜಯ ಕರ್ನಾಟಕ" ವಾರಪತ್ರಿಕೆಯ ಸಂಪಾದಕ ಪ್ರೊ. ಬಸವ ನಾಳರ ಕಡೆಗೆ ಕರೆದುಕೊಂಡು ಹೋದೆ. ಮದ್ರಾಸ್ ಪಯಣದ ವೆಚ್ಚವನ್ನು ಸಂಪಾದ ಕರು ವಹಿಸಿಕೊಳ್ಳಬೇಕು. ಪತ್ರಿಕೆಗಾಗಿ ಎನ್ಕೆ ಮದ್ರಾಸ ಸಾಹಿತ್ಯ ಸಮ್ಮೇಲನದ ಬಗೆಗೆ ಲೇಖನ ಬರೆಯಬೇಕು—ಹೀಗೆ ನಾನು ಏರ್ಪಾಡು ಮಾಡಿದೆ. ಎನ್ಕೆ ಸಹವಾಸದ ಮದ್ರಾಸ ಪಯಣ ನನಗೆ ಸುಖಕರವಾಯಿತು. ಶ್ರೀನಿವಾಸ ಕುಲಕರ್ಣಿ ಅವರ ಅದ್ದೂರಿಯ ಸ್ವಾಗತವೂ ಲಭ್ಯವಾಯಿತು. ಈ ಪಯಣದಿಂದಾಗಿ ಎನ್ಕೆ ನನಗೆ ಇನ್ನಿಷ್ಟು ಹತ್ತಿರದವ ರಾದರು.

೨. ತಮ್ಮ ಪ್ರಥಮ ಪತ್ನಿಯನ್ನು ಕಳೆದುಕೊಂಡ ಎನ್ಕೆ ದುಃಖಪೂರಿತ "ಸಾವಿನ ಉಡಿಯಲ್ಲಿ" ಇದ್ದರು. ಆಗಾಗ ನನ್ನ ಬಳಿ ಬಂದಾಗ ಅವರಿಗೆ ಸಾಂತ್ವನ ದೊರೆಯಿತೆಂದು ಅವರು ಹೇಳುತ್ತಾರೆ. ಅವರ ಎರಡನೆಯ ಮದುವೆಗೆಂದು ನಾವು ಕುಂದಗೋಳ ಪಯಣ ಕೈಕೊಂಡೆವು. ಈಗ ನಾವಿಬ್ಬರು ಇನ್ನಿಷ್ಟು ಸನಿಹದವರಾದೆವು.

ಈ ಸಂದರ್ಭದಲ್ಲಿ ನಾನು ಎನ್ಕೆವಾಣಿಯನ್ನೇ ಬಳಸಿಕೊಳ್ಳಬೇಕು: "...ನನ್ನ ಬೆಂದ ಸಂಸಾರದ ಬಿಸಿಗೆ ಮಾಳವಾಡರ ಬಾಂಧವ್ಯ ನೀರೆರೆಯಿತು. ನನ್ನ ಮುಂದಿನ ಬಾಳಿನ ಸಮುದ್ರದ ಏಳು ಬೀಳುಗಳಲ್ಲಿ ಮಾಳವಾಡ ದಂಪತಿಗಳು ಈ ಬಂಧುವಿಗೆ ಬೆಂಡಿನಂತೆ ಆಸರೆಯಾಗಿ ನಿಂತಿದ್ದಾರೆ."

ಅವರ 'ಸಾವಿನ ಉಡಿಯಲ್ಲಿ' ಕಾದಂಬರಿಗೆ ನನ್ನ ಮುನ್ನುಡಿಯಿದೆ. ಆ ಮುನ್ನುಡಿಯಲ್ಲಿ ಎನ್ಕೆ ರೂಪುಗೊಂಡ ಬಗೆಗೆ ಕೆಲವು ಮಾತು ಹೇಳಿದ್ದೇನೆ. ಕಾದಂಬರಿಯ ನಾಯಕ ವೆಂಕಣ್ಣ "ರಾಮನಲ್ಲ, ಹರಿಶ್ಚಂದ್ರನಲ್ಲ, ಪ್ರವಾಹಪತಿತ" ಎಂಬ ಅವರ ಮಾತನ್ನು ಉಲ್ಲೇಖಿಸಿದ್ದೇನೆ. ಕಣ್ಣೀರಿನ ವಿಡಿತ ಆ ಕಾದಂಬರಿಯಲ್ಲಿರುವಂತೆ ಅವರ ಬಾಳಿನಲ್ಲಿಯೂ ಇದೆಯೆಂಬುದನ್ನು ಗುರುತಿಸಿದ್ದೇನೆ. ಆದರೆ ಅವರು ರಚಿಸಿದ ಹೆಚ್ಚಿನ ಸಾಹಿತ್ಯ ಅನೇಕ ಓದುಗರನ್ನು ನಗಿಸಿದೆ; ನಲಿಸಿದೆ.

ಅಂದು ಖಾಸಗಿ ಹಾಯ್‌ಸ್ಕೂಲಿನಲ್ಲಿ ಶಿಕ್ಷಕರಾಗಿದ್ದ ಎನ್ಕೆ ನನಗೆ ಆಗಾಗ ಹೇಳುತ್ತಿದ್ದರು. "ತಿಂಗಳಿಗೆ ಒಂದುನೂರು ರೂಪಾಯಿ ಸಂಬಳ ದೊರೆಯುವಂತಾದರೆ ನಾನು ತೃಪ್ತಿಯಿಂದ ಬಾಳಬಲ್ಲೆ." ಅದಕ್ಕಿಂತ ಹೆಚ್ಚು ಸಂಬಳ ತರುವ ಸ್ಥಾನ ಪಡೆದು ಅವರು ಮುಂದೆ ಮುಂಬಯಿಯ ಆಕಾಶವಾಣಿಗೆ ಹೋದರು. ಆದರೆ ಮುಂಬಯಿಯ ವಾಸ್ತವ್ಯವು ಅವರಿಗೆ ನೆಮ್ಮದಿಯನ್ನು ತರಲಿಲ್ಲ. ಅಲ್ಲಿಯ 'ಪರಾವಲಂಬಿ' ಜೀವನದಿಂದ ಅವರು ಬೇಸರಪಟ್ಟುಕೊಳ್ಳುತ್ತಿದ್ದರು. ಆ ಅವಧಿಯಲ್ಲಿ ನಾನು ಮುಂಬಯಿಗೆ ಹಲವಾರು ಸಲ ಹೋಗುವ ಸಂದರ್ಭಗಳಿದ್ದವು. ಮುಂಬಯಿಯಲ್ಲಿ ನಮ್ಮಿಬ್ಬರ ಒಡನಾಟ, ಓಡಾಟಗಳಿಂದ ಅವರಿಗೆ ಬಹಳ ಖುಶಿ ಆಗುತ್ತಿತ್ತು. ಆಗ ನಡೆಯುತ್ತಿದ್ದ ನಮ್ಮಿಬ್ಬರ ಪತ್ರ ವ್ಯವಹಾರದಿಂದ ಅವರು ಇನ್ನಷ್ಟು ಖುಶಿ ಪಟ್ಟುಕೊಳ್ಳುತ್ತಿದ್ದರು. ಇಬ್ಬರು ಪ್ರೇಮಿಗಳಂತಹ ಭಾವನಿರ್ಭರ ಪತ್ರ ವ್ಯವಹಾರ ಆಗ ನಮ್ಮಿಬ್ಬರಲ್ಲಿ ನಡೆಯುತ್ತಿತ್ತು. ಭಾವದ ಉತ್ಕಟತೆಯಲ್ಲಿ ಎನ್ಕೆ ತಮ್ಮನ್ನು "ಅರ್ಧಾಂಗಿ" ಎಂದು ಸಂಬೋಧಿಸಿಕೊಂಡು ಬರೆದ ಪತ್ರಗಳು ನನ್ನ ಶ್ರೀಮತಿಯವರಿಗೆ ಮೋಜನ್ನುಂಟುಮಾಡುತ್ತಿದ್ದವು.

ದೂರದ ಮುಂಬಯಿಯಲ್ಲಿದ್ದ ಎನ್ಕೆ ಮುಂದೆ ಧಾರವಾಡ ಆಕಾಶವಾಣಿಗೆ ಬಂದರು. ಕಟ್ಟೀ ಕಲ್ಲು ಕಟ್ಟೆಗೆ ಕೂತಂತಾಯಿತು. ಮುಂದೆ ಬೆಂಗಳೂರಿಗೆ ಹೋದರು. ಮರಳಿ ಧಾರವಾಡಕ್ಕೆ ಬಂದು ನಿವೃತ್ತರಾದರು. ಅಂತೂ ಗಾಳೀ ಸಂಚಾರ ಮುಗಿದು ಈಗ ಧಾರವಾಡದಲ್ಲಿ ನೆಲೆಯಾಗಿದ್ದಾರೆ. ಧಾರವಾಡದಲ್ಲಿ ಒಬ್ಬ ಅಣ್ಣನ ಮನೆ. ಮೂವರು ಮಕ್ಕಳಿಗಾಗಿ ಮೂರು ಮನೆಗಳು. ಈ ನಾಲ್ಕು ಮನೆಗಳತ್ತ ಓಡಾಡುವ ಅವರನ್ನು ನಾನು ಕಂಡಿದ್ದೇನೆ. ನಾಲ್ಕು ಮನೆಗಳಿದ್ದರೂ ತನ್ನದಾದ ಒಂದು 'ನೆಲೆ' ಯಿಲ್ಲದ ಅವರ ಆಂತರಿಕ ಕೊರಗನ್ನು ನಾನು ಅರಿತುಕೊಂಡಿದ್ದೇನೆ. ಇಬ್ಬರು ಪತ್ನಿಯರನ್ನು, ಇಬ್ಬರು ಅಣ್ಣಂದಿರನ್ನು ಕಳೆದುಕೊಂಡ ಕಹಿ ನೆನಪು. ಈ ಇಳಿವಯಸ್ಸಿನಲ್ಲಿ ಅತ್ತಿಂದಿತ್ತ, ಇತ್ತಿಂದತ್ತ ಅಲೆದಾಡಬೇಕಾದ ಸಂದರ್ಭ. ಆದರೂ ಅವರ ಅಲೆದಾಟ ಉತ್ಸಾಹದಿಂದ ಕೂಡಿರುತ್ತದೆ. ತಮ್ಮ ಎಂದಿನ ಮೆಲುನಗೆಯನ್ನು ಇಂದಿಗೂ ಕಾಪಾಡಿಕೊಂಡು ಬಂದಿದ್ದಾರೆ.

ಶೀಘ್ರ ಲೇಖಕ, ಸ್ವಾರಸ್ಯಕರ ಭಾಷಣ ಮಾಡುವ ವಾಗ್ಮಿಯೆಂಬ ಜನಪ್ರಿಯತೆ, ನಗಿಸುವ ಕಲೆಗಳು ಎನ್ಕೆ ಬಾಳಿನ ಸೊತ್ತು. ವ್ಯಾಪಕ ಸ್ನೇಹ ಸಂಪರ್ಕವಿದ್ದೂ ಎನ್ಕೆ

ಏಕಾಂಗಿ. ಇಬ್ಬರು ಅಣ್ಣಂದಿರನ್ನು ಕಳೆದುಕೊಂಡ ಅವರು ನನ್ನಲ್ಲಿ 'ಅಣ್ಣ'ನನ್ನು ಕಾಣು ತ್ತಿದ್ದಾರೆ. ಈ ವಿಶ್ವಾಸಕ್ಕೆ ಅನುಗುಣವಾಗುವಂತೆ ನಾನು ವರ್ತಿಸಬೇಕಲ್ಲ! ದ. ರಾ. ಬೇಂದ್ರೆ ಅವರ ಬಗೆಗೆ ಎಸ್ಕೆಗೆ ಭಕ್ತಿನಿರ್ಭರತೆ. ಇದು ಡಾ. ಸದಾನಂದ ನಾಯಕ ಅವ ರೊಂದಿಗೆ ಎಸ್ಕೆಗೆ ಇರುವ ಸಮಾನ ಅಂಶವಾಗಿದೆ. ಈಚೆಗೆ ಬೇಂದ್ರೆ ಇಲ್ಲವಾದರು. ಗೋಕಾಕ ವ್ಯಕ್ತಿತ್ವ ಸಾಹಿತ್ಯಗಳನ್ನು ಸರಿಯಾಗಿ ಅರ್ಥಯಿಸಿಕೊಳ್ಳುವುದು ನಮ್ಮಿಬ್ಬರ ಒಂದು ಸಮಾನ ಅಂಶವಾಗಿದೆ. ಶ್ರೀ ಅರವಿಂದ-ಮಾತೆಯರ ದರ್ಶನ ಸಾಹಿತ್ಯಗಳಲ್ಲಿ ಆಸಕ್ತಿ ಇನ್ನೊಂದು ಮಹತ್ವದ ಅಂಶ. ತತ್ತ್ವಾನ್ವೇಷಣ ಮಂದಿರದಲ್ಲಿ ನಿಯಮಿತವಾಗಿ ನಡೆಯುತ್ತಿದ್ದ ಪ್ರವಚನಗಳಲ್ಲಿ ನಾವಿಬ್ಬರೂ ಏಕಪ್ರಕಾರವಾಗಿ ಭಾಗಿಯಾಗುತ್ತಿದ್ದೆವು. ಈಚೆಗೆ "ಪ್ರಶಾಂತ"ದಲ್ಲಿ ವಾರಕ್ಕೊಮ್ಮೆ ಸೇರಿ ಪ್ರವಚನ-ಧ್ಯಾನಗಳಲ್ಲಿ ತೊಡಗುತ್ತೇವೆ. ಆ ಅವಧಿಯು ನಮ್ಮಿಬ್ಬರ ಬಾಳಿಗೆ ಹೆಚ್ಚಿನ ಬೆಳಕನ್ನು ನೆಮ್ಮದಿಯನ್ನು ಒದಗಿ ಸುತ್ತದೆ.

"ಪಂಕ್ಚುಯಾಲಿಟಿಯ ಪರಮಾವಧಿ" ಎಂಬುದು ಅವರ ಒಂದು ಹರಟೆಯಾಗಿದೆ. ವೇಳೆಯ ನಿಯಮಿತತನವನ್ನು ಅವರು ತಮ್ಮ ದೈನಂದಿನ ವ್ಯವಹಾರಗಳಲ್ಲಿ 'ಪರಮಾ ವಧಿ'ಯಾಗಿಯೇ ಪಾಲಿಸುತ್ತಾರೆ. ಒಪ್ಪಿಕೊಂಡ ವೇಳೆಗೆ ಸರಿಯಾಗಿ ತಾವಾಗಿಯೇ ಸಭಾ ಮಂದಿರಕ್ಕೆ ಬರುತ್ತಾರೆ. ನಿಗದಿತ ಅವಧಿಯ ಭಾಷಣ ಮಾಡುತ್ತಾರೆ. ಇತರರು ಉದ್ದುದ್ದ ಇಲ್ಲವೆ ವಿಷಯಕ್ಕೆ ಸಂಬಂಧವಿರದ ಮಾತುಗಳನ್ನು ಬೆಳಿಸುವಾಗ ಎಸ್ಕೆ ಮತ್ತೆ ಮತ್ತೆ ತಮ್ಮ ಕೈಗಡಿಯಾರದತ್ತ ನೋಡುತ್ತಾರೆ. ಆಮೇಲೆ ಸಭೆಯ ಚಾಲಕರಿಗೆ ತಿಳಿಯ ದಂತೆ ಸಭಾಮಂದಿರದಿಂದ ಹೊರಟು ಹೋಗಿರುತ್ತಾರೆ.

ವಕೀಲ, ಡಾಕ್ಟರರಂತಹರು ತಮ್ಮ ವೃತ್ತಿಗಳಲ್ಲಿ ಶುಲ್ಕದ ಹಣ ಪಡೆಯುತ್ತಾರೆ. ಭಾಷಣಕಾರರಿಗೆ ಮಾತ್ರ ಶುಲ್ಕವೇಕೆ ಬೇಡ? ಎಂಬುದು ನನ್ನ ಆಲೋಚನೆ. ಈ ಬಗೆಗೆ ಎಸ್ಕೆಗೆ ಹೇಳಿದ್ದೆ. ಅವರು ತಮ್ಮ ಭಾಷಣಕ್ಕೆ ಶುಲ್ಕ ಸಲ್ಲಿಸಬೇಕೆಂಬ ನಿಯಮವನ್ನು ಈಗ ಇಟ್ಟುಕೊಂಡಿದ್ದಾರೆ. ಹಣದ ಭಾರ ಸಹಿಸಬಲ್ಲ ಸಂಸ್ಥೆಗಳಿಗೆ ಮಾತ್ರ ಈ ನಿಯಮ ಅನ್ವಯವಾಗುತ್ತದೆ. ನನ್ನ ಆಲೋಚನೆಯನ್ನು ಕೆಲವು ಹಿರಿಯ ಜನಪ್ರಿಯ ಭಾಷಣ ಕಾರರಿಗೆ ನಾನು ಹಿಂದೆಯೇ ಹೇಳುತ್ತಿದ್ದೆ. ಶುಲ್ಕದ ನಿಯಮವಿಟ್ಟುಕೊಂಡರೆ ಭಾಷಣ ಕ್ಕಾಗಿ ಆಮಂತ್ರಣ ಕಡಿಮೆಯಾಗುವದೆಂಬುದು ಅಂತಹರ ಪ್ರತಿಕ್ರಿಯೆಯಾಗಿತ್ತು. ಎಸ್ಕೆ ಮಾತ್ರ ನನ್ನ ಸಲಹೆಯನ್ನು ರೂಢಿಗೆ ಇಳಿಸಿದ್ದಾರೆ. ಈಗ ಭಾಷಣದ ಆಮಂತ್ರಣಗಳು ಅವರಿಗೆ ಹೆಚ್ಚಿನ ಸಂಖ್ಯೆಯಲ್ಲಿಯೇ ಬರುತ್ತಿವೆ. ಅದು ಎಸ್ಕೆ ಜನಪ್ರಿಯತೆಯ ಅಳತೆ ಗೋಲು.

ಸಾಮಾಜಿಕರಲ್ಲಿ ಕಂಡುಬರುವ ಅನಾಚಾರ ಅನ್ಯಾಯಗಳ ಅರಿವು ಎಸ್ಕೆ ಅವರಲ್ಲಿ ಜಾಗೃತವೇ ಆಗಿದೆ. ಆದರೆ ವಿವಿಧ ಪರಸ್ಪರ ವಿರೋಧದ ವರ್ತನೆಯುಳ್ಳ ಜನರಿಗೂ ಎಸ್ಕೆ ಬೇಕಾದವರಾಗುತ್ತಾರೆ. ಇದು ಅವರ ಸ್ವಭಾವದ ವೈಶಿಷ್ಟ್ಯ. ಅವರು ಎಲ್ಲರಿಗೂ

ಬೆಲ್ಲದಚ್ಚಾಗಬಲ್ಲರು. ಪ್ರತಿ ರವಿವಾರ ಬೆಳಗು ೯–೪೫ಕ್ಕೆ ನಮ್ಮ ಮೊಮ್ಮಕ್ಕಳು "ಎನ್ಕೆ ಅಜ್ಜಾ ಬಂದ್ರೂss" ಅಂತ ಕುಣಿದಾಡುವುದು ಈಗ ನಮಗೆ ರೂಢಿಯಾಗಿದೆ. ಚಿಕ್ಕ ಮಕ್ಕಳು ತೋರುವ ಈ ಉತ್ಸಾಹ, ನಲಿವು ನಮ್ಮ ಆತ್ಮೀಯತೆಯ ಗುರುತು.

ವಿದ್ಯಾರ್ಥಿ, ಮಾಸ್ತರ, ಕುಟುಂಬವತ್ಸಲ, ಆಕಾಶವಾಣಿ ಕಲಾವಿದ, ಲೇಖಕ-ವಾಗ್ಮಿ, ಆಧ್ಯಾತ್ಮಪ್ರೇಮಿ, ವಾತ್ಸಲ್ಯಜೀವಿ—ಎಂಬ ಸಪ್ತ ಬಿಂದುಗಳಲ್ಲಿ ನಾನು ಎನ್ಕೆ ಸಿಂಧುವನ್ನು ಕಂಡಿದ್ದೇನೆ.

# ಸಜ್ಜನಿಕೆಯ ಮಡಿಲಲ್ಲಿ

## ವಿ. ಕೃ. ಗೋಕಾಕ್

ಸ್ವಲ್ಪ ಸಂಕೋಚದ ಸ್ವಭಾವ ಸ್ನೇಹ ಗೋಚರಿಸಿದಂತೆ ಸ್ವಲ್ಪ ಚೇತರಿಸಿಕೊಳ್ಳುವರು; ಆಮೇಲೆ ನಿಃಸಂಕೋಚ; ಇದು ಎನ್ಕೆ ಅವರ ರೀತಿ.

ವೈಚಾರಿಕ ಏಕಾಂಕಗಳಿಂದ ಅವರು ತಮ್ಮ ಸಾಹಿತ್ಯ ಕಾರ್ಯವನ್ನು ಪ್ರಾರಂಭಿಸಿದರು. "ಬಾರ್ ರೂಮ್" ಲೋಕಪ್ರಿಯವಾದ ಏಕಾಂಕವಾಗಿತ್ತು. ಆಗ ವೈಚಾರಿಕ ನಾಟಕಗಳಿಗೆ ಪ್ರೋತ್ಸಾಹವಿತ್ತು.

ಆದರೆ ಬದುಕಿನ ಬೇರೆ ಪರಿಗಳನ್ನೂ ತೆರೆದು ನೋಡಿ ತೋರಿಸುವ ಕುತೂಹಲ ಅವರಲ್ಲಿ ಸಹಜವಾಗಿಯೇ ಬೆಳೆಯಿತು. "ಎರಡನೆಯ ಸಂಬಂಧ" ಮೊದಲಾದ ಕಾದಂಬರಿಗಳು ಆಗ ಬೆಳಕು ಕಂಡವು.

ಇನ್ನೂ ಒಂದು ಪೈಲು (ಅವರ ವ್ಯಕ್ತಿತ್ವದ ಪೈಲು)ಕ್ರಮೇಣ ಬೆಳಕಿಗೆ ಬಂದಿತು. ಕನ್ನಡವನ್ನು ಐಚ್ಛಿಕ ವಿಷಯವಾಗಿಸಿಕೊಂಡು ಅವರು ಎಮ್. ಎ. ಆಗಿದ್ದರು. ಆ ಸಂಸ್ಕಾರ ಅವರ ಅಭ್ಯಾಸ ಬಲದಿಂದ ಇನ್ನಷ್ಟು ಪರಿಣತಗೊಂಡಿತು. ಕುಮಾರವ್ಯಾಸನ ಶೈಲಿ ಅಲ್ಲದೆ ಅವನ ಕಾವ್ಯವನ್ನೇ ವ್ಯಾಪಿಸಿ ಅವರ ವಿಮರ್ಶೆ ಬೆಳೆಯಿತು. ಕುಮಾರವ್ಯಾಸನನ್ನು ಕುರಿತು ಅವರು ಬರೆದ ಗ್ರಂಥಗಳಿಗೆ ಆ ಕವಿಯನ್ನು ಕುರಿತ ಪ್ರಮಾಣ ಗ್ರಂಥಗಳಲ್ಲಿ ಸ್ಥಾನವಿದೆ. ಅವರ "ಕನ್ನಡ ವ್ಯಾಸಭಾರತ" ಶ್ರೀ ಎ. ಆರ್. ಕೃಷ್ಣಶಾಸ್ತ್ರಿಯವರ "ವಚನಭಾರತ"ದ ಪಂಕ್ತಿಯಲ್ಲಿ ಹೆಗಲೆಣೆಯಾಗಿ ನಿಂತಿದೆ.

ರೇಡಿಯೋದಲ್ಲಿ ಅವರು ಮಾಡಿದ ಸಾಹಿತ್ಯ ಸೇವೆಯೂ ಗಣ್ಯವಾಗಿದೆ.

ವಿಡಂಬನಕಾರನೆಂದು ಪ್ರಾರಂಭವಾದ ಎನ್ಕೆಯವರ ನುಡಿಬದುಕು ಈಗ ತನ್ನದೇ ಆದ ಒಂದು ಆಳವನ್ನು ಕಂಡುಕೊಂಡಿದೆ. ಅವರೀಗ ತಮ್ಮ ಅನುಭವಗಳನ್ನು ಬರೆವಣಿಗೆಯಲ್ಲಿ ಮೆಲಕು ಹಾಕುತ್ತಿದ್ದಾರೆ. ಈ ಬರೆವಣಿಗೆಯಲ್ಲಿ ಕದಾಚಿತ್ ಆ ಆಳ ಗೋಚರವಾಗಬಹುದು. ಇಲ್ಲವೆ ಒಂದು ಸ್ವತಂತ್ರ ಕಲಾಕೃತಿಯಲ್ಲಿಯೇ ತಲೆಯೆತ್ತಬಹುದು.

ಎಲ್ಲರಂತೆ ಬಾಳಿನ ಸಿಹಿ-ಕಹಿಗಳನ್ನು ಅನುಭವಿಸಿ ಸತ್ಯ-ಸೌಂದರ್ಯ-ಆನಂದಗಳ ಪರಿಶೋಧಕರಾದ ಎನ್ಕೆಯವರು ತಮ್ಮ ಸಜ್ಜನಿಕೆಯ ಮಡಿಲಲ್ಲಿ ಜೀವನದ ಸಾರ್ಥಕ್ಯವನ್ನು ಅನುಭವಿಸಿ ಅದನ್ನು ಕನ್ನಡದ ಜನತೆಗೆ ಹಂಚಲಿ!

# ನನ್ನ ಕನ್ನಡಿಯಲ್ಲಿ ಎನ್ಕೆ

ರಂ. ಶ್ರೀ. ಮುಗಳಿ

ಎನ್ಕೆಯವರನ್ನು ನಾನು ಕಂಡದ್ದೆಲ್ಲಿ ಎಂಬುದನ್ನು ನೆನಪಿನ ಗವಿಯಿಂದ ಹೊರ ತೆಗೆಯಲಾರದಷ್ಟು ಹೆಚ್ಚು ಕಾಲ ಸಂದು ಹೋಗಿದೆ. ಆದರೆ ಆಮೇಲೆ ಅವರನ್ನು ಎಣಿಸಲಾರದಷ್ಟು ಸಲ ಕಂಡಿದ್ದೇನೆ. ಅವರ ಮನೆಯಲ್ಲಿ ಹಲವಾರು ಸರ್ತಿ ತಪ್ಪದೆ ಬರುವ ಅತಿಥಿಯಾಗಿ ಇದ್ದು ಬಂದಿದ್ದೇನೆ, ಅವರ ಸುಖ ದುಃಖಗಳಲ್ಲಿ ಪಾಲುಗಾರನಾಗಿದ್ದೇನೆ, ಅವರ ಅಂತಃಕರಣದ ಮಿಡಿತಗಳನ್ನು ಆತ್ಮೀಯನಾಗಿ ಆಲಿಸಿದ್ದೇನೆ, 'ರಾತ್ರಿಯೇ ನಿಂತು ಹೋಯಿತು, ಮಾತು ನಿಲ್ಲಲಿಲ್ಲ' ಎನ್ನುವಂತೆ ಅವರೊಂದಿಗೆ ಮಾತಾಡಿದ್ದೇನೆ. ಈಗಂತೂ ನಾನು ಅವರಿಗೆ ಅಕ್ಕರೆಯ ಅಣ್ಣನಾಗಿದ್ದೇನೆ.

ಇವೆಲ್ಲದರಿಂದ ಎನ್ಕೆಯವರ ಬಗ್ಗೆ ಬೇಕಾದಷ್ಟು ನಾನು ಬರೆಯಬಲ್ಲೆ. ಆದರೆ ಇದೇ ಕಾರಣದಿಂದಲೇ ದೂರ ನಿಂತು ಅವರನ್ನು ಅರಿತುಕೊಂಡು ಬರೆಯುವ ಅಧಿಕಾರವನ್ನು ಒಂದು ದೃಷ್ಟಿಯಿಂದ ಕಳೆದುಕೊಂಡಿದ್ದೇನೆ. ನನ್ನ ಪ್ರಕಟವಾದ ಆತ್ಮಕಥನದಲ್ಲಿ ನನ್ನನ್ನೇ ನಾನು ಅಪರನನ್ನಾಗಿ ಮಾಡಿ ಹಿಂಜಿ ನೋಡಿದಂತೆ ಈ ತಮ್ಮನ ವಿಷಯದಲ್ಲಿಯೂ ಮಾಡಬಹುದು ಎಂದುಕೊಂಡು ಸ್ವಲ್ಪದರಲ್ಲಿ ಬರೆಯುವ ಪ್ರಯತ್ನ ಮಾಡುವವನಿದ್ದೇನೆ.

೧೯೨೪ ರಿಂದ ೧೯೩೦ ರ ವರೆಗೆ ಆರು ವರ್ಷ ನಾನು ಕರ್ನಾಟಕ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿ ಧಾರವಾಡದ ಪರಿಸರದಲ್ಲಿ ಹೊಸ ಮನುಷ್ಯನಾಗಿ ಹೊರಬಿದ್ದ ತರುವಾಯದ ಕಾಲದಲ್ಲಿ ಅದೇ ಕಾಲೇಜಿನ ವಿದ್ಯಾರ್ಥಿಗಳಾಗಿ ಹೊಸ ಕನಸುಗಳನ್ನು ಕಂಡು ಬೆಳೆದು ಬಂದ ತರುಣರಲ್ಲಿ ಎನ್ಕೆ ಅವರೊಬ್ಬರಾಗಿದ್ದರು. ಆ ಕಾಲೇಜಿನಲ್ಲಿಯೇ ಸಂಸ್ಕೃತದ ಅಧ್ಯಾಪಕರಾಗಿ ಬಂದು ಕನ್ನಡದಲ್ಲಿ ತಮ್ಮ ಹೊಸ ನಾಟಕಗಳನ್ನು ಬರೆದು ರಂಗಸ್ಥಳದ ಮೇಲೆ ತಂದು ಹೊಸ ವಾತಾವರಣವನ್ನು ಹುಟ್ಟಿಸಿದ ಶ್ರೀರಂಗರು ಮತ್ತು ಕನ್ನಡ ಅಧ್ಯಾಪಕರಾಗಿ ಬಂದು ನಿರರ್ಗಳವಾಗಿ ಹಾಸ್ಯಪೂರಿತವಾಗಿ ಮಾತಾಡುವ ದಿವಂಗತ ಎ.ಟಿ. ಸಾಸನೂರರು ಅಂದಿನ ತರುಣವೃಂದಕ್ಕೆ ಸ್ಫೂರ್ತಿ-ಸ್ಥಾನವಾಗಿದ್ದರು. ಎನ್ಕೆಯವರು ತಮ್ಮಲ್ಲಿರುವ ನಾಟಕ ರಚನೆಯ ಶಕ್ತಿಯನ್ನು ಮತ್ತು ವಿನೋದಬುದ್ಧಿ

ಯನ್ನು ಕಂಡುಕೊಂಡು ಈ ಗುರುಗಳಿಂದ ಸ್ಫೂರ್ತಿ ಪಡೆದು ಬರೆವಣಿಗೆಯ ದಾರಿಯಲ್ಲಿ ವೇಗವೇಗದಿಂದ ಮುನ್ನಡೆದರು, ಸಹೃದಯರ ಮೆಚ್ಚಿಗೆಯನ್ನು ಹೊಂದಿದರು.

ಎನ್ಕೆಯವರ ವಿಶೇಷ ಪರಿಚಯವು ನನಗೆ ಆಗತೊಡಗಿದ್ದು ಅವರು ಎಂ.ಎ. ಪರೀಕ್ಷೆಗಾಗಿ ಕನ್ನಡವನ್ನು ಮುಖ್ಯ ವಿಷಯವನ್ನಾಗಿ ಆರಿಸಿಕೊಂಡು ನನ್ನ ಮಾರ್ಗದರ್ಶನಕ್ಕಾಗಿ ಸಾಂಗಲಿಗೆ ಬಂದು ಕೆಲಕಾಲ ನಿಷ್ಠಾವಂತ ವಿದ್ಯಾರ್ಥಿಯಾಗಿ ವಾಸ ಮಾಡಿದಾಗ ಎನ್ನಬಹುದು. ಹೀಗೆ ಶ್ರೀ ಸೇ. ರಾ. ಮಳಗಿಯವರು, ಬೇರೆ ಕೆಲವರು ಸಾಂಗಲಿಗೆ ಬಂದು ವಿಲಿಂಗ್ಡನ್ ಕಾಲೇಜಿನಲ್ಲಿ ದೊರೆಯುವ ಗ್ರಂಥಾಲಯ ಮುಂತಾದ ಸೌಕರ್ಯಗಳನ್ನು ಪಡೆದು ಎಂ.ಎ. ವ್ಯಾಸಂಗ ಮಾಡಿ ಸ್ನಾತಕೋತ್ತರ ಪದವಿಯನ್ನು ಸಂಪಾದಿಸುತ್ತಿದ್ದರು. ಇವರಲ್ಲಿ ಕೆಲವರಿಗೆ ಪರೀಕ್ಷೆಯಲ್ಲಿ ಅಪೇಕ್ಷಿತ ಫಲವು ದೊರೆಯದಿದ್ದರೂ ಕನ್ನಡ ಭಾಷೆ-ಸಾಹಿತ್ಯಗಳ ಉನ್ನತವಾದ ವ್ಯಾಸಂಗದಿಂದ ತಾವು ಮುಂದೆ ಕೈಗೊಳ್ಳಬೇಕಾದ ಅಧ್ಯಾಪನ ಮತ್ತು ಸಾಹಿತ್ಯ ರಚನೆ ಈ ಬಗೆಯ ಕಾರ್ಯಕ್ಕೆ ತಕ್ಕ ಸಿದ್ಧತೆಯನ್ನು ಮಾಡಿಕೊಂಡ ಸಮಾಧಾನವು ದೊರೆಯಿತು. ಎನ್ಕೆಯವರಿಗೂ ಈ ಬಗೆಯ ಸಮಾಧಾನವೇನೋ ಉಂಟಾಯಿತು. ಆದರೆ ಅದರೊಡನೆ ಅಪೇಕ್ಷಾಭಂಗದ ಮೂಲಕ ತೀವ್ರ ಅಸಮಾಧಾನವೊಂದು ಮನಸ್ಸಿನ ಆಳದಲ್ಲಿ ಸೇರಿಕೊಂಡಿತು. ಆಯುಷ್ಯದುದ್ದಕ್ಕೂ ಅದರ ಪರಿಣಾಮವಾಗಿ ಒಂದು ಬಗೆಯ ವಿಷಾದಯೋಗವು ಅವರ ಬೆನ್ನಟ್ಟಿಕೊಂಡು ಬಂದಿದೆ. 'ಯಾಕೆ ಈ ಜಗತ್ತಿನಲ್ಲಿ ಯೋಗ್ಯತೆಗೆ ತಕ್ಕ ಪುರಸ್ಕಾರವಿಲ್ಲ? ಯಾಕೆ ಮಾಡಿದ ಕೆಲಸಕ್ಕೆ ಮನ್ನಣೆಯಿಲ್ಲ? ಯಾಕೆ ದುಃಖದ ಮೇಲೆ ದುಃಖ?'

ಈ ಪ್ರಶ್ನೆಗಳಿಗೆ ಮತ್ತೆ ಮತ್ತೆ ತಮ್ಮ ಅನುಭವದಲ್ಲಿ ಸಾಕ್ಷ್ಯ ಪಡೆಯುತ್ತ ಅವಕ್ಕೆ ಉತ್ತರ ಹುಡುಕುತ್ತ ಉತ್ತರ ಪಡೆಯಲಾರದೆ ಮಿಡುಕುತ್ತ ಎನ್ಕೆಯವರು ತಮ್ಮ ಹಣೆಬರಹದ ಹಣೆಮಡಿಕೆಯಲ್ಲಿಯೆ ಮುಂದಡಿಯಿಡುತ್ತ ಹೊರಟಿದ್ದಾರೆ. ಹೊಟ್ಟೆಪಾಡಿಗಾಗಿ ಅವರು ಆ ದಂಡೆಯಿಂದ ಈ ದಂಡೆಗೆ ಬಡಿದು ಕೊನೆಗೆ ಮುಂಬಯಿ ಆಕಾಶವಾಣಿ ತಮ್ಮ ಮೊರೆ ಕೇಳಿತೆಂದು ಅಲ್ಲಿಯ ಕನ್ನಡದ ಅಪರೂಪದ ಕಾರ್ಯಕ್ರಮಗಳಿಗೆ ತಮ್ಮ ಶಕ್ತಿಯನ್ನೆಲ್ಲ ಧಾರೆಯೆರೆದು ದುಡಿದರು. ಹಾಡು ಬರೆದರು, ಹಾಡಿಸಿದರು. ನಾಟಕ ಬರೆದು ಆಡಿಸಿದರು. ಎಲ್ಲ ವೇಷ ತಳೆದರು. ಯಾವುದಕ್ಕೂ ಪಟ್ಟಕ್ಕೆ ಕುಳಿತವರಿಂದ ಹೇಳಿಕೊಳ್ಳುವಂಥ ಮೆಚ್ಚಿಕೆಯಿಲ್ಲ, ಮುನ್ನಡೆಯಿಲ್ಲ, ಸ್ವಲ್ಪ ತಪ್ಪಿದರೆ ಮಾತ್ರ ಕಿಸುಗಣ್ಣು ತಪ್ಪುತ್ತಿರಲಿಲ್ಲ. ಅವರೇ ಹೇಳಿದಂತೆ ಎನ್ಕೆ ಅಂದರೆ ನಿಲಯದ ಕಲಾವಿದರಾಗಿ ಶಾಶ್ವತಿಯ ಭರವಸೆಯಿಲ್ಲದೆ 'ಕರ್ಮಣ್ಯೇವಾಧಿಕಾರಸ್ತೇ' ಎಂದು ತಿವಿಸಿಕೊಳ್ಳುತ್ತ ಆ ಸಮುದ್ರತೀರದ ಮಹಾಸಮುದ್ರದ ಅಡಿಯಲ್ಲಿ ಬೆವರು ಸುರಿಸಿದರು. ಆಮೇಲೆ ಆಜ್ಞೆಯನ್ನು ಶಿರಸಾವಹಿಸಿ ಬೆವರೊರಸಿಕೊಂಡು, ಧಾರವಾಡದ ಮಳೆಯಲ್ಲಿ ಮುಳುಗೇಳಲು ಕೆಂಪು ರಾಡಿಯನ್ನು ಸಿಡಿಸಿಕೊಳ್ಳಲು, ಅದೇ ದರ್ಜೆಯಲ್ಲಿ ದುಡಿಯಲೆಂದು ಕರ್ನಾಟಕದ ಒಂದು ಆಕಾಶವಾಣಿ ಕೇಂದ್ರಕ್ಕೆ ಬಂದರು. ಅದರ ಪ್ರಸಾರಶಕ್ತಿಯೆಷ್ಟು ದುರ್ಬಲ

ವಾಗಿತ್ತೋ ಅಷ್ಟೇ ಅವರ ಅಲ್ಲಿಯ ಸ್ಥಾನವು ದುರ್ಬಲವಾಗಿತ್ತು! ನಾನು ಅವರ ಮೊದಲನೇ ಸಲಹಾ ಸಮಿತಿಯ ಸದಸ್ಯನಾಗಿ ಅದರ ಮುಖ್ಯಸ್ಥರಾದ ಅನ್ಯಭಾಷಿಕ ಮಹಾಶಯರ ಆಟಾಟೋಪಗಳನ್ನು ಕಂಡಿದ್ದೇನೆ. ಹೊಸ ಹೊಸ ಕಾರ್ಯಕ್ರಮ ಗಳನ್ನು ರೂಪಿಸುವಲ್ಲಿ ಎಸ್ಕೆಯವರು ಪಡುತ್ತಿದ್ದ ಕಷ್ಟಗಳನ್ನು ಅರಿತಿದ್ದೇನೆ. ಆಮೇಲೆ ಎಷ್ಟೋ ಕಾಲವು ಸವೆದ ಮೇಲೆ ಅವರ ಆಶಾವಾದವು ಸವೆಯುತ್ತ ಹೊರಟಿರುವಾಗ ಬೆಂಗಳೂರಿನ ನಿಲಯಕ್ಕೆ ಬಂದರು, ಇಲ್ಲಿ ಅವರಿಗೆ ತಡವಾಗಿಯೆ ಕಾರ್ಯಕ್ರಮ ನಿರ್ವಾಹಕರ ಸ್ಥಾನಕ್ಕೆ ಬಡತಿ ಸಿಕ್ಕಿತು. ಇಷ್ಟರಲ್ಲಿ ಅವರಲ್ಲಿ ವಿಷಾದಯೋಗದ ವೈಫಲ್ಯ ಭಾವವು ಸ್ಥಾಯಿಯಾಗಿಬಿಟ್ಟ ಕಾರಣ ಅವರು ಬಹಳಷ್ಟು ಸಂತೋಷಪಡುವ ಸ್ಥಿತಿ ಯುಳ್ಳಿರಲಿಲ್ಲ, ಯಾರು ಏನೆನ್ನುವರೋ ಎಂಬ ಸಂಕೋಚವು ಅವರನ್ನು ಮುತ್ತಿ ಬಿಟ್ಟಿತ್ತು. ಅವರೂ ತಮ್ಮ ಕರ್ತವ್ಯ ಕರ್ಮಗಳನ್ನು ಅವರು ಮಾಡುತ್ತ ಹೊರಟರು. ಯಾರಾದರೂ ಸ್ವಲ್ಪ ಮೆಚ್ಚಿದರೆ ಸಾಕು ಅವರ ಕಣ್ಣರಳುತ್ತಿತ್ತು, ತುಟಿಯಲ್ಲಿ ನಗೆ ಮಿನುಗುತ್ತಿತ್ತು. ಅವರೆ ಟೀಕಾಸ್ತ್ರವು ಎಲ್ಲಿಂದಾದರೂ ಬಂದರೆ ಅವರು ಮೇಲೆ ತೋರಿಸದಿದ್ದರೂ ಒಳಒಳಗೆ ಕೊರಗುತ್ತಿದ್ದರು, ಆತ್ಮೀಯರ ಮುಂದೆ ಮಾತ್ರ ತೋದಿ ಕೊಳ್ಳುತ್ತಿದ್ದರು. ಬೆಂಗಳೂರಲ್ಲಿಯೆ ಇನ್ನು ಸ್ಥಾಯಿಕವಾಗಬೇಕೆಂದು ಮನೆ ಕಟ್ಟಿಸಿದರು. ನಾನೂ ಆಮೇಲೆ ಬಂದು ಇಲ್ಲಿಯೆ ನೆಲಸುವೆನೆಂದೆ. ಇಬ್ಬರೂ ಕೂಡಿರೋಣ ಅಂದೆ, ಅವರು ಮರುವರ್ಗಾವಣೆಯಾಗಿ ಧಾರವಾಡಕ್ಕೆ ಹೋಗಿ ಅಲ್ಲಿಯೆ ನಿವೃತ್ತರಾಗಿ ನೆಲಸಿ ದರು. ನಾನು ವಿಚಿತ್ರ ಯೋಗಾಯೋಗದಿಂದ ಬೆಂಗಳೂರಿಗೆ ಬಂದು ಇಲ್ಲಿಯೇ ನೆಲಸಿನೆ. ಇಷ್ಟಾದರೂ ನಾವು ಅಂತಃಕರಣದಿಂದ ಕೂಡಿ ಇದ್ದೇವೆ.

ಉಪಜೀವನಕ್ಕಾಗಿ ಮಾಡಿದ ಉದ್ಯೋಗದಲ್ಲಿ ಮಾತ್ರವಲ್ಲ ಕೌಟುಂಬಿಕ ಜೀವನ ದಲ್ಲಿಯೂ ತೀರ ಅನಿರೀಕ್ಷಿತವಾದ ಅನುಭವಗಳು ಅವರತ್ತ ನುಗ್ಗಿ ಬಂದು ಅವರನ್ನು ಗಾಸಿಗೊಳಿಸಿದವು. ತುಂಬ ಅನ್ಯೋನ್ಯವಾಗಿ ಬೆಳೆದು ಬಂದ ಮೊದಲ ದಾಂಪತ್ಯವು ಒಡೆದ ಹಾಲಾಯಿತು. ಆಮೇಲೆ ಏಂಗಾಲಾಗಿ ಕೆಲವು ಕಾಲ ಕಳೆಯಬೇಕಾಯಿತು. ಇನ್ನೊಂದು ದಾಂಪತ್ಯಯೋಗವು ಅದೆಷ್ಟೋ ಸುಖ ಸಮಾಧಾನವನ್ನು ತಂದಿತ್ತು. ಅದನ್ನೂ ಹೊಟ್ಟಿ ದೈವ ಕಸಿದುಕೊಂಡಿತು. ಎರಡೂ ಸನ್ನಿವೇಶಗಳಲ್ಲಿ ನಾನು ಅವರ ಆಪ್ತ ಅತಿಥಿಯಾಗಿ ಅವರ ಕಷ್ಟಸುಖಗಳನ್ನು ನೋಡಿದ್ದೇನೆ, ಅವರಿಗೆ ಧೈರ್ಯ ಹೇಳುವ ಪ್ರಯತ್ನ ಮಾಡಿದ್ದೇನೆ. ಅವರು ದುಃಖವನ್ನು ನುಂಗಿಕೊಂಡು ಆತ್ಮ ಶೋಧನೆಯನ್ನು ಮಾಡುತ್ತ ಗುರುಗಳಲ್ಲಿ ದೃಢವಾದ ನಂಬಿಕೆಯಿಂದ ಸಾಧನೆಮಾಡುತ್ತ ಸಾಗಿರುವುದನ್ನೂ ನೋಡಿ ಸಂತಸಪಟ್ಟಿದ್ದೇನೆ.

ಅವರ ಮೂರು ಗಂಡುಮಕ್ಕಳು ತಂತಮ್ಮ ರೀತಿಯಲ್ಲಿ ದೊಡ್ಡವರಾಗಿ ತಮ್ಮ ಪಾಲಿಗೆ ಬಂದ ಕೆಲಸ ಮಾಡುತ್ತಿದ್ದಾರೆ, ಮದುವೆಯಾಗಿ ಸಂಸಾರ ಹೂಡಿದ್ದಾರೆ, ಮಕ್ಕಳನ್ನು ಪಡೆದಿದ್ದಾರೆ. ಮೂವರಿಗೂ ಎಸ್ಕೆಯವರು ಮನೆಗಳನ್ನು ಮಾಡಿ ಕೊಟ್ಟಿ ದ್ದಾರೆ; ತಮ್ಮ ದಿನನಿತ್ಯದ ವೇಳೆಯನ್ನು ಹಂಚಿಕೊಂಡು ಎಲ್ಲರ ಹತ್ತಿರವೂ ಸ್ವಲ್ಪಸ್ವಲ್ಪ

ಇರುತ್ತಾರೆ. ಈಗ ಅವರಿಗೆ ಬಹುಮಟ್ಟಿಗೆ ನೆಮ್ಮದಿಯಿದೆ, ತಮ್ಮ ಸಾಧನೆಗೆ ಮತ್ತು ಓದುಬರಹಗಳಿಗೆ ಸಾಕಷ್ಟು ಸಮಯವಿದೆ, ವಿಶ್ರಾಂತಿಯಿದೆ. ಅದರೂ ಹೇಳಲಿಕ್ಕೆ ಬಾರದ ಒಳತಳುಕು ಅವರಲ್ಲಿ ನೆಲಸಿರುವಂತಿದೆ. ಅದು ಒಮ್ಮೆ ದೈಹಿಕ ತಕರಾರುಗಳ ಮೂಲಕ ತಲೆಯೆತ್ತುತ್ತದೆ, ಒಮ್ಮೆ ತಮ್ಮ ವಿಷಯದಲ್ಲಿ ಯಾರು ಯಾರೋ ನಡೆದುಕೊಂಡ ರೀತಿ, ಆಡಿಕೊಂಡ ಮಾತು ಇದರಿಂದ ಉಂಟಾದ ಅಸಮಾಧಾನದ ರೂಪ ತಾಳುತ್ತದೆ. ಹಿಂದೆ ಇಂಥ ತಕರಾರುಗಳು, ಅಸಮಾಧಾನಗಳು ಒಂದು ಸರಮಾಲೆಯಾಗಿ ಅವರನ್ನು ಕಾಡುತ್ತಿರುವಾಗ ನಾನು ಅವರಲ್ಲಿಗೆ ಹೋದೆನೆಂದರೆ ಎದೆ ಬಿಚ್ಚಿ ಎಲ್ಲವನ್ನೂ ಹೇಳುತ್ತಿದ್ದರು. ನಾನೂ ಅಂಥವನ್ನೇ ನನ್ನ ಪರಿಯಲ್ಲಿ ಒಡಲೊಳಗೆ ಇಟ್ಟುಕೊಂಡಿದ್ದರೂ ಹೆಚ್ಚು ತಿಳಿದವನಂತೆ ಹಣ್ಣಾದವನಂತೆ ಅವರಿಗೆ ಸಮಾಧಾನ ಹೇಳುತ್ತಿದ್ದೆ, ತಾಳ್ಮೆಯ ಪ್ರವಚನ ಮಾಡುತ್ತಿದ್ದೆ. ಅವರದಕ್ಕೆ ಮಹತ್ವ ಕೊಡುತ್ತಿದ್ದರು, ಕಿವಿಗೊಟ್ಟು ಕೇಳುತ್ತಿದ್ದರು. ಕೊನೆಯಲ್ಲಿ, ತಾವೆಷ್ಟು ಪ್ರಯತ್ನ ಮಾಡಿದರೂ ಜಗತ್ತು ತಮ್ಮ ಅರ್ಥ ಮಾಡಿಕೊಂಡಿಲ್ಲ, ತಮ್ಮ ಬೆಲೆಯನ್ನು ಅರಿತು ಕೊಂಡಿಲ್ಲ, ಜೀವನದ ಜೊತೆಗಾತಿ ಕೂಡ ಪೂರ್ತಿಯಾಗಿ ಹೊಂದಿಕೊಂಡಿಲ್ಲ ಎಂಬ ಇಲ್ಲಗಳ ಗೋಳನ್ನು ಹೇಳಿ ಮುಗಿಸುತ್ತಿದ್ದರು. ಈಗ ಇಳಿವಯಸ್ಸಿನಲ್ಲಿ ಹಿಂದಿನ ವಿಷಾದ ಯೋಗದ ತೀವ್ರತೆ ಕಡಿಮೆಯಾಗಿ ಪೂರ್ಣಯೋಗದ ದಾರಿಯಲ್ಲಿ ಸರ್ವಸಮರ್ಪಣ ಭಾವದಿಂದ ಅವರು ಮುಂದರಿಯುತ್ತಿದ್ದಾರೆ. ತುಂಬ ತಡವಾಗಿಯಾದರೂ ರಾಜ್ಯ ಅಕಾದೆಮಿಯ ವಿಶೇಷ ಪ್ರಶಸ್ತಿ ಅವರಿಗೆ ಸಂದಿದೆ. ಇಷ್ಟಾದರೂ ಕೇವಲ ಆತ್ಮೀಯ ರೊಂದಿಗೆ ಮಾತಾಡುವಾಗ ಅವರ ಅನೇಕಮುಖವಾದ ಅತೃಪ್ತಿ 'ನಾನು ಹೊರಟು ಹೋಗಿಲ್ಲ' ಎಂದು ಹಣಿಕೆ ಹಾಕುತ್ತಿರುತ್ತದೆ. ಬಹುಶಃ ಎಲ್ಲ ಪ್ರಬುದ್ಧರು ಮತ್ತು ಪರಿಣತರು ಎಂದು ಹೇಳಿಸಿಕೊಳ್ಳುವ ವ್ಯಕ್ತಿಗಳಲ್ಲಿ ಒಂದಿಲ್ಲೊಂದು ರೂಪದಲ್ಲಿ ಇದು ಕಾಣಿಸಿಕೊಳ್ಳುತ್ತದೆ. ಇಂಥ ಅಪಸ್ವರಗಳ ನಟ್ಟನಡುವೆ ಇದ್ದು ಇದ್ದು ಎಲ್ಲ ಜೀವಗಳು ತಮ್ಮ ಸಂವಾದಿ ಸ್ವರವನ್ನು ಕಂಡು ಹಿಡಿಯಬೇಕಾಗುತ್ತದೇನೋ!

ಎನ್ಕೆಯವರು ಕೇವಲ 'ನಿಲಯ ಕಲಾವಿದ'ರಾಗಿ ಬದುಕಲಿಲ್ಲ. ಅವರು ಸಹಜ ಪ್ರತಿಭೆಯಿಂದ ಕೂಡಿರುವ ಹುಟ್ಟು ಕಲಾವಿದರು. ಇದನ್ನು ಅನೇಕರು ಗುರುತಿಸಿಲ್ಲ, ಗುರುತಿಸಿದ್ದರೂ ಸರಿಯಾಗಿ ಬೆಲೆ ಕಟ್ಟಿಲ್ಲ. ಇದೊಂದು ಕೊರಗು ಅವರ ವಿಷಾದ ಯೋಗದಲ್ಲಿಯ ಅಂಗವಾಗಿ ಉಳಿದಿದೆ. ಅವರು ಸ್ವಸಂತೋಷಕ್ಕಾಗಿ ಕೆಲವು ಭಾವಗೀತೆಗಳನ್ನು ಬರೆದರು, ಆಕಾಶವಾಣಿಗಾಗಿ ಕೆಲವನ್ನು ಬರೆದರು. ನವೋದಯದ ಪ್ರಾರಂಭ ಕಾಲದಲ್ಲಿ ಅವರ ಸುಮಧುರವಾದ ಹಾಡುಗಳು ಗಾನದೋಸೆಗಳಾಗಿ, ಬಾನುಲಿಯಲ್ಲಿ ಪ್ರಸಾರವಾಗಿ ರಸಿಕರ ಮನವನ್ನು ತಣಿಸಿದವು, ಕನ್ನಡದ ಪ್ರೀತಿಯನ್ನು ಹೆಚ್ಚಿಸಿದವು. ಇಂದಿಗೂ ಆಗಾಗ ಅವು ಕೇಳಿ ಬರುತ್ತವೆ. ಆದರೆ ಅವರು ಕವಿಯೆಂದು ಮನ್ನಣೆ ಪಡೆಯಲಿಲ್ಲ. ಬಾನುಲಿ ಕವಿಗಳ ಪಂಕ್ತಿಯಲ್ಲಿಯೆ ಅವರನ್ನು ಸೇರಿಸಿಬಿಟ್ಟರು. ಅವರು

ಅನೇಕ ಏಕಾಂಕ ನಾಟಕಗಳನ್ನು ಕೆಲವು ದೊಡ್ಡ ನಾಟಕಗಳನ್ನು ಬರೆದರು. ಅವುಗಳಲ್ಲಿ ಕೆಲವು ಶಾಲೆ ಕಾಲೇಜುಗಳ ವಾರ್ಷಿಕ ಸಮಾರಂಭಗಳಲ್ಲಿ ನೂರಾರು ಸಲ ಅಭಿನಯಿಸಲ್ಪಟ್ಟು ಜನಪ್ರಿಯವಾದವು. ಆದರೆ ನಾಟಕ ಸಮೀಕ್ಷಕರು ಹೆಚ್ಚಾಗಿ ಅವುಗಳತ್ತ ಕಣ್ಣು ಹಾಯಿಸಲಿಲ್ಲ. ಅಪರೂಪವಾಗಿ ಹಾಯಿಸಿದರೆ ಬರೀ ಹೆಸರಿನ ಉಲ್ಲೇಖ, ಇಲ್ಲವೆ ವಕ್ರದೃಷ್ಟಿ. ಅವರು ಹಲವು ಕಾದಂಬರಿಗಳನ್ನು ಬರೆದು ಕೌಟುಂಬಿಕ ಮತ್ತು ಸಾಮಾಜಿಕ ಜೀವನದ ಸೊಗಸಾದ ಚಿತ್ರಣವನ್ನು ಮಾಡಿದ್ದಾರೆ. ಅವುಗಳನ್ನು ಕುರಿತು ಇತ್ತೀಚೆಯ ವಿಮರ್ಶಕರು ಅಲಕ್ಷ್ಯವನ್ನು ತೋರಿದ್ದರೂ 'ಯುಗಧರ್ಮ ಹಾಗೂ ಸಾಹಿತ್ಯದರ್ಶನ'ದಲ್ಲಿ ಅವರ ಎರಡು ಕಾದಂಬರಿಗಳ ಸ್ವಲ್ಪ ವಿಸ್ತಾರವಾದ ವಿಮರ್ಶೆ ಬಂದಿದೆ, ಪ್ರಾಮಾಣಿಕವಾದ ಗುಣದೋಷ ವಿವೇಚನೆಯೊಂದಿಗೆ. ಈ ವಿಮರ್ಶೆಯಲ್ಲಿ ಎರಡು ಮಹತ್ವದ ಹೇಳಿಕೆಗಳಿವೆ: (೧) 'ಎನ್ಕೆಯವರ ಬರವಣಿಗೆಯಲ್ಲಿ ಅಸಾಮಾನ್ಯವಾದದ್ದು ಏನೂ ಇಲ್ಲ. ಅವರ ಅನುಭವ ಘನವಾದದ್ದಲ್ಲ. ಶ್ರೀರಂಗರ ವಿಚಾರಸರಣಿಯಾಗಲಿ ಮಾಸ್ತಿಯವರ ಅಂತಃಕರಣ ಪ್ರಜ್ಞೆಯಾಗಲಿ, ಕುವೆಂಪುರವರ ಕಾವ್ಯಮಯತೆಯಾಗಲಿ, ವಿನಾಯಕರ ಆದರ್ಶವಾದದ ಘನತೆಯಾಗಲಿ ಎನ್ಕೆಯವರಲ್ಲಿಲ್ಲ. ಆದರೆ ಈ ಸಾಮಾನ್ಯತೆಯೇ ಅವರ ಬಹಳ ದೊಡ್ಡ ಗುಣವಾಗಿದೆ...' (೨) 'ಎನ್ಕೆಯವರು ವಾತಾವರಣ ನಿರ್ಮಿತಿ ಹಾಗೂ ರಸಸೃಷ್ಟಿಯ ನೆವದಲ್ಲಿ ಸಮಸ್ಯೆಯನ್ನು ಹುದುಗಿಸಿ ಬಿಡುತ್ತಾರೆ. ಇದಕ್ಕೆ ಕಾರಣವಿಲ್ಲದೆ ಇಲ್ಲ. ಎನ್ಕೆ ವಿಚಾರವಾದಿಗಳನ್ನು ಸೃಷ್ಟಿಸಲಾರರು. ವಿಚಾರವಾದಿತ್ವ ಎಂದೂ ಅವರ ಬರವಣಿಗೆಯ ತಿರುಳಾಗಿ ಬಂದಿಲ್ಲ. ಅವರ ವ್ಯಕ್ತಿಗಳು ಯಾವ ಸನ್ನಿವೇಶಗಳಲ್ಲಿಯೂ ಅವುಗಳ ಸುಖದುಃಖಗಳಲ್ಲಿ ಮಾತ್ರ ಪಾಲುಗಾರರಾಗುತ್ತವೆಯೇ ಹೊರತು, ಯೋಚಿಸುವದಿಲ್ಲ'. ಈ ಹೇಳಿಕೆಗಳನ್ನು ಇಲ್ಲಿ ಬಹಳಷ್ಟು ಚರ್ಚಿಸುವ ಉದ್ದೇಶವಿಲ್ಲ. ಆದರೆ ಇನ್ನೂ ಬೆಳೆಯುತ್ತಿರುವ ಅವಸ್ಥೆಯಲ್ಲಿ ಮೊದಲು ಬರೆದ ಎನ್ಕೆಯವರ ಕಾದಂಬರಿಗಳ ಬಗ್ಗೆ ಈ ತುಲನಾತ್ಮಕ ವಿಮರ್ಶೆಯಲ್ಲಿ ಸತ್ಯಾಂಶವಿದ್ದರೂ ಅನಾವಶ್ಯಕ ಎನಿಸುತ್ತದೆ. ಸಾಮಾನ್ಯತೆ ಅವರ ಬಹಳ ದೊಡ್ಡ ಗುಣವಾಗಿದ್ದರೆ 'ಅಸಾಮಾನ್ಯವಾದದ್ದು ಏನೂ ಇಲ್ಲ' ಎಂದು ಹೇಳಬೇಕಾಗಿತ್ತೇ? ಇಂಥ ಲೇಖಕನಲ್ಲಿ ಅಸಾಮಾನ್ಯವಾದದ್ದು ಇದ್ದರೆ ಅದು ಅವಗುಣವಾಗುವದಿಲ್ಲವೇ? ಹೆಚ್ಚಾಗಿ ಭಾವಜೀವಿಗಳಾದ ಪಾತ್ರಗಳನ್ನು ಸೃಷ್ಟಿಸಿ ಅವುಗಳ ಚಿತ್ರಣವನ್ನು ಮಾಡಿರುವಾಗ, 'ಎನ್ಕೆ ವಿಚಾರವಾದಿಗಳನ್ನು ಸೃಷ್ಟಿಸಲಾರರು' ಎಂಬ ಆಧ್ಯತೆಯ ತೀರ್ಮಾನ ಸರಿಯಾದುದೇ?

ಕಳೆದ ಹತ್ತಿಪ್ಪತ್ತು ವರ್ಷಗಳಲ್ಲಿ ವಸ್ತುನಿಷ್ಠ ವಿಮರ್ಶೆ ಎಂಬ ಹೆಸರಿನಲ್ಲಿ ವಿಶಿಷ್ಟ ವ್ಯಕ್ತಿನಿಷ್ಠ ಇಲ್ಲವೆ ವಿಚಾರಪ್ರಣಾಲಿನಿಷ್ಠ ಅಂದರೆ ಒಟ್ಟಿನಲ್ಲಿ ಒಮ್ಮಗ್ಗಲಿನ ಸಮೀಕ್ಷೆ ಹೆಚ್ಚುತ್ತಿರುವಾಗ ಎನ್ಕೆಯಂಥವರ ಸಾಹಿತ್ಯ ಸೃಷ್ಟಿಯು ಹೆಸರೆತ್ತುವುದು ಅಪರೂಪ, ಸಮತೋಲನವಾದ ವಿಮರ್ಶೆಯಂತೂ ಇನ್ನೂ ಅಪರೂಪವಾಗಿದೆ. ಇಂದಿನ ಕೆಲವು

ವಿಮರ್ಶಕರಿಗೆ ತೀರ ಸ್ವಲ್ಪ ಜನ ಮಹತ್ವದ ಲೇಖಕರು ಅಥವಾ ಶ್ರೇಷ್ಠ ಕವಿಗಳು, ಉಳಿದವರೆಲ್ಲ ನಗಣ್ಯರು! ನಗಣ್ಯರ ಬಗ್ಗೆ ಬರೆಯುವದೇನಿದೆ? ಬರೆಯದೆ ಇರುವುದೇ ಒಳ್ಳೆಯದು. ಬರೆದರೆ ನಗಣ್ಯತೆಯನ್ನು ಯಾವ ಮುಲಾಜಿಲ್ಲದೆ ಎತ್ತಿತೋರಿಸಬೇಕಾಗುತ್ತದೆ. ಆಗ ನಗಣ್ಯರಿಗೆ ಸಲ್ಲದ ಪ್ರಾಮುಖ್ಯ ಬರುವುದಿಲ್ಲವೇ?! ಕಾಲಧರ್ಮವೇ ಹೀಗಿರುವಾಗ ಯಾರೇನು ಮಾಡಬಲ್ಲರು? ಆದರೆ ಕಾಲ ಕೊನೆಯ ವರೆಗೂ ಹೀಗೆ ಇರಲಾರದು. ಲೇಖಕನ ವಿಚಾರಧಾರೆ, ಜೀವನದೃಷ್ಟಿ, ಸೃಜನಾತ್ಮಕ ಧೋರಣೆ ಏನೇ ಇರಲಿ, ಅವನನ್ನು ಕುರಿತು ಚಾರಿತ್ರಿಕ ಸಮೀಕ್ಷೆಗಳಲ್ಲಿ ಸಹೃದಯ ಮನೋಧರ್ಮದಿಂದ ಕೂಡಿದ ಸಮತೂಕದ ವಿಮರ್ಶೆ ಬರಬೇಕು. ಒಬ್ಬ ಹಿರಿಯ ಅಥವಾ ಶ್ರೇಷ್ಠನಾದ ಲೇಖಕನ ಜೊತೆಯಲ್ಲಿ ಹಲವಾರು ಒಳ್ಳೆಯ ಲೇಖಕರಿರುತ್ತಾರೆ. ಪ್ರಾಮಾಣಿಕವಾದ ಸ್ವತ್ವಸಂಪನ್ನವಾದ ಒಳ್ಳೆಯ ಬರವಣಿಗೆ ಕೂಡ ತನ್ನ ರೀತಿಯಲ್ಲಿ ಹಿರಿದೇ. ಅದನ್ನು ಅಲ್ಲಗಳೆಯಬಾರದು, ಎತ್ತಿ ತೋರಿಸಬೇಕು. ತನ್ನ ಜಾಡಿನಲ್ಲಿ ಬರೆಯುವವರಿಗೆ ಮಾತ್ರ ಮನ್ನಣೆ ಎಂಬ ಸಂಕುಚಿತ ದೃಷ್ಟಿ ಸಲ್ಲದು.

ಎನ್ಕೆಯವರನ್ನು ಕುರಿತು ನಾನು ಕಂಡಂತೆ ಎಂಬ ವಿಷಯವನ್ನು ಇಟ್ಟುಕೊಂಡು ಇಷ್ಟೆಲ್ಲ ಬರೆದಿದ್ದೇನೆ. ಇದು ಸಾಲದು ಮಾತ್ರವಲ್ಲ, ಇದು ಸರಿಯಲ್ಲ ಎಂದೂ ಇರಬಹುದು. ಯಾಕಂದರೆ ನಾನು ಕಂಡದ್ದು ನನ್ನ ಕನ್ನಡಿಯ ಮೂಲಕ. ಈ ಕನ್ನಡಿ ಉಬ್ಬಿದ್ದಿರಬಹುದು, ತಗ್ಗಿದ್ದಿರಬಹುದು. ಏನಿದ್ದರೂ ಎನ್ಕೆಯವರ ವಿಷಯದಲ್ಲಿ ನಾನು ಮನಬಿಚ್ಚಿ ಬರೆದುದನ್ನು ಅವರು ತಪ್ಪು ತಿಳಿಯಲಾರರು ಎಂಬ ಭರವಸೆಯಿದೆ.

ಅನೇಕರಿಗೆ ಗೊತ್ತಿದೆಯೋ ಇಲ್ಲವೋ, ಎನ್ಕೆಯವರನ್ನು ನಾನು ಕಂಡದ್ದರಲ್ಲಿ ನನ್ನನ್ನೇ ನಾನು ಕಂಡಿದ್ದೇನೆ. ಅವರಿಗೂ ನನಗೂ ತುಂಬ ಸಾಧರ್ಮ್ಯವಿದೆ. ಸ್ನೇಹವಿರುವಲ್ಲೆಲ್ಲ ಸಾಧರ್ಮ್ಯವಿರುವುದೆಂದಲ್ಲ. ಇದ್ದಾಗ ಕಬ್ಬಿನ ಮೇಲೆ ಜೇನಿಟ್ಟಂತೆ ಆಗುತ್ತದೆ. ಅವರ ವಿಷಾದಯೋಗ, ಯಾವುದೋ ಕೊರತೆಯ ಕೊರಗು, ಅವುಗಳೊಳಗಿಂದ ಹೊರಬೀಳುವ ನಿತ್ಯಸಾಧನೆ ಇವು ನನ್ನವೂ ಆಗಿವೆ!

# ಕಾಡಿನ ಮಲ್ಲಿಗೆ

ಶಾಂತಾದೇವಿ ಕಣವಿ

ಸುಮಾರು ನಾಲ್ವತ್ತು ವರುಷಗಳ ಹಿಂದಿನ ಮಾತು. ನಮಗೆಲ್ಲ ಶಾಲೆಯ ವಾರ್ಷಿಕೋತ್ಸವದ ಸಂದರ್ಭದಲ್ಲಿ ನಾಟಕವಾಡಬೇಕೆನ್ನುವ ಹುರುಪು. ನಾಟಕಕ್ಕಾಗಿ ನಾವು ಹೆಚ್ಚು ಹುಡುಕಾಡಬೇಕಾಗಲಿಲ್ಲ. ಕನ್ನಡ ಸಾಹಿತ್ಯದಲ್ಲಿ, ಉತ್ತರ ಕರ್ನಾಟಕದಲ್ಲಿ ಅಲ್ಲೊಬ್ಬರು ಇಲ್ಲೊಬ್ಬರು ನಾಟಕಕಾರರು ಹುಟ್ಟಿಕೊಳ್ಳುತ್ತಿದ್ದ ಕಾಲವದು. ಕಾಲೇಜಿನ ಗ್ಯಾದರಿಂಗ್‌ನಲ್ಲಿ ಆಡಲು ಅಗತ್ಯ ಬಿದ್ದಾಗ ಪ್ರತಿಭಾವಂತ ವಿದ್ಯಾರ್ಥಿಗಳು ಮತ್ತು ಪ್ರೊಫೆಸರರು ಆಗಿಂದಾಗ ನಾಟಕ ರಚಿಸಿ ಆಡುವುದನ್ನು ರೂಢಿಯಲ್ಲಿರಿಸಿಕೊಂಡಿದ್ದರು. ಅಂಥ ಸಂದರ್ಭಗಳಲ್ಲಿ ತಾವು ಬರೆದ ಏಕಾಂಕ ನಾಟಕಗಳನ್ನು .ಕೂಡಿಸಿ ಎನ್. ಕೆ. ಕುಲಕರ್ಣಿಯವರು 'ನಡುಮನೆಯಲ್ಲಿ' ಹೆಸರಿನ ಸಂಗ್ರಹವನ್ನು ಪಂಡಿತ ತಾರಾನಾಥರ 'ಪ್ರೇಮ' ಪ್ರಕಟನಾಲಯದಿಂದ ೧೯೩೭ ರಲ್ಲಿ ಪ್ರಕಟಿಸಿದ್ದರು. ಆ ಪುಸ್ತಕದ ಬೆಲೆ ೭ ಆಣೆ ಎಂದರೆ ಈ ಕಾಲದ ಓದುಗರಿಗೆ ಆಶ್ಚರ್ಯವಾದೀತು. ನಮ್ಮ ತಂದೆ ಶ್ರೀ ಗಿಡ್ನವರರ ಪುಸ್ತಕ ಸಂಗ್ರಹದಿಂದ ಅದನ್ನು ಆರಿಸಿ ತಂದು ಆ ಸಂಗ್ರಹದಲ್ಲಿಯ 'ನಡುಮನೆಯಲ್ಲಿ' ನಾಟಕ ಆಡಬೇಕೆಂದು ನಾವು ನಿರ್ಧರಿಸಿದೆವು. ಅದನ್ನು ಆರಿಸಲು ಬಲವಾದ ಕಾರಣಗಳೂ ಇದ್ದವು. ಮತ್ತು ಆ ನಾಟಕದಲ್ಲಿ ಬರುವ ಶೇಕು, ಶೀಲಾ, ಪಮ್ಮಿ, ದಮ್ಮಿ, ರಮಾ ಎಲ್ಲ ಪಾತ್ರಗಳಿಗೂ ನಾವು ಅಕ್ಕ-ತಂಗಿಯರು ಮನೆಯಲ್ಲಿಯೇ ಇದ್ದೆವು. ಅಜ್ಜಿಯ ಪಾತ್ರಕ್ಕಾಗಿ ಸ್ವಲ್ಪ ರಸಕಸಿಯಾದರೂ ನಾಟಕದ ತಾಲೀಮು ನಡೆಯಿತು. ಒಂದು ಮಧ್ಯಮ ವರ್ಗದ ಕುಟುಂಬದ ಚಿತ್ರವಾದುದರಿಂದ ಸಂಭಾಷಣೆಯಲ್ಲಿ ಒಂದೊಂದು ಮಾತು ಹೆಚ್ಚು ಕಡಿಮೆಯಾದರೂ ಸಂಬಾಳಿಸಬಹುದಾಗಿತ್ತು. ಆದರೆ ಕೆಲವೊಂದು ಅನಿವಾರ್ಯ ಕಾರಣಗಳ ಮೂಲಕ ನಮ್ಮ ನಾಟಕ ರಂಗಸ್ಥಳಕ್ಕೆ ಬರದೆ ನಮ್ಮ ಮನೆಯ ಪಡಸಾಲೆಯಲ್ಲಿಯೇ ಅದಕ್ಕೆ ಪರದೆ ಎಳೆಯಬೇಕಾಗಿ ಬಂದದ್ದು ನಮಗೆಲ್ಲ ತುಂಬ ನಿರಾಶೆಯನ್ನುಂಟು ಮಾಡಿತು.

ವಿಜಾಪುರದಲ್ಲಿ ಕೆಲಸ ಮಾಡುತ್ತಿದ್ದ ನಮ್ಮ ತಂದೆ ಶ್ರೀ ಗಿಡ್ನವರರಿಗೆ ಮಾಮಲೇದಾರರೆಂದು ರೋಣಕ್ಕೆ ವರ್ಗವಾಯಿತು. ಸಾಹಿತ್ಯದಂತೆ ಸಾಂಸ್ಕೃತಿಕ ಚಟುವಟಿಕೆಗಳಲ್ಲಿಯೂ ಆಸ್ಥೆ ಇಟ್ಟಿದ್ದ ತಂದೆಯವರು ರೋಣದಲ್ಲಿ ಪ್ರತಿವರ್ಷ ನಾಡಹಬ್ಬ

ಆಚರಿಸಲು ಆರಂಭಿಸಿದರು. ನಾಡಹಬ್ಬದಲ್ಲಿ ರೋಣ ಮತ್ತು ಸುತ್ತಮುತ್ತಲಿನ ತಾಲೂಕಿನ ಸಾಹಿತಿಗಳಿಗೆ ಪ್ರಥಮ ಪ್ರಾಶಸ್ತ್ಯ ಕೊಡಬೇಕೆನ್ನುವದು ಅವರ ಯೋಜನೆ ಯಾಗಿತ್ತು. ಈ ಚಟುವಟಿಕೆಗಳಿಗೆಲ್ಲ ನಮ್ಮ ಮನೆ ಕೇಂದ್ರ ಸ್ಥಾನ. ಶ್ರೀಯುತರಾದ ಪರ್ಡೇಕರ ಮಂಜಪ್ಪ, ಬೇಂದ್ರೆ, ಮಧುರಚೆನ್ನ, ಮಾಳವಾಡ, ಮುಗಳಿ, ಹಲಸಂಗಿಯ ಬಂಧುಗಳು, ಶೇ. ಗೋ. ಕುಲಕರ್ಣಿ ಮುಂತಾದವರೆಲ್ಲ ಬಂದು ನಾಡಹಬ್ಬದಲ್ಲಿ ಭಾಗವಹಿಸಿ ಅಲ್ಲಿಯ ಜನಕ್ಕೆ ಭಾಷಣ, ಕವಿತೆ, ಜಾನಪದ ಗೀತೆಗಳಿಂದ ರಸದೌತಣ ನೀಡಿದರು. ಆದರಂತೆ ಶ್ರೀಮಾನ್ ಎನ್. ಕೆ. ಕುಲಕರ್ಣಿಯವರೂ ರೋಣಕ್ಕೆ ಬಂದಾಗ ಅವರ ಪರಿಚಯವಾದದ್ದು ೧೯೪೪-೪೫ ರಲ್ಲಿ. ಅಂದಿನಿಂದ ಎನ್ಕೆ ನಮ್ಮ ಮನೆಯ ಬಳಗದವರಲ್ಲಿ ಒಬ್ಬರಾದರು.

೧೯೪೮ ರಲ್ಲಿ ಬೈಲಹೊಂಗಲದಲ್ಲಿ ನಾನು ಹೈಸ್ಕೂಲ ವಿದ್ಯಾರ್ಥಿನಿ. ಅನಿರೀಕ್ಷಿತ ವಾಗಿ ಮುಂಬಯಿ ಎ. ಆಯ್. ಆರ್.ದಿಂದ ನನಗೊಂದು ಪತ್ರ ಬಂದಿತು. ನನಗೋ ಹಿಡಿಸಲಾರದ ಹಿಗ್ಗು. ಆ ಫಾರ್ಮನ್ನು ಮತ್ತೆ ಮತ್ತೆ ಓದಿದೆ. ಮುಂಬಯಿದಿಂದ ಕನ್ನಡದಲ್ಲಿ ನಡೆಯುವ ಮಕ್ಕಳ ಕಾರ್ಯಕ್ರಮಕ್ಕಾಗಿ ಎನ್ಕೆಯವರು ನನ್ನಿಂದ ಒಂದು ಮಕ್ಕಳ ಕಥೆಯನ್ನು ಅಪೇಕ್ಷಿಸಿದ್ದರು. ಮುಂಬಯಿಯಲ್ಲಿದ್ದು ದೂರದ ಬೈಲಹೊಂಗಲ ದಲ್ಲಿರುವ ಚಿಕ್ಕ ಹುಡುಗಿಯನ್ನು ಕಥೆಗಾರ್ತಿಯನ್ನಾಗಿ ಮಾಡಬೇಕೆಂದಿದ್ದ ಎನ್ಕೆ ಯವರ ಅಭಿಮಾನಕ್ಕೆ, ಪ್ರೀತಿಗೆ ಚ್ಯುತಿ ಬಾರದಂತೆ ನಾನು ನನ್ನ ಮೊಟ್ಟ ಮೊದಲ ಕಥೆ ಯನ್ನು ಬರೆದು ಕಳಿಸಿದೆ. ಅದು ಪ್ರಸಾರವಾಯಿತೆನ್ನುವದನ್ನು ಕೇಳಿದೆ. ವಿದ್ಯುಚ್ಛಕ್ತಿ ಇಲ್ಲದ ನಮ್ಮ ಊರಲ್ಲಿ ರೇಡಿಯೋ ದನಿ ಕೇಳುವದೆಂತು? ಆದರೆ ಕಥೆಗಾಗಿ ನನಗೆ ಗೌರವ ಧನ ೫ ರೂ. ಬಂದಿತು.

ನಾನು ಶ್ರೀಮತಿ ಕಣವಿಯಾಗಿ ಧಾರವಾಡಕ್ಕೆ ಬಂದು ನೆಲೆಸಿದ ಮೇಲೆ ಎನ್ಕೆ ಯವರು ನನ್ನ ಎಷ್ಟೋ ಕಥೆಗಳನ್ನು ಧಾರವಾಡ ಆಕಾಶವಾಣಿಯಿಂದ ಪ್ರಸಾರ ಮಾಡಿ ದ್ದಾರೆ. ತಮಗೆ ಹಿಡಿಸಿದ ಕಥೆಗಳ ಬಗ್ಗೆ, ಪಾತ್ರಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ ದ್ದಾರೆ. ಹಳ್ಳಿಯ ಜೀವನದ ವಾಸ್ತವ ಚಿತ್ರವಿರುವ 'ಎಳ್ಳು-ಬೆಲ್ಲ' ಕಥೆ ಚೆನ್ನಾಗಿದೆ ಎಂದು ಹೇಳಿದರು. 'ದೀಪದ-ಕೆಳಗೆ' ಎನ್ನುವ ನನ್ನ ಇನ್ನೊಂದು ಕಥೆಯಲ್ಲಿ ಹಿಂದೂ-ಮುಸ್ಲಿಂ ಕುಟುಂಬಗಳ ಬಂಧುತ್ವದ ವಸ್ತುವಿತ್ತು. ಅದರಲ್ಲಿ ಬರುವ ಪೋಲೀಸ ಇನ್‌ಸ್ಪೆಕ್ಟರನ ತಾಯಿಯ ಪಾತ್ರವನ್ನು ಎನ್ಕೆಯವರು ಮೆಚ್ಚಿಕೊಂಡು ಹೊಗಳಿದರು. ಹೊಗಳಿಕೆ ಎಂದರೆ ನನಗೆ ಒಂದು ರೀತಿಯ ಮುಜುಗರ. ಆದರೆ ಹಿತೈಷಿಗಳಿಂದ, ಆತ್ಮೀಯರಿಂದ ಬರುವ ಒಂದು ಒಳ್ಳೆಯ ಮಾತು ಒಂದು ಟಾನಿಕ್ ಇದ್ದಂತೆ. ಹೆಚ್ಚಿನ ಉತ್ಸಾಹವಿಲ್ಲದಿದ್ದರೆ, ಓದುವದರಲ್ಲಿಯೇ ಕಾಲ ಕಳೆದು, ಬರೆಯುವದನ್ನು ಮರೆತೇ ಬಿಡುವಷ್ಟು ಸೋಮಾರಿಯಾದ ನನ್ನನ್ನು ಎನ್ಕೆಯವರು ಆಗಾಗ ಎಚ್ಚರಿಸಿ, ಪ್ರೋತ್ಸಾಹಿಸಿ, ಬರೆಯಲು ಹಚ್ಚಿದ್ದಾರೆ.

ಅವರ ಮೊದಲನೆಯ ಕಾದಂಬರಿ 'ಸಾವಿನ ಉಡಿಯಲ್ಲಿ' ಓದಿ ನಾನು ದುಃಖ ಪಟ್ಟಿದ್ದೆ. ಅದು ಬಹುಮಟ್ಟಿಗೆ ನಿಜಜೀವನದ ನೆಳಲಾಗಿತ್ತು. ಆ ಕಾದಂಬರಿಯ ವಸ್ತು, ಅವರ ಎರಡನೆಯ ಕಾದಂಬರಿ 'ಎರಡನೆಯ ಸಂಬಂಧ' ಓದಿ ಹೊಸ ತರದ ತಂತ್ರ, ಶೈಲಿಯ ಬಗ್ಗೆ ನನಗೆ ಮೆಚ್ಚುಗೆ ಉಂಟಾಯಿತು. ಅದನ್ನು ಮತ್ತೆ ಮತ್ತೆ ಓದುತ್ತಿದ್ದೆ. ಆ ಕಾದಂಬರಿಯ ನಾಯಕ ರಾಮನಾಥನೇ ಎನ್ಕೆಯವರು ಎಂದು ಭಾವಿಸಿಕೊಂಡು ಅವರು ನಿಜವಾಗಿಯೂ ಅವಸರದಲ್ಲಿ ವಿದ್ಯಾಳನ್ನು ಮದುವೆಯಾದ ರೇನೋ ಎಂಬ ವ್ಯಥೆ ಪಟ್ಟಿದ್ದೆ. ಅದು ಬರೀ ಕಲ್ಪನೆ ಎಂದು ತಿಳಿದಾಗ ಸಮಾಧಾನಪಟ್ಟೆ.

ಧಾರವಾಡವನ್ನು ತವರೂರಾಗಿ ಮಾಡಿಕೊಂಡು ಸಾಹಿತಿಗಳ ಸಹವಾಸದಲ್ಲಿ ತಮ್ಮ ಸಾಹಿತ್ಯ ಸೃಷ್ಟಿಯನ್ನು ಮುಂದುವರಿಸಿಕೊಂಡು ಹೋಗಬೇಕಾದ ಎನ್ಕೆ ಯವರು ದೂರದ ಮುಂಬಯಿಗೆ ಹೋಗಬೇಕಾಯಿತು. ಪರಭಾಷೆಯ ಬಾಸ್‌ಗಳ ಕೈಯಲ್ಲಿ ಕನ್ನಡ ಕಾರ್ಯಕ್ರಮ ನಡೆಸುತ್ತಿದ್ದ ಎನ್ಕೆಯವರು ತಾವು ಪಟ್ಟ ಪಾಡನ್ನು ವಿನೋದಮಯವಾಗಿ ತಮ್ಮ ಚರಿತ್ರೆಯಲ್ಲಿ ಬರೆಯುತ್ತಿದ್ದಾರೆ. 'ತಾಯಿನುಡಿ'ಯಲ್ಲಿ ಧಾರಾವಾಹಿಯಾಗಿ ಅವರ ಲೇಖನಮಾಲೆ ಪ್ರಕಟವಾಗುತ್ತಿದೆ.

ಜೀವನದಲ್ಲಿ ದುಃಖವನ್ನು ನಿರಾಶೆಯನ್ನು ನೋವನ್ನು ನುಂಗಿ ನಗುವ ಎನ್ಕೆ ಯವರು ನೀಲಕಂಠರೇ ಸರಿ. ಕಲ್ಯಾಣನಗರ ವಾಸಿಗಳಾದ ನಾವು ಎನ್ಕೆಯವರನ್ನು ಆಗಾಗ ಭೆಟ್ಟಿಯಾಗುತ್ತ ಇರುತ್ತೇವೆ. ಹಾಗೊಮ್ಮೆ ಭೆಟ್ಟಿಯಾದಾಗ 'ಇದೇನು ಇತ್ತ ಹೊರಟಿರಿ?' ಎಂದು ಸಹಜವಾಗಿ ಕಣವಿಯವರು ಕೇಳಿದರು. ಎನ್ಕೆ ನಗುತ್ತ ಹೇಳಿದರು 'ಧಾರವಾಡದ ಮಾಳಮಡ್ಡಿ ಯೊಳಗ ಮತ್ತು ಕಲ್ಯಾಣ ನಗರದೊಳಗ ಹಿಂಗ ಎರಡು ಮನೀ ಅವ. ಅದಕ್ಕ ಮುಂಜಾನೆ ಒಂದು ಮನಿಯೊಳಗ ಸಂಜಿಗೆ ಇನ್ನೊಂದು ಮನಿಯೊಳಗ ಊಟಾ ಮಾಡಿಕೋತ ಆರಾಮ ಅಡ್ಡಾಡಿಕೋತ ಅದೀನಿ' ಎಂದು.

ಶ್ರೀ ಎನ್ಕೆಯವರು ನಾಲ್ವತ್ತು ವರುಷಗಳ ಹಿಂದೆಯೇ ಬರೆದ ಒಂದು ಪದ್ಯ 'ಕಾಡುಮಲ್ಲಿಗೆ'ಯನ್ನು ಮುಂಬಯಿಯ ಶ್ರೀಮತಿ ವಿಜಯಾ ದೇಸಾಯಿ ಗ್ರಾಮಫೋನ್ ರಿಕಾರ್ಡನಲ್ಲಿ ಹಾಡಿದ್ದರು. ಆ ಭಾವಗೀತೆಯ ಕೊನೆಯನ್ನು ಈ ಸಂದರ್ಭದಲ್ಲಿ ಮತ್ತೆ ನೆನೆಸಿಕೊಳ್ಳುತ್ತೇನೆ:

"ಕಾಡಿನ ಮಲ್ಲಿಗೆ ಕೀರ್ತಿಗೆ ಹೆಣಗದು
ಮಡಿವುದು ತ್ಯಾಗದಲಿ
ಬಾಳಿನ ತೋಟದಿ ಮಾನವನೊಬ್ಬನು
ಮಲ್ಲಿಗೆಯಾಗಿರಲಿ."

# 'ನಾಸ್ತಿಕಶ್ಚಿತ್ ಅವಿಷಯೋನಾಮ ಧೀಮತಾಂ'

**ಗೌರೀಶ ಕಾಯ್ಕಿಣಿ**

ಬಾಳಿನಲ್ಲಿ ಒದಗಿ ಬರುವ ಅನೇಕ ಸಂಗತಿಗಳು ನಮ್ಮ ಮನಸ್ಸಿನ ಅಂತಃಪಟದಲ್ಲಿ ಭಿತ್ತಿಚಿತ್ರದಂತೆ ಕೊರೆದು ನಿಲ್ಲುತ್ತವೆ. ವಯಸ್ಸು ಕಳೆದಂತೆ ಅವು ಮಾಸಿ ಹೋಗದೆ ಇನ್ನೂ ನಿಚ್ಚಳವಾಗಿ ತಾರೆಗಳಂತೆ ಮಿನುಗುತ್ತ ನಿಲ್ಲುತ್ತವೆ. ಆದರೆ ಅವುಗಳ ಮಾಯದ ಕಾಲಮಿತಿ ದಿನಾಂಕಗಳೆಲ್ಲ ಹೇಗೋ ಏಕೋ ಮರೆತು ಹೋಗುತ್ತವೆ. ಅದಕ್ಕಾಗಿಯೇ ನಮ್ಮ ಪೂರ್ವಿಕರು ಪ್ರತಿ ಒಂದು ಮಹತ್ವದ ಧಾರ್ಮಿಕ ವಿಧಿ ಕಾರ್ಯದ ಆರಂಭದಲ್ಲಿ ಸಂಕಲ್ಪದೊಂದಿಗೆ 'ದೇಶ ಕಾಲಂ ಸಂಕೀರ್ತ್ಯ' ಎಂದು ನಿರ್ದೇಶಿಸಿದ್ದಿರಬೇಕು.

ಇದೀಗ ನಾನು 'ಸಂಕಲ್ಪ' ಮಾಡಿದ್ದೇನೆ. ನನ್ನ "ಪ್ರಿಯ ವಯಸ್ಯ"ರಲ್ಲಿ ಒಬ್ಬರಾದ ಶ್ರೀ ಎನ್. ಕೆ. ಕುಲಕರ್ಣಿಯವರ ಬಗೆಗೆ "ನಾನು ಕಂಡಂತೆ" ನೆನಪುಗಳನ್ನು ಕಲೆ ಹಾಕಿ ಒಂದು ಆಲೇಖವನ್ನು ರೂಪಿಸಬೇಕೆಂದು. ಆದರೆ ಬರೆಯಲು ಕೂತಾಗ ಮಿದುಳಿನ ಗೂಡಿನಲ್ಲಿ ಆ ನೆನಪುಗಳೇನೋ ಕಿಕ್ಕಿರಿದು ಬರುತ್ತವೆ, ಆದರೆ ಅವುಗಳ ಕಾಲಾನುಕ್ರಮದ ಸಂದರ್ಭ ಸಂಜ್ಞೆಗಳನ್ನೆಲ್ಲ ಕಳಚಿಕೊಂಡು, "ಸುಲಿದ ಬಾಳೆಯ ಹಣ್ಣಿನಂದದಿ".

ಇತಿಹಾಸದಲ್ಲಿ ತಿಥಿಮಿತಿಗಳೂ ಸ್ಥಲನಾಮಾಂಕಿತಗಳೇ ಮುಖ್ಯ. ಅವನ್ನು ಬಿಟ್ಟರೆ ಉಳಿದುದೆಲ್ಲ ಸುಳ್ಳು. ಕಥೆ-ಕಾದಂಬರಿಗಳಲ್ಲಿ ತಿಥಿಮಿತಿ ಸ್ಥಳನಾಮಾಂಕಿತಗಳೇ ಸುಳ್ಳು— ಉಳಿದುದೆಲ್ಲ ಸತ್ಯ. ಮಾನವೀಯ ಅನುಭವದ ನಿರೂಪಣೆ. ಆದರೆ ಇಂಥ ಸ್ಮೃತಿ ಚಿತ್ರಗಳಲ್ಲಿ ಯಾವುದು ಎಷ್ಟು ತಥ್ಯ? ಎಷ್ಟು ಮಿಥ್ಯ? ಇಲ್ಲಿ ಖಚಿತವಾದ ಕಾಲ ಮಿತಿಗಿಂತ ಉಚಿತವಾದ ಅದರ ಅನುಕ್ರಮ–ಅನುಪಾತಗಳೇ (Perspective) ಐತಿಹಾಸಿಕ ಅಥವಾ ಜೈವಿಕ ಸತ್ಯವೆಂದು ನಂಬಿ ನಾನು ಬರೆಯುತ್ತಿದ್ದೇನೆ.

ಇಂದಿನ ನನ್ನ ಸನ್ಮಿತ್ರ ಪ್ರಿಯ ಎನ್ಕೆಯವರನ್ನು ಮೊದಲಿಗೆ ಕಂಡದ್ದು ೪೦ರ ದಶಕದ ಉತ್ತರಾರ್ಧದಲ್ಲಿಯೇ ಇರಬೇಕು. ಶಾಖಾಚಂದ್ರ ನ್ಯಾಯದಂತೆ ನನ್ನನ್ನು ಅವರ ಹತ್ತಿರ ಒಯ್ಯುವರು ನಮ್ಮ ಉಭಯ ಮಿತ್ರ ಪ್ರಿಯ ಪಿ. ಆರ್. ಭಾಗವತರು. ಅಂದಿನ ಕರ್ನಾಟಕದಲ್ಲಿಯೇ ಬೇಂದ್ರೆ–ಕುವೆಂಪು–ಗೋಕಾಕ–ಮುಗಳಿ–ಆನಂದಕಂದರ ಕವನಗಳನ್ನು ಬಿ. ಎಂ. ಶ್ರೀಯವರ ಕನ್ನಡ ಬಾವುಟವನ್ನು ಸುಶ್ರಾವ್ಯವಾಗಿ ಹಾಡಿ ಈ ಭಾವಗೀತ ಪ್ರಕಾರವನ್ನು ನಾಡಹಬ್ಬಗಳಲ್ಲಿ ಹೋದ ಹೋದಲ್ಲೆಲ್ಲ ಅತ್ಯಂತ ಜನಪ್ರಿಯ

ಗೊಳಿಸಿದ ಗಾಯಕರೂ ಕಾವ್ಯ ಪ್ರೇಮಿಗಳೂ ಎಂದು ಹೆಸರಾದವರು ನಮ್ಮ ಪಾಂಡುರಂಗ ಭಾಗವತರು. ಎನ್ಕೆ ಮತ್ತು ಭಾಗವತ ಇವರಿಬ್ಬರ ಜೀವನದ ಭಾವ ಬಂಧಗಳು ಧಾರವಾಡದ ಅಪರೀರ್ವರ ಸುದೀರ್ಘ ಸಹಜೀವನದ ಕಸೂತಿಯ ಪಟದಲ್ಲಿ ಜರತಾರಿಯ ಎಳೆಗಳಂತೆ ಹೆಣೆದುಕೊಂಡಿವೆ.

ಅಂದು ನಾನು ಎನ್ಕೆಯವರನ್ನು ಕಂಡಿದ್ದು ಒಬ್ಬ "ಬಿ. ಟಿ. ಬುದ್ಧಿವಂತ"ನಾದ ಕೆ. ಇ. ಬೋರ್ಡ ಶಾಲೆಯ ಶಿಕ್ಷಕನೆಂದು. ಆಗ ಅವರು, ಸೊಗಸಾಗಿ ಲಾವಣಿಗಳನ್ನು ಹಾಡುತ್ತಿದ್ದ ಗಾಂಧೀವಾದಿ ಶ್ರೀ ಸ್ವಾಮಿಯವರೂ ಧಾರವಾಡದ ಕೆ. ಇ. ಬೋರ್ಡಿನ ಶಾಲೆಗಳಲ್ಲಿ ಶಿಕ್ಷಕರಾಗಿದ್ದರು. ಪ್ರಿಯ ಭಾಗವತರೂ ಅದೇ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದರು— ಸಂಗೀತ ಮೇಷ್ಟ್ರು ಆಗಿ. ಇವರೆಲ್ಲ ಒಂದೇ ರಸಿಕ ಋಣಾನುಬಂಧದ ಬಳಗಕ್ಕೆ ಸೇರಿದವರು. ಅಂದು ಒಂದು ಸಂಜೆಗೆ ನಾನು ಎನ್ಕೆಯವರನ್ನು ಕಂಡಿದ್ದೂ ಶಿಕ್ಷಕನಾಗಿ (ಆಗ ನಾನೂ ಶಿಕ್ಷಕನಾಗಿದ್ದೆ). ಆದರೂ ಕಂಡುಕೊಂಡಿದ್ದು ನಾಟಕಕಾರನಾಗಿ.

ಆ ದಿನ ಅವರು ತಮ್ಮ 'ಬಿ. ಟಿ. ಬುದ್ಧಿವಂತ' ಎಂಬ ನಾಟಕವನ್ನು ನಮಗೆ ಓದಿ ಹೇಳಿದರು. ಅವರ "ನಡುಮನೆಯಲ್ಲಿ" ಎಂಬ ಒಂದು ಹೆಣ್ಣುಮಕ್ಕಳೇ ಆಡಿ ತೋರಿಸಬಹುದಾದ ಏಕಾಂಕಿಕೆಯನ್ನು ನಾನು ಆಗಲೇ ಓದಿ ಮೆಚ್ಚಿ ನಮ್ಮ ಶಾಲೆಯ ವಿದ್ಯಾರ್ಥಿನಿಗಳಿಂದ ರಂಗಕ್ಕೆ 'ಇಳಿಸಿ'ಯೂ ಆಗಿತ್ತು. ಅವರೂ, ಕುಲಕರ್ಣಿ ಶ್ರೀನಿವಾಸರೂ ಅಂದು ಶ್ರೀರಂಗರ ರಂಗವಲ್ಲಿಯನ್ನು ತೀಡುತ್ತಿದ್ದರು. ಎನ್ಕೆಯವರ ಏಕಾಂಕಿಗಳಲ್ಲಿ ಶ್ರೀರಂಗರ "ಭಣಿತ ಭಂಗಿ"ಯ ಪ್ರಭಾವ ಅಡಿಗಡಿಗೆ ಅದೇ ವ್ಯಂಗ್ಯ ವಿಲಾಸದ ಮಾತಿನ ಮೋಡಿಯಿಂದ "ಮುಂಗಾಲ್ಪುಟಿಗೆ"ಯಿಂದ ಮೆರೆದಾಡುತ್ತಿತ್ತು. ಅದೇ ಚತುರ ಚುರುಕು ಶೀಘ್ರ ಪರಿಹಾಸ ರಸಿಕ ಶೈಲಿಯಲ್ಲಿ ಅವರು ಅನೇಕ ಹರಟೆಗಳನ್ನು "ಜಯಂತಿ"ಯಲ್ಲಿ ಆಗಾಗ್ಗೆ ಪ್ರಕಟಿಸುತ್ತಿದ್ದರು. ("ಮುಂಗಾಲ್ಪುಟಿಗೆ" ಅಂಥ ಹರಟೆಗಳ ಒಂದು ಸಂಕಲನದ ಹೆಸರೇ!)

ಈ ಪ್ರಥಮ ಪರಿಚಯದಲ್ಲಿಯೇ ಎನ್ಕೆ ನನಗೆ ಹೊಂದಿಕೊಂಡು ಬಿಟ್ಟರು. ಮುಂದೆ ಈ ಪಟ್ಟದ ಬಹುಮಹತ್ವದ ಭಾಗವನ್ನು ಆಕಾಶವಾಣಿಯ ಮಂತ್ರ-ತಂತ್ರಗಳಲ್ಲಿ ತಮ್ಮ ಮಾಂತ್ರಿಕತೆಯನ್ನು ತುಂಬುವದರಲ್ಲಿ ಸಾರ್ಥಕವಾಗಿ ಕಳೆದ ಎನ್ಕೆ ಆಗಲೇ ತಮ್ಮ "ಅಲೆಯಳತೆ" (Wave Length)ಗೆ ಯಾರು ಒಗ್ಗುವರೆಂದು ಮುಂದಾಗಿ ಊಹಿಸುವ ಶಕ್ತಿಯನ್ನು ಸ್ವಾಭಾವಿಕವೋ ಎಂಬಂತೆ ಪಡೆದಿರಬೇಕು, ಇಲ್ಲವಾದರೆ ನಾವಿಬ್ಬರೂ ಒಬ್ಬರನ್ನೊಬ್ಬರು ಹಾಗೆ ಒಂದೇ ಬ್ಯಾಂಡಿನಲ್ಲಿ ಕಂಡುಕೊಳ್ಳುತ್ತಿದ್ದಿಲ್ಲ.

ಮುಂದೆ ನನ್ನ ಅವರ ಸಂಪರ್ಕ ತಪ್ಪಿ ಹೋಯಿತು...

* * * *

ಅದು ಮತ್ತೆ ಕೂಡಿ ಬಂದದ್ದು ಅವರು ಆಕಾಶವಾಣಿಯ ಸೇವೆಗೆ ಸೇರಿದ ಮೇಲೆ. ಮುಂದಿನ ಅವರ ನಿಷ್ಕಳ ನಲ್ಮೆಯ ಬಿಂಬ ನನ್ನ ಎದೆಯಲ್ಲಿ ಮೂಡಿ ಕಿಳಿದಿದ್ದು

ಕುಮಾರವ್ಯಾಸ ಭಾರತದ ವಾಚನದ ಒಂದು ಪ್ರಸಂಗ— ೫ ರ ದಶಕದಲ್ಲಿರಬೇಕು. ಆಗಲೂ ನಾನು ಪ್ರಿಯ ಭಾಗವತ ಮಾಸ್ತರರೊಂದಿಗೇ ಅವರನ್ನು ಕಾಣಲು ಹೋದದ್ದು. ಧಾರವಾಡದ ಖ್ಯಾತಿವೆತ್ತ ಸಂಗೀತವಿದ್ವಾನ್ ಶ್ರೀ ಗುರುರಾವ ದೇಶಪಾಂಡೆಯವರ ಮನೆಯಲ್ಲಿ. ಒಂದು ರಾತ್ರಿ ನಾವು ಕೂಡಿದೆವು.

ತಂಬೂರಿಯೊಂದಿಗೆ ತಮ್ಮ ಸುಮಧುರ ಕಂಠವನ್ನು ಹಾಲಿಗೆ ಸಕ್ಕರೆ ಸೇರುವಂತೆ ಮೇಳವಿಸಿ ಗುರುವರ್ಯ ದೇಶಪಾಂಡೆಯವರು ಗದುಗಿನ ಭಾರತವನ್ನು ಗಮಕ ಪದ್ಧತಿಯಲ್ಲಿ ಹಾಡುತ್ತಿದ್ದರು. ಅದನ್ನು ಕೇಳಲು ಮುಂದೆ ಕೂತವರು ನಾವೇ ಕೆಲವರು, ಪ್ರಿಯ ಮಿತ್ರ ಕೆ. ಜಿ. ಹಲಸಗಿ, ಪಿ. ಆರ್. ಭಾಗವತ, ನಾನು ಮತ್ತು ನಮ್ಮೆಲ್ಲರ ಇದಿರು ಎನ್ಕೆ. ಗುರುರಾಯರು ಎನ್ಕೆಯವರ ಪ್ರೀತ್ಯರ್ಥವೇ ಹಾಡಿದಂತಿತ್ತು. ನಡುನಡುವೆ ಎನ್ಕೆಯವರು ಕುಮಾರ ವ್ಯಾಸನ ಕೆಲವೊಂದು ಪದ ಪ್ರಯೋಗಗಳ ಬಗೆಗೆ ಶಂಕೆ ಎತ್ತುತ್ತಿದ್ದರು. ಅವುಗಳನ್ನು ಸಮರ್ಥವಾಗಿ ನಿರಸನಗೊಳಿಸಬಲ್ಲವರು ಅಲ್ಲಿ ಶ್ರೀ ದೇಶಪಾಂಡೆಯವರ ತಂಬೂರಿಯ ಪಕ್ಕದಲ್ಲಿಯೇ ಶಾಲು ಹೊದೆದು ಪ್ರಸನ್ನಚಿತ್ತರಾಗಿ ಕುಳಿತಿದ್ದರು— ನಮಗೆಲ್ಲ ಪೂಜ್ಯರಾದ ಶ್ರೀ ಬೆಟಗೇರಿ ಕೃಷ್ಣಶರ್ಮರು. ಕುಮಾರವ್ಯಾಸನ ಕುರಿತು— ಅದೇಕೇ? ಬಹುಶಃ ಎಲ್ಲಾ ಹಳೆಗನ್ನಡ ಜೈನ, ಶೈವ, ವೈಷ್ಣವ ಕವಿಗಳ ಕುರಿತೇ— ಅವರು ಅರಿಯದ ಅಂಶವೇ ಇದ್ದಿಲ್ಲ. Whatever he did not know about Kumara Vyasa was not worth knowing— ಎನ್ನುವಂತಿತ್ತು. ಅದೊಂದು ಚಿರಸ್ಮರಣೀಯ ಸ್ಮೃತಿ ಚಿತ್ರ. ಅಂದು ನಮ್ಮ ಎನ್ಕೆ ಕುಮಾರವ್ಯಾಸನ ಮೇಲೆ ಡಾಕ್ಟರೇಟಗಾಗಿ ಪ್ರಬಂಧ ತಯಾರಿಸುವ ಹವ್ಯಾಸ ಹಚ್ಚಿಕೊಂಡಿದ್ದರು. ಮುಂದೆ ಅದೇಕೋ ಆ ಹಾದಿಯಿಂದ ಹೊರಳಿದರು. ಆದರೆ ಕುಮಾರವ್ಯಾಸನ ಗೀಳು ಅವರಿಗೆ ಆಜೀವ ಹಿಡಿದುಬಿಟ್ಟಿತು. ಈ ಮಹಾ ಕವಿಯ ವಿಷಯ ಹಲವು ಉದ್ಬೋಧಕ ಗ್ರಂಥಗಳನ್ನು ಬರೆದರು— ಇಂದೂ ಬರೆಯುತ್ತಿದ್ದಾರೆ. ನಾನು ತಿಳಿದ ಮಟ್ಟಿಗೆ, ಇಂದು ಕುಮಾರವ್ಯಾಸನ ಬಗೆಗೆ ಅಧಿಕಾರವಾಣಿಯಿಂದ ಆಡಬಲ್ಲ ಕೀರ್ತಿನಾಥ ಕುರ್ತಕೋಟಿ, ಡಾ. ಎಲ್. ಆರ್. ಹೆಗಡೆ ಪ್ರಭೃತಿ ಕೆಲವೇ ವಿದ್ವಾಂಸರೊಂದಿಗೆ ನಿಲ್ಲಬಲ್ಲವರು ಎನ್ಕೆಯವರೇ— ಗದುಗಿನ ವೀರನಾರಾಯಣನ ಇನ್ನೊಬ್ಬ ಲಿಪಿಕಾರ!

* * * *

ಆಕಾಶವಾಣಿಯಲ್ಲಿ ನಾಟ್ಯರೂಪಕಕಾರನೆಂದು ನನ್ನ ಪ್ರವೇಶಕ್ಕೆ ನನಗೆ ನೆನಪಿರುವ ಹಾಗೆ ಎನ್ಕೆಯವರೇ ಕಾರಣರು. ೧೯೭೭ರ ಸ್ವಾತಂತ್ರ್ಯೋದಯದ ನಂತರ ಮುಂಬಯಿ ಆಕಾಶವಾಣಿಯಿಂದ ಅಂದಿನ "ದೀಪಾವಳಿ"ಯ ಸಂದರ್ಭಕ್ಕೆ ಒಂದು ಬಾನುಲಿರೂಪಕ ರಚಿಸಿ ಕಳುಹಿಸಲು ನನಗೆ ಕರೆ ಬಂದಿತು. ಆಗ ಎನ್ಕೆ ಅಲ್ಲಿಯೇ ಆಕಾಶವಾಣಿಯಲ್ಲಿ ಸಂಬಂಧಪಟ್ಟ ಅಧಿಕಾರಿಗಳು. ಅದು ನನ್ನ ಪ್ರಥಮ ಬಾನುಲಿ

ರೂಪಕ. ಅವರಲ್ಲಿ ಭಾಗವಹಿಸಲಿಕ್ಕೆ ಸನ್ಮಿತ್ರ ಪಿ. ಆರ್. ಭಾಗವತ ಮತ್ತು ಕೆ. ಜಿ. ಪಲಸಗಿ ಧಾರವಾಡದಿಂದ ಮುಂಬಯಿಗೆ ಹೋಗಿದ್ದರು. ಮರುವರ್ಷ "ಸಂಕ್ರಾಂತಿ"ಗಾಗಿ ಒಂದು ಬಾನುಲಿ ರೂಪಕವನ್ನು ಮುಂಬಯಿ ಆಕಾಶವಾಣಿ ಸ್ವೀಕರಿಸಿ ಬಿತ್ತರಿಸಿತು.

ಎನ್ಕೆ ಧಾರವಾಡ ಆಕಾಶವಾಣಿಗೆ ಬಂದಂದಿನಿಂದ ನಮ್ಮ ಸ್ನೇಹ ಸಂಪರ್ಕ ಬಲಿಯುತ್ತ ಬೆಳೆಯುತ್ತ ಹೋಯಿತು. ಅವರ ಏಕಾಂಕಿಕೆಗಳಂತೆ ಬಾನುಲಿ ರೂಪಕಗಳಂತೆ ಅವರ ಕಾದಂಬರಿಗಳನ್ನು ನಾನು ಓದಿ ಮೆಚ್ಚಿಕೊಂಡವನು. ಅವರ "ಎರಡನೇ ಸಂಬಂಧ"ವನ್ನು ಅವರು ನಾಟಕಕ್ಕೂ ಪರಿವರ್ತಿಸಿದರು. "ಪೈಸಿ" ಕಾದಂಬರಿ ಬರೆಯುವಾಗ ಅದರ ಆರಂಭದ ಒಂದೆರಡು ಪ್ರಕರಣಗಳನ್ನು ಅವರು ನನಗೂ ಭಾಗವತರಿಗೂ ಓದಿ ಹೇಳಿದ್ದು — ಆಗಿನ ಅವರ ದನಿ ಅದರ ಆರ್ಜವ ಮಾರ್ದವ ಭಾವನಾಮಯ ತೀವ್ರತೆ ಇನ್ನೂ ನನ್ನ ಒಳಗಿವಿಯ ಸಿಧಿಯಾಗಿದೆ. ಆ ಓದಿದಷ್ಟು ಭಾಗದಲ್ಲಿಯ ಎರಡು ದೃಶ್ಯಗಳು ಆ ಮೇಲೂ ಬಹಳ ವರ್ಷಗಳ ವರೆಗೂ ನನ್ನ ಚಿತ್ತಭಿತ್ತಿಯಲ್ಲಿ ಅಚ್ಚೊತ್ತಿದ್ದವು. ಒಂದು ಮದುವೆಯ ದಿಬ್ಬಣ ಮೆರವಣಿಗೆಯಲ್ಲಿ ಕಥಾನಾಯಿಕೆ ಬಾಲಿಕೆ ಆಳಿನ ಹೆಗಲೇರಿ ಕೂತಲ್ಲಿಯೇ ನಿದ್ದೆ ಹೋದದ್ದು— ಗ್ಯಾಸ್ ದೀಪಗಳ ಬೆಳಕಿನಲ್ಲಿ. ಇನ್ನೊಂದು, ಮದುವೆಯ ಸಂಭ್ರಮದಲ್ಲಿ ಒಂದು ಕೋಣೆಯಲ್ಲಿ ಬಣ್ಣಬಣ್ಣದ ಜರತಾರಿ ಪಟ್ಟೇ ಸೀರೆಗಳ ರಾಶಿಯ ಮೇಲೆ ಆ ಬಾಲಕ ಕೂತು ಅವುಗಳ ಲಾವಂಚ-ಕರ್ಪೂರಗಳ ಪರಿಮಳದಲ್ಲಿ ಮಗ್ನನಾಗಿದ್ದುದು.

ಹೀಗೆ ಸಾರವತ್ತಾದ ವಿವರಗಳ ಚಿತ್ರಣ ರಸವತ್ತಾದ ಪ್ರಸಂಗಗಳ ಗುಂಫನ ಪಾತ್ರಪರಿಪೋಷದ ಯಥಾರ್ಥ ಕಲೆಗಾರಿಕೆ ಎನ್ಕೆಯವರ ಶೈಲಿಯ ಹಸ್ತಸಿದ್ಧಿ. "ರಸದ ಹೊರಲೇಪದಲಿ ಹುದುಗಿದ ವಿಸುನಿಯಂತೆ" ಅವರ ವಾಗ್ಧೋರಣೆಯ ಹೊರ ಒಳಮಗ್ಗಲು. ಹಾಸ್ಯಮಯ, ಕೆಲ ಸಲ ವಿಡಂಬನಾಮಯ ಒಕ್ಕಣೆಯೂ ಒಂದೇ ತಿರುವಿಗೆ ಮರುಕದಲ್ಲಿ ತೊಯ್ದು ಕರುಣೆಗೆ ಕರಗಿ ನಮ್ಮ ನಗುವ ತುಟಿಗೆ ಕಂಬನಿ ತೊಟಕುವಂತೆ ಮಾಡುವದುಂಟು. ಶ್ರೀರಂಗರ ತುಸು ರುಕ್ಷ ಪ್ರಖರ ವಿನೋದ ಅವರದಲ್ಲ. ಆದರೆ ಶಿಷ್ಯ ಎನ್ಕೆ ಹಾಗಲ್ಲ. ಕೆಲ ಸಲ "ಯೇನಕೇನ (ಎನ್ಕೇನ?) ಪ್ರಕಾರೇಣ" ಹಾಸ್ಯ ಉಂಟು ಮಾಡಲು ಮಾತಿನ ಜಾಣ್ಮೆ ಅವರು ತೋರಿಸುತ್ತಿದ್ದರೂ ಅದರ "ಹೊರಲೇಪ"ದಲ್ಲಿ ಹೃದಯವಂತಿಕೆ ಅಲ್ಲಲ್ಲಿ ಸೂಸಾಡದೆ ಹೋಗುವದಿಲ್ಲ.

ಅವರ ಈ ಶೈಲಿಯ ಪ್ರಭುತ್ವ ಪ್ರಕರ್ಷದಿಂದ ಪ್ರಕಟವಾಗುವದು ಅವರ ಹರಟೆಗಳಲ್ಲಿ. ಹಾಗೆಯೇ ಸತತ ಪ್ರವಾಸ ವರ್ಣನೆಗಳಲ್ಲಿ. ಅವರ ಹಾಸ್ಯ ವಿನೋದಕ್ಕೆ ಹೆಚ್ಚಾಗಿ ಬೌದ್ಧಿಕ ಮಿಂಚು ಹರಿತ ಮೊನಚು ಇದ್ದೇ ಇರುತ್ತದೆ. ಅದು ದೂಷಕವೂ ಅಲ್ಲ ವಿದೂಷಕವೂ ಅಲ್ಲ. ಯುದ್ಧ ಕಾಲದ ರೇಶನ್ ಪದ್ಧತಿಯಿಂದ "ಪೇಚೀಕೃತ"ರಾದ ಎನ್ಕೆ ಮುಂಬಯಿಯಲ್ಲಿ ಗೆಳೆಯ ಸ್ವಾಮಿರಾಯರಿಗೆ ಅಂದರು, 'Man is a Rational

Animal' ಎಂಬುದು ನಿಜವಾಗಿದೆ ನೋಡ್ರೀ !" ಹಾಗೆಯೇ ಒಂದು ಹರಟೆಯಲ್ಲಿ "ಕರ್ನಾಟಕ ರಾಜ್ಯಬಂದ ಮೇಲೆ ನಾಡ ಸಂಸ್ಕೃತಿಯ ಅಭಿಮಾನದಿಂದಾಗಿ ಶಾಲೆಗಳಲ್ಲಿ ಎಲ್ಲ 'ಗೊಮ್ಮಟನ ಅಂಗಿ'ಯೇ uniform ಆಗಬೇಕೆಂದು ವಿಧಿಸಿದರೆ"—ಎಂಬ ಮಾರ್ಮಿಕ ಮಾತು ಬಂದಿದೆ. ಅಂದು ನಮ್ಮ ಹಾಯ್‌ಸ್ಕೂಲಿನ ಒಬ್ಬ ಕನ್ನಡ ಪಂಡಿತರಿಗೆ ಈ "ಗೊಮ್ಮಟನ ಅಂಗಿ"ಯ ಮರ್ಮ ಗೊತ್ತಾಗದೇ ಅವರು ಗೋಮಟೇಶ್ವರ ವಿಗ್ರಹದ ಅದ್ದ-ಅಗಲಗಳ ಅಂಕಿ ಸಂಖ್ಯೆಯ ಬಗೆಗೆ ಪ್ರಶ್ನೆ ಕೇಳಿ ಬಡ ವಿದ್ಯಾರ್ಥಿಗಳಿಗೆ ಗೋಳು ಹೊಯ್ದುದ್ದು ನಾನು ಕಂಡದ್ದುಂಟು !

ನನಗೂ ಒಮ್ಮೆ ಈ ಪೇಚು ಪೆಚ್ಚುಗೊಳಿಸಿತು. ನಾನು ಒಮ್ಮೆ ಅವರ ಒಂದು ಹರಟೆ—ಜೋಗದ ಪ್ರವಾಸದ ಬಗೆಗೆ—ವರ್ಗದಲ್ಲಿ ಕಲಿಸುತ್ತಿದ್ದೆ. ಅವರ ಸ್ವಾರಸ್ಯದ ಸವಿಯನ್ನು ಮಕ್ಕಳೊಂದಿಗೆ ಹಂಚಿಕೊಳ್ಳುತ್ತ ಆಗ ಒಮ್ಮೆಲೆ ನಮ್ಮ ರಸಾಸ್ವಾದದಲ್ಲಿ ಗಂಟಲಿಗೆ ಹರಳು ಸಿಕ್ಕಿಕೊಂಡಿತು, "ಓಮಕೆ ಭೇಷಜಂ" ಎಂಬ "allusion" ಕಣ್ಣು ತಿವಿಯಿತು. "ಆ" ಚಳಿಗೆ ಮದ್ದನ್ನು ನಮ್ಮ ಆರನೆಯ ವರ್ಗದ (ಇಂದು ೯ನೆಯದು) ವಿದ್ಯಾರ್ಥಿ ವಿದ್ಯಾರ್ಥಿನಿಗಳಿಗೆ ಹೇಗೆ ವಿವರಿಸುವುದು ? ಬಹುಶ್ರುತತ್ವಕ್ಕೆ ಸ್ವಾಭಾವಿಕವಾದ ಹಾಸ್ಯ ಪ್ರಜ್ಞೆ ಸೇರಿಕೊಂಡಾಗ ಅಂಥ ಕವಿ ಪ್ರತಿಭೆಯ ಲಲಿತ ನಿಬಂಧದಲ್ಲಿ ಹೀಗೆ ಒಮ್ಮೊಮ್ಮೆ "ಆಕಸ್ಮಿಕ"ಗಳು ದಿಗಿಲುಗೊಳಿಸುತ್ತವೆ.

* * * *

ಎನ್ಕೆ ನಿಜವಾಗಿಯೂ ಕವಿಪ್ರತಿಭೆಯ ಸವ್ಯಸಾಚಿಯಾದ ಬರಹಗಾರರು. ಇದಕ್ಕೆ ಅವರು ಬಾನುಲಿಗಾಗಿಯೂ ಇತರತ್ರವೂ ಬರೆದ ಹಲವಾರು ಗೀತರೂಪಕಗಳೇ ನಿರ್ಣಾಯಕ ನಿದರ್ಶನ. ನಮ್ಮ ಗೆಳೆಯ ಪಾಂಡುರಂಗ ಭಾಗವತರಿಗೆ ಅವರು "ಸ್ವಯಂವರ" ಎಂಬ ಒಂದು ತುಂಬ ಹಾಸ್ಯರಸದ ಗೀತರೂಪಕವನ್ನು ಬರೆದುಕೊಟ್ಟಿದ್ದರು. ಒಬ್ಬ ಉಪವರ ಚೆಲುವೆಯನ್ನು ಒಬ್ಬ ತತ್ವಜ್ಞಾನಿ, ಪ್ರೇಮವೀರ, ನಟ, ಕವಿ ಹಾಗೂ ಬ್ರಹ್ಮಚಾರಿ ವ್ಯಾಯಾಮ ಪಟು ಪ್ರೇಮಾರಾಧನೆಯನ್ನು ಅರ್ಪಿಸುತ್ತಾರೆ–ಒಬ್ಬೊಬ್ಬರಾಗಿ ಇವೆಲ್ಲ ಪಾತ್ರಗಳನ್ನು ಭಾಗವತರೇ ಅಸಾಮಾನ್ಯ ಗಾಯನಾಭಿನಯ ನೈಪುಣ್ಯದಿಂದ ನಡೆಸುತ್ತಿದ್ದರು. ಅವರು ಅಕ್ಕನ ಮಗಳೂ ಅಪ್ರತಿಮ ಗಾಯಿಕೆಯೂ ಆದ ಕು. ಕುಮುದ ಹರ್ಚೀರಕರಳು ನಾಯಿಕೆಯ ಭೂಮಿಕೆ ವಹಿಸುತ್ತಿದ್ದಳು. ಅವರಿಗಾಗಿಯೇ ಎನ್ಕೆ ಬರೆದು ಕೊಟ್ಟ ಈ ಗೀತರೂಪಕ ರಂಗದಲ್ಲಿ ಅನೇಕ ಕಡೆಗೆ ಅದ್ಭುತ ಯಶಸ್ಸು ಕಂಡಿತು. ಅದರ ಪ್ರಥಮ ಪ್ರಯೋಗ ಕುಮಟೆಯಲ್ಲಿ ಜರುಗಿದ ಕರ್ನಾಟಕ ಸಾಹಿತ್ಯ ಸಮ್ಮೇಲನದಲ್ಲಿ (ಅಧ್ಯಕ್ಷರು ಡಾ. ವಿ. ಸೀತಾರಾಮಯ್ಯನವರು) ತುಂಬ ಪರಿಣಾಮಕಾರಿಯಾಗಿ ನಡೆಯಿತು.

ಶೀಘ್ರ ಕವಿತ್ವ ಆಶು ರೂಪಕ ರಚನೆ ಯಥೇಚ್ಛ ಸಾಹಿತ್ಯ ರಚನೆ ಎನ್ಕೆಯವರ ಹಸ್ತಸಿದ್ಧಿ. ದೀರ್ಘಾವಧಿ ಆಕಾಶವಾಣಿಯ ವಿವಿಧ ಅವಕಾಶಗಳಿಗೆ ಸಮಯೋಚಿತವಾಗಿ

ಬಹುರೂಪಿ ವಾಙ್ಮಯವನ್ನು ಧಿಡೀರನೆ ಬರೆದುಕೊಡುವ ಒಂದು ಒತ್ತಡದ ತರಬೇತಿಗೆ ಅವರ ಲೇಖನ ಶೈಲಿ ಉತ್ತಮವಾಗಿ ಪಳಗಿದೆ. ಹೀಗೆಂದು ಅದರಲ್ಲಿ ವ್ಯರ್ಥಶಬ್ದ ಸಂಭಾರ "ವೃಥಾ ಪಲ್ಲವ" ಯಾಂತ್ರಿಕ ರಚನೆಯ ಹಳಸು, ಸಮಕಲು ಏನೂ ಇಲ್ಲ. ವಿಚಾರ ಕಲ್ಪನೆ, ಶಬ್ದ ಸೌಷ್ಠವಗಳ ಏನಾದರೊಂದು ಸಾಮೀಪ್ಯ ಎಂದೂ ತಪ್ಪದ ಲಾವಣ್ಯ ವ್ಯಕ್ತತೆಯ ಪ್ರಾವೀಣ್ಯ ಅವರ ಎಂಥ ಮಾಮೂಲಿನ ಬರಹದಲ್ಲಿಯೂ ಒಡೆದೆದ್ದು ಕಾಣುತ್ತದೆ. Hypnotism ಎಲ್ಲರಿಗೂ ಗೊತ್ತು. ಆದರೆ Hippy naughtism ? ಎನ್ಕೇ ಏಕೆ ! 'ಹೃದಯದ ಕಸಿ' ವೈದ್ಯಕೀಯ ವಿಜ್ಞಾನದ ಸಂಜೀವಿನೀ ಶಸ್ತ್ರಕ್ರಿಯೆ ಹೊಸತಾಗಿ ರೂಢವಾದದ್ದೇ ತಡ, ಎನ್ಕೆ ಅದನ್ನು ಕರುಣ-ಗಂಭೀರ ಪ್ರಣಯದ ಪಾತಳಿಯಲ್ಲಿ ಹೃದಯಗಳ ಬೆಸುಗೆಗೆ ಅನ್ವಯಿಸಿ ಜನಪ್ರಿಯ ರೇಡಿಯೋ ರೂಪಕ ಬರೆದರು. ಶ್ರೀಮತಿ ಸುಶೀಲಾ ಟೇಂಬೆ, ವಿಜಯಾ ದೇಸಾಯಿ ಪ್ರಭೃತಿ ಗಾಯಿಕೆಯರ ಕಿನ್ನರ ಕಂಠದಿಂದ ಚಿನ್ನಗನ್ನಡದ ಭಾವಗೀತಗಳನ್ನು ರಚಿಸಿ ಹಾಡಿಸಿ ಧ್ವನಿಮುದ್ರಣಗಳನ್ನು ಪ್ರಚುರಗೊಳಿಸಿದರು.

"ಅವಸರ ಪಠಿತಾ ವಾಣೀ ಗುಣಗಣ ರಹಿತಾಽಪಿ ಭೂಷಣಂ ಭವತಿ". ಆದರೆ ಇವರ ಅವಸರಕ್ಕೆ ಒಲಿದು ಬಲಿಯುವ ವಾಣಿ ಯಾವಾಗಲೂ ಗುಣಗಣ ಸಹಿತೆ ಅಂದಾಗ ಭೂಷಣವಾಗದುಂಟೇ ? "ಹೊತ್ತಿಗಾಡಿದ ಮಾತು ಸತ್ತವನು ಎದ್ದಂತೆ" ಎಂಬ ಸರ್ವಜ್ಞೋಕ್ತಿ ಎನ್ಕೆಯವರಿಗಾಗಿಯೇ ಆಡಿದಂತೆ ಅನಿಸುತ್ತದೆ.

ಈಗ ೨ ವರ್ಷಗಳ ಹಿಂದೆ ನಾನು ಕವಿವರ್ಯ ಬೇಂದ್ರೆಯವರ ಕಾವ್ಯ ಪರಿಚಯಾತ್ಮಕವಾಗಿ ಒಂದು ಪುಸ್ತಕ ಬರೆದೆ—"ಕಂಬಿನ ಕರೆ". ಅದಕ್ಕೆ ಯಾರಿಂದ ಮುನ್ನುಡಿ ? ಕವಿವರ್ಯರನ್ನೇ ಕೇಳಿದೆ. ಡಾ. ವಿ. ಕೃ. ಗೋಕಾಕರಿಂದ ಬರೆಯಿಸಲೇ ? ಬೇಂದ್ರೆಯವರು ಅವರಿಗೆ ಕಾವ್ಯ ಗುರುಗಳು. ಅಲ್ಲದೆ ಗುರುಗಳ ಕುರಿತು ಇಂಗ್ಲೀಷಿನಲ್ಲಿ ಪ್ರಸಿದ್ಧ ಗ್ರಂಥ ಬರೆದವರು. ಆದರೆ ಬೇಂದ್ರೆಯವರೇ ಅಂದರು. "ನಮ್ಮ ಎನ್ಕೆ ಇದ್ದಾರಲ್ಲ, ಹೇಳಿದ ಕೂಡ್ಲೇ ಬರದೇ ಕೊಡ್ತಾರ. ರೇಡಿಯೋದಲ್ಲಿ ಬರೆದು ರೂಢಿ ಅವರಿಗೆ!" ಈ ಮಾತು ಲಘುವಾಗಿ ಕಂಡರೂ ಎನ್ಕೆಯವರು ತಮ್ಮ ಕಾವ್ಯಕ್ಕೆ ಅದರ ಮೌಲ್ಯ ಮಾಪನಕ್ಕೆ ನ್ಯಾಯವನ್ನೇ ಮಾಡಬಲ್ಲವರೆಂಬ ಗೌರವವೂ ಈ 'ಕಾವ್ಯ ಗುರು' ಈ ಮಾತಿನಲ್ಲಿ ಧ್ವನಿಸಿದರು. ಮತ್ತೂ ಎನ್ಕೆಯವರ ಶೈಲಿಯ ಲಯ-ಲಾಲಿತ್ಯಕ್ಕೆ ಸುಭಗ ಪ್ರಗಲ್ಭತೆಗೆ ಅವರು ಬರೆದು ಕೊಟ್ಟ ಆ ಮುನ್ನುಡಿಯೇ ಉತ್ತಮ ಸಾಕ್ಷಿ. (ನನ್ನ ಆ ಬೇಂದ್ರೆ ಕಾವ್ಯ ಪರಿಚಯಕ ಕೃತಿಗೆ ಪ್ರಿಯ ಡಾ. ಗೋಕಾಕರು ಹಿನ್ನುಡಿಯನ್ನು ದಯಪಾಲಿಸಿದ್ದಾರೆ.)

ಯಾವುದೇ ಪುಸ್ತಕವನ್ನು ಕೂತ ಪಟ್ಟಿಗೇ ಸಾದ್ಯಂತ ಓದಿ ಮುಗಿಸಿ ಅದರ ಸಾರ ಹೀರಿಕೊಂಡು ಮರ್ಮ ಸ್ಥಾನಗಳನ್ನು ಬೆರಳಿಟ್ಟು ಗುರುತಿಸಿ ಅದರ ನೆಲೆ-ಬೆಲೆಗಳನ್ನೂ ಖಚಿತವಾಗಿ ಅಷ್ಟೇ ಸೌಜನ್ಯಪೂರ್ಣವಾಗಿ ಸ್ವಲ್ಪದರಲ್ಲಿ ವಿವೇಚಿಸುವ ಸಾಮರ್ಥ್ಯ ಅದಕ್ಕೆ ಅತ್ಯಗತ್ಯವಾದ ಅಸ್ಖಲಿತ ಧೀಮಂತ ಶ್ರೀಮಂತಿಕೆ ಎನ್ಕೆಯವರಲ್ಲಿ ಸದಾ

ಊರ್ಜಿತವಾಗಿರುತ್ತದೆ. ನಾನು ಅವರಿಗೆ ಕಾಣಿಕೆಯಾಗಿ ಕಳುಹಿಸಿದ ಯಾವುದೇ ಪುಸ್ತಕವ ಇಂಥ ಸಮಗ್ರ ಸಮೀಕ್ಷೆ ಅವರು ತಪ್ಪದೇ ತಡಮಾಡದೇ ಬರೆದು ತಿಳಿಸಿದಾಗೆಲ್ಲ ಅವರ ಈ ಶಕ್ತಿಗೆ ನಾನು ಬೆರಗಾಗಿದ್ದೇನೆ. "ತತ್ ಚ ಸಂಸ್ಮೃತ್ಯ ಸಂಸ್ಮೃತ್ಯ ಹರ್ಷಾಮಿ ಚ ಪುನಃ ಪುನಃ"

*　　　*　　　*　　　*

Style is the Man. ಶೈಲಿ ಬಿಂಬಿಸುವದು ಶೀಲವನ್ನು. ಎನ್ಕೆಯುವರ ವ್ಯಕ್ತಿತ್ವದ ಬಗೆಗೆ ಅವರ ಬರಹಗಳಿಂದ ಕಟ್ಟಿಕೊಂಡ ಕಲ್ಪನೆ ಪ್ರತ್ಯಕ್ಷ ಭೆಟ್ಟಿ ಸಂಭಾಷಣ ಒಡನಾಟಗಳಿಂದ ಇನ್ನಷ್ಟು ದೃಢವಾಗುತ್ತದೆ. ಅವರ ಶೈಲಿಯಂತೆಯೇ ಅದರಷ್ಟೇ ಎನ್ಕೆ ಪ್ರಸನ್ನಚರ್ಯೆಯವರು. ಪ್ರಾಂಜಲ ಚರಿತ್ರದವರು. ಎರಡು ಹೆಂಡಂದಿರನ್ನು ಕಳೆದುಕೊಂಡ ದುರ್ದೈವಿ ವಿಧುರ. ಕೌಟುಂಬಿಕ ಸ್ವಾಸ್ಥ್ಯದ ಭದ್ರತೆಗೆ ಏಟು ಬಿದ್ದು ಕೇವಲ ತನ್ನ ಈ ಸಂಕಲ್ಪ ಸತ್ವ ಧೀರತೆಯಿಂದಲೇ "ಬೇವಿನ ಕಹಿ ಬಾಳಿನಲ್ಲಿ ಹೂವಿನ ನರುಗಂಪು ಸೂಸಿ ಜೀವಕಳೆಯು ತಂದುಕೊಂಡ ಸನತ್ಕುಮಾರ" ವೃತ್ತಿ (Spirit)ಯ ಈ ಭಾವಜೀವಿ ಯಾವ ಕಟುತನವನ್ನೂ ತಾಳದೆ ತೋರದೆ ಪಟುವಾಗಿಯೇ ಬದುಕಿದ ಆಶುತೋಷರು. ಅಂತರ್ಮುಖಿಯಾದರೂ ಏಕಾಂತ ಜೀವಿಯಲ್ಲ. ಪ್ರತ್ಯೇಕತೆ ಪಳಗಿಸಿ ಕೊಂಡರೂ ಪರಕೀಯ ಪ್ರಜ್ಞೆಯಿಂದ ಪೀಡಿತರಲ್ಲ. ಬಿಲ್ಲಾಗಿ ಮಣಿಯಬಲ್ಲರು. ಬಾಣ ವಾಗಿ ಸೆಟೆದು ಗುರಿ ಸಾಧಿಸಬಲ್ಲರು. 'ವೃದ್ಧತ್ವಂ ಜರಸಾವಿನಾ'– ಎಂಬ ಕಾಲಿದಾಸನ ಉಕ್ತಿಗೆ ಅಪ್ಪಟ ಮಾದರಿ. ಅವರಲ್ಲಿ ಸಿಟ್ಟು-ಸಿಡುಕು ನಾನು ಸಹಸಾ ಕಂಡಿಲ್ಲ. ಮನಸ್ಸು ನೊಂದಾಗಲೂ ಅವರ ನಯ-ವಿನಯ ಕೈಕೊಟ್ಟಿಲ್ಲ. ತುಟಿಯನ್ನು ನಗೆಯ ಮೊಗ್ಗೆ, ಅವರ ಹಿಂದೆ ಮಾತಿನಲ್ಲಿ ಪರಿಹಾಸದ ಬುಗ್ಗೆ. ಇಂದಿನ ನವ್ಯ–ನವ್ಯೋತ್ತರ ಬಂಡಾಯ ಇತ್ಯಾದಿ ಸಾಹಿತ್ಯ ಸಾಗರದ ಬರಹದ ಪ್ರವಾಹದಿಂದ ಅವರು ತುಸು ದೂರ ನಿಂತವರು. ಈ ಹೊಸ ಹಳ್ಳ ಅವರು ನಿಂತ ದಂಡೆಯಿಂದ ಆಚೆಗೆ ಸರಿದು ಹರಿದಿರುವದು. ಆದರೂ ಇವರ ಅನಿವಾರ್ಯ ಉಪೇಕ್ಷೆ ಅನುಲ್ಲೇಖಗಳಿಂದ ಎನ್ಕೆ ಉದ್ವಿಗ್ನರಾಗಲಿಲ್ಲ. "They also serve who only stand and wait" ಎಂಬುದನ್ನು ಅವರು ಅನುಭವ ದಿಂದ ಚೆನ್ನಾಗಿ ಅರಿತವರು. ಅಲ್ಲದೆ ಅವರು ಬರೆ Stand and Wait ಮಾಡು ತ್ತಿಲ್ಲ. ಅವರ ಸಾಹಿತ್ಯ ಸೇವೆ ವಾಙ್ಮಯ ತಪಸ್ಸು ನಿರಾತಂಕವಾಗಿ ನಡೆದೇ ಇದೆ. ಅದು ಎಂದಿಗೂ ವ್ಯರ್ಥವಾಗುವದಿಲ್ಲ. ಬೇಂದ್ರೆಯವರ Boswell ಆಗಿ ಅವರು ಆ ಮಹಾ ಚೇತನದಿಂದ ಉದ್ದೀಪಗೊಂಡರು. ನಾರಾಯಣ-ದತ್ತ"ನಾದ ಸಂವಾದ"ದಲ್ಲಿ ಸಮನ್ವಯ ಗೊಂಡರು! ಆ ಜ್ಯೋತಿರ್ಲಿಂಗದ ಹತ್ತಿರ ಇದೊಂದು "ಭದ್ರ ದೀಪ". ಮಿಣಿಮಿಣಿ "ನಂದಾದೀಪ"ವಲ್ಲ !

ಹಲವು ದಶಕಗಳ ಹಿಂದೆಯೇ ಅವರು "ಮಿಂಚಿನ ಬಳ್ಳಿ"ಗಾಗಿ ಬರೆದು ಪ್ರಕಟಿತ ವಾದ "ಕನ್ನಡ ಸಾಹಿತ್ಯ ವಾಹಿನಿ" ಅವರ ಪಾಂಡಿತ್ಯಕ್ಕೆ ಸತ್ವಯುತ ಸಾರಗ್ರಾಹಿಯಾದ ತಲಸ್ಪರ್ಶಿ ಗದ್ಯ ಶೈಲಿಗೆ ಒಂದು ಧನ್ಯ ಉದಾಹರಣೆಯಾಗಿ ಇಂದಿಗೂ ಉತ್ಕೃಷ್ಟ

ಕೈಪಿಡಿಯಾಗಿ ನಿಂತಿದೆ. (ಆದರೆ ಅದರ ಪುನರ್ಮುದ್ರಣ ಎಲ್ಲಿದೆ ?) ಹೀಗೆ ಸಾಹಿತ್ಯ ಚರಿತ್ರೆ, ಹಳಗನ್ನಡ ಕಾವ್ಯ ವಿಮರ್ಶೆ, ಹೊಸ ಕಾವ್ಯ ನಿರ್ಮಿತಿ, ನವನಾಟ್ಯ ಸೃಷ್ಟಿ, ಅಮೋಘ ವಾಗ್ಮಿತೆ, ಆಕರ್ಷಕ ವ್ಯಕ್ತಿತ್ವ, ವಿನಯ-ವಿನೋದ-ವಿವೇಕಗಳ ಅಪರೂಪದ ಸಮನ್ವಯ, ಪ್ರತ್ಯುತ್ಪನ್ನಮತಿ (Readywit) ಪ್ರಬುದ್ಧ ಪ್ರಗಲ್ಭ ಸವ್ಯಸಾಚಿತ್ವದ ಭಾಷಾ ಪ್ರೌಢಿಮೆ ಎಲ್ಲವನ್ನೂ ಮೀರಿ "ಅತ್ಯತಿಷ್ಠತ್ ದಶಾಂಗುಲಂ" ಎಂಬಂಥ ಸಹೃದಯ ಸೌಹಾರ್ದದ ಸರಸ ಸಜ್ಜನಿಕೆ–ಇವನ್ನೆಲ್ಲ "ನಿಸರ್ಗ ಭಿನ್ನಾಸ್ಪದಮೇಕ ಸಂಸ್ಥಂ' ನೋಡಬೇಕೆ ? ನನ್ನ ದೂರಸ್ಥನಾಗಿಯೂ ಹೃದಯಸ್ಥರಾದ ಪ್ರಿಯ ಮಿತ್ರ ಎನ್ಕೆಯವರನ್ನು ನೋಡಿರಿ !

*　　　*　　　*　　　*

ಕುಮಾರವ್ಯಾಸ ಭಾರತದ ವಸ್ತು, ವಾಗ್ವಿಶೇಷ, ಶಬ್ದಕೋಶ, ರಸವಿಮರ್ಶೆ ಮುಂತಾದ ಅಂತರ್‌ಬಾಹ್ಯ ಸೌಂದರ್ಯದ ವಿವರಗಳ ವಿಷಯವಾಗಿ ಗಾಢವಾಗಿ ವಿಶಾಲವಾಗಿ ಅಭ್ಯಾಸಪೂರ್ಣವಾಗಿ ಪುಸ್ತಕಗಳನ್ನು ಸಲೀಲವಾಗಿ ಬರೆದು ಪ್ರಕಟಿಸಿ ದಷ್ಟೇ ಸ್ವಾರಸ್ಯಪೂರ್ಣವಾಗಿ ಎನ್ಕೆಯವರು ಸಂಗೀತ ಪ್ರಪಂಚದ ಸೀಮಾವ್ಯಕ್ತಿಗಳಾದ ಅಬ್ದುಲ ಕರೀಮಖಾನ್, ಸವಾಯಿ ಗಂಧರ್ವ ಹಾಗೂ ಗುಳೇದಗುಡ್ಡ ಮತ್ತು ಹಾನ ಗಲ್ ಗಂಗೂಬಾಯಿ ಇಬ್ಬರ ಚರಿತ್ರಗಳನ್ನು ಕಿರುಹೊತ್ತಿಗೆಗಳಲ್ಲಿ ಮಾರ್ಮಿಕವಾಗಿ ನಿರೂಪಿಸಿದ್ದಾರೆ. ಅಷ್ಟೇ ಪ್ರಭುತ್ವದಿಂದ ಗರೂಡ ಸದಾಶಿವರಾಯರ ಪ್ರೌಢಿಮೆಯ ಪರಿಚಯ ಮಾಡಿಕೊಟ್ಟಿದ್ದಾರೆ. ತೀರ ಈಚೆಗೆ ವರಕವಿ ಬೇಂದ್ರೆಯವರ ಕುರಿತು ಅವರು ಬರೆದ ಸಂಕ್ಷಿಪ್ತ ಚರಿತ್ರೆ ಇಂಥ ಕೃತಿ ಸರಣಿಗೆ ಮೇರು ಮಣಿಯಂತಿದೆ. ಡಾ. ಗೋಕಾಕರ ವ್ಯಕ್ತಿತ್ವ ವಾಙ್ಮಯಗಳ ಪರಿಚಯವನ್ನು ಮಾಡಿಕೊಡುವ ಗ್ರಂಥವೊಂದು ಅವರ ಪ್ರತಿಭೆಯ ಕುಲುಮೆಯಲ್ಲಿ ರೂಪಗೊಳ್ಳುತ್ತಿದೆ.

"ನಾಸ್ತಿಕಶ್ಚಿತ್ ಅವಿಷಯೋನಾಮ ಧೀಮತಾಂ"–ಕಣ್ವ ಮಹರ್ಷಿಯ ಶಿಷ್ಯರು ತಮ್ಮ ಗುರುವಿಗೆ ಪ್ರಶಂಸೆಯಲ್ಲಿ ಆಡಿದ ಮಾತು ನನ್ನ ಮಿತ್ರ ಎನ್ಕೆಯವರ ಕುರಿತೂ ಹೇಳಬಹುದು. ಯಾವ ವಿಷಯವೇ ಇರಲಿ ಶೀಘ್ರವಾಗಿ ಸಮಗ್ರವಾಗಿ ಗ್ರಹಿಸಿ ಹೃದಯ ಸ್ಪರ್ಶಿಯಾಗಿ ನಿರೂಪಿಸುವ ಕಲೆ ಅವರಿಗೆ ಕರತಲಾಮಲಕವಾಗಿದೆ. ಮೂಲದ ಕವಿ ಪ್ರವೃತ್ತಿಯ ಸೂಕ್ಷ್ಮ ಸಂವೇದನೆ, ಕುಶಾಗ್ರವಾದ ವ್ಯಾಸಂಗದ ಆಸಕ್ತಿ ಅದಕ್ಕೆ ಪುಟವಿಟ್ಟ ಅಧ್ಯಾಪಕ ತರಬೇತಿ, ಅಭಿವ್ಯಕ್ತಿಗೆ ಸ್ಫೂರ್ತಿ ಇತ್ತ ಆರಂಭದ ಪಾಠ ಪ್ರವಚನ, ನಾಟಕ–ಕಾದಂಬರಿಗಳಾಗಿ ಅರಳಿದ ಚಿತ್ರಮಯ ಲೇಖನಶಕ್ತಿ ಇವೆಲ್ಲವನ್ನೂ ವ್ಯಾಪಿಸಿ ವಿಜೃಂಭಿ ಸಿದ ಸೃಜನಶೀಲತೆ ಇವುಗಳ ಮನೋಜ್ಞ ಸಮನ್ವಯ ಎನ್ಕೆ ಪ್ರತಿಭಾವಿಲಾಸ. ಕಾರ ಯಿತ್ರೀ ಮತ್ತು ಭಾವಯಿತ್ರೀ ಇವೆರಡೂ ಅಂಗದಿಂದ ಇವರ ಪ್ರತಿಭೆ ಪರಿಪುಷ್ಟವಾಗಿ ಸುಶ್ಲಿಷ್ಟವಾಗಿ ಮಾಗಿದೆ. ಕನ್ನಡದ ಕುಲ ರಸಿಕರಿಗೆ ಅವರ ಆಸ್ವಾದ ಬಹುಕಾಲ ದೊರೆ ಯುವಂತಾಗಲಿ. ಇದೇ ನನ್ನ ಕಳಕಳಿಯ ಕೋರಿಕೆ.

# ಸವ್ಯಸಾಚಿ

## ಪ್ರಭಾ ಸಿರೂರ

ಸುಮಾರು ಹದಿನೈದು ವರ್ಷಗಳ ಹಿಂದಿನ ಮಾತು. ನಾನು ಆಕಾಶವಾಣಿ ಕೆಲಸಕ್ಕೆ ಸೇರಿ ಕೆಲ ವರ್ಷಗಳಾಗಿದ್ದವು. ಒಂದು ತಿಂಗಳ ರಜೆ ಮುಗಿಸಿ ಬಂದಿದ್ದೆ. "ಮಿಸ್ ಸಿರೂರ ನೀವು ಗೃಹಗೋಷ್ಠಿಯಲ್ಲಿ ಭಾಗವಹಿಸಬೇಕು" ಎಂದು, ಎನ್. ಕೆ. ಕುಲಕರ್ಣಿಯವರು ನನ್ನನ್ನು ಕರೆದು ಹೇಳಿದಾಗ ನನಗೆ ಬಹಳ ಆಶ್ಚರ್ಯವಾಗಿತ್ತು. ಯಾಕಂದರೆ ನನ್ನ ಮಾತೃಭಾಷೆ ಕೊಂಕಣಿ. ಅವರಿಗೋ ಅಚ್ಚ ಧಾರವಾಡ ಕನ್ನಡ ಮಾತನಾಡುವವರು ಬೇಕು, ಅವರ ಕಾರ್ಯಕ್ರಮಗಳಲ್ಲಿ ಭಾಗವಹಿಸಲು. "ನಿಮ್ಮದು ಕೊಂಕಣಿ ಮಿಶ್ರಿತ ಕನ್ನಡ" ಎಂದು ಅನ್ನುತ್ತಿದ್ದವರು ನನಗೆ ಹೀಗೆ ಕೇಳುತ್ತಿದ್ದಾರಲ್ಲ ಎಂದು ಅನಿಸಿದರೂ ಸಂತೋಷದಿಂದ ಒಪ್ಪಿಕೊಂಡೆ. ಆದರೆ ನನ್ನ ಕೊಂಕಣಿ ಮಿಶ್ರಿತ ಕನ್ನಡಕ್ಕೆ ಒಂದು ಹೊಸ ಉಪಾಯ ಹುಡುಕಿದ್ದು ನನಗೆ ನಂತರ ಗೊತ್ತಾಯಿತು. ನಾನು ಗೃಹಗೋಷ್ಠಿಯಲ್ಲಿ ವಹಿಸುವ 'ಪ್ರಧಾನ' ಪಾತ್ರ ಉಡುಪಿಯ ಮೆಡಿಕಲ್ ಕಾಲೇಜಿನಲ್ಲಿ ತಯಾರಾದ ವಸ್ತು. ಕನ್ನಡ ಭಾಷೆ ಕೊಂಕಣಿಯ ಹಾಗಿದೆ ಎಂದು ತಿಳಿಯಬಹುದಿತ್ತು. ಏನೇ ಆಗಲಿ ಆ ಕಾರ್ಯಕ್ರಮದಿಂದ ನನಗೆ ಬಹಳ ಲಾಭವಾಯಿತು. ನಾನು ಮಾತನಾಡುವ ಕನ್ನಡ ಭಾಷೆಯಲ್ಲಿ ಪೂರ್ಣವಲ್ಲದಿದ್ದರೂ ತಕ್ಕಮಟ್ಟಿಗೆ ಯಶಸ್ವಿ ಆದೆ. ಅಲ್ಲದೇ 'ನಾನಿಕಾಕಾ'ನ, ಪಾತ್ರವಹಿಸುತ್ತಿದ್ದ ಎಸ್ಕೆ ಅವರು ನನಗೆ ಇಂದಿನ ವರೆಗೂ 'ನಾನಿಕಾಕಾ' ಆಗಿದ್ದಾರೆ.

'ಗೃಹಗೋಷ್ಠಿ' ಕಾರ್ಯಕ್ರಮ ದಿನದಿನಕ್ಕೆ ಶ್ರೋತೃಗಳಲ್ಲಿ ಲೋಕಪ್ರಿಯವಾಗ ತೊಡಗಿತು. ಇದೇನು ರಾಗಭಾವಗಳನ್ನು ಬದಲಿಸುವ ನಾಟಕವಾಗಿರಲಿಲ್ಲ. ಇದೊಂದು ಕೌಟುಂಬಿಕ ಚರ್ಚೆ. ಒಮ್ಮೆ ನೋಡಿಕೊಂಡು ಓದಿಕೊಂಡು ಹೋಗುತ್ತಿದ್ದೆವು. ಆದರೆ ಇದು ಜನಪ್ರಿಯ ಆಗಲು ಕಾರಣ ನಾನಿಕಾಕಾ ಅವರ ಬರಹ. ಒಂದು ಕುಟುಂಬಕ್ಕೆ ಸರ್ವೇಸಾಮಾನ್ಯವಾಗಿ ಅನ್ವಯಿಸುವಂಥ ವಿಷಯಗಳನ್ನು ಅವರು ಆಯ್ದುಕೊಳ್ಳುವಲ್ಲಿ ಒಂದು ಜಾಣ್ಮೆ ಇರುತ್ತಿತ್ತು. ಮುಖ್ಯವಾಗಿ ಹಬ್ಬ ಹುಣ್ಣಿಮೆಗಳು, ಮಹತ್ವದ ಕವಿ ಗಳು, ದೇಶದ ನಾಯಕರು ಇಂಥವರ ಜಯಂತಿ, ಪುಣ್ಯತಿಥಿಗಳು, ಸ್ಥಳೀಯ ಮಹತ್ವದ ವಿಷಯ-ಸಂಗತಿಗಳನ್ನು ಒಂದು ಕೌಟುಂಬಿಕ ಸಂದರ್ಭದಲ್ಲಿ ಸಹಜವಾಗಿ ಹರಟೆ ಹೊಡೆ

ಯುತ್ತ ಹೆಣೆಯುವವರಲ್ಲಿ ಆ ಬರವಣಿಗೆಯ ಮೇಲ್ಮೆ ಇರುತ್ತಿತ್ತು. ಆಫೀಸಿನಲ್ಲಿ ಕೈತುಂಬ ಕೆಲಸ ಎನ್ಕೆ ಅವರಿಗೆ. ಆದರೂ ಬರೆಯುವದೆಂದರೆ ನಾನಿಕಾಕಾಗೆ ಬಹಳ ಹುರುಪು. ಗೃಹಗೋಷ್ಠಿ, ಉಭಯ ಕುಶಲೋಪರಿ, ವಿಚಾರ ದೀಪಿಕೆ, ಇವಂತೂ ಇದ್ದೇ ಇರುತ್ತಿದ್ದವು. ಇವರ ಜೊತೆಗೆ ಭಾಷಣ, ನಾಟಕಗಳು, ಪದ್ಯಗಳು—ಆಗಾಗ ಅವರ ಕಾರಖಾನೆಯಲ್ಲಿ ತಯಾರಾಗುತ್ತಿದ್ದವು. ಅವರ ಮಾತಿನಲ್ಲಿಯೇ ಹೇಳಬೇಕಾದರೆ "ದೋಸೆ ಹಿಟ್ಟು ತಯಾರದ, ಬೇಕೆಂದಾಗ ಹಿಟ್ಟು ಹಂಚಿನ ಮೇಲೆ ಹಾಕಿದ್ರಾತು. ದೋಸೆ ಬಿಸಿ ಇದ್ರ ಹೆಚ್ಚು ರುಚಿ." ಇದನ್ನು ಅವರು ಪಾಲಿಸುತ್ತಿದ್ದರು. ಯಾವದೇ ಸಂದರ್ಭದಲ್ಲಿ, ಯಾವದೇ ವಿಷಯ ಇದ್ದರೂ ಅವರ ಕಾರ್ಯಕ್ರಮ ಸಿದ್ಧ. ನೀಲ್ ಆರ್ಮ ಸ್ಟ್ರಂಗ್ ಚಂದ್ರಗ್ರಹವನ್ನು ಮುಟ್ಟಿದ ದಿನವೇ 'ತಿಂಗಳ ಲೋಕದ ಅಂಗಳಕೇರಿ' ಎಂಬ ಸುಂದರ ರೂಪಕ; ಹೃದಯ ಕಸಿ ಮಾಡುವ ವಿಷಯ ತಿಳಿದ ಕೆಲದಿನಗಳಲ್ಲಿಯೇ 'ಕಸಿ ಹೃದಯ ಕಣ್ತೆರೆದಿತ್ತು' ಎಂಬ ನಾಟಕ ಇದಕ್ಕೆ ಉದಾಹರಣೆ. ಅಲ್ಲದೇ ಈ ಕಾರ್ಯ ಕ್ರಮಗಳು ಬಹಳ ಜನಪ್ರಿಯ ಆಗಿದ್ದವು. ಒಂದು ಸಲ ಅವರದೇ ಕಾದಂಬರಿ 'ಸಾವಿನ ಉಡಿಯಲ್ಲಿ' ನಾಟಕ ಆಗಬೇಕಾಗಿತ್ತು. ಕೆಲಸದ ಒತ್ತಡದಿಂದಾಗಿ ಅವರಿಗೆ ಸಕಾಲಕ್ಕೆ ನಾಟಕ ಬರೆಯುವದು ಆಗಿರಲಿಲ್ಲ. ಪ್ರಸಾರವಾಗಲು ಎರಡೇ ದಿನಗಳು ಇದ್ದವು. ನಾವೇ ನಿಲಯದ ಕಲಾವಿದರೆಲ್ಲ ಕೂಡಿ ರಾತ್ರಿ ಹತ್ತು ಗಂಟೆಯ ನಂತರ ನಾಟಕ ಧ್ವನಿ ಮುದ್ರಣ ಇಟ್ಟುಕೊಂಡಿದ್ದೆವು. ಎನ್ಕೆ ಅವರು ಮುಖ್ಯ ಪಾತ್ರ ವಹಿಸುವುದಲ್ಲದೆ ಒಂದು ಸ್ಟುಡಿಯೋದಲ್ಲಿ ಕೂತು ಕೊನೆಯ ಕೆಲ ಪುಟಗಳನ್ನು ಬರೆದು ಕೊಡುತ್ತಿದ್ದರು. ಇನ್ನೊಂದು ಸ್ಟುಡಿಯೋದಿಂದ ನಾವು ರಿಹರ್ಸಲ್ ಮಾಡಿ, ರೆಕಾರ್ಡ ಮಾಡುತ್ತಿದ್ದೆವು. ಗಂಭೀರವಾದ ನಾಟಕ. ಎಲ್ಲರೂ ತಮ್ಮ ತಮ್ಮ ಪಾತ್ರಗಳಲ್ಲಿ ಮಗ್ನರಾಗಿ ನಾಟಕವನ್ನು ಮುಗಿಸಲು ಬೆಳಗಿನ ಮೂರೊ-ನಾಲ್ಕೊ ಗಂಟೆ ಆಗಿತ್ತು. ಆದರೆ ಆ ನಾಟಕ ಬಹಳ ಸುಂದರವಾಗಿ ಬಂದದ್ದರಿಂದ ಎಲ್ಲರ ಮುಖದ ಮೇಲೆ ನಿದ್ರೆಯ ಛಾಯೆಯ ಬದಲು ಸಂತೋಷದ ಕಳೆ ಆವರಿಸಿತ್ತು. ಇಂತಹ ಒಂದು ಸವ್ಯಸಾಚಿತ್ವ ಪಡೆದಿದ್ದ ಎನ್ಕೆ ರೇಡಿಯೋಕ್ಕಾಗಿಯೇ ಹೇಳಿ ಮಾಡಿಸಿದಂತಹ ವ್ಯಕ್ತಿಯಾಗಿದ್ದರು. ಆದರೆ ಅವರ ಪಾಂಡಿತ್ಯ ರೇಡಿಯೋಕ್ಕಾಗಿಯ ಸವೆಸಲ್ಪಟ್ಟು ಅವರಿಂದ ಸಲ್ಲಬೇಕಾದ ನಿಜವಾದ ಸಾಹಿತ್ಯಸೇವೆ ಅರ್ಧಮರ್ಧವಾಗಿ ಹೋಯಿತೇನೋ ಎಂದು ಅನಿಸುತ್ತದೆ. ಅವರಿಗೂ ಅದೊಂದು ಕೊರಗು ಇದ್ದೇ ಇದೆ. ನಿವೃತ್ತಿ ಆದ ಮೇಲೆ ಅವರು ಈ ಕೊರಗನ್ನು ದೂರಮಾಡಿಕೊಳ್ಳುತ್ತಿದ್ದಾರೆ. ಯಾವಾಗಲೂ ಓದು, ಬರೆಹಗಳಲ್ಲಿ ತೊಡಗಿರುತ್ತಾರೆ. ರೇಡಿಯೋಕ್ಕೆ ಬರೆಯುತ್ತಿರುತ್ತಾರೆ. ಬರೆಯಲು ಹೇಳಿದ್ದೇ ತಡ ಅವರ ಪೆನ್ನು ತನ್ನ ಕೆಲಸ ಪ್ರಾರಂಭಿಸುತ್ತದೆ.

ನನ್ನ ವೈಯಕ್ತಿಕ ಜೀವನದಲ್ಲಿ ಅವರ ಸಂಪರ್ಕ ಬಹಳ. ಅವರ ಒಬ್ಬಳೇ ಒಬ್ಬ ಮಗಳು ಬಾಲ್ಯದಲ್ಲಿಯೇ ಕಣ್ಮರೆಯಾದ ನೋವು ಅವರಿಗಿದೆ. "ನನ್ನ ಮಗಳ ಇದ್ರ

ನಿನ್ನಷ್ಟು ಇರ್ತಿದ್ಲು" ಎಂದು ಅವಳನ್ನು ನೆನೆಸುತ್ತಿರುತ್ತಾರೆ. ಆ ದುರ್ಭಾಗ್ಯ ಮಗಳಿಗೆ ಸಿಗದ ಅವರ ಪಿತೃವಾತ್ಸಲ್ಯ ನನಗೆ ಸಿಕ್ಕಿದೆ. ನಾನು ಅವರ ಮನೆಯಲ್ಲಿಯ ಒಬ್ಬ ಸದಸ್ಯಳಂತಿದ್ದೇನೆ. ಅವರ ಮಕ್ಕಳು, ಸೊಸೆಯಂದಿರೂ, ಮೊಮ್ಮಕ್ಕಳಿಗೆಲ್ಲ ನಾನು ಬಹಳ ಹತ್ತಿರದವಳು. ಯಾವುದೇ ಮಗನ ಮನೆಯಲ್ಲಿಯ ಯಾವದೇ ಸಣ್ಣಪುಟ್ಟ ಸಮಾರಂಭಕ್ಕೂ ನನ್ನ ಹಾಜರಿ ಇರಬೇಕು. ಅವರ ನಡುವಿನ ಸೊಸೆ ವಿಮಲಾನ ಮನೆಗೆ ನಾನು ಆಗಾಗ ಹೋಗುತ್ತಿರುತ್ತೇನೆ. ಅನುರಾಧಾ ಧಾರೇಶ್ವರ ಮತ್ತು ನಾನು ಕೂಡಿ ಹೋದೆವೆಂದರೆ ಸೊಂಪಾಗಿ ನಮ್ಮ ಹರಟೆ, ನಗೆ ನಡೆಯುತ್ತದೆ. ಜೊತೆಗೆ ವಿಮಲಾ ತಯಾರಿಸಿದ ತಿಂಡಿ ತೀರ್ಥ ಇರಲೇಬೇಕು.

ಹರಟೆಯ ಜೊತೆಗೆ ಎಷ್ಟೋ ವಿಷಯಗಳನ್ನು ಕಾಕಾ ಅವರಿಂದ ತಿಳಿದುಕೊಳ್ಳುತ್ತೇವೆ. ತಾವು ಓದುವಾಗ ಕಾಕಾ ಅವರು ನಮಗೆ ಉಪಯುಕ್ತ ವಿಷಯವೇನಾದರೂ ಇದ್ದರೆ ಅದನ್ನು ಗುರುತು ಮಾಡಿ ಇಟ್ಟು ನಮಗೆ ಓದಲು ಕೊಡುತ್ತಾರೆ, ತಿಳಿಸಿ ಹೇಳುತ್ತಾರೆ. ಶಿಕ್ಷಕವೃತ್ತಿ ಅವರಲ್ಲಿ ಬೇರೂರಿದೆ. ನಾನಿಕಾಕಾನಲ್ಲಿಯ ಅಚ್ಚುಕಟ್ಟುತನ ಎಷ್ಟೋ ಸಲ ನಮ್ಮನ್ನು ನಾಚಿಸುತ್ತದೆ. ಅವರು ಆಫೀಸಿನಲ್ಲಿದ್ದಾಗಲೂ ಅಷ್ಟೆ ಈಗಲೂ ಅಷ್ಟೆ. ತಮ್ಮ ಕೋಣೆಯಲ್ಲಿ ಪುಸ್ತಕಗಳನ್ನು ಫೈಲುಗಳನ್ನು ಹಚ್ಚಿಡುವದರಿಂದ ಹಿಡಿದು ಅವರ ಜೀವನ ಕ್ರಮದಲ್ಲಿಯೆ ಅಚ್ಚುಕಟ್ಟು, ನಿಯಮಿತತನ ಎದ್ದು ಕಾಣುತ್ತಿದೆ. ಅದಕ್ಕಾಗಿಯೇ ಏನೋ ತಮ್ಮ ಎಪ್ಪತ್ತನೆಯ ವಯಸ್ಸಿನಲ್ಲಿಯೂ ಅವರು ಆರೋಗ್ಯವನ್ನು ಕಾಪಾಡಿಕೊಂಡು ಬಂದಿದ್ದಾರೆ. ಇನ್ನೂ ಬಹಳ ವರ್ಷಗಳ ವರೆಗೆ ಅವರಿಗೆ ಒಳ್ಳೆಯ ಆಯುರಾರೋಗ್ಯ ಸಿಗಲಿ.



# ಶುದ್ಧ ಅಂತಃಕರಣ

---

**ಚದುರಂಗ**

ಸುಮಾರು ಒಂದೂವರೆ ದಶಕದ ಹಿಂದೆ ಬೆಂಗಳೂರು ಆಕಾಶವಾಣಿಗೆ ಯಾವುದೊ ಕಾರ್ಯಕ್ರಮಕ್ಕಾಗಿ ಹೋಗಿದ್ದೆ. ಆಗ ದಣಿವು, ಆಲಸ್ಯಗಳ ಪರಿವೆಯಿಲ್ಲದೆ ಪಾದರಸದಂತೆ ಸ್ಟುಡಿಯೋದಿಂದ ಸ್ಟುಡಿಯೋಗೆ ಓಡಾಡುತ್ತಿದ್ದ ವ್ಯಕ್ತಿಯೊಬ್ಬನನ್ನು ಕಂಡೆ. ಎತ್ತರದ ಆಳು. ತಲೆಗೂದಲನ್ನು ಹತೋಟಿಗೊಳಿಸುವುದರಲ್ಲಾಗಲಿ, ಪೋಷಾಕನ್ನು ಓರಣವಾಗಿ ತೊಡುವುದರಲ್ಲಾಗಲಿ, ಆ ವ್ಯಕ್ತಿಗೆ ಅಂಥ ಆಸಕ್ತಿ ಇದ್ದಂತೆ ಕಾಣಲಿಲ್ಲ. ಗಮನವೆಲ್ಲ ಅಂದಿನ ಕಾರ್ಯಕ್ರಮಗಳ ಬಗ್ಗೆ ಕೇಂದ್ರೀಕೃತವಾದಂತೆ ತೋರುತ್ತಿತ್ತು. ನೋಡಿದ ಕೂಡಲೇ ನಿಲಯದ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸುವ ಅಧಿಕಾರಿ ಇವರು, ಎಂದು ತಟ್ಟನೆ ಯಾರಾದರೂ ಹೇಳುವಂತಿತ್ತು. ಮಿತ್ರರೊಬ್ಬರನ್ನು ಕೇಳಿದೆ; "ಯಾರಿವರು?" "ಎನ್ಕೆ ಕುಲಕರ್ಣಿಯವರು. ನಿಮಗೆ ಪರಿಚಯವಿಲ್ಲವೆ? ಬನ್ನಿ, ಬನ್ನಿ, ಭೆಟ್ಟಿ ಮಾಡಿಸುತ್ತೇನೆ", ಎಂದು ಕರೆದೊಯ್ದು ಪರಿಚಯ ಮಾಡಿಸಿದರು. ವ್ಯಕ್ತಿಯ ಗಡಿಬಿಡಿಯೆಲ್ಲ ಮಾಯವಾಯಿತು. ಮುಖದಲ್ಲಿ ಮಾರ್ದವತೆ ತುಂಬಿತು. ನನ್ನನ್ನು ಎಷ್ಟೋ ಜನ್ಮಗಳ ಹಿಂದಿನಿಂದ ಬಲ್ಲವರಂತೆ ಆತ್ಮೀಯತೆಯಿಂದ ತಬ್ಬಿಕೊಂಡು, "ನಿಮ್ಮ ಪರಿಚಯವಾದದ್ದು ತುಂಬ ಸಂತೋಷ" ಎಂದರು. ಹಾಗೆ ಹೇಳುವಾಗ ಅವರ ಆಳವಾದ ಕಣ್ಣುಗಳಲ್ಲಿ ಪ್ರೀತಿ ತುಳುಕುತ್ತಿತ್ತು. ಮಾತುಗಳು ಅವರ ಅಂತಃಕರಣದೊಳಗಿಂದ ಅದ್ದಿ ಅದ್ದಿ ತೆಗೆದಂತಿದ್ದುವು. ಮುಂದೆ ನಮ್ಮ ಈ ಪರಿಚಯ ಗಾಢ ಮೈತ್ರಿಯಾಗಿ ಮಾಗಿದಾಗ, ಇದೊಂದು ಅಪರೂಪದ ಜೀವ, ಹಸುಗೂಸಿನಂಥ ನಿಷ್ಕಪಟ, ನಿಷ್ಕಲ್ಮಷ ಚೇತನ ಎಂಬುದು ಮನದಟ್ಟಾಯಿತು. ಇಂಥ ಸ್ನೇಹ ಲಭಿಸಿದ್ದಕ್ಕಾಗಿ ನಾನೆಷ್ಟು ಭಾಗ್ಯವಂತ ಎಂದು ಅಂತರಂಗದಲ್ಲೇ ನಾನು ಖುಷಿಪಟ್ಟಿದ್ದುಂಟು.

ಮುಂದಿನ ದಿನಗಳಲ್ಲಿ ನಾನು ಬೆಂಗಳೂರಿಗೆ ಹೋದಾಗ, ತಮ್ಮಲ್ಲೇ ಉಳಿಯಬೇಕೆಂದು ಆಗ್ರಹಪಡಿಸಿ ಉಳಿಸಿಕೊಳ್ಳುತ್ತಿದ್ದರು. ಸ್ವಸ್ತಿಕ್ ಟಾಕೀಸ್ ಹಿಂಬದಿಗಿದ್ದ ಮನೆಯ ಮಹಡಿಯ ಮೇಲೆ ಅವರ ವಾಸ. ಕೆಳಗಡೆ ಮನೆಯ ಮಾಲಿಕರು ಇರುತ್ತಿದ್ದರು. ಬಾಡಿಗೆಗಿದ್ದ ಈ ಜಾಗ ತೀರ ಚಿಕ್ಕದು. ಇಂಥ ಚಿಕ್ಕ ಮನೆಯಲ್ಲಿ ನಾಲ್ವರ ಸಂಸಾರ. ಎನ್ಕೆ, ಮಡದಿ, ಇಬ್ಬರು ಗಂಡು ಮಕ್ಕಳು. ಆದರೆ ಹೊರಗಿನ ಸ್ನೇಹಿತ

ರಿಲ್ಲವೆ ಊಟ ಮಾಡಿ ಎನ್ಕೆಯವರಿಗೆ ಅಭ್ಯಾಸವಿಲ್ಲ. ಇದೊಂದು ವಿಷಯದಲ್ಲಿ ಅವರು ಬಸವಣ್ಣನವರ ಜಾಯಮಾನದವರೆಂದು ಹೇಳಬಹುದೇನೋ! ಹೀಗಾಗಿ ಅವರ ಮನೆಯಲ್ಲಿ ಒಬ್ಬರು ತಪ್ಪಿದರೆ ಒಬ್ಬರಂತೆ ಅತಿಥಿಗಳು ಇದ್ದೇ ಇರುತ್ತಿದ್ದರು. ಬೇಂದ್ರೆ, ಮುಗಳಿ, ನಾನು— ಹೀಗೆ.

ಆಕಾಶವಾಣಿಯಲ್ಲಿ ಬರುತ್ತಿದ್ದ ಸಂಬಳದಲ್ಲೇ ಇಷ್ಟೆಲ್ಲ ವ್ಯವಹಾರ ನಡೆಯಬೇಕು. ಪುಣ್ಯಕ್ಕೆ ಅವರ ಮಡದಿ ಅಷ್ಟರಲ್ಲೇ ಹೇಗೋ ಎಲ್ಲವನ್ನೂ ತೂಗಿಸಿಕೊಂಡು ಹೋಗುತ್ತಿದ್ದರು. ಎನ್ಕೆಯವರಿಗೆ ಬಂದ ಸಂಬಳವನ್ನು ತಮ್ಮಾಕೆಯ ಕೈಗಿಡುವುದಷ್ಟೇ ಗೊತ್ತು. ಪತಿ ಕೈಗಿಟ್ಟ ಹಣದಲ್ಲೇ ಆ ತಾಯಿ ಸ್ವಲ್ಪ ಕಾಲ ಹೇಗೋ ಹೊಂದಿಸಿಕೊಂಡು ಹೋಗುತ್ತಿದ್ದರು. ಆದರೆ ಬರುಬರುತ್ತ ಆಕೆ ಎಷ್ಟೇ ಸಾಹಸ ಮಾಡಿದರೂ ಸಂಸಾರದ ವೆಚ್ಚ ಆಕೆಯ ಕೈ ಮೀರಿ ಬೆಳೆಯಿತು.

ಒಂದು ದಿನ ಊಟಕ್ಕೆ ಬಡಿಸುವಾಗ ಆ ತಾಯಿಯ ಕೈಯಲ್ಲಿದ್ದ ಬಳೆಗಳು ತಮ್ಮ ಹೊಳಪನ್ನು ಕಳೆದುಕೊಂಡಿದ್ದವು. ಅದನ್ನು ಗಮನಿಸಿದ ನಾನು ಅವಕ್ಕೆ ಪಾಲಿಶ್ ಮಾಡಿಸಿದರೆ ಅವುಗಳಿಗೆ ಮೊದಲಿನ ಕಾಂತಿ ಬರುತ್ತದೆಂದು ಸೂಚಿಸಿದೆ. ಎನ್ಕೆ ಒಪ್ಪಿದರು. ಊಟ ಮುಗಿಸಿಯಾದ ಬಳಿಕ, ಬಳೆಗಳನ್ನು ಬಿಚ್ಚಿ ಕೊಡುವಂತೆ ಮಡದಿಗೆ ತಿಳಿಸಿದರು. ಆಗ ಆ ತಾಯಿ ಬಳೆಗಳನ್ನು ಬಿಚ್ಚಿ ಕೊಡಲು ಹಿಂದೆ ಮುಂದೆ ನೋಡುತ್ತ ನಿಂತರು. ಪತಿದೇವರು ಎಷ್ಟೇ ಒತ್ತಾಯಿಸಿದರೂ ಮಡದಿ ಕ್ರಿಯಾಶೀಲರಾಗದೆ ಸಂಕೋಚಪಡುತ್ತ ಗೊಂಬೆಯಂತೆ ನಿಂತಿದ್ದರು. ಎನ್ಕೆ ತುಸು ಬೇಸರದಿಂದ (ಅವರು ಕೋಪ ಮಾಡಿಕೊಂಡದ್ದನ್ನೇ ನಾನು ಕಂಡಿಲ್ಲ! ಎಂದು ಹೇಳಿದರೆ, ಅಷ್ಟೇನು ಉತ್ಪ್ರೇಕ್ಷೆಯ ಮಾತಲ್ಲ. ಕೋಪಕ್ಕೆ ಹತ್ತಿರ ಹತ್ತಿರ ಬರುವ ಉದ್ವೇಗವೂ ಸಹ ಅತಿ ಶೀಘ್ರವಾಗಿ ತೇಲಿ ಹೋಗುವ ಬೇಸಿಗೆಯ ಮೋಡದಂತೆ ಉಪಶಮನವಾಗಿ ಬಿಡುವದು.) ಜಾಗ್ರತೆ ಬಳೆಗಳನ್ನು ಬಿಚ್ಚಿಕೊಡುವಂತೆ ಅಪ್ಪಣೆ ಮಾಡಿದರು. ಆಕೆ ಹೆದರಿದ ಹುಲ್ಲೆಯಂತೆ ತಮ್ಮ ಬಳೆಗಳನ್ನು ನಡಗುವ ಕೈಯಿಂದ ಮುಚ್ಚಿಕೊಳ್ಳುತ್ತ, "ಇವು ಬಂಗಾರದ ಬಳೆಗಳಲ್ಲ. ಹಿತ್ತಾಳೆಯವು" ಎಂದರು. ಎನ್ಕೆ ಗರಬಡಿದವರಂತೆ ಕ್ಷಣಕಾಲ ಮೌನವಾಗಿದ್ದು, "ಹಿತ್ತಾಳೆಯವು!... ಬಂಗಾರದ ಬಳೆಗಳು ಏನಾದವು?" ಎಂದು ಕೇಳಿದರು. ಅದಕ್ಕೆ ಆಕೆ, "ಮನೆ ಖರ್ಚಿಗೆ ಹಣ ಸಾಲದೆ ಮಾರ್ವಾಡಿ ಅಂಗಡೀಲಿ ಗಿರವಿ ಇಟ್ಟಿದೀನಿ," ಎಂದು ಬಹು ಪ್ರಯಾಸದಿಂದ ಹೇಳಿದರು. ನಾನು ಎನ್ಕೆಯವರ ಮುಖವನ್ನೇ ಕಾತರದಿಂದ ನಿರೀಕ್ಷಿಸುತ್ತಿದ್ದೆ. ಅಪರಾಧಿ ಭಾವದಿಂದ ಅವರು ತಲೆ ತಗ್ಗಿಸಿದ್ದರು. ತಪ್ಪು ತನ್ನದೇ ಎಂದು ಅವರಿಗೆ ಅರಿವಾದಂತಿತ್ತು. ಗಿರವಿ ಅಂಗಡಿ ಯಾವುದೆಂದು ಕೇಳಿ ಹೆಂಡತಿಯಿಂದ ಮಾಹಿತಿ ಪಡೆದರು. ಸಾಲ ಮಾಡಿ ಬಂಗಾರದ ಬಳೆಗಳನ್ನು ವಾಪಸು ಪಡೆದರು. ಆದರೆ ನನಗೆ ಅಚ್ಚರಿಯ ಸಂಗತಿಯೆಂದರೆ ಅಂಥ ಕಠಿಣ ಪ್ರಸಂಗದಲ್ಲೂ ಎನ್ಕೆ ತಮ್ಮ ತಾಳ್ಮೆಯನ್ನು ಕಳೆದುಕೊಳ್ಳಲಿಲ್ಲ. ಹೆಂಡತಿಯ ಮೇಲೆ ಬೈಗುಳದ ಮಳೆ ಸುರಿಸಲಿಲ್ಲ. ತಮ್ಮ ನೋವನ್ನು ತಾವೇ ನುಂಗಿ, ಶಾಂತವಾಗಿ ನಡೆದುಕೊಂಡರು!

ಇದು ಎನ್ಕೆ ಅವರಲ್ಲಿ ನಾನು ಕಂಡ ಹಿರಿಯ ಗುಣಗಳಲ್ಲೊಂದು. ಎಂಥ ಸಂಕಟದ ಸಮಯದಲ್ಲೂ ನೋವನ್ನು ತಮ್ಮ ಪಾಲಿಗೇ ಇರಿಸಿಕೊಂಡು ಹೊರಗೆ ಸರಸ ಸಜ್ಜನಿಕೆಯನ್ನು ಪ್ರದರ್ಶಿಸುತ್ತ, ಇತರರನ್ನು ತಮ್ಮ ನಗೆಚಾಟಿಕೆಗಳಿಂದ ಮುದಗೊಳಿಸುವುದು ಅವರ ಹುಟ್ಟು ಸ್ವಭಾವವಿದ್ದಂತಿದೆ. ಇವರ ಬದುಕಿನಲ್ಲಿ ನೋವುಗಳೇನೋ ದಂಡು ಕಟ್ಟಿ ಬಂದಂತೆ ಇವರ ಮೇಲೆ ದಾಳಿ ಇಟ್ಟಿದ್ದವು. ಒಂದೇ ವಾರದ ಗಡುವಿನಲ್ಲಿ ಮೊದಲನೆ ಹೆಂಡತಿ, ಚಿಕ್ಕ ಮಗಳು, ಮಾವ ಹೀಗೆ ಮೂರು ಜೀವ ಇವರಿಂದ ಕಣ್ಮರೆಯಾದವು. ಅನಂತರ ಎರಡನೆಯ ಹೆಂಡತಿಯೂ ಒಡಹುಟ್ಟಿದ ಅಣ್ಣನೂ ವಿಧಿವಶರಾದರು. ಈಗ "ಮನೆತನಕ್ಕೆ ಎನ್ಕೆ ಒಬ್ಬರೆ ಹಿರಿಯ ಜೀವಂತ ಸ್ಮಾರಕ."

ಕನ್ನಡದ ಮಹತ್ವಪೂರ್ಣ ಸಾಹಿತಿಗಳಲ್ಲೊಬ್ಬರಾದ ಎನ್ಕೆಯವರ ಪ್ರತಿಭೆ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಕೆಲಸ ಮಾಡಿದೆ. ಐವತ್ತಕ್ಕೂ ಮೀರಿದ ಕೃತಿಗಳನ್ನು ರಚಿಸಿದ್ದಾರೆ. ಏಕಾಂಕಗಳ ರಚನೆಯಲ್ಲಿ ಇವರು ಅದ್ವಿತೀಯರು. "ಸಾವಿನ ಉಡಿಯಲ್ಲಿ", "ಎರಡನೆಯ ಸಂಬಂಧ", "ಪೈಸಿ", "ಗೌರೀಶಂಕರ", ಮುಂತಾದ ಶ್ರೇಷ್ಠ ಕೃತಿಗಳು ಕಾದಂಬರಿ ಕ್ಷೇತ್ರಕ್ಕೆ ಇವರಿತ್ತಿರುವ ದೊಡ್ಡ ಕೊಡುಗೆಗಳು. ರೇಡಿಯೋ ನಾಟಕ ನಿರ್ಮಾಣದಲ್ಲಂತೂ ಇವರನ್ನು ಮೀರಿಸಿದವರು ವಿರಳ. ಹರಟೆ, ವಿಮರ್ಶೆ, ಸಾಹಿತ್ಯ ಚರಿತ್ರೆ, ಜೀವನಚಿತ್ರಗಳಲ್ಲೂ ಇವರು ಗಮನಾರ್ಹ ಕೃತಿಗಳನ್ನು ರಚಿಸಿದ್ದಾರೆ. ಇವರ ಹುಟ್ಟೂರು ಗದಗು. ಆದುದರಿಂದಲೋ ಏನೊ ನಾರಣಪ್ಪನಲ್ಲಿ ಇವರಿಗೆ ವಿಶೇಷ ಆಸಕ್ತಿ. ಈ ಕವಿಯ ಬಗ್ಗೆ ಸಂಶೋಧನೆ ನಡೆಸಿ, ಕುಮಾರವ್ಯಾಸ ಮತ್ತು ಕೃಷ್ಣ ಕಥೆ, ಕುಮಾರವ್ಯಾಸ ಭಾರತ, ಕುಮಾರವ್ಯಾಸ ನಿಘಂಟು, ಗದುಗಿನ ಗಂಡುಕವಿ ಕುಮಾರವ್ಯಾಸ— ಹೀಗೆ ನಾಲ್ಕು ಪ್ರತಿಷ್ಠಿತ ಗ್ರಂಥಗಳನ್ನು ರಚಿಸಿದ್ದಾರೆ. ಕುಮಾರವ್ಯಾಸನನ್ನು ಕುರಿತು ಭಾಷಣ ಮಾಡುವಾಗ ಅಥವಾ ಮಾತನಾಡುವಾಗ ಇವರು ಬೇರೆಯೇ ವ್ಯಕ್ತಿಯಾಗಿ ಪರಿವರ್ತನೆಗೊಳ್ಳುತ್ತಾರೆ. ಆಗ ಇವರ ಚೇತನ ಗರಿಗೆದರಿ ಜಾಗರವಾಡಲಾರಂಭಿಸುತ್ತದೆ.

ಹಾಸ್ಯ ಇವರೊಂದಿಗೇ ಹುಟ್ಟಿ ಬಂದಿರಬೇಕು. ಅಥವಾ ಜೀವನದಲ್ಲಿ ಅನುಭವಿಸಿದ ನೂರಾರು ನೋವುಗಳನ್ನು ಮರೆಯಲು ಇವರು ಹಾಸ್ಯವನ್ನು ರಕ್ಷಾಕವಚವಾಗಿ ಬಳಸುತ್ತಿರಬೇಕು. We laugh lest we should weep, ಎಲ್ಲಿ ಅತ್ತು ಬಿಡುತ್ತೇವೋ ಎಂದು ನಾವು ನಗುತ್ತೇವೆ, ಎಂದು ಇಂಗ್ಲೀಷಿನಲ್ಲಿ ಹೇಳುವುದಿಲ್ಲವೆ– ಹಾಗೆ!

ಇವರು ಯಾರೊಬ್ಬರನ್ನು ದ್ವೇಷಿಸಿದ್ದನ್ನೂ ನಾನು ಕಂಡಿಲ್ಲ, ಇವರಿಂದ ಉಪಕಾರ ಪಡೆದು ತೊಂದರೆ ಕೊಟ್ಟವರನ್ನೂ ಸಹ! ಇನ್ನೊಬ್ಬರ ಏಳಿಗೆ ಕಂಡು ಇವರೆಂದೂ ಅಸೂಯೆ ಪಟ್ಟವರಲ್ಲ: ಬದಲಾಗಿ ಸಂತೋಷಪಟ್ಟಿದ್ದಾರೆ. ನಾನಂತೂ ಇವರ ಪ್ರೀತಿಯ ಋಣವನ್ನು ಹೊತ್ತೇ ಬದುಕುತ್ತಿದ್ದೇನೆ. ಶುದ್ಧ ಅಂತಃಕರಣಕ್ಕೆ ಇನ್ನೊಂದು ಹೆಸರು ಎನ್ಕೆ ಎನ್ನುವುದನ್ನು ಸ್ವಂತ ಅನುಭವದಿಂದ ಮನವರಿಕೆ ಮಾಡಿಕೊಂಡಿದ್ದೇನೆ.

# ಲೋಕಪ್ರಿಯ ಎನ್ಕೆ

ಎಂ. ಎನ್. ಜೋಶಿ

ಸುಮಾರು ೨೮ ವರ್ಷಗಳ ಹಿಂದಿನ ಮಾತು. ಧಾರವಾಡ ನಗರಸಭೆಯ ಅಟ್ಟ ನಾಗರಿಕರಿಂದ ತುಂಬಿಹೋಗಿತ್ತು. ಮೇಧಾವಿ ವಕೀಲರೆಂದು ಪ್ರಸಿದ್ಧರಾಗಿದ್ದ ಶ್ರೀ ಎಸ್. ಕೆ. ದೀಕ್ಷಿತರಿಗೆ ಅವರ ಷಷ್ಟಿಪೂರ್ತಿಗಾಗಿ ಸನ್ಮಾನವನ್ನೇರ್ಪಡಿಸಿದ್ದರು. ಅನೇಕ ಪ್ರತಿಷ್ಠಿತರ ಭಾಷಣಗಳಾದವು ಅದರಲ್ಲಿ ಒಬ್ಬರು ಮಾತನಾಡುತ್ತ "ನಾನೂ ಎನ್ಕೆ, ಶ್ರೀ ದೀಕ್ಷಿತರೂ ಎನ್ಕೆ. ಆದರೆ ಶ್ರೀಮಾನ್ ದೀಕ್ಷಿತರ ಯೋಗ್ಯತೆ ನನಗೆ ಬರಲಾರದು. ಏಕೆಂದರೆ, ಒಂದೇ ಟೊಂಗಿಯ ಮೇಲೆ ಕಾಗೆಯೂ ಕುಳಿತಿರುತ್ತದೆ, ಕೋಗಿಲೆಯೂ ಕುಳಿತಿರುತ್ತದೆ. ಆದರೆ ಕೋಗಿಲೆಯ ಯೋಗ್ಯತೆ ಆ ಕಾಗೆಗೆ ಬರಲಾರದು. ಹಾಗೆಯೇ ನಮ್ಮಿಬ್ಬರ ಹೆಸರು ಒಂದೇ ಇದ್ದರೂ, ಯೋಗ್ಯತೆ ಒಂದೇ ಆಗಲಾರದು" ಎಂದರು. ಅಂದಿನ ಅವರೇ ಈಗ ಎಪ್ಪತ್ತರ ಹೊಸ್ತಿಲವನ್ನು ದಾಟುತ್ತಿರುವ ಶ್ರೀ ಎನ್. ಕೆ. ಕುಲಕರ್ಣಿ ಅಥವಾ ಎನ್ಕೆಯವರು.

ಇದು ಅವರ ಮಾತಿನ ಧಾಟಿ, ಇದರಲ್ಲಿ ಸರಳತೆ ಇದೆ. ಶ್ರೀ ಎಸ್. ಕೆ. ದೀಕ್ಷಿತರ ಬಗೆಗೆ ಎನ್ಕೆಯವರಿಗಿದ್ದ ಗೌರವ ವ್ಯಕ್ತವಾಗುವದು. ತಾನು ಯೋಗ್ಯತೆಯಲ್ಲಿ ಅವರನ್ನು ಸರಿಗಟ್ಟಲಾರೆನೆಂಬ ಸೌಜನ್ಯ. ಈ ಮಾತಿಗೆ ಪುಷ್ಟಿ ನೀಡಲು ಕಾಗೆ-ಕೋಗಿಲೆಗಳ ದೃಷ್ಟಾಂತ. ಅದರಲ್ಲಿರುವ ಅಲಂಕಾರದಿಂದ ಹೊಮ್ಮುವ ಕಾವ್ಯಮಯತೆ. ಶ್ರೀ ಎಸ್. ಕೆ. ದೀಕ್ಷಿತರಂಥ ಸಾಂದ್ರವಾದ ವ್ಯಕ್ತಿಮತ್ತೆಯನ್ನು ಅಲ್ಪದರಲ್ಲಿ ಅಭಿವ್ಯಕ್ತಿಗೊಳಿಸುವ ಸಾಮರ್ಥ್ಯ— ಇವೆಲ್ಲವೂ ಸ್ಫುಟವಾಗುವವು.

ಸಾಮಾನ್ಯವಾದ ಎತ್ತರದ ನಿಲುವು. ಮುಖದ ಮೇಲೆ ಅಕೃತ್ರಿಮವಾದ ಮುಗುಳ್ನಗೆ. ಒಳಗಿನ ಭಾವನೆಗಳನ್ನು ಪ್ರತಿಬಿಂಬಿಸುವ ಕಣ್ಣುಗಳು, ಮಧ್ಯಮವೃದ್ಧನ ಕಳೆ, ನೆರೆಗೂದಲಿನಿಂದ ಮಾತ್ರ ಆಧುನಿಕ ಕಾಲೇಜ-ವಿದ್ಯಾರ್ಥಿಯಿಂದ ಬೇರ್ಪಡಿಸುವ ಮುಖಚರ್ಯೆ- ಇವು ಎನ್ಕೆಯವರನ್ನು ಕಂಡವರಿಗೆ ಅರಿವಾಗುವ ಅಂಶಗಳು. ಆದರೆ ಮೆದುಳಿನಲ್ಲಿಯ ವಿಚಾರವಂತಿಕೆ, ಎದೆಯಲ್ಲಿ ಅಡಗಿದ ರಸವಂತಿಕೆ ಇವುಗಳು ಅವರ ನುಡಿ ಹಾಗೂ ಬರಹದಿಂದ ಮಾತ್ರ ಹೊರಹೊಮ್ಮುವವು. ಎನ್ಕೆ ಹಳೆ ಹಾಗೂ ಹೊಸ ಕನ್ನಡಕ್ಕೆ ಕನ್ನಡಿಯಾಗಿದ್ದಾರೆ. ಹಳೆಯ ಮಡಿ ಮತ್ತು ಹೊಸದರ ಕಿಡಿ ಇವೆರಡನ್ನೂ

ಕಂಡವರಾಗಿದ್ದಾರೆ. ಇವುಗಳಿಂದ ಅವರ ಮನಸ್ಸಿಗೆ ಇಮ್ಮಡಿ ಸಂಸ್ಕಾರ ದೊರೆತಂತಾಗಿದೆ. ಅವರ ಕೃತಿಗಳಲ್ಲಿ ಇಂಥ ಹದವಿದೆ.

ಜೀವನ ಹದವಾಗುವದು ಪರಿಸರ ಹಾಗೂ ಶಿಕ್ಷಣದಿಂದ. ಆದರೆ ಎನ್ಕೆಯವರ ಜೀವನದಲ್ಲಿಯ ದುಃಖದ ಘಟನಾವಲಿಯು ಅವರ ಹೃದಯವನ್ನು ಪುಟ ಹಾಕುವ ಬೆಂಕಿಯಾಗಿದೆ. ನಂಜನ್ನು ನುಂಗಿ, ಜೇನು ನೀಡುವ ಶಕ್ತಿ ಅವರಲ್ಲಿದೆ. ಬಾಳಿನಲ್ಲಿ ಗೋಳನ್ನನುಭವಿಸಿ, ತಮ್ಮ ಸಾಹಿತ್ಯದಲ್ಲಿ ಕೇವಲ ಹಾಸ್ಯವನ್ನೇ ನೀಡಿದ್ದಾರೆ. ಬಾಳಿನ ಕಾಳಗವನ್ನು ಎದುರಿಸಿದ್ದಾರೆ. ಅಧ್ಯಾಪಕವೃತ್ತಿಯಾಗಲಿ ಅಥವಾ ಆಕಾಶವಾಣಿಯ ಕರ್ತವ್ಯವಾಗಲಿ ಇಲ್ಲವೆ ಪತ್ರಿಕಾ ಸಂಪಾದನವಾಗಲಿ ಅವರ ಸಾಹಿತ್ಯದ ಒಲವಿಗೆ ಪುಷ್ಟಿ ನೀಡುತ್ತ ಬಂದಿವೆ. ದೈನಿಕ ಶ್ರಮ, ವೇಳೆಯ ಅಭಾವ ಇಲ್ಲವೆ ವೈಯಕ್ತಿಕ ಜೀವನದ ಕಷ್ಟ ಇವು ಯಾವವೂ ಅವರ ಕಾವ್ಯದ ಕಿಡಿಯನ್ನು ನಂದಿಸಿಲ್ಲ.

ಅವರ ಸಾಹಿತ್ಯ ಸೃಷ್ಟಿಯ ವಿಸ್ತಾರ ಗಮನೀಯವಾಗಿದೆ. ರೇಡಿಯೋ ನಾಟಕಗಳು, ಏಕಾಂಕಗಳು, ಕಾದಂಬರಿ, ಸಾಹಿತ್ಯ ಚರಿತ್ರೆ, ಹರಟೆ, ವಿಮರ್ಶೆ, ಜೀವನ ಚರಿತ್ರೆ ಇವೆಲ್ಲವುಗಳಲ್ಲಿ ಬಾಳಿನ ಚಿತ್ರಣ, ತಿಳಿಹಾಸ್ಯದಿಂದ ಪ್ರಚಲಿತ ಸಾಮಾಜಿಕ ಸಮಸ್ಯೆಗಳನ್ನು ಚಿತ್ರಿಸುವ ಕಲೆ, ಸುಸಂಸ್ಕೃತವಾದ ಮನೋರಂಜನ, ಆಡುಭಾಷೆಯ ಶೈಲಿ, ಹಾಗೂ ಅಲ್ಪದರಲ್ಲಿ ಅನಲ್ಪವನ್ನು ನೀಡುವ ಜಾಣ್ಮೆಯನ್ನು ಕಾಣಬಹುದು. ಸಾಮಾನ್ಯ ಘಟನೆಗಳಿಂದ ಅಸಾಮಾನ್ಯವಾದ ಮಾತು ಇವರ ಕೃತಿಗಳಲ್ಲಿ ಸಿದ್ಧಾಂತಕ್ಕೆ ಬರುವದು. ರೇಡಿಯೋಕ್ಕೆ ಬರೆದ ಅವರ ಸಾಹಿತ್ಯ ಸುಮಾರು ೧೦೦೦ ಪುಟಗಳಷ್ಟಾಗಬಹುದು. ವಾರದ ಕೌಟುಂಬಿಕವಾಗಲಿ ಅಥವಾ ಧಾರಾವಾಹಿಯಾಗಲಿ ಇಲ್ಲವೆ ನಾಟಕವಾಗಲಿ ಎಲ್ಲವೂ ಎನ್ಕೆಯವರ ಅನುಭವದ ಆಳ ಹಾಗೂ ರಂಜಕವಾದ ನಿರೂಪಣವನ್ನು ಎತ್ತಿ ತೋರಿಸುವದು. ಲೋಕದ ಡೊಂಕನ್ನು ವಿನೋದಾತ್ಮಕವಾಗಿ ತೋರಿಸಿ ತಿದ್ದುವ ತಂತ್ರವು ಅವರಿಗೆ ದೇವದತ್ತವಾಗಿ ಬಂದಿದೆ. ವಾಸ್ತವ ಪ್ರಪಂಚದಲ್ಲಿಯೇ ಈಗಿನ ಸಾಮಾಜಿಕ, ರಾಜಕೀಯ ಹಾಗೂ ಶೈಕ್ಷಣಿಕ ಕುಂದುಗಳನ್ನು ಎತ್ತಿತೋರಿಸುತ್ತಾರೆ. ಅವರ ವಿಮರ್ಶೆಯು ಸೂಕ್ಷ್ಮವಾಗಿರುವದಲ್ಲದೆ, ಯಾರ ಮನಸ್ಸಿಗೂ ಮುಳ್ಳಾಗುವದಿಲ್ಲ. 'ಸಂಗೀತ ಜಂಗೀ ಕುಸ್ತಿಗಳು' ಅಥವಾ 'ನೆಲಸಮತಾವಾದ' 'ಬುಶ್‌ಕೋಟ್' ಮೊದಲಾದವುಗಳಲ್ಲಿ ಈ ಮಾತನ್ನು ಮನಗಾಣಬಹುದು. ಅವರ ಭಕ್ತಿಪೂರ್ವಕವಾದ ಅಭ್ಯಾಸವನ್ನು ಕಾಣಬೇಕೆಂದರೆ ಕುಮಾರವ್ಯಾಸನ ಬಗೆಗೆ ಅವರು ಬರೆದ ಗ್ರಂಥಗಳನ್ನು ಓದಬೇಕು. ಆ ವೀರ ಕವಿಯ ಕೃತಿಯನ್ನು ತಿಳಿಯಾದ ಗದ್ಯಕ್ಕೆ ಇಳಿಸಿದ ಶ್ರೇಯಸ್ಸು ಎನ್ಕೆಯವರಿಗೆ ಸಲ್ಲಬೇಕು. ಅವರ 'ಎರಡನೆಯ ಸಂಬಂಧ', 'ಸಾವಿನ ಉಡಿಯಲ್ಲಿ' ಮೊದಲಾದ ಕಾದಂಬರಿಗಳಲ್ಲಿ ವಾಸ್ತವ ಜೀವನದ ಪ್ರತ್ಯಕ್ಷ ಚಿತ್ರವು ದೊರಕುವದು. ಜಗದ್ರಂಗದ ಮೇಲೆ ಮಾನವ ನಟನು ಅಭಿನಯಿಸುವ ನಾಟಕದಲ್ಲಿ ನಗೆಯೊಡನೆ ಹೊಗೆಯೂ ಕೂಡ ಅನಿವಾರ್ಯ, ಅದು ಮಾನವನಿಂದಲೂ ಹಾಗೂ ವಿಧಿಯಿಂದಲೂ

ಉಂಟಾಗಬಹುದೆಂದು ಒಪ್ಪಬೇಕಾಗುವದು. ಪತಿಯ ಶವದ ಬಳಿಯಲ್ಲಿ ಮುತ್ತೈದೆಯು ಮಂಗಲಸೂತ್ರವು ಹೊರಟುಹೋಗುವಾಗ, ಅಲ್ಲಿಯ ಜಡ ಹಾಗೂ ಚೇತನ ವಸ್ತುಗಳೂ ಅತ್ತವೆಂದು ಹೇಳುವಾಗ, ಎನ್ಕೆಯವರು 'ಅಪಿಗ್ರಾವಾ ರೋದಿಶ್ಯಪಿ ಗಳತಿ ವಜ್ರಸ್ಯ ಹೃದಯಮ್' ಎಂದು ಭವಭೂತಿಯ ಮಾತನ್ನು ಹೇಳಿ ವರ್ಣನೆಯನ್ನು ಮುಗಿಸಿ ಬಿಡುತ್ತಾರೆ- ಶೋಕದ ಆವಿರಷ್ಕರಣವನ್ನು ಮಾಡುವ ಅವರ ಶೈಲಿಯು ಹೀಗೆ.

ಸಾಹಿತ್ಯಕೂಟವೇ ಆಗಲಿ, ಹಾಸ್ಟೆಲ್ಲಿನ ವಾರ್ಷಿಕ ದಿನಾಚರಣವಾಗಲಿ, ಕನ್ನಡ ಸಂಘದ ಸಭೆಯಾಗಲಿ ಅಥವಾ ಸಂಸ್ಕೃತ ಸಾಹಿತ್ಯ ಸಮಿತಿಯ ಇಲ್ಲವೇ ಸಾರ್ವಜನಿಕ ಸಭೆಯಾಗಲಿ, ಉದ್ಘಾಟನವಾಗಲಿ, ಅಲ್ಲಿ ಎನ್ಕೆಯವರು ತಿಳಿಯಾದ ಹಾಸ್ಯದಿಂದ ಪಂಡಿತ ಹಾಗೂ ಪಾಮರರನ್ನು ಮೆಚ್ಚಿಸಬಲ್ಲರು. ನಿತ್ಯಜೀವನಕ್ಕೆ ಹೊಂದಿರುವ ಘಟನೆಗಳೊಂದಿಗೆ ವಿಮರ್ಶಾತ್ಮಕವಾಗಿ ವಿವೇಚಿಸುವ ಶಕ್ತಿ ಅವರಿಗಿದೆ. ಸ್ತ್ರೀ ಪುರುಷರು, ಚಿಕ್ಕಮಕ್ಕಳು, ಅಧಿಕಾರಿಗಳು ಹಾಗೂ ಸಮಾಜದ ಯಾವದೇ ವ್ಯಕ್ತಿಯಾಗಲಿ ಎನ್ಕೆಯವರ ಮಾತಿಗೆ ತಲೆದೂಗದೆ ಇರುವದಿಲ್ಲ. ಅವರ ಮಾತು ಸರಳ, ಮನಸ್ಸು ಒಳ್ಳೆಯ ಹೃದಯವಂತಿಕೆಯಿಂದ ತುಂಬಿದ್ದು. ಎಲ್ಲ ಮಿತ್ರವೃಂದಕ್ಕೂ ತಮ್ಮ ಹೃದಯವನ್ನು ಹಂಚಿಕೊಡುತ್ತಾರೆ. ಬಿರುನುಡಿ, ಅಥವಾ ಕಟುವಾದ ಟೀಕೆ ಅವರ ಮಾತಿನಲ್ಲಿ ಸಿಗುವದು ದುರ್ಲಭ.

ಎನ್ಕೆಯವರು ಒಬ್ಬ ಸುಸಂಸ್ಕೃತ ಸದ್ಗೃಹಸ್ಥರೆಂದು ಜನಪ್ರಿಯರಾಗಿದ್ದಾರೆ. ಸಹಜವಾದ ಹಾಸ್ಯಪ್ರವೃತ್ತಿ, ಗೆಳತನವನ್ನು ಹೆಚ್ಚಿಸುವ ನಡೆ, ಉಪಕಾರ ಬುದ್ಧಿ, ನೈಸರ್ಗಿಕವಾದ ವಿನಯ–ಇವೆಲ್ಲವೂ ಎನ್ಕೆಯವರು ಪಡೆದುಕೊಂಡು ಬಂದ ಗುಣಧರ್ಮ (Properties)ಗಳೆಂದು ಹೇಳಬಹುದು. ತಮ್ಮ ಪ್ರಭಾವಾವಳಿಯಲ್ಲಿ ಬರುವ ಮಿತ್ರರೊಂದಿಗೆ ಆತ್ಮೀಯತೆಯಿಂದ ನಡೆದುಕೊಳ್ಳುವದು ಅವರ ಸ್ವಭಾವ. ಅವರೊಂದಿಗೆ ಹರಟೆ ಹೊಡೆಯಹತ್ತಿದರೆ ಅದರಲ್ಲಿ ಸಾಹಿತ್ಯದ ಹಾಗೂ ಸಾಮಾಜಿಕ ಅನೇಕ ವಿಷಯಗಳು ಲೀಲಾಜಾಲವಾಗಿ ಹರಿದು ಬರುವವು. ಹಳೆಯ ಕಾಲದ ವಿಷಯವನ್ನು, ಅವು ಕಣ್ಣಿಗೆ ಕಟ್ಟುವಂತೆ ಹೇಳುವ ಕೌಶಲ್ಯ ಅವರಲ್ಲಿದೆ.

ಅವರ ಹಾಸ್ಯ ನೈಸರ್ಗಿಕವೂ, ಹಾಗೂ ವೈಶಿಷ್ಟ್ಯ ಪೂರ್ಣವೂ ಆಗಿರುವದು. ನಿರಾಡಂಬರ ಮತ್ತು ನಮ್ರತೆ ಅವರ ನಡೆ, ಹಾಗು ನುಡಿಗೆ ಕಳೆಕಟ್ಟುತ್ತವೆ. ಎಪ್ಪತ್ತರ ಹದ್ದಿನಲ್ಲಿದ್ದರೂ ಇನ್ನು ಇಪ್ಪತ್ತರ ಹುಮ್ಮಸ್ಸನ್ನು ಇವರು ಪಡೆದದ್ದು ಈ ನಗೆಗಾರಿಕೆಯಿಂದಲೇ. ಮನಸ್ಸು ಆರೋಗ್ಯವಾಗಿದ್ದರೆ, ವಯಸ್ಸು ಹೆಚ್ಚುವದೆಂಬುದಕ್ಕೆ ಎನ್ಕೆಯವರೇ ನಿದರ್ಶನ. ಹೀಗೆ, ಹಿರಿಯರೆದುರು ಕಿರಿಯರಾಗಿ, ಕಿರಿಯರಿಗೆ ಹಿರಿಯರಾಗಿ, ಸರಿಜೋಡಿಯವರಿಗೆ ಸರಿಯಾದ ಜೋಡಿಯಾಗಿ, ಇಷ್ಟುಕಾಲ ಸಾಹಿತ್ಯಸೇವೆಗೈದ, ಲೋಕಪ್ರಿಯರಾದ ಹಾಸ್ಯ ಸಾಹಿತಿ ಹಾಗೂ ಪ್ರೇಮಲಸ್ವಭಾವದ ಗೆಳೆಯ ಎನ್ಕೆಯವರು ಆಧುನಿಕ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿದ್ದಾರೆ.

# ಅಣ್ಣ ಎನ್ಕೆ

## ಶಾಂತಾದೇವಿ ಮಾಳವಾಡ

ಐವನೆ ದಶಕ, ಆ ಅವಧಿಯಲ್ಲಿ ಮಾಳವಾಡರು ಹಲವಾರು ಸಲ ಮುಂಬಯಿಗೆ ಹೋಗಿ, ಅಲ್ಲಿ ಹಲವು ದಿನಗಳ ವರೆಗೆ ವಾಸಿಸುತ್ತಿದ್ದರು. ಶಾಂತೇಶ ಪಾಟೀಲ ಮತ್ತು ಎನ್ಕೆ ಜೊತೆಗಿದ್ದರೆ, ಮಾಳವಾಡರು ನನ್ನನ್ನು ಮರೆಯುತ್ತಿದ್ದರೆಂದು ಆಗ ನನಗೆ ಅನಿಸುತ್ತಿತ್ತು. ಅವರು ಮುಂಬಯಿಯಲ್ಲಿರುವಾಗ ಅವರ ಮತ್ತು ತಮ್ಮ ಸಮಾಚಾರ ವನ್ನು ಸೋದರ ಎನ್ಕೆಯವರು ನನಗೆ ಪತ್ರಗಳ ಮೂಲಕ ತಿಳಿಸುತ್ತಿದ್ದರು. ಆ ಅವಧಿಯ ಎನ್ಕೆಯವರ ಪತ್ರಗಳ ರಾಶಿ ಈಗ ಬಹಳ ಸ್ವಾರಸ್ಯಕರವಾಗಿ ತೋರುತ್ತಿವೆ. ಅಂತಹ ಒಂದು ಪತ್ರ ಹೀಗಿದೆ:

ಮುಂಬಯಿ ಸಮಾಚಾರ ಪತ್ರಿಕೆ

ಸಂಪಾದಕರು.— ಪ್ರೊ. ಎಸ್. ಎಸ್. ಮಾಳವಾಡ ಎಂ.ಎ.

ಸಹ ಸಂಪಾದಕರು:— ಎನ್. ಕೆ. ಕುಲಕರ್ಣಿ

ಎಂ.ಎ.,ಬಿ.ಟಿ.,ಎಸ್.ಟಿ.ಸಿ.

ಭಾವಿ ಪಿಎಚ್.ಡಿ.

ಸಂಪುಟ: ೧ ಸಂಚಿಕೆ-೨ ೨೪-೪-೪೬

"ಸ್ಫೂರ್ತಿ ಬಂದಾಗ ಹೊರಡುವ ಮುಂಬಯಿಯಲ್ಲಿರುವ ಸಿರಿಗನ್ನಡಿಗರ ಉಜ್ವಲ ಅಂತರ್ರಾಷ್ಟ್ರೀಯ ಪತ್ರಿಕೆ! ಮುಂಬಯಿಯಲ್ಲಿ ಪ್ರೊ. ಮಾಳವಾಡರ ಕಾರ್ಯಕ್ರಮ: ಪಾ. ಕೋಟ್ನಿಸ್ ಚಿತ್ರಪ್ರಟಕ್ಕೆ ಸಂದರ್ಶನ, ಚಿತ್ತವೇಧಕ ಚಿತ್ರಪಟ, ಶ್ರೀ ಶಾಂತಾರಾಮ ರಿಗೆ ಪ್ರೊ. ಮಾಳವಾಡರ ಧನ್ಯವಾದ". ಹೀಗೆ ಪ್ರಾರಂಭವಾದ ಸುದ್ದಿ ಚಿತ್ರವಿಮರ್ಶೆ, ಮೂರು ದಿನ ಮಾಳವಾಡ ಎನ್ಕೆ, ಶಾಂತೇಶ ಪಾಟೀಲರು ಮುಂಬೈ ಸುತ್ತಿದ ಸಮಾಚಾರ, ತಿಂದ ದೋಸೆ, ಆಮ್ಲೆಟ್ ವರ್ಣನೆ, ಮಾಳವಾಡರು ಸಾಮಾನು ಕೊಂಡ ಸುದ್ದಿಯೊಡನೆ 'ಕಲಿತ ಪಂಡಿತರಿಗೆ ವ್ಯವಹಾರ ಜ್ಞಾನ ಕಡಿಮೆ' ಎಂಬ ವಾಸ್ತವ ಸಂಗತಿಯೂ ಇದೆ. "ರಾಯರು ನಿನ್ನೆ ನನಗೆ ಆಫೀಸಿನಲ್ಲಿ ರಜೆ ತೆಗೆದುಕೊಳ್ಳಲು ಹಚ್ಚಿ ದರು. ಅವರೊಂದಿಗೆ ಮುಂಬಯಿ ಸುತ್ತಾಡಿ ಸುಸ್ತಾದೆ" ಎಂದಿದೆ. ಎಂಪಾಯರ ಹಾಟೇಲಿನಲ್ಲಿ ವಸತಿ ಮಾಡಿದ (ಕೊಲ್ಹಾಪುರ ದೊರೆ) ಪ್ರೊ. ಕುಂದಣಗಾರರು ಎನ್ಕೆ

ಅವರನ್ನು ಊಟಕ್ಕೆ ಆಮಂತ್ರಿಸಿದ್ದರಂತೆ! ಒಟ್ಟು ಮೂರು ಪುಟದ ಪತ್ರಿಕೆ ಇದು. ಇಂಥ ಪತ್ರಿಕೆಯನ್ನು ಮಾಳವಾಡರು ಮುಂಬಯಿಗೆ ಹೋದಾಗಲೆಲ್ಲ ಎನ್ಕೆಯವರು ನನಗೆ ಕಳಿಸುತ್ತಿದ್ದರು.

೧೯೪೫ ರ ಸುಮಾರಿಗೆ ಎನ್ಕೆಯವರ ನಿಕಟ ಪರಿಚಯ ನಮ್ಮಿಬ್ಬರಿಗೆ ಆಯಿತು. ಅವರು ಮೊದಲ ಹೆಂಡತಿಯನ್ನು ಕಳೆದುಕೊಂಡು ದುಃಖತಪ್ತರಾಗಿದ್ದರು. ಆಗ ಮಾಳವಾಡರು ಅವರಿಗೆ ಸಾಂತ್ವನ ಒದಗಿಸುತ್ತಿದ್ದರು. ಶ್ರೀ ಅರವಿಂದರ ತತ್ವಜ್ಞಾನವನ್ನು ವಿವರಿಸುತ್ತಿದ್ದರು. ಆಗ ಧಾರವಾಡದಲ್ಲಿ ವಿದ್ಯಾರ್ಥಿಯಾಗಿದ್ದ ಸಾಸನೂರ ಭೀಮಣ್ಣ, ಎನ್ಕೆ, ಮಾಳವಾಡರು ಕೂಡಿ ಸಾಯಂಕಾಲ ನಮ್ಮ ಮನೆಯಲ್ಲಿ ಚಹಾ ಮುಗಿಸಿ ತಿರುಗಾಡಲು ಹೋಗುತ್ತಿದ್ದರು, ಧಾರವಾಡ ಈಗಿನಷ್ಟು ಆಗ ಬೆಳೆದಿರಲಿಲ್ಲ. ಎಲ್ಲೆಡೆ ಮುಗಿಲಿಗೆ ಕೈಚಾಚಿ ನಿಂತ ಮರಗಳು, ಕೆರೆಗಳು, ಹಚ್ಚ ಹಸುರಿನ ಹುಲ್ಲುಹಾಸಿಗೆ ಹಾಸಿದ ನೆಲ, ಊರ ಹೊರವಲಯದಲ್ಲಿ ಸಾಕಷ್ಟಿತ್ತು. ತಿರುಗಾಡಿ ದಣಿದ ತ್ರಿಮೂರ್ತಿಗಳು ಗಿಡದಡಿ ಕುಳಿತು ಹರಟೆ ಹೊಡೆಯಹತ್ತಿದರೆ ಮನೆಯನ್ನೂ ಊಟವನ್ನೂ ಮರೆಯುತ್ತಿದ್ದರು. ನಮ್ಮ ಮನೆಯಲ್ಲಿ ಯಾವಾಗಲೂ ರಾತ್ರಿ ಊಟ ೮ ಗಂಟೆಗೆ. ಈ ತಿರುಗಾಟ ಪ್ರಾರಂಭವಾದ ಮೇಲೆ, ಒಂದೊಂದು ದಿನ ಈ ತ್ರಿಮೂರ್ತಿಗಳು ರಾತ್ರಿ ೯-೧೦ ಗಂಟೆಗೆ ಮನೆಗೆ ಬರುತ್ತಿದ್ದರು. ಆ ವೇಳೆಗೆ ನನ್ನ ಅತ್ತೆ-ಮೈದುನರು ಊಟ ಮಾಡಿ ಮಲಗಿರುತ್ತಿದ್ದರು. ನಾನೊಬ್ಬಳು ಮಾಳವಾಡರ ದಾರಿ ಕಾಯುತ್ತ ಕುಳಿತಿರುತ್ತಿದ್ದೆ, ಆಗ ಈ ಮೂವರೂ ಹಸಿದು ಊಟಕ್ಕೆ ಬರುತ್ತಿದ್ದರು. ಇದ್ದುದನ್ನು ನಾಲ್ವರೂ ಹಂಚಿಕೊಂಡು ಊಟ ಮಾಡುತ್ತಿದ್ದೆವು.

ಎನ್ಕೆಯವರ ಎರಡನೆಯ ಮದುವೆಯಾಗುವವರೆಗೆ ಈ ಮೂವರ ತಿರುಗಾಟ ನಡೆದಿತ್ತು. ಜೊತೆಗೆ ಪ್ರೊ. ಮಳಗಿಯವರೂ ಒಮ್ಮೊಮ್ಮೆ ಸೇರುತ್ತಿದ್ದರು. ಆ ಕಾಲದಲ್ಲಿ ಎನ್ಕೆಯವರು ಮಾಳವಾಡರಿಗೆ ಬಹಳ ಹತ್ತಿರದವರಾದರು. ಅಣ್ಣನಿಲ್ಲದ ನನಗೆ ಅಣ್ಣನಾದರು. ಮೇಲಿಂದ ಮೇಲೆ ಅನಾರೋಗ್ಯದಿಂದ ನಾನು ಬಳಲುತ್ತಿದ್ದಾಗ ಎನ್ಕೆಯವರು ನನಗೆ ಸಾಂತ್ವನ ನೀಡುತ್ತಿದ್ದರು. ಹೀಗೆ ಪರಸ್ಪರ ದುಃಖದಲ್ಲಿ, ಸುಖದಲ್ಲಿ ಸಹಭಾಗಿಗಳಾಗಿದ್ದೆವು. ಎನ್ಕೆ ಅವರ ಎರಡನೆ ಮದುವೆಗೆ ನಾವಿಬ್ಬರೂ ಹೋಗಿದ್ದೆವು. ಮೃದು ಹೃದಯದ ಎನ್ಕೆಯವರು ಲಗ್ನದ ಮುಹೂರ್ತದ ಹೊತ್ತಿಗೆ ಸಣ್ಣ ಮಗನನ್ನು ತೊಡೆಯ ಮೇಲೆ ಕೂಡ್ರಿಸಿಕೊಂಡು, ಮೊದಲ ಹೆಂಡತಿಯ ನೆನಪಾಗಿ ಕಣ್ಣೀರುಗರೆಯುತ್ತಿದ್ದ ದೃಶ್ಯ ಇಂದಿಗೂ ನನ್ನ ಕಣ್ಣಿಗೆ ಕಟ್ಟಿದಂತಿದೆ.

ಧಾರವಾಡದಲ್ಲಿರುವವರೆಗೆ ಎನ್ಕೆ, ಮಾಳವಾಡ ತಿರುಗಾಟ, ಸಾಹಿತ್ಯ ಮಂಟಪದ ಹುಡುಕಾಟ ನಡೆದಿತ್ತು. ೧೯೪೬ ರಲ್ಲಿ ಎನ್ಕೆಯವರು ಮುಂಬಯಿ ಆಕಾಶವಾಣಿಯ ಕೆಲಸಕ್ಕೆ ಸೇರಿಕೊಂಡರು. ಧಾರವಾಡದಿಂದ ಹೋಗುವಾಗ ಅವರಿಗೆ ಬಹಳ ಕೆಡುಕೆನಿಸಿತ್ತು, ಆದರೆ ಹೆಚ್ಚು ಸಂಬಳ ತರುವ ಸ್ಥಾನ ದೊರೆತುದರಿಂದ ಹೋಗಲೇಬೇಕಾಯಿತು.

ಮಾಳವಾಡರು ಮೇಲಿಂದ ಮೇಲೆ ಮುಂಬಯಿ ವಿಶ್ವವಿದ್ಯಾಲಯದ ಅಭ್ಯಾಸ ಮಂಡಳದ ಸಭೆಗಳಿಗಾಗಿ ಹೋದಾಗ ಜೊತೆಯಾಗಿ ತಿರುಗಾಡಿ ಪರಸ್ಪರ ಹೃದಯಗಳು ಹಗುರಾಗು ವಂತೆ ಮಾತನಾಡಿಕೊಳ್ಳುತ್ತಿದ್ದರಂತೆ. ಅದನ್ನು ಕುರಿತ ವರದಿಯನ್ನು ಎಷ್ಟೋ ಸಲ ಎಸ್ಕೆಯವರು ನನಗೆ ಬರೆಯುತ್ತಿದ್ದರು. ಮಾಳವಾಡರಿಗೆ, ಎಸ್ಕೆ ಪತ್ರದಲ್ಲಿ ರಾಯರಿಗೆ ಎಂದು ಸಂಬೋಧಿಸುತ್ತಿದ್ದುದು, ನಿಮ್ಮ 'ಒಸಕೆ' ಎಂದು ಸಹಿ ಮಾಡುತ್ತಿದ್ದರು. "ತಂಗೀ ರಾಯರೊಂದಿಗೆ ನಾಸಿರುವೆ, ಸವತಿ ಮಾತ್ಸರ್ಯ ಬೇಡ" ಎಂದೂ ಬರೆದದ್ದೂ ಉಂಟು.

ಧಾರವಾಡದಲ್ಲಿದ್ದಾಗ ನಾನು ಅಕ್ಕನೋ! ಎಸ್ಕೆಯವರು ಅಣ್ಣನೋ ಎಂಬ ಸಮಸ್ಯೆ ಇರಲಿಲ್ಲ. ಮುಂಬಯಿಗೆ ಹೋದ ಮೇಲೆ ಎಸ್ಕೆಯವರು ಬರೆದ ಪತ್ರದಲ್ಲಿ ಹೀಗಿತ್ತು–"ಅಕ್ಕ ಶಾಂತಕ್ಕನವರಿಗೆ ನಮಸ್ಕಾರ. ನಿಮ್ಮ ಮನೆಯಲ್ಲಿರುವ, ಮಾಳವಾಡರ ಸೋದರರೊಂದಿಗೆ ನಾನೂ ಒಬ್ಬನಾಗಿದ್ದೆ, ನಿಮ್ಮ ದಂಪತಿಗಳೀರ್ವರ ಇರವನ್ನು ನೋಡಿ ನನ್ನ ಹೃದಯದ ಹೂಗೆ ನಗೆಯಾಗಿ ಹೊಮ್ಮುತ್ತಿತ್ತು. ನಿಮ್ಮಿಬ್ಬರ ವಾತ್ಸಲ್ಯ, ಅಂತಃಕರಣಕ್ಕೆ ನಾನು ಋಣಿಯಾಗಿದ್ದೇನೆ." ಅದಕ್ಕೆ ನಾನು ಉತ್ತರ ಬರೆದೆ, 'ವಯಸ್ಸಿನಲ್ಲಿ ನಾನು ನಿಮಗಿಂತ ಕಿರಿಯಳು. ಅಣ್ಣ ಅನ್ನುವ ಹಕ್ಕು ನನ್ನದು' ಎಂದು. ಹೀಗೆ ಮುಂಬಯಿ ಧಾರವಾಡಗಳ ನಡುವೆ ೪-೬ ಪತ್ರಗಳು ಓಡಾಡಿದ ನಂತರ, ಎಸ್ಕೆಯವರು ನನಗೆ ಹಿರಿಯ ತಂಗಿ ಎಂದೂ, ನಾನು ಅವರಿಗೆ ಕಿರಿಯ ಅಣ್ಣನೆಂದೂ ಬರೆಯಬೇಕೆಂಬ ನಿರ್ಣಯವಾಯಿತು. ಅಂದಿನಿಂದ ಎಸ್ಕೆಯವರು ನನಗೆ "ತಂಗಿ ಶಾಂತಕ್ಕನವರಿಗೆ! ನಿಮ್ಮ ಕಿರಿಯ ಅಣ್ಣ ಎಸ್ಕೆ" ಎಂದು ಬರೆಯತೊಡಗಿದರು. 'ತಂಗಿ ಎಂದು ನಾನು ಬರೆದಾಗಲೆಲ್ಲ ನೀವು ಹಿರಿಯ ತಂಗಿ ಓದಿಕೊಳ್ಳಬೇಕು' ಎಂದು ಅವರು ಬರೆದ ಮೇಲೆ ಅಕ್ಕನೋ! ತಂಗಿಯೋ! ವಾದ-ವಿವಾದ ಕೊನೆಗೊಂಡಿತು. ಹೀಗೆ ೩೮ ವರುಷಗಳಿಂದ ಎಸ್ಕೆಯವರು ನನಗ ವಾತ್ಸಲ್ಯದ ಅಣ್ಣನಾಗಿದ್ದಾರೆ.

೧೯೪೬ ರಿಂದ ೪೮ರ ಅವಧಿಯಲ್ಲಿ ಮುಂಬಯಿ ಆಕಾಶವಾಣಿಗಾಗಿ ಸಂಭಾಷಣೆಗಳನ್ನು, ರೂಪಕಗಳನ್ನು ಬರೆಯಲು ನನಗೆ ಪ್ರೋತ್ಸಾಹವನ್ನಿತ್ತು ಎಸ್ಕೆಯವರು ನನ್ನ ಸಾಹಿತ್ಯದ ಬೆಳವಣಿಗೆಗೆ ನೆರವನ್ನಿತ್ತಿದ್ದಾರೆ. "ತಂಗಿ ನಮ್ಮ ಇಂದಿನ ಸಾಹಿತ್ಯ ಸಂತೆಯಲ್ಲಿಯ ವಿಮರ್ಶೆಯ ಹಾವಳಿ ನಿಮಗೇನೂ ಅರಿಯದ ವಿಷಯವಲ್ಲ" ಎಂಬುದನ್ನು ಒಂದೆಡೆ ಬರೆದಿದ್ದಾರೆ.

ಒಂದು ಸಲ ಅನಾರೋಗ್ಯದಿಂದ ಚೇತರಿಸಿಕೊಂಡ ನಾನು ವಿಶ್ರಾಂತಿಗಾಗಿ ಅರವಿಂದಾಶ್ರಮದಲ್ಲಿ ಕೆಲವು ತಿಂಗಳು ಇದ್ದೆ. ಆ ಅವಧಿಯಲ್ಲಿ ಎಸ್ಕೆಯವರು ನನಗೆ ಬರೆದ ಕೆಲ ಮಾತುಗಳಿವು, "ಅರವಿಂದಾಶ್ರಮವು ನಿಮ್ಮ ನೊಂದ ಮನಸ್ಸಿಗೆ ತಂಪು ಕೊಡುತ್ತಿದೆ ಎಂದು ಕೇಳಿ ನನಗೇನೊ ಬಹಳ ಆನಂದವೆನಿಸಿದೆ. ಯಾವ ದ್ವೇಷ, ಅಸೂಯೆ, ಜಾತಿ ಮಾತ್ಸರ್ಯಗಳ ಸೋಂಕಿಲ್ಲದೆ ನಿಶ್ಚಿಂತತೆಯಿಂದ ಶಾಂತವಾಗಿ,ಸ್ವತಂತ್ರ ವಾತಾವರಣದಲ್ಲಿ, ಆಧ್ಯಾತ್ಮಿಕ ಗಾಳಿ ಬೆಳಕನ್ನುಂಡು ಆತ್ಮತೇಜೋಬಲವನ್ನು ಹೆಚ್ಚಿಸಿ

ಕೊಳ್ಳುವಂತಹ ಅನುಕೂಲತೆ ಪಡೆದಿರುವಿರಿ. ನೀವೇ ಪುಣ್ಯವಂತರಲ್ಲವೇ ತಂಗಿ? ಜೀವನದ ವಿಷಮತೆಗಳು ನಮ್ಮ ಹೃದಯವನ್ನು ಮಾಗಿಸುತ್ತವೆ." ಈ ಪತ್ರ ಓದಿದಾಗ ನಾನು ಮಾಳವಾಡರೊಂದಿಗೆ ಅರವಿಂದಾಶ್ರಮಕ್ಕೆ ಹೋಗಿ ತನುಮನಗಳಿಗೆ ಶಾಂತಿ ಸಂತೃಪ್ತಿಗಳನ್ನು ತಂದುಕೊಂಡ ದಿನಗಳು ನೆನಪಾಗುತ್ತಿವೆ.

ಮೇಲಿನ ಪತ್ರದಲ್ಲಿ ಎನ್ಕೆಯವರು ಉಲ್ಲೇಖಿಸಿರುವಂತೆ "ಜೀವನದ ವಿಷಮತೆಗಳು ನಮ್ಮ ಹೃದಯವನ್ನು ಮಾಗಿಸುತ್ತವೆ" ಎಂಬ ಮಾತು, ಅವರು ತಮ್ಮ ಜೀವನವನ್ನೂ ಕುರಿತು ಬರೆದಂತಿದೆ. ಇಬ್ಬರು ಪತ್ನಿಯರಾದರೂ ಬಹುಕಾಲ ದಾಂಪತ್ಯ ಸುಖವನ್ನನುಭವಿಸುವ ಭಾಗ್ಯ ಸೋದರ ಎನ್ಕೆಯವರಿಗೆ ಲಭಿಸಲಿಲ್ಲ. ಮೃದುಹೃದಯದ, ಹೆಣ್ಣುರುಳಿನ ಎನ್ಕೆ ಅವರು ಜೀವನದಲ್ಲಿ ಅನೇಕ ಕಷ್ಟ-ನಷ್ಟಗಳನ್ನನುಭವಿಸಿದ್ದಾರೆ. ತಮ್ಮ ದುಃಖವನ್ನು ನುಂಗಿಕೊಂಡು ಸದಾ ನಗುಮುಖವನ್ನು ಪರರಿಗೆ ತೋರಿಸುತ್ತಾರೆ. ಅಂತೆಯೆ 'ಸಾವಿನ ಉಡಿಯಲ್ಲಿ' ದುಃಖಾಂತ ಕಾದಂಬರಿಯನ್ನು ಬರೆದ ಎನ್ಕೆಯವರು ಹಲವು ಹಾಸ್ಯಪೂರ್ಣ ಹರಟೆ ಏಕಾಂಕಗಳನ್ನು ಬರೆದಿದ್ದಾರೆ. ಕುಮಾರವ್ಯಾಸ ಭಾರತದ ಬಗೆಗೆ ಆಳವಾಗಿ ಅಭ್ಯಾಸ ಮಾಡಿ ಗಂಭೀರ ಗ್ರಂಥ ರಚಿಸಿದಂತೆ 'ಲಲಿತಾ' ಎಂಬ ಲಲಿತ ಕಾದಂಬರಿಯನ್ನು ರಚಿಸಿದ್ದಾರೆ.

ಕುಟುಂಬ ವತ್ಸಲರಾದ ಎನ್ಕೆ ಈಗ ಮಕ್ಕಳು ಸೊಸೆಯಂದಿರ ಮಧ್ಯದಲ್ಲಿ ನಲಿವು ಪಡೆಯುತ್ತಿದ್ದಾರೆ. ಪುಟ್ಟ ಮೊಮ್ಮಗನ ಆಟ ನೋಟದಲ್ಲಿ, ಅಜ್ಜ ಎನ್ಕೆ ತಮ್ಮ ಬಾಳಿನ ನೋವನ್ನು ಮರೆತು ಸವಿಯನ್ನು ಕಾಣುತ್ತಿದ್ದಾರೆ. ಅಣ್ಣ ಎನ್ಕೆಯವರಿಗೆ ಜೀವನದಲ್ಲಿ ಸದಾ ಸುಖ ಸಂತೃಪ್ತಿಯನ್ನು ದೇವರು ಕರುಣಿಸಲಿ. ಅವರಿಂದ ಕನ್ನಡ ಸಾಹಿತ್ಯ ಸಂಪತ್ತು ಇನ್ನೂ ಹೆಚ್ಚಲಿ ಎಂದು ಹಾರೈಸುತ್ತೇನೆ.

# ಎನ್ಕೆ ನೆನಪುಗಳು

## ಸಿದ್ಧಯ್ಯ ಪುರಾಣಿಕ

ನಾನೊಬ್ಬನೇ ಅಲ್ಲ, ನನ್ನ ಮನೆಯವರೆಲ್ಲರೂ ಆಗಾಗ ನೆನಪಿಸಿಕೊಳ್ಳುವ ವ್ಯಕ್ತಿಗಳಲ್ಲಿ ಎನ್ಕೆ ಅವರೂ ಒಬ್ಬರು. ಅವರ ಪರಿಚಯ ಬಹಳ ಹಿಂದಿನದಾದರೂ ಅದು ಘನಿಸಿದುದು ಕರ್ನಾಟಕ ರಾಜ್ಯೋದಯವಾದ ಮೇಲೆ. ೧೯೫೮ರಲ್ಲಿ ನನಗೆ ಬೆಂಗಳೂರಿಗೆ ವರ್ಗವಾಯಿತು. ಆಗ ಎನ್ಕೆ ಅವರೂ ಬೆಂಗಳೂರಿನಲ್ಲಿ ಇದ್ದುದಲ್ಲದೆ ಒಂದೇ ಓಣಿಯಲ್ಲಿ ನಮ್ಮಿಬ್ಬರ ಬಾಡಿಗೆ ಮನೆಗಳು! ಅನತಿ ದೂರದಲ್ಲಿ ಆರ್ ಜಿ ಕುಲಕರ್ಣಿ, 'ಇರಾ' ಹಾಗೂ ಎಸ್. ಎಂ. ಪಾಟೀಲರ ಮನೆಗಳು; ಗಾಂಧೀನಗರ ಪ್ರೌಢಶಾಲೆಯಲ್ಲಿ ವಿದ್ವಾನ್ ಎಂ. ವಿ. ಚಕ್ರವರ್ತಿಗಳು. ನಮ್ಮದೊಂದು ಬಳಗವೇ ಸಿದ್ಧವಾಗಿಬಿಟ್ಟಿತು ಕುಮಾರಪಾರ್ಕ್ ಪಶ್ಚಿಮ ಬಡಾವಣೆಯಲ್ಲಿ.

ಎನ್ಕೆ ಅವರ ಹಾಗೂ ನನ್ನ ಮನೆಗಳು ಸರದಿಯ ಪ್ರಕಾರ ಸಾಹಿತ್ಯಗೋಷ್ಠಿಗಳಿಗೆ ಕೇಂದ್ರಗಳಾಗಿ ಬಿಟ್ಟುವು. ನವೋದಯ ಕವಿಗಳನ್ನೊಮ್ಮೆ, ನವ್ಯ ಕವಿಗಳನ್ನೊಮ್ಮೆ, ಅನ್ಯ ಭಾಷಾ ಕವಿಗಳನ್ನೊಮ್ಮೆ ಮನೆಗೆ ಕರೆದು ಅವರ ಹೊಸ ಕವನಗಳನ್ನು ಕೇಳುವುದು, ಅವುಗಳ ಬಗ್ಗೆ ಚರ್ಚೆ ನಡೆಸುವುದು, ವಿ. ಎಂ. ವಿ. ಚಕ್ರವರ್ತಿಗಳಿಂದ 'ಪಂಪಭಾರತ'ದ, 'ಗದಾಯುದ್ಧ'ದ, ಬಾಣಭಟ್ಟನ ಕಾದಂಬರಿಯ ಪಾಠ-ಪ್ರವಚನ ಕೇಳುವುದು, ಕವಿವರ ಬೇಂದ್ರೆಯವರು ಬೆಂಗಳೂರಿಗೆ ಬಂದಾಗಲೆಲ್ಲ ಅವರನ್ನು ಎನ್ಕೆ ಅವರ ಮನೆಗೋ ನನ್ನ ಮನೆಗೋ ಕರೆದು ರಾತ್ರಿಯೆಲ್ಲ ಅವರ ಕವಿತೆಗಳನ್ನು ಕೇಳುವುದು, ಅವರ ಅನೇಕ ವಿಷಯ ಪರಿಣತಿಯ ಪ್ರಯೋಜನ ಪಡೆದುಕೊಳ್ಳುವುದು, ಸ್ಥಳೀಯ ಗಮಕಿಗಳಿಂದ ಕುಮಾರವ್ಯಾಸ ಭಾರತ ವಾಚನ ಕೇಳುವುದು, ಜೋಳದರಾಶಿ ದೊಡ್ಡನಗೌಡರು ಬಂದರೆ ನಿದ್ರೆ ನೀರಡಿಕೆಗಳ ಪರಿವೆಯಿಲ್ಲದೆ ಅವರ ಗಮಕ ಕಲೆಯ ಗಂಗಾಸಲಿಲದಲ್ಲಿ ಅವಗಾಹನ ಮಾಡುವುದು, ರಾವ್‌ಬಹಾದ್ದೂರರ ಹೊಸ ಕಾದಂಬರಿ, 'ಜಡಭರತ'ರ ಹೊಸನಾಟಕ ಕೇಳಿ ಸುಖಿಸುವುದು, ಬೆಂಗಳೂರಿನ ಹಿರಿಯ ಸಾಹಿತಿಗಳ ಮನೆಗಳಿಗೆ ಹೋಗಿ ವಿಷಯಸಂಗ್ರಹ ಮಾಡುವುದು– ಇನ್ನೂ ಏನೇನೋ! ಎನ್ಕೆ ಅವರ ಶ್ರೀಮತಿಯವರಿಗೆ– ನಮ್ಮ 'ವೈನಿ'ಗೆ– ಚಹಾ ಮಾಡಿ ಮಾಡಿ ಬೇಸರ ವಿರುತ್ತಿರಲಿಲ್ಲ. ನಮಗೆ ಹರಟೆ ಹೊಡೆದು ಸಾಕಾಗುತ್ತಿರಲಿಲ್ಲ.

ಅತ್ಯಂತ ಉಲ್ಲಸಿತ ವಾತಾವರಣವಿದ್ದಿತಾಗ. ಕರ್ನಾಟಕ ಏಕೀರಣದ ಕನಸು ನನಸಾಗಿಪ್ಪ ಉಬ್ಬಿನ ಹಬ್ಬದಲ್ಲಿ ನಮ್ಮ ಮೇಲೆ ಬೀಸುತ್ತಲಿದ್ದ ಗಾಳಿಯ ಒಂದೊಂದು ಅಲೆಯೂ ಒಂದೊಂದು ಹಿಗ್ಗನ್ನು, ಹುರುಪನ್ನು, ಉತ್ಸಾಹವನ್ನು ತರುತ್ತಲಿದ್ದ ದಿನಗಳವು. ನಮ್ಮ ಈ ಗೆಳೆಯರ ಬಳಗಕ್ಕಂತೂ ನೆಲದ ಮೇಲೆ ಕಾಲೇ ನಿಲ್ಲುತ್ತಿರಲಿಲ್ಲ. ಬೆಳಗಿನ ವಾಯುವಿಹಾರಕ್ಕೆ ಕೂಡಿಯೇ ಹೋಗುವುದು; ಹೋಗುವಾಗ ಬರುವಾಗ ತುದಿ ಮೊದಲಿಲ್ಲದ, ಎಂದೂ ಮುಗಿಯದ ಹರಟೆ, ಏನೇನೋ ಚರ್ಚೆಗಳು. ಹಿಂದಿರುಗುವ ಮುನ್ನ ಗಾಲ್ಫ್ ಬಯಲಿನಲ್ಲಿ ಹಸರೆಲೆಯ ಮೇಲೆ ಹಸನಾಗಿ ಕುಳಿತು ಸ್ವಲ್ಪ ಹೊತ್ತು ಸ್ವರಚಿತ ಕವಿತೆ, ಕತೆಗಳ ವಾಚನ, ಪರಸ್ಪರ ಪ್ರಶಂಸೆ, 'ಇರಾ' ಮತ್ತು ನನ್ನಿಂದ ಉರ್ದೂ ಹಿಂದೀ ಸಾಹಿತ್ಯಗಳ ರತ್ನಗಳ ಬಗ್ಗೆ ಬಡಿವಾರ, ಆರ್. ಜಿ. ಕುಲಕರ್ಣಿ ಅವರಿಂದ ಅರವಿಂದ ಶ್ರೀಮಾತೆಯರ ಬಗ್ಗೆ ಪ್ರತಿಪಾದನೆ, ಎಸ್ಕೆ ಅವರಿಂದ ಮುಂಬೈ ಅನುಭವಗಳ ವಿವರಣೆ, ಎಂ. ವಿ. ಚಕ್ರವರ್ತಿಗಳಿಂದ ಅಲಂಕಾರಶಾಸ್ತ್ರ, ಕಾವ್ಯಮೀಮಾಂಸೆಗಳನ್ನು ಕುರಿತು ಬೋಧನೆ– ಎಲ್ಲ ಸೊಗಸು.

ಎಸ್ಕೆ ಇದ್ದಲ್ಲಿ ಏನಾದರೂ ಸಾಹಿತ್ಯಕ್ಕೆ ಸಂಬಂಧಿಸಿದುದು ಇರಲೇಬೇಕೆನ್ನುವಷ್ಟರ ಮಟ್ಟಿಗೆ ಅವರು ಹೆಸರಾದರಿಲ್ಲಿ. 'ಆಕಾಶವಾಣಿ'ಗೂ ಎಳೆಯುತ್ತಿದ್ದರು ನಮ್ಮನ್ನು. ಅಲ್ಲಿಯೂ ಸಮಯ ಸಿಕ್ಕಾಗಲೆಲ್ಲ ತಲೆಹರಟೆ! ಅವರು ಧಾರವಾಡಕ್ಕೆ ಹೋದರು; ನಾನು ಮಡಿಕೇರಿ, ಬೆಳಗಾವಿಗಳ ಪಾಳಿ ಮುಗಿಸಿ ಬೆಂಗಳೂರಿನಲ್ಲಿಯೇ ಉಳಿದೆ. ಆದರೂ ಆಗಾಗ ಕೂಡುತ್ತೇವೆ; ನೆನಪಿನ ಬುತ್ತಿ ಬಿಚ್ಚುತ್ತೇವೆ; ಆ ಮಾತು ಈ ಮಾತು ಕೊಚ್ಚುತ್ತೇವೆ. ಆದರೆ ಅಂದಿನ ಆ ದಿನಗಳ ಆನಂದ ಹೇಗೆ ಹಿಂದಿರುಗೀತು?

ಅವರು ನುಂಗಿರುವ ನಂಜಿನ ತುತ್ತುಗಳಿಗೆ ಲೆಕ್ಕವಿಲ್ಲ; ಅವರು ನೀಡಿರುವ ನಗೆಗಳಿಗೂ ಲೆಕ್ಕವಿಲ್ಲ; ಅವರ ಅಭಿಮಾನಿಗಳಿಗೂ ಲೆಕ್ಕವಿಲ್ಲ; ಅವರು ಶತಾಯುಗಳಾಗಲೆಂದು ಹಾರೈಸುವುದರ ಜೊತೆಗೆ ಅವರಿಗೆ ಇನ್ನು ಮುಂದಾದರೂ ನಂಜು ನೆಕ್ಕುವುದು ತಪ್ಪಲೆಂದು ಹಾರೈಸದಿರಲಾರೆ! ಅವರಿಗೆ ಸನ್ಮಾನ ಸಮಾರಂಭ ಜರುಗಲಿರುವುದು ಹೆಮ್ಮೆಯ, ಹಿಗ್ಗಿನ ಸಂಗತಿ ನನಗೆ.

# ಸದ್ದಿಲ್ಲದ ಸಾಹಿತಿ

ಜಯತೀರ್ಥ ರಾಜಪುರೋಹಿತ

ವಿದ್ವತ್ತು ಮತ್ತು ಸೃಜನಶೀಲ ಪ್ರತಿಭೆ ಒಬ್ಬರಲ್ಲೇ ಇರುವುದು ವಿರಳ. ಇವೆರಡೂ ಎನ್ಕೆ ಕುಲಕರ್ಣಿಯವರಲ್ಲಿ ಸುಮಧುರವಾಗಿ ಮೇಳಯಿಸಿವೆ. ಆದರೂ ವಿದ್ವತ್ತಿನ ಅಧೃತೆಯಾಗಲೀ, ಸೃಷ್ಟಿಶೀಲ ಲೇಖಕರ ಸುತ್ತ ಕಾಣುವ ಪ್ರಚಾರವಲಯವಾಗಲೀ, ಎನ್ಕೆಯವರ ಹತ್ತಿರ ಕಾಣಸಿಗುವುದಿಲ್ಲ. ಅದೇನೇ ಇದ್ದರೂ ಸಾಹಿತಿ ಎನ್ಕೆಯವರನ್ನು ಗುರುತಿಸುವಲ್ಲಿ ಸಾಕಷ್ಟು ವಿಳಂಬವಾಗಿರುವುದಂತೂ ನಿಜ.

ನಾವಿನ್ನೂ ವಿದ್ಯಾರ್ಥಿಗಳಾಗಿದ್ದಾಗ ಅಂದರೆ ನಲವತ್ತರ ದಶಕಗಳಲ್ಲಿ ಆಗಲೇ ಎನ್ಕೆಯವರ 'ನಡುಮನೆಯಲ್ಲಿ', 'ಇಲೆಕ್ಷನ್', 'ಬೆಳ್ಳಿಯ ಹಬ್ಬ', 'ಕಾಲಾಯತಸ್ಮೈ ನಮಃ' ಮೊದಲಾದ ಏಕಾಂಕ ನಾಟಕ ಸಂಗ್ರಹಗಳು ಶ್ರೀರಂಗರೊಂದಿಗೆ ಎನ್ಕೆಯವರನ್ನು ನೆನಪಿಗೆ ತರುತ್ತಿದ್ದವು. ನಾಡಹಬ್ಬದ ಅಥವಾ ಕಾಲೇಜುಗಳ ಕಾರ್ಯಕ್ರಮಗಳು ಎನ್ಕೆಯವರ ಪ್ರಹಸನಗಳ ಪ್ರದರ್ಶನವಿಲ್ಲದೇ ಮುಗಿಯುತ್ತಿರಲಿಲ್ಲ.

ಎನ್ಕೆಯವರ "ಸಾವಿನ ಉಡಿಯಲ್ಲಿ", "ಪ್ರೈನಿ" ಮೊದಲಾದ ಯಶಸ್ವೀ ಕೌಟುಂಬಿಕ ಕಾದಂಬರಿಗಳು ತಮ್ಮ ವಾಸ್ತವಿಕತೆ ಮತ್ತು ಮನತಟ್ಟುವ ನಿರೂಪಣಾ ಸಾಮರ್ಥ್ಯಗಳಿಂದ ಹಲವಾರು ವರ್ಷ ನಾಡಿನಲ್ಲಿ ಮನೆಮಾತಾಗಿ ಉಳಿದವು. ಎನ್ಕೆಯವರ ಕಾದಂಬರೀ ಕೃಷಿ, ಇನ್ನಷ್ಟು ಮುಂದುವರೆಯಬೇಕಾಗಿತ್ತೆಂದು ನನ್ನಂತೆ ಅನೇಕರಿಗೆ ಈಗಲೂ ಅನ್ನಿಸುತ್ತಿರಬೇಕು. ಆದರೆ ಬಹುಮುಖಿ ಪ್ರತಿಭೆ (Made of Order) ನಿರ್ದೇಶನಕ್ಕೊಳಪಡುವಂಥದಲ್ಲವಲ್ಲ?

ಹಾಸ್ಯ ಲೇಖನ, ಬಾನುಲಿ ರೂಪಕ, ಹರಟೆ, ಜೀವನಚರಿತ್ರೆ ಎಲ್ಲ ಪ್ರಕಾರಗಳಲ್ಲಿಯೂ ಎನ್ಕೆ ತಮ್ಮ ಮುದ್ರೆಯೊತ್ತಿದ್ದಾರೆ.

ಎನ್ಕೆಯವರ ಮೆಚ್ಚುಗೆಯ ಕವಿ ಕುಮಾರವ್ಯಾಸ. ಅವರು ನಾರಣಪ್ಪ ಸುತ್ತಾಡಿದ ನೆಲದ ಕೂಸೂ ಹೌದು. ಕುಮಾರವ್ಯಾಸನ ಅಧ್ಯಯನದಲ್ಲಿ ವಿದ್ವಾಂಸ ಎನ್ಕೆಯವರನ್ನು ಸಹಜವಾಗಿ ಕಾಣಬಹುದು. ಅಷ್ಟೇ ಅಲ್ಲ ಆಳವಾದ ಗಂಭೀರ ಅಧ್ಯಯನದ ಕೊರತೆಯಿರುವ ಈ ದಿನಗಳಲ್ಲಿ ಸುಮಾರು ೫೦ ವರ್ಷಗಳ ಹಿಂದೆ ಕಂಡುಬರುತ್ತಿದ್ದ

ಪ್ರಾಚೀನ ಸಾಹಿತ್ಯ ಸಂಶೋಧನೆ, ಅಧ್ಯಯನದ ರೀತಿನೀತಿಗಳನ್ನು ಎನ್ಕೆಯವರ ಕಳೆದ ದಶಕದ ಪ್ರಕಟಣೆಗಳಲ್ಲಿ ಕಾಣುತ್ತೇವೆ.

'ಗದುಗಿನ ಗಂಡುಕವಿ' ಮುಂತಾದ ಸಾಹಿತ್ಯ ವಿಮರ್ಶೆಗಳು, ಕುಮಾರವ್ಯಾಸ ನಿಘಂಟು ಮತ್ತು 'ಕನ್ನಡ ವ್ಯಾಸಭಾರತ' ನಮ್ಮ ಖ್ಯಾತನಾಮ ವಿದ್ವಾಂಸರೆನಿಸಿದ್ದ ಡಿ. ಎಲ್. ನರಸಿಂಹಾಚಾರ್ಯ, ತಿ. ನಂ. ಶ್ರೀಕಂಠಯ್ಯ, ಎ. ಆರ್. ಕೃಷ್ಣಶಾಸ್ತ್ರಿಗಳಂತಹವರ ಸಾಲಿನಲ್ಲಿ ಎನ್ಕೆಯವರನ್ನು ನಿಲ್ಲಿಸುತ್ತವೆ.

ವಿದ್ವತ್ತಿನಲ್ಲಿ, ಸಾಹಿತ್ಯರಚನೆಯಲ್ಲಿ ಹಾಗೂ ವಯಸ್ಸಿನಲ್ಲಿ ಎನ್ಕೆಯವರಿಗಿಂತ ಎಷ್ಟೋ ಚಿಕ್ಕವರಾದ ಅನೇಕರಿಗೆ ಎಂಥೆಂಥವೊ ಪ್ರಶಸ್ತಿ, ಮನ್ನಣೆಗಳು ಸಿಕ್ಕಿವೆ. ಸಿಗುತ್ತಲಿವೆ. ಎನ್ಕೆಯವರಂಥ ಸದ್ದಿಲ್ಲದ ಸಾಹಿತಿಗಳನ್ನು ಮರೆಯುವದೇ ಹೆಚ್ಚು. ಸಾಹಿತ್ಯ ರಚನೆಯ ಪ್ರಧಾನ ಉದ್ದೇಶ ಯಾರಾದರೂ ಕೇಳಬೇಕೆಂಬುದಾಗಲೀ ಮನ್ನಿಸಬೇಕೆಂಬುದಾಗಲೀ ಆಗಿರುವುದಿಲ್ಲವೆಂಬುದೂ ನಿಜವೇ. ಆದರೂ ಅವರನ್ನು ಗುರುತಿಸುವ ಸಹೃದಯ ಬಳಗವೂ ಇದ್ದುದು ಸಮಾಧಾನದ ಸಂಗತಿ.

ವಿದ್ಯಾರ್ಥಿದೆಶೆಯಿಂದಲೂ ಎನ್ಕೆಯವರ ಬರಹಗಳನ್ನು ಅವುಗಳ ಸರಳತೆ, ಹಾಸ್ಯಪ್ರಜ್ಞೆ, ನಿಚ್ಚಳವಾದ, ನಿಷ್ಕಲ್ಮಷವಾದ ಪ್ರತಿಪಾದನೆಗಳಿಗಾಗಿ ಮೆಚ್ಚಿಕೊಂಡವರಲ್ಲಿ ನಾನೂ ಒಬ್ಬ. ಆದರೆ ಅವರ ವೈಯಕ್ತಿಕ ಪರಿಚಯ, ಅನಂತರ ಸ್ನೇಹ ಬೆಳೆದುದು ಕಳೆದ ಹದಿನೈದು ವರ್ಷಗಳಲ್ಲಿ.

ಸ್ವಭಾವತಃ ಸ್ನೇಹಜೀವಿಯೂ ಸೌಜನ್ಯಪೂರ್ಣವಾದ ಕೋಮಲ ಮನೋಭೂಮಿಕೆಯವರೂ ಆದ ಎನ್ಕೆ ಇತರರಲ್ಲಿಯೂ ಅಂಥವೇ ತಂತಿಗಳನ್ನು ಮೀಟಿ ಸ್ನೇಹ ನಾದ ಸ್ಪಂದಿಸುವಂತೆ ಮಾಡುತ್ತಾರೆ. ನವುರಾದ, ಕೊಂಕರಿಯದ ತಿಳಿಹಾಸ್ಯದಿಂದ ಎನ್ಕೆ ಒಮ್ಮೆಲೆ ನಮ್ಮ ಮನಸ್ಸಿನ ಒಳಪದರಿನಲ್ಲಿ ಸ್ಥಾನ ಪಡೆಯುತ್ತಾರೆ. ಹತ್ತಿರ ಬಂದವರ ಮನಸ್ಸನ್ನು ಗೆದ್ದುಕೊಳ್ಳುತ್ತಾರೆ, ಆತ್ಮೀಯರಾಗುತ್ತಾರೆ. ಇದಕ್ಕಿಂತ ಹೆಚ್ಚಿನ ಪ್ರಶಸ್ತಿ, ಮನ್ನಣೆ ಯಾವುದಿದೆ?

# ಎನ್ಕೆ ಹರಕೆ ಕಂಡ 'ಅನುರಕ್ತೆ'

ವ್ಯಾಸರಾಯ ಬಲ್ಲಾಳ

ಕನ್ನಡದ ನವೋದಯದ ಬೆಳಕು ಎಲ್ಲ ಕಡೆ ಹರಡಿದ್ದಾಗಲೇ ನಾನು ಓದಿ ತುಂಬ ಮೆಚ್ಚಿಕೊಂಡಿದ್ದ ಕಾದಂಬರಿ, ಎನ್ಕೆಯವರ 'ಸಾವಿನ ಉಡಿಯಲ್ಲಿ'. ಸಂಪ್ರದಾಯಬದ್ಧವಾದ ಸಾಮಾಜಿಕ ವ್ಯವಸ್ಥೆಯ ಒಳಪದರುಗಳಲ್ಲಿ ಅಡಕವಾಗಿರುವ ದುರಂತದ ವಾಸ್ತವ ಪ್ರಜ್ಞೆಯನ್ನು ಸಮರ್ಥ ರೀತಿಯಲ್ಲಿ ಪ್ರಕಟಿಸಿದ್ದ ಈ ಕೌಟುಂಬಿಕ ಕಥಾನಕ, ಅಂದಿನ ಓದುಗರನ್ನು ಗಾಢವಾಗಿ ತಟ್ಟಿದ ಒಂದು ಮಹತ್ವದ ಕೃತಿಯಾಗಿತ್ತು. ಶೈಲಿಯ ರಸಿಕತೆ, ಅನುಭವದ ಪ್ರಾಮಾಣಿಕತೆ, ಅಸಂಬದ್ಧ ಆದರ್ಶಗಳ ತೊಡಕುಗಳಿರದ ನಿರೂಪಣೆ ಇವೆಲ್ಲ ಬೆರೆತು ಕನ್ನಡದ ಕೌಟುಂಬಿಕ ಕಾದಂಬರಿಗಳಿಗೆ ಹೊಸ ದಾರಿ ತೋರಿಸುವ ಭರವಸೆ ಮೂಡಿಸಿದ ಈ ಕಾದಂಬರಿಯನ್ನು ಓದಿದಾಗಲೇ ನಾನು ಕಾದಂಬರಿಕಾರರ ಸಹೃದಯ ವ್ಯಕ್ತಿತ್ವದ ಚಿತ್ರವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡಿದ್ದೆ. ಎನ್ಕೆಯವರ ಸಹೃದಯತೆಯ ಪ್ರತ್ಯಕ್ಷ ಪರಿಚಯ ನನಗಾದದ್ದು ಮುಂದೆ ಎಷ್ಟೋ ವರ್ಷಗಳು ಕಳೆದ ಮೇಲೆ. ನಲವತ್ತರ ದಶಕದ ಉತ್ತರಾರ್ಧದಲ್ಲಿ ಮುಂಬಯಿ ಆಕಾಶವಾಣಿಯಲ್ಲಿ ಕನ್ನಡ ವಿಭಾಗ ಆರಂಭವಾಗಿ, ಸಂಬಂಧಿಸಿದ ಅಧಿಕಾರಿಗಳನ್ನು ಕಾಣಲೆಂದು ಒಮ್ಮೆ ಹೋದಾಗ, ಅಲ್ಲಿ ಎನ್ಕೆಯವರನ್ನೇ ನಾನು ಕಾಣಬೇಕಾದಾಗ ನನಗಾಗಿದ್ದ ಆಶ್ಚರ್ಯ, ಸಂತೋಷ ಅಷ್ಟಿಷ್ಟಲ್ಲ. ನಾನು ಮೆಚ್ಚಿಕೊಂಡಿದ್ದ ಒಬ್ಬ ಕಾದಂಬರಿಕಾರ, ಆಕಾಶವಾಣಿಯ ಕಾರ್ಯಾಲಯದಲ್ಲಿ, ಅಕಸ್ಮಾತ್ತಾಗಿ ಎನಿಸುವಂತೆ ಭೆಟ್ಟಿಯಾಗುತ್ತಾರೆ ಎಂದು ನಾನು ಊಹಿಸಿಕೊಂಡಿರಲೇ ಇಲ್ಲ. ಈ ಆಶ್ಚರ್ಯ, ಸಂತೋಷಗಳನ್ನೆಲ್ಲ ನಾನು ಒಂದೇ ಮಾತಿನಲ್ಲಿ ಆಗ ವ್ಯಕ್ತಪಡಿಸಿದ್ದೆನೆಂದು ನೆನಪು: "ಸಾವಿನ ಉಡಿಯಲ್ಲಿ" ಬರೆದ ಎನ್ಕೆ ನೀವೇನೇ?—ಎಂದು ಆ ಮೊದಲ ಭೆಟ್ಟಿಯ ಚಿತ್ರ ಇನ್ನೂ ನನ್ನ ಮನಸ್ಸಿನಲ್ಲಿ ಹಸುರಾಗಿದೆ. ಅಂದು ಸೋದರ ವಾತ್ಸಲ್ಯದಿಂದ ತೀರ ಅಪರಿಚಿತನಾಗಿದ್ದ ಕಿರಿಯ (ಆತನಕ ಒಂದೇ ಒಂದು ಗ್ರಂಥವನ್ನು ಪ್ರಕಟಿಸಿರದ) ಲೇಖಕನೊಬ್ಬನನ್ನು ಕಂಡು ಮಾತನಾಡಿಸಿ ಸತ್ಕರಿಸಿದ ಎನ್ಕೆಯವರ ಹೃದಯದ ಶ್ರೀಮಂತಿಕೆಯಲ್ಲೇ ದೀರ್ಘಕಾಲದ ನಮ್ಮ ಸ್ನೇಹ ರೂಪುಗೊಂಡಿದೆಯೆಂದು ನಾನು ತಿಳಿದಿದ್ದೇನೆ. ಅವರ ಸ್ನೇಹ, ಸೌಜನ್ಯಗಳ ಲಾಭವನ್ನೂ ಪಡೆದಿದ್ದೇನೆ, ಎಂದೇ ನನ್ನ ಮೊದಲನೆಯ ಕಥಾಸಂಗ್ರಹ 'ಬದುಕಿನ ಆದರ್ಶ' ೧೯೫೦ರಲ್ಲಿ ಪ್ರಕಟವಾದಾಗ ಅದಕ್ಕೆ ಮುನ್ನುಡಿಯ ಹಸಿರು ದೀಪ ತೋರಿಸಲು ನಾನು ಆಶ್ರಯಿಸಿದ್ದು ಎನ್ಕೆಯವರನ್ನೆ.

ಭಾರತದ ಇತಿಹಾಸದಲ್ಲಿ ಮಹತ್ತರವೆನಿಸುವ ಸ್ಥಿತ್ಯಂತರಗಳಾದ ನಲವತ್ತರ ದಶಕದ ಉತ್ತರಾರ್ಧದಲ್ಲಿ ಎನ್ಕೆಯವರು ಮುಂಬಯಿಯಲ್ಲಿದ್ದರು. ಮುಂಬಯಿಗೆ ಅವರನ್ನು ಎಳೆದು ತಂದಿದ್ದುದು ಆಕಾಶವಾಣಿ. ನಾನು ಮುಂಬಯಿಗೆ ಬಂದಿದ್ದುದು ಉದ್ಯೋಗಾರ್ಥಿಯಾಗಿ. ಹಾಗೆಂದೇ ಬಂದಿದ್ದ ಇನ್ನೊಬ್ಬರಾದ ಡಾ. ಹಾವನೂರ ಅವರ ಗೆಳೆತನವೂ ನನಗೆ ಲಭಿಸಿದ್ದು ಅದೇ ಸಮಯದಲ್ಲಿ. ಭಾರತದ ವೈವಿಧ್ಯವನ್ನೂ, ಏಕತೆಯನ್ನೂ ನಾವು ಸ್ಪಷ್ಟವಾಗಿ ಗುರುತಿಸಬಹುದಾದ ಒಂದೇ ಒಂದು ಶಹರ ಮುಂಬಯಿ. ನಲವತ್ತು ವರ್ಷಗಳ ಹಿಂದಿನ ಮುಂಬಯಿ ಇಂದಿನ ಕಾಂಕ್ರೀಟು ಕಟ್ಟಡಗಳ ಕಾಡಾಗಿರಲಿಲ್ಲ, ನಿಜ. ಆದರೆ ಆಗಲೂ ಅದು ಮಹಾನಗರ. ಅವಸರ, ಧಾವಂತ ಈ ಮಹಾಶಹರದ ಜೀವನಕ್ರಮದ ಮುಖ್ಯ ಲಕ್ಷಣಗಳು. ನಾಡಿನ ಬೇರೆ ಬೇರೆ ಭಾಗಗಳಿಂದ ಜೀವನೋಪಾಯಕ್ಕಾಗಿ ಬಂದು ಮುಂಬಯಿಯಲ್ಲಿ ನೆಲೆಸಿರುವ ಜನ, ತಮ್ಮ ಗ್ರಾಮೀಣ ಸಂಸ್ಕೃತಿ, ಕೌಟುಂಬಿಕ ಸಂಸ್ಕಾರಗಳ ಪರೆಗಳನ್ನು ಕಳಚಿಕೊಳ್ಳುತ್ತಿರುವಂತೆಯೇ, ಶಹರದ ಜೀವನಕ್ರಮ ಒತ್ತಾಯಿಸುವ ಹೊಸದೆನಿಸುವ ಸಂಸ್ಕಾರವನ್ನು ರೂಢಿಸಿಕೊಳ್ಳುತ್ತಿದ್ದರು. ಯುದ್ಧೋತ್ತರ ವಿಶ್ವದ ಮೊದಲ ವರ್ಷಗಳಲ್ಲಿ ಮಹಾಯುದ್ಧ ತಂದ ಸಾಮಾಜಿಕ ಬದಲಾವಣೆಗಳನ್ನು ನಾವು ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗಿದ್ದುದು ಮುಂಬಯಿಯಲ್ಲೇ. ದುಡಿಯುವ ಮಹಿಳೆ, ಇದರಿಂದಾಗಿ ಉದ್ಭವಿಸಿದ ದಾಂಪತ್ಯದ ಸಮಸ್ಯೆಗಳು, ಹೊಸ ಹೊಸ ವಿಚಾರಗಳಿಗೆ ಸ್ಪಂದಿಸಿ ಅವುಗಳನ್ನು ಅರಗಿಸಿಕೊಳ್ಳಲು ಪ್ರಯತ್ನಿಸುತ್ತಾ, ಬೆಳೆಯುತ್ತಿದ್ದ ಮಧ್ಯಮ ವರ್ಗ ಸಾಂಪ್ರದಾಯಿಕವೆನಿಸುವ ಮೌಲ್ಯಗಳ ತಿರಸ್ಕಾರ, ಸಾಮಾಜಿಕವಾಗಿ ಹೊಸ ಮಜಲುಗಳತ್ತ ಧ್ಯಾನಿಸುವ ಉತ್ಸಾಹ, ಇವೆಲ್ಲ ಸೂಚಿಸುತ್ತಿದ್ದುದು ಬದಲಾವಣೆಯನ್ನೇ. ಇವೆಲ್ಲ ಅನುಭವಗಳೇ ಎನ್ಕೆಯವರ ಇನ್ನೊಂದು ಕೌಟುಂಬಿಕ ಕಾದಂಬರಿ 'ಎರಡನೆಯ ಸಂಬಂಧ'ಕ್ಕೆ ಪ್ರೇರಣೆ ಕೊಟ್ಟಿರಬಹುದೆಂದು ನನ್ನ ಅನಿಸಿಕೆ. ಈ ಕಾದಂಬರಿಯ ಆರಂಭದ, ಅತ್ಯಂತ ರಸಿಕವೆನಿಸುವ ಒಂದೆರಡು ಪ್ರಕರಣಗಳನ್ನು ಆಗ ನಾವು ಮುಂಬಯಿಯಿಂದ ಹೊರಡಿಸಿದ್ದ 'ನುಡಿ' ಸಾಪ್ತಾಹಿಕದಲ್ಲಿ ಪ್ರಕಟಿಸಿದ್ದೆವು. ರಸಿಕತೆ, ಜೀವನೋತ್ಸಾಹ ಎಂಥ ಗಂಭೀರ ಸನ್ನಿವೇಶದಲ್ಲೂ ನಗುವಿನ ಸುಳುವು ಕಾಣಬಹುದೇ ಎಂದು ಹಾಸ್ಯವನ್ನು ಗುರುತಿಸುವ ಮನೋವೃತ್ತಿ ಎನ್ಕೆಯವರ ವ್ಯಕ್ತಿತ್ವದ ಗುಣ ವಿಶೇಷಗಳೆಂದು ನಾನು ತಿಳಿದಿದ್ದೇನೆ. ಅವರ ನಾಟಕಗಳಲ್ಲಾಗಲೀ, ಹರಟೆಗಳಲ್ಲಾಗಲಿ, ಕಾದಂಬರಿಗಳಲ್ಲಾಗಲೀ ನವುರಾದ ಹಾಸ್ಯ ಹೊನಲಿಸುವ 'ನಗು' ಗಮನಾರ್ಹ ಗುಣ. ಅವರು ಕೌಟುಂಬಿಕ ಹಾಗೂ ಸಾಮಾಜಿಕ ಸಮಸ್ಯೆಗಳನ್ನು ವಿಶ್ಲೇಷಿಸುವಾಗಲೂ ನಾವು ಇದೇ ಮನೋಧರ್ಮವನ್ನು ಕಾಣುತ್ತೇವೆ. 'ಎರಡನೆಯ ಸಂಬಂಧ'ದ ಆರಂಭದ ಪ್ರಕರಣವನ್ನು 'ನುಡಿ'ಯಲ್ಲಿ ಬೆಳಕಿಗೆ ತರಲು ಅನುವು ಮಾಡಿಕೊಟ್ಟ ಎನ್ಕೆ ಮುಂಬಯಿ ಜೀವನದ ವಿವಿಧ ಪದರುಗಳಲ್ಲಿ ಅಡಗಿರುವ ವೈಶಿಷ್ಟ್ಯಗಳನ್ನೆಲ್ಲ ತನ್ನ ರಸಿಕ ಶೈಲಿಯಲ್ಲಿ ಚಿತ್ರಿಸುವ ಉದ್ದೇಶದಿಂದ 'ಇದು ಮುಂಬಯಿ' ಎಂಬ ಸ್ಥಿರಶೀರ್ಷಿಕೆ

ಯುಡಿ ಕೆಲವು ಲೇಖನಗಳನ್ನು 'ನುಡಿ' ಪತ್ರಿಕೆಗಾಗಿ ಬರೆದಿದ್ದರು. ಅವಸರದ ಗತಿಯ ಈ ಮಹಾ ಶಹರದಲ್ಲಿ ಭಾನುವಾರದ ಒಂದು ದಿನದ ಬಿಡುವಿಗಾಗಿ ಹಾತೊರೆಯುವ ಮುಂಬಯಿಯ ನಾಗರಿಕನ ರಜಾ ದಿನದ ಸಂಭ್ರಮವನ್ನು ಬಣ್ಣಿಸಲು ಅದಕ್ಕೆ 'ಭಾಗ್ಯದ ರವಿವಾರ'ವೆಂದು ಅವರು ಹೆಸರಿಸಿದ್ದು ಈಗ ನೆನಪಿಗೆ ಬರುತ್ತಿದೆ. ಈ ಶೀರ್ಷಿಕೆ, ಅವರ ಬರವಣಿಗೆಯ ಸೊಗಸು, ಇವುಗಳ ಆಕರ್ಷಣೆ ಎಷ್ಟು ಪ್ರಭಾವಶಾಲಿಯಾಗಿತ್ತೆಂದರೆ, ಎನ್ಕೆಯವರ ಜತೆಗೆ ನಾನು ಮತ್ತು ಹಾವನೂರ ಅವರು ಸೇರಿಕೊಂಡು, ಮುಂಬಯಿ ಜೀವನದ ಎಲ್ಲ ವೈಶಿಷ್ಟ್ಯಗಳನ್ನು ಕೆಲವು ಲಲಿತ ಪ್ರಬಂಧಗಳಲ್ಲಿ ಸೆರೆಹಿಡಿಯುವ ಗ್ರಂಥವನ್ನೇ ಹೊರತರಬೇಕೆಂದು, ವಿಷಯ ಸೂಚಿಯ ಪಟ್ಟಿ ಮಾಡಿ, ಹಲವು ಪ್ರಕರಣಗಳನ್ನು ಬರೆದು ಮುಗಿಸಿಯೂ ಆಗಿತ್ತು. ಆಗ ಮುಂಬಯಿ ಬಿಟ್ಟು ಧಾರವಾಡಕ್ಕೆ ತೆರಳಲಿದ್ದ ಅವರ ಸ್ನೇಹದ ಸಂಬಂಧವನ್ನು ಗ್ರಂಥ ರೂಪದಲ್ಲಿ ನೆನಪಿಸಬೇಕೆಂದು ನಾವು ಈ ಕೆಲಸಕ್ಕೆ ಕೈ ಹಾಕಿದ್ದರೂ ದುರ್ದೈವವಶಾತ್ ಆ ಗ್ರಂಥ ಹಸ್ತಪ್ರತಿಯ ಅವಸ್ಥೆಗಿಂತ ಮುಂದುವರಿಯಲಿಲ್ಲ.

ನನ್ನ ಮೊದಲನೆಯ ಕಥಾಸಂಗ್ರಹಕ್ಕೆ ಮುನ್ನುಡಿ ಬರೆದು ಹರಸಿದ ಎನ್ಕೆ ನನ್ನ ಮೊದಲನೆಯ ಕಾದಂಬರಿಯನ್ನು ತಿದ್ದಿ ಹೆಸರು ಕೊಟ್ಟು ಹರಸಿದ್ದು ಒಂದು ಯೋಗಾಯೋಗವೆಂದೇ ನಾನು ತಿಳಿದಿದ್ದೇನೆ. ನನ್ನ ಕಾದಂಬರಿ 'ಅನುರಕ್ತೆ'ಯ ಕೆಲವು ಪ್ರಕರಣಗಳು ಧಾರಾವಾಹಿಯಾಗಿ ಮೊದಲು ಪ್ರಕಟವಾದದ್ದು ಮುಂಬಯಿಯ ಸಾಪ್ತಾಹಿಕ 'ನುಡಿ'ಯಲ್ಲಿ. 'ಕನವರಿಸದ ಕುಂಕುಮ' ಎಂದು ನಾನು ಕಾದಂಬರಿಗೆ ಹೆಸರುಕೊಟ್ಟಿದ್ದೆ. 'ನುಡಿ' ನಿಂತು ಕೆಲವು ತಿಂಗಳು ಕಳೆದ ಮೇಲೆ, ಕಾದಂಬರಿಯ ಹಸ್ತಪ್ರತಿಯನ್ನು ಧಾರವಾಡದಲ್ಲಿ ತುಂಬ ಸಂತೋಷದಿಂದ ಓದಿ, ಹಲವಾರು ಉಪಯುಕ್ತ ಸೂಚನೆಗಳಿಂದ ತಿದ್ದಿ 'ಅನುರಕ್ತೆ' ಎಂಬ ಹೆಸರು ಕಾದಂಬರಿಗೆ ಅನ್ವರ್ಥವಾಗಬಹುದು ಎಂದು ಸೂಚಿಸಿದವರು ಎನ್ಕೆ. ಮುಂದೆ ಎಷ್ಟೋ ವರ್ಷ ಕಳೆದ ಮೇಲೆ,ಧಾರವಾಡ ಆಕಾಶವಾಣಿಯವರು ಈ ಕಾದಂಬರಿಯನ್ನು ರೇಡಿಯೊದ ಮೂಲಕ ಪ್ರಸಾರ ಮಾಡಲು ನಿರ್ಧರಿಸಿದಾಗ, ತುಂಬ ಪ್ರೀತಿಯಿಂದ ಕಾದಂಬರಿಯ ರೇಡಿಯೋ ರೂಪಾಂತರ ಮಾಡಿಕೊಟ್ಟದ್ದೂ ಎನ್ಕೆಯವರೆ.

ಎನ್ಕೆಯವರು ಏಕಾಂಕ ನಾಟಕಗಳ ರಚನೆಯಲ್ಲಿ ಸಿದ್ಧಹಸ್ತರೆಂದು ಪ್ರಸಿದ್ಧರಾಗಿದ್ದಾರೆ, ಕನ್ನಡದ ಹರಟೆಗಳಿಗೆ ಹೊಸ ರೂಪ ಕೊಟ್ಟಿದ್ದಾರೆ, ಪ್ರಭಾವಶಾಲಿಯಾದ ಕೌಟುಂಬಿಕ ಕಾದಂಬರಿಗಳನ್ನು ಬರೆದು ಕಾದಂಬರಿಕಾರರಾಗಿ ಮೆರೆದಿದ್ದಾರೆ, ಕುಮಾರವ್ಯಾಸನಂಥ ಕವಿಗಳ ಸಾರ ಸತ್ವವನ್ನು ಕನ್ನಡಿಗರಿಗೆ ಉಣಬಡಿಸಿದ್ದಾರೆ, ರೇಡಿಯೋ ನಾಟಕಗಳ ರಚನೆಯಲ್ಲಿ ಹೊಸ ದಾರಿ ತೋರಿಸಿದ್ದಾರೆ, ಪ್ರಸಾರ ಮಾಧ್ಯಮಗಳ ಕುರಿತು ಅಧಿಕಾರವಾಣಿಯಿಂದ ಮಾತನಾಡಬಲ್ಲವರಾಗಿದ್ದಾರೆ. ಅಷ್ಟೆಯೇ ! ಇವೆಲ್ಲವನ್ನೂ ಮೀರಿಸುವ ಹೃದಯವೈಶಾಲ್ಯವನ್ನು ಅವರು ಬೆಳೆಸಿಕೊಂಡಿದ್ದಾರೆ. ಮುಂಬಯಿಯಲ್ಲಿ

ನನಗೆ ದೊರಕಿದ್ದು ಕೆಲವೇ ವರ್ಷಗಳ ಸಖ್ಯವಾದರೂ, ಮುಂದೆ ಅವರು ಮುಂಬಯಿಗೆ ದೂರವಾದ ಧಾರವಾಡ, ಬೆಂಗಳೂರುಗಳನ್ನು ಆಶ್ರಯಿಸಿದರೂ, ಅವರ ಹೃದಯ ವೈಶಾಲ್ಯದ ಪರಿಚಯ ನನಗೆ ಕಾಲಕಾಲಕ್ಕೂ ಆಗುತ್ತಲೇ ಇದೆ. ಎಸ್ಕೆಯವರೊಂದಿಗೆ ಪತ್ರವ್ಯವಹಾರ ನಡೆಸಿದವರಿಗೆಲ್ಲ ಅವರು ತಮ್ಮ ಎಲ್ಲ ಪತ್ರಗಳಲ್ಲೂ ತುಂಬುವ ಪ್ರೀತಿಯ ಪರಿಚಯವಿರಲೇಬೇಕು. ನಲ್ಮೆ, ಒಲುಮೆ, ಒಲವು, ಅಂತಃಕರಣ ಇವೆಲ್ಲ ಶಬ್ದಗಳನ್ನು ಬಳಸುವ ಅವರ ತತ್ತ್ವಗಳು ಯಾವಾಗಲೂ ಸೃಷ್ಟಿಸುವುದು ಒಂದು ಆತ್ಮೀಯತೆಯ ಸೇತುವೆ. ಈ ಆತ್ಮೀಯತೆಯೆ, ಸಹೃದಯತೆಯೆ, ಅವರ ಜೀವನಕ್ಕೂ, ಸಾಹಿತ್ಯಕ್ಕೂ ಕನ್ನಡಿ ಹಿಡಿಯುವಂತಿವೆಯೆಂದು ನಾನು ತಿಳಿದಿದ್ದೇನೆ: ಜೀವನದಲ್ಲಿ ಅತ್ಯಂತ ಮಧುರವೆನಿಸುವ ಬಾಂಧವ್ಯಗಳನ್ನು ಬೆಸೆಯಲು ಇಂಥ ಹೃದಯವಂತಿಕೆ ಸಹಕಾರಿಯಾಗುತ್ತದೆ. ಸಾಹಿತ್ಯ ಕ್ಷೇತ್ರದಲ್ಲಿ ಇಂಥ ಹೃದಯವಂತಿಕೆಯೇ ಕೆಲವೊಮ್ಮೆ ಹೆಚ್ಚು ನಿಷ್ಠುರವೆನಿಸುವ ವಾಸ್ತವಾಂಶಗಳ ಅಭಿವ್ಯಕ್ತಿಗೆ ತಡೆ ತರಬಹುದೇ ಎಂಬ ಸಂದೇಹವನ್ನೂ ತಂದೊಡ್ಡುವುದಿದೆ.

ಹಿರಿಯ ಕವಿ ಈಶ್ವರ ಸಣಕಲ್ಲ ಅವರು ತನ್ನ ಒಂದು ಪದ್ಯದಲ್ಲಿ ಹಾಡಿದ್ದ 'ಜಗವೆಲ್ಲ ನಗುತಿರಲಿ, ಜಗದಳಲು ಎನಗಿರಲಿ' ಎಂಬ ಸೊಲ್ಲನ್ನು ನೆನಪಿಸಿಕೊಂಡಾಗ ನನಗೆ ಎಸ್ಕೆಯವರ ಚಿತ್ರ ಕಣ್ಣ ಮುಂದೆ ಬರುತ್ತದೆ. ಎಪ್ಪತ್ತು ತುಂಬಿದ ಈ ಹಿರಿಯ ಲೇಖಕರ ಕಳೆದ ಮೂರು ನಾಲ್ಕು ದಶಕಗಳ ಸಖ್ಯ, ನನ್ನ ಪಾಲಿಗೆ ಅತ್ಯಂತ ಅಮೂಲ್ಯ ಸಂಪತ್ತು. ಅವರ ಸ್ನೇಹವನ್ನೂ, ಮಾರ್ಗದರ್ಶನವನ್ನೂ ಗೌರವದಿಂದ ನೆನೆಯಬೇಕಾದ ಈ ಸಂದರ್ಭದಲ್ಲಿ ಒಲುಮೆಯ ಹಿರಿಯಣ್ಣ ಎಸ್ಕೆಯವರಿಗೆ ನೂರು ವಸಂತಗಳ ಸಂಭ್ರಮವನ್ನೂ, ಇವರ ಕೃತಿಗಳಿಗೆ ಮತ್ತಿನ್ನೂರು ವಸಂತಗಳ ಸಂಭ್ರಮವನ್ನೂ ಕೋರುವುದೇ ಗೌರವದ ಪ್ರಣಾಮವಾಗದೆ !

# ಸರಳ ನಗೆಯು ಅರಳಿದ ಹೂವು

## ಕೃಷ್ಣಮೂರ್ತಿ ಪುರಾಣಿಕ

ಮಿತ್ರ ಎಸ್. ಕೆ. ಕುಲಕರ್ಣಿ ಹಾಗೂ ನಾನು, ಇಬ್ಬರೂ ಕರ್ನಾಟಕದ ಕಾಲೇಜದ ವಿದ್ಯಾರ್ಥಿಗಳು. ೧೯೩೫ರವರೆಗೆ ನಾವು ಒಂದೇ ಕಾಲೇಜದಲ್ಲಿದ್ದರೂ ಪರಸ್ಪರ ಪರಿಚಯವಾಗಿರಲಿಲ್ಲ. ನಾನು ಹಾಸ್ಟೆಲ್‌ದಲ್ಲಿದ್ದುಕೊಂಡು ಕಾಲೇಜಕ್ಕೆ ಹೋಗುತ್ತಿದ್ದೆ; ಇವರು ಧಾರವಾಡ ಊರೊಳಗಿಂದ ಬರುತ್ತಿದ್ದರು. ಹೀಗಾಗಿ ಸಂಪರ್ಕಕ್ಕೆ ಅವಕಾಶವಿರಲಿಲ್ಲ.

ನಾವಿಬ್ಬರೂ ಅತ್ಯಂತ ಸಮೀಪಕ್ಕೆ ಬರಲು 'ಕನ್ನಡ'ವೇ ಕಾರಣವಾಯಿತು. ಪ್ರೊಫೆಸರ್ ಅ. ತು. ಸಾಸನೂರರ ಆನರ್ಸ ವಿದ್ಯಾರ್ಥಿಗಳಾಗಿ ಪರಸ್ಪರ ಪರಿಚಯವಾಯಿತು. ಇದು ಕ್ಲಾಸ ರೂಮ ಪರಿಚಯ. ಈ ಪರಿಚಯ ಬಹಳಷ್ಟು ದಿನ 'ಹೆಲೋ! ಹೆಲೋ!...ನಮಸ್ಕಾರ್ರೀ !'ಗೆ ಪರಿಮಿತವಾಗಿತ್ತು.

ಅವರು ರಚಿಸಿ ರಂಗಭೂಮಿಯ ಮೇಲೆ ತಂದ 'ಇಲೆಕ್ಶನ್' ನಾಟಕದಿಂದ ಇವರು ಸಮಗ್ರಕಾಲೇಜಕ್ಕೆ ಸುಪರಿಚಿತರಾದರು. ಮಿಂಚಿನಂತಹ ಸಂಭಾಷಣೆ, ಕಾಲೇಜ ಜೀವನದ ಯಥಾರ್ಥ ಚಿತ್ರಣ, ಧಾರವಾಡದ ಆಡುಮಾತು, ಸತ್ವಪೂರ್ಣವಾದ ಕಥೆ ಇವುಗಳಿಂದ ಕೂಡಿದ 'ಇಲೆಕ್ಶನ್' ಕಾಲೇಜದ ಯುವಕ–ಯುವತಿಯರನ್ನೆಲ್ಲ ಮರುಳುಮಾಡಿತು.

ಈ ವೇಳೆಗೆ ನಾನು ಕಾಲೇಜದ 'ಕವಿ'ಯೆಂದು ಪರಿಚಿತವಾಗಿದ್ದೆ. ಗುರುವರ್ಯ ಬೇಂದ್ರೆಯವರು ನಾಟಕದಲ್ಲಿಯ ಒಂದು ಪಾತ್ರಚಿತ್ರಣ (ಕವಿ)ವನ್ನು ನೋಡಿ ಅದು ನನ್ನನ್ನೇ ಕುರಿತು ಇರುವದೇನೋ ಎಂದು ಶಂಕಿಸಿದರು. ಅನೇಕ ವಿದ್ಯಾರ್ಥಿನಿ ಗೆಳತಿಯರು ನನ್ನನ್ನು ಆಮೇಲೆ 'ಇಲೆಕ್ಶನ್ ಕವಿ' ಎನ್ನಹತ್ತಿದರು. ಬಹುಶಃ ಈ ಸಂಗತಿಗಳು ಎಸ್ಕೆ ಅವರಿಗೆ ಗೊತ್ತಿರಲಿಕ್ಕಿಲ್ಲ. ಹಾಸ್ಟೆಲ್ಲದಲ್ಲಿ ಅವರ ಹೆಸರು ಸುಪ್ರಸಿದ್ಧವಾಯಿತು.

ನಾನು ಎಸ್ಕೆ ಪರಿಚಯಕ್ಕಾಗಿ ಹಾತೊರೆಯತೊಡಗಿದೆ. ಒಂದೆರಡು ಸಲ ಅವರ ಮನೆಗೂ ಹೋಗಿ ಬಂದೆ. ಆತ್ಮೀಯತೆ ಬೆಳೆಯತೊಡಗಿತು. ಸಾಹಿತ್ಯಾರಾಧನೆಯಲ್ಲಿ ನಾವಿಬ್ಬರೂ ಕನ್ನಡ ತಾಯಿಯ ಪೂಜಾರಿಗಳಾದೆವು.

೧೯೩೯–೪೦ರಲ್ಲಿ ನಾವು ಮತ್ತೊಮ್ಮೆ ಬೆಳಗಾವಿಯಲ್ಲಿ ಎಸ್. ಟಿ. ಕಾಲೇಜದಲ್ಲಿ ತರಬೇತಿಗಾಗಿ ಕೂಡಿದೆವು. ಕರ್ನಾಟಕ ಕಾಲೇಜದಲ್ಲಿ ಅ. ತು. ಸಾಸನೂರರು ನಮ

ಗೆಲ್ಲ ಸ್ಫೂರ್ತಿಯ ಸೆಲೆಯಾಗಿದ್ದರು. ಈ ಕಾಲೇಜಿನಲ್ಲಿ ಆರ್. ಎ. ಕುಲಕರ್ಣಿಯವರು ನಮ್ಮ ಕನ್ನಡ ಪಾಠಗಳ ನಿರ್ದೇಶಕರೂ, ಕನ್ನಡ ಅಭ್ಯಾಸದ ಮಾರ್ಗದರ್ಶಕರೂ ಮಾತ್ರ ಆಗಿದ್ದರು. ನಮ್ಮ ಸುದೈವದಿಂದ ಇಂದು ಪ್ರಸಿದ್ಧರಾದ ಸಾಹಿತಿಗಳೆಲ್ಲ ಒಂದೆಡೆಗೆ ಕೂಡಿದ್ದೆವು. ನರೇಗಲ್ ಪ್ರಹ್ಲಾದರಾಯರು, ಜಿ. ಕೆ. ಹೆಗಡೆ, ಉಣಕಲ್, ಎಸ್. ಆರ್. ಮಳಗಿ, ಹಿರೇಮಠ, ಹುಯಿಲಗೋಳ, ಬಸುಪಟ್ಟದ ಸರಿಯಾದ ಮಾರ್ಗದರ್ಶನ, ಸ್ಫೂರ್ತಿ ಸಿಕ್ಕಿದ್ದರೆ ನಾವು ಒಬ್ಬೊಬ್ಬರು ಒಂದೊಂದು ಶಿಕ್ಷಣಕ್ಕೆ ಸಂಬಂಧವಾದ ಪುಸ್ತಕಗಳನ್ನು ಬರೆಯಲು ಸಾಧ್ಯವಿತ್ತು. ಆದರೆ ನಾವು ನಿರ್ಜೀವ ಪಾಠ ಪ್ರವಚನದ ಯಾಂತ್ರಿಕ ಗೊಂಬೆಗಳಾಗಿ ಪರಿಣಮಿಸಿದೆವು. ಈ ಮಾತನ್ನು ನಾನು ಎನ್ಕೆ ಮುಂದೆ ತೋಡಿಕೊಂಡೆ. ಇವರು ಈ ಕೆಲಸವನ್ನು ಆಮೇಲೆ ಮಾಡಿದರೆಂದು ನನಗೆ ಗೊತ್ತು.

ಎನ್ಕೆ ಅವರಿನ್ನೂ ಧಾರವಾಡದಲ್ಲಿದ್ದಂತೆಯೇ ಬೆಳಗಾವಿಯಲ್ಲಿಯೂ ಇದ್ದರು. ಅದೇ ಸರಳ ಉಡುಗೆ ತೊಡುಗೆ. ಅದೇ ಸರಳ, ಮಾಸದ ಮುಗುಳು ನಗೆ. ಆರ್ಟ್ಸ ಕಾಲೇಜದ ನಗೆಗೂ, ಈ ತರಬೇತೀ ಕಾಲೇಜಿನ ನಗೆಗೂ ಬಹಳ ಅಂತರವಿತ್ತು.

ಈಗ ನಗೆಯನ್ನು ಎಳೆದು ತರಬೇಕಾಗುತ್ತಿತ್ತು. ಆಗ 'ನಗೆಯೊಂದು ಬಗೆಯಾಟ' ವಾಗಿ ಹರುಷದ ತಾರುಣ್ಯದ ಕಾರಂಜಿಯನ್ನು ಪುಟಿಸುತ್ತಿತ್ತು ನಗೆಯ ಹಳ್ಳ ಹೊಸ ಲಾದ ಕಾಲವದು.

ಎನ್ಕೆ, ಈಗ 'ಜೀವನದ ಕಟು ಮಧುರ ಆಖ್ಯಾನ'ವನ್ನು ಅನುಭವಿಸಿ ಆ ಅನುಭವದ ಅಭಿವ್ಯಕ್ತಿ ಮಾಡತೊಡಗಿದುದನ್ನು ನಾನು ಕಂಡುಕೊಂಡೆ. ಅವರ ನಗೆಯ ಆಳದಲ್ಲಿ ಹುದುಗಿಕೊಂಡು ಕಣ್ಣು ರೆಪ್ಪೆ ಬಡೆಯುತ್ತಿರುವ ದುಗುಡ ಅವರ ಸಾಹಿತ್ಯದಲ್ಲಿ ಕಣ್ಣು ಬಿಡುತ್ತಿರುವದನ್ನು ಕಂಡುಕೊಂಡೆ. ಕುಟುಂಬದ ಕಣ್ಣಿನ ಹೊರ ಮಂಜು ಹೃದಯದ ಆಳಕ್ಕಿಳಿದು ಸಾಹಿತ್ಯ ತರಂಗಗಳನ್ನೆಬ್ಬಿಸುತ್ತಿರುವದನ್ನು ನಾನು ಕಾಣದೆ ಇರಲಿಲ್ಲ. ಬೆಂದು ಬೇಂದ್ರೆಯಾದಂತೆ, ಎನ್ಕೆ ನೊಂದು ನಾನಿಯಾದರು.

ಆಕಾಶವಾಣಿಯಲ್ಲಿ ದಿನದಿನವೂ ಕೇಳುತ್ತಿರುವ ನಗೆಯ ಅಲೆಗಳನ್ನೆಬ್ಬಿಸುತ್ತಿರುವ ಇವರ ವಾಣಿಯ ಹಿಂದೆ ಜೀವನದ ರಸೋಲ್ಲಾಸವನ್ನು ಚಿಮ್ಮುತ್ತಿರುವ ಸೋಗಿನ ನವಿಲು ಕುಣಿಯುತ್ತಿತ್ತು. ಈ ಸಮರ್ಥ ಸೋಗಿನಲ್ಲಿಯೇ ಸಾಹಿತಿಯ ಘನತೆ, ಸಾಹಿತಿಯ ಒಳಗುದಿ ಸಾಮಾನ್ಯರಿಗೆ ಮನರಂಜನೆ, ಮನಃಪರಿಪಾಕವನ್ನೂ ಒದಗಿಸುವ ಸಾಮರ್ಥ್ಯದಲ್ಲಿಯೇ ಎನ್ಕೆ ಸಾಮರ್ಥ್ಯ. ಕನ್ನಡ ನಾಡು ಈ 'ನಾನೀಕಾಕಾ'ನನ್ನು ಮರೆಯಲು ಸಾಧ್ಯವೇ ?

ಶಿಕ್ಷಕರಾಗಿ, ಸಂಪಾದಕರಾಗಿ (ವಸಂತ ಮಾಸಪತ್ರಿಕೆ), ಕವಿಗಳಾಗಿ, ಕಾದಂಬರಿಕಾರರಾಗಿ, ನಾಟಕಕಾರರಾಗಿ, ಏಕಾಂಕ ರಚನೆಯಲ್ಲಿ ಎತ್ತಿದ ಕೈಯಾಗಿ, ರೇಡಿಯೋ

ಸಾಹಿತ್ಯಕ್ಕೆ ಅಮೋಘ ಸೇವೆ ಸಲ್ಲಿಸುವವರಾಗಿ ಎನ್ಕೆ ತಮ್ಮ ಸಾಹಿತ್ಯ ಚಟುವಟಿಕೆಗಳನ್ನು ಹಲವು ಹತ್ತು ರೀತಿಯಲ್ಲಿ ತೋರಿಸಿದ್ದಾರೆ.

ಕನ್ನಡ ಸಾಹಿತ್ಯಲೋಕಕ್ಕೆ ಇವರು ಸುಪರಿಚಿತರಾದರೂ ಸಾಹಿತ್ಯ ರಾಜಕಾರಣದಲ್ಲಿ ಇವರು ದೂರವಿದ್ದುದರಿಂದ ಬರಬೇಕಾದ, ಅರ್ಹವಾದ, ಮಾನಮರ್ಯಾದೆಗಳು ತಡವಾಗಿ ಬಂದವು. ಇದು ಎನ್ಕೆ ತಪ್ಪಲ್ಲ.

ಗೋಕಾಕದ ಒಂದು ಕಾರ್ಯಕ್ರಮಕ್ಕೆ ಒಂದು ಹಬ್ಬದಂದು ಬಂದ ಇವರಿಗೆ ನಾನು ನನ್ನ ಮನೆಯಲ್ಲಿಯೇ ಸನ್ಮಾನ ಮಾಡಿ ಗಂಧ ಮಾಲೆಯನ್ನು ಕೊರಳಿಗೆ ತೊಡಿಸಿದಾಗ ಅವರ ಕಣ್ಣು ತುಂಬಿ ನಿಂತ ದೃಶ್ಯವನ್ನು ನಾನು ಈಗಲೂ ನೆನೆಯುತ್ತೇನೆ. 'ಕುಮಾರವ್ಯಾಸ'ನ ಅಭ್ಯಾಸದಿಂದ ಇವರು 'ಕರ್ಮಣ್ಯೇ ವಾಧಿಕಾರಸ್ತೇ ಮಾಫಲೇಷು ಕದಾಚನ'ವೆನ್ನುವ ತತ್ವಕ್ಕೆ ಬದ್ಧರು. ಈ ಪಕ್ವ ವಯಸ್ಸಿನಲ್ಲಿ ಬರುತ್ತಿರುವ ಮಾನಸನ್ಮಾನಗಳೆಲ್ಲ ಅವರು ಬಯಸಿದವುಗಳಲ್ಲ. ನಾಡು ಅಪೇಕ್ಷಿಪಟ್ಟಿತು.

ಎನ್ಕೆ ತಾವಾಗಿಯೇ ಪರಿಚಯ ಮಾಡಿಕೊಂಡು ಮೇಲೆ ಬೀಳುವ ವ್ಯಕ್ತಿಯಲ್ಲ. ಒಮ್ಮೆ ಪರಿಚಯವಾದ ಮೇಲೆ ಅದು ದೃಢವಾಗಿ ನಿಲ್ಲುವಂತೆ ನೋಡಿಕೊಳ್ಳುವದು ಇವರ ಜಾಯಮಾನ. ನನಗೂ ಅವರಿಗೂ ನಾಲ್ಕಾರು ತಿಂಗಳು, ಒಮ್ಮೊಮ್ಮೆ ವರುಷ ಕೂಡ ಭೆಟ್ಟಿಯಾಗುವದಿಲ್ಲ; ಆದರೇನು ? ನಮ್ಮ ಸ್ನೇಹ ಚಿರನೂತನ.

ಹುಬ್ಬಳ್ಳಿ ವಾಣಿಜ್ಯ ಹಾಲಿನಲ್ಲಿ ನನ್ನ ಷಷ್ಟ್ಯಬ್ದಿ ಪೂರ್ತಿ ಸಮಾರಂಭವು ನೆರವೇರಿತು. ನಾಡಿನ ಗಣ್ಯ ಸಾಹಿತಿಗಳಲ್ಲಿ ಶ್ರೇಷ್ಠರು ಈ ಸಮಾರಂಭದಲ್ಲಿ ಪಾಲುಗೊಂಡಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾದ ದೆ. ಜವರೇಗೌಡರು ಅಧ್ಯಕ್ಷರು, ಕರ್ನಾಟಕ ಯುನಿವ್ಹರ್ಸಿಟಿಯ ಕುಲಪತಿಗಳಾದ ಡಾ. ಆರ್. ಸಿ. ಹಿರೇಮಠರು ಸ್ವಾಗತಾಧ್ಯಕ್ಷರು. ಅಂದಿನ ವಿಚಾರ ಸಂಕಿರ್ಣದಲ್ಲಿ ಎನ್ಕೆ ಆಡಿದ ಮಾತುಗಳು ಚಿರಸ್ಮರಣೀಯವಾಗಿದ್ದವು. ನನ್ನ ಕಾದಂಬರಿಗಳ ಸಿಂಹಾವಲೋಕನ ಮಾಡಿ, ನನ್ನ ಸ್ನೇಹ ಸ್ವಭಾವವನ್ನು ಸೋದಾಹರಣವಾಗಿ ವಿವರಿಸಿ "ಕೃಷ್ಣಮೂರ್ತಿಗಳು ಗದ್ಯ-ಪದ್ಯಗಳ ಸವ್ಯಸಾಚಿ" ಎಂದಾಗ ಡಾ. ಬೆಟಗೇರಿ ಕೃಷ್ಣಶರ್ಮರು, ಪುಣೇಕರ ಅವರು ಅವರತ್ತಲೇ ನೋಡುತ್ತಿದ್ದರು. ಹೃದಯ ತುಂಬಿ ನಿಸ್ಸಂಕೋಚದಿಂದ ಆಡಿದ ಆ ಮಾತುಗಳನ್ನು ಎಲ್ಲರೂ ಮೆಚ್ಚಿಕೊಂಡರು.

ಇಂಥದೇ ಇನ್ನೊಂದು ಸಂದರ್ಭ ನೆನಪಾಗುತ್ತದೆ 'ಮಯೂರ' ಸಂಪಾದಕರಾದ ಎಂ. ಬಿ. ಸಿಂಗ್ ಅವರು ಎನ್ಕೆ ಅವರಿಗೆ ನನ್ನನ್ನು ಸಂದರ್ಶಿಸಿ ಲೇಖನವೊಂದನ್ನು ಸಿದ್ಧಪಡಿಸಿ ಕಳಿಸಲು ಹೇಳಿದ್ದರಂತೆ. ಸಂದರ್ಶನ ಅವರ ಧಾರವಾಡದ ಮನೆಯಲ್ಲಿಯೇ ನಡೆಯಿತು. 'ಮಯೂರ' (೧೯೭೮-ಜುಲೈ) ಸಂಚಿಕೆಯಲ್ಲಿ ಅವರು ಹೃದಯ ತುಂಬಿ ಹೇಳಿದ ಮಾತುಗಳಲ್ಲಿ ಒಂದೆರಡು ವಾಕ್ಯಗಳು ಹೀಗಿವೆ. "...ಸಂಖ್ಯೆ ಗಾತ್ರದಿಂದ ಹೆಮ್ಮೆ ಪಡುವ ಸಾಹಿತ್ಯವಲ್ಲ ಪ್ರಾಣಾಂತಕರದು. ಸತ್ವ ಸಂಖ್ಯೆ ಎರಡೂ ಸೇರಿಯೇ ಅವ

ರನ್ನು ಜನಪ್ರಿಯವಾಗಿಸಿದೆ..." ನನ್ನ ಅಂದಿನವರೆಗೆ ಪ್ರಕಟವಾದ ಎಲ್ಲ ಕಾದಂಬರಿ, ಕವನ ಸಂಗ್ರಹ, ಸರಳ ರಗಳೆಯ ನಾಟಕಗಳು ಇವುಗಳ ಸಮಗ್ರ ಅಧ್ಯಯನದಿಂದ ಮೂಡಿ ಬಂದ ಮಾತುಗಳು.

ಎನ್ಕೆ ಸತತಾಭ್ಯಾಸಿ. ಶ್ರದ್ಧಾವಂತ ಕೆಲಸಗಾರರು. ಹೇಳಬೇಕಾದುದನ್ನು ಸರ್ವ ಸಿದ್ಧತೆ ಮಾಡಿಕೊಂಡೇ ಹೇಳುತ್ತಾರೆ. ಅವರು ಹರಟೆ ಹೊಡೆಯುತ್ತಾರೆ, ಆದರೆ ಅದು ಹಾಳ ಹರಟೆಯಲ್ಲ. ಗುರುವರ್ಯ ಬೇಂದ್ರೆ ಅವರ ಬಗ್ಗೆ ನಾವು ಕೂಡಿದಾಗೆಲ್ಲ 'ಹರಟೆ' ಹೊಡೆಯುತ್ತಿದ್ದೆವು. ಆದರೆ ಆ ಹರಟೆಯು ಕೊನೆಗೆ · ಬೇಂದ್ರೆ ವ್ಯಕ್ತಿತ್ವದ ಮುಖ ಸ್ಫುಟವಾಗಿ ನಿಲ್ಲುತ್ತಿತ್ತು.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಜಿ. ನಾರಾಯಣ ಅವರು ಎನ್ಕೆ ಅವರಿಗೆ ನಾಡಿನ ಗಣ್ಯ ಸಾಹಿತಿಗಳ ಧ್ವನಿಮುದ್ರಣ ಮಾಡಿಕೊಳ್ಳಬೇಕೆಂದು ಅವರಿಗೆ ಕೆಲಸ ವಹಿಸಿಕೊಟ್ಟರು. ಎನ್ಕೆ ಅವರಲ್ಲಿರುವ ಸಾಮರ್ಥ್ಯವನ್ನು ಅರಿತೇ ಜಿ. ನಾರಾಯಣ ಅವರು ಈ ಶ್ರದ್ಧಾವಂತನಿಗೆ ಈ ಕಾರ್ಯವನ್ನು ವಹಿಸಿಕೊಟ್ಟರೇನೋ! ಭಾಗವತ ಅವರೊಡನೆ ಗೋಕಾಕಕ್ಕೆ ಬಂದೇ ಬಿಟ್ಟರು.

ಕೆಲಸ ಮುಗಿದ ಕೂಡಲೇ ಹೊರಟೇ ಬಿಟ್ಟರು. ವಿಶ್ರಾಂತಿ ಅವರಿಗೆ ಬೇಕಾಗಿರ ಲಿಲ್ಲ. ನಿಗದಿಯಾದ ಸಮಯದಲ್ಲಿ ಕೆಲಸವನ್ನು ಮುಗಿಸಿಯೇ ತೀರುವ ಹಟ ಅವರದು. ಆ ದಿನ ಯಾವುದೋ ನಿಮಿತ್ತವಾಗಿ ಮಿಂಚಿನ ಮುಷ್ಕರ ನಡೆದದ್ದರಿಂದ ಬಸ್ಸುಗಳ ಸಂಚಾರ ನಿಂತು ಹೋಯಿತು. ಹೋಗಬೇಕಾದರೆ ಗೋಕಾಕದಿಂದ ಅರ್ಧ ಮೈಲಿ ಹೋದ ಬಳಿಕ ಕೂಡುವ ಹೆದ್ದಾರಿಗೆ ಹೋಗಬೇಕು. ಎನ್ಕೆ ಇದಕ್ಕೂ ಸಿದ್ಧರಾದರು. ಇಷ್ಟು ಕರ್ತವ್ಯ ಜಾಗ್ರತೆ.

ಇನ್ನೊಂದು ಸಂದರ್ಭದಲ್ಲಿ ಅವರು ನನ್ನನ್ನು ಬೆಂಗಳೂರಿಗೆ ಆಕಾಶವಾಣಿ ಕಾರ್ಯ ಕ್ರಮಕ್ಕಾಗಿ ಕರೆಸಿಕೊಂಡು ಸತ್ಕರಿಸಿದ ಸಂದರ್ಭ ಅಪೂರ್ವವಾದುದು-ರಾಜರತ್ನಂ ಅವರು ಎನ್ಕೆ ಕಡೆ ಹೊರಳಿ "ಓ ! ನೀವು ನನ್ನನ್ನೂ ಮಾತಾಡಿಸುವದುಂಟೇ ? ಸ್ನೇಹಿತ ಪುರಾಣಿಕರು ಬಂದಾಗ....!" ಎಂದಾಗ ಎಲ್ಲರೂ ಕೂಡಿ ನಕ್ಕ ನಗೆಯ ಅಬ್ಬರ ಈಗಲೂ ಮೂಡಿಬರುತ್ತದೆ. ಸ್ನೇಹಕ್ಕೆ ಇನ್ನೊಂದು ಹೆಸರು ಎನ್ಕೆ.

ಜೀವನದಲ್ಲಿ ಬರುವ ಹಾಲಾಹಲವನ್ನು ತಾನು ಉಂಡು ಓದುಗರಿಗೆ ಅಮೃತ ಸಿಂಚನ ಮಾಡುವ ಸಾಹಿತ್ಯದ ರಸಗಂಗೆ ಎನ್ಕೆ ಅವರದು. ಮೃದು ಮಾತು, ಮಿತಭಾಷಿ. ಮಾತಿನ ಇತಿಮಿತಿಯನ್ನು ಅರಿತು ಮಾತಾಡುವದು ಇವರ ಸ್ವಭಾವ. ಒರಟು ಮಾತನ್ನು ಅರಿಯರು, ತಮ್ಮ ನೋವನ್ನು ತಾವೇ ನುಂಗಿಕೊಳ್ಳುವ, ಇನ್ನೊಬ್ಬರ ಮಾತಿನಿಂದ ನೊಂದುಕೊಂಡರೂ ಸ್ವೀಕರಿಸುವ ಪುರುಷೋತ್ತಮ ಸ್ವಭಾವ ಅವರದು. ತಲ್ಲೀನತೆ ಇವರ ಜನ್ಮಗುಣ. ಕಾವ್ಯಾಭ್ಯಾಸದಲ್ಲಿ ಸಾಹಿತ್ಯವ್ಯಾಸಂಗದಲ್ಲಿ ತನ್ನನ್ನು ಮರೆತು ಸಾಹಿತ್ಯದ ಆಳದಲ್ಲಿ ಇಳಿಯುವ ಶಕ್ತಿ ದಯಪಾಲಿಸಿದ ಕಾಣಿಕೆ 'ಕುಮಾರವ್ಯಾಸ ಭಾರತ'

ಬೃಹದ್ಗ್ರಂಥ. ನನ್ನ ಕಾದಂಬರಿ "ದೇವ ಸಂತಾನ"ದ ಬಿಡುಗಡೆ ಸಮಾರಂಭದ ಮುಖ್ಯ ಅತಿಥಿಯಾಗಿ ಬೆಳಗಾವಿಗೆ ಬಂದದ್ದು ಒಂದು ವಿಶಿಷ್ಟ ಪ್ರಸಂಗ. ಅಂದಿನ ಜಿಲ್ಲಾಧಿಕಾರಿಗಳಾದ ಫಿಲಿಪ್ರೋಸ್ ಮಥಾಯಿಯವರು ಅಧ್ಯಕ್ಷರು. ಬೆಳಗಾವಿಯ ಪ್ರಸಿದ್ಧ ವಕೀಲರಾದ ಎಸ್. ಎಂ. ಕುಲಕರ್ಣಿ ಹಾಗೂ ಆರ್. ಎಚ್. ಕುಲಕರ್ಣಿಯವರು ಈ ಕಾರ್ಯಕ್ರಮದ ಅಧ್ವರ್ಯರುಗಳು.

ಎನ್ಕೆ ಮುಂಜಾವಿನ ಗಾಡಿಗೆ ಬರುವವರಿದ್ದರು. ನಾವು ಕಾರು ತೆಗೆದುಕೊಂಡು ಹೋದಾಗ ನಿಲ್ದಾಣದಲ್ಲಿ ಗದ್ದಲವೋ ಗದ್ದಲ. ನಾನು ಎನ್ಕೆ ಅವರನ್ನು ಅಲ್ಲಿ ಎಲ್ಲಿ ಹುಡುಕಿದರೂ ಸಿಗಲಿಲ್ಲ. ಬಹುಶಃ ಬಸ್ಸಿಗೆ ಬರಬಹುದೆಂದು ನಾವು ನಿರಾಶರಾಗಿ 'ವೃಂದಾವನ'ಕ್ಕೆ ಬಂದೆವು. ಎಲ್ಲರೂ ಕೂಡಿ ಕಲೆಕ್ಟರ ಅವರ ಮನೆಯಲ್ಲಿ ಚಹ ತೆಗೆದುಕೊಳ್ಳುವ ಕಾರ್ಯಕ್ರಮವಿತ್ತು. ಆದರೇನು ? ನಾವು ಕೋಣೆಗೆ ಬಂದಾಗ ಎನ್ಕೆ ಅಲ್ಲಿಯೇ ನಿಂತಿದ್ದರು. 'ಎಲಎಲಾ' ನಾವು ಕಾರು ತೆಗೆದುಕೊಂಡು ಬಂದಿದ್ದೆವು ! ಎಂದು ನುಡಿದಾಗ 'ಹೋಗಲಿ ಬಿಡ್ರಿ! ಅಂತೂ ಬಂದೆನಲ್ಲ!' ಎಂದಾಗ ನಮ್ಮ ಪರಿಸ್ಥಿತಿ ನಿಜವಾಗಿಯೂ ಮುಗುಡ ತುಂಬಿದಂತಾಗಿತ್ತು. ಇದನ್ನು ಮರೆಸುವಂತೆ 'ಈಗ ಚಹ ತರಿಸಿಬಿಡಿರಿ!' ಎಂದರು, ಆತ್ಮೀಯತೆಯಿಂದ. ಸಮಾರಂಭದಲ್ಲಿ ಅವರು 'ದೇವಸಂತಾನ' ಕಾದಂಬರಿಯ ವಿಶ್ಲೇಷಣೆ ಮಾಡಿ ಮಾತಾಡಿದ್ದು ಅಪ್ರತಿಮವಾಗಿತ್ತು. ಫಿಲಿಪ್ರೋಜರು ನನ್ನನ್ನು ಅಭಿನಂದಿಸುತ್ತ 'ಎನ್ಕೆ ಅವರಿಂದ ನಾನು ಪುರಾಣಿಕರನ್ನು ಕಂಡುಕೊಂಡೆ' ಎಂದರು. ಅಷ್ಟು ಪ್ರಭಾವಪೂರ್ಣವಾಗಿತ್ತು ಎನ್ಕೆ ಅವರ ಭಾಷಣ.

ಮರುದಿನ ಬೆಳಗು ಮುಂಜಾನೆ ಐದು ಗಂಟೆಗೆ ಧಾರವಾಡಕ್ಕೆ ಹೊರಡಬೇಕು. ಬೆಳಗಾವಿಯ ಆ ಚಳಿಯ ನಸುಕಿನಲ್ಲಿ ನಾವು ಆತ್ಮೀಯವಾಗಿ ಮಾತನಾಡುತ್ತ ಹೊರಟಿದ್ದು ನನಗೆ ಮರೆಯಲಾಗದ ಸವಿ ಅನುಭವ.

ನನ್ನ ಗೆಳೆಯ ಎನ್ಕೆ ತನ್ನ ಎಲ್ಲ ನೋವುಗಳನ್ನೂ ಅರಗಿಸಿಕೊಂಡು ಸಾಹಿತ್ಯ ಸರಸ್ವತಿಗೆ ಸಂತಸದ ಮಾಲೆಗಳನ್ನು ಅರ್ಪಿಸಿದ್ದಾರೆ. ಜೀವನದಲ್ಲಿ ದುರಂತ ಸನ್ನಿವೇಶಗಳನ್ನು ಅನುಭವಿಸಿದ ಈ ಮನುಷ್ಯ ಜನಜೀವನಕ್ಕೆ ನಗೆಯ ತೀರ್ಥವನ್ನೇ ನೀಡಿದ್ದಾರೆ. ಸಾಹಿತ್ಯ ಗಂಗೆಯಲ್ಲಿ ಮೀಯಿಸಿದ್ದಾರೆ. ಇದೊಂದು ತಪಸ್ಸು.ಈ ತಪಸ್ಸಿನಲ್ಲಿ, ಈ ಸಾಧನೆಯಲ್ಲಿ ಎನ್ಕೆ ಸಿದ್ಧಿ ಪಡೆದಿದ್ದಾರೆ. ತನ್ನಲ್ಲಿ ಸಾವಿರ ನೋವಿದ್ದರೂ ಇನ್ನೊಬ್ಬರ ನೋವನ್ನು ಕಂಡು ಕಣ್ಣೀರು ಹಾಕಿದ್ದಾರೆ. ನನ್ನ ಸೌಭಾಗ್ಯವತಿ ನಿಧನರಾದ ಸುದ್ದಿಯನ್ನು ಪತ್ರಿಕೆಗಳಲ್ಲಿ ಓದಿ ಅವರೊಂದು ನನಗೆ ದೀರ್ಘ ಪತ್ರ ಬರೆದು ಕೊನೆಗೆ "...ಈ ಅವರ್ಣನೀಯ ನೋವಿನ, ಈ ಬಲವಾದ ಕಹಿಯನ್ನು ತಾಳಿಕೊಳ್ಳುವ ಶಕ್ತಿಯನ್ನು ಭಗವಂತನು ತಮಗೆ ನೀಡಲಿ....ಇದೇ ನನ್ನ ಪ್ರಾರ್ಥನೆ" ಎಂದು ಸಾಂತ್ವನ ನೀಡಿದ ನನ್ನ ಗೆಳೆಯನ ವೈಯಕ್ತಿಕ ನೋವನ್ನೂ, ಕಹಿಯನ್ನೂ ಬಲ್ಲ ನನಗೆ ಎನ್ಕೆ ಹೃದಯವಂತಿಕೆಯನ್ನು ಒಳಹೊಕ್ಕು ನೋಡಿದ ಅನುಭವವಾಯಿತು.

ಎನ್ಕೆ ಅವರದು ಸ್ಫುಟವಾದ ವ್ಯಕ್ತಿತ್ವ:

“ಪುಸ್ತಕದಿ ದೊರೆತರಿವು, ಮಸ್ತಕದಿ ತಳೆದ ಮಣಿ ।<br>
ಚಿತ್ತದೊಳು ಬೆಳೆದರಿವು, ತರು ತಳೆದ ಪುಷ್ಪ ॥<br>
ವಸ್ತು ಸಾಕ್ಷಾತ್ಕಾರವಂತರೀಕ್ಷಣೆಯಿಂದ ।<br>
ಶಾಸ್ತ್ರಿತನದಿಂದಲ್ಲ–ಮಂಕುತಿಮ್ಮ ॥

(ಮಂಕುತಿಮ್ಮನ ಕಗ್ಗ–೬೫)

ಈ ಅಂತರೀಕ್ಷಣ ಎನ್ಕೆ ಸಾಧನೆ. ಅಂತೆಯೇ ಎನ್ಕೆ ಸರಳ ನಗೆಯು ಅರಳಿದ ಹೂವು.

# ಎನ್ಕೆ ವ್ಯಕ್ತಿತ್ವದ ಏಳು ಮುಖಗಳು

## ಗುರುನಾಥ ಜೋಶಿ

ಕನ್ನಡದ ಖ್ಯಾತ ಲೇಖಕ, ಕವಿ, ಕಾದಂಬರಿಕಾರ, ನಾಟಕಕಾರ, ಸಂಪಾದಕ ಎನ್ಕೆಯವರನ್ನು ನಾನು ಕಂಡದ್ದು ಸುಮಾರು ನಾಲ್ವತ್ತೈದು ವರ್ಷಗಳ ಹಿಂದೆ. ಅವರು ಆಗ ಹೇಗಿದ್ದರೋ ಈಗಲೂ ಹಾಗೇ ಇದ್ದಾರೆ. ನೋ ಚೇಂಜ್. ಅದೇ ಉಡುಪು, ಅದೇ ನಡಿಗೆ, ಅದೇ ನಗುಮುಖ, ಅದೇ ಹಾಸ್ಯ, ಅದೇ ಕಂಚಿನ ಕಂಠ.

ಅವರನ್ನು ನಾನು ಕಂಡದ್ದು ಮೊಟ್ಟ ಮೊದಲಿಗೆ ಯಾವ ಸಂದರ್ಭದಲ್ಲಿ ಎಂಬುದು ಈಗ ಎಪ್ಪತ್ತೈದು ವರ್ಷದ ವಯಸ್ಸಿನಲ್ಲಿ ಕಾಲಿರಿಸಿದ ನನಗೆ ನೆನಪಾಗುತ್ತಿಲ್ಲ.

ಇವರ ಕೃತಿಗಳಿಂದ, ವಿಶೇಷವಾಗಿ, ಇವರ 'ಕನ್ನಡ ಸಾಹಿತ್ಯ ವಾಹಿನಿ' ಎಂಬ ಕೃತಿಯಿಂದ ಇವರನ್ನು ನಾನು ಬಲ್ಲೆ ಅಂತ ಎನಿಸುತ್ತಿದೆ. ಇವರ ಏಕಾಂಕ ನಾಟಕಗಳು, ರೇಡಿಯೊ ರೂಪಕಗಳು ನನಗೆ ಇವರ ಪರಿಚಯವನ್ನು ಸಾಕಷ್ಟು ಮಾಡಿಸಿವೆ. ಇವರನ್ನು ನನ್ನ ಹೆಚ್ಚೆಚ್ಚು ಸನಿಹಕ್ಕೆ ತಂದಿವೆಯೆಂದು ಎನ್ನುವುದಕ್ಕಿಂತ ನಮ್ಮಿಬ್ಬರ ಬಾಳು ನಮ್ಮನ್ನು ಹೆಚ್ಚು ನಿಕಟವರ್ತಿಯಾಗಿಸಿದೆಯೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಎನ್ಕೆಯವರು ನನ್ನನ್ನು ಕಂಡಾಗೆಲ್ಲ, ಒಬ್ಬನನ್ನೇ ಕಂಡಾಗೆಲ್ಲ ಹೇಳುತ್ತಿರುತ್ತಾರೆ "ನೀವು ನನ್ನ ಜೀವನದಲ್ಲಿ ಬಹಳ ಮಹತ್ವದ ಪಾತ್ರವಾಡಿದ್ದೀರಿ" ಅಂತ. ಹೀಗೆ ನಾನು ಯಾರ ಯಾರ ಜೀವನದಲ್ಲಿ ಯಾವ ಯಾವ ಪಾತ್ರ ಆಡಿದ್ದೇನೋ ಇಂದು ನನ್ನ ಸ್ಮರಣೆಗೆ ಸ್ಫುಟವಾಗಿ ಬರುತ್ತಿಲ್ಲ. ಆದರೂ ಒಂದೆರಡು ಘಟನೆಗಳನ್ನು ನೆನಪು ಮಾಡಿಕೊಂಡು ಬರೆಯುತ್ತಿದ್ದೇನೆ. ಈ ಘಟನೆಗಳನ್ನು ಹೇಳುವುದರಿಂದ ನಾನು ನನ್ನ ದೊಡ್ಡಸ್ತನವನ್ನು ಕೊಚ್ಚಿಕೊಳ್ಳುತ್ತಿದ್ದೇನೆಂದು ಯಾರೂ ಭಾವಿಸಬಾರದಾಗಿ ನಮ್ರವಾಗಿ ಕೇಳಿಕೊಳ್ಳುತ್ತಿದ್ದೇನೆ. ನಾನು ನಾನೇ, ಎನ್ಕೆ ಎನ್ಕೆಯೇ, ಅಷ್ಟೇ.

### ಸ್ವಾಭಿಮಾನಿ ಎನ್ಕೆ

ಕರ್ನಾಟಕ ಹೈಸ್ಕೂಲು ಮತ್ತು ಕೆ. ಇ. ಬೋರ್ಡದ ಟ್ರೇನಿಂಗ ಕಾಲೇಜಿನ ಸರ್ವಾಧಿಕಾರಿಯಾಗಿದ್ದ ಮುಧೋಳಕರ ವಾಮನರಾಯರು ಎನ್ಕೆ ಅವರಿಗೆ ಕನ್ನಡ

ಪತ್ರ ಪುಸ್ತಕ ಬರೆದುಕೊಡಲು ಹೇಳಿದರಂತೆ ಮತ್ತು ಸಂಭಾವನೆ ಇತ್ಯಾದಿಯ ಬಗ್ಗೆ ಏನೂ ಹೇಳಲಿಲ್ಲವಂತೆ. ಈ ಸಂದರ್ಭದಲ್ಲಿ ಮುಧೋಳಕರ ವಾಮನರಾಯರ ನಡವಳಿಕೆ ಮತ್ತು ಮಾತು ಎನ್ಕೆಯವರಿಗೆ ಸರಿಯೆನಿಸಲಿಲ್ಲವಂತೆ. ಅವರ ಸರ್ವಾಧಿಕಾರಿ ಮನೋವೃತ್ತಿ ಸಹನವಾಗಲಿಲ್ಲವಂತೆ. ಆದ್ದರಿಂದ ಎನ್ಕೆಯವರು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟು, ಕೆ. ಇ. ಬೋರ್ಡ ನೌಕರಿಯಿಂದ ಹೊರಬಿದ್ದು ಸಂಶೋಧಕರಾಗಿ ಕೆಲಸ ಮಾಡತೊಡಗಿದರಂತೆ. ಈ ಘಟನೆ ಎನ್ಕೆಯವರ ಸ್ವಾಭಿಮಾನಕ್ಕೆ ಒಂದು ನಿದರ್ಶನ. ಈ ಘಟನೆಯನ್ನು ಎನ್ಕೆಯವರೇ ನನಗೆ ಹೇಳಿದ ಹಾಗೆ ನೆನಪು. ಮಸಕುಮಸುಕಾದ ನೆನಪು. ಇದರ ಸತ್ಯಾಂಶ ಅವರಿಗೇ ಗೊತ್ತು. *

## ನೊಂದ ಜೀವ

ಎನ್ಕೆಯವರು ಜೀವನದಲ್ಲಿ ಬಹಳ ನೊಂದವರು. ಆದರೆ ಅದನ್ನು ತೋರಗೊಡುತ್ತಿದ್ದಿಲ್ಲ. ಅಳು ನುಂಗಿ ನಗುತ್ತಿದ್ದರು. ಅವರು ಆರ್ಥಿಕವಾಗಿಯೂ ಬಳಲುತ್ತಿದ್ದರು. ಸ್ವಾಭಿಮಾನಿಯಾದ ಅವರು ನನ್ನನ್ನು ಕಂಡು. "ನನಗೆ ಸ್ವಲ್ಪ ಸಾವುಕಾರ ಆಗುತ್ತೀರಾ?" ಅಂತ ಅನ್ನುತ್ತಿದ್ದರೇ ಹೊರತು, ಬೇಡುತ್ತಿದ್ದಿಲ್ಲ. ಏಕೆಂದರೆ ಅವರು ಬಲ್ಲರು ಕಬೀರದಾಸನ ಉಕ್ತಿಯನ್ನು ಅಂತ ನನಗನಿಸುತ್ತದೆ: ಮಾಂಗನತೇಮರಣ ಭಲಾ. ಎನ್ಕೆ ಅವರದೂ ಕಬೀರದಾಸನ ಸಂಸಾರ,ನನ್ನದೂ ಕಬೀರದಾಸನ ಸಂಸಾರ. ಆದ್ದರಿಂದ ಒಬ್ಬರಿಗೊಬ್ಬರು ನಮ್ಮ ಕೈಲಾದ ಮಟ್ಟಿಗೆ ನೆರವಾಗುತ್ತಿದ್ದೆವು. ಅವರ ಅಡಚಣೆ ಬಹಳವಾಗಿರುತ್ತಿದ್ದಿಲ್ಲ. ನಾನೂ ನನ್ನ ಕೈಲಾದ ಮಟ್ಟಿಗೆ ಅವರಿಗೆ ನೆರವಾಗುತ್ತಿದ್ದೆ. ಅವರು ಆಡಿದಂತೆ ನಡೆಯುತ್ತಿದ್ದರು. ನನಗೆ ಸರಿಯಾದ ಸಮಯಕ್ಕೆ ಹಿಂತಿರುಗಿಸುತ್ತಿದ್ದರು. ಬಡವರು ಬಡವರಿಗೆ ನೆರವಾಗುತ್ತಾರೆಯೆ ವಿನಾ ಶ್ರೀಮಂತರು ನೆರವಾಗುವದಿಲ್ಲ. ನೋವನ್ನು ನೋವು ಗುರುತಿಸುವುದೇ ವಿನಾ ಬೇರಾವುದೂ ಗುರುತಿಸುವುದಿಲ್ಲ. ಇದು ನಿಸರ್ಗನಿಯಮ ತಾನೆ? ಆದರೂ ನಾನು ಮಾತ್ರ ನಮ್ಮಿಬ್ಬರ ನಡುವಿನ ಈ ಸಂಗತಿಯನ್ನು ಈ ವರೆಗೆ ಯಾರಿಗೂ ಹೇಳಿಲ್ಲ. ಆಡದೇ ಮಾಡುವವನು ರೂಢಿಯೊಳಗುತ್ತಮನು ತಾನೇ?

## ಕಾದಂಬರಿಕಾರ ಎನ್ಕೆ

ಇದೇ ಸಂದರ್ಭದಲ್ಲಿ ಇನ್ನೊಂದು ಸಂಗತಿ ನೆನಪಿಗೆ ಬರುತ್ತಿದೆ. ಎನ್ಕೆಯವರಿಗೆ ಹೆಂಡತಿಯ ಬಲವಿದ್ದಂತೆ ತೋರುವುದಿಲ್ಲ. ಅವರ ಪ್ರಥಮ ಪತ್ನಿ ತೀರಿಕೊಂಡಿರಬಹುದೇನೊ ಆಗ ಅವರು ಒಂದು ಕಾದಂಬರಿಯನ್ನು ಬರೆಯತೊಡಗಿದ್ದರು...'ಸಾವಿನ ಉಡಿಯಲ್ಲಿ' ಅಂತ ನೆನಪು, ಅದನ್ನವರು ಇನ್ನೂ ಪೂರ್ತಿ ಬರೆದಿದ್ದಿಲ್ಲ. ಆಗ ಒಂದು ದಿನ ನನ್ನನ್ನು ಕುರಿತು "ಈ ಕಾದಂಬರಿಯನ್ನು ಪ್ರಸಿದ್ಧಿಸಲು ಪ್ರಕಾಶಕರೊಬ್ಬರು ಬೇಕಾಗಿದ್ದಾರೆ. ಯಾರನ್ನಾದರೂ ಸೂಚಿಸುವಿರಾ?" ಎಂದರು. ಅದಕ್ಕೆ ನಾನು ಒಪ್ಪಿ, 'ಒಂದೆರಡು ದಿನಗಳ ನಂತರ ನಿಮಗೆ ಒಬ್ಬ ಪ್ರಕಾಶಕರನ್ನು ಕೊಡುವೆ' ಅಂತ ಹೇಳಿದೆ.

---

* ಎನ್ಕೆ ಪತ್ರ ಬರೆದ ಕಾಲ, ೧೯೪೦. ಹೆಚ್ಚಿನ ಅಭ್ಯಾಸಕ್ಕಾಗಿ ಹೈಸ್ಕೂಲಿಗೆ ರಾಜೀನಾಮೆ ಕೊಟ್ಟದ್ದು ೧೯೪೩. ಪತ್ರ ಬರೆವಣಿಗೆಯ ಪರಿಣಾಮವಾಗಿ ರಾಜೀನಾಮೆ ಕೊಟ್ಟದ್ದು ವಸ್ತುಸ್ಥಿತಿ ಅಲ್ಲವೆಂದು ಎನ್ಕೆ ತಿಳಿಸುತ್ತಾರೆ— ಸಿ. ಪ.

ನನ್ನ ಪ್ರಕಾಶಕ ಗೆಳೆಯ ಭಾಲಚಂದ್ರ ಘಾಣೇಕರರನ್ನು ಕಂಡೆ. ಪ್ರತಿಭಾ ಗ್ರಂಥಮಾಲೆಯಲ್ಲಿ ಅನುವಾದಗಳನ್ನೇ ಪ್ರಕಟಿಸುವುದಕ್ಕಿಂತ ಸ್ವತಂತ್ರ ಕೃತಿಗಳನ್ನೂ ಪ್ರಕಟಿಸುವುದು ಉತ್ತಮವೆಂದು ಹೇಳಿ, ಎನ್ಕೆ ಅವರ "ಸಾವಿನ ಉಡಿಯಲ್ಲಿ" ಕಾದಂಬರಿ ಪ್ರಕಟಿಸಲು ಹೇಳಿದೆ. ಒಪ್ಪಿದರು. ಅದು ಪ್ರಕಟವೂ ಆಯಿತು. ನನಗೆ ಸಂತೋಷವೂ ಆಯಿತು. ಆದರೆ ಈ ವರೆಗೂ ಆ ಕಾದಂಬರಿಯನ್ನು ನಾನು ನೋಡಿಯೂ ಇಲ್ಲ, ಓದಿಯೂ ಇಲ್ಲ. ನಾನು ಎನ್ಕೆ ಅವರಿಂದಲೂ ಪ್ರಕಾಶಕರಿಂದಲೂ ಅದರ ಪ್ರತಿಯನ್ನು ಅಪೇಕ್ಷಿಸಿಯೂ ಇಲ್ಲ. ಅಪೇಕ್ಷಿಸಿದರೆ ಅದು ಸ್ವಾರ್ಥವಾದೀತು; ಪ್ರತಿಫಲದ ಅಪೇಕ್ಷೆಯಿಂದ ನಾನು ಎಂದೂ ಯಾರಿಗೂ ನೆರವಾಗಿಲ್ಲ. 'ಕರ್ಮಣ್ಯೇ- ವಾಧಿಕಾರಸ್ತೇ ಮಾಫಲೇಷು ಕದಾಚನ' ಎಂಬಂತೆ ನಡೆಯುವ ವೃತ್ತಿ ನನ್ನದು. ತಾನಾಗಿ ಫಲ ಸಿಕ್ಕರೆ.... ಅದನ್ನು ನಿರಪೇಕ್ಷವಾಗಿ ಸ್ವೀಕರಿಸುವೆ.

## ಸಹಸಂಪಾದಕ ಎನ್ಕೆ

ನಾನು ಗಂಡು ಮಕ್ಕಳ ಸರಕಾರಿ ಟ್ರೇನಿಂಗ ಕಾಲೇಜದಲ್ಲಿ ಅಧ್ಯಾಪಕನಾಗಿದ್ದೆ- ೧೯೩೮ ರಿಂದ ೧೯೪೩ ರ ವರೆಗೆ. ಈ ಅವಧಿಯಲ್ಲಿ ಒಮ್ಮೆ ಶ್ರೀನಿವಾಸರಾವ್ ಬೈಚವಾಳರು ಪ್ರಿನ್ಸಿಪಾಲರಾಗಿದ್ದರು. ಕನ್ನಡ ಸಾಹಿತ್ಯದಲ್ಲಿಯೂ ನನಗೆ ಸ್ವಲ್ಪ ಗತಿ ಇದೆ ಎಂಬುದೂ ಅವರಿಗೆ ಗೊತ್ತಾಗಿತ್ತು. ಒಂದು ದಿನ ಅವರು ನನ್ನನ್ನು ತಮ್ಮ ಮನೆಗೆ ಕರೆಸಿ ಹೇಳಿದರು. "ಜೋಶಿಯವರೇ, ಒಂದು ಶೋಚನೀಯ ಕೆಲಸವಿದೆ. ನಿಮ್ಮಿಂದ ಅದು ಆಗಬೇಕಾಗಿದೆ. ಅದೇನೆಂದರೆ- ಮುಂಬೈ ಸರಕಾರದವರು 'ಲೋಕರಾಜ' ಸಮಾಚಾರ ಪತ್ರಿಕೆಗೆ ಕನ್ನಡ ವಿಭಾಗಕ್ಕೆ ಬರೆಯಬಲ್ಲ ಇಬ್ಬರ ಹೆಸರುಗಳನ್ನೂ ಅವರ ಯೋಗ್ಯತೆಯನ್ನೂ ಬರೆದು ಗೌಪ್ಯವಾಗಿ ಸೂಚಿಸಿ ಅಂತ ಕೇಳಿದ್ದಾರೆ. ನಿಮಗೆ ಯಾರಾದರೂ ಗೊತ್ತಿದ್ದರೆ ಹೇಳಿರಿ" ಅಂತ ಕೇಳಿದರು. ನನಗೆ ಆಗ ಥಟ್ಟನೆ ಹೊಳೆದವರು ಎನ್ಕೆ. ನಾನು ಎನ್ಕೆ ಅವರ ಹೆಸರು ಸೂಚಿಸಿ 'ಈಗ ಅವರು ನೌಕರಿಯೊಂದರಲ್ಲಿದ್ದಾರೆ. ಒಂದು ವೇಳೆ ಅಯ್ಕೆ ಆದರೆ ಈಗಿದ್ದ ನೌಕರಿ ಬಿಟ್ಟು ಹೋಗಲು ಸಿದ್ಧರಿದ್ದಾರೋ ಇಲ್ಲವೋ, ಅವರನ್ನು ವಿಚಾರಿಸಿ ತಿಳಿಸುವೆ' ಅಂತ ಹೇಳಿದೆ. ಮರುದಿನವೇ ನಾನು ಎನ್ಕೆ ಅವರನ್ನು ಕಂಡು ಈ ಗುಪ್ತ ವಿಷಯ ತಿಳಿಸಿದೆ. ಅವರು ಆಗಿದ್ದ ತಮ್ಮ ನೌಕರಿ ಬಿಟ್ಟು 'ಲೋಕರಾಜ' ಪತ್ರಿಕೆಯ ನೌಕರಿ ಸೇರಲು ಒಪ್ಪಿದರು. ಈ ವಿಷಯ ನಾನು ಬೈಚವಾಳರಿಗೆ ತಿಳಿಸಿದೆ. ಆಗ ಅವರು ಹೇಳಿದರು. "ಈಗಾಗಲೇ ಒಬ್ಬರು ಇದ್ದಾರೆ. ಅವರಿಗೆ ಪ್ರಥಮ ಸ್ಥಾನ, ಎನ್ಕೆ ಅವರಿಗೆ ದ್ವಿತೀಯ ಸ್ಥಾನ ಕೊಟ್ಟು ಶಿಫಾರಸು ಮಾಡುವೆ" ಅಂತ. ನಾನು ಸುಮ್ಮನಾದೆ.

ಯೋಗ್ಯತಾವಂತರಿಗೆ ಯೋಗ್ಯ ಸ್ಥಾನ ಸಿಗುವುದೆಂಬ ನಂಬಿಕೆ ನನಗಿತ್ತು. ಅದರಂತೆ ಎನ್ಕೆ ಅವರಿಗೇ ಮುಂಬೈ ಸಮಾಚಾರ ಪತ್ರಿಕೆಯ ಸಹಸಂಪಾದಕರ ನೌಕರಿ ಸಿಕ್ಕಿತು. ಅವರು ತಮ್ಮ ಬರೆಹ ಹಾಗು ಸಂಪಾದನಪಟುತ್ವದಿಂದ ಮೇಲಧಿಕಾರಿಗಳಿಗೆ ಮೆಚ್ಚಿ

ನವರು ಅವರು. ಇದು ನಮಗೆ ಅತ್ಯಂತ ಸಂತೋಷವನ್ನು ತಂದಿತ್ತು, ತಂದಿದೆ.

ನನ್ನ ದ್ವಿತೀಯ ಸೋದರಿಯ ಪ್ರಥಮ ಬಾಣಂತಿತನ ನಡೆದಿತ್ತು. ಆಗ ನಾನು ಲೈನ ಬರ್ಷಾರದಲ್ಲಿ ಸಂಗೀತರ ಮನೆಯಲ್ಲಿರುತ್ತಿದ್ದೆ. ಒಂದು ದಿನ ಸಾಯಂಕಾಲ ಎನ್ಕೆ ಅವರು ನಮ್ಮ ಮನೆಗೆ ಬಂದರು. ಪೇಡೆಯ ಪೊಟ್ಟಣವನ್ನು ನನ್ನ ಕೈಗಿತ್ತು "ನಾನು ನಾಳೆ ಮುಂಬಯಿ ನೌಕರಿಗೆ ಹಾಜರಾಗಲು ಹೊರಟಿದ್ದೇನೆ" ಅಂತ ಹೇಳಿ ದರು. ನಮಗೆಲ್ಲರಿಗೂ ಅಪಾರ ಸಂತಸವಾಯಿತು. "ದೇವರು ನಿಮಗೆ ಕಲ್ಯಾಣ ಮಾಡಲಿ ಶುಭಮಸ್ತು" ಎಂದು ತುಂಬು ಹೃದಯದಿಂದ ಬೀಳ್ಕೊಟ್ಟೆವು, ನಾವೂ ಅವರಿಗೆ ಪೇಡೆ ಕೊಟ್ಟು. ಏಕೆಂದರೆ ನನ್ನ ತಂಗಿ ಪ್ರಥಮವಾಗಿ ಗಂಡು ಮಗುವಿಗೆ ಜನ್ಮ ವಿತ್ತಿದ್ದಳು. ಎನ್ಕೆಯವರಲ್ಲಿ ಹೀಗೆ ಸದ್ದಿಲ್ಲದೆ ಕೃತಜ್ಞತೆ ಸೂಚಿಸುವ ವೃತ್ತಿ ಇದೆಯೆಂದು ಆಗ ನನಗೆ ತಿಳಿಯಿತು. ಆದರೆ ಇದನ್ನು ನಾನು ಬಯಸಿಯೂ ಇದ್ದಿಲ್ಲ. ಏಕೆಂದರೆ ಯೋಗ್ಯತೆಗೆ ತಕ್ಕ ಫಲ ಸಿಕ್ಕಿತು ಎಂದು ನನ್ನ ಭಾವನೆಯಾಗಿದೆ ಅಷ್ಟೆ. ಈ ಬಗ್ಗೆ ನಾನೇ ಅವರಿಗೆ ಕೃತಜ್ಞನಾಗಿರಬೇಕಾಗಿದೆ. ನನ್ನ ಸೂಚನೆಯನ್ನು ಅವರು ಕೃತಾರ್ಥಗೊಳಿಸಿ, ನನ್ನ ಮಾನವನ್ನು ಕಾಯ್ದರಲ್ಲ ಎಂದು.

## ಸಂಪಾದಕ ಎನ್ಕೆ

ಅನೇಕರಿಗೆ ಗೊತ್ತಿರಲಿಕ್ಕಿಲ್ಲ. ಎನ್ಕೆಯವರು ಪತ್ರಿಕಾ ಪ್ರಪಂಚದಲ್ಲೂ ಅನುಭವ ಪಡೆದಿದ್ದಾರೆ. ಅವರೊಂದು ಪತ್ರಿಕೆ ಹೊರಡಿಸುತ್ತಿದ್ದರು, ಆಕಾಶವಾಣಿ ನೌಕರಿಗೆ ಸೇರುವ ಮುಂಚೆ, ಆ ಪತ್ರಿಕೆಯ ಹೆಸರು ನೆನಪಿಲ್ಲ. * ಆದರೆ ಅದರಲ್ಲಿ 'ಬೆಂಗಳೂರಿಂದ ಬನಾರಸ' ಎಂಬ ಪತ್ರ ರೂಪದಲ್ಲಿ ನನ್ನ ಲೇಖವೊಂದು ಅಚ್ಚಾದದ್ದು ನೆನಪಿದೆ. ಆ ಪತ್ರಿಕೆಯೂ ಈಗ ನನ್ನ ಬಳಿಯಿಲ್ಲ, ಲೇಖವೂ ಇಲ್ಲ. ಆದರೆ ಈ ಲೇಖದ ಬಗ್ಗೆ ಎನ್ಕೆ ಯವರನ್ನು ಕಂಡಾಗ ಅವರು ಹೇಳಿದರು "ಪತ್ರರೂಪದಲ್ಲೂ ಒಳ್ಳೆಯ ಸಾಹಿತ್ಯ ರೂಪಿಸಬಹುದು" ಅಂತ. ಈ ಮಾತು ಮಾತ್ರ ಇನ್ನೂ ನನ್ನ ನೆನಪಿನಲ್ಲಿದೆ. "ಕನ್ನಡ ದಲ್ಲಿ ಪತ್ರ ಸಾಹಿತ್ಯ ಕಡಿಮೆ. ಅದು ಹುಲುಸಾಗಿ ಬರಬೇಕು."

## ನಾಟಕಕಾರ ಎನ್ಕೆ

ಈ ಬಗ್ಗೆ ನಾನು ಹೆಚ್ಚು ಹೇಳುವುದಿಲ್ಲ. ಈ ವಿಷಯ ಸರ್ವವಿದಿತ. ಆದರೆ ನಾನು ಅವರ ನಾಟಕಗಳನ್ನು ಹಿಂದೀಗೆ ಪರಿವರ್ತಿಸಿದ್ದೇನೆ, ಅವು ಅಚ್ಚೂ ಆಗಿವೆ: ಹಿಂದೀ ಜನತೆಗೂ ಮೆಚ್ಚುಗೆಯಾಗಿವೆ ಅಂತ ಹೇಳಬಲ್ಲೆ. 'ಪ್ರಾಣ ತುಂಬಿದ ಪಾತ್ರ' ಹಿಂದೀಗೆ ಹೋಗಬೇಕೆಂಬುದು ಅವರ ಅಪೇಕ್ಷೆ. ಅದೂ ಈಡೇರುವುದೆಂದು ಭರವಸೆ ಕೊಡಬಲ್ಲೆ.

## ಅಭ್ಯಾಸು ಎನ್ಕೆ

ಎನ್ಕೆಯವರಿಗೆ ಕನ್ನಡ ಹಾಗೂ ಭಾರತೀಯ ಸಂಸ್ಕೃತಿಯಲ್ಲಿ ಆಳವಾದ ನಂಬಿಗೆ. ಅವರು ಏನೇ ಬರೆದರೂ ಅದರ ಹಿನ್ನೆಲೆಯಲ್ಲಿ ಆಳವಾದ ಅಭ್ಯಾಸವಿರುತ್ತದೆ, ಗಂಭೀರ

* 'ವಸಂತ' ಮಾಸಪತ್ರಿಕೆ—ಸಿ.ಪ.

ಚಿಂತನೆ ಇರುತ್ತದೆ, ಸ್ವಂತದ ಅನುಭವ ಇರುತ್ತದೆ. ಇದಕ್ಕೆ ಅವರ ಕೃತಿಗಳೇ ಸಾಕ್ಷಿ, ಅವರು ದಿನಾಲು ಮುಂಜಾನೆ ತಮ್ಮ ನಿತ್ಯದ ವೇಷದಲ್ಲಿ ಕೈಯಲ್ಲಿ ಎದೆಯ ಬಳಿ ಒಂದು ನೋಟಬುಕ್ ಹಿಡಿದುಕೊಂಡು ಧಾರವಾಡದ ಪ್ರಸಿದ್ಧ ಆಚಾರ್ಯರ ಪ್ರವಚನ ಕೇಳಲು ಹೋಗುತ್ತಿರುವುದನ್ನು ಕಂಡಿದ್ದೇನೆ. ಇದು ಅವರ ಅಭ್ಯಾಸ ವೃತ್ತಿಗೆ ಒಂದು ನಿದರ್ಶನ. ಬರಹಗಾರನು ಆಜನ್ಮ ಅಭ್ಯಾಸು ಆಗಿರಬೇಕು ಎಂದು ಹೇಳುವುದಕ್ಕೆ ಪ್ರತ್ಯಕ್ಷ ಉದಾಹರಣೆ. ನಮ್ಮ ದೃಷ್ಟಿಯಲ್ಲಿ ಹೀಗಿದ್ದಾರೆ ಎನ್ಕೆ, ನಮ್ಮ ನಾಡಿನ ಖ್ಯಾತ ಲೇಖಕ, ಕಾದಂಬರಿಕಾರ, ನಾಟಕರಾರ, ಸಂಪಾದಕ ಎನ್ಕೆ.

# ಸಮತ್ವದ ಮೂರ್ತಿ

## ಬಿ. ಎಚ್. ಶ್ರೀಧರ

ಎನ್ಕೆಯವರನ್ನು ನಾನು ಮೊದಲು ಕಂಡದ್ದೇ ಧಾರವಾಡದ ಆಕಾಶವಾಣಿಯಲ್ಲಿ. ಅಂಬಿಕಾತನಯದತ್ತರ ಮೂಲಕ ನನಗೆ ಅವರ ಪರಿಚಯವಾಯಿತು. ಸೌಜನ್ಯವಿದ್ದರೆ ಬಲವೇಕೆ ಬೇಕು? ಎಂಬ ಸುಭಾಷಿತದಂತೆ ಅವರ ಸ್ನೇಹಮಯ ವರ್ತನೆ ನನ್ನನ್ನು ಹತ್ತಿರಕ್ಕೆ ಕರೆದುಕೊಂಡಿತು. ಅಂಬಿಕಾತನಯದತ್ತರಂತೆ ಅಥವಾ ಆನಂದಕಂದರಂತೆ ಅವರು ಹಿರಿಯತನವನ್ನು ನನ್ನೆದುರು ತೋರಲಿಲ್ಲ. 'ಸಮಾನಶೀಲವ್ಯಸನೇಷು ಸಖ್ಯಂ' ಎಂಬ ಗಾದೆಯಂತೆ ಬರಹಗಾರಿಕೆಯ ಹಾಗೂ ಸಭ್ಯತೆಯ ಹೊಂದಿಕೆ ಅವರಲ್ಲಿ ನನಗೆ ಕಂಡು ಬಂದಿತು. ಅವರ ಈ ಅನಾಕ್ರಾಮಕ ವರ್ತನೆಯೇ ದ. ಬಾ. ಕುಲಕರ್ಣಿಯವರಿಗೆ ಹೇಗೋ ಹಾಗೇ ಸ್ನೇಹಿತರ ಸಂಖ್ಯೆಯನ್ನು ಹೆಚ್ಚಿಸಿತೆನ್ನಬಹುದು.

ಇಂದು Gentleman ಸಭ್ಯ ಸಾಮಾಜಿಕ ಎಂದು ಬಗೆಯಲು ತಕ್ಕ ಜನರು ಇಳಿಮುಖವಾಗುತ್ತಿರುವಾಗ ಎನ್ಕೆಯವರಂಥ ವಿದ್ಯಾವಂತ ಲಘುಲೇಖನ ಚತುರ, ಮೃದುಹಾಸ್ಯಯುಕ್ತ ಸದ್ ಗೃಹಸ್ಥರನ್ನು ನೆನೆಯುವುದು ಅತ್ಯಂತ ಸಹಜ. ಪ್ರಿಯ ಪಟ್ಟಣಶೆಟ್ಟರ ಕಾಗದ ನೋಡಿಯೇ ನಾನು ನಮ್ಮ ಎನ್ಕೆಯವರಿಗೆ ಎಪ್ಪತ್ತು ತುಂಬಿತು ಎಂದು ತಿಳಿದುಕೊಳ್ಳಬೇಕಾಯಿತು. ಇಲ್ಲವಾದರೆ ಅವರಿಗೆ ಅಷ್ಟು ವಯಸ್ಸಾಯಿತು ಎಂದು ನಂಬುವುದೇ ಕಷ್ಟ. ಅವರು ಹೆಚ್ಚು ಕಡಿಮೆ ನನ್ನಷ್ಟೇ (೬೫) ವಯಸ್ಸಿನವರೆಂದು ನಾನು ತಿಳಿದುಕೊಂಡಿದ್ದೆ. ಅವರು ಬಹಳ ಕಾಲ ನೋಡಲು ಇದ್ದ ಹಾಗೇ ಇದ್ದರು. ಅದೇ ಮುಗುಳ್ನಗೆ, ಅದೇ ಮಾತುಗಾರಿಕೆ, ಅದೇ ಆಕಾಶವಾಣಿ ಕಾರ್ಯಕ್ರಮ, ಅದೇ ಪ್ರಸನ್ನ ಮಧುರ ಮುಖ— ಅವುಗಳಲ್ಲಿ ನನಗೆ ಯಾವ ವ್ಯತ್ಯಾಸವೂ ಕಂಡು ಬಂದಿರಲಿಲ್ಲ. Stability- thy other name is N. K. ಎನ್ಕೆ ಎಂದರೇ ಸಮತ್ವದ ಒಂದು ಮೂರ್ತಿ; ಸಮತ್ವ "ಎನ್ಕೆ" ಎಂಬುದರ ಅರ್ಥ—ಎಂದು ತೋರುತ್ತಿತ್ತು!

'ಸಜ್ಜನರಿಗೆ ಸಂತೋಷವನ್ನು ಉಂಟು ಮಾಡುವುದೇ ಈಶ್ವರಪೂಜೆ' ಎಂದ ಹಿರಿಯರ ಮಾತು ಪ್ರಿಯ ಎನ್ಕೆಯವರಿಗೆ ಚೆನ್ನಾಗಿ ಅನ್ವಯಿಸುತ್ತದೆ. ಅವರಿದ್ದಲ್ಲಿ ಗೆಳೆತನದ ಗೆಲುವಿರುತ್ತದೆ— ಅವರ ಮಾತೇ ಹಾಗೆ— ಬರಹಗಳೇ ಹಾಗೆ— ರೂಪಕಗಳೇ

ಅಂಥವು. Fair as a star when only one is shining in the sky- ಇಡಿ ಆಕಾಶದಲ್ಲಿ ಒಂದೇ ಒಂದು ನಕ್ಷತ್ರವಿದ್ದರೆ ಅದರ ಬೆಳಕು ಎದ್ದು ಕಾಣುತ್ತದೆ. ಹಾಗೇ ಎನ್ಕೆಯವರೊಡನಿದ್ದರೆ ಅನ್ನಿಸುತ್ತದೆ. ಅವರು ಜನರ ಗುಂಪುಗಳ ನಡುವೆ ಆಡಂಬರದಿಂದ ತಿರುಗುತ್ತಿದ್ದುದನ್ನು ನಾನು ನೋಡಿಯೇ ಇಲ್ಲ. 'ಬಾಯಲ್ಲಿ ಬೆಣ್ಣೆ ಬಗಲಲ್ಲಿ ದೊಣ್ಣೆ' ಎಂಬಂಥ ಆತ್ಮಸ್ತುತಿಪರಾಯಣರನ್ನೂ ಪರೋತ್ಕರ್ಷ ಅಸಹಿಷ್ಣುಗಳನ್ನೂ ತಾವು ರಾಜಧಾನಿಯಲ್ಲಿ ಕಂಡೆ ಎಂದು ಪ್ರಿಯ ಡಾ. ಶ್ರೀರಂಗರು ಇಲ್ಲಿಗೆ ಬಂದಾಗ ಹೇಳಿದ್ದುಂಟು. ಹಿತವೂ ಮನೋಹರವೂ ಆದ ಮಾತುಗಳು ದುರ್ಲಭ. ಮನೋಹರವಾದ ರೀತಿಯಿಂದ, ಅಪ್ರಿಯ ಸತ್ಯಗಳನ್ನು ಅನುದ್ವಿಗ್ನತೆಯಿಂದ, ಅಹಿಂಸಾತ್ಮಕವಾಗಿ, ಮುಗುಳ್ನಗೆ ಮೂಡಿಸುವಂತೆ ಹೇಳಬಲ್ಲವರು ಎನ್ಕೆ.

ಎನ್ಕೆಯವರು ಸೂರ್ಯನೂ ಅಲ್ಲ, ಮಿಣುಕು ಹುಳುವೂ ಅಲ್ಲ. ಎಂದರೆ ಅವರ ಮಧ್ಯಮ ವರ್ಗೀಯತೆ ಎಲ್ಲ ವರ್ಗದವರೊಡನೆಯೂ ಸರಳವಾಗಿ ಸೇರಿಕೊಳ್ಳುವ ಶಕ್ತಿಯನ್ನು ಅವರಿಗೆ ಕೊಟ್ಟಿತ್ತು. ಅವರ ಈ ಗುಣವನ್ನು ನೆನೆದರೆ ವ್ಯಾಸನು ಮಹಾಭಾರತದಲ್ಲಿ:-

'ಯದಾ ಚಾಯಂ ನ ಬಿಭೇತಿ ಯದಾ ಚಾಸ್ಮಾನ್ನ ಬಿಭ್ಯತಿ
ಯದಾ ನೇಚ್ಛತಿ ನದ್ವೇಷ್ಟಿ ತದಾ ಸಂಪದ್ಯತೇ ದ್ವಿಜ'

ಎಂದ ಅಭಯಸಿದ್ಧಿಯ ಸೂತ್ರವು ನೆನಪಾಗುತ್ತದೆ. ಹಾಗೇ ಡಾ. ಮುಗಳಿಯವರ—

'ಬಂದಾರs ತಂದಾರs ಮಂದಾರ ಹೂವ' ಎಂಬ ಚೆಲುನುಡಿ ನೆನಪಾಗುತ್ತದೆ. ಎನ್ಕೆಯವರ ವ್ಯಕ್ತಿತ್ವ ಅಂಥದು. ವಿನೀತ ರಾಮಚಂದ್ರರಾಯರ ವಿನೀತತೆ, ಹಸನ್ಮುಖಿ, ಚಿಂತನಶೀಲತೆಗಳನ್ನು ಎನ್ಕೆಯವರಿಗೆ ಅವರ ಸಂಪಾದಕತ್ವ, ಅಧ್ಯಾಪಕತ್ವ ಮತ್ತು ಆಕಾಶವಾಣಿ ರೂಪಕ ನಾಟಕ ನಿರ್ಮಾಪಕತೆಗಳು ಕಲಿಸಿರಬೇಕು. ಅವರ ಕನ್ನಡವು ಸಂಸ್ಕೃತ (Cultured) ಮತ್ತು ಸರಳ. ಉಭಯಭಾಷಾವಿದರಾಗಿದ್ದುದೇ ಅವರಿಗೆ ಆ ವಾಗ್ಬಲವನ್ನು ಕೊಟ್ಟಿರಬೇಕು. ನಮ್ಮ ಹಿಂದಿನ ಅನೇಕ ಕವಿಗಳು ಉಭಯಕವಿಕಮಲರವಿಗಳಾಗಿದ್ದುದನ್ನು ಮರೆಯಲಾದೀತೇ?

ಅಖಿಲಭಾರತ ೫೦ನೆಯ ಕನ್ನಡ ಸಾಹಿತ್ಯ ಸಂಮೇಳನದ ಅಧ್ಯಕ್ಷರು ಚಿಕ್ಕಮಗಳೂರಿನಲ್ಲಿ ಕನ್ನಡದ ಮೇಲೆ ಪ್ರಭುತ್ವವನ್ನು ಪಡೆಯಲು ಉಭಯ ಭಾಷಾಜ್ಞಾನ ಅಗತ್ಯವೆಂದದ್ದು ಇತ್ತೀಚಿನ ಜ್ಞಾಪಕ ಸೂತ್ರ. ಎನ್ಕೆಯವರಿಗೆ ಅದನ್ನು ಜ್ಞಾಪಿಸಬೇಕಾಗಿಯೇ ಇರಲಿಲ್ಲ. ಅವರ ಎಂ. ಎ. ಪದವಿಯೇ ಉಭಯ ಭಾಷೆಗಳದ್ದಾಗಿತ್ತು. ಆದುದರಿಂದ ಅವರ ವಾಗ್ ವೈದಗ್ಧ್ಯವು ಪರಿಶುದ್ಧತೆಯನ್ನು ಎತ್ತಿತೋರಿಸುತ್ತದೆ. ಅದೀಗ ಆಕಾಶವಾಣಿಯಲ್ಲಿ ಅವರಿಲ್ಲದುದರಿಂದಲೋ ಏನೋ ಬಹಳ ಕಡಿಮೆಯಾಗಲಾರಂಭಿಸಿದೆ.

ನಮ್ಮ ಒಳಗೂ ಹೊರಗೂ ನಾರಾಯಣನೇ ಇದ್ದಾನೆ, ಶಿವನೇ ಇದ್ದಾನೆ— ಎಂಬ

ಉಪನಿಷದುಕ್ತಿಯನ್ನು ಮನನ ಮಾಡಿಕೊಂಡವರಿಗೆ ತಮ್ಮ ಜ್ಞಾನೇಂದ್ರಿಯಗಳನ್ನೂ ಕರ್ಮೇಂದ್ರಿಯಗಳನ್ನೂ ಮನಸ್ಸನ್ನೂ ಬುದ್ಧಿಯನ್ನೂ ಕಾಮ ಕ್ರೋಧಾದಿಗಳಿಂದ ಹೊಲಸಾಗದಂತೆ ನೋಡಿಕೊಂಡಿರುವುದರ ಮಹತ್ವ ಗೊತ್ತಾಗಿರುತ್ತದೆ, ಹಾಗೇ ವಾಣಿಯನ್ನು ಛಂದಸ್ಸು, ಅಲಂಕಾರ, ವ್ಯಾಕರಣಗಳಿಗೆ ಶತ್ರುವಾಗದಂತೆ ಇಟ್ಟುಕೊಳ್ಳಲು ಸಾಧ್ಯವಾಗುತ್ತದೆ. ಸತ್ಪುರುಷರ ಲಕ್ಷಣವಾದ ಈ ಅನುದ್ಧತತೆಯನ್ನು ಜೀವನದ ಉದ್ದಕ್ಕೂ ನಡೆಯಿಸಿಕೊಂಡು ಬಂದ ಎನ್ಕೆ ಧನ್ಯರು.

ಎಲ್ಲರೂ ಬಯಸುವ ಅತ್ಯುತ್ತಮ ಸ್ಥಿತಿ ಶಾಂತಿ. ಈ ಶಾಂತಿ ಎನ್ಕೆ ಅವರಿಗೆ ಬೇಡಿ ಪಡೆದುಕೊಳ್ಳಬೇಕಾದ ಸ್ಥಿತಿ ಇಲ್ಲವೆಂದು ನನ್ನ ಗ್ರಹಿಕೆ. ಹುಟ್ಟಿನಿಂದಲೇ ಅವರು ಶಾಂತರು, ದಾಂತರು, ಉಪರತರು, ತಿತಿಕ್ಷುಗಳು. ಇಂದಿನ ಭಾರತದಲ್ಲಿ ಈ ಸಂಯಮ ಪೊಂದೇ ತಾರಕ. ಎಲ್ಲೆಲ್ಲೂ ಈರ್ಷ್ಯಾಸೂಯೆ ಕ್ರೌರ್ಯ, ವಂಚನೆಗಳು ಮುಖಂಡೋಪ ಮುಖಂಡರನ್ನು ಕುಣಿಸುತ್ತಿರುವಾಗ ತಟಸ್ಥತೆ ಯಾ ಅಲಿಪ್ತತೆ ಸಭ್ಯರಿಗೆ ಅಗತ್ಯ—ಅದರಲ್ಲೇ ತೃಪ್ತಿಯನ್ನು ಕಾಣಬೇಕು. ಇತಿಹಾಸ ನಡೆಸುವ ಭಾರತೀಯ ಜೀವನ ದೇವತೆ ಎನ್ಕೆ ಬಯಸುವ ಸಮಷ್ಟಿಹಿತವನ್ನು, ಸೋದರತ್ವವನ್ನು, ಸೌಹಾರ್ದವನ್ನು, ಅಸಾಂಗ್ರಾಮಿಕ ಸಾಹಿತ್ಯ ಸೌಂದರ್ಯವನ್ನು ಒದಗಿಸಲಿ ಎಂದು ಹಾರಯಿಸಿ ಅವರಿಗೆ ಈ ಮೂಲಕ ಸುಭಾಶಂಸನಗಳನ್ನು ಮಾಡುತ್ತೇನೆ.

# ವೀರನಾರಾಯಣ

---

ಎಸ್. ಆರ್. ಮಳಗಿ

ನೋಡ್ ನೋಡ್ತ ದಿನಮಾನ ಆಡಾದ್ತ ಆಯುಷ್ಯ
ನಡದಽದ ನಡದ್ವದ ನಡದಽದ,
ಕಾಣಽದ ಕಡಲ್ಹಾದಿ ಹಿಡದಽದ. —ಬೇಂದ್ರೆ

ಚಣಚಣಕೂ ಮನವರಿಕೆ ಮಾಡಿಕೊಡುವಂಥ ಕಪಿ ಮಾಣಿಯದು. ಗೆಳೆಯ ಎನ್ಕೆಯವರನ್ನು ನಾನು ಮೊಟ್ಟಮೊದಲು ಕಂಡುದು ೧೯೩೩ರಲ್ಲಿ. ಅರ್ಧಶತಮಾನ ಉರುಳಿ ಹೋಗಿದೆ. ಕಾಲಚಕ್ರಕ್ಕೆ ಬಿಡುವೆಲ್ಲಿ? ಅದರಗತಿಯ ರಭಸಕ್ಕೆ ಸಿಕ್ಕ ಹಳೆಯ ನೆನಪುಗಳು ಅದೆಷ್ಟೋ ಮಸಕು ಮಸಕಾಗಿವೆ. ಆದರೂ ಆತ್ಮೀಯರ ಒಡನಾಟದ ಹಲಕೆಲವು ಸವಿನೆನಪುಗಳ ಸುರುಳಿಗಳು ಮನದ ಒಳಪದರುಗಳಲ್ಲಿ ಇನ್ನೂ ಅಚ್ಚಳಿಯದಿವೆ. ತುಸು ಧೇನಿಸಿದಾಗ ಅವು ತಂತಾವೆ ಬಿಚ್ಚಿ ಹರಡುತ್ತವೆ ಒಳಗಣ್ಣ ಮುಂದೆ. ಅಲ್ಲಿ ಎಂದೋ ಅಚ್ಚೊತ್ತಿ ಮಾಡಿದ್ದ ನೆನಪಿನ ರಸಚಿತ್ರಗಳಿನ್ನೂ ಹಸಿರು ಹಸಿರಾಗಿರುವುದು ಕಂಡುಬರುತ್ತಿದೆ. ಮೊನ್ನೆ ಮೊನ್ನೆ ನಡೆದ ಸಂಗತಿಗಳ ಹಾಗೆ ಭಾಸವಾಗುತ್ತವೆ. ಇದೊಂದು ಸೋಜಿಗ!

ಆಗ ನಾವಿಬ್ಬರೂ ಧಾರವಾಡದ ಕರ್ನಾಟಕ ಕಾಲೇಜಿನ ಸಮಕಾಲೀನ ವಿದ್ಯಾರ್ಥಿಗಳು. ಎನ್ಕೆ ನನಗಿಂತ ಎರಡು ವರುಷ ಚಿಕ್ಕವರು. ಅವರು ಇಂಟರ್ ಮೀಡಿಯೇಟ್ ವರ್ಗದಲ್ಲಿ, ನಾನು ಜ್ಯೂನಿಯರ್ ಬಿ. ಎ. ವರ್ಗದಲ್ಲಿ ಓದುತ್ತಿದ್ದಂತೆ ನೆನಪು. ಕಾಲೇಜಿನ ಭವ್ಯ ವಾಚನಾಲಯದಲ್ಲಿಯೋ ಅದರ ಪ್ರಾಕಾರಾಂಗಣದಲ್ಲಿಯೋ ನಾವಿಬ್ಬರೂ ಭೆಟ್ಟಿಯಾಗಿ ಪರಸ್ಪರ ಪರಿಚಯಿಸಿಕೊಂಡೆವು. ಮೊದಲ ಭೆಟ್ಟಿಯ ಈ ಸಂದರ್ಭ ಕಣ್ಣಿಗೆ ಕಟ್ಟಿದಂತಿದೆ. ಕಾಲೇಜಿನ ಹೊಸ ವರುಷ ಅದೇ ಆರಂಭವಾಗಿತ್ತು. ಹೊರಗೆ ಧಾರವಾಡದ ಜಿಟಿಜಿಟಿ ಮಳೆ ಜಿನುಗುತ್ತಿತ್ತು. ಮಧ್ಯಂತರದ ಬಿಡುವಿನ ಸಮಯ. ವಿದ್ಯಾರ್ಥಿಗಳ ಓಡಾಟ ಜಾಸ್ತಿ. ಜತೆಗೆ ಜಿಮ್‌ಖಾನಾ ಇಲೆಕ್ಶನ್ ಗದ್ದಲ ಬೇರೆ. ಹುರಿಯಾಳುಗಳೂ ಅವರ ಬೆಂಬಲಿಗರೂ ಮತಗಳಿಗಾಗಿ ಬಿರುಸಿನ ಪ್ರಚಾರ ಕಾರ್ಯದಲ್ಲಿದ್ದರು. ಆಗ ಮತದಾರರಾಗಿದ್ದ ನಮ್ಮಂಥ ವಿದ್ಯಾರ್ಥಿಗಳ ಸ್ಥಾನಮಾನಗಳ ಬೆಲೆ ಏರಿತ್ತು! ಬಳಿಗೆ ಬಂದು ಮತಯಾಚನೆ ಮಾಡುತ್ತಿದ್ದವರಿಂದ ಗುರುತಿನ ಕಾರ್ಡು

ಗಳನ್ನು ಪಡೆದು, ಪ್ರೋತ್ಸಾಹದ ಮಾತನ್ನಾಡಿ, ಹೂಂಗುಟ್ಟಿ, ನಕ್ಕುನಗಿಸಿ ಅವರನ್ನು ಕಳಿಸಿಕೊಡುತ್ತಿದ್ದೆವು. ಎನ್ಕೆಯವರ ಪ್ರಥಮ ಪರಿಚಯವಾದುದು ಇಂಥ ತುರುಸಿನ ಇಲೆಕ್ಶನ್ ವಾತಾವರಣದಲ್ಲಿ. ಅಂದು ಕಂಡ ಎಳೆಹರೆಯದ ಎನ್ಕೆ ವ್ಯಕ್ತಿಚಿತ್ರ ಇಂದಿಗೂ ಮಾಸದಿದೆ. ಕಣ್ಣ ಮುಂದೆ ಸ್ಫುಟವಾಗಿ ನಿಂತಂತಿದೆ; ತೆಳ್ಳನೆಯ ಮೈಕಟ್ಟು, ಸಣ್ಣನೆಯ ಕೈಕಾಲು; ಅಂತಃಕರಣವುಕ್ಕುವ ಕಣ್ಣುಗಳು, ನಂಬುಗೆಯ ತುಂಬು ನಗೆ ಸೂಸುವ ಕೋಲು ಮೊಗ, ಅದಕ್ಕೊಪ್ಪುವ ಚುರುಕಾದ ಚೂಪು ಮೂಗು; ಮುಗ್ಧ ಸಲುಗೆಯ ಸ್ನೇಹದ ಮಾತು- ರೀತಿ ಯಾರ ಬಗೆಯನ್ನೂ ಸೆರೆ ಹಿಡಿಯುವಂತಿದ್ದವು. ಅಂದಿನಿಂದ ನಾವು ಗೆಳೆಯರಾದೆವೆಂದು ಬೇರೆ ಹೇಳಬೇಕಾಗಿಲ್ಲ. ಆ ಗೆಳೆತನ, ಆ ಸಲುಗೆ ಬೆಳೆಯುತ್ತಲೆ ಹೋಯ್ತು. ಕನ್ನಡ ಸಾಹಿತ್ಯ ಪ್ರೀತಿ ನಮ್ಮನ್ನು ಬಂಧಿಸಿತ್ತು.

ನಾನು ಆಗ ಬಿ.ಎ. ಪರೀಕ್ಷೆಗೆ ಕನ್ನಡ ಆನರ್ಸ್ ವಿಷಯಗಳನ್ನು ಆಯ್ಕೆ ಮಾಡಿಕೊಂಡಿದ್ದೆ. ಅದೇ ವರುಷ ಕನ್ನಡ ಆನರ್ಸ್ ಆರಂಭವಾಗಿತ್ತು. ಆಗ ಪ್ರಾ. ಎ. ಟಿ. ಸಾಸನೂರರು ಕನ್ನಡ ವಿಭಾಗದ ಮುಖ್ಯಸ್ಥರು. ಅವರು ತಮ್ಮ ವಿದ್ವತ್ತಿನಿಂದ, ಹಾಸ್ಯಭರಿತ ಮಾತುಗಾರಿಕೆಯಿಂದ, ಗಂಭೀರ ನಡೆ–ನುಡಿಗಳಿಂದ ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚಿನವರೆನಿಸಿದ್ದರು. ಅವರು ಆ ವರುಷ ನನ್ನನ್ನು ಕಾಲೇಜಿನ ಮಿಸಲೆನಿಯ ಕನ್ನಡ ವಿಭಾಗಕ್ಕೆ ಉಪಸಂಪಾದಕನೆಂದು ಆಯ್ಕೆ ಮಾಡಿದ್ದರು. ಅವರ ಮಾರ್ಗದರ್ಶನದಲ್ಲಿ ವಿದ್ಯಾರ್ಥಿಗಳಿಂದ ಲೇಖನಗಳನ್ನು ಸಂಗ್ರಹಿಸಿ, ಆಯ್ಕೆ ಮಾಡಿ, ಮಿಸಲೆನಿಯಲ್ಲಿ ಪ್ರಕಟಗೊಳಿಸುವ ಹೊಣೆ ನನ್ನದಾಗಿತ್ತು. ಈ ಸಂದರ್ಭದಲ್ಲಿ ಎನ್ಕೆಯವರ 'ಇಲೆಕ್ಶನ್' ರಚಿತವಾದುದು ಮತ್ತು ಕಾಲೇಜಿನ ರಂಗಭೂಮಿಯಲ್ಲಿ ಅನಂತರ ಪ್ರದರ್ಶಿತವಾದುದು. ಈ ಪ್ರಹಸನವನ್ನು ಬರೆಬರೆದಂತೆಯೆ ಎನ್ಕೆ ನನ್ನ ಮುಂದೆ, ಇತರ ಆತ್ಮೀಯರ ಮುಂದೆ ಓದಿ ತೋರಿಸುತ್ತಿದ್ದರು. ಅವರ ಬರೆವಣಿಗೆಯ ಓಘವನ್ನು ನಾನಾಗಲೆ ಕಂಡುಕೊಂಡುದು. ನನ್ನ ಮೆಚ್ಚಿಕೆ ಅವರಿಗೆ ಸಂತೋಷ ಕೊಡುತ್ತಿತ್ತು ಎಂದು ಹೇಳಬೇಕಾಗಿಲ್ಲ.

ಕರ್ನಾಟಕ ಕಾಲೇಜಿನ ಆ ದಿನಗಳು ನಮ್ಮ ಜೀವನದ ಸಾರವತ್ತಾದ ಕಾಲ. ಆಗ ನಮ್ಮದೇ ಒಂದು ಎಳೆಯರ ಗುಂಪು ಇತ್ತು. ಕುಲಕರ್ಣಿ ಶ್ರೀನಿವಾಸರು ಈ ಗುಂಪಿನ ಪ್ರಮುಖ ಸದಸ್ಯರು. ಅವರಿಗೆ ನೃತ್ಯಕಲೆಯಲ್ಲಿ ಅಭಿರುಚಿ. ಅವರದೊಂದು ವಾದ್ಯ ಮೇಳವೂ ಇತ್ತು. ನರ್ತನ ರೀತಿಯಲ್ಲಿ ಉದ್ದವಾಗಿ ತಲೆಗೂದಲು ಬೆಳೆಸಿದ್ದರಿಂದ ಅವರಿಗೆ 'ಕೂದಲ ಶೀನ' ಎಂದು ಹೆಸರು ಬಿದ್ದಿತ್ತು. ಟಿ. ರೂಬೆನ್, ಎನ್ಕೆ ಮತ್ತು ನಾನು ಈ ಗುಂಪಿನ ಇತರ ಸದಸ್ಯರು. ನಾವು ನಾಲ್ವರೂ ಸದಾ ಕೂಡಿಕೊಂಡೇ ಇರುತ್ತಿದ್ದೆವು, ಓಡಾಡುತ್ತಿದ್ದೆವು. ನಮ್ಮ ಈ ಗುಂಪು ಎಂದೆಂದೂ ಒಡೆಯಲಾರದ ಗೆಳೆಯರ ಗುಂಪಾಗಿತ್ತು. ಕಲೆ–ಸಾಹಿತ್ಯಗಳ ನಂಟು ನಮ್ಮನ್ನು ಕಟ್ಟಿ ಹಾಕಿತ್ತು. ನಮ್ಮ 'ಕೂದಲ ಶೀನ' ಈಗಿಲ್ಲ. ಮೊಟ್ಟ ಮೊದಲ ನರ್ತಕನೆಂದು ಆಧುನಿಕ ಕರ್ನಾಟಕದ ತುಂಬ ಹೆಸರು ಪಡೆದು, ಮುಂಬಯಿ-ಮದ್ರಾಸಗಳಲ್ಲೂ ನರ್ತನ ಪ್ರದರ್ಶನಗಳನ್ನು

ನಡೆಸಿ, ಹಲವೆಡೆಗಳಲ್ಲಿ ನರ್ತನ ಸಂಸ್ಥೆಗಳನ್ನು ಕಟ್ಟಿ, ನೂರಾರು ಜನ ತರುಣ-ತರುಣಿಯರಿಗೆ ನೃತ್ಯ ಕಲೆಯಲ್ಲಿ ತರಬೇತಿಯಿತ್ತು ಕಲಾ ಸೇವೆಗೈದ ಕುಲಕರ್ಣಿ ಶ್ರೀನಿವಾಸರನ್ನು ಇಂದಿನ ಕನ್ನಡ ಜನ ಮರೆತುಬಿಟ್ಟಿದೆ. ಆದರೆ ಸ್ನೇಹಿತರ ಹೃದಯಗಳಲ್ಲಿ ಅವರು ಸ್ಥಿರವಾಗಿ ನೆಲಸಿದ್ದಾರೆ. ಎನ್ಕೆಯವರ 'ಕಲೋಪಜೀವಿ' (೧೯೫೮) ಕಾದಂಬರಿಯಲ್ಲಿ ಅವರು ಅಮರತ್ವ ಪಡೆದಿದ್ದಾರೆ.

ಟಿ. ರೂಬೆನ್ ಆಗ ಕರ್ನಾಟಕ ಕಾಲೇಜಿನ ವಿದ್ಯಾರ್ಥಿವೃಂದಗಳಲ್ಲಿ ಆಂಗ್ಲ ಭಾಷೆಯ ವಾಗ್ಮಿಗಳೆಂದು ಖ್ಯಾತರಾಗಿದ್ದರು. ಕಾಲೇಜಿನ ವಕ್ತೃತ್ವ ಕಲಾ ವಿಭಾಗಕ್ಕೆ ಕಾರ್ಯದರ್ಶಿಗಳೆಂದು ಆಯ್ಕೆಯಾಗಿದ್ದರು. ಕಾಲೇಜಿನ ವಾಕ್-ಸ್ಪರ್ಧೆಗಳಲ್ಲಿ ಅವರ ಭಾಷಣ ಕೇಳಲು ವಿದ್ಯಾರ್ಥಿಗಳೂ ಪ್ರಾಧ್ಯಾಪಕರೂ ಕಿಕ್ಕಿರಿದು ನೆರೆಯುತ್ತಿದ್ದರು. ಉತ್ಸಾಹದಿಂದ ತುಂಬಿ ತುಳುಕುತ್ತಿದ್ದ ಕಾಲೇಜಿನ ಗ್ಯಾಲರಿ ಹಾಲ್ ಅವರ ಭಾಷಣಗಳನ್ನು ಏಕಚಿತ್ತದಿಂದ ಆಲಿಸುತ್ತ ತಲೆದೂಗುತ್ತಿತ್ತು. ಅವರ ಮಾತು ಮುಗಿದಾಗ ನೆರೆದ ಸಭಿಕರೆಲ್ಲರ ಚಪ್ಪಾಳೆ ತಟ್ಟುವ, ಡೆಸ್ಕುಗಳನ್ನು ಕುಟ್ಟುವ ಪ್ರೋತ್ಸಾಹನಪರ ಘೋಷಗಳ ವೈವಿಧ್ಯದಿಂದ ಕಿವಿ ಗಡಚಿಕ್ಕುತ್ತಿದ್ದುವು. ವಾಕ್-ಸ್ಪರ್ಧೆಗಳ ಪ್ರಥಮ ಬಹುಮಾನಗಳೆಲ್ಲ ರೂಬೆನ್ನರ ಪಾಲಿಗೇ. ಅಂತರ್ವಿಶ್ವವಿದ್ಯಾಲಯಗಳ ಸ್ಪರ್ಧೆಗಳಲ್ಲೂ ಜಯಭೇರಿ ಹೊಡೆಯಿಸಿ ಕರ್ನಾಟಕ ಕಾಲೇಜಿಗೆ ಗೌರವ ತಂದು ಕೊಟ್ಟಿದ್ದರು. ನಮ್ಮ ಗುಂಪಿನಲ್ಲಿ ಟಿ. ರೂಬೆನ್ ಒಂದು ಶಿಸ್ತಿಗೊಳಪಟ್ಟ ಸಮಯನಿಷ್ಠ ವ್ಯಕ್ತಿ. ಅವರದು ಟಿಪ್-ಟಾಪ್ ಪಾಶ್ಚಾತ್ಯ ವೇಷಭೂಷಣ. ಅಚ್ಚುಕಟ್ಟು, ನಿಯಮಿತತನ ಅವರ ಸ್ವಭಾವ. ಗೊತ್ತುಪಡಿಸಿದ ಸ್ಥಳ-ವೇಳೆಗಳಲ್ಲಿ ತಪ್ಪದೆ ನಮ್ಮ ಮೂವರ ದಾರಿ ಕಾಯುತ್ತ ನಿಲ್ಲುತ್ತಿದ್ದರು. ಎನ್ಕೆ ಮತ್ತು ನಾನು ೫, ೧೦ ನಿಮಿಷ ತಡವಾಗಿಯಾದರೂ ಅವರನ್ನು ಕೂಡಿಕೊಳ್ಳುತ್ತಿದ್ದೆವು. ಒಮ್ಮೊಮ್ಮೆ ತುಸು ಹೆಚ್ಚು ಕಾಲವೂ ಅವರನ್ನು ಕಾಯಿಸುತ್ತಿದ್ದೆವು. ಕೂಡಲ ಶೀನ ಮಾತ್ರ ಯಾವ ಕಟ್ಟಿಗೂ ಒಳಪಡದ ಆಸಾಮಿ. ಅವರ ಪತ್ತೆಯೇ ಇರುತ್ತಿರಲಿಲ್ಲ! ಇಂಥ ಸಂದರ್ಭಗಳೆಷ್ಟೋ ನಡೆದು ಕೊನೆಗೆ ರೂಬೆನ್ ನಮಗೆ Incorrigible Trio (ತಿದ್ದಲಸಾಧ್ಯತ್ರಯರು) ಎಂಬ ಪ್ರಶಸ್ತಿ ನೀಡಿದ್ದರು. ನಾವು ಅದನ್ನು ಸಂತೋಷದಿಂದ ಸ್ವೀಕರಿಸಿದ್ದೆವು! ಎನ್ಕೆಯವರ ಸ್ಫೂರ್ತಿಗೆ ಇಷ್ಟು ಸಾಕು. 'ಪಂಕ್ಚುಯಾಲಿಟಿಯ ಪರಮಾವಧಿ' ಎಂಬ ನಗೆಬರಹವನ್ನು ಬರೆದು ಪ್ರಕಟಿಸಿಬಿಟ್ಟರು. ಬಹುಶಃ ಇದೇ ಸುಮಾರಿಗೆ ರೂಬೆನ್ ಅವರೂ ಎನ್ಕೆಯವರ 'ನಡುಮನೆಯಲ್ಲಿ' ಏಕಾಂಕ ಸಂಗ್ರಹ ಕುರಿತ ವಿಮರ್ಶೆಯನ್ನು ಪ್ರಸಿದ್ಧ ಆಂಗ್ಲ ಪತ್ರಿಕೆಯಾಗಿದ್ದ 'ತ್ರಿವೇಣಿ'ಯಲ್ಲಿ ಪ್ರಕಟಗೊಳಿಸಿದ್ದರು. ಟಿ. ರೂಬೆನ್ ಸಂಗೀತಪ್ರಿಯರು. ಕೂಡಲ ಶೀನರ ವಾದ್ಯಮೇಳದಲ್ಲಿ ಸಿತಾರವಾದಕರೂ ಆಗಿದ್ದರು.

ಕುಲಕರ್ಣಿ ಶ್ರೀನಿವಾಸರು ಕಾಲೇಜು ಸೇರುವ ಮೊದಲೆ ಮದುವೆ ಮಾಡಿಕೊಂಡಿದ್ದರು. ಲಕಮನಹಳ್ಳಿಗಲ್ಲಿಯಲ್ಲಿ ಒಂದು ಚಿಕ್ಕ ಮನೆಯನ್ನು ಬಾಡಿಗೆಗೆ ತೆಗೆದುಕೊಂಡು

ಸಂಸಾರರಥವನ್ನೂ ಹೂಡಿದ್ದರು. ನಮ್ಮ ಗುಂಪಿನಲ್ಲಿ ವಿದ್ಯಾರ್ಥಿದೆಸೆಯಲ್ಲೆ ಎಳೆ ಹರೆಯದಲ್ಲೆ ಮದುವೆಯಾಗಿದ್ದ ಇನ್ನೊಬ್ಬರೆಂದರೆ ಎಸ್ಕೆ. ದಾಂಪತ್ಯ ಜೀವನದಲ್ಲಿ ಕುಲಕರ್ಣಿ ಶ್ರೀನಿವಾಸರು ಎಸ್ಕೆಯವರಿಗೆ ಸೀನಿಯರ್. ಅವರಿಗೆ ಒಬ್ಬಿಬ್ಬರು ಮಕ್ಕಳಾಗಿದ್ದರೆ, ಎಸ್ಕೆ ಆದೇ ಮದುವೆಯಾಗಿ ಸ್ವಶುರಗೃಹದಲ್ಲೆ ಸಂಸಾರ ನೌಕೆಯನ್ನು ಏರಿದ್ದರು. ಎಸ್ಕೆಯವರ ಸಾಹಿತ್ಯ ಕೃತಿಗಳಲ್ಲಿ ಮಧುರ ದಾಂಪತ್ಯ ಜೀವನದ ಪಡಿನೆಳಲು ಶಾಶ್ವತಗೊಂಡುದನ್ನು ಅವರ ವಾಚಕರೆಲ್ಲ ಬಲ್ಲರು.

ನಮ್ಮ ಗುಂಪು ಕುಲಕರ್ಣಿ ಶ್ರೀನಿವಾಸರ ಮನೆಯಲ್ಲಿ ಆಗಾಗ ಸೇರುತ್ತಿತ್ತು. ಕಲಾ ರಸಿಕರಾದ ಶ್ರೀನಿವಾಸರ ರಸವತ್ತಾದ ಹರಟೆ, ಹೊಟ್ಟೆ ಹುಣ್ಣಾಗುವಂತೆ ಬಿದ್ದು ಬಿದ್ದು, ಉಚ್ಚ ಸ್ವರದಲ್ಲಿ ಕೇಕೆ ಹಾಕಿ, ಉಸಿರು ಗಟ್ಟಿಕೊಂಡು ನಗುವ ನಗೆ, ಚೇಷ್ಟೆ-ಕುಚೇಷ್ಟೆಗಳಲ್ಲಿ ವೇಳೆ ಕಳೆದುದೇ ತಿಳಿಯುತ್ತಿರಲಿಲ್ಲ. ಅವರ ವಿವಿಧ ರೀತಿಯ ಅಳು-ನಗುಗಳ ಮೂಕಾಭಿನಯವು ಅವರದೇ ಮೌಲಿಕ ಕಲೆಯೆನಿಸಿತ್ತು. ಕಾಲೇಜಿನ ಗ್ಯಾಲರಿ ಹಾಲಿನಲ್ಲಿ ಇದರ ಪ್ರಯೋಗಗಳು ಆಗಾಗ ನಡೆಯುತ್ತಿದ್ದವು. ಪ್ರೇಕ್ಷಕರನ್ನು ನಗೆಗಡಲಲ್ಲಿ ತೇಲಾಡಿಸಿ ಬಿಡುತ್ತಿದ್ದರು. ಈ ಮೂಕಾಭಿನಯ ಕಲೆಯೇ ಮುಂದೆ ಶ್ರೀನಿವಾಸರನ್ನು ನರ್ತನ ಕಲೆಗೆ ತೊಡಗಿಸಿತ್ತು. ರಾಗಿಣಿದೇವಿ ಉದಯಶಂಕರರಂಥ ಅಂತರರಾಷ್ಟ್ರೀಯ ಖ್ಯಾತಿಯ ನೃತ್ಯ ಕಲಾ ಪಟುಗಳು ಹುಬ್ಬಳ್ಳಿ-ಧಾರವಾಡಗಳಿಗೆ ಬಂದು ಹೋದ ಮೇಲಂತೂ ಕುಲಕರ್ಣಿ ಶ್ರೀನಿವಾಸರ ಕಲೋತ್ಸಾಹ ಮೇರೆ ಮೀರಿತ್ತು. ನೃತ್ಯ ಕಲಾಸೇವೆಯನ್ನೇ ತಮ್ಮ ಜೀವನದ ಪರಮ ಧ್ಯೇಯವನ್ನಾಗಿಸಿಕೊಂಡ ಕುಲಕರ್ಣಿ ಶ್ರೀನಿವಾರ ಆದರ್ಶನಿಷ್ಠೆ ಮತ್ತು ಧೈರ್ಯ ಸ್ಥೈರ್ಯಗಳು ಎಲ್ಲರನ್ನೂ ಚಕಿತಗೊಳಿಸಿದ್ದವು. ಶ್ರೀನಿವಾಸರ ಸಾಹಿತ್ಯ ಸೇವೆಯೂ ಆರಂಭವಾದುದು ಆಗಲೆ. ಪಂಡಿತ ತಾರಾನಾಥರು ತಾವು ನಡೆಸುತ್ತಿದ್ದ 'ಪ್ರೇಮ' ಪತ್ರಿಕೆಯ ಸಂಪಾದಕತ್ವವನ್ನು ಇವರಿಗೆ ವಹಿಸಿ ಕೊಟ್ಟಿದ್ದರು. ಈ ಪತ್ರಿಕೆಯಲ್ಲಿ ಎಸ್ಕೆಯವರ ಮತ್ತು ನನ್ನ ಪುಸ್ತಕ-ವಿಮರ್ಶೆಗಳು ಪ್ರಕಟವಾಗುತ್ತಿದ್ದವು. ಶ್ರೀನಿವಾಸರು ಅನಂತರ ಆರಂಭಿಸಿದ 'ಪ್ರೇಮ ಪ್ರಕಟನ ಮಾಲೆ'ಯಲ್ಲಿ ಎಸ್ಕೆಯವರ **'ನಡುಮನೆಯಲ್ಲಿ'** ಏಕಾಂಕ ಸಂಗ್ರಹ ಬೆಳಕು ಕಂಡಿತು. ಈ ಮಾಲೆಯಲ್ಲಿ ಪ್ರಕಟವಾದ 'ಹತ್ತು ಸಣ್ಣ ಕಥೆಗಳು' ಮತ್ತು 'ಪರಾಗ' ಎಂಬ ಕವನ ಸಂಗ್ರಹಗಳಲ್ಲಿ ಎಸ್ಕೆಯವರ ಮತ್ತು ನನ್ನ ಒಂದೊಂದು ಸಣ್ಣಕತೆ-ಕವನಗಳು ಪ್ರಕಟವಾದವು. ಶ್ರೀನಿವಾಸರ 'ಸಂಪಿಗೆ' ಎಂಬ ಸೊಗಸಾದ ಕಥಾ ಸಂಗ್ರಹವು ಎಸ್ಕೆಯವರನ್ನು ಹರಟೆ-ಲಲಿತ ಪ್ರಬಂಧಗಳತ್ತ ವಾಲುವಂತೆ ಮಾಡಿದ್ದನ್ನೂ ಮರೆಯುವಂತಿಲ್ಲ.

ಆಗ ಕಾಲೇಜಿನ ವಿದ್ಯಾರ್ಥಿಗಳ ಮೇಲೆ-ವಿಶೇಷವಾಗಿ ಕನ್ನಡ ವಿದ್ಯಾರ್ಥಿಗಳ ಮೇಲೆ ಪ್ರಭಾವ ಬೀರುತ್ತಿದ್ದ ಪ್ರಾಧ್ಯಾಪಕರೆಂದರೆ ಆರ್. ವಿ. ಜಾಗೀರದಾರರು ಮತ್ತು ವಿ. ಟಿ. ಸಾಸನೂರರು. ಆದೇ ಇಂಗ್ಲಂಡಿನಿಂದ ಮರಳಿ ಬಂದಿದ್ದು ಸಂಸ್ಕೃತ ವಿಷಯದ

ಪ್ರಾಧ್ಯಾಪಕರಾಗಿದ್ದ ಜಾಗೀರದಾರರು ಕನ್ನಡದಲ್ಲಿ ಕ್ರಾಂತಿಕಾರಕ ನಾಟಕಕಾರರೆನಿಸಿದ್ದರು. ಹೊಚ್ಚ ಹೊಸ ಮಾದರಿಯ ಸಾಮಾಜಿಕ ನಾಟಕಗಳನ್ನು ರಚಿಸಿ, ಕಾಲೇಜಿನ ವಿದ್ಯಾರ್ಥಿ ಸಮ್ಮೇಲನಗಳಲ್ಲಿ ವಿದ್ಯಾರ್ಥಿಗಳಿಂದ ಆಡಿಸಿ, ಒಮ್ಮೊಮ್ಮೆ ತಾವೂ ನಾಯಕ ಪಾತ್ರವಹಿಸಿ ಪ್ರದರ್ಶಿಸುತ್ತಿದ್ದರು. ಕೃತ್ರಿಮವೆನಿಸುತ್ತಿದ್ದ ಕಂಪನಿ ನಾಟಕಗಳನ್ನೂ ಕೆಲವು ಕಲಾ ಹವ್ಯಾಸೀ ಪ್ರಯೋಗಗಳನ್ನು ನೋಡಿ ನೋಡಿ ಜಿಡ್ಡು ಹಿಡಿದಿದ್ದ ಮನಸ್ಸಿಗೆ ಜಾಗೀರದಾರರ ನಾಟಕಗಳ ಹೊಸ ಗಾಳಿ ತಾಕಿ ಉಲ್ಲಾಸವುಂಟಾಗುತ್ತಿತ್ತು. ಸಂಪ್ರದಾಯಸ್ಥ ಬ್ರಾಹ್ಮಣ ಸಮಾಜದ ಕಟುಟೀಕೆಯೆ ಈ ನಾಟಕಗಳ ವಸ್ತು ಹಾಗೂ ಗುರಿ. ಆಡುಮಾತಿನ ಸಂವಾದ ಶೈಲಿಯಿಂದ ಈ ನಾಟಕಗಳ ಸನ್ನಿವೇಶಗಳು, ಪಾತ್ರಗಳು ಜೀವಕಳೆಯಿಂದ ಕಳಕಳಿಸುತ್ತಿದ್ದವು. ಬಗೆಬಗೆಯ ಕಾಕು-ಕೊಂಕುಗಳುಳ್ಳ ಹಾಸ್ಯ-ವಿಡಂಬನೆಗಳು ಇಲ್ಲಿಯ ಸಮಾಜ ವಿಮರ್ಶೆಯ ಪ್ರಮುಖ ಸಾಧನಗಳಾಗಿದ್ದವು. ಈ ನಾಟಕಗಳು ತರುಣರಿಗೆ ವಿನೋದದೊಂದಿಗೆ ವಿಚಾರ ಪ್ರಚೋದನೆಯನ್ನೂ ಒದಗಿಸುತ್ತಿದ್ದವು. ಈ ನಾಟಕ ಪ್ರಯೋಗಗಳು ಕಾಲೇಜಿನಲ್ಲಲ್ಲದೆ ಸಾರ್ವಜನಿಕರಿಗಾಗಿ ಧಾರವಾಡದ ನಾಟಕ ಮಂದಿರಗಳಲ್ಲೂ ನಡೆಯುತ್ತಿದ್ದವು. ಜಾಗೀರದಾರರ ಮೊದಮೊದಲ ನಾಟಕಗಳಲ್ಲಿ 'ಹರಿಜನ್ವಾರ'ವು ತನ್ನ ಶೀರ್ಷಿಕೆಯಿಂದಲೂ ಧಾರವಾಡದ ಬ್ರಾಹ್ಮಣ ಸಮಾಜವನ್ನು ಕೆಣಕಿತ್ತು, ಕೆರಳಿಸಿತ್ತು. ಬ್ರಾಹ್ಮಣ ಸಮಾಜವನ್ನು ಕುರಿತು ನಾಟಕಕಾರರ ಅವಹೇಳನಪರ ವಿಚಾರ ಧೋರಣೆಯ ವಿರುದ್ಧವಾಗಿ ಬ್ರಾಹ್ಮಣ ಸಭೆ ಸೇರಿ ಈ ನಾಟಕ ಪ್ರಯೋಗಗಳನ್ನು ಖಂಡಿಸುವ, ತಡೆಹಿಡಿಯುವ ಗೊತ್ತುವಳಿಗಳನ್ನು ಮಂಡಿಸಲಾಗಿತ್ತು. ಈ ಸಭೆಯಲ್ಲಿ ನಮ್ಮ ಕೂದಲ ಶೀನರು ನಾಟಕಾರರ ಪರವಾದಿಸಿ, ಸಭೆಯಿಂದ ಹೊರದಬ್ಬಲ್ಪಟ್ಟಿದ್ದರು. ಇದೆಲ್ಲವು ಶ್ರೀರಂಗರ (ಈ ಸುಮಾರಿಗೆ ಜಾಗೀರದಾರರು ಶ್ರೀರಂಗ ಕಾವ್ಯನಾಮವನ್ನು ಬಹಿರಂಗಗೊಳಿಸಿದ್ದರು) ನಾಟಕಗಳ ಗೆಲುವನ್ನೆ ಸ್ಥಾಪಿಸುವಂತಾಗಿತ್ತು. ಎನ್ಕೆ ನಾಟಕಕಾರರಾಗಿ ಮುಂದೆ ಬಂದುದು ಈ ಸನ್ನಿವೇಶದಲ್ಲಿ. ಶ್ರೀರಂಗರ ಪ್ರಭಾವವು ಅವರ ಸ್ಫೂರ್ತಿಗೆ ಮೂಲ ಪ್ರೇರಣೆ. ಇದನ್ನು ನೆನೆದು ಎನ್ಕೆ ತಮ್ಮ 'ಇಲೆಕ್ಶನ್' ಜಡಿಹೊತ್ತಿಗೆಯನ್ನು ಶ್ರೀರಂಗರ ಮುನ್ನುಡಿ ರೂಪದ ಹರಕೆಯೊಂದಿಗೆ ಪ್ರಕಟಿಸಿದರು.

ಪ್ರಾ. ವಿ. ಟಿ. ಸಾಸನೂರರು ಶ್ರೀರಂಗರ ಆಪ್ತಸ್ನೇಹಿತರಾಗಿದ್ದರು. ಇವರು ಕನ್ನಡ ವಿದ್ಯಾರ್ಥಿಗಳ ಹೃದಯಗಳನ್ನು ಗೆದ್ದ ಪ್ರಾಧ್ಯಾಪಕರಾಗಿದ್ದರೆಂದು ಈ ಮೊದಲೆ ಸೂಚಿಸಿದೆಯಷ್ಟೆ? ಅವರದು ತುಂಬ ಆಕರ್ಷಕ ವ್ಯಕ್ತಿತ್ವ. ಅವರು ಪಾಠ ಹೇಳುತ್ತಿದ್ದ ಶ್ರೀರಾಮಾಶ್ವಮೇಧ ಕಾವ್ಯದ ಮುದ್ದಣ-ಮನೋರಮೆಯರ ಶೃಂಗಾರ-ಹಾಸ್ಯಭರಿತ-ಸಂವಾದಗಳು ಮನಸ್ಸಿನ ಮೇಲೆ ಅಚ್ಚೊತ್ತಿದಂತೆ ಮೂಡುತ್ತಿದ್ದವು. ಅವುಗಳ ವರ್ಣರಂಜಿತ ಛಾಯೆ-ಪ್ರತಿಚ್ಛಾಯೆಗಳು ಎನ್ಕೆಯವರ 'ಇಲೆಕ್ಶನ್', 'ಬೆಕ್ಕಿ ಹಬ್ಬ', 'ಉಷಃಪಾರಾಯಣ', 'ನಳೋಪಾಖ್ಯಾನ', (ಏಕಾಂಕ ಮತ್ತು ನಗೆಯ ಗೀತರೂಪಕ), 'ಕರ್ಣ ವಿಷಾಯನ', 'ಬುರ್ ಕೋಟು', 'ದಿಗ್ದರ್ಶಕ ಸಾರ್ವಭೌಮ', 'ಸಂಸಾರ

ಕಾರಾಗೃಹ' ಮುಂತಾದ ಇನ್ನೂ ಹಲವಾರು ಏಕಾಂಕಗಳಲ್ಲಿ ಭಿನ್ನ ಭಿನ್ನ ದಾಂಪತ್ಯ ಕಲ್ಪನಾ ರಮ್ಯತೆಯೊಂದಿಗೆ ಆಡುನುಡಿಯ ಸಹಜತೆಯ ಬೆಡಗಿನಿಂದ ಸ್ವಾನುಭವದ ರಸಿಕತೆಯಿಂದ ಹೃದ್ಯವಾಗಿ ಮೂಡಿವೆ. ಸಾಸನೂರರು ಇಪ್ಪತ್ತೆಂಟನೆಯ ಹರೆಯದಲ್ಲೆ ಕ್ಷಯರೋಗ ಪೀಡಿತರಾಗಿ ಅಕಾಲ ಮರಣಕ್ಕೀಡಾದರು (೧೯೩೬). ಅವರ ನಿಧನವು ಕನ್ನಡ ಆನರ್ಸ್ ಮತ್ತು ಮೊದಲ ವರ್ಷದ ಎಂ.ಎ. ವಿದ್ಯಾರ್ಥಿಗಳಾಗಿದ್ದ ನಮಗೆಲ್ಲರಿಗೆ ಬರಸಿಡಿಲಾಗಿತ್ತು, ನಮ್ಮ ವಿದ್ಯಾರ್ಜನೆಯ ಭವಿಷ್ಯಕ್ಕೂ ದುರಂತ ಸೂಚಕವಾಗಿತ್ತು. ಇದು ಹಳೆಯ ಕಹಿನೆನಪು. ಆದರೆ ಸ್ಫುರದ್ರೂಪಿಯೂ ಸಂಸ್ಕೃತಿಯ ಸಾಕಾರಮೂರ್ತಿಯೂ ಆಗಿದ್ದ ಎ. ಟಿ. ಸಾಸನೂರರ ಮೋಹಕ ವ್ಯಕ್ತಿರೂಪ ಇಂದಿಗೂ ನನ್ನ ಸ್ಮೃತಿಪಟಲ ದಲ್ಲಿ ಸ್ಫುಟವಾಗಿ ತಳತಳಿಸುತ್ತಿದೆ. ಎನ್ಕೆಯವರು ಕುಲಕರ್ಣಿ ಶ್ರೀನಿವಾಸರ 'ಪ್ರೇಮ ಪ್ರಕಟನಾಲಯ'ದಲ್ಲಿ ಪ್ರಕಟಿಸಿದ್ದ ತಮ್ಮ 'ನಡುಮನೆಯಲ್ಲಿ' ಏಕಾಂಕಸಂಗ್ರಹ (ಏಪ್ರಿಲ್ ೧೯೩೭)ವನ್ನು 'ವಾತ್ಸಲ್ಯದ ನೆನಪಿಗಾಗಿ' ಗುರುವರ್ಯ ಕೈ. ವಾ. ಎ. ಟಿ. ಸಾಸನೂರರ ಪೂಜ್ಯ ಪಾದಗಳಿಗೆ ಅರ್ಪಿಸಿ ಗುರು ಋಣವನ್ನು ಸ್ಮರಿಸಿಕೊಂಡಿದ್ದಾರೆ.

೧೯೩೩ ರಿಂದ ೧೯೩೬ರ ವರೆಗೆ ನಾವಿಬ್ಬರೂ ಧಾರವಾಡದಲ್ಲಿ ವಿದ್ಯಾರ್ಥಿ ದೆಸೆ ಯಲ್ಲಿದ್ದಾಗ ಎನ್ಕೆ ನನ್ನನ್ನು ಒಂದೆರಡು ಸಲ ತಮ್ಮ ಮನೆಗೆ ಎಂದರೆ ತಮ್ಮ ಸ್ವಶುರ ಗೃಹಕ್ಕೆ ಪ್ರೀತಿಯಿಂದ ಕರೆದೊಯ್ದಿದ್ದರು. ಅಲ್ಲಿ ಅವರ ಅತ್ತೆ-ಮಾವಂದಿರ, ಪ್ರೀತಿಯ ಮಡದಿಯ ಭೆಟ್ಟಿಯಾಗುತ್ತಿತ್ತು. ಅವರ ಮಾವಂದಿರು ಬುರ್ಲಿಯವರು, ಧಾರಾಳಿಗಳೂ ಹೃದಯವಂತರೂ ರಸಿಕರೂ ಆಗಿದ್ದರು. ಎನ್ಕೆಯವರ ಹಿರಿಯ ಅಣ್ಣಂದಿರೂ ಅವರ ಹಿರಿಯ ಅಳಿಯಂದಿರು. ಚಿಕ್ಕ ಅಳಿಯಂದಿರಾದ ಎನ್ಕೆಯವರಲ್ಲಿ ಮಾವಂದಿರಿಗೆ ಹೆಚ್ಚಿನ ಮೆಚ್ಚು. ಎನ್ಕೆಯವರ ಸ್ನೇಹಿತನಾಗಿದ್ದ ನನ್ನನ್ನು ಅವರು ಅದೇ ಸಲುಗೆ ಯಿಂದ ಏಕವಚನದಿಂದ ಮಾತಾಡಿಸಿ ಬರಮಾಡಿಕೊಳ್ಳುತ್ತಿದ್ದರು. ದಪ್ಪನಾದ ಮೈಕಟ್ಟು ಗಿಡ್ಡ ನಿಲುವುಳ್ಳ ತುಂಬುಗಲ್ಲದ ಅವರು ಒಳ್ಳೇ ಠೀವಿಯಿಂದ ಬೀಸಾಗಿ ಕುಳಿತುಕೊಂಡು ಎಲೆಯಡಿಕೆ-ತಂಬಾಕು ಸೇವನೆಯಲ್ಲಿರುತ್ತಲೆ ಆಪ್ತೇಷ್ಟರೊಂದಿಗೆ ಬಿಚ್ಚು ಹೃದಯದಿಂದ ದೊಡ್ಡ ಧ್ವನಿಯಿಂದ ಸ್ವಾರಸ್ಯವಾಗಿ ಹರಟೆ ಹೊಡೆಯುತ್ತ, ಚಹ-ಉಪಹಾರಗಳ ಆತಿಥ್ಯವೀಯುತ್ತ, ನಕ್ಕುನಗಿಸುವುದರಲ್ಲಿ ಮೈಮರೆಯುತ್ತಿರುವುದೇ ಅವರ ಜೀವನ ರಸಿಕತೆಯ ಒಂದು ಭಾಗವಾಗಿತ್ತು. ಚಿಕ್ಕಂದಿನಲ್ಲೆ ತಂದೆಯನ್ನು ಕಳೆದುಕೊಂಡ ಎನ್ಕೆಗೆ ಇವರು ತಂದೆಯೂ ಆಗಿದ್ದರು, ಮಾವಂದಿರೂ ಆಗಿದ್ದರು. 'ನಾನಿ' ಎಂದೇ ಇವರನ್ನು ಏಕವಚನದಲ್ಲಿ ಕರೆಯುವ ಸಲುಗೆ ಇವರದಾಗಿತ್ತು. ಎನ್ಕೆಯವರ ಏಕಾಂಕಗಳಲ್ಲಿ ಈ ಮಾವಂದಿರ ಸರಸ ಪಾತ್ರನಿರೂಪಣೆ ವಿವಿಧ ಭಂಗಿಗಳಲ್ಲಿ ಬಂದಂತಿದೆ.

೧೯೩೬ರಲ್ಲಿ ಪ್ರಾ. ಎ. ಟಿ. ಸಾಸನೂರರು ಅಕಾಲಿಕವಾಗಿ ನಿಧನ ಹೊಂದಿದ್ದರಿಂದ ನಾನು ಕೊನೆಯ ವರುಷದ ಎಂ.ಎ. ವ್ಯಾಸಂಗಕ್ಕಾಗಿ ಪೂಜ್ಯ ರಂ. ಶ್ರೀ. ಮುಗಳಿಯವರ ಮಾರ್ಗದರ್ಶನ ಪಡೆಯಲೆಂದು ಸಾಂಗಲಿಗೆ ಹೋದೆ. ಆಗ ಕನ್ನಡ ಎಂ.ಎ. ವಿದ್ಯಾರ್ಥಿ

ಗಳಿಗೆಂದು ಎಂಟೆಂಟು ದಿನಗಳ ಶಿಕ್ಷಣ-ಶಿಬಿರಗಳು ಸಾಂಗಲಿ-ಕೊಲ್ಲಾಪುರಗಳಲ್ಲಿ ನಡೆಯುತ್ತಿದ್ದವು. ಆಗ ಎನ್ಕೆ ಮತ್ತು ಕುಲಕರ್ಣಿ ಶ್ರೀನಿವಾಸರು ಪ್ರಥಮ ಎಂ.ಎ. ತರಗತಿಯಲ್ಲಿದ್ದು, ಶಿಕ್ಷಣ ಶಿಬಿರಗಳಲ್ಲಿ ನನ್ನೊಂದಿಗಿದ್ದರು. ವಿದ್ಯಾರ್ಥಿವತ್ಸಲರಾದ ಪೂಜ್ಯ ಮುಗಳಿಯವರ ಸಾನ್ನಿಧ್ಯ ಹಾಗೂ ಅವರ ವಿದ್ವತ್ತಿನ ಲಾಭ ನಮಗೆ ದೊರೆಯಿತು. ಸಾಂಗಲಿಯಲ್ಲಿ ನಾವು ಮೂವರೂ ಕೂಡಿ ಕಳೆದ ದಿನಗಳು ಅವಿಸ್ಮರಣೀಯ. ಕರ್ನಾಟಕ ಸಾಂಸ್ಕೃತಿಕ ಚರಿತ್ರೆಯನ್ನು ಕುರಿತ ಪ್ರಾ. ಮುಗಳಿಯವರ ಉಪನ್ಯಾಸಗಳು ಮತ್ತು ಅವರು ವಿನೋದಕ್ಕಾಗಿ ನಡೆಸುತ್ತಿದ್ದ ಸಾಹಿತ್ಯ ಕ್ರೀಡೆಗಳು ನೆನಪಿಗೆ ಬರುತ್ತವೆ. ಒಂದು ಸಂಜೆ 'ಚೈತಲಿ' ಎಂಬ ವಿಷಯವನ್ನು ಕುರಿತು ಕವಿತಾ ರಚನೆಯ ಸ್ಪರ್ಧೆ ಏರ್ಪಡಿಸಿದ್ದರು. ನಮ್ಮ ರಚನೆಗಳನ್ನು ಮೆಚ್ಚಿ ವಿಮರ್ಶಿಸಿ ಮಾರ್ಗದರ್ಶನ ಮಾಡಿದ ನೆನಪು ಮಾಸದಿದೆ.

ನಾನು ೧೯೩೭ರಲ್ಲಿ ಎಂ.ಎ. ಪರೀಕ್ಷೆ ಮುಗಿಸಿದೆ. ಆ ವರುಷ ನಿರುದ್ಯೋಗಿಯಾಗಿ ಪುಣೆಯಲ್ಲಿದ್ದೆ. ಎನ್ಕೆ ೧೯೩೮ರಲ್ಲಿ ಎಂ.ಎ. ಪರೀಕ್ಷೆಗೆ ಕುಳಿತುಕೊಳ್ಳಲು ಮುಂಬಯಿಗೆ ಹೋಗುವಾಗ ನನ್ನನ್ನೂ ಜತೆಗಿರಲು ಕರೆದೊಯ್ದರು. ಪರೀಕ್ಷೆ ಮುಗಿಯುವ ವರೆಗೆ ಅವರ ಚಿಕ್ಕ ಮಾವಂದಿರ ಮನೆಯಲ್ಲಿ ತಂಗಿದ್ದೆವು. ಆಗ ಅವರಿಗೆ ಪರೀಕ್ಷೆಯ ಸಿದ್ಧತೆಯಲ್ಲಿ ನೆರವೀಯುತ್ತಿದ್ದೆ. ೧೯೩೮ರಲ್ಲಿ ಪೂಜ್ಯ ಮುಗಳಿಯವರ ನೆರವಿನಿಂದ ನಾನು ಹುಬ್ಬಳ್ಳಿಯ ನ್ಯೂ ಇಂಗ್ಲಿಷ್ ಸ್ಕೂಲಿನಲ್ಲಿ ಅಧ್ಯಾಪಕನಾಗಿ ನೇಮಕಗೊಂಡೆ. ಆಗ ಎನ್ಕೆ ಗದುಗಿನ ವಿದ್ಯಾದಾನ ಸಮಿತಿ ಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದರು. ನನ್ನ ಅವರ ಅಗಲಿಕೆ ಆರಂಭವಾದುದು ಆಗಲೇ. ಆದರೂ ಇಬ್ಬರ ನಡುವೆ ಪತ್ರವ್ಯವಹಾರವಿತ್ತು. ಆಗ ಅವರು 'ವಸಂತ' ಮಾಸಪತ್ರಿಕೆಯನ್ನು ಆರಂಭಿಸಿ ನನಗೊಂದು ಕವಿತೆಯನ್ನು ಕಳುಹಲು ತಿಳಿಸಿದಾಗ 'ಇದೊ! ವಸಂತ!' ಎಂಬ ಕವಿತೆಯನ್ನು ಕಳಿಸಿದ್ದೆ. ಅದನ್ನು ಅವರು ತಮ್ಮ ಪತ್ರಿಕೆಯ ಮೊದಲ ಪುಟದ ಮೇಲೆ ಪ್ರಕಟಿಸಿದ್ದರು.

೧೯೪೯-೫೦ರಲ್ಲಿ ನಾವಿಬ್ಬರೂ ಬೆಳಗಾಂವಿಯ ಎಸ್. ಟಿ. ಕಾಲೇಜಿನಲ್ಲಿ ಬಿ. ಟಿ. ಪರೀಕ್ಷೆಯ ವ್ಯಾಸಂಗಕ್ಕಾಗಿ ಮತ್ತೆ ಒಟ್ಟಿಗೆ ಸೇರಿದೆವು. ಹೆಸರಾಂತ ಗಣಿತಜ್ಞ ರ್ಯಾಂಗ್ಲರ್ ಕಟ್ಟಿಯವರು ಅದೇ ವರುಷ ಆರಂಭವಾಗಿದ್ದ ಎಸ್. ಟಿ. ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ಪ್ರಾ. ಬಿ. ಎಂ. ಮೀಮಾಂಸಿ, ಆರ್. ಎ. ಕುಲಕರ್ಣಿ, ಸಾನೆ ಮೊದಲಾದವರು ನಮಗೆ ಪ್ರಾಧ್ಯಾಪಕರಾಗಿದ್ದರು. ಅಲ್ಲಿಯ ಶಿಕ್ಷಣಶಾಸ್ತ್ರದ ಅಧ್ಯಯನ-ಅಧ್ಯಾಪನಗಳ, ಸ್ವಾರಸ್ಯಭರಿತ ವಿಡಂಬನೆ ಎನ್ಕೆಯವರ 'ಬಿ. ಟಿ. ಬುದ್ಧಿವಂತ' ಏಕಾಂಕವಲ್ಲಿ ಮೂಡಿದೆ. ಬಿ. ಟಿ. ಪರೀಕ್ಷೆಯ ವ್ಯಾಸಂಗ ಮಾಡುತ್ತಲೆ ಎನ್ಕೆ 'ಕನ್ನಡ ಸಾಹಿತ್ಯವಾಹಿನಿ' ಎಂಬ ಜನಪ್ರಿಯ ಸಾಹಿತ್ಯ ಚರಿತ್ರೆಯನ್ನು ಬರೆದು ಮುಗಿಸಿದರು.

೧೯೫೨ರಲ್ಲಿ ಕರ್ನಾಟಕ ಕಾಲೇಜಿನಲ್ಲಿ ಅದೇ ತೆರವಾಗಿದ್ದ ಕನ್ನಡ ಅಸಿಸ್ಟಂಟ್ ಲೆಕ್ಚರರ್ ಸ್ಥಳಕ್ಕೆ ನನ್ನ ನೇಮಕವಾಯ್ತು. ಆಗ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದ

ಪ್ರಾ. ಎಸ್. ಎಸ್. ಮಾಳವಾಡರೊಂದಿಗೆ ಅಂದಿನಿಂದ ೧೯೬೧ರ ವರೆಗೆ ಸುದೀರ್ಘ ಸ್ನೇಹದ ಹಾಗೂ ಸಹೋದ್ಯೋಗದ ಲಾಭ ದೊರೆತುದನ್ನು ಮರೆಯುವ ಹಾಗಿಲ್ಲ. ಆಗ ಎನ್ಕೆ ಕೆಲಕಾಲ ಮಾಳಮಡ್ಡಿಯ ಕೆ. ಇ. ಬೋರ್ಡ್ ಹೈಸ್ಕೂಲಿನ ಅಧ್ಯಾಪಕರಾಗಿದ್ದರು. ಅನಂತರ ಮೂರು ವರುಷ ಕಾಲ 'ಕನ್ನಡ ಸಂಸ್ಕೃತಿ ಸಂಶೋಧನ ಸಂಸ್ಥೆ'ಯಲ್ಲಿ 'ಸಹಾಯಕ ಸಂಶೋಧಕ'ರೆಂದು ನೇಮಕಗೊಂಡಿದ್ದರು (೧೯೪೩-೪೬).ಆಗ ಮಾಳಮಡ್ಡಿಯಲ್ಲಿ ನಾನು ವಾಸವಾಗಿದ್ದ ಮನೆಯ ಮಗ್ಗುಲ ಮನೆಗೇ ವಾಸಕ್ಕೆ ಬಂದರು. ಆಗ ಅವರು ಮೂರು ಮಕ್ಕಳ ತಂದೆ. ಮಡದಿ ಮಕ್ಕಳೊಂದಿಗೆ ಸುಖದಿಂದ ಇರುವಾಗಲೆ ದುರ್ದೈವದಿಂದ ಅವರ ಪ್ರೀತಿಯ ಮಡದಿ ವಿಷಮಜ್ವರದಿಂದ ಅಕಾಲ ಮರಣಕ್ಕೀಡಾದರು. ಈ ದುಃಖದುರಿಯಲ್ಲಿ ಬೇಯುತ್ತಿರುವಾಗಲೆ ಅಲ್ಪಾವಧಿಯಲ್ಲೆ ಅವರ ಪ್ರೀತಿಯ ಮಗಳು ಆರೇಳು ವರುಷದ ಬಾಲೆಯೂ ವಿಷಮಜ್ವರದಿಂದ ಅಸು ನೀಗಿದಳು. ಈ ಮೊದಲು ಎರಡು ಮೂರು ವರುಷಗಳ ಹಿಂದೆ ಅವರ ಹಿರಿಯಣ್ಣನ ಹೆಂಡತಿ (ಎನ್ಕೆಯವರ ಮಡದಿಯ ಅಕ್ಕ) ಅವರ ಪ್ರೀತಿಯ ವೈನಿ ತೀರಿಕೊಂಡಿದ್ದರು. ಹೀಗೆ ಒಂದಾದ ಮೇಲೊಂದು ಸಾವು-ನೋವುಗಳ ಆಘಾತಗಳೊದಿಗೆ ಎನ್ಕೆ ವಿಹ್ವಲರಾಗಿದ್ದರು, ದುಃಖಸಂತಪ್ತರಾಗಿ ಮಗುವಿನಂತೆ ಅಳುತ್ತಿದ್ದರು. ಇಂಥ ಕೆಲವು ದುರ್ಭರ ಪ್ರಸಂಗಗಳಲ್ಲಿ ನಾನು ಅವರ ಬಳಿಯಿರುತ್ತಿದ್ದೆ, ಸಾಧ್ಯವಿದ್ದ ಮಟ್ಟಿಗೆ ಸಮಾಧಾನ ಹೇಳುತ್ತಿದ್ದೆ, ಸಹಭಾಗಿಯಾಗುತ್ತಿದ್ದೆ. ಎನ್ಕೆ ತಮ್ಮ 'ಎನ್ಕೆ ಏಕಾಂಕಗಳು' ಸಂಗ್ರಹವನ್ನು (೧೯೪೭) ಮಡದಿಗೆ ನೆನಪಿನ ಕಾಣಿಕೆಯಾಗಿ ಅರ್ಪಿಸುವಾಗ "ಬಾಳಿನ ಕಹಿಯನ್ನೇ ಸಿಹಿಮಾಡಿಕೊಂಡು ನನ್ನ ನಾಟ್ಯಸೃಷ್ಟಿಗೆ ನಿರಂತರ ಸ್ಫೂರ್ತಿಯಾಗಿ ನಡುವೇ ನನ್ನನ್ನು ಕೈಬಿಟ್ಟು ಕಣ್ಮರೆಯಾದ ನನ್ನ ಅರ್ಧಾಂಗಿ **ಇಂದಿರೆಗೆ** ನನ್ನ ಇಂದಿನ ಮುಂದಿನ ಎಲ್ಲ ಕೃತಿಗಳೂ ಅರ್ಪಿತ" ಎಂದು ಉದ್ಗರಿಸಿದ್ದಾರೆ. ಇದು ಪತಿ-ಪತ್ನಿಯರ ಅನ್ಯೋನ್ಯತೆಯನ್ನೂ ಮಧುರ ದಾಂಪತ್ಯವನ್ನೂ ಅಗಾಧವಾಗಿ ಧ್ವನಿಸಿದೆ. 'ವೈನಿ' ಕಾದಂಬರಿ (೧೯೫೮) ಎನ್ಕೆ ತಮ್ಮ ಹಿರಿಯಣ್ಣನ ಮಡದಿಯ ಜ್ಞಾಪಕಾರ್ಥ ಬರೆದುದು. 'ಸಾವಿನ ಉಡಿಯಲ್ಲಿ' (೧೯೪೪) ಕಾದಂಬರಿ ಮೇಲಿಂದ ಮೇಲೆ ಬಿದ್ದ ಸಾವಿನ ಪೆಟ್ಟುಗಳ ನೋವು ಆರದ ಮುನ್ನವೆ ಬರೆದುದು. ಇವೆರಡು ಕಾದಂಬರಿಗಳಲ್ಲಿ ಎನ್ಕೆ ಬಾಳಿನಲ್ಲಿ ಉಂಡ ದುಃಖ ಹೃದಯದ್ರಾವಕವಾಗಿ ಚಿತ್ರಿತವಾಗಿದೆ, ಧ್ವನಿತವಾಗಿದೆ.

ಮೊದಲ ಮಡದಿ ನಿಧನ ಹೊಂದಿದ ಒಂದೆರಡು ವರುಷಗಳಲ್ಲಿಯೆ ಎನ್ಕೆ ಅವರಿಗೆ ಎರಡನೆಯ ಸಂಬಂಧ ನಿಶ್ಚಯವಾಯ್ತು. ಮೊದಲ ಮಡದಿಯ ಹತ್ತಿರದ ಸಂಬಂಧಿಕರ ಮಗಳನ್ನೆ ಗೊತ್ತುಪಡಿಸಿ ಮದುವೆಯನ್ನು ಕುಂದಗೋಳದಲ್ಲಿ ನೆರವೇರಿಸಲಾಯ್ತು. ಈ ಮದುವೆಗೆ ನಾನು ಹೋಗಿದ್ದೆ. ಮದುವೆಯಾದ ಅಲ್ಪಕಾಲದಲ್ಲೆ ಎರಡನೆಯ ಹೆಂಡತಿಯ ಒಳ್ಳೆಯ ಕಾಲ್ಗುಣವೆಂಬಂತೆ ಎನ್ಕೆಯವರಿಗೆ ಧಾರವಾಡ ಆಕಾಶವಾಣಿಯಲ್ಲಿ ಪ್ರೋಗ್ರಾಂ ಅಸಿಸ್ಟಂಟ್ ಎಂದು ನೇಮಕವಾಯ್ತು. ಅಂದಿನಿಂದ ಇಪ್ಪತ್ತೈದು ವರುಷ

ಗಳ ಕಾಲ (೧೯೪೬-೭೧) ಧಾರವಾಡ, ಮುಂಬಯಿ, ಬೆಂಗಳೂರು ಆಕಾಶವಾಣಿ ಕೇಂದ್ರಗಳಲ್ಲಿ ಉತ್ತಮ ರೀತಿಯಲ್ಲಿ ಬಾನುಲಿ ಸೇವೆ ಮಾಡಿ ಹೆಸರು ಗಳಿಸಿದರು. ಇದು ಅವರ ಸುಖಮಯ ಜೀವನದ ಕಾಲ, ಉತ್ತರೋತ್ತರ ಅಭಿವೃದ್ಧಿ ಕಾಲ. ಈ ಅವಧಿಯಲ್ಲಿ ಎನ್ಕೆ ಸಾಹಿತ್ಯ ಸೃಷ್ಟಿ ಇಮ್ಮಡಿ ಮುಮ್ಮಡಿ ಉತ್ಸಾಹದಿಂದ ನಡೆದುದು ಸರ್ವವಿದಿತ. ಎನ್ಕೆ ಧ್ವನಿ ಕರ್ನಾಟಕದ ತುಂಬ ಹರಡಿತು, ಲೋಕಪ್ರಿಯವಾಯ್ತು.

ಎನ್ಕೆಯವರ ಬಾನುಲಿ ಸೇವಾ ವೃತ್ತಿಯ ಕೊನೆಕೊನೆಯ ಕಾಲದಲ್ಲಿ ಅವರ ಉಚ್ಛ್ರಾಯ ಸ್ಥಿತಿಯಲ್ಲಿಯೆ ಅವರ ಜೀವನದ ಮತ್ತೊಂದು ದುರ್ಘಟನೆ ಜರುಗಿತು. ಅದು ಅವರ ಪ್ರೇಮದ ಎರಡನೆಯ ಮಡದಿಯ ಆಕಸ್ಮಿಕ ನಿಧನ. - ಇಳಿವಯಸ್ಸಿನಲ್ಲಿ ಅಸಹನೀಯವಾದ ಈ ಆಘಾತವನ್ನೂ ನುಂಗಿಕೊಂಡು ಮುಂದುವರಿದಿದ್ದಾರೆ. ಎನ್ಕೆಯವರು ಬಾಳಿನಲ್ಲಿ ವಿಧಿಯೊಡನೆ ಎದೆಗೊಟ್ಟು ಹೋರಾಡಿದ್ದಾರೆ. 'ಸಮರ ಜೀವನವನ್ನು ಸಮರಸ ಜೀವನ'ವಾಗಿಸಿಕೊಂಡಿದ್ದಾರೆ. ತಮ್ಮ ನಾಟಕಗಳ ಮೂಲಕ ಇದನ್ನೆ ತಮ್ಮ ಜೀವಿತದ ಸಂದೇಶವೆಂದು ಜಗತ್ತಿಗೆ ನೀಡಿದ್ದಾರೆ. ಬಾಳಿನಲ್ಲಿ ಅವರು ಪಟ್ಟ ಪಾಡು ಏನಿದ್ದರೂ ಎಂತಿದ್ದರೂ ಅವರು ಕನ್ನಡ ರಸಿಕರಿಗೆ ನೀಡಿದ, ನೀಡುತ್ತಿರುವ ಸಾಹಿತ್ಯದ ಕೊಡುಗೆ ಮಾತ್ರ ಆಮೋದಭರಿತ. ಆನಂದವೇ ಅವರ ನಾಟಕ ಸಾಹಿತ್ಯದ ಜೀವಸ್ವರ. ಬೇಂದ್ರೆಯವರ ಹಾಗೆಯೆ ಎನ್ಕೆಯವರೂ

ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ
ನೀಡುವೆನು ರಸಿಕ! ನಿನಗೆ!
ಕಲ್ಲುಸಕ್ಕರೆಯಂಥ ನಿನ್ನೆದೆಯು ಕರಗಿದರೆ
ಆ ಸವಿಯ ಹನಿಸು ನನಗೆ!

ಎಂದು ಹೇಳುವಂತಿದೆ, ಹಾಗೆ ಹೇಳಿಸಿಯೂ ಇದ್ದಾರೆ 'ಕರ್ಣ ವಿಹಾಯಸ' ಪ್ರಹಸನದ ಕವಿಯ ಬಾಯಲ್ಲಿ! ಈ ಪಂಕ್ತಿಗಳನ್ನು ಈ ಏಕಾಂಕದ ಕೊನೆಯಲ್ಲಿ ಪುನರುಚ್ಚರಿಸಿ, ಹಾಸ್ಯರಸದ ಕಾರಂಜಿಯನ್ನು ಪುಟಿಸಿದ ಎನ್ಕೆ, ಕನ್ನಡದ ಕರ್ಣರಸಾಯನ ಸೃಷ್ಟಿಗೆ ನೀಡಿರುವ ಕೊಡುಗೆ ಅಮೋಘ, ಅಮೂಲ್ಯ, ಅಸಾಮಾನ್ಯ. ಪೂರ್ವಗ್ರಹಿಕೆಯಿಂದ ಬುದ್ಧಿವಂತಿಕೆಯ ಠೀವಿಯಲ್ಲಿ ಯಾರು ಏನೇ ಹೇಳಲಿ, ಎಂತೇ ಆಡಲಿ, ನಾನು ಕಂಡಂತೆ, ಎನ್ಕೆ ಇಂದಿನ ಕನ್ನಡ ರಂಗದ ಏಕಾಂಕವೀರ ಎನ್ಕೆ!

# ಅನ್ಯಾಯ ಎದುರಿಸಿದ ಎನ್ಕೆ

ಡಾ. ರಾ. ಯ. ಧಾರವಾಡಕರ

ನಾನು ೧೯೪೪ರಲ್ಲಿ ಧಾರವಾಡಕ್ಕೆ ಬಂದಾಗ ಇಬ್ಬರು ವ್ಯಕ್ತಿಗಳು ತುಂಬಾ ಜನಪ್ರಿಯರಾಗಿದ್ದರು. ಅವರಿಬ್ಬರೂ ತುಂಬಾ ಚತುರ ಮಾತುಗಾರರು.ಯಾವುದೇ ಸಭೆಯಲ್ಲಿ ಅವರಿಬ್ಬರೂ ಮಾತನಾಡಲು ಎದ್ದು ನಿಂತರೆ ಸಾಕು, ಜನ ತಾನೇ ತಾನಾಗಿಯೇ ನಗುತ್ತಿತ್ತು. ಅವರ ಮಾತಿನಲ್ಲಿ ಅಂಥ ವಿನೋದವನ್ನು, ಅಂಥ ಉತ್ಸಾಹವನ್ನು ಜನ ಯಾವಾಗಲೂ ಅಪೇಕ್ಷಿಸುತ್ತಿದ್ದರು. ಈ ಇಬ್ಬರು ಮಾತುಗಾರರೂ ಕೂಡ ಶ್ರೋತೃಗಳನ್ನು ಎಂದಿಗೂ ನಿರಾಶೆಗೊಳಿಸಿರಲಿಲ್ಲ. ಆ ಇಬ್ಬರು ಮಾತುಗಾರರೆಂದರೆ ಒಬ್ಬರು ಪ್ರೊ. ಆರ್. ವಿ. ಜಾಗಿರದಾರ (ಇಂದಿನ ಆದ್ಯ ರಂಗಾಚಾರ್ಯರು) ಇನ್ನೊಬ್ಬರು ಯುವಕ ಎನ್ಕೆ—ಎನ್.ಕೆ.ಕುಲಕರ್ಣಿ. ವರಕವಿ ಬೇಂದ್ರೆಯವರು ಆಗ ಧಾರವಾಡದಲ್ಲಿರಲಿಲ್ಲ. ಅವರು ಗದಗಿನಲ್ಲಿಯೋ ಸೊಲ್ಲಾಪುರದಲ್ಲಿಯೋ ಇದ್ದಂತೆ ಕಾಣುತ್ತದೆ. ಈ ಇಬ್ಬರು ನಟರು ಮಾತ್ರ ಧಾರವಾಡದ ರಂಗಭೂಮಿಯನ್ನು ವ್ಯಾಪಿಸಿ ನಿಂತಿದ್ದರು.

ಎನ್ಕೆಯವರು ಆಗ ಧಾರವಾಡದ ಕೆ. ಇ. ಬೋರ್ಡ ಶಾಲೆಯಲ್ಲಿ ಶಿಕ್ಷಕರಾಗಿದ್ದರು. ಅಲ್ಲಿಂದ ಅವರು ಅಖಿಲ ಭಾರತ ಆಕಾಶವಾಣಿಯನ್ನು ಸೇರಿಕೊಂಡಂದಿನಿಂದ, ಅದರ ಒಂದು ಅವಿಭಾಜ್ಯ ಅಂಗವಾಗಿಯೇ ಉಳಿದರು. ಆಕಾಶವಾಣಿ ಎನ್ಕೆಯವರ ಜಗತ್ ಆಯಿತು. ಯಾವುದೇ ಹರಟೆ, ಕವನ, ನಾಟಕ, ರೂಪಕ, ಸಂಭಾಷಣೆ—ಏನೇ ಇರಲಿ, ಅದರಲ್ಲಿ ಎನ್ಕೆ ಪಾತ್ರಧಾರಿಗಳು ಇಲ್ಲವೆ ಲೇಖಕರು. ಎನ್ಕೆ ಆಕಾಶವಾಣಿಯಲ್ಲಿದ್ದಾಗ ಅಖಿಲ ಭಾರತ ಆಕಾಶವಾಣಿ ಅಖಿಲ ಭಾರತ ಎನ್ಕೆವಾಣಿ ಆಗಿತ್ತೆಂದರೆ ಅತಿಶಯೋಕ್ತಿಯೇನೂ ಇಲ್ಲ. ಇದಕ್ಕೆ ಕಾರಣ ಎನ್ಕೆಯವರ ಬಹುಮುಖ ಪ್ರತಿಭೆ; ವೇಗದ ಬರೆಹ. ಅವರ ತಲೆಯ ಅಡುಗೆಮನೆಯಲ್ಲಿ ಯಾವ ಬೇಕಾದ ಆಹಾರವೂ ಸಿದ್ಧವಾಗಿರುತ್ತಿತ್ತು; ಅದನ್ನು ಬಿಸಿಮಾಡಿ ಕಾಗದಕ್ಕೆ ಇಳಿಸುವದಷ್ಟೇ ಉಳಿದಿರುತ್ತಿತ್ತು. ದೀಪಾವಳಿಯ ಬಗ್ಗೆ, ಯುಗಾದಿಯ ಬಗ್ಗೆ, ಹೊಸ ವರುಷದ ಬಗ್ಗೆ ನಾಡಿನ ಹಿರಿಯರ ಬಗ್ಗೆ ಆಕಾಶವಾಣಿ ಅಧಿಕಾರಿಗಳು ಕವನವನ್ನೇ ಕೇಳಲಿ, ರೂಪಕವನ್ನೇ ಕೇಳಲಿ, ಎನ್ಕೆ ಎಲ್ಲವನ್ನೂ ತಮ್ಮ ಬತ್ತಳಿಕೆಯಿಂದ ಹೊರಗೆ ತೆಗೆಯುತ್ತಿದ್ದರು. ಅವರ ಸಾಹಿತ್ಯ ಕಾರ್ಖಾನೆ ಯಾವಾಗಲೂ ಕೆಲಸ ಮಾಡುತ್ತಿತ್ತು. ಅವರು ಮುಂಬಯಿಯಲ್ಲಿ ಇದ್ದಾಗಲಂತೂ, ಊದುವವರೂ

ಅವರೇ; ಪಾರಿಸುವವರೂ ಅವರೇ. ಆದರೆ, ಇವೆರಡನ್ನೂ ಅವರು ಅತ್ಯಂತ ಸಮರ್ಥ ವಾಗಿ ನಡೆಸಿಕೊಂಡು ಬಂದವರಿಂದಲೇ, ಮುಂಬಯಿ ಆಕಾಶವಾಣಿಯಲ್ಲಿ ಕನ್ನಡ ಗಟ್ಟಿ ಯಾಗಿ ಕಾಲೂರಿ ನಿಂತಿತು; ಧಾರವಾಡದಲ್ಲಿ ಭದ್ರವಾದ ಬುನಾದಿಯನ್ನು ಹಾಕಿಕೊಂಡಿತು. ಎನ್ಕೆಯವರ ಈ ಬಹುಮುಖಿ ವೇಗದ ಪ್ರತಿಭೆಯನ್ನು ಕಂಡು ಅಭಿಮಾನಪಟ್ಟವರೂ ಉಂಟು; ಕರುಬಿದವರೂ ಉಂಟು; ಅದು ಮುಟ್ಟದ ಗಿಡವಿಲ್ಲ; ಎನ್ಕೆ ಕೈಯಾಡಿಸದ ಸಾಹಿತ್ಯ ಪ್ರಕಾರವಿಲ್ಲ. ಕವನ, ಪ್ರಬಂಧ, ನಾಟಕ, ಬಾನುಲಿರೂಪಕ, ಕಾದಂಬರಿ, ವಿಮರ್ಶೆ, ಸಾಹಿತ್ಯಚರಿತ್ರೆ—ಎಲ್ಲವರಲ್ಲಿಯೂ ಅವರು ಗೃಹೀತ ಇವ ಕೇಶೇಷು ದುಡಿದರು.

ಆಕಾಶವಾಣಿಯನ್ನು ಜನಪ್ರಿಯ ಮಾಡುವಲ್ಲಿ ಎನ್ಕೆಯವರ ಲೋಕಸಂಗ್ರಹ ಗುಣವೂ ಒಂದು ಕಾರಣ. ಅವರು ಜನರ ಆಳ-ಅಗಲ, ವೃತ್ತಿ-ಪ್ರವೃತ್ತಿಗಳನ್ನು ಚೆನ್ನಾಗಿ ಬಲ್ಲವರು. ಯಾರೇ ಆಕಾಶವಾಣಿಯಲ್ಲಿ ಮಾತನಾಡಲಿ, ಅವರ ಬಗ್ಗೆ ಒಳ್ಳೆಯ ಮಾತು ಗಳನ್ನಾಡಿ ಪ್ರೋತ್ಸಾಹಿಸುವವರೇ ಹೊರತು, ಅವರನ್ನು ಎಂದಿಗೂ ನಿರುತ್ಸಾಹಗೊಳಿ ಸುವವರಲ್ಲ, ಅವರು ಎಲ್ಲರಿಗೂ ಸ್ನೇಹಿತರು; ಎಲ್ಲರಿಗೂ ಬೇಕಾದವರು.

ಶಬ್ದಗಳನ್ನು ಚಿಂತಿಸುವುದರಲ್ಲಿಯಂತೂ ಅವರು ನಿಸ್ಸೀಮರು. ಅವರಲ್ಲಿ ಯಾವುದಕ್ಕೂ ಮೀನ-ಮೇಷ ಇರಲಿಲ್ಲ. ಆಕಾಶವಾಣಿಯಲ್ಲಿ ನಾವು ಇಂದಿಗೂ ಕೇಳುವ 'ಗೃಹಲಕ್ಷ್ಮಿ', 'ಗಿಳಿವಿಂಡು', 'ವಿಚಾರದೀಪಿಕೆ', 'ಗೃಹಗೋಷ್ಠಿ', 'ರವಿವಾರದರಂಜನೆ' ಮೊದಲಾದ ಪದಗಳನ್ನು ಟಂಕಿಸಿದವರು ಎನ್ಕೆ ಅವರೇ. ಈಗ ಆಕಾಶವಾಣಿಯಿಂದ ಎನ್ಕೆ ಹೊರಬಂದಿದ್ದರೂ, ಅವರು ಟಂಕಿಸಿದ ಈ ಶಬ್ದನಾಣ್ಯಗಳು ಇನ್ನೂ ಚಲಾವಣೆ ಯಲ್ಲಿದ್ದು, ಶ್ರೋತೃಗಳಿಗೆ ಪ್ರತಿನಿತ್ಯ ಅವರ ನೆನಪನ್ನು ಮಾಡಿಕೊಡುತ್ತವೆ. ಈಗ ಅವರು ಆಕಾಶವಾಣಿಯ ಹೊರಗಿದ್ದರೂ 'ಮನೆಮನೆ'ಯಲ್ಲಿ ಎನ್ಕೆ ಧ್ವನಿ ಕೇಳಿಸುತ್ತಲೇ ಇರುತ್ತದೆ.

ಸಾಹಿತ್ಯ ರಚನೆಯಲ್ಲಿಯೂ ಅಷ್ಟೇ; ಅವರ ಮಾತಿನ ಚಮತ್ಕೃತಿ ಅವರದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ನಾವು ಹಿಂದಿನ ಕಾಲದಿಂದಲೂ 'ರೂಪವತಿ'ಯರ ಬಗ್ಗೆ ಬಹಳ ಕೇಳಿದ್ದೇವೆ. ಆದರೆ, ಈಗ ಕಾಲ ಬದಲಾಗಿದೆ. ಈಗ 'ರೂಪವತಿ'ಯರ ಬದಲು 'ಲೂಪವತಿ'ಯರು ಬಂದಿದ್ದಾರೆ. ಇಂಥ ನೂರಾರು ಮಾತಿನ ಚಮತ್ಕೃತಿಗಳು; ಶಬ್ದದ ಪಾರಿವಾಳಗಳು ಬಾನುಲಿಗಳಾಗಿ ಹೊರಬಂದಿವೆ.

ತಮ್ಮ ವೈಯಕ್ತಿಕ ಜೀವನದಲ್ಲಿ ಎನ್ಕೆ ಅನೇಕ ದಿವ್ಯಗಳೊಳಗಿಂದ ದಗ್ಧರಾಗಿ ಪಾರಾಗಿ ಬಂದಿದ್ದಾರೆ. ಇಬ್ಬರು ಹೆಂಡಂದಿರನ್ನು ಕಳೆದುಕೊಂಡರು; ಮಗುವನ್ನು ಕಳೆದುಕೊಂಡರು: ನಾವು ಮಾಳಮಡ್ಡಿಯಲ್ಲಿದ್ದಾಗ ಅವರ ಮಗು ಶಾಂತಾ ಯಾವಾ ಗಲೂ ನಮ್ಮ ಮನೆಗೆ ಬರುತ್ತಿತ್ತು. ಅಂಥವಳನ್ನು ಕಳೆದುಕೊಂಡರು. ಸಾಹಿತ್ಯ ನಿರ್ಮಿತಿಯಲ್ಲಿಯೂ ಸಹ, ಹಲವರು ಪುಣ್ಯವಂತರಾಗಿರುತ್ತಾರೆ; ಹಲವರು ಭಾಗ್ಯ ಹೀನರಾಗಿರುತ್ತಾರೆ. ಎನ್ಕೆಯವರಕಿಂತ ಕಡಿಮೆ ಬರೆದ, ಕಡಿಮೆ ಸತ್ವದ ಸಾಹಿತ್ಯ

ನಿರ್ಮಿತಿ ಮಾಡಿದ ಎಷ್ಟೋ ಜನ ಸಾಹಿತ್ಯ ಮನ್ನಣೆಯನ್ನು ಕಂಡರು. ಆದರೆ, ಎನ್ಕೆ ಯವರಿಗೆ ಅವರ ಸಾಹಿತ್ಯ ನಿರ್ಮಿತಿಗೆ ತಕ್ಕ ಪುರಸ್ಕಾರ ಇನ್ನೂ ದೊರಕಬೇಕಾಗಿದೆ. ವರಕವಿ ಬೇಂದ್ರೆಯವರು ಒಂದು ಸಲ ಕೇಳಿದರು—"ಸಾವು ಮತ್ತು ಕೊಲೆ ಇವುಗಳಲ್ಲಿ ಅಂತರವೇನು ?" ಎಂದು. ಇಷ್ಟು ಸ್ಪಷ್ಟವಾಗಿದ್ದುದರ ಬಗ್ಗೆ ಬೇಂದ್ರೆಯವರು ಆಡಿದ್ದನ್ನು ಕೇಳಿ ನಮಗೆ ಆಶ್ಚರ್ಯವಾಯಿತು. "ಕೊಲೆ ಎಂದರೆ ಇನ್ನೊಬ್ಬರು ಕೊಲ್ಲು ವುದು. ಅದರ ಪರಿಣಾಮವೂ ಸಾವೇ ಆಗಿದೆ. ಸಾವು ಎಂಬಲ್ಲಿ ಇನ್ನೊಬ್ಬರು ಕೊಲ್ಲದೆ, ಮನುಷ್ಯ ನೈಸರ್ಗಿಕವಾಗಿ ಮರಣ ಹೊಂದುವುದು" ಎಂದು ಹೇಳಿದರು. ಆಗ, ಬೇಂದ್ರೆ "ಹೌದು; ಬೇಂದ್ರೆಯನ್ನ ಜನ ನಿರ್ಲಕ್ಷ್ಯ ಮಾಡಿ ಈಗ ಕೊಲೆ ಮಾಡುತ್ತಿದ್ದಾರೆ. ಆದರೆ ಬೇಂದ್ರೆ ಇನ್ನೂ ಸತ್ತಿಲ್ಲ" ಎಂದು ಹೇಳಿದರು. ಎನ್ಕೆಯವರ ಬಗ್ಗೆಯೂ ಈ ನಿರ್ಲಕ್ಷ ಹೆಚ್ಚಾಗಿಯೇ ಇದೆಯೇನೋ ಎನಿಸುತ್ತದೆ: ಅದರಿಂದಲೇ, ಅವರು ಮುಂಬಯಿ ಆಕಾಶ ವಾಣಿಯಲ್ಲಿದ್ದಾಗ, ಅವರ ಮುಖಾಂತರ ಆಕಾಶವಾಣಿಯ ಭಾಷಣದ ಅವಕಾಶ ಸಿಕ್ಕರೆ ಸಾಕು ಎಂದುಕೊಳ್ಳುತ್ತಿದ್ದ ವ್ಯಕ್ತಿಗಳು ತಮಗೆ ದೊರಕಿದಾಗ, ಎನ್ಕೆಯವರನ್ನು ನಿರ್ಲಕ್ಷಿಸಿದರಷ್ಟೇ ಅಲ್ಲ, ಅವರ ಉದ್ಯೋಗಾವಕಾಶಗಳಿಗೆ ಅಡ್ಡಬಂದರು. ಆದರೆ, ರಾಜಕಾರಣಿಗಳಾದ ಆ ಜನ ಇಂದು ಜನಮನದಿಂದ ಮಸುಳಿಸಿ ಹೋಗಿದ್ದರೂ, ಸಾಹಿತಿ ಎನ್ಕೆ ಬದುಕಿಕೊಂಡೇ ಇದ್ದಾರೆ. ಈ ಅವಜ್ಞೆಯ ಮೂಲಕವಾಗಿ ಅವರೇ ಹೇಳಿದ ಹಾಗೆ ಎನ್ಕೆ ಆಕಾಶವಾಣಿಯಲ್ಲಿ ಕೊನೆಯವರೆಗೂ N. K. ಆಗಿಯೇ ಅಂದರೆ ನಿಲಯ ಕಲಾ ವಿದನಾಗಿಯೇ ಉಳಿಯಬೇಕಾಯಿತು. ಆದರೆ, ಈ Not Known, N. K, ಈಗ ತರುಣ ಮಿತ್ರರ ಸಾಹಸದ ಮೂಲಕ ಸದ್ಯ Now ಸರಿಯಾಗಿ Known N. K. ಆಗುತ್ತಿರುವುದು ಸಂತೋಷದ ವಿಷಯ. ದೇವರು ಅವರಿಗೆ ಉದ್ದಂಡ ಆಯುಷ್ಯವನ್ನೂ, ಆರೋಗ್ಯವನ್ನೂ ದಯಪಾಲಿಸಲೆಂದು ಹಾರೈಸುತ್ತೇನೆ !

# ಎಸ್ಕೆ ಹೇಗಾದರು ?

**ಗೋವಿಂದ ವೆಂಕಟೇಶ ಚುಳಕಿ**

## ಎಸ್ಕೆಯವರ ಸಂಬಂಧ

ಎಸ್ಕೆ ನನ್ನ ಆತ್ಮೀಯ ಗೆಳೆಯರು. ನನಗಿಂತ ಚಿಕ್ಕವರು. ಬಹಳ ವರುಷಗಳಿಂದ ಸುಪರಿಚಿತರು. ಕೆಲ ಸಮಯ ಅಕ್ಕಪಕ್ಕದವರಾಗಿ ಬಾಳಿದವರು. ಸಾಹಿತ್ಯ ಕ್ಷೇತ್ರದ ಬದುವನ್ನು ಹಿಡಿದು, ಜೀವನರಂಗದಲ್ಲಿ ಕಾಲಿರಿಸಿದವರು. ಸ್ನೇಹ ಬಾಂಧವ್ಯದಿಂದೊಡಗೂಡಿ ಇಂದಿನವರೆಗೂ ಏಕೀಭಾವದಿಂದ ನಡೆದುಕೊಂಡವರು. ಇಂಥವರ ಬಗೆಗೆ ಲೇಖನ ಬರೆದು ಕೊಡಲು ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಹೇಳಿದಾಗ ನಾನು 'ಇಲ್ಲಾ' ಎಂದು ಹೇಗೆನ್ನಲಿ ? ಇಲ್ಲಿ ನನ್ನ ಮತ್ತು ಅವರ ನಡುವಿನ ಮಧುರ ಸಂಬಂಧವನ್ನು ನೆನಪಿನ ಪಾತಾಳದಾಳವನ್ನು ಮುಟ್ಟಿ ರೂಪಿಸಬೇಕೆಂದಿದ್ದೇನೆ.

## ಎಸ್ಕೆ ಹೇಗಾಯಿತು ?

ಒಂದು ದಿನ ಯಾವಾಗಲೋ ನಿಶ್ಚಿತ ದಿನ–ನೆನಪು ಹಾರಿದೆ–ಈಗ ನನಗೆ ಅರುಳು–ಮರುಳು–೩-೪ ಗೆಳೆಯರು ಕೂಡಿಕೊಂಡು ವೈಚಾರಿಕ ಹರಟೆಯಲ್ಲಿ ತೊಡಗಿದ್ದೆವು. ಆಗ ಹೆಸರುಗಳಲ್ಲಿ ಸಂಕ್ಷಿಪ್ತೀಕರಣ ಮಾಡಿಕೊಳ್ಳಲು ಬರುವುದೋ ಇಲ್ಲವೋ ಎಂಬ ವಿಚಾರ ನುಸುಳಿತು. ಎಲ್ಲರ ಮುಖಮುದ್ರೆಗಳು ವಿಚಾರ ಪರವಾದವು. ಕೂತಮೆಟ್ಟಿನ ಮೇಲೆ ಸಂಕ್ಷಿಪ್ತೀಕರಣದ ಫಲ ದೊರೆಯಲಿಲ್ಲ. ಈ ಸ್ನೇಹಿತರಲ್ಲಿ ಎಸ್ಕೆ ಇರಲಿಲ್ಲ. ಎಲ್ಲರ ತಲೆಯಲ್ಲಿ ಅದು ಗುಂಯ್‌ಗುಡುತ್ತಿತ್ತು.

ಮುಂದೆ ನನಗೆ ಒಂದು ಸಂದರ್ಭದಲ್ಲಿ ಎಸ್ಕೆಯವರಿಗೆ ಒಂದು ಚೀಟಿ ಬರೆಯುವ ಪ್ರಸಂಗ ಬಂತು. ಚೀಟಿಯಲ್ಲಿ ಬರೆಯಬೇಕಾದ ಸಂಗತಿ ಬರೆದೆ. ವಿಳಾಸ ಬರೆಯ ತೊಡಗಿದಾಗ 'ಎಸ್ಕೆ' ಎಂದು ಬರೆದೆ; ಹೇಗೆ ಹಾಗೆ ಬಂದಿತೋ ತಿಳಿಯಲಿಲ್ಲ. ನಿಜಕ್ಕೂ ಅವರ ಹೆಸರಾದ ಎಸ್. ಕೆ. ಕುಲಕರ್ಣಿಯಲ್ಲಿ ಒಂದು 'ಕೆ' ಹಾರಿತು. ಇಲ್ಲವಾದರೆ 'ಎಸ್ಕೆಕೆ' ಎಂಬ ರೂಪ ತಾಳಬೇಕಿತ್ತು. ಅಂದರೆ ಎಸ್. ಕೆ. ಕುಲಕರ್ಣಿ ಎಂಬುವರ ಬದಲು ಎಸ್.ಕೆ. ಎಸ್ಕೆ ಆಯಿತು. ನನಗೂ ಅಚ್ಚರಿಯೆನಿಸಿತು. ಇದು ಪುತ್ರ-ಪಿತರ ಹೆಸರಿನ ಲಘುರೂಪವೆಂದಾಯಿತು. ತಂದೆಯೇ ಮಗನಾಗಿ ಜನಿಸುವುದರ ಸಂಕೇತಾಕ್ಷರವಾಯಿತೆಂದು ಸಮಾಧಾನಪಟ್ಟುಕೊಂಡೆ. ಅಂದಿನಿಂದ ಹಿಡಿದು ಇಂದಿನವರೆಗೂ ಅವರು

ಎನ್ಕೆ ಅವರು. ಈ ಮಾತನ್ನು ಅವರು ಸಹಜವಾದ ತಮ್ಮ ನಗುಮಾತಿನಲ್ಲಿ 'ಎನ್ಕೆ' ಎಂದು ಹೆಸರಿಟ್ಟವರು ಚುಳಕಿಯವರು—ಚಾಲುಕ್ಯರು" ಎಂದು ನನ್ನ ಪರಿಚಯ ತಮ್ಮ ಪರಿಚಯದವರಿಗೆ ಮಾಡಿಕೊಡುವಾಗ ನನ್ನ ಹೆಸರನ್ನು ಹೇಳುತ್ತಿರುತ್ತಾರೆ. ಅವರೂ ಮರೆಯಲಾರರು; ನಾನೂ ಮರೆಯಲಾರೆ ಈ ಮಾತನ್ನು. ಕುಲಕರ್ಣಿ ಹಾರಿಹೋಗಿ ಎನ್ಕೆ ಎಂದೇ ಹೆಸರಾಗಿ ಬಿಟ್ಟಿತು.

## ಕನ್ನಡಕ್ಕೊಬ್ಬನೇ ಎನ್ಕೆ

ಎನ್. ಕೆ. ಕುಲಕರ್ಣಿಯವರು ಏನಿಕೇ ಕನ್ನಡಿಗರಲ್ಲಿ ಒಬ್ಬರಲ್ಲ. ಕನ್ನಡಕ್ಕೊಬ್ಬನೇ 'ಕೈಲಾಸಂ' ಎಂಬ ಪಡಿಮಾತು ರೂಢಿಗೊಂಡಿರುವುದು ಕನ್ನಡಿಗರ ಬಾಯಲ್ಲಿದೆ. ಇನ್ನೂ ನೆನಪು ಹಾರಿಲ್ಲ. ಅದು ಕೈಲಾಸಂ ಅವರ ಪುಣ್ಯವಿಶೇಷ! ಅದರಂತೆ ಈಗ ಕನ್ನಡ ಕ್ಕೊಬ್ಬನೇ ಎನ್ಕೆ ಎಂಬ ಮಾತು ಒಂದು ಪಡಿಮಾತೇ ಎಂದು ಹೇಳಲು ನಾನು ಹಿಂಜರಿ ಯಲಾರೆ. ಈ ಹೆಸರು ಆಕಾಶವಾಣಿಯ ಮೂಲಕ ಪ್ರಚುರಗೊಂಡು ಜನಜನಿತವಾಯಿ ತೆಂದು ಜಾಹೀರು ಮಾಡಬೇಕಿಲ್ಲ. ಎನ್ಕೆಯವರೆಂದರೆ ಸಾಕು; ಕುಲಕರ್ಣಿ ಎಂಬ ಅಡ್ಡ ಹೆಸರು ಕಾರಣವಿಲ್ಲ. ಎನ್ಕೆ ಎಂಬುದು ಓರ್ವರ ಹೆಸರಾದರೋ, ಆ ವ್ಯಕ್ತಿಯಲ್ಲಿರುವ ಬಹುಮುಖದ ವ್ಯಕ್ತಿಮತ್ವದಿಂದ ಅನ್ವರ್ಥಕವಾಗಿ ಆಗಮಿಸಿದುದಾಗಿದೆ ಎಂದು ಭಾವಿಸಿ ಕೊಂಡರೆ ಸಂಕುಚಿತ ಭಾವನೆಗೆ ಅವಕಾಶ ಕೊಡಬಾರದು.

ಹಾಗಾದರೆ ಎನ್ಕೆಯವರಲ್ಲಿಯ ಅಂಥ ವ್ಯಕ್ತಿಮತ್ವವಾದರೂ ಏನಿದೆ ? ಎಂತಹ ದಿದೆ? ಎಂಬ ಕುತೂಹಲವ ಪ್ರಶ್ನೆಗೆ ಉತ್ತರ ಸುಲಭವೆನಬಹುದು, ಅದೆಂದರೆ ಎನ್ಕೆ ಯವರು ಸರಸ್ವತಿಯ ಒಲವಿನ ಪುತ್ರರಾಗಿ, ಸಂವತ್ಸರಗಳಷ್ಟು ಸಂಖ್ಯೆಗಿಂತಲೂ, ಹೆಚ್ಚು ಸಾಹಿತ್ಯಕೃತಿಗಳನ್ನು ರಚಿಸಿ, ಕನ್ನಡಾಂಬೆಯನ್ನು ಸಂಪತ್‌ಭರಿತವಾಗಿ ಮಾಡಿದುದೇ ಪ್ರತ್ಯಕ್ಷ ಸಾಕ್ಷಿಯಾಗಿ ನಿಂತಿದೆ.

## ಸಾಹಿತ್ಯಕೇಲಿಯ ಗರಡಿ

ಎನ್ಕೆಯವರು ಕಾಲೇಜ ಶಿಕ್ಷಣಕ್ಕೆಂದು ಗದುಗಿನಿಂದ ಧಾರವಾಡಕ್ಕೆ ಬಂದರು. ಆಗ ಅದೇ ತಾನೇ ಕನ್ನಡದ ಕೂಗು ಮೊಳಗುತ್ತಿತ್ತು, ಆ ಸಮಯಕ್ಕೆ ಪರಿಶುದ್ಧ ಕನ್ನಡಾಭಿ ಮಾನಿಗಳಾದ ಆರ್. ವಿ. ಜಾಹಗೀರದಾರ (ಈಗಿನ ಆದ್ಯರಂಗಾಚಾರ್ಯರು) ಸಂಸ್ಕೃತ ವಿಷಯದ ಪ್ರಾಧ್ಯಾಪಕರಾಗಿ ಕರ್ನಾಟಕ ಕಾಲೇಜಿಗೆ ಬಂದಿದ್ದರು. ಕಾಲೇಜಿ ನಲ್ಲಿ ಕನ್ನಡಕ್ಕೆ ಆಗ ಗೌಣಸ್ಥಾನವೂ ಕೂಡ ಇರಲಿಲ್ಲ. ಅದಕ್ಕೆ ಆದ್ಯರು ಕನ್ನಡದ ಹೋಲಿ ಯನ್ನೇ ಎಬ್ಬಿಸಿ, ಕನ್ನಡಕ್ಕೆ ಸನ್ಮಾನ್ಯತೆಯ ಸ್ಥಾನವನ್ನು ತಂದುಕೊಟ್ಟರು. ಆಗ ಅವರು ಉದಿತೋದಿತ ನಾಟಕಕಾರರು; ಈಗ ಶ್ರೇಷ್ಠ ನಾಟಕಕಾರರು. ಏಕಾಂಕ, ಇಡೀನಾಟಕ ಗಳನ್ನು ಬರೆದು, ಶಿಷ್ಯರನ್ನು ಕೂಡಿಸಿಕೊಂಡು, ತಾವೂ ಪಾತ್ರಧಾರಿಗಳಾಗಿ ರಂಗ ಭೂಮಿಗೆ ತರುತ್ತಿದ್ದರು. ಹೀಗಾಗಿ ಅವರ ಪ್ರಭಾವಕ್ಕೊಳಗಾಗಿ ಶ್ರೀನಿವಾಸ ಕುಲಕರ್ಣಿ (ಕುಣಿತದ ಶ್ರೀನಿವಾಸ), ಎನ್ಕೆ, ಹಲಸಗಿ ಮೊದಲಾದವರು ಆದ್ಯರನ್ನು ಓಲೈಸಿದರು.

ಆಗ ಸಾಹಿತ್ಯದ ಒಲವುಳ್ಳವರಾಗಿ ಶ್ರೀನಿವಾಸ ಕುಲಕರ್ಣಿ, ಎಸ್. ಕೆ. ಕುಲಕರ್ಣಿ ಏಕಾಂಕ ನಾಟಕಗಳನ್ನೂ, ಏಕಪಾತ್ರಾಭಿನಯಕ್ಕೂ ಸರಿಹೊಂದುವ ದೃಶ್ಯಗಳನ್ನೂ ಬರೆಯಲಾರಂಭಿಸಿದರು. ಇವರು ಆದ್ಯರ ಪ್ರಭಾವದಿಂದ ಪ್ರೇರಿತರಾಗಿ, ನಾಟಕಕಾರರಾಗಿ ಸಾಹಿತ್ಯಕ್ಷೇತ್ರದಲ್ಲಿ ಹೆಸರು ಪಡೆದರೆಂದು ನನ್ನ ತಿಳಿವಳಿಕೆಯಾಗಿದೆ.

## ಬೇಂದ್ರೆಯವರ ಸಾನ್ನಿಧ್ಯ

ಇದೇ ರೀತಿ ಇತ್ತ ಬೇಂದ್ರೆಯವರ ಗೆಳೆಯರ ಗುಂಪೂ ಒಂದು ಸಾಹಿತ್ಯ ನಿರ್ಮಿತಿಯ ಗುರುಪೀಠದ ದಾರಿಯನ್ನು ಹಿಡಿದು ಸಾಗಿತ್ತು. ಜಯಕರ್ನಾಟಕ ಮಾಸ ಪತ್ರಿಕೆ ಗುಂಪಿನವರು ನಡೆಸುತ್ತಿದ್ದರು. ಬೇಂದ್ರೆಯವರಿಗೆ ಪತ್ತುಂಬಾಳ ಕಟ್ಟೆ ಕೊಡುವವರಲ್ಲಿ ಗೆಳೆಯರೂ, ಎಳೆಯರೂ, ಸಾಹಿತ್ಯಕ್ಷೇತ್ರದಲ್ಲಿ ಕಾಲಿರಿಸಿದವರೂ ಇರುತ್ತಿದ್ದರು, ಅಂಥವರಲ್ಲಿ ಎನ್ಕೆ, ಶ್ರೀನಿವಾಸ ಕುಲಕರ್ಣಿ, ಮುಳಗಿ, ಮೋವುಂಡಿ ಮಲ್ಹಾರಿ, ಗವಗಕರ, ವಾಡಪ್ಪಿ, ದ. ಬಾ. ಕುಲಕರ್ಣಿ ಇವರೇ ಮೊದಲಾದವರು ಬೇಂದ್ರೆಯವರ ಕಡೆಗೆ ಬರುತ್ತಿದ್ದರು. ಬರೆದುಕೊಂಡು ಬಂದುದನ್ನು ಬೇಂದ್ರೆಯವರಿಗೆ ತೋರಿಸುತ್ತಿದ್ದರು. ಅವರ ಉಪದೇಶವನ್ನು ಕೇಳಿಕೊಳ್ಳುತ್ತಿದ್ದರು: ತಮ್ಮ ಬರವಣಿಗೆಗಳಲ್ಲಿ ಮಾರ್ಪಾಡು ಮಾಡಿಕೊಳ್ಳುತ್ತಿದ್ದರು. ಇದಕ್ಕೆ ನನ್ನ ಸರಿವರೆಯದವರೂ ಅಪವಾದವಾಗಿರಲಿಲ್ಲ. ಎನ್ಕೆ ಅವರು ಇಲ್ಲೂ ಬರುತ್ತಿದ್ದರು. ಅವರ ಜ್ಞಾನದಾಹ ಬಹಳ ತೀವ್ರವಾಗಿತ್ತು; ಚುರುಕಾಗಿಯೂ ಇತ್ತು.

## ಸಾಹಿತ್ಯಕೇಲಿಯ ಸಹವಾಸ

ಸಾಹಿತ್ಯಕೇಲಿಯೆಂದರೆ ಅದರಲ್ಲಿ ಭಾಗವಹಿಸುವವರೆಲ್ಲರೂ ಒಂದೊಂದು ವಿಷಯದ ಹೆಸರು ಬರೆದು ಚೀಟಿ ಹಾಕುವುದು. ಒಟ್ಟಾದ ಚೀಟಿಗಳಲ್ಲಿ ಒಬ್ಬೊಬ್ಬರು ಒಂದೊಂದು ಚೀಟಿಯನ್ನು ಎತ್ತಿಕೊಳ್ಳುವುದು. ಅದರಲ್ಲಿ ಬರೆದ ವಿಷಯ ಕುರಿತು ಅರ್ಧ ತಾಸಿನಲ್ಲಿ ಕವನ ಬರೆಯುವುದು. ಹಾಗೆ ಬರೆದ ಕವನಗಳನ್ನು ಓದುವುದು; ಅವುಗಳ ವಿಮರ್ಶೆ ಮಾಡುವುದು. ಬೇಂದ್ರೆಯವರೂ ಇದರಲ್ಲಿ ಪಾಲ್ಗೊಂಡು, ಎಲ್ಲರಿಗೂ ಅವರವರ ಧೀಶಕ್ತಿಗೆ ಪರಿಪೋಷಕವಾಗುವಂಥ ಮಾರ್ಗದರ್ಶನ ಮಾಡುತ್ತಿದ್ದರು. ಎಲ್ಲರೂ ಉತ್ಸಾಹದಿಂದ ತರಬೇತಿ ಹೊಂದಿ, ತಂತಮ್ಮ ತಳಹದಿಯನ್ನು ಭದ್ರಪಡಿಸಿಕೊಳ್ಳುತ್ತ, ಹೆಸರು ಗಳಿಸಿಕೊಂಡವರಲ್ಲಿ ಎನ್ಕೆಯವರು ಒಬ್ಬರು. ಇಂದು ಅವರು ಉಚ್ಚಮಟ್ಟದ ಸಾಹಿತ್ಯಸ್ಥಾನವನ್ನು ಅಲಂಕರಿಸಿದ್ದಾರೆ ಎಂದು ಹೇಳಿದರೆ ಅತಿಶಯೋಕ್ತಿಯ ಮಾತಾಗಲಾರದೆಂದು ನಾನು ಬಗೆದಿದ್ದೇನೆ.

## ಸಿದ್ಧಹಸ್ತ ಎನ್ಕೆ

ಆಕಾಶವಾಣಿಯ ಸೇವೆಯಲ್ಲಿ ದಿನಾಲೂ ಎನ್ಕೆ ಅವರ ಹೆಸರೂ, ಅವರ ಕೃತಿಗಳ ನಾಮಾವಲಿಗಳೂ ವಿರಾಟ ಸ್ವರೂಪವನ್ನೇ ತಾಳಿದ್ದವು. ಅವರು ಅವಿರತ ಪರಿಶ್ರಮ ಪಟ್ಟು ಸಾಹಿತ್ಯದ ವಿವಿಧಾಂಗಗಳಲ್ಲಿ ರಚನೆ ಮಾಡಿ, ಅಖಂಡ ಕೀರ್ತಿಭಾಜನರಾಗಿದ್ದಾರೆ.

ಆ ಸೇವೆಯಿಂದ ಅವರು ನಿವೃತ್ತರಾಗಿದ್ದರೂ ಸಹ 'ಇದು ಎನ್ಕೆ ಅವರ ರಚನೆ' ಎಂದು ಈಗಲೂ ಪದೇ ಪದೇ ಪದ ಕೇಳಬರುತ್ತಲೇ ಇದೆ. 'ಎನ್ಕೆಯುವರೇ, ಇಂಥದೊಂದನ್ನು ಬರೆಯಬೇಕು' ಎಂದು ಯಾರಾದರೂ ಕೇಳಿಕೊಂಡರೆಂದರೆ 'ಹೂಂ' ಎಂಬ ಒಪ್ಪಿಗೆ ತಟ್ಟನೆ ಬರುವದು ಸಹಜವಾಗಿದೆ. ಇಂಥದೊಂದು ಸಭೆಯಲ್ಲಿ ಇಂಥದನ್ನು ಕುರಿತು ಭಾಷಣ ಮಾಡಬೇಕೆಂದು ಕೇಳಿಕೊಂಡರೆ ಎನ್ಕೆಯುವರ ಬಾಯಿಂದ ಹೂಂ ಎಂದು ಬರುತ್ತದೆ. ಇಂಥದೊಂದು ಸಭೆಗೆ ಅಧ್ಯಕ್ಷರಾಗಲು ಬರಬೇಕೆಂದು ಬಿನ್ನವಿಸಿಕೊಂಡೆರೆ ಹೂಂ ಅನ್ನುವಂಥ ಸ್ವಭಾವ ಅವರದಾಗಿದೆ. ಆದಕ್ಕೇ ನಾನು ಎನ್ಕೆಯುವರನ್ನು ಸಿದ್ಧಹಸ್ತರೆಂದು ಗೌರವಿಸುತ್ತಿದ್ದೇನೆ. ಎನ್ಕೆಯುವರು ಬರೆದ ಲೇಖನಗಳು ಪ್ರಕಟವಾಗದ ಕನ್ನಡ ಪತ್ರಿಕೆಗಳೇ ಇಲ್ಲವೆನ್ನಬಹುದು.

ನಮ್ಮಿಬ್ಬರಿಗೂ ಗೆಳೆಯರಾಗಿದ್ದ ಮೊನ್ನೆ ಮೊನ್ನೆ ಗತಿಸಿದ ಶೇ. ಗೋ. ಕುಲಕರ್ಣಿಯವರು ಬರೆದ ಕಾದಂಬರಿಯೊಂದಕ್ಕೆ ಮುನ್ನುಡಿ ಬರೆಯಬೇಕೆಂದು ಬಿನ್ನವಿಸಿಕೊಂಡಾಗ ಹಸ್ತಪ್ರತಿಯನ್ನೇ ಓದಿ, ಮುದ್ರಣದ ಹೊತ್ತಿಗೆ ಮುನ್ನುಡಿ ಬರೆದುಕೊಡುತ್ತೇನೆ ಎಂದು ಹೇಳಿದುದು ನನಗೆ ಗೊತ್ತಿದೆ. ಹೀಗೆ ಎನ್ಕೆಯುವರಲ್ಲಿ ಸಿದ್ಧಹಸ್ತಕನ ಲಕ್ಷಣಗಳು ಒಡೆದು ಕಾಣುತ್ತವೆ. ಅವರಲ್ಲಿರುವ ಸರಳ ಸ್ವಭಾವ, ನೈಜವಾದ ಮೃದುಹಾಸ್ಯಗಳು ಯಾರನ್ನಾದರೂ ಆಕರ್ಷಿಸುವಂತಿದೆ. ಅವರು ಈಗ ಲೇಖನ ವ್ಯವಸಾಯದ ದೀಕ್ಷೆಯನ್ನು ಪಡೆದು, ಸಾಧನೆಯು ಸಿದ್ಧಿಯನ್ನು ಗಿಟ್ಟಿಸಿದ ಸಿದ್ಧಾವಸ್ಥೆಯಲ್ಲಿ ಇಂದು ವಿಹರಿಸುತ್ತಿದ್ದಾರೆಂಬುದನ್ನು ಪ್ರತ್ಯಕ್ಷ ನಿರೀಕ್ಷಿಸುತ್ತಿರುವ ನನಗೆ ಹರುಷವೆನಿಸುತ್ತದೆ.

## ಸಂಶೋಧನೆಯ ಹವ್ಯಾಸ

ಏಕಾಂಕ ನಾಟಕಗಳಿಂದ ಆರಂಭಿಸಲ್ಪಟ್ಟ ಎನ್ಕೆಯುವರ ಸಾಹಿತ್ಯ ಸೃಷ್ಟಿಯು ಕಾದಂಬರಿ, ನಾಟಕ, ವಿಮರ್ಶೆ, ಚರಿತ್ರೆಗಳಲ್ಲದೆ ಹಲವಾರು ಗೀತೆಗಳನ್ನು ರಚಿಸಿರುವ ಮಟ್ಟಕ್ಕೆ ಬಂದು, ಮುಂದುವರಿದಿದ್ದಾರೆ. ವಿಪುಲ ಸಾಹಿತ್ಯ ನಿರ್ಮಾಪಕರೆಂಬವರ ಮಾಲಿಕೆಯಲ್ಲಿ ಗಣನೀಯ ವ್ಯಕ್ತಿಯೆನಿಸಿದ್ದಾರೆ. ಇತ್ತೀಚೆಗೆ ಕುಮಾರವ್ಯಾಸಭಾರತ ಕಾವ್ಯದ ಗಂಡು ಶೈಲಿಯನ್ನೇ ಅನುಸರಿಸಿ, ಗದ್ಯರೂಪದಲ್ಲಿ ಅಳವಡಿಸಿ, ಕನ್ನಡಿಗರಿಗೆ ಒದಗಿಸಿಕೊಟ್ಟಿದ್ದಾರೆ.

ಎನ್ಕೆಯುವರು ಗದುಗಿನವರು. ಕುಮಾರವ್ಯಾಸನ ಕಾವ್ಯ ಗದುಗಿನ ಭಾರತವೆಂದೇ ಪ್ರಸಿದ್ಧಿಯಾಗಿರುವುದು. ಹೆಸರೂ ಏಕನಾಮೋ ಸದಾ ಪ್ರೀತಿ ಎಂಬಂತೆ ಒಂದೇ ಆಗಿದೆ. ಎನ್ಕೆಯುವರಿಗೆ ಕುಮಾರವ್ಯಾಸ ಭಾರತವೆಂದರೆ ಅಚ್ಚುಮೆಚ್ಚಿನ ಅಭ್ಯಾಸೀ ಗ್ರಂಥವಾಗಿದೆ. ಕುಮಾರವ್ಯಾಸ ಭಾರತದ ಶುದ್ಧ ಪಾಠಾಂತರವನ್ನು ಗೊತ್ತುಪಡಿಸುವದು ಅತ್ಯಗತ್ಯವಿದೆ ಎಂದು ಅಪ್ಪಟ ಕನ್ನಡ ಪಂಡಿತರೆನ್ನಿಸಿದ ಡಾ. ಬೆಟಗೇರಿ ಕೃಷ್ಣಶರ್ಮರು ಬೇನೆಗೀಡಾಗಿ ನರಳುತ್ತಿರುವಾಗಲೂ ಅನ್ನುತ್ತಿದ್ದುದು ನನಗೆ ಗೊತ್ತಿದೆ. ಈ ಕೆಲಸ ಮಾಡಲು ಎನ್ಕೆಯುವರು ಬೆಟಗೇರಿಯವರ ಕಡೆಗೆ ಆಗಾಗ ಬಂದು, ಅವರೊಡನೆ

ವಿಚಾರ-ವಿನಿಮಯ ಮಾಡಿ, ಚರ್ಚಿಸಿ, ಕೆಲವು ಸಂಧಿಗಳಲ್ಲಿ ಶುದ್ಧ ಪಾಠಾಂತರದ ಟಿಪ್ಪಣಿ ಮಾಡಿಕೊಳ್ಳುತ್ತಿದ್ದುದನ್ನು ನಾನು ಕಣ್ಣಾರೆ ನೋಡಿದ್ದೇನೆ. ಅದು ಪೂರ್ತಿಯಾಗದಿದ್ದರೂ ಆ ರೀತಿಯ ಹವ್ಯಾಸ ಎನ್ಕೆಯವರಲ್ಲಿ ಮನೆ ಮಾಡಿಕೊಂಡಿರುತ್ತದೆ.

ಎನ್ಕೆಯವರ ಜೀವನದಾರಂಭ ಶಿಕ್ಷಕರಾಗಿ, ಬಾಳಿದುದು ಲೇಖಕರಾಗಿ, ಆಕಾಶವಾಣಿಯ ಕೆಲಸ; ಅಲ್ಲಿಂದಲೇ ನಿವೃತ್ತಿ. ಆಕಾಶವಾಣಿಯಲ್ಲಿ ಪ್ರಚುರಗೊಳ್ಳುತ್ತಿರುವ ಗೀತ, ರೂಪಕ, ನಾಟಕಗಳ ಶ್ರೇಯಸ್ಸೆಲ್ಲ ಇವರಿಗೇ ಮೀಸಲು. ಇವರ ಜಾತಕದಲ್ಲಿ ಮಂಗಳನು ಪ್ರಬಲನಾದ್ದರಿಂದ ಅಕಾಲದಲ್ಲಿಯೇ ಇಬ್ಬರು ಹೆಂಡಂದಿರನ್ನು ಕಳೆದುಕೊಂಡರು. ಅದರಿಂದ ಸಂಸಾರದ ತೊಂದರೆಗಳನ್ನು ಭೋಗಿಸಿದರು; ಅವುಗಳೆಲ್ಲವನ್ನು ಎದುರಿಸಿದರು. ಈಗ ಎನ್ಕೆಯವರು ಸುಖಜೀವಿ ಎಂದು ಹೇಳಬಹುದು. ಮಕ್ಕಳು, ಸೊಸಂದಿರು, ಮೊಮ್ಮಕ್ಕಳಿಂದೊಡಗೂಡಿ ಸಮೃದ್ಧಿಯಿಂದ ಬಾಳುತ್ತಿರುವರು. ಎಪ್ಪತ್ತೊಂದರ ಮನೆಯಲ್ಲಿ ಕಾಲಿರಿಸಿದರೂ ಸಾಹಿತ್ಯದ ವ್ಯಾಸಂಗ ನಡೆದೇ ಇದೆ. ಅವರಿಗೆ ಇನ್ನೂ ಉನ್ನತೋನ್ನತ ಸ್ಥಾನಮಾನಗಳು ಕಾದು ಕುಳಿತಿವೆ ಎಂಬಲ್ಲಿ ಸಂಶಯವಿಲ್ಲ. ನಾನು ಕಂಡಂತೆ ಎನ್ಕೆಯವರ ಬದುಕು ಹೀಗಿದೆ. ನಾನು ಅವರ ಸಾಹಿತ್ಯ ಕೃತಿಗಳ ಬಗ್ಗೆ ಪ್ರಸ್ತಾಪ ಮಾಡಹೋಗಿಲ್ಲ. ದೇವರು ಎನ್ಕೆಯವರಿಗೆ ಆಯುರಾರೋಗ್ಯ ದಯಪಾಲಿಸಲೆಂದು ಆತನಲ್ಲಿ ಬೇಡಿಕೊಳ್ಳುವೆ.

# ಕೇಳಿ ಕಂಡು ಅಣ್ಣನಾದ ಎನ್ಕೆ

ಶಾರದಾ ಜಡೆ

## ನಾನು ಕೇಳಿದ ಎನ್ಕೆ

ಮುಂಬೈ ಬಾನುಲಿ ಕೇಂದ್ರದಿಂದ ಅಲೆಯಾಗಿ ಬರುತ್ತಲಿತ್ತು, "ಕನ್ನಡದ ಬಾವುಟ!" ಅದನ್ನು 'ಏರಿಸಿ ಹಾರಿಸು'ತ್ತಿದ್ದವರು ಎನ್.ಕೆ. ಕುಲಕರ್ಣಿ ಅರ್ಥಾತ್ ಇಂದಿನ ಎನ್ಕೆ. ಅವರ ದನಿ ಅದೆಷ್ಟು ಚುರುಕು! ಮತ್ತದೆಷ್ಟು ಆಕರ್ಷಕ! ರೇಡಿಯೋ ದಲ್ಲಿನ ಕನ್ನಡ ಕಾರ್ಯಕ್ರಮವನ್ನಾಲಿಸುತ್ತಿದ್ದವರು ನಾನು ಮತ್ತು ನನ್ನವರು, ನನ್ನೆರಡು ಮಕ್ಕಳು ಪ್ರಸಾದ್ ಮತ್ತು ಶೈಲಜಾ. ಸುಮಾರು ೩೫ ವರ್ಷಗಳ ಹಿಂದಿನ ಸಂದರ್ಭ; ಅಹಮದ್‌ನಗರದ 'ಸಾಕರವಾಡಿ'ಯಲ್ಲಿ ನಮ್ಮೆಜಮಾನರಿಗೆ ಕೆಲಸವಿತ್ತು. ಹೊರನಾಡಿನಲ್ಲಿರುವ ಕನ್ನಡಿಗರಿಗೆ, ಕನ್ನಡವೆಂದರೆ ಕಸ್ತೂರಿಯೇ! ಕನ್ನಡದ ಉಲಿ ಕೇಳೇವೇ, ಎಂದು, ಮನಸ್ಸು ಚಡಪಡಿಸುತ್ತದೆ. ಮೈಸೂರಿನ ಆಗಿನ 'ಆಕಾಶವಾಣಿ' ದುರ್ಬಲವಿದ್ದು ನಮಗೇನೂ ಕೇಳುವಂತಿರಲಿಲ್ಲ. ಹಾಗೆಂದೇ, ಮುಂಬೈ ಕೇಂದ್ರದಿಂದ, ಕೇವಲ ಒಂದರ್ಧ ಗಂಟೆ ಕಾಲ ಮಾತ್ರ ಬರುತ್ತಿದ್ದ ಕನ್ನಡ ಕಾರ್ಯಕ್ರಮಕ್ಕಾಗಿ ಚಾತಕ ಪಕ್ಷಿಗಳಾಗಿ ಕೂತಿರುತ್ತಿದ್ದೆವು. ಏಳು ವರ್ಷದ ನಮ್ಮ ಪ್ರಸಾದನಿಗೆ ಎನ್ಕೆಯವರ ದನಿ ಎಂದರೆ ಅಚ್ಚುಮೆಚ್ಚು; ನೂರು ದನಿಯಲ್ಲಿ ಎದ್ದುಕಾಣುವ ದನಿ ಅದು! ಬಾನುಲಿ ಕಾರ್ಯಕ್ರಮ ಮುಗಿಯುತ್ತಿದ್ದಂತೆ, ತಾನು ಎನ್ಕೆ ಆಗಿ, ಆ ಕಾರ್ಯಕ್ರಮದ ಅಣಕು ಮಾಡಿ ತೋರಿಸಿ ಬಿಡುತ್ತಿದ್ದ! ಈ ರೀತಿ ನಮ್ಮ ಮತ್ತು ಎನ್ಕೆಯವರ ಪರಿಚಯ'ನಾವು ಕೇಳಿದ ಎನ್ಕೆ'ಯಿಂದ ಆರಂಭವಾಯಿತು.

ಕಾರ್ಯಕ್ರಮಗಳನ್ನು ಮೆಚ್ಚಿ ಬಾನುಲಿ ಕೇಂದ್ರಕ್ಕೆ ಪತ್ರ ಬರೆದಾಗ, ಮಿಂಚಿ ನಂತೆ ಉತ್ತರ ಬಂದಿತ್ತು. ಜೊತೆಗೆ, ಮುಂಬೈಗೆ ಬಂದು, ಕಾರ್ಯಕ್ರಮದಲ್ಲಿ ಭಾಗ ವಹಿಸಬೇಕೆಂಬ ಕರೆಯೂ ಬಂದಿತ್ತು. ನಾನು ಮತ್ತು ನಮ್ಮವರು ಕತೆ ಬರೆಯುತ್ತಿದ್ದ ವರೇ; ಆದರೂ ಆತನಕ ರೇಡಿಯೋದಲ್ಲಿ ಭಾಗವಹಿಸಿರಲಿಲ್ಲ. ಅನಿರೀಕ್ಷಿವಾದ ಈ ಕರೆ ಯಿಂದ ನಮಗೆ ಅಮಿತಾನಂದವೇ ಆಯಿತು. ತುಂಬಾ ಉತ್ಸಾಹದಿಂದ, 'ಹಳ್ಳಿಗೆ ಬೆಳಕು' ಎಂಬ ಗ್ರಾಮ ನೈರ್ಮಲ್ಯ ಕುರಿತ ರೂಪಕವನ್ನು ಬರೆದು ಕಳಿಸಿದೆ. ಅದು ಸ್ವೀಕೃತವೂ ಆಯಿತು. ನಿರ್ದಿಷ್ಟ ಪಡಿಸಿದ ದಿನ ನಾವೆಲ್ಲರೂ ಮುಂಬೈಗೆ ಹೋದೆವು.

ಚೈತನ್ಯವೇ ಮೂರ್ತಿಗೊಂಡಂತೆ ಒಬ್ಬರು ಹೊರಬಂದರು, ನಗುನಗುತ್ತಲೇ ನಮ್ಮನ್ನು ಸ್ವಾಗತಿಸಿದರು. ಬಹುದಿನದ ಪರಿಚಿತರೇನೋ ಎನ್ನಿಸಿಬಿಟ್ಟಿತು ನಮಗೆ. ಅವರ ದನಿಯೇ, ಅವರೇ ಎನ್ಕೆಯವರೆಂದು ಖಾತ್ರಿ ಮಾಡಿ ಬಿಟ್ಟಿತು! ಎನ್ಕೆಯವರು ನಮಗೆ ಬಾನುಲಿ ಕೇಂದ್ರವನ್ನೆಲ್ಲಾ ತೋರಿಸಿದರಲ್ಲದೆ, ಕಾರ್ಯಕ್ರಮಗಳು ಹೇಗೆ ಪ್ರಸಾರವಾಗುತ್ತವೆ, ಎಂಬುದನ್ನು ವಿವರಿಸಿದರು. ನಂತರ ನಮ್ಮ ರೂಪಕದ ಪ್ರಸಾರವಾಯಿತು. ನಾನು ಮತ್ತು ನನ್ನೆರಡು ಮಕ್ಕಳೂ ರೂಪಕದಲ್ಲಿ ಭಾಗವಹಿಸಿದ್ದೆವು. ಇದು ನಮ್ಮ ಮೊಟ್ಟ ಮೊದಲಿನ ಕಾರ್ಯಕ್ರಮವಾದರೂ 'ಚೆನ್ನಾಗಿತ್ತೆ'ಂದು ಮೆಚ್ಚಿಗೆ ಸೂಚಿಸಿದರು. ನಮ್ಮ ಪ್ರಸಾದ್, ಅವರ ಮುಂದೇ, ಎನ್ಕೆಯ ಅಣಕ ಮಾಡಿ ತೋರಿಸಿದಾಗ, ಅವರು ಮುಕ್ತ ಮನಸ್ಸಿನಿಂದ ನಕ್ಕರು, ಅವನ ಬೆನ್ನು ತಟ್ಟಿ. ಅದೇ ನಗೆಯಿಂದ 'ಇಂವ ನನ್ನ ಮೀರಿಸ್ತಾನs,' ಎಂದರು. ಅವನು, ಅವರನ್ನು ಮೀರಿಸುವಷ್ಟು ಮುಂದೆ ಹೋಗದಿದ್ದರೂ, ಹೈದರಾಬಾದ್ B.H.E.L. ಕನ್ನಡ ಸಂಘದ ಚಟುವಟಿಕೆಗಳಲ್ಲಿ ಸಕ್ರಿಯ ಭಾಗವಹಿಸುತ್ತಿದ್ದಾನೆ; ಅಲ್ಲಿನ ರೇಡಿಯೋಕ್ಕೆ ಕಾರ್ಯಕ್ರಮಗಳನ್ನೊದಗಿಸುತ್ತಿದ್ದಾನೆ, ಅವನ ಮಕ್ಕಳೂ ಭಾಗವಹಿಸುತ್ತಿವೆ. ಇದು ಎನ್ಕೆಯವರ ಹಾರೈಕೆಯ ಪ್ರಭಾವ.

## 'ಅಣ್ಣ' ಎನ್ಕೆ

ಅಂದು 'ಶ್ರೀ ಗಣೇಶ'ಗೊಂಡ ನನ್ನ 'ಆಕಾಶವಾಣಿ'ಯ ಕಾರ್ಯಕ್ರಮಕ್ಕೆ, ಎನ್ಕೆಯವರಿಂದ ನಿರಂತರ ಉತ್ತೇಜನ ದೊರೆಯುತ್ತಲೇ ಬಂದಿತು. ಧಾರವಾಡ, ಮೈಸೂರು, ಹೈದರಾಬಾದ್ ಕೇಂದ್ರಗಳಲ್ಲೆಲ್ಲಾ ಭಾಗವಹಿಸುವ ಅವಕಾಶಗಳು ಬರುತ್ತಲೇ ಇದ್ದವು. ಇನ್ನಿತರ ಸಾಹಿತ್ಯ ಪ್ರಕಾರಗಳಲ್ಲಿಯೂ ನಾನು ತೀವ್ರ ಮುಂದುವರಿಯಬೇಕೆಂದೂ, ಕಾದಂಬರಿಗಳನ್ನೂ ಬರೆಯಬೇಕೆಂದೂ, ಎನ್ಕೆಯವರಿಂದ ಒತ್ತಾಯ ಬರುತ್ತಲೇ ಇತ್ತು; ಈಗಲೂ ಬರುತ್ತಿದೆ. ಆದರೆ ನಾನೊಂದು ಮೊಂಡು ಹುಡುಗಿ! ಅಣ್ಣ ಕೈಹಿಡಿದು ನಡೆಸಿದಾಗಷ್ಟೇ ನಡೆಯುತ್ತೇನೆ, ಮತ್ತೆ ಕೂತು ಬಿಡುತ್ತೇನೆ. ಇದಕ್ಕೆ ಬಾಳಿನುದ್ದಕ್ಕೂ ಬಂದ ಬವಣೆಗಳೂ ಬಹುಮಟ್ಟಿಗೆ ಕಾರಣವಿರಬಹುದು. ಆದರೆ, ಇವನ್ನೆಲ್ಲಾ ಮೆಟ್ಟಿ ಮುಂದುವರೆವ ಶಕ್ತಿ, ಅಣ್ಣನಿಗಿದ್ದಂತೆ ನನಗೆ ಸಾಧಿಸಿಲ್ಲ. ಅವರಿಗಾದರೆ ಎದುರಾಗುವ ಎಡರು-ತೊಡರುಗಳೆಲ್ಲಾ ಮೆಟ್ಟುಗಲ್ಲುಗಳು! ನನ್ನಂಥವರು ಮುಗ್ಗರಿಸಿ ಬೀಳುವುದೇ ಹೆಚ್ಚು.

ಹಾಗೂ ಹೀಗೂ ಬರೆದು, ಪ್ರಕಟಗೊಂಡ ನನ್ನ ಒಂದೆರಡು ಕತೆ ಕವನಸಂಗ್ರಹಗಳನ್ನು ಎನ್ಕೆಯವರಿಗೆ ಕಳಿಸಿ ಕೊಟ್ಟಾಗ, ಅವರಿಂದ ಆತ್ಮೀಯ ಸೋದರನ ಅಂತಃಕರಣವೇ ತೆರೆದಂತೆ ಮೆಚ್ಚೋಲೆ ಬಂದಿತ್ತು. "ನನ್ನ ಸೋದರಿಯ ಪ್ರತಿಭೆ 'ಸಾಗರದೀಪ'ವಾಗಿ ಬೆಳಗಿರುವುದು ನನಗೊಂದು ಅಭಿಮಾನ, ಆನಂದ..." ಹೀಗೆ

ಅವರು ಆನಂದಿಸಿದ್ದರು. ಅದನ್ನು ಕಂಡು ನನ್ನ ಮನ ತುಂಬಿ ಬಂದಿತ್ತು. ಆ ಮಟ್ಟಿಗೆ ನಾನು ಧನ್ಯ.

ಸಾಹಿತಿ ಎನ್ಕೆಯವರು ನನಗೆ "ಅಣ್ಣ"ನಾದುದು ಕೇವಲ ಸಾಹಿತ್ಯಕ ಪರಿಚಯ ದಿಂದಲ್ಲ; ಅದು, ಇಬ್ಬರ ಎದೆಮಿಡಿತ ಒಂದೇ ರೀತಿಯದಾದುಕ್ಕಾಗಿ. ಸಮಾನ ಸ್ವಭಾವೇಷು ಸಖ್ಯಂ ಎನ್ನುವುದಲ್ಲವೇ ಹಿರಿವಾಣಿ! ಅವರ 'ಸಾವಿನ ಉಡಿಯಲ್ಲಿ'ಓದುವ ತನಕ, ಅವರಲ್ಲಿ ಓರ್ವ ಹಿರಿಯ ಸಾಹಿತಿಯನ್ನಷ್ಟೇ ನಾನು ಕಂಡಿದ್ದುದು. ಆ ಕಾದಂಬರಿಯ ಬಿಸಿ, ನನ್ನೆದೆಯನ್ನು ಕರಗಿಸಿತು. ಕಣ್ಣೀರು ಸುರಿಸಿತು. ನನ್ನ ಮನಸ್ಸಿನ ಮೇಲಾದ ಆ ಪರಿಣಾಮವನ್ನೆಲ್ಲಾ ಅವರಿಗೆ ಬರೆದು ತಿಳಿಸಿದೆ. ಆಗ ಅವರು ಉತ್ತರ ಬರೆಯುತ್ತಾ "ಅಕ್ಕರೆಯ ಸೋದರಿ! ನನ್ನೆದೆಯ ನೋವಿನಲ್ಲಿ ಪಾಲ್ಗೊಂಡು, ನೀವು, ನಿಜಕ್ಕೂ ನನ್ನ ನೆಚ್ಚಿನ ಸೋದರಿಯೇ ಆಗಿದ್ದೀರಿ, ಅಂತಃಕರಣ ಹೀಗೆ ಇರಲಿ......" ಎಂದು ತಿಳಿಸಿದರು. ಅಂದಿನಿಂದ ಅವರೆನ್ನ "ಅಣ್ಣ".

## ನಮ್ಮಲ್ಲಿ ಎನ್ಕೆ

ಎನ್ಕೆಯವರು ಮುಂಬೈಯಿಂದ ಧಾರವಾಡ 'ಆಕಾಶವಾಣಿ'ಗೆ ಬಂದು ಕಾರ್ಯ ನಿರ್ವಹಿಸುತ್ತಿದ್ದರು. ಅದೇ ಕಾಲಕ್ಕೆ ನಾವು ಸಾಕರವಾಡಿ ಬಿಟ್ಟು ಹೊಸಪೇಟೆಯಲ್ಲಿ ನೆಲೆಸಿಯಾಗಿತ್ತು. ಆಗ ಹೊಸಪೇಟೆಯಲ್ಲಿ ಶ್ರೀ ಗಜಾನನೋತ್ಸವ ಸಂಭ್ರಮದಿಂದ ಜರಗುತ್ತಿದ್ದ ಕಾಲ. ಮುಖ್ಯ ಭಾಷಣಕಾರರನ್ನಾಗಿ ಎನ್ಕೆಯವರನ್ನು ಆಮಂತ್ರಿಸಿದ್ದರು, ನಾವಿಲ್ಲಿರುವುದನ್ನರಿತ ಶ್ರೀ ಎನ್ಕೆಯವರು ಸಪತ್ನೀಕರಾಗಿ ನಮ್ಮ ಮನೆಗೆ ಬಂದರು. ಅಗ ನಡೆದ ಕೌತುಕದ ಘಟನೆ, ನಮ್ಮ ಮತ್ತು ಅವರ ಮನಸ್ಸಿನಲ್ಲಿ ಅಚ್ಚಳಿಯದೇ ನಿಂತು ಬಿಟ್ಟಿರುವುದರಿಂದ, ಅದನ್ನು ಇಲ್ಲಿ ಉಲ್ಲೇಖಿಸದೆ ಬಿಡುವಂತಿಲ್ಲ. ಅವರುಗಳು ಬಂದು ಕೂತು, ಇನ್ನೂ ಎರಡು ಮಾತೂ ಆಡಿರಲಿಕ್ಕಿಲ್ಲ. ಅಷ್ಟರಲ್ಲಿ ಅವರ ಎರಡು ವರ್ಷದ ಚಿರಂಜೀವಿ ರವಿ ಕಾಣೆಯಾಗಿ ಬಿಟ್ಟಿದ್ದ! ಚಿತ್ರಪಟವೇ ಪಲ್ಲಟಿಸಿದಂತಾಗಿತ್ತು; ಎಲ್ಲರೂ ದಢದಡನೆ ಎದ್ದು ಮನೆಯೊಳಗೂ, ಹೊರಗೂ ಹುಡುಕಾಡಿದೆವು; ಸುತ್ತಲಿದ್ದವರ ನ್ನೆಲ್ಲಾ ವಿಚಾರಿದೆವು. ಎಲ್ಲೂ ಇಲ್ಲ! ಪೈನಿಯವರ ಮುಖ ಕಪ್ಪಿಟ್ಟಿತು, ಕಣ್ಣು ಹನಿಗೂಡಿತು. ನಮ್ಮ ತಳಮಳವನ್ನಂತೂ ದೇವರೇ ಬಲ್ಲ. ಮಗು ಬಾಗಿಲಿನಿಂದಾಚೆಗೆ ಹೋಗಿ ಯಾರಾದರೂ ಎತ್ತಿಕೊಂಡು ಹೋಗಿ ಬಿಟ್ಟರೇನೋ ಎಂಬ ಅನುಮಾನದ ಮೇಲೆ, ಪೋಲೀಸರಿಗೆ ತಿಳಿಸಲು ಅಣ್ಣನವರೇ ಹೊರಟರು. ಆ ಹೊತ್ತಿನಲ್ಲಿ ನಮ್ಮವರೂ ಮನೆಯಲ್ಲಿರಲಿಲ್ಲ. ಮನಸ್ಸಿನ ಬಡಬಡಿಕೆಯಿಂದಾಗಿ ಮತ್ತೆ ಮನೆಯಲ್ಲೆಲ್ಲಾ ಹುಡುಕ ಹತ್ತಿದೆವು. ಅಬ್ಬಾ! ಸಿಗಿಬಿದ್ದ ಕಳ್ಳ! ಆ ಕಳ್ಳ ಮತ್ಯಾರೂ ಅಲ್ಲ, ಸ್ವಯಂ ರವಿಯೇ!! ಎರಡು ಪೆಟ್ಟಿಗೆಗಳ ನಡುವಿನ, ಇಕ್ಕಟ್ಟಿನಲ್ಲಿ, ಕಮಕ್ಕಿಮಕೆನ್ನದೆ ಕೂತು ಬಿಟ್ಟಿದ್ದ ಆ ಭೂಪತಿ! ಆ ಪೆಟ್ಟಿಗೆಯ ಮೇಲಿಟ್ಟ ಹಾಸಿಗೆ ಮಡಿಯ ಜಮಜಾನೆ, ಬಿಚ್ಚಿಕೊಂಡು ಇಳಿ ಬಿದ್ದು ಅವನನ್ನು ಮರೆಮಾಡಿದ ತೆರೆಯಾಗಿ ಬಿಟ್ಟಿತ್ತು. ಅದೇನೋ ಸಹಜ, ಮಕ್ಕಳು

ಅಪಿತುಕೊಳ್ಳುವುದು ಹೊಸತೇನಲ್ಲ. ಆದರೆ ಇಷ್ಟೊಂದು ಅವನ ಮುಂದೆಯೇ ಸುಳಿದಾಡಿ, ಒಡರಾಡುತ್ತಿರುವಾಗಲೂ ಅವನು ಅದು ಹೇಗೆ ಗಪ್ಪೆಂದು ಕೂತುಬಿಟ್ಟಿದ್ದ? ಇದು ನನಗೀಗಲೂ ಹೊಳೆಯುತ್ತಿಲ್ಲ! ಬಹುಶಃ ಏಕಾಂಕ ಕರ್ತೃವಿನ ಮಗ ತಾನಾದ್ದ ರಿಂದ ಆ ನಿಗೂಢ ಸಹಜಾಭಿನಯ ಹುಟ್ಟಿಸಿಂದಲೇ ಅವನಿಗೆ ಸಾಧಿಸಿದ್ದಿರಬಹುದೇ! ಅಂತೂ ನಮ್ಮ ಮನೆಯಲ್ಲೊಂದು ಏಕಾಂಕ ನಾಟಕ ನಡೆದುಹೋಯಿತು.

ಜೀವನವೆಂಬುದು ಮಳೆ, ಬಿಸಿಲಿನಂತೆ, ಕೆಲವು ವರ್ಷಗಳು ಉರುಳಿ ಹೋಗಿತ್ತು. ಮತ್ತೆ ಭಾಷಣಕಾರರಾಗಿ ಎನ್ಕೆಯವರು ನಮ್ಮಲ್ಲಿಗೆ ಬಂದರು. ಆದರೆ, ಏಕಾಂಗಿ ಯಾಗಿ! ಸಹ ಸಂಸಾರದಲ್ಲಿ ಸೌ. ವೈನಿಯವರು ಅಣ್ಣನವರನ್ನು ಅಗಲಿ ಹೋಗಿ ಬಿಟ್ಟಿದ್ದರು. ಅಣ್ಣನವರ ಮುಖದಲ್ಲಿ ಏನೋ ಒಂದು ಬಗೆಯ ನಿರ್ಲಿಪ್ತತೆ ಕಂಡು ಬಂದರೂ, ಒಳಗೆ, ದಾವಾಗ್ನಿಯಿಂದಾದ ಹುಣ್ಣು ಮಾದಿರಲಿಲ್ಲ. ಆದರೂ ಅವರು ಸ್ಥಿತಪ್ರಜ್ಞರೇ. ಸ್ವಯಂ ಪ್ರೇರಣೆಯಿಂದಲೇ ಅಲ್ಲದೆ,'ಆಕಾಶವಾಣಿ'ಯ ಮುಂಜಾನೆಯ ಪ್ರಾರ್ಥನಾ ಕಾರ್ಯಕ್ರಮಗಳಲ್ಲಿ ಭಗವದ್ಗೀತೆ, ಮತ್ತಿತರ ತಾತ್ವಿಕ ಶ್ಲೋಕಗಳಿಗೆ ವಿವರಣೆ ಕೊಡುವ ಕಾಯಕವೂ ಅವರದ್ದೇ ಆಗಿತ್ತು. ಅದು ಕ್ರಮೇಣ ಎದೆಯೊಳಗನ್ನು ಹದ ಮಾಡಲೆಸಗಿತ್ತು. ಹಾಗೆಂದೇ ಅವರು ಎಲ್ಲರಿಂದ "ಅಳು ನುಂಗಿ ನಗುವ ಎನ್ಕೆ" ಎನ್ನಿಸಿಕೊಂಡಿದ್ದಾರೆ.

"while you laugh the whole world laughs with you, while you weep, you weep alone" ಎಂಬುವನ್ನು ಸ್ವಲ್ಪ ಮಾರ್ಪಡಿಸಿ,

"While N.K laugh she makes us all laugh while he weeps, he weeps alone" ಎಂದದ್ದೇ ಆದರೆ ಎನ್ಕೆಯವರ ಸ್ವಭಾವಕ್ಕೆ ಹಿಡಿದ ಕನ್ನಡಿ ಯಾದೀತೋ ಏನೋ!

ಮೂರನೇ ಸಲ ನಮ್ಮಲ್ಲಿಗೆ ಎನ್ಕೆಯವರ ಬಂದದ್ದು. 'ಆಕಾಶವಾಣಿ'ಯಿಂದ ನಿವೃತ್ತರಾದ ಮೇಲೆ. ಆದರೇನು? ನಿವೃತ್ತನೆಂದು ವಿಶ್ರಾಂತಿ ಪಡೆಯುತ್ತಾ ಕೂಡುವ ಚೇತನವೇ ಅವರದ್ದು! ಹಳೆಯ ನದಿಗೆ ಹೊಸ ತಿರುವು ಕೊಟ್ಟಂತಾಗಿತ್ತು ಅಷ್ಟೆ. ಕನ್ನಡ ಸಾಹಿತ್ಯ ಪರಿಷತ್ತು, ನಾಡಿನಾದ್ಯಂತ ಸಂಚರಿಸಿ, ಕನ್ನಡ ಕವಿ-ಕವಯಿತ್ರಿಯರಿದ್ದ ಲ್ಲಿಗೇ ಹೋಗಿ, ಅವರವರ ಬಾಯಿಂದಲೇ ಹೇಳಿದುದನ್ನು ಧ್ವನಿ ಮುದ್ರಿಸಿಕೊಳ್ಳ ಬೇಕೆಂಬ ಆದೇಶವನ್ನವರಿಗೆ ಕೊಟ್ಟಿತ್ತು. ಆ ಕಾರ್ಯಭಾರವನ್ನು ಹೊತ್ತು ಎನ್ಕೆ ನಮ್ಮಲ್ಲಿಗೆ ಬಂದಿದ್ದರು. ಜೊತೆಗೆ ಸಹಾಯಕರಾಗಿ ಭಾಗವತ್‌ರೂ ಬಂದಿದ್ದರು. ಈ ಸಲ ಅವರನ್ನು ಕಂಡಾಗ, ಮನಸ್ಸಿನ ಒಳಹೊರಗು ಒಂದಾಗುತ್ತಿದೆ, ಎಂಬುದು ಕಾಣುತ್ತಿತ್ತು. ಎದೆಯೊಳಗಿನ ಘಾಯದ ಹಸಿ ಆರಿ, ಇದ್ದಷ್ಟು ಶಕ್ತಿಯನ್ನು ನಾಡು, ನುಡಿಯ ಸೇವೆಗೆ ಮೀಸಲಾಗಿಡಲು ಕಾರ್ಯೋನ್ಮುಖವಾದಂತೆ ಸನ್ನದ್ಧರಾಗಿ ಬಂದಂತಿತ್ತು. ಅದೇ ನಗೆ, ಅದೇ ಚಟುವಟಿಕೆ, ನನ್ನ ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು.

ನನ್ನ 'ಸಾಗರದೀಪ' ಕವನ ಸಂಕಲನದಿಂದ ಕೆಲವನ್ನು ಧ್ವನಿಮುದ್ರಿಸಿಕೊಂಡರು; ಸಂತೃಪ್ತಿಯನ್ನು ಸೂಚಿಸಿದರು. ನನಗೆ ಧ್ವನಿ ಮುದ್ರಣವಾದುದರ ಸಂತೋಷಕ್ಕಿಂತ, ನಾವಣ್ಣ ತಂಗಿಯರಿಬ್ಬರೂ ಕೆಲ ಘಳಿಗೆಯಾದರೂ ಒಂದೆಡೆ ಕುಳಿತು ಮಾತಾಡಿದ್ದರ ಸಂತೃಪ್ತಿಯೇ ಹೆಚ್ಚಾಯಿತೆನ್ನಬಹುದು. ಅದೊಂದು ರಸಘಳಿಗೆ!

## ಎನ್ಕೆಯವರಲ್ಲಿ ನಾವು

ರೇಡಿಯೋ ಕಾರ್ಯಕ್ರಮಗಳಿಗೆ ಕರೆ ಬರುತ್ತಿದ್ದಿತಾದರೂ ನಾನೇ ಹೋಗಿ ಭಾಗ ವಹಿಸುತ್ತಿದ್ದುದು ಬಹಳ ಕಡಿಮೆ. ಹೀಗಾಗಿ ಒಮ್ಮೆ ಮಾತ್ರ ನಾವು ಎನ್ಕೆಯವರಲ್ಲಿ ಹೋಗಿದ್ದೆವು. ಭಾಷಾ ಬಾಂಧವ್ಯ ಕುರಿತು ನನ್ನದೊಂದು ಕತೆ 'ಆಕಾಶವಾಣಿ'ಯಲ್ಲಿ 'ರಿಕಾರ್ಡ್' ಆಗುವುದಿತ್ತು. ಅದಕ್ಕೂ ಅವರೇ ಪ್ರೋತ್ಸಾಹ ಕೊಟ್ಟಿದ್ದರು. ರಿಕಾರ್ಡಿಂಗ್ ಮುಗಿದ ನಂತರ, ನಮ್ಮನ್ನು ತಮ್ಮ ಮನೆಗೆ ಕರೆದೊಯ್ದರು. ಮನೆಯ ತುಂಬಾ ಜನ, ಆದರೆ ಇರಬೇಕಾದವರೊಬ್ಬರು ಮಾತ್ರ ಇರಲಿಲ್ಲ. ಹೊಸ್ತಿಲೊಳಗೆ ಕಾಲಿಡುತ್ತಿದ್ದಂತೆ, ನನ್ನ ಕುತ್ತಿಗೆ ಬಿಗಿದು ಬಂತು. ಹಾಗೇ ಸಹಿಸಿಕೊಂಡೆ. ಹೆಚ್ಚು ಮಾತನಾಡಲಾರದೆ ಅವರ ಕೋಣೆಯಲ್ಲಿ ಕೆಲ ಘಳಿಗೆ ಕೂತಿದ್ದೆ. ಆ ಕೋಣೆಯೊಂದು ಸರಸ್ವತೀ ಸದನ! ಪುಸ್ತಕಗಳೇ ಅದರ ಗೋಡೆಗಳು! ಅಲ್ಲಿಯೇ ಅವರ 'ಸಾವಿರದ ಸಖಿ'ಯರೊಡನೆ ಗುಪ್ತ ಸಂಭಾಷಣೆ, ಸಂವೇದನೆ, ತತ್ಪರಿಣಾಮವಾಗಿ ನೂರಾರು ಶಿಶುಗಳು ಜನ್ಮ ತಾಳುವುದೂ ಅಲ್ಲಿಯೇ. ಹಾಗೆಯೇ ಭಾವಪರವಶಳಾಗಿ ಕುಳಿತಿದ್ದಾಗ ಚಹ-ಫಳಾರ ಬಂದು, ನನ್ನನ್ನು ಎಚ್ಚರಿಸಿತು. ಅಣ್ಣನವರಿಗೆ 'ಆಕಾಶವಾಣಿ' ಕರೆಯುತ್ತಿತ್ತು. ನಮಗೆ ರೈಲಿಗೆ ಹೋಗಲು ವೇಳೆಯಾಗುತ್ತಿತ್ತು. ಬೀಳ್ಕೊಂಡು ಹೊರಟುಬಿಟ್ಟೆವು.

ಹೆಂಗಳೆಯರ ವಿಷಯಕ್ಕೆ ಎನ್ಕೆಯವರ ಸ್ವಭಾವವೇ ಹಾಗೆ. ತಮ್ಮ ಪರಿವಾರದಲ್ಲೇ ಅವರು, ಹೆಣ್ಣುಮಕ್ಕಳ ಕಷ್ಟಗಳನ್ನು ಕಣ್ಣಾರೆ ಕಂಡಿದ್ದಾರೆ; ಕಂಡು ನೊಂದಿದ್ದಾರೆ. ಅದರಿಂದಾಗಿ ಅವರ ಹೆಂಗರಳು ಮಿಡಿಯುತ್ತದೆ. ಒಮ್ಮೆ ಅವರಿಗಾಗಿ ಮರುಗಿದವರು, ನೆಚ್ಚಿನ ಸೋದರಿಯರಾಗಿ ಬಿಡುತ್ತಾರೆ! ಒಮ್ಮೆ ಕರೆದು ಉಣಬಡಿಸಿದವರು ಸಾಕ್ಷಾತ್ ಅನ್ನಪೂರ್ಣೆಯರೇ! 'ಹುಲ್ಲು ತರುವರ ಮನೆಗೆ, ಹುವ್ವ ತರುವ'ವನ ಭಕ್ತನ ಭಕ್ತರಲ್ಲವೇ ಅವರು!

# ರಸ ಋಷಿ

## ಪುಷ್ಪಾ ಜೋಶಿ

ಎನ್ಕೆ ಎಂದೊಡನೆ 'ಏನಕೇ'ನೋ ಹೃದಯ ತುಂಬಿ ಬರುತ್ತಿದೆ. ಭಾವನೆಗಳ ರಸಪಾಕದ ಹೃದಯ 'ಕಾಕಾ' ಎಂದು ಕುಣಿಯುತ್ತದೆ. ಪಿತೃಸ್ಥಾನದಲ್ಲಿಟ್ಟು ಮನದಣಿಯೆ ಪೂಜಿಸಬೇಕೆನ್ನುವಾಶೆ ಆದಾಗಲೇ ಅವರಿಗೆ ಒಂದು ಪುಷ್ಪ ಸಲ್ಲಿಸುವ ಈ ಅವಕಾಶ. ಭಾವಾವೇಶದಲ್ಲಿ ಒಮ್ಮೊಮ್ಮೆ ಆನಂದಬಾಷ್ಪಗಳ ಅಭಿಷೇಕ.

ನನ್ನ ಪೂಜ್ಯ ತಂದೆಯ ಆಪ್ತಮಿತ್ರರಾದ ಎನ್ಕೆ ಅವರು ನನ್ನ ಜೀವನದಲ್ಲಿ ಎನ್ಕೆ ಕಾಕಾ ಆಗಿ ಪರಿಚಯ ಆದ ದಿನವೇ ಒಂದು ಸುಯೋಗ. ಪ್ರೀತಿಯೇ ಮೂರ್ತಿವೆತ್ತಂತಿರುವ ಈ ವ್ಯಕ್ತಿತ್ವ ನನ್ನ ಮನದುಂಬ ತುಂಬಿ ಪಿತೃಸ್ಥಾನದಲ್ಲಿ ರಾರಾಜಿಸುವದು. ಅವರೂ ನನ್ನನ್ನು ಮಗಳೆಂದು ವಾತ್ಸಲ್ಯದಿಂದ ಕಂಡುದು, ಒಂದು ಕ್ಷಣದಲ್ಲಿಯೇನೋ ಎಂಬಂತೆ ನನಗರಿವಾಗದಂತೆ ನಡೆದುಹೋಗಿದೆ. ಇದಕ್ಕೆ ಅವರಲ್ಲಿರುವ ಮಮತೆ ಹಾಗೂ ಪ್ರೇಮಪೂರ್ಣ ಸಹೃದಯತೆ, ಇನ್ನೊಂದು ಜೀವವನ್ನು, ಆತ್ಮವನ್ನು ಸಂತೋಷಗೊಳಿಸುವ ಮಹಾನ್ ಗುಣವೇ ಕಾರಣ.

ಇವರ ಇನ್ನೊಂದು, ಎಲ್ಲರಿಗೂ ತಿಳಿದ ಹೆಸರು 'ನಾನಿಕಾಕಾ'. ನಾನೇ ನೀನಾಗಿ ಕಾಣುವ ಇವರ ಹೃದಯವಂತಿಕೆಯನ್ನು ಅನೇಕ ಸಲ ಕಂಡಿದ್ದೇನೆ. ಯಾವದೇ ಜೀವಿಗೆ ನೋವಾದಾಗ ತಾನೇ ಆ ಜೀವಿಯಾಗಿ ನೋವನ್ನು ಅನುಭವಿಸುತ್ತಾರೆ. ಅದೇ ತನ್ನ ಸಂಪರ್ಕದಲ್ಲಿರುವ ಜೀವಿಗೆ ಸಂತೋಷವಾದಾಗ ತಾನೇ ಆ ಜೀವಿಯಂತೆ ಸಂತೋಷಿಸುವ ರೀತಿ ನೋಡಿದಾಗ ಸಾಧುಪುರುಷರ ಅನೇಕ ಸದ್ಗುಣಗಳಲ್ಲಿಯ ಮಧುರ ದರ್ಶನ ಇಲ್ಲಿ ಸಿಗುತ್ತದೆ.

ನನ್ನ ಲೌಕಿಕ ಜೀವನದಲ್ಲಿ ನಾನಿಕಾಕಾ ಮಾಡಿದ ಉಪಕಾರ ಎಂದೂ ಮರೆಯಲಾಗದು. ಡಾಕ್ಟರಳಾದ ನನ್ನ ಜೀವನದ ಜೊತೆಗಾರ, ಸಹೃದಯೀ ಸಂಗಾತಿ ಡಾ. ಜೋಶಿಯವರನ್ನು ಪರಿಚಯಿಸಿದ, ನಮ್ಮ ಮಧುರ ಜೀವನದ ಯಶಸ್ಸಿಗೆ ಕಾರಣೀಭೂತರಾದವರು ಎನ್ಕೆ. ಅದಕ್ಕಾಗಿ ಅವರಿಗೆ ನನ್ನ ಹಾರ್ದಿಕ ನಮನ.

ಲೌಕಿಕತೆಯಲ್ಲಿಯೇ ಸಂಬಂಧ ಸೀಮಿತವಾಗಿರದೆ ಆಧ್ಯಾತ್ಮಿಕ ರಂಗದಲ್ಲಿ ನಾನಿಕಾಕಾ ಭೆಟ್ಟಿ ಆದಾಗೊಮ್ಮೆ ಒಂದಿಲ್ಲೊಂದು ಆಧ್ಯಾತ್ಮಿಕ ಚರ್ಚೆ ನಡೆಯಲೇಬೇಕು. ಶ್ರೀ

ಅರವಿಂದರ, ಮಾತಾರವರ ನುಡಿಗಳನ್ನು ಪುನರುಚ್ಚರಿಸುವಾಗ, ಧ್ಯಾನಯೋಗವನ್ನು ಕುರಿತು ಮಾತನಾಡುವಾಗ, ಈ ಲೌಕಿಕ ಕಾಕಾ ಪೂಜ್ಯ ಋಷಿಯಂತೆ ಕಾಣುತ್ತಾರೆ. ಒಂದೊಂದು ದಿನ ಮೌನದಲ್ಲಿ ಕಳೆಯುವ ಈ ಹವ್ಯಾಸಿ ಋಷಿವರ್ಯ, ಅನೇಹಕ ಎಸ್ಯ ಚಟಾಕಿಗಳನ್ನು ಹಾರಿಸುವಾಗ 'ರಸಋಷಿ' ಎನ್ನುವ ಅನುಭವ. ಈ ರಸಿಕ, ಸಹೃದಯ ತನ್ನ ನೋವನ್ನು ನುಂಗಿ ಇನ್ನೊಬ್ಬರಿಗಾಗಿ ಹಾಸ್ಯದ ಹೊನಲನ್ನೇ ಹರಿಸುತ್ತಿರುವದನ್ನು ನೋಡಿದಾಗ ತನ್ನ ಹಾಸ್ಯದಿಂದ ಇನ್ನೊಂದು ಜೀವ ನಕ್ಕು ನಲಿಯುವದನ್ನು ಕಂಡು, ತಾನೂ ನಲಿಯುವಾಗ, ತನ್ನ ಲೌಕಿಕ ಜೀವನದಲ್ಲಾದ ನೋವನ್ನು ಮರೆತು ನಿತ್ಯಾನಂದದ ಪ್ರವಾಹದಲ್ಲಿ ತೇಲಿ ಹೋಗಿ ಆ ಪರಮಾತ್ಮನ ಸನ್ನಿಧಾನ ಅನುಭವಿಸುವ ಈ ಜೀವಿ ಅಸದೃಶರು. ಅದಕ್ಕೆ ಅವರನ್ನು ರಸಋಷಿ ಎಂದೇ ಸಂಬೋಧಿಸುವ ಆಶೆ ನನ್ನದು.

# ಎನ್ಕೆ ಹಾಸ್ಯದ ರುಚಿ

## ಅನಂತ ಕುಲಕರ್ಣಿ

ನಾನು ಜೀವನಚರಿತ್ರೆ ಮತ್ತು ಲಘುಬಂಧಪ್ರಗಳನ್ನು ಹೆಚ್ಚಾಗಿ ಓದುವೆನು. ಅವರಲ್ಲಿಯೂ ಲಘುಪ್ರಬಂಧಗಳು ನನಗೆ ಬಹಳ ಮೆಚ್ಚುಗೆ. ಬೇಸರ ಬಂದಾಗ ನಾನು ಅವುಗಳನ್ನು ಓದುವೆನು. ಮನಸ್ಸಿಗೆ ದಾರಿ ತೋರದಾಗಲೂ ಓದುತ್ತ ಮೈಮರೆಯುತ್ತೇನೆ. ಕನ್ನಡದಲ್ಲಿ ತಿಳಿ ಹಾಸ್ಯದಿಂದ ಕೂಡಿದ ಲಘು ಪ್ರಬಂಧಗಳನ್ನು ಬರೆದವರಲ್ಲಿ ಎ. ಎನ್. ಮೂರ್ತಿರಾಯರು, ಎನ್ಕೆಯವರು, ಗೊರೂರ ಅವರು ಮುಖ್ಯರಾದವರು. ಎನ್ಕೆಯವರ ನಿಬಂಧಗಳಲ್ಲಿ ತಿಳಿಹಾಸ್ಯವು ಅಲ್ಲಲ್ಲಿ ಗೋಚರವಾಗುವದು. ಅವರ ನಿಬಂಧಗಳನ್ನು ಓದಿ ನಾನು ಕೆಲವು ಲಘು ನಿಬಂಧಗಳನ್ನು ಬರೆದೆನು. ಎನ್ಕೆಯವರು ಮುಂಜಾನೆ-ಗಾಳಿ!ಸವಾರಿ ಹೋಗುವಾಗ ಆಗಾಗ್ಗೆ ನಮ್ಮ ಮನೆಗೆ ಬರುತ್ತಿದ್ದರು. ಒಮ್ಮೆ ನಾನು ಬರೆದ ನಿಬಂಧಗಳನ್ನು ಅವರಿಗೆ ತೋರಿಸಿದೆ. ಅವರು ಅವುಗಳನ್ನು ಓದಲು ತಮ್ಮ ಮನೆಗೆ ತೆಗೆದುಕೊಂಡು ಹೋದರು. ಅವುಗಳನ್ನು ಓದಿ 'ಇವುಗಳನ್ನು ನೀವು ಯಾಕೆ ಪ್ರಕಟಿಸಬಾರದು?' ಎಂದು ಕೇಳಿದರು. 'ಅದಕ್ಕೆ ನೀವು ಮುನ್ನುಡಿ ಬರೆದು ಕೊಡುವದಾದರೆ ನಾನು ಪ್ರಕಟಿಸುವೆನು' ಎಂದೆನು. ಅವರು ಅಲ್ಪಾವಧಿಯಲ್ಲಿಯೇ ಸುಂದರವಾದ ಮುನ್ನುಡಿಯನ್ನು ಬರೆದುಕೊಟ್ಟರು. ಹೀಗಾಗಿ ನನ್ನ ಮೊದಲನೆಯ ನಿಬಂಧ ಸಂಗ್ರಹವು 'ದೇವಸೃಷ್ಟಿ' ಎಂಬ ಹೆಸರಿನಿಂದ ಪ್ರಕಟವಾಯಿತು. ಆಮೇಲೆ ಮತ್ತೆ ಎರಡು ಸಂಗ್ರಹಗಳು ಪ್ರಕಟವಾಗಿರುವವು. ಇದೆಲ್ಲಕ್ಕೂ ಅವರ ಪ್ರೇರಣೆಯೇ ಕಾರಣ. ಈ ನಿಮಿತ್ತದಿಂದ ಪ್ರಾರಂಭವಾದ ಅವರ ಸ್ನೇಹವು ದಿನ ದಿನಕ್ಕೆ ಬೆಳೆಯುತ್ತಲೇ ಸಾಗಿರುವದು. ನನ್ನಂತೆ ಅವರು ಎಷ್ಟು ಜನರಿಗೆ ಸಾಹಿತ್ಯ ನಿರ್ಮಿಸಲು ಪ್ರೋತ್ಸಾಹಿಸಿರುವರೊ ಯಾರಿಗೆ ಗೊತ್ತು! ನನಗಂತೂ ಅವರು ಯಾವಾಗಲೂ ಮೆಚ್ಚಿಗೆಯ ನುಡಿಗಳನ್ನು ಆಡುತ್ತ ಬೆನ್ನು ಚಪ್ಪರಿಸುತ್ತಲೇ ಇದ್ದಾರೆ. ಅವರು ಭೆಟ್ಟಿಯಾದಾಗಲೆಲ್ಲ 'ಮತ್ತೆ ಯಾವ ಪುಸ್ತಕ ಬರೆಯುತ್ತಿರುವಿರಿ? ಯಾವ ಕಾರ್ಯ ಕೈಕೊಂಡಿರುವಿರಿ?' ಎಂದು ವಿಚಾರಿಸುತ್ತಲೇ ಇರುವರು. ನಾನು ಆಗಾಗ್ಗೆ ಅವರ ಮನೆಗೆ ಹೋಗುವೆನು. ಅವರು ಓದುವದರಲ್ಲಿಯಾಗಲಿ ಬರೆಯುವದರಲ್ಲಾಗಲಿ ತೊಡಗಿರುವರು. ಅವರ ಅಧ್ಯಯನವು ಅವ್ಯಾಹತವಾಗಿ ನಡೆದಿರುವದು.

ರಾಮಾಯಣ, ಗೀತೆ, ಮಹಾಭಾರತ ಅದರಲ್ಲಿಯೂ ಕುಮಾರವ್ಯಾಸ ಭಾರತ ಅವರ ಮೆಚ್ಚಿಗೆಯ ಗ್ರಂಥಗಳು. ಅವರು ಅರವಿಂದರ ಗ್ರಂಥಗಳನ್ನು ಅಭ್ಯಾಸ ಮಾಡುತ್ತಿರುವರು.

ಮುಗುಳುನಗೆಯು ಎನ್ಕೆಯವರ ಸಂಗಾತಿ. ಎಂಥ ಕಷ್ಟ ಕಾಲದಲ್ಲಿಯೂ ಅವರ ಹಾಸ್ಯ ಪ್ರವೃತ್ತಿಯು ಅವರನ್ನು ಪಾರು ಮಾಡುವದು. ಅವರು ಸಾಹಿತ್ಯ ಪರಿಷತ್ತಿನ ಕೆಲಸಕ್ಕಾಗಿ ಬೆಂಗಳೂರಿಗೆ ಹೋಗಿದ್ದರು. ಆಗ ಸಾಹಿತ್ಯ ಪರಿಷತ್ತಿನವರು ಕೊಟ್ಟ ನಗದು ಸಂಭಾವನೆಯು ಬಸ್ಸಿನಲ್ಲಿ ಮಾಯವಾಯಿತು. ಆ ವಿಷಯವನ್ನು ಅವರು ನಗುತ್ತಲೇ ನನಗೆ ಹೇಳಿದರು. ಈ ಅವಿರತವಾದ ಹಾಸ್ಯವು ಅವರ ಒಡನಾಡಿಯಾಗಿರುವದರಿಂದಲೇ ಅವರು ಕಷ್ಟದ ದಿನಗಳನ್ನು ಹಾಯಾಗಿ ಕಳೆದಿರುವರು.

ಈಗ ಎನ್ಕೆಯವರು ನನಗೆ ಇನ್ನೂ ಹತ್ತಿರದವರಾಗಿರುವರು. ಅವರು ವಾಸಿಸುವ ಕಲ್ಯಾಣನಗರದಲ್ಲಿಯೇ ನಾನು ಮನೆ ಕಟ್ಟುತ್ತಿರುವೆನು. ಇದರಿಂದ ಅವರ ಭೆಟ್ಟಿಯು ಮೇಲಿಂದ ಮೇಲೆ ಆಗುವದು. ಸಾಹಿತ್ಯದ ವಿಷಯದಲ್ಲಿ ಏನು ಸಲಹೆ ಬೇಕಾದರೂ ಅವರನ್ನು ಕೇಳುವೆನು. ಅವರು ನನ್ನ ಹಲವಾರು ಸಂಶಯಗಳನ್ನು ನಿವಾರಿಸಿರುವರು.

ಅನ್ಯಾಯವನ್ನು ಕಂಡು ಎನ್ಕೆಯವರು ಸುಮ್ಮನೆ ಕೂಡ್ರುವವರಲ್ಲ. ಸರಕಾರದ ಸೇವೆಯಲ್ಲಿರುವ ಅನೇಕ ತರಬೇತಿ ಹೊಂದಿದ ಪದವೀಧರರನ್ನು ಬಿಟ್ಟು ಹೊಸದಾಗಿ ಪದವೀಧರರಾದವರನ್ನು ಮುಖ್ಯಾಧ್ಯಾಪಕರನ್ನಾಗಿ ನೇಮಿಸುವ ಧೋರಣೆಯು ಸರಿಯಾದುದಲ್ಲವೆಂದು ನಾನು ನುಡಿದಾಗ ಎನ್ಕೆಯವರು ತಮ್ಮ ಪ್ರತಿಭಟನೆಯನ್ನು ಪತ್ರಿಕೆಯಲ್ಲಿ ಪ್ರಕಟಿಸಿದರು. ಅವರು ಸೌಮ್ಯ ಸ್ವಭಾವದವರಾಗಿದ್ದರಿಂದ ಪ್ರತ್ಯಕ್ಷ ಹೋರಾಟವನ್ನು ಕೈಕೊಳ್ಳಲಿಲ್ಲ. ಅವರು ವಿರೋಧವನ್ನು ವ್ಯಕ್ತಮಾಡುವಾಗಲೂ ಸೌಮ್ಯವಾಗಿಯೇ ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡುವರು. ಅವರು ಎಂದಿಗೂ ಯಾರಿಗೂ ಕಠೋರವಾಗಿ ಮಾತನಾಡಿರುವದನ್ನು ನಾನು ಅರಿಯೆನು. ಎರಡನೆಯವರ ಅಭಿಪ್ರಾಯವು ತಪ್ಪಾಗಿದ್ದರೂ ಅವರು ಅದನ್ನು ಹೇಳಲಾರರು. ಸೂಚ್ಯವಾಗಿ ತಮ್ಮ ಅಭಿಪ್ರಾಯವನ್ನು ಸೂಚಿಸುವರು. ಭಿನ್ನಾಭಿಪ್ರಾಯವನ್ನು ಹೇಳುವಾಗಲೂ ಅವರು ಹಾಸ್ಯಮಯವಾಗಿ ಅದನ್ನು ತೇಲಿಸಿಕೊಂಡು ಹೋಗುವರು.

ಅವರು ಆಗಾಗ್ಗೆ ತಮ್ಮ ಪತ್ನಿಯ ಅಗಲಿಕೆಯ ಬಗ್ಗೆ ವಿಷಾದವನ್ನು ವ್ಯಕ್ತಪಡಿಸುವದುಂಟು. ನನಗೆ ಅಂತಃಕರಣ ಮಾಡುವದಕ್ಕೆ ಹೆಣ್ಣುಮಗಳು ಇಲ್ಲ-ಎಂದು ವಿಷಾದಿಸುವದುಂಟು. ಆದರೂ ಅವರು ಹಾಸ್ಯದ ಚಟಾಕಿಯನ್ನು ಹಾರಿಸಿ ಆ ಮಾತನ್ನು ಮರೆಯುವರು. ಹಾಸ್ಯವೇ ಅವರ ಜೀವನವನ್ನು ಹಸನಾಗಿಸಿರುವದು; ಸಹ್ಯವನ್ನಾಗಿ ಮಾಡಿರುವದು. ಅವರು ದುಃಖದ ಪ್ರಸಂಗಗಳನ್ನು ಕೂಡ ತಮ್ಮ ಹಾಸ್ಯದಿಂದ ಸಹ್ಯವಾಗಿ ಮಾಡುವರು. ನನಗೆ ಹಾಸ್ಯದ ಪರಿಚಯವಿರದಿದ್ದರೆ ನಾನು ಎಂದೋ

ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದೆ ಎಂದು ಗಾಂಧೀಜಿಯವರು ನುಡಿದಿರುವರು. ಎನ್ಕೆಯವರಿಗೆ ಈ ಮಾತು ಪೂರ್ಣವಾಗಿ ಅನ್ವಯಿಸುವದು. ಅವರ ಹಾಸ್ಯವು ಚುಚ್ಚು ಹಾಸ್ಯವಲ್ಲ. ಅವರ ಹಾಸ್ಯವು ಎರಡನೆಯವರ ಮನಸ್ಸನ್ನು ನೋಯಿಸುವದಿಲ್ಲ. ತಿಳಿಹಾಸ್ಯವೆಂದರೆ ಎನ್ಕೆ. ಎನ್ಕೆಯೆಂದರೆ ತಿಳಿಹಾಸ್ಯ. ಜೀವನದ ಕಷ್ಟ ಸುಖಗಳಲ್ಲಿ ಅವರಿಗೆ ಈ ಹಾಸ್ಯವೇ ಕಾಮಧೇನುವಾಗಿದೆ. 'Laugh and grow fat' ಎನ್ನುವ ಮಾತು ಎಷ್ಟು ಸತ್ಯವಾದದ್ದು! ಇದೇ ಅವರನ್ನು ಪಾರುಗಾಣಿಸಿರುವದು. ಅವರ ಸಾಹಿತ್ಯದಲ್ಲಿ ತಿಳಿಹಾಸ್ಯವಿರುವಂತೆ ಅವರ ಮಾತು ಮಾತಿನಲ್ಲಿಯೂ ಹಾಸ್ಯದ ಚಟಾಕಿಗಳನ್ನು ಕಾಣಬಹುದು. ನಾನು ಅವುಗಳನ್ನು ಕೇಳಿ ಆನಂದಪಟ್ಟಿರುವೆನು. ಮಾವಿನ ಹಣ್ಣಿನ ರುಚಿಯನ್ನು ಶಬ್ದಗಳಲ್ಲಿ ವರ್ಣಿಸಲು ಸಾಧ್ಯವಾದೀತೇ? ಅವರ ಹಾಸ್ಯವೂ ಅನುಭವಿಸಿಯೇ ಅರಿಯಬೇಕಾದದ್ದು. ಅವರ ಹಾಸ್ಯದ ರುಚಿಯನ್ನು ಅನುಭವಿಸುವ ಸುಸಂಧಿಯು ನನಗೆ ದೊರೆತಿರುವದು. ಈ ದೃಷ್ಟಿಯಿಂದ ನಾನು ಧನ್ಯ.

# ಕವಿ-ಗಮಕಿ ಅನುಬಂಧ

## ಅನುರಾಧಾ ಧಾರೇಶ್ವರ

ಎನ್ಕೆ ಎಂದು ಕರೆದರೆ ನನಗೆ ಅವರು ತುಂಬಾ ದೂರದ ವ್ಯಕ್ತಿ ಏನೊ ಅನಿಸುವದು. ಅವರಿಗೆ ನಾನು ಕಾಕಾ ಎಂದೇ ಸಂಬೋಧಿಸುವೆ.

ಕಾಕಾನ ಪರಿಚಯುವಾದದ್ದು ನನಗೆ ಧಾರವಾಡಕ್ಕೆ ಬಂದ ಹೊಸತರಲ್ಲಿ. ಆಕಾಶವಾಣಿಯ ಗಿಳಿವಿಂಡು ಕಾರ್ಯಕ್ರಮದಲ್ಲಿ ನನಗೆ ಹಾಡುವ ಆಶೆ ಬಹಳ ಇತ್ತು. ಅದಕ್ಕೆ ಮಾರ್ಗದರ್ಶಿಗಳಾಗಿ ನನ್ನನ್ನು ಆಕಾಶವಾಣಿಯ ಕಲಾವಿದೆಯನ್ನಾಗಿ ಮಾಡಿದ ವ್ಯಕ್ತಿ ಕಾಕಾ.

ಆಕಾಶವಾಣಿಯಲ್ಲಿ ನಾನು ಕೆಲಸಕ್ಕೆ ಸೇರಿದ ಹೊಸತರಲ್ಲಿ ಪ್ರತಿದಿನ ಪ್ರಸಾರವಾಗುವ ವಿಚಾರದೀಪಿಕೆಯಲ್ಲಿ ನನ್ನಿಂದ ಮೊದಲಿಗೆ ಗೀತಾ ಶ್ಲೋಕ ಇಲ್ಲವೆ ಕುಮಾರವ್ಯಾಸ ಭಾರತ ಇನ್ನೂ ಅನೇಕ ಕಾವ್ಯ ಚುಟುಕುಗಳನ್ನು ಹಾಡಿಸುತ್ತಿದ್ದರು. ತಾಜಾ ಸುದ್ದಿಗಳ ಮೇಲೆ ಅನೇಕ ಕಾರ್ಯಕ್ರಮಗಳನ್ನು ಕೂಡಲೇ ಸಿದ್ಧಪಡಿಸಿ ಅದರಲ್ಲಿ ನನಗೆ ಹಾಡುವ ಅವಕಾಶ ಕಲ್ಪಿಸುತ್ತಿದ್ದರು. ಅದರಲ್ಲಿ ನನಗೆ ಅತಿ ಮೆಚ್ಚಿಗೆಯಾದದ್ದು ಅಂದರೆ "ತಿಂಗಳ ಲೋಕದ ಅಂಗಳಕೇರಿ" ಎಂಬ ಕಾರ್ಯಕ್ರಮ. ಇದು ಚಂದ್ರಲೋಕಕ್ಕೆ ಆರ್ಮಸ್ಟ್ರಾಂಗ್ ಮೊದಲಿಗೆ ಕಾಲಿಟ್ಟಾಗ ಬರೆದ ರೂಪಕ. ಅಲ್ಲದೆ "ಕಿತ್ತೂರ ಚೆನ್ನಮ್ಮ" ಇತ್ಯಾದಿ ಇನ್ನು ಅನೇಕ ಗೀತ ರೂಪಕಗಳು.

೧೯೬೯ರಲ್ಲಿ ಗಾಂಧೀಜಿಯವರ ಜನ್ಮ ಶತಾಬ್ದಿ ವರುಷ ಆಚರಿಸಲಾಯಿತು. ಆಗ ಕಾಕಾ ರಚಿಸಿದ ೭೪ ಗಾಂಧೀ ಗೀತೆಗಳು "ಮುಕ್ತಳಾದಳೊ ಭಾರತಮಾತಾ ಇದು ಗಾಂಧೀಗೀತಾ" ಎಂದು ಪ್ರಾರಂಭವಾಗುವ ಸುಮಾರು ೭೦ ಗೀತೆಗಳನ್ನು ಶ್ರೀ ಕೇಶವ ಗುರಂ ಅವರ ಜೊತೆಗೆ ಹಾಡಿದೆ ಎನ್ನುವ ಹೆಮ್ಮೆ ನನಗೆ, ಜೀವನದುದ್ದಕ್ಕೂ ಗರ್ವಪಡುವ ಸಂಗತಿ. ಪ್ರತಿ ಮನೆ ಮನೆಯಲ್ಲಿ, ಮನಮನದಲ್ಲಿ ದೊಡ್ಡವರು, ಚಿಕ್ಕವರು ಎಲ್ಲರ ಹೃದಯದಲ್ಲಿ ಗಾಂಧೀಜಿ ಜೀವನಚರಿತ್ರೆ, ಗಾಂಧೀಗೀತೆಯ ಮೂಲಕ ಚಿತ್ರಿಸಿದ ವ್ಯಕ್ತಿ ನಮ್ಮ ಕಾಕಾ. ಪ್ರತಿಯೊಂದು ಗೀತೆ ಹಾಡುವಾಗ ನಮಗೆ ಆಗಿನ ಸಂಪೂರ್ಣ ಚಿತ್ರಣ ಕಣ್ಣಿಗೆ ಬೀಳುವ ತೆರದಲ್ಲಿ ಸರಳ ಸುಂದರ ಶಬ್ದಗಳಿಂದ ಒಡಗೂಡಿದೆ.

ಅವರಲ್ಲೂ ೨೦ನೇ ಗೀತೆ. ೧೯೪೮ನೆಯ ಜನೇವರಿಯ ಮುವತ್ತನೆಯ ದಿನದ ಸಂದರ್ಭದ ಈ ಗೀತೆ. ಅದರಲ್ಲೂ ಈ ನುಡಿಗಳು:

"ಬಿರ್ಲಾ ಭವನದ ಉದ್ಯಾನದಲಿ
ಭಕ್ತ ವೃಂದವದು ನೆರೆದಿತ್ತು
ರಘುಪತಿ ರಾಘವ ರಾಜಾರಾಂ ಎಂಬ
ಭಜನೆಯು ಗಾಂಧಿಯ ಕರೆದಿತ್ತು.
ನೆರವಿಯ ಮಧ್ಯದಿ ಹರಿಯುತ ಬಂದನು
ಖಾಕಿ ಯುವಕ ಕೈ ಜೋಡಿಸುತ
ಜಪಮಣಿ ಧರಿಸಿದ ಮನುವನು ನೂಕುತ
ನಿಂತನು ಪಿಸ್ತೂಲ್ ಗುರಿಯಿಡುತ
ಹರೇ ರಾಂ ಹರೇ ಹರೇ ರಾಂ ಹರೇ
ಮಿಂಚಿನ ವೇಗದಿ ಮೂರು ಗೋಲಿಗಳು
ಭೇದಿಸಿದವು ಗಾಂಧಿಯ ಎದೆಯ
...........................
ಹೇ ರಾಂ ಎನ್ನುವ ಕೊನೆಯ ಉಸಿರಿನಲಿ
ಪುಣ್ಯ ಮೂರ್ತಿ ಕಣ್ಮುಚ್ಚಿತ್ತು.

ಇದನ್ನು ಹಾಡುವಾಗ ನನಗೆ ನಿಜಕ್ಕೂ ಅಂತರಾಳದಿಂದ ಕಂಬನಿ ತುಂಬಿದ ಗದ್ಗದ ಸ್ವರ. ಮುಂದೆ ಹಾಡಲು ಬಾರದಂತಾಗಿತ್ತು. ಈಗಲೂ ಅವರಲ್ಲಿಯ ಕೆಲವು ಗೀತೆಗಳನ್ನು ಮೆಲಕು ಹಾಕುವಾಗ ರೋಮಾಂಚನವಾಗುವದು. ಇದು ನನ್ನ ಆಕಾಶ ವಾಣಿಯ ಅನುಭವ.

ಇನ್ನು ಕಾಕಾ ಅಂದರೆ ನಾನು ಬಯಸುವ ಗೀತೆಗಳನ್ನು ಹರ್ಷ ಚಿತ್ತದಿಂದ ಕೂಡಲೇ ಸಿದ್ಧಪಡಿಸುವರು. ದೊಡ್ಡ ಲೇಖಕರು ಹೇಳಿದ ಹಾಗೆ ಅವರು ನಿಜವಾಗಿ ನನಗಂತೂ ಗೀತೆಗಳನ್ನು ಸಿದ್ಧಪಡಿಸಿಕೊಡುವ "ಕಂಪ್ಯೂಟರೇ" ಆಗಿದ್ದಾರೆ ಎಂದರೆ ಅತಿಶಯೋಕ್ತಿ ಅನಿಸಲಾರದು. ಕಡಿಮೆ ವೇಳೆಯಲ್ಲಿ ರಚಿತವಾದ ಕವನಗಳು ಬಹಳ ಪ್ರಸಿದ್ಧವಾಗಿವೆ. ಅದರಲ್ಲೂ ಶ್ರೋತೃಗಳಿಂದ ಮೆಚ್ಚುಗೆ ಪಡೆದ ಕವನಗಳು- "ನಾವು ನಾಪಾಗುವ", "ಅತ್ತೆವರ ಅತ್ತೆವರ ನಿಮಕಾಲ ಮುಗಿಯಿತರಿ ಅತ್ತೆವರ", "ಪಹಿಲಾ ಪಹಿಲಾ ಪಗಾರ ಆದರು", "ಭಲೆ ಸಭಿಕರೆ" "ರಾಘವೇಂದ್ರ ಗುರುವೆ" ಇನ್ನೂ ಅನೇಕಾನೇಕ ಹಾಡುಗಳು.

ಯಾವುದಾದರೂ ಉದ್ಘಾಟನಾ ಸಮಾರಂಭದಲ್ಲಿ ಹಾಡುವ ಗೀತೆಯ ಕೊರತೆ ನನಗೆ ಎಂದೂ ಉಂಟಾಗಿಲ್ಲ. ಕಾರಣ ಕಾಕಾ ಅವರಿಗೆ ಸಮಾರಂಭದ ರೂಪರೇಷೆ ಹೇಳಿ ಬಿಟ್ಟರೆ ಸಾಕು ಕೂಡಲೇ ಗೀತೆ ಸಿದ್ಧ. ಉದಾ—ಜೈನರ ಧರ್ಮಚಕ್ರ ಆಗಮನ,

ಮಲಪ್ರಭಾ ಕಾಲುವೆ ಉದ್ಘಾಟನೆ, ಕರ್ನಾಟಕ ರಾಜ್ಯ ಕಾರ್ಮಿಕರ ಸಂಘ, ಹೀಗೆ ಇನ್ನೂ ಅನೇಕ ಗೀತೆಗಳು ಹಾಗೂ ಸಾಮಾಜಿಕ ಲೋಪದೋಷಗಳನ್ನು ಎತ್ತಿ ತೋರಿಸುವ ವ್ಯಂಗ್ಯ ಗೀತೆಗಳು, ಬಹು ಮೆಚ್ಚಿಗೆ ಪಡೆದಿವೆ.

ಕಾಕಾ ನಮಗೆ ಗೀತಕಾರರಷ್ಟೇ ಅಲ್ಲ, ಜೀವನದಲ್ಲಿ ಎಂಥಾ ಸಮಸ್ಯೆ ಬಂದರೂ ಬಗೆಹರಿಸುವ ದೇವರಾಗಿದ್ದಾರೆ. ನಾನು ಹಾಗೂ ಸೋದರಿ ಪ್ರಭಾ ಸಿರೂರ ವಾರ ದಲ್ಲಿ ೨ ದಿನವಾದರೂ ಕಾಕಾನ ಮನೆಗೆ ಭೆಟ್ಟಿ ಕೊಡುತ್ತೇವೆ. ನಮ್ಮ ಮನಸ್ಸಿನ ಜಡತೆ, ಕಾಕಾ ಅವರ ಹರಟೆ, ನಗೆಹೊನಲಿನ ಮೋಜಿನ ಸಂಗತಿಯಿಂದ ತಿಳಿ ಯಾಗುವದು. ಕಾಕಾ ಅವರು ತಮ್ಮ ಮನೆಯಲ್ಲಿ ತಲೆದಿಂಬನ್ನು ಬೆನ್ನಿಗೆ ಆನಿಸಿ ಚಪ್ಪಾ ಸರಿಪಡಿಸಿಕೊಂಡು ಮಂಚದ ಮೇಲೆ ಕುಳಿತುಕೊಳ್ಳುವರು. ನಾವು ಅವರ ಎದುರುಗಡೆಗೆ ಕುತೂಹಲ ಭರಿತ ದೃಷ್ಟಿಯಿಂದ ಅವರ ಹರಟೆ ಕೇಳುವೆವು. ಊಟದಲ್ಲಿ ಎಷ್ಟೇ ಪದಾರ್ಥಗಳಿದ್ದರೂ "ಉಪ್ಪಿನಕಾಯಿ" ತಿಂದರೆ ಮಾತ್ರ ರುಚಿ ಹೆಚ್ಚು. ಅವರ ಹರಟೆ ಮಾತು, ತನ್ಮಧ್ಯೆ ನಮಗೆ ಹೊಟ್ಟೆ ತುಂಬಿಸಿ, ಚಹ ವಿರಾಮ ಹೇಳುವ ಅವರ ಸೊಸೆ ಸೌ।। ವಿಮಲಾದೇವಿ ಅವರು ಮಾಡುವ ರುಚಿಯಾದ ಅವಲಕ್ಕಿ, ಉಪ್ಪಿಟ್ಟು, ಚಹ ಅದೂ ಸಹ ಅದಕ್ಕೆ ಹಿಮ್ಮೇಳವಿದ್ದಂತೆ.

# ಎನ್ಕೆಯವರ ಹಕ್ಕಿಗೂಡಿನಲ್ಲಿ

**ಭೀಮ್ಸೇನ ಭಾರದ್ವಾಜ**

ನನ್ನ ಪರಿಚಯ ಎನ್ಕೆಯವರಿಗಾಗುವ ಒಂದೆರಡು ವರ್ಷ ಮೊದಲೇ, ಅವರ ಪರಿಚಯ ನನಗಾಗಿತ್ತು. ಇದು ಎನ್ಕೆಯವರ ಮುಂಗಾಲ್‌ಪುಟಿಗೆ ! ನಿಮಗೆಲ್ಲರಿಗಾಗಿ ಮುಂಗಾಲ್‌ಪುಟಿಗೆ ಒಂದು ಪುಸ್ತಕವಾದರೆ, ನನಗೆ ಅದೊಂದು ವ್ಹಿಡಿಓ ಕ್ಯಾಸೆಟ್. ನನ್ನ ರಮಣೀಯವಾದ ಬಾಲ್ಯದ ಚಿತ್ರ ಅದರಲ್ಲಿದೆ. ರಮಣೀಯವೆನಿಸುವಂತಿವೆ ನನಗೆ ಬಾಲ್ಯದ ದಿನಗಳು.

ಹುಬ್ಬಳ್ಳಿಯ ಲ್ಯಾಮಿಂಗ್ಟನ್ ಹೈಸ್ಕೂಲಿನಿಂದ ಸೋಲಾಪೂರದ ಕೆ.ಎಲ್.ಈ.ಯ ಕಾಡಾದಿ ಹೈಸ್ಕೂಲ ಸೇರಿದ ಒಂದಾರು ತಿಂಗಳಲ್ಲಿಯೇ ಈ ಪುಸ್ತಕ "ಮುಂಗಾಲ್‌ಪುಟಿಗೆ" ನನ್ನ ಕೈಗೆ ಬಂದಿತು. ನಾನು ಓದಿದ ಎನ್ಕೆಯವರ ಮೊದಲ ಪುಸ್ತಕ ಇದು.

೧೯೪೬ರಲ್ಲಿ ಮುಂಬೈ ಕೇಂದ್ರದಿಂದ ಪ್ರತಿ ಶನಿವಾರ ಸಾಯಂಕಾಲ ಚಿಕ್ಕ ಮಕ್ಕಳಿಗಾಗಿ ಎನ್ಕೆ ನಿಯೋಜಿತ 'ಹಕ್ಕಿಯ ಗೂಡು' ಕಾರ್ಯಕ್ರಮ ಪ್ರಸಾರವಾಗಲಾರಂಭಿಸಿತು. ಈ ಕಾರ್ಯಕ್ರಮ ಒಂದೊಂದು ಸಲ, ಇಷ್ಟೊಂದು ಮನೋರಂಜಕವಾಗಿರುತ್ತಿತ್ತು, ನಿಶ್ಚಿತ ವೇಳೆ ನೋಡುನೋಡುವಷ್ಟರಲ್ಲಿ ಮುಗಿಯುತ್ತಿತ್ತು. ಮುಂದಿನ ಶನಿವಾರ ಹಕ್ಕಿಯ ಗೂಡಿನ ಕಾರ್ಯಕ್ರಮ ಪ್ರಾರಂಭವಾದ ಕೂಡಲೆ, ನಮ್ಮ ಗಡಿಯಾರವನ್ನು ನಿಲ್ಲಿಸಿಬಿಡಬೇಕೆಂಬ ಯೋಜನೆಯೂ ಎಷ್ಟೊ ಸಲ ಹಣಿಕಿ ಹಾಕುತ್ತಿತ್ತು. ಪ್ರತಿ ತಿಂಗಳು, ವಿಧವಿಧವಾದ ಸ್ಪರ್ಧೆಗಳನ್ನಿಡುತ್ತಿದ್ದರು. ಅದೆಷ್ಟೊ ಸಲ ನನ್ನ ಲೇಖನ, ಕವನ, ಸಂಭಾಷಣೆ ಪ್ರಥಮ ಬಹುಮಾನ ಪಡೆಯುತ್ತಿದ್ದವು.

ನನ್ನಲ್ಲಿ ಆದೇ ಮೊಳಕೆಯೊಡೆಯುತ್ತಿದ್ದ ಸಾಹಿತ್ಯ ಸಸಿಗೆ, ಬಾನುಲಿರೂಪದಿಂದ ಎನ್ಕೆಯವರು ಪ್ರೋತ್ಸಾಹನವ ನೀರುಣಿಸುತ್ತಿದ್ದರು. ಮಾರ್ಗದರ್ಶನದ ಪ್ರಕಾಶ ದಯಪಾಲಿಸುತ್ತಿದ್ದರು.

೧೯೪೬ರ ಜೂನ್, ಕಾಡಾದಿ ಹೈಸ್ಕೂಲಿನಿಂದ ನನ್ನನ್ನು ಬೇರೆ ಒಂದು ಕಮರ್ಶಿಯಲ್ ಹೈಸ್ಕೂಲಿಗೆ ಸೇರಿಸಿದರು. ಮರಾಠಿ ಮಾಧ್ಯಮವಿದ್ದ ಸಾಲೆ, ಕನ್ನಡದ ಸಂಬಂಧಸೂತ್ರವನ್ನೇ ಕತ್ತರಿಸುವದರಲ್ಲಿತ್ತು. ಕೇವಲ 'ಹಕ್ಕಿಯ ಗೂಡಿ'ನ ಕಾರ್ಯಕ್ರಮದಿಂದ ವಾರದಲ್ಲಿ ಒಂದು ದಿನವಾದರೂ ಕನ್ನಡದ ಸಂಪರ್ಕ ಬರುತ್ತಿತ್ತು. ಈ ಅವಧಿಯಲ್ಲಿ ಬಾಗಲ

ಕೋಟೆಯಿಂದ, ನನ್ನ ತಾಯಿಯ ಆಪ್ತರಾದ ಶ್ರೀನಿವಾಸರಾವ ಮಂಗಳವೇಢೆಯವರು ಬಂದರು. ಸಾಯಂಕಾಲ ಅವರ ಸಹವಾಸದ ಎರಡು ತಾಸಿನಲ್ಲಿ, ಅವರಲ್ಲಿಯ ಜಾಜ್ವಲ್ಯ ಮಾನವಾದ ಕನ್ನಡಾಭಿಮಾನದ ಪ್ರಭಾವಕ್ಕೊಳಗಾಗಿ,ಸಾಲೆಯಲ್ಲಿ ಯಾವ ಭಾಷೆ ಕಲಿಸಿದ ರೇನು, ಎಸ್.ಎಸ್.ಸಿ. ಪರೀಕ್ಷೆಗೆ, ಕನ್ನಡ ವಿಷಯವನ್ನೇ ತೆಗೆದುಕೊಳ್ಳುವದೆಂದು ನಿರ್ಧರಿಸಿದೆ. ಅಂದಿನಿಂದ 'ಹಕ್ಕಿಯ ಗೂಡಿ'ನ ಕಾರ್ಯಕ್ರಮ ಕೇವಲ ಮನೋರಂಜನೆ ಗಾಗಿ ಅನಿಸದೆ, ಅಭ್ಯಾಸಕ್ಕಾಗಿಯೂ ಪರಿಣಮಿಸಿತು.

ಈ ರೀತಿ, ವಾರದಲ್ಲಿ ಒಂದು ದಿನ ಎನ್ಕೆಯವರು ನನ್ನ ಕನ್ನಡ ಟ್ಯೂಶನ್ ತೆಗೆದುಕೊಳ್ಳಹತ್ತಿದರು. "ಎಲ್ಲಿಯೇ ಇರು ಕನ್ನಡವಾಗಿರು" ಈ ಸುರಸ ಕಾವ್ಯ ಪ್ರಥಮ ಸಲ ನಾನು ಕೇಳಿ ಆನಂದಪಡುತ್ತಿದ್ದಾಗ, ಎನ್ಕೆಯವರ ಮೂರ್ತಿ ಕಣ್ಣ ಮುಂದೆ ಬಂದು ನಿಂತಿತು.

೧೯೪೬ರ ಅಕ್ಟೋಬರದಲ್ಲಿ ತಮ್ಮ ಕೆಲಸಕ್ಕಾಗಿ ತಂದೆಯವರು ನನ್ನನ್ನು ಮುಂಬೈಗೆ ಕಳಿಸುವದಾಗಿ ಹೇಳಿದರು, "ಖರ್ಚಿಗೆ ೫೦ ರೂಪಾಯಿ ಕೊಡತೀನಿ, ಎರಡ ದಿವಸದಾಗ ಕೆಲಸ ಮುಗಿಸಿಕೊಂಡು ಬರಬೇಕು." ಅದಕ್ಕೆ ನಾನು ಒಪ್ಪಲಿಲ್ಲ. "ಖರ್ಚಿಗೆ ೧೫೦ ರೂಪಾಯಿ, ಮತ್ತು ಎಂಟು ದಿನಗಳಾದರೂ ಮುಂಬೈಯಲ್ಲಿ ಇರುವದಾದರೆ ನಾನು ಹೋಗುತ್ತೇನೆ" ಎಂದದ್ದಕ್ಕೆ ತಂದೆಯವರು, "ಮುಂಬೈದಾಗ ಎನ್ಕೆಯವರಿಗೆ ಭೆಟ್ಟಿ ಯಾಗಿ, ಈ ಶನಿವಾರದ ಕಾರ್ಯಕ್ರಮದಾಗ ಭಾಗ ತೊಗೊಂತಿದ್ದಿ ಅಂದ್ರ ಎಂಟ ದಿವಸ ಅಲ್ಲಿರು." ಎಂದರು.

ದಾದರದಲ್ಲಿದ್ದ ನನ್ನ ಚಿಕ್ಕಮ್ಮನ ಮನೆಗೆ ಬಂದೆ. ನನಗೆ ಆಕಾಶವಾಣಿ ಕೇಂದ್ರಕ್ಕೆ ಹೋಗಿ ಎನ್ಕೆಯವರನ್ನು ಭೆಟ್ಟಿಯಾಗುವದಿದೆ ಎಂದು ಕೇಳಿದ ಕೂಡಲೆ, ಅಲ್ಲಿದ್ದ ಬಾಗಲರು, "ನನಗೆ ಎನ್ಕೆಯವರ ಪರಿಚಯವಿದೆ, ಶನಿವಾರ ನಿನ್ನನ್ನು ಕರೆದು ಕೊಂಡು ಹೋಗಿ ಭೆಟ್ಟಿ ಮಾಡಿಸುತ್ತೇನೆ" ಎಂದರು. ಮುಂಬೈಗೆ ಬಂದು, ಸೋಮ ವಾರದಿಂದ ಶನಿವಾರದ ವರೆಗೆ ಕಾಯುವದು ಕಠಿಣವೆನಿಸಿತು.

ಆ ಶುಭದಿನ ಬೆಳಗಿನಿಂದ ನನ್ನಲ್ಲಿ ಉತ್ಸಾಹ ತುಂಬಿ ತುಳುಕುತ್ತಿತ್ತು. ಆ ಶುಭ ಘಳಿಗೆಯೂ ಬಂದಿತು. ನನ್ನ ಹೆಸರು ಹೇಳುತ್ತ, ಪೂಜ್ಯ ಭಾವನೆಯಿಂದ ಎನ್ಕೆ ಯವರೆದುರಿಗೆ ಕೈ ಮುಗಿದು ನಿಂತೆ, "ನೀsನs" ಆನಂದಾಶ್ಚರ್ಯ ವ್ಯಕ್ತಪಡಿಸುತ್ತ, ತಮ್ಮ ಒಂದು ಕೈಯಿಂದ, ನನ್ನ ಜೋಡಿಸಿದ ಎರಡೂ ಕೈಗಳನ್ನು ಹಿಡಿದು, ಮತ್ತೊಂದು ಕೈಯಿಂದ ತಮ್ಮ ಪ್ರೇಮದ ಪ್ರತೀಕವೆಂದು ನನ್ನ ಬೆನ್ನಿನ ಮೇಲೆ ಗುದ್ದಿದರು. ಆನೆ ಗಳು ನಡೆದುಕೊಂಡು ಹೋಗುವ ದಾರಿಯ ಮೇಲೆ ಮೊಲವು ತನ್ನ ಪುಟ್ಟ, ಕೋಮಲ ಹೆಜ್ಜೆಯನ್ನಿಟ್ಟಂತಾಯಿತು.

ಸ್ನೇಹ, ಪ್ರೇಮ, ಆನಂದಮಯ ವ್ಯಕ್ತಿತ್ವ. ಅದೆಷ್ಟೋ ವರ್ಷಗಳ ಪರಿಚಿತರಂತೆ ಮಾತಿಗೆ ಪ್ರಾರಂಭವಾಯಿತು. ನನ್ನನ್ನೇ ನಾನು ಕಳೆದುಕೊಂಡಿದ್ದೆ. ಆ ದಿನದ ಹಕ್ಕಿಯ

ಗೂಡಿನ ಕಾರ್ಯಕ್ರಮದಲ್ಲಿ ಭಾಗವಹಿಸಲು ಬಂದಿರುವೆನೆಂದು ಅವರಿಗೆ ತಿಳಿದಕೂಡಲೆ ವಿಷಾದಪಟ್ಟುಕೊಂಡರು. "ಮುಂಚೆ ಹೇಳಬಾರದೇನಪಾ, ಶನಿವಾರದ ಕಾರ್ಯಕ್ರಮ ನಾವು ಬುಧವಾರನೇ ಫಿಕ್ಸ ಮಾಡತೀವಿ. ಊರಿಂದ ಬಂದ ಕೂಡಲೆ ನನಗೆ ತಿಳಸಿದ್ದಿ ಅಂದ್ರ, ಇವತ್ತಿನ ಕಾರ್ಯಕ್ರಮದಾಗ ನೀನೂ ಇರತಿದ್ದಿ ಇಲ್ಲs? ನಿನಗೆಂದ ಬರಬೇಕನಸ್ತದ ಅಂದ ಬಾ ಏನಪಾ. ಆದರ ಸೋಮವಾರ ನಮಗ ತಿಳಸು." ನಿರುಪಾಯನಾಗಿ ನಾನು ಹಿಂತಿರುಗಿದೆ. ಆ ಶನಿವಾರ ಮನೆಯಲ್ಲಿ ಎಲ್ಲರೂ ಆತುರತೆಯಿಂದ ನನ್ನ ಮಾತನ್ನು ಕೇಳಲು ಕುಳಿತಿದ್ದರಂತೆ.

ಆ ವಾರವೇ ಮತ್ತೆ ಮುಂಬೈಗೆ ಹೋದೆ. ಅನಪೇಕ್ಷಿತ ನನ್ನನ್ನು ಕಂಡು ಎಲ್ಲ ರಿಗೂ ಆಶ್ಚರ್ಯ. "ರೇಡಿಯೋ ಕಾರ್ಯಕ್ರಮದಲ್ಲಿ ಭಾಗವಹಿಸಲು ಬಂದಿರುವೆ"ನೆಂದು ಹೇಳಿದೆ.

ಸೋಮವಾರ ಸ್ನಾನ, ಊಟ ಮುಗಿಸಿಕೊಂಡು ಎಸ್ಕೆಯವರೆದುರಿಗೆ ನಿಂತೆ, "ಇವತ್ತು ಸೋಮವಾರ, ಈ ಶನಿವಾರದ ಕಾರ್ಯಕ್ರಮ..." ನಡುವೇ ನನ್ನನ್ನು ತಡೆ ಯುತ್ತ, ನಾನು ಊರಿಗೆ ಹೋದದ್ದು ಯಾವಾಗ, ಯಾವಾಗ ಮರಳಿ ಬಂದದ್ದು, ಎಲ್ಲ ವನ್ನೂ ನಸುನಗುತ್ತ ಕೇಳುತ್ತಿದ್ದರು. ಪ್ರಯತ್ನಪೂರ್ವಕವಾಗಿ ನಾನು ನನ್ನ ಮನಸ್ಥಿತಿ ಬಹಿ ರಂಗ ಪಡಿಸಲಿಲ್ಲ. ಬುಧವಾರ ಮಧ್ಯಾಹ್ನ ಬರಲು ಹೇಳಿದರು. ಭೆಟ್ಟಿಯಾದ ನಂತರ, ಒಂದು ಕಾಗದದ ಮೇಲೆ ೧೦/೧೫ ಪ್ರಶ್ನೆಗಳನ್ನು ಬರೆದುಕೊಟ್ಟರು. "ಈ ಪ್ರಶ್ನೆಗೆ ಉತ್ತರ ಬರಕೊಂಡು ಶನಿವಾರ ಮಧ್ಯಾಹ್ನ ಬಂದುಬಿಡು. ಒಂದೆರಡು ಸರತೆ ರಿಹರ್ಸಲ್ ಮಾಡೂಣಂತ, ಇದೇ ನಿನ್ನ ಕಾರ್ಯಕ್ರಮ ಏನಪಾ." ಅಂದು ಸಂದರ್ಶನಕಾರರ ರೂಪ ತಾಳಿ ಈ ಸಲ ಎಸ್ಕೆಯವರು, 'ಹಕ್ಕಿಯ ಗೂಡಿ'ನ ಎಲ್ಲ ಹಕ್ಕಿಗಳಿಗೂ ನನ್ನ ಪರಿಚಯ ಮಾಡಿಕೊಟ್ಟರು.

ಗಾವುದ ಗಾವುದ ಗಾವುದ ಮುಂದೆ ಹಕ್ಕಿ ಹಾರುತ್ತಲೇ ಇದೆ. ನಾಲ್ಕು ದಶಕಗಳ ನಂತರ ೧೯೭೯ರ ದಸರೆಯ ಬನ್ನಿಯನ್ನು ಎಸ್ಕೆಯವರಿಗೆ ಕಳಿಸಿದೆನು. ಅವರು ತಮ್ಮ ಪತ್ರದಿಂದ ನನ್ನನ್ನು ಚಕಿತಗೊಳಿಸಿದರು.

"ನಮ್ಮ ಹಳೇ ಗುರ್ತು ಇನ್ನೂ ಹಸಿರಾಗೇ ಅದ ಅನಲಿಕ್ಕೆ ನಿಮ್ಮ ಹಸಿರು ಬಂಗಾರನೇ ಸಾಕ್ಷಿ". ಅವರ ಈ ಮಾತೆಂದರೆ, ಅವರಲ್ಲಿಯ ವಿಶಾಲ ಮನಸ್ಸಿನವೇ ಸಾಕ್ಷಿ. ಕಳೆದುಕೊಂಡ ನಿಧಿಯನ್ನು, ವಿಧಿಯು ಹುಡುಕಿ ಕೈಗಿಟ್ಟಂತೆನಿಸಿ, ಹರ್ಷಭರಿತ ನಾದೆ. ನಮ್ಮ ಪತ್ರಿಕೆಗೆ ಒಂದು ಲೇಖನವನ್ನು ಕಳಿಸಿರೆಂದು ವಿನಂತಿಸಿದೆ, ಕೂಡಲೆ ಶ್ರೀಮತಿ ಶಾರದಾ ಗೋಕಾಕರು ಬರೆದ "ಒಲುವೇ ನಮ್ಮ ಬದುಕು" ಈ ಗ್ರಂಥದ ರಸ ಮಯ ವಿಮರ್ಶೆ ಕಳಿಸಿಕೊಟ್ಟರು. ೧೯೮೦ರ ಮೇ ತಿಂಗಳಲ್ಲಿ ಧಾರವಾಡಕ್ಕೆ ಹೋದಾಗ ಅವರ ಮನೆಗೆ ಹೋಗಿದ್ದೆ. ಮಕ್ಕಳು-ಸೊಸೆಂದರಿಗೆಲ್ಲ ಅದೆಷ್ಟು ಸಂಭ್ರಮದಿಂದ, ಅಭಿಮಾನದಿಂದ ಪರಿಚಯ ಮಾಡಿಸಿಕೊಟ್ಟರು. ಮುದ್ದುಮುದ್ದಾದ ಮೂರು

ಮೊಮ್ಮಕ್ಕಳಿಂದ ಆ ಮನೆಗೆ ಇನ್ನಷ್ಟು ಕಳೆ ಏರಿತ್ತು. ಅವರೆಲ್ಲರೂ ನನ್ನ ಮೇಲೆ ಅಕ್ಕರತೆಯ ಮಳೆಗರೆದರು. ಎರಡು ದಿನಗಳಲ್ಲಿ ನಾನೂ ಆ ಕುಟುಂಬದಲ್ಲಿಯ ಒಬ್ಬ ನಾದೆ. ಎನ್ಕೆಯವರು, ಅವರ ಮೂರು ಮಕ್ಕಳು, ಮೂವರು ಸೊಸೆಂದಿರು, ಮೂವರು ಮೊಮ್ಮಕ್ಕಳು, ಎಂದರೆ ಹೂಡಿದ ಹತ್ತು ಕುದುರೆಗಳು, ಮಮತೆಯ ಸಂಸಾರ-ರಥ ವನ್ನು ದಶದಿಕ್ಕುಗಳಿಗೂ ಎಳೆಯುತ್ತಿದ್ದರು.

೧೯೮೧ ರ ದಸರೆಯಲ್ಲಿ ಸಾಕ್ಷಾತ್ ನಾರಾಯಣನೇ ನಮ್ಮ ಮನೆಯಲ್ಲಿ ಎನ್ಕೆ ಯವರ ರೂಪದಿಂದ ಅವತರಿಸಿದ. ಮಡದಿ ಮಕ್ಕಳೆಲ್ಲರೂ ಪೂಜ್ಯ ಭಾವನೆಯಿಂದ ಅವರಿಗೆ ನಮಸ್ಕರಿಸಿದರು. ಅಂತಃಕರಣದಿಂದ ಅವರು ವ್ಯಕ್ತಗೊಳಿಸಿದ ಸಂತೋಷ ಕ್ಕಾಗಿ, ನಾವು ಕೃತಾರ್ಥರಾದೆವು. ಪತ್ರ ವ್ಯವಹಾರ ಸೌಕರ್ಯದಿಂದ, ಧಾರವಾಡದ ಕಲ್ಯಾಣನಗರ ಮತ್ತು ನಾವಿರುವ ಕಲ್ಯಾಣದಲ್ಲಿಯ ಅಂತರ, ನಿರಂತರವಾಗಿ ಕಡಿಮೆ ಕಡಿಮೆಯಾಗುತ್ತ ಬಂದಂತೆ ಅನಿಸಹತ್ತಿತು.

೧೯೮೨ ರಲ್ಲಿ ನನ್ನ ಮಗಳು ಚಿ. ಪ್ರತಿಭಾಳ ಜೊತೆಗೆ ಧಾರವಾಡಕ್ಕೆ ಹೋದೆ. ಎನ್ಕೆಯವರಲ್ಲಿ ೩-೪ ದಿನ ಇದ್ದೆವು. ಈಗಲೂ ಅವರು ನನ್ನೊಂದಿಗೆ ಬಹು ವಚನದಲ್ಲಿಯೇ ಮಾತನಾಡುತ್ತಿದ್ದರು. ನನಗೆ ಎಡಚೆಡಚೆನಿಸಹತ್ತಿತು. ಅವರಿಗೆ ಅಂಗಲಾಚಿ ಬೇಡಿಕೊಳ್ಳಬೇಕಾಯಿತು: "ಅಂತಃಕರಣದಿಂದ ನನ್ನನ್ನಿಷ್ಟು ಎಳೆದುಕೊಂಡಿ ದ್ದೀರಿ, ಮಾತನಾಡುವಾಗ ಯಾಕೆ ಅನುಮಾನ? ಇಂದಿನಿಂದ ನಾನೂ ನಿಮಗೆ ಕಾಕಾ ಅನ್ನುತ್ತೇನೆ."

ಮೇಲಿಂದ ಮೇಲೆ ತಮ್ಮ ಮಮತೆಯುಕ್ತ ಓಲೆಗೈಯಿಂದ ನನ್ನ ಬೆನ್ನು ಚಪ್ಪರಿ ಸುತ್ತ, ನನ್ನನ್ನು ಕಾರ್ಯತತ್ಪರನನ್ನಾಗಿ ಮಾಡಿ, ನನ್ನಿಂದ 'ನೀನೇ ನಿನ್ನ ಅರಿ' ನಾಟಕ, ಬೇಗ ಬೇಗನೆ ಬರೆದು ಮುಗಿಸಲು ಪ್ರೇರಣೆ ಇತ್ತರು. ಮುನ್ನುಡಿ ಬರೆದರು. ಅದರ ಮಧ್ಯಭಾಗದಲ್ಲಿ ಒಂದು ತೊಟ್ಟಿಲ ಕಟ್ಟಿ, "ಭಾಭೀ" (ಭಾರದ್ವಾಜ ಭೀಮಸೇನ) ಎಂದು ನಾಮಕರಣವನ್ನು ಮಾಡಿಬಿಟ್ಟರು. ಹೃದಯದಲ್ಲಿ ತುಂಬಿರುವ ಪ್ರೇಮಭಂಡಾರವನ್ನು ಲಪಟಾಯಿಸುವದರಲ್ಲಿಯೇ ಇವರಿಗೆ ಎಲ್ಲಿಲ್ಲದ ಖುಶಿ.

# ಆ ವ್ಯಕ್ತಿ–ಆ ಚಿತ್ರ

## ಎಸ್. ವ್ಹಿ. ಸಬನೀಸ್

ಎನ್ಕೆ ನನಗಿಂತ ಸುಮಾರು ೧೮ ವರುಷಕ್ಕೆ ಹಿರಿಯರು. ನಾನು ಚಿಕ್ಕವನಿದ್ದಾಗಿನಿಂದ ಎನ್ಕೆಯವರನ್ನು ಕಾಣುತ್ತಲೇ ಬಂದಿದ್ದೇನೆ. ಏಕೆಂದರೆ ಅವರು ನನಗೆ ಹತ್ತಿರದ ಬಳಗದವರು. ಆದರೆ, ಎನ್ಕೆ ನನ್ನ ಹೃದಯಕ್ಕೆ ತೀರ ಸಮೀಪವಾದುದು ಸುಮಾರು ೧೬ ವರುಷಗಳಿಂದ ಮಾತ್ರ. ಮೊದಲಿಗೆ ನಾ ಕಂಡ, ಕೇಳಿದ ಎನ್ಕೆ ಒಬ್ಬ ಪ್ರಸಿದ್ಧ ಕನ್ನಡ ಸಾಹಿತಿ– ನಾಟಕಕಾರ, ಕಲಾಕಾರ, ಕಾದಂಬರಿಕಾರ, ಹಾಸ್ಯಕಾರ ಹಾಗೂ ವಿಮರ್ಶಕ. ಹಾಯಸ್ಕೂಲಿನಲ್ಲಿರುವಾಗಲೇ ಅವರು ಬರೆದ ಕೆಲವು ಹಾಸ್ಯ ಲೇಖನಗಳನ್ನು ಸವಿದು ನಕ್ಕು ನಲಿದಿದ್ದೆ. ರೇಡಿಯೋ–ನಾಸಿಕಾಕಾನಂತೂ ಎಲ್ಲ ಕನ್ನಡಿಗರಿಗೂ ಪರಿಚಯಸ್ಥ.

ಎನ್ಕೆ ಎಂದೊಡನೆ, ನನ್ನ ಕಣ್ಣೆದುರಿಗೆ ಕಟ್ಟುವ ವ್ಯಕ್ತಿಯೆಂದರೆ ಒಂದು ಮಾಸಲು ಬಣ್ಣದ, ಹಳೆಯ ಕಪ್ಪು ಪ್ಯಾಂಟು, ಕಪ್ಪು ಕೋಟು, ಇಸ್ತ್ರಿ ತೀಡದ ಬಿಳಿ ಶರ್ಟು, ಇವುಗಳನ್ನು ಧರಿಸಿದ, ಸ್ವಲ್ಪ ಡೊಂಕು ಕಾಲಿನ ನಡಿಗೆಯುಳ್ಳ, ಹಸನ್ಮುಖಿಯಾದ, ನಸುಗೆಂಪಿನ ಸುಸ್ವರೂಪಿ ಹಿರಿಯ ಮಿತ್ರ. ಅವರನ್ನು ನೆನೆದಾಗ, ಅವರ ಪತ್ರಗಳು ಬಂದಾಗ ಒಮ್ಮೊಮ್ಮೆ ನನಗೆ ಆಶ್ಚರ್ಯವಾಗುತ್ತದೆ. ಅವರ ಮೇಲೆ ಕನಿಕರ ಬರುತ್ತದೆ. ನನಗೆ ತಿಳಿದಂತೆ ಎನ್ಕೆಯವರ ಜೀವನದಲ್ಲಿ ಸಿಹಿಗಿಂತ ಕಹಿ ಅನುಭವಗಳೇ ಹೆಚ್ಚು. ತಮ್ಮ ನಡುವಯಸ್ಸಿನಿಂದ ಇದುವರೆಗೆ ಅವರು ಅನುಭವಿಸಿದ ಸಂಬಂಧಿಕರ ಸಾವುಗಳ ನೋವು ಅಸದೃಶ. ಅವರ ಹೃದಯಕ್ಕೆ ತೀರಸಮೀಪದವರಾದ, ಅತ್ಯಂತ ಪ್ರೀತಿಪಾತ್ರರಾದ ಸಂಬಂಧಿಕರನೇಕರನ್ನು ಅವರ ಅಕಾಲಿಕ ಮರಣದಿಂದ ಕಳೆದುಕೊಂಡರು– ಅತ್ಯಂತ ಪ್ರೀತಿಯ ಅಕ್ಕ, ಅವಳ ಮಗಳು, ಒಬ್ಬಳೇ ಒಬ್ಬಳಾದ ಚಿಕ್ಕ ಸುಂದರ ಮಗಳು, ಮೊದಲನೆಯ ಹೆಂಡತಿ, ಅತ್ತಿಗೆ, ಎರಡನೆಯ ಹೆಂಡತಿ, ಇಬ್ಬರು ಅಣ್ಣಂದಿರು. ಇದಲ್ಲದೆ ಸಂಸಾರದಲ್ಲಿ ಅದೆಷ್ಟೋ ತೊಂದರೆ, ಅಡಚಣೆಗಳನ್ನು ಸಹಿಸಿದರು. ಈ ಎಲ್ಲ ಕಹಿಗಳನ್ನು ನುಂಗಿಯೂ ಹೇಗೆ ಹಸನ್ಮುಖಿಯಾಗಿದ್ದಾರೆ! ಇಂಥ ದುಃಖಿಯ ಲೇಖನಿಯಿಂದ ಹಾಸ್ಯಗಳು ಹೇಗೆ ಹೊರ ಹೊಮ್ಮುತ್ತವೆ? ಇದೇ

ಆಶ್ಚರ್ಯ ನನಗೆ! ಇವಕ್ಕೆಲ್ಲ ಸಮರ್ಪಕ ಉತ್ತರವೇನು? ಭಗವದ್ಗೀತಾಚಾರ್ಯರು ಕಲಿಸಿದ 'ಸಮತ್ವ'ವನ್ನು ಜೀವನದಲ್ಲಿ ಅಳವಡಿಸಿಕೊಂಡಿರಲೇಬೇಕಲ್ಲಗೆ ಮತ್ತೇನು?

ಇನ್ನು, ನನ್ನ- ಅವರ ಸಂಬಂಧದಲ್ಲಿ ನಾ ಕಂಡ ಎನ್ಕೆ. ಇತ್ತೀಚೆಗಿನ ೧೬ ವರುಷಗಳ ಸಂಬಂಧವೆಂದರೆ ಅತ್ಯಂತ ಮಧುರ ಬಾಂಧವ್ಯ. ನಾವಿಬ್ಬರೂ ಸೋದರರಾದೆವು. ಗುರು ಬಂಧುಗಳಾದೆವು. ಶ್ರೀ ಮಾತಾರವಿಂದರ ಪವಿತ್ರ ಚರಣ ಕಮಲಗಳಿಗೆ ನನ್ನನ್ನು ಮೊದಲು ಕಳಿಸಿದ ಶ್ರೇಯಸ್ಸು ಎನ್ಕೆಯವರಿಗೆ ಸಲ್ಲುತ್ತದೆ. ನಾನು, ನನ್ನ ಪತ್ನಿ ಪುತ್ರರು ಇದಕ್ಕಾಗಿ ಅವರಿಗೆ ಚಿರಋಣಿಗಳಾಗಿದ್ದೇವೆ. "ಶ್ರೀ ಮಾತೆಯವರ ಪರಮ ಪವಿತ್ರ ದರ್ಶನವೊಂದೇ ಸಾಕು. ಅದೇ ಒಂದು ಮರೆಯಲಾಗದ ಆಧ್ಯಾತ್ಮಿಕ ಅನುಭವ; ಸಾರ್ಥಕ ಜೀವನದ ತಳಪಾಯುವದು", ಎಂದು ಅವರು ನನಗೆ ಹೇಳಿದ ಮೊದಲ ಪಾಠ ಮಂತ್ರವಾಯಿತು, ವರವಾಯಿತು.

ನಮ್ಮೀರ್ವರಲ್ಲಿ ಬಹಳಷ್ಟು ಪತ್ರೋತ್ತರಗಳು ನಡೆದಿವೆ. ನಾನೊಂದು ಪತ್ರ ಬರೆದರೆ, ಅದಕ್ಕೆ ಅವರು ನಾಲ್ಕರಷ್ಟು ಬರೆದು ಉತ್ಸಾಹ, ಸಂತಸಗಳನ್ನು ನೀಡಿದ್ದಾರೆ. ನನಗೆ ಅವರು ಬರೆಯುವ ಪತ್ರಗಳಲ್ಲಿ ಬಹುತರವಾಗಿ ಅವರು ತಮ್ಮನ್ನು ಒಂದೆರಡು ಹಂತ ಕೆಳಗಿಳಿಸಿಕೊಂಡು, ನಾನೇ ಬಹಳ ಮೇಲಿನ ಪ್ರಜ್ಞೆಯ ಹಂತಕ್ಕೆ ಏರುತ್ತಿರುವೆನೋ ಎಂಬಂತೆ ಶ್ಲಾಘಿಸಿ ಬರೆಯುತ್ತಾರೆ. ನಾನೇನೊ ಚಿಕ್ಕವನೇ. ಆದರೆ ಈ ಶ್ಲಾಘನೆಯ ನುಡಿಗಳು ಅವರ ಹೃದಯದ ಸಿರಿವಂತಿಕೆಯನ್ನೇ ಎತ್ತಿ ತೋರಿಸುತ್ತವೆ. ಎನ್ಕೆಯವರದು ಬಹಳ ಸುಸಂಸ್ಕೃತ, ಉದಾರ ಹಾಗೂ ಮಾಗಿದ ಹೃದಯ. ಅವರ ಹತ್ತಿರಕ್ಕೆ ಬಂದವರೆಲ್ಲರ ಬಗೆಗೂ ಅವರಿಗೆ ಅಪಾರ ಅಭಿಮಾನ ಹಾಗೂ ವಾತ್ಸಲ್ಯ. ಕನ್ನಡ ಸಾಹಿತ್ಯಕ್ಕೆ ಚಿರಪರಿಚಿತರಾದ ಎನ್ಕೆಯವರು ಸಾಹಿತ್ಯದಲ್ಲಿ ಬಹಳ ಎತ್ತರಕ್ಕೆ ಏರಿರುವರೆಂಬ ವಿಷಯುವನ್ನು ನಾನು ಕೇಳಿಬಲ್ಲೆ. ಅವರ ಎಲ್ಲ ಗ್ರಂಥಗಳನ್ನೂ ಲೇಖನಗಳನ್ನೂ ನಾನು ಓದಿಲ್ಲ. ಆದರೆ ಅವರ ಮಾತುಗಾರಿಕೆಯಿಂದಲೇ, ಅವರು ಹಿರಿಯ ಸಾಹಿತಿ ಎಂಬುದನ್ನು ತಿಳಿದುಕೊಳ್ಳಬಹುದು. ಒಮ್ಮೆ ಶ್ರೀ ಮಾತಾರವಿಂದರ ಅಂಗ್ರೇಜಿ ಲೇಖನಗಳನ್ನು ಕನ್ನಡದಲ್ಲಿ ತರ್ಜುಮೆ ಮಾಡುವ ಪ್ರಸಂಗ ಬಂದಿತ್ತು. ವಿವಿಧ ಲೇಖಕರೂ ಬೇರೆ ಬೇರೆ ಲೇಖನಗಳನ್ನು ತರ್ಜುಮೆ ಮಾಡಿದ್ದರು. ಅವುಗಳಲ್ಲಿ ಎನ್ಕೆ ಅವರ ಭಾಷಾಂತರವೇ ಉತ್ಕೃಷ್ಟವಾಗಿದೆಯೆಂದು ಎಲ್ಲರೂ ಹೊಗಳಿದರು.

ಜೀವನದಲ್ಲಿ ಬಂದ ಎಲ್ಲ ದುಃಖದುಗುಡಗಳನ್ನು ಎದುರಿಸಿ "ಜಗವೆಲ್ಲ ನಗುತಿರಲಿ, ಜಗದಳಲು ನನಗಿರಲಿ" ಎಂಬ ಈಶ್ವರ ಸಣಕಲ್ಲರ ನುಡಿಯಂತೆ ಸದಾ ಹಸನ್ಮುಖಿಯಾಗಿ, ತಮ್ಮ ಹಾಸ್ಯದ ಹೊನಲಿನಲ್ಲಿಯೇ ಜನರಿಗೆ ಜೀವನದ ತಿರುಳನ್ನು ನೀಡುತ್ತ, ವಿಕಾಸ ಪಥದಲ್ಲಿ ಮುನ್ನಡೆದಿರುವ ಎನ್ಕೆಯವರ ಹೃದಯದ ಪರಿಪಕ್ವತೆ, ಮಾನಸಿಕ ಸೂಕ್ಷ್ಮತೆ, ಆಧ್ಯಾತ್ಮಿಕ ತಳಹದಿ, ಸಾಧನೆ, ನಮಗೆಲ್ಲ ದಾರಿದೀಪವಾಗಿವೆ.

# ವಿಶೇಷ ಗುಣಗಳ ಎನ್ಕೆ

ಜೆ. ಎ. ಕುಲಕರ್ಣಿ

೧೯೮೧ನೆಯ ವರುಷದ ದಸರೆಯ ಹಬ್ಬ ನನ್ನ ಜೀವನದಲ್ಲಿ ಎಂದಿಲ್ಲದ ಹರುಷವನ್ನು ತಂದಿತ್ತು. ಮುನ್ನಾದಿನ ಆಕಾಶವಾಣಿ ಧಾರವಾಡ ಕೇಂದ್ರದವರು ಏರ್ಪಡಿಸಿದ್ದ 'ನಗೆಗಡಲಿನ ಒಂದು ಸಂಜೆ' ಕಾರ್ಯಕ್ರಮದಲ್ಲಿ ಭಾಗವಹಿಸಲು ನನ್ನನ್ನು ಆಮಂತ್ರಿಸಿದ್ದರು. ವಿಶೇಷವಾಗಿ ಶ್ರೀಯುತ ಎನ್. ಕೆ. ಕುಲಕರ್ಣಿ (ಎನ್ಕೆ) ಅವರು ಅದನ್ನು ನಡೆಸಿಕೊಡುವವರಾಗಿದ್ದರಿಂದ ನನ್ನ ಮನಸ್ಸಿಗೂ ವಿಶೇಷ ಆತುರ ಹಾಗೂ ಸಂತಸವಾಗಿತ್ತು. ನನಗೆ ಎನ್ಕೆಯವರ ಪ್ರತ್ಯಕ್ಷ ಹಾಗೂ ವೈಯಕ್ತಿಕ ಪರಿಚಯವಾದದ್ದು ಇದೇ ಮೊದಲ ಬಾರಿಯಾಗಿತ್ತು. ಎನ್ಕೆ ಅವರ ಕಾದಂಬರಿಗಳನ್ನು, ನಾಟಕಗಳನ್ನು ನನ್ನ ಶಾಲೆ ಹಾಗೂ ಕಾಲೇಜು ಜೀವನದಲ್ಲಿ ಓದಿದ್ದೆ. ಅವರ ಬಗೆಗಿದ್ದ ನನ್ನ ಆತ್ಮೀಯ ಭಾವನೆ, ಗೌರವ ಮತ್ತು ಅವರು ಕನ್ನಡ ಹಾಸ್ಯ ಮತ್ತು ನಾಟ್ಯ ಸಾಹಿತ್ಯಕ್ಕೆ ಇತ್ತ ಅಖಂಡ ದೇಣಗೆಯ ಸಾಗರವೇ ಅಂದು ನನ್ನ ಮುಂದೆ ನಿಂತಂತಾಗಿತ್ತು. ಜೀವನದಲ್ಲಿ ಎಲ್ಲ ಸುಖ ದುಃಖಗಳ ಆಗುಹೋಗುಗಳ ಸವಿಯನ್ನುಂಡು ಅದರ ರುಚಿಯನ್ನು ನಮಗೆ ಅಂದು ಸ್ವತಃ ಉಣಿಸಲು ಎನ್ಕೆ ವ್ಯಕ್ತಿತ್ವವೆ ಬಂದಂತಿತ್ತು.

ಕನ್ನಡದ ಸಾಹಿತ್ಯರತ್ನಗಳಲ್ಲಿ ಹೆಸರಾಂತ ರತ್ನವಾದ ಎನ್ಕೆಯವರನ್ನು ಅಂದು ಕಂಡಾಗ ನನ್ನ ಮನಸ್ಸಿನ ಮೇಲೆ ಹೆಚ್ಚಿನ ಪ್ರಭಾವ ಬೀರಿದ್ದು ಅಂದು ಅವರ ಸಾಹಿತ್ಯವಲ್ಲ,ಅದಕ್ಕೂ ಮಿಗಿಲಾಗಿ ಅವರ ವಿನಯಶೀಲತೆ, ಅವರ ಮುಖದ ಮೇಲಿದ್ದ ಆತ್ಮೀಯ ನಗೆ ಹಾಗೂ ಅವರ ಕಣ್ಣುಗಳಿಂದ ಹೊರಸೂಸುತ್ತಿದ್ದ ಆ ಅಂತಃಕರಣದ ಕಿರಣಗಳು.

ನನ್ನ ಈ ಮೊಟ್ಟ ಮೊದಲ ಪರಿಚಯ ನನ್ನನ್ನು ಅವರ ಹತ್ತಿರ ಕರೆದೊಯ್ದು ಮೋಹಪಾಶವಾಗಿತ್ತು. ಅಂದಿನಿಂದ ಇಂದಿನ ವರೆಗೆ ನನಗರಿಯದಂತೆ ಅವರನ್ನು ಯಾವುದಾದರೂ ಒಂದು ಕಾರಣದಿಂದ ಕಂಡು ಒಂದೆರಡು ನಿಮಿಷವಾದರೂ ಸರಿ, ನಿರರ್ಗಳ ಹರಟೆ ಹೊಡೆಯಬೇಕೆಂಬ ಮಹದಾಶೆ ನನ್ನ ಮನಸ್ಸಿನಲ್ಲಿ ಯಾವಾಗಲೂ ಇರುವದು.

ಎನ್ಕೆಯವರಲ್ಲಿ ನಾ ಕಂಡ ಅತೀ ಹೆಚ್ಚಿನ ಹಾಗೂ ಮಹತ್ವದ ಗುಣವೆಂದರೆ ವಯಸ್ಸಿನಲ್ಲಿ ನಾನು ಎಷ್ಟೇ ಚಿಕ್ಕವನಿದ್ದರೂ ನನ್ನಲ್ಲಿಯ ಸಾಹಿತ್ಯದ ಅಭಿರುಚಿಯ ಸುಪ್ತ

ಭಾವನೆಗಳನ್ನು ಬಡಿದೆಬ್ಬಿಸುವದು. ಅವರೊಂದಿಗೆ ಮಾತಾಡುವಾಗ ಅವರ ಸರಳ, ಸಹಜ ಮಾತಿನ ಮೋಡಿಗೆ ಮರುಳಾಗಿ ನಾನೆಷ್ಟೋ ಸಲ ನನ್ನ ಬಾಲ್ಯದ ಕುಚೇಷ್ಟೆಗಳನ್ನು ವರ್ಣಿಸಿದ್ದುಂಟು. ನನಗೆ ನನ್ನ 'ಬಾಯಿ ಬಡಾಯಿ'ಯ ಮಧ್ಯದಲ್ಲಿ ಅರಿವಾದಾಗ ನನ್ನನ್ನು ಆಲಿಸುತ್ತಿರುವ ವ್ಯಕ್ತಿ ನನ್ನಲ್ಲಿಯ ಅಡಗಿರುವ ಯಾವುದೋ ಸುಪ್ತ ಶಕ್ತಿಯನ್ನು ಹುರಿದುಂಬಿಸುತ್ತಿದೆ ಎಂಬುದು ಸ್ಪಷ್ಟವಾಗುತ್ತಿತ್ತು. ಎಷ್ಟೋ ಸಲ ನಾ ಮಾತಾಡಿದ ವಿಷಯ ನೆನೆಸಿ ನಾನೇ ನಾಲಿಗೆ ಕಚ್ಚಿದ್ದರೂ ಅವರು ಮಾತ್ರ ನನ್ನನ್ನು ಮತ್ತಷ್ಟು ವರ್ಣಿಸುತ್ತ ಮುಂದೆ ಮಾತಾಡಲು ಹುರುದುಂಬಿಸುತ್ತಿದ್ದರು.

ಸಾಹಿತ್ಯದ ಅಭಿರುಚಿ ನನ್ನಲ್ಲಿರಬಹುದೇ ಎಂದು ನಾನು ಶಂಕಿಸುತ್ತಿರುವಾಗಲೇ ನನಗರಿಯದಂತೆ ನನ್ನ ಮುಖಾಂತರ ಹಾಸ್ಯ ಚಟಾಕಿಗಳಿಗೆ ಪ್ರೇರೇಪಿಸಿ ನನ್ನನ್ನು ಸಾಹಿತ್ಯ ಸೇವೆಗೆ ಅಣಿಮಾಡುವ ಹಂಬಲ ತೋರಿಸಿದ ಹಿರಿಯ ವ್ಯಕ್ತಿ ಎಸ್ಕೆ. ನಿಸ್ವಾರ್ಥತೆಯಿಂದ ಹೊರಬರುವ ಅವರ ಆ ಆತ್ಮೀಯ ನಗು, ಕೇವಲ ಮುಖಸ್ತುತಿಯಲ್ಲ. ನಿಮ್ಮ ಆತ್ಮಕ್ಕೆ ನಾನೀಯುವ ಗೌರವ ಎಂಬ ಅವರ ಹರಕೆ ಪಡೆಯಬೇಕಾದರೆ ಅವರ ಸಾನ್ನಿಧ್ಯದ ಸಂಪರ್ಕದ ಸದವಕಾಶ ಬರಲು ನಾನು ಪುಣ್ಯವಂತನಾಗಿರಬೇಕು.

ಅವರ ಸರಳ ಜೀವನ, ಸಹಜವಾದ ನಡೆನುಡಿ ಆಧುನಿಕತೆಯ ತುಮುಲದಲ್ಲಿ ನಾ ಮೇಲು ನೀ ಮೇಲು ಎಂದು ಕಚ್ಚಾಡುವ ಇಂದಿನ ಸಮಾಜಜೀವನಕ್ಕೆ ತಕ್ಕ ಪಾಠವಾಗುವಂತಿದೆ. ಎಷ್ಟೇ ದೊಡ್ಡವನೆನೆಸಿಕೊಂಡು, ಲೆಕ್ಕವಿಲ್ಲದಷ್ಟು ಸತ್ಕಾರಗಳನ್ನು ಸನ್ಮಾನಗಳನ್ನು ಪಡೆದರೂ ಅವರಿಂದಿಗೂ ತಮ್ಮ ನಿತ್ಯ ಜೀವನದಲ್ಲಿ ಯಾವ ಬದಲಾವಣೆಗೂ ಬಯಸಿಲ್ಲ. ಎಲ್ಲರನ್ನೂ ತಮ್ಮದೇ ಆದ ಜೀವನಕ್ಕೆ ಅಳವಡಿಸಿ, ನಗೆಗಡಲಲ್ಲಿ ತೇಲಿಸಿ ಅವರ ಮನಸ್ಸಿನಲ್ಲಿಯ ಉಪದ್ವ್ಯಾಪಿ ವಿಚಾರಗಳನ್ನು ಬದಿಗೊತ್ತಿ ಅವರನ್ನು ಪುನಃ ಮನುಷ್ಯತ್ವದ ಮಟ್ಟಕ್ಕೆ ತರುವ ನಿಜವಾದ ಮಾಟಗಾರ ನಮ್ಮ ನೆಚ್ಚಿನ ಎಸ್ಕೆ. ಅವರನ್ನು ಹತ್ತಿರದಿಂದ ಬಲ್ಲವರೆಲ್ಲರೂ ಅವರ ಈ ದಿವ್ಯ ಪ್ರಭಾವಕ್ಕಾಗಿ ಹಾತೊರೆಯುವರೆಂಬುದರಲ್ಲಿ ನನಗೀಗ ಎಳ್ಳಷ್ಟೂ ಸಂಶಯವಿಲ್ಲ.

ಎಸ್ಕೆ ನನಗೀಗ ಬರೀ ಪರಿಚಿತರು ಮಾತ್ರವಲ್ಲ. ಅವರ ಅಂತಃಕರುಣಪೂರಿತ ವಿಶಾಲ ಮನೋಭಾವದಲ್ಲಿ ಅವರು ನನಗೀಗ ಒಂದು ಗೌರವಪೂರಿತ ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾರೆ.

ನನ್ನ ನೆಚ್ಚಿನ ನಾನಿಕಾಕಾ ಅವರಿಂದ ನನ್ನಂಥಹ ಅನೇಕರು ಆಶೀರ್ವಾದ ಪಡೆದು ಜೀವನದಲ್ಲಿ ಕಹಿಗಳೊಂದಿಗೆ ಯಾವಾಗಲೂ ನಗುವಿನ ಸವಿಯನ್ನು ಅನುಭವಿಸುವ ಸಾಮರ್ಥ್ಯ ಪಡೆಯಬೇಕಾಗಿದೆ.



# ಎನ್ಕೆ ವಿನಯ

## ಡಾ. ವಾಮನ ದ. ಬೇಂದ್ರೆ

ಬೆಳಗು ೫-೦೦ : ವಿಷ್ಣು ಸಹಸ್ರ ಮತ್ತು ಭಗವದ್ಗೀತಾ ಒಂದು ಅಧ್ಯಾಯ ಪಠಣ

೫-೧೫ : ದಿನದ ಕಾರ್ಯಕ್ರಮದ ಪಟ್ಟಿ ಸಿದ್ಧಪಡಿಸುವಿಕೆ

೫-೧೫ ರಿಂದ ೭ : ಪತ್ರವ್ಯವಹಾರ; ಆ ದಿನ ಬರೆಯಬೇಕಾದ ಲೇಖನಗಳ ಪೂರ್ವ ಸಿದ್ಧತೆ

೭-೫ : ಧಾರವಾಡ ಆಕಾಶವಾಣಿ ಪ್ರದೇಶ ಸಮಾಚಾರ ಕೇಳುವುದು

೭-೧೫–೮.೩೦ : ದ. ರಾ. ಬೇಂದ್ರೆಯವರು ಮಾತನಾಡಿದ್ದನ್ನು ಟಿಪ್ಪಣಿ ಮಾಡಿ ಕೊಳ್ಳುವುದು

೮-೩೦ ರಿಂದ ೧೧ : ಪತ್ರಗಳನ್ನು ಪೋಸ್ಟಿಗೆ ಹಾಕಿ, ಪ್ರಾ. ಮಾಳವಾಡರ ಪ್ರಶಾಂತ ಪಲ್ಲಿ ಶ್ರೀ ಅರವಿಂದ ವಾಙ್ಮಯ ಸಹವಾಚನ, ಚರ್ಚೆ ಮಾಡಿ ಕಿರಿಯ ಮಗ - ರವಿಯ ಮನೆ ಮುಟ್ಟುವದು.

೧೧ ರಿಂದ ೧೧–೩೦ ಮೊಮ್ಮಗ - ಸುಹಾಸನೊಂದಿಗೆ ವಾತ್ಸಲ್ಯದ ಆಟ

೧೧-೩೦ ರಿಂದ ೧೨ : ಊಟ

೧೨ ರಿಂದ ೨ : ವಿಶ್ರಾಂತಿ

೨ ರಿಂದ ೫ : ಕುಮಾರವ್ಯಾಸ, ಬೇಂದ್ರೆ, ವಿನಾಯಕ- ಗೋಕಾಕ ಕುರಿತು ಲೇಖನ–ಕಾರ್ಯ ಮತ್ತು 'ತಾಯಿನುಡಿ', 'ತರಂಗ'ಕ್ಕಾಗಿ ಲೇಖನ ಬರೆಯುವದು

೫ ರಿಂದ ೮ : ತರುಣ ಸಾಹಿತಿ, ಕಲಾವಿದರೊಡನೆ ಚರ್ಚೆ, ಅಥವಾ ಅವರ ಸಾಹಿತ್ಯ ಕೃತಿಗಳಿಗೆ ಮುನ್ನುಡಿ ಬರೆಯುವುದು, ಹಿರಿಯ ಮಗ - ಪ್ರಹ್ಲಾದ ಮತ್ತು ಮುರಲಿ ಮನೆಯಲ್ಲಿ

೮ ರಿಂದ ೮-೩೦ : ಯುವವಾಣಿ ಕಾರ್ಯಕ್ರಮ ಕೇಳುವುದು.

೮-೩೦ : ಮುರಲಿಯ ಮನೆಯಲ್ಲಿ ರಾತ್ರಿ ಊಟ

೮-೪೦ ರಿಂದ ೯-೨೫ : ಗೆಳೆಯರ ಮನೆ, ಕಲಾವಿದರ ಮನೆಗೆ ಭೆಟ್ಟಿ, ಸಂದರ್ಶನ ಇತ್ಯಾದಿ.

೯-೩೦-೧೧ : ಆಕಾಶವಾಣಿಯ ರಾಷ್ಟ್ರೀಯ ಕಾರ್ಯಕ್ರಮ ಕೇಳುವುದು ಮತ್ತು ಮರು ದಿವಸದ ಲೇಖನದ ಬಗ್ಗೆ ಚಿಂತನೆ ಮಾಡುತ್ತ ವಿಶ್ರಾಂತಿ.

ಇದು ಕಾಲು ಶತಮಾನ ಆಕಾಶವಾಣಿಗೆ ಸೇವೆ ಸಲ್ಲಿಸಿದ ಎನ್ಕೆ ಕುಲಕರ್ಣಿಯವರ ೭೧ನೆಯ ವರ್ಷದ ಒಂದು ದಿನದ ಕಾರ್ಯಕ್ರಮ ಪಟ್ಟಿ ಎಂದು ನಾನು ಊಹಿಸಿದ್ದೇನೆ. ಪರಊರಿಗೆ ಪ್ರವಾಸಕ್ಕೆ - ಉಪನ್ಯಾಸಕ್ಕೆ ಹೋದಾಗ ಅಥವಾ ಧಾರವಾಡದಲ್ಲಿಯೇ- ವನವಾಸಿ ರಾಮಮಂದಿರ, ತತ್ತ್ವಾನ್ವೇಷಣ ಮಂದಿರ, ಧಾರವಾಡ ಇಂಜನೀಯರ್ಸ್ ಅಸೋಸಿಯೇಶನ್, ವಿದ್ಯಾವರ್ಧಕ ಸಂಘ, ಕರ್ನಾಟಕ ವಿಶ್ವವಿದ್ಯಾಲಯ ಮೊದಲಾದವು ಗಳ ಉಪನ್ಯಾಸ ಕಾರ್ಯಕ್ರಮ ಅಥವಾ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿದಾಗ ದಿನಚರಿಯಲ್ಲಿ ಸ್ವಲ್ಪ ಬದಲಾವಣೆ ಆದೀತು. ಆದರೆ ಒಟ್ಟು ದಿನಚರಿಯ ಹಂದರ ಸುನಿಶ್ಚಿತ.

ಸರ್ಕಸ್ಸು, ಚಲನಚಿತ್ರ, ಕಲಾಭವನದಲ್ಲಿ ಆಗುವ ಜಾದೂ ಪ್ರಯೋಗ, ಸಂಗೀತ ಸಮಾರೋಹ, ಅಂಜುಮನ್ ಮೈದಾನದಲ್ಲಿ ನಡೆಯುವ ಅಪ್ ಟು ಡೇಟ್ ಮಾಡರ್ನ ಡಾನ್ಸ್ ಪ್ರದರ್ಶನ, ಟಾಗೋರ್ ಹಾಲಿನಲ್ಲಿ ನಡೆಯುವ ನಾಟಕ ಪ್ರಯೋಗ, ಮ್ಯುಜಿ ಕಲ್ ನೈಟ್ ಇತ್ಯಾದಿ ಯಾವುದೇ ಕಾರ್ಯಕ್ರಮ ಧಾರವಾಡದಲ್ಲಿ ನಡೆದರೆ ಎನ್ಕೆಯವರ ಹಾಜರಿ ಅಲ್ಲಿ ಇರುತ್ತದೆ. ಎನ್ಕೆಯವರು ಪ್ರಖ್ಯಾತ ನಾಟಕಕಾರರು ಮತ್ತು ಕಾದಂಬರಿ ಕಾರರು ಎಂಬುದನ್ನು ಇಲ್ಲಿ ನೆನೆಯಬೇಕಾಗುತ್ತದೆ. ನಾಟಕಕಾರ ಮತ್ತು ಕಾದಂಬರಿ ಕಾರನಿಗೆ ಬೇಕಾಗುವ ಜೀವನಾನುಭವ ಮತ್ತು ವಸ್ತುಸಂಗ್ರಹ ವಸ್ತುವಿನ ಆಯ್ಕೆ ಮಾಡುವ ಉದ್ದೇಶ ಎನ್ಕೆಯವರ ಈ ಸಂಚಾರ.

ಆಕಾಶವಾಣಿಯಲ್ಲಿ ಸೇವೆ ಸಲ್ಲಿಸಿದ್ದರಿಂದ ಕರ್ನಾಟಕದ ಸಾಹಿತಿಗಳ ಪಟ್ಟಿಯಲ್ಲಿ ತನಗೆ ಸಿಗಬೇಕಾದ ಸ್ಥಾನ ಸಿಕ್ಕಿಲ್ಲ ಎಂಬ ಒಂದು ಕೊರಗು ಎನ್ಕೆಯವರನ್ನು ಕೆಲವು ಸಮಯದ ವರೆಗೆ ಕಾಡುತ್ತಿತ್ತು. ಈಗ ಆ ಕೊರಗು ಅವರಿಗಿಲ್ಲ. ಆಕಾಶವಾಣಿಯಲ್ಲಿ ಸೇವೆ ಸಲ್ಲಿಸಿದ್ದರ ಸಂಪೂರ್ಣ ಲಾಭ ಅವರ ಸಾಹಿತ್ಯಿಕ ಜೀವನದಲ್ಲಿ ಆಗಿದೆ ಎಂದು ನಾನು ಕಂಡುಕೊಂಡಿದ್ದೇನೆ.

ನಾಟಕಕಾರ— ಗರುಡಸದಾಶಿವರಾಯರು, ವಾಮನರಾವ್ ಮಾಸ್ತರ್; ಸಂಗೀತ ಕಾರ— ಸವಾಯಿ ಗಂಧರ್ವ, ಗುಳೇದಗುಡ್ಡ ಗಂಗೂಬಾಯಿ, ಅಬ್ದುಲ್ ಕರೀಂಖಾನ್; ಕವಿ— ಅಂಬಿಕಾತನಯದತ್ತ ಮತ್ತು ಬೇರೆ ಬೇರೆ ಕ್ಷೇತ್ರದಲ್ಲಿ ಪರಿಣತರಾದವರ ಬಗ್ಗೆ ಲೇಖನ ಸಿದ್ಧಪಡಿಸುವುದು, ಸಂದರ್ಶನ ಲೇಖನ ವೇಗವಾಗಿ ಬರೆಯುವ ಕಲೆ ಆಕಾಶ ವಾಣಿ ಲೇಖಕನಿಗೆ ಸಾಧಿಸಬಹುದಾದ ಒಂದು ಸಿದ್ಧಿ. ಸ್ಫೂರ್ತಿಯಿಂದ ಲೇಖನ ಬರೆ ಯುವುದು, ಕಮ್ಮಟ ಲೇಖಕನಾಗುವುದು, ವ್ಯವಸಾಯದಿಂದ ಲೇಖಕನಾಗುವುದು ಮೊದಲಾದ ಪ್ರಕಾರಗಳಿರುವಂತೆ 'Made to order' ಅಥವಾ 'Tailored literature' ಎಂಬುದೂ ಇಂದು ಒಂದು ಪ್ರಚಲಿತ ಜನಪ್ರಿಯ ಸಾಹಿತ್ಯ ಪ್ರಕಾರ.

ಈ ಪ್ರಕಾರವನ್ನು ಪತ್ರಿಕಾವರದಿಗಾರರು, ಅಂಕಣ ಬರೆಹಗಾರರು ಮತ್ತು ಆಕಾಶ ವಾಣಿಗಾಗಿ ಶಬ್ದಚಿತ್ರ, ರೂಪಕ, ಗೀತರೂಪಕ ಮೊದಲಾದ ಲೇಖನ ಬರೆಯುವವರು ಬೆಳೆಸುತ್ತಿದ್ದಾರೆ. ಇಂಥವರಲ್ಲಿ ಎನ್ಕೆಯವರದು ಸಿಂಹಪಾಲು.

ಕುಮಾರವ್ಯಾಸ ಎನ್ಕೆಯವರ ಪ್ರೀತಿಯ ಕವಿ. ಇವನನ್ನು ಕುರಿತು ಪಿಎಚ್.ಡಿ. ಪ್ರಬಂಧ ಬರೆಯುವ ಉದ್ದೇಶ ಅವರದಿತ್ತು. ಆದರೆ ಅದು ಆಗಲಿಲ್ಲ ಎಂಬ ದುಃಖ ವಿಲ್ಲ. 'ಕುಮಾರವ್ಯಾಸ ಮತ್ತು ಕೃಷ್ಣ ಕಥೆ', 'ಕುಮಾರವ್ಯಾಸ ಭಾರತ', 'ಕುಮಾರ ವ್ಯಾಸ ನಿಘಂಟು' 'ಗದುಗಿನ ಗಂಡುಕವಿ ಕುಮಾರವ್ಯಾಸ' ಮತ್ತು 'ಕನ್ನಡ ವ್ಯಾಸ ಭಾರತ'— ಹೀಗೆ ಒಂದರ ಮೇಲೊಂದು ಪಾಂಡಿತ್ಯಪೂರ್ಣವಾದ ಗ್ರಂಥಗಳನ್ನು ಎನ್ಕೆ ಯವರು ರಚಿಸಿದ್ದಾರೆ ಮತ್ತು ಇನ್ನೂ ಅನೇಕ ಗ್ರಂಥ ಬರೆಯಲಿದ್ದಾರೆ. ಅವರು ಪಿಎಚ್.ಡಿ. ಆಗದಿದ್ದರೂ ಪಿಎಚ್.ಡಿ. ಅಭ್ಯಾಸ ಮಾಡುವವರಿಗೆ ಕುಮಾರವ್ಯಾಸ ನನ್ನು ಕುರಿತು ವಿಪುಲ ಸಾಹಿತ್ಯ ನಿರ್ಮಿಸಿದ್ದು ಎನ್ಕೆಯವರ ಶ್ರೇಷ್ಠತೆ. ಎನ್ಕೆಯವರ ಮೇಲೆಯೇ ಪಿಎಚ್.ಡಿ. ಪ್ರಬಂಧ ಬರೆಯಬೇಕಾಗುವಷ್ಟು ಸಾಹಿತ್ಯ ಅವರು ಬರೆದದ್ದು ಬಹಳ ದೊಡ್ಡ ಸಿದ್ಧಿ ಎಂದು ನನ್ನ ಅಭಿಪ್ರಾಯ.

ಬೇಂದ್ರೆಯವರಿಗೆ ಒಬ್ಬ ಬಾಸವೆಲ್ ಬೇಕು, ಬೇಂದ್ರೆ ಮಾತನಾಡಿದ್ದನ್ನೆಲ್ಲ ಬರೆದುಕೊಳ್ಳುವರು ಬೇಕು ಎಂದು ಅನೇಕರು ಹೇಳಿದ್ದಾರೆ; ಆದರೆ ಆ ಕಾರ್ಯವನ್ನು ಅತ್ಯಂತ ಪ್ರಾಮಾಣಿಕವಾಗಿ ಮಾಡಿದವರು ಎನ್ಕೆಯವರೊಬ್ಬರೆ. ಅವರ ಈ ಶ್ರಮದ ಒಂದು ಫಲ ಅವರು ರಚಿಸಿದ 'ನಾ. ದ. ಸಂವಾದ' ಎಂಬ ಗ್ರಂಥ. ಅವರು ಮಾಡಿ ಕೊಂಡ ಟಿಪ್ಪಣಿಗಳ ಮೇಲಿಂದ ಇನ್ನೂ ಒಂದು ಗ್ರಂಥ ಅವರು ಬರೆಯಬಹುದಾಗಿತ್ತು. ಆದರೆ ಟಿಪ್ಪಣಿಯ ಕಿರು ಪುಸ್ತಿಕೆಯನ್ನು ಅವರು ಬಸ್‌ಸ್ಟ್ಯಾಂಡಿನಲ್ಲಿ ಕಳೆದುಕೊಂಡರು. ಅದು ಪಡೆದವನಿಗೆ ಏನು ಲಾಭವಾಯಿತೋ! ಆದರೆ ಎನ್ಕೆಯವರು ಮಾತ್ರ ತಮಗೆ ಆದ ನಷ್ಟವನ್ನು ಕುರಿತು ಮರುಗುತ್ತಾರೆ. 'ನಾಕು ತಂತಿ'ಯ ಕೃತಿಗಾರ ಕವಿಗೆ 'ನಾಕು' ಎಂಬಲ್ಲಿಯ ಅಕ್ಷರ, ಶಬ್ದ, ಸಂಖ್ಯೆ ಮೊದಲಿನಿಂದಲೂ ಅತ್ಯಂತ ಪ್ರಿಯ. ಹೀಗಾಗಿ ನಾ. ಕು = ನಾರಾಯಣ ಕುಲಕರ್ಣಿ = ಎನ್ಕೆ ಮತ್ತು ಬೇಂದ್ರೆ ಸಂಬಂಧ ಸಾಮೀಪ್ಯದಿಂದ ಸುಮಧುರವಾಗಿತ್ತು, ಸುಸಹ್ಯವಾಗಿತ್ತು.

ಬೇಂದ್ರೆಯವರಿಗೆ ಎನ್ಕೆಯವರು ದೂರಿಂದ ನಮಸ್ಕಾರ ಮಾಡಲಿಲ್ಲ, ಸುಮ್ಮ ಸುಮ್ಮನೆ ಹೊಗಳಲಿಲ್ಲ, ನಿಮ್ಮ ಮಾತು ತಿಳಿಯೂದಿಲ್ಲಾ ಅನ್ನಲಿಲ್ಲ, ನನಗ ಈಗ ಬೇರೆ ಕೆಲಸ ಅದ ಅಂತ ಹೇಳಿ ಮುಖ ತಪ್ಪಸಲಿಲ್ಲ, ಬೇಂದ್ರೆಯವರ ಕೈಂಹೊಳಗಿಂದ ಪಾರಾ ಗಲು ಬಯಸಲಿಲ್ಲ, ಬೇಂದ್ರೆಯವರು ಸುಮ್ಮನಿರಬೇಕು ತಾವs ಮಾತಾಡಬೇಕು ಅಂತ ಅಪೇಕ್ಷೆ ಪಡಲಿಲ್ಲ, ವಿನಯದಿಂದ ಶೋಭಿಸುವ ಪಾಂಡಿತ್ಯದಿಂದ ಬೇಂದ್ರೆಯವರಿಗೆ ಸಮಕಾಲೀನ ಸಾಹಿತಿಯ ಸಹವಾಸ ಮತ್ತು ಸಂವಾದಸುಖ ಕೊಟ್ಟರು. ಇದರಲ್ಲಿ ಎನ್ಕೆಯವರ ನಿಜವಾದ ಹಿರಿಮೆ ಇದೆ,

ಯಾವುದೇ ಒಬ್ಬ ತರುಣ ಲೇಖಕನ ಲೇಖನ, ಗಾಯಕನ ಗಾಯನ, ನಟನ ಅಭಿನಯ, ಸಜ್ಜನನ ನಡತೆ ಮೆಚ್ಚಿಕೆಯಾದಾಗ ಎನ್ಕೆಯವರು ಆಡುವ ಮಾತುಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದಾಗ ಅವರ ಸ್ಥಾಯೀ ಭಾವ, ಹುಟ್ಟುಗುಣ ವಿನಯ ಎಂಬುದು ಖಚಿತವಾಗದೇ ಹೋಗದು. ಎನ್ಕೆಯವರ ಪಾಂಡಿತ್ಯಕ್ಕೆ ವಿನಯದ ಸುವರ್ಣದ ಚೌಕಟ್ಟು ತೇಜಃಪುಂಜವಾಗಿದೆ.

ನಾನು ವಿವರಿಸದೇ ಇದ್ದ ಎನ್ಕೆಯವರ ಅನೇಕ ವೈಶಿಷ್ಟ್ಯಗಳನ್ನು ಅವರ ಸ್ನೇಹಿತರು, ಸಹಪಾಠಿಗಳು, ಸಮಕಾಲೀನರು ಹೆಚ್ಚು ಆಕರ್ಷಕವಾಗಿ ವಿವರಿಸಬಹುದು. ನಾನು ಹುಟ್ಟಿದ್ದು ೧೯೩೫ರಲ್ಲಿ. ಈ ಹೊತ್ತಿಗೆ ಎನ್ಕೆಯವರು ನೂರು ಏಕಾಂಕಗಳ ನಾಟಕಕಾರರಾಗಿಬಿಟ್ಟಿದ್ದರು. ಇಷ್ಟು ಅಂತರವಿರುವ ನಾನು ಅವರ ೭೧ನೆಯ ಹುಟ್ಟು ಹಬ್ಬದ ಕಾಲಕ್ಕೆ ಅವರಿಗೆ ಅಭಿನಂದನ ಗ್ರಂಥವನ್ನು ಸಮರ್ಪಿಸುವ ಕಾಲಕ್ಕೆ ಒಂದು ಗೌರವದ ನಮನಲೇಖ ಸಲ್ಲಿಸುವ ಅವಕಾಶ ಸಿಕ್ಕಿದ್ದು ಮಹಾಭಾಗ್ಯ!

# ನಮ್ಮ ಸ್ನೇಹಕ್ಕೆ ಈಗಿನ್ನೂ ನಾಲ್ವತ್ತೂರು

**ವ್ಹಿ. ಎಲ್. ಜೋಶಿ**

ಸ್ನೇಹವೆಂಬುದು ನಿಜವಾಗಿಯೂ ನಿರಪೇಕ್ಷ ಅಷ್ಟೇ ಅಲ್ಲ, ಸ್ವಾರ್ಥರಹಿತವೂ ಆಗಿರುತ್ತದೆ. ಕಾರಣ ಅವಕ್ಕೆ ದಾರಿದ್ರ್ಯದ ವಾಸನೆ ಮತ್ತು ಶ್ರೀಮಂತಿಕೆಯ ಗರ್ವ ಎಳ್ಳಿನಷ್ಟೂ ತಟ್ಟಿರುವದಿಲ್ಲ. ಅಧಿಕಾರದ ಅಭಿಲಾಷೆ ಇದ್ದರೆ, ಅದು ಮೈತ್ರಿಯೇ ಅಲ್ಲ. ನಿರ್ಮಲ ಸ್ನೇಹದ ಸ್ನಿಗ್ಧತೆ ಮಾತ್ರ ಚಿರಕಾಲ ಬಾಳುವದು. ಅದು ಜನ್ಮ ಜನ್ಮಾಂತರದ ಸುಕೃತ ಫಲವೇ ಸರಿ. ಆದ್ದರಿಂದಲೇ ಮಹಾಕವಿ ಮತ್ತು ಶ್ರೇಷ್ಠ ನಾಟಕಕಾರನಾದ ಕಾಲಿದಾಸನು ಈ ರೀತಿ ಹೇಳಿದ್ದಾನೆ— ತಚ್ಚೇತಸಾ ಸ್ಮರತಿ ನೂನಮ ಬೋಧಪೂರ್ವಂ। ಭಾವಸ್ಥಿರಾಣಿ ಜನನಾಂತರ ಸುಹೃದಾನಿ।। ಅಭಿಜ್ಞಾನ ಶಾಕುಂತಲ ನಾಟಕದಲ್ಲಿಯ ಈ ಹೇಳಿಕೆ ಎಷ್ಟೊಂದು ಸಾರ್ಥಕವಾಗಿದೆ. ಇಂಥ ಹೇಳಿಕೆ ಸ್ವಾನುಭವದಿಂದ ಮಾತ್ರ ಸಾಧ್ಯ.

ಎನ್ಕೆ ಎಂಬ ಆದರಣೀಯ ಹೆಸರಿನಿಂದ ಖ್ಯಾತರಾದ ಪ್ರಸಿದ್ಧ ಲೇಖಕ ಮತ್ತು ನಾಟಕಕಾರರಾದ ಎನ್ಕೆ ಕುಲಕರ್ಣಿಯವರ ಪರಿಚಯ ಹೀಗೆಯೇ ಸುಮಾರು ನಲವತ್ತು ವರ್ಷಗಳ ಹಿಂದೆ ಆಯಿತು. ಅದೂ ಬೆಳಗಾಂವಿಯಲ್ಲಿ. ಕನ್ನಡ ಮತ್ತು ಸಂಸ್ಕೃತ ಭಾಷೆಗಳನ್ನು ಆಯ್ದುಕೊಂಡು ಎಂ. ಎ. ಪದವಿ ಗಿಟ್ಟಿಸಿದ ನಂತರ ಬಿ. ಟಿ. ಸಲುವಾಗಿ ಅವರು ಇಲ್ಲಿ ಹೊಸದಾಗಿ ಪ್ರಾರಂಭವಾದ ಸರಕಾರೀ ಶಿಕ್ಷಣ ಮಹಾವಿದ್ಯಾಲಯಕ್ಕೆ ಆಗಮಿಸಿದರು. ನಾನು ಅಲ್ಲಿ ಲೈಬ್ರೇರಿಯನ್ ಆಗಿದ್ದೆ. ಆ ಹುದ್ದೆಯಲ್ಲಿ ಇರುವವನಿಗೆ ಪ್ರತಿಯೊಬ್ಬ ವಾಚಕನ ಪರಿಚಯ ಅನಿವಾರ್ಯ. ವಾಚಕನಿಗೂ ಇದು ಅನ್ವಯ. ಆದರೆ ಗೆಳೆತನ ಎನ್ನುವದು ಕೆಲವರೊಂದಿಗೆ ಮಾತ್ರ ಉಳಿಯುತ್ತದೆ. ಮಹಾಗ್ರಂಥಗಳ ಮಧ್ಯದಲ್ಲಿ ವಿಶ್ವಕೋಶದ ಪರಿಚಯ ಆದಂತೆ ಎನ್ಕೆ ಅವರ ಪರಿಚಯವಾಯಿತು. ಪರೀಕ್ಷೆ ಮುಗಿಸಿ ಅವರು ಧಾರವಾಡಕ್ಕೆ ಹೋದರು. ನಾನು ಅಲ್ಲಿಯೇ ಉಳಿದೆ. 'ಉದರ ನಿಮಿತ್ತಂ ಬಹುಕೃತ ವೇಷಂ' ಎಂಬಂತೆ ಅವರು ಅಖಿಲಭಾರತ ಆಕಾಶವಾಣಿಯಲ್ಲಿ ನೌಕರಿ ಪ್ರಾರಂಭಿಸಿದರು. ಅವರ ಕಾರ್ಯಕ್ಷೇತ್ರ ಈ ನಿಮಿತ್ತದಿಂದ ಧಾರವಾಡ, ಮುಂಬೈ ಮತ್ತು ಬೆಂಗಳೂರೆಡೆಗೆ ವ್ಯಾಪಿಸಿತು. ಈ ಸಂದರ್ಭದಲ್ಲಿ ನಮ್ಮಿಬ್ಬರ ಸಂಪರ್ಕ ಕಡಿಮೆಯಾಯಿತು. ನೌಕರಿಯ ಕೆಸರಿನಲ್ಲಿ ಕುತ್ತಿಗೆಯ ವರೆಗೆ

ಸಿಕ್ಕಿಹಾಕಿಕೊಂಡಿದ್ದರಿಂದ ನಮ್ಮಿಬ್ಬರಲ್ಲಿ ಪೂರ್ಣ ಅಗಲಿಕೆಯಾಯಿತು. ಪತ್ರ ವ್ಯವಹಾರ ವಾವರೂ ಎಲ್ಲಿಯದು? ಜೀವನ ವ್ಯವಹಾರವೇ ಸಾಕಷ್ಟಿತ್ತು, 'ಯಥಾ ಕಾಷ್ಠಂ ಚ ಕಾಷ್ಠಂ ಚ' ಎಂಬಂತೆ.

ಆದರೆ ನಮ್ಮಲ್ಲಿ ಈ ಸುಭಾಷಿತ ಸೋಲೊಪ್ಪಿದಂತಾಗಿ ನಮ್ಮ ಗೆಳೆತನ ಮೂವತ್ತೈದು ವರ್ಷಗಳ ದೀರ್ಘ ಮಾನದ ನಂತರ ಮತ್ತೆ ಚಿಗುರಿತು. ಹಾಗೆ ಹೇಳುವದಾದರೆ ಅದು ಸರಸ್ವತಿ ನದಿಯಂತೆ ಗುಪ್ತಗಾಮಿನಿಯಾಗಿ ಪ್ರವಹಿಸುತ್ತಲೇ ಇತ್ತು. ಅದು ಕವಲೊಡೆದು ಹೆಮ್ಮರವಾಗಿ ಬೆಳೆಯಲು ಕಾರಣಪುರುಷರೆಂದರೆ ಕವಿ ಚಕ್ರವರ್ತಿ ಅಂಬಿಕಾತನಯದತ್ತರೇ ಎಂದು ಹೇಳಲೇಬೇಕಾಗುತ್ತದೆ. ಜ್ಞಾನಪೀಠ ಪ್ರಶಸ್ತಿ ಪಡೆದ ಅವರ 'ನಾಕುತಂತಿ' ಮರಾಠಿ ಅನುವಾದದ ನಿಮಿತ್ತ ನಾನು ಡಾ. ಬೇಂದ್ರೆಯವರ ನಿಕಟವರ್ತಿಯಾದೆ. ಆಗ ಎನ್ಕೆ ಅವರ ಸಾನ್ನಿಧ್ಯ ಸುಖ ತಾನಾಗಿ ಒದಗಿ ಬಂತು. ಉಷೆಯೊಡನೆ ಹರುಷ ಬಂದಂತೆ. ಡಾ. ಬೇಂದ್ರೆ ಆಕಾಶದಷ್ಟು ಭವ್ಯ ಮತ್ತು ದಿವ್ಯವಾದರೆ ಎನ್ಕೆ ಧರೆಯಂತೆ ಕೋಮಲ, ಕುಸುಮ ಹೃದಯವಂತರು. ನನಗೆ ಧನ್ಯೋऽಸ್ಮಿ ಎಂದೆನಿಸಿತು.

ಒಂದು ದಿನ ಆಕಸ್ಮಾತ್ತಾಗಿ ನಾಲ್ಕು ಜನರೊಂದಿಗೆ ಡಾ. ಬೇಂದ್ರೆಯವರು ನಮ್ಮ ಮನೆಗೆ ಬಂದರು. ಕಾಗವಾಡಕ್ಕೆ ನನ್ನನ್ನು ಕರೆದೊಯ್ದು ಬ್ರಹ್ಮಾನಂದ ಸ್ವಾಮಿಯವರ ಪುಣ್ಯ ಸಮಾರಂಭದಲ್ಲಿ ಪಾಲ್ಗೊಳ್ಳುವ ಅವಕಾಶ ಒದಗಿಸಿಕೊಟ್ಟರು. ಬಂದ ನಾಲ್ವರಲ್ಲಿ ನಮ್ಮ ಎನ್ಕೆ ಅವರೂ ಒಬ್ಬರು. ನಾನು ಅವರನ್ನು ಗುರುತಿಸಿದೆ. ಆದರೆ ಅವರಿಗೆ ನನ್ನ ಗುರುತು ಸಿಗಲಿಲ್ಲ. ಕೆಲವು ಪ್ರಸಂಗಗಳಲ್ಲಿ ಇವು ಸ್ವಾಭಾವಿಕ. ಕಾರಣ ನಾನೇ ನನ್ನನ್ನು ಪರಿಚಯಿಸಿಕೊಂಡೆ. ಅವರಿಗೆ ಅತ್ಯಾನಂದವಾಗಿ ಓಹೋ ಆ ಜೋಶಿ ನೀವೇ ಏನು? ಈ ಮಹಾಕವಿಯ ಶಿಷ್ಯರೇನು? ಎಂಬ ಉದ್ಗಾರ ತಾನೇ ತಾನಾಗಿ ಬಂದಿತು. ಸ್ನೇಹಕ್ಕೆ ಮತ್ತೆ ಪುನರ್ಜನ್ಮ ಒದಗಿತು.

'ನಾಕುತಂತಿ'ಯ ಅನುವಾದದ ನಿಮಿತ್ತ ಮತ್ತೆ ಆ ನಂತರ ಕೂಡ ನಾನು ಮಹಾ ಕವಿ ಬೇಂದ್ರೆಯವರನ್ನು ಕಾಣಲು ಧಾರವಾಡಕ್ಕೆ ಹೋಗುತ್ತಿದ್ದೆ. ಬೇಂದ್ರೆಯವರ ಮನೆ 'ಶ್ರೀಮಾತಾ' ನನಗೆ ಶ್ರದ್ಧಾಸ್ಥಾನ. ಈ ಪವಿತ್ರ ಶ್ರದ್ಧಾಸ್ಥಾನವೇ ನಮ್ಮಿಬ್ಬರ ಗೆಳೆತನದ ಅಭಿವೃದ್ಧಿಗೆ ಕಾರಣ. ಮೊದಮೊದಲು ನಾನು ಎನ್ಕೆಯವರ ಕಡೆಗೆ ಹೋಗು ತ್ತಿದ್ದೆ. ಅಲ್ಲಿ ವಿಶ್ರಾಂತಿ, ಕಾವ್ಯಶಾಸ್ತ್ರ-ವಿನೋದಗಳಾದ ಮೇಲೆ ನಮ್ಮಿಬ್ಬರ ಸವಾರಿ ಬೇಂದ್ರೆಯವರ ಕಡೆಗೆ ಧಾವಿಸುತ್ತಿತ್ತು. ಅಲ್ಲಿ ಮಹಾಕವಿ ಬೇಂದ್ರೆಯವರು ಮಾತ ನಾಡುವದು, ನಾವು ಕೇಳುವದು ಅವ್ಯಾಹತವಾಗಿ ಸಾಗುತ್ತಿತ್ತು. ಆ ಅಮೃತವಾಣಿಯ ಶ್ರವಣದಲ್ಲಿಯೇ ನಾವು ಧನ್ಯರಾಗುತ್ತಿದ್ದೆವು. ಕಾವ್ಯದ ಬಗ್ಗೆ ವಿಮರ್ಶೆ ಮತ್ತು ಸಂಖ್ಯಾಶಾಸ್ತ್ರದ ಅವರ ವಿವೇಚನೆ ನಮ್ಮ ತಲೆಯ ಮೇಲಿಂದ ಹಾಯ್ದು ಹೋದರೂ ಅವರ ಯಾವುದೋ ಗಾರುಡಿಗ ಶಕ್ತಿ ನಮ್ಮನ್ನು ಗಟ್ಟಿಯಾಗಿ ಕೂಡ್ರಿಸುತ್ತಿತ್ತು. ಈ

ತರಹದ ವಿಲಕ್ಷಣ ಸಂಮ್ಮೋಹನ ಶಕ್ತಿ ಅವರ ವಾಣಿಯಲ್ಲಿತ್ತು. ಶಬ್ದಸೃಷ್ಟಿಯ ಬ್ರಹ್ಮ ಅವರು.

ಎನ್ಕೆ ಅವರು ಶ್ರೇಷ್ಠ ಸಾಹಿತ್ಯಕಾರರಾದರೆ ನಾನೊಬ್ಬ ಸಾಹಿತ್ಯದಲ್ಲಿ ಆಸಕ್ತಿಯುಳ್ಳ ಸಾಮಾನ್ಯ ಮನುಷ್ಯ. ಒಂದು ದಿನ ತಮ್ಮ ಕೃತಿ 'ಪ್ರಾಣ ತುಂಬಿದ ಪಾತ್ರ' ಎಂಬ ಪುಸ್ತಕವನ್ನು ನನ್ನ ಕಡೆಗೆ ಕಳುಹಿಸಿ ಅದರ ಅನುವಾದವನ್ನು ಮರಾಠಿಯಲ್ಲಿ ಮಾಡಬೇಕೆಂದು ತಿಳಿಸಿದರು. ಇದೊಂದು ನನಗೆ ನುಂಗಲಾರದ ತುತ್ತು. ಏಕೆಂದರೆ ನಾಕುತಂತಿಯ ಮರಾಠಿ ಅನುವಾದವನ್ನು ನಿಯತಿಯೇ ನನ್ನ ಕಡೆಯಿಂದ ಮಾಡಿಸಿಕೊಂಡಿತು. ನಾನು ಸ್ವತಃ ಅದನ್ನು ಮಾಡಿದೆನೆಂಬ ಅನಿಸಿಕೆ ಈಗಲೂ ನನ್ನ ಬಳಿ ಸುಳಿಯದು. ಅದ್ದರಿಂದ 'ಗಂಡಸ್ಯೋಪರಿ ಪೀಟಿಕಾ ಸಂವೃತ್ತಾ' ಎಂಬಂತೆ ನನ್ನ ಸ್ಥಿತಿಯಾಯಿತು. ಆ ಪುಸ್ತಕವನ್ನು ಕೆಲ ದಿನಗಳವರೆಗೆ ಹಾಗೆಯೇ ಇಟ್ಟುಬಿಟ್ಟೆ. ಆದರೆ ಮಿತ್ರಕಾರ್ಯ ಎಷ್ಟು ದಿವಸ ಮುಂದೂಡುವದು? ದೇವರ ಹೆಸರು ತೆಗೆದುಕೊಂಡು ಅನುವಾದ ಕಾರ್ಯ ಪ್ರಾರಂಭಿಸಿದೆ. ಅದು ಪೂರ್ತಿಯಾದ ಮೇಲೆ ಅದನ್ನು ಎನ್ಕೆ ಅವರಿಗೆ ಒಪ್ಪಿಸಿದೆ. ಅವರಿಗೆ ಹೃದಯ ತುಂಬ ಆನಂದ. ನನ್ನನ್ನು ಡಾ. ಬೇಂದ್ರೆಯವರ ಕಡೆಗೆ ಕರೆದೊಯ್ದರು. ಕವಿವರ್ಯರು ಕೃತಿಯನ್ನು ಅವಲೋಕಿಸಿ ಅನುವಾದದ ಸಾಹಿತ್ಯ ಗರಿಷ್ಠತೆಗೆ ತಲೆದೂಗಿ ಮನವಾರೆ ಹರಸಿದಾಗ ನನಗೂ ಹೆಮ್ಮೆ ಎನಿಸಿತು. ಈ ಇಬ್ಬರೂ ಸಾಹಿತ್ಯಕ ದಿಗ್ಗಜರ ಪರೀಕ್ಷೆಯಲ್ಲಿ ನಾನು ಉತ್ತೀರ್ಣನಾಗಿದ್ದೆ. ಈಗ ಬೇಂದ್ರೆಯವರು ಇಲ್ಲ. ಅವರು ಇನ್ನಿಲ್ಲ ಎನ್ನುವ ಶಬ್ದ ನನ್ನ ನಾಲಿಗೆಯನ್ನೇ ಕತ್ತರಿಸಿ ಹಾಕುವದು. ಅವರನ್ನು ಅವರ ಅಮರ ಕಾವ್ಯಗಳಲ್ಲಿ ಇನ್ನೂ ನೋಡಬಹುದು.

ಸುಖದುಃಖಗಳಿಂದ ತುಂಬಿದ ಈ ಮಾನವ ಜೀವನದಲ್ಲಿ ಸುಖಕ್ಕಿಂತ ದುಃಖವೇ ಹೆಚ್ಚು. ಬಾಳಿನಲ್ಲಿ ಎನ್ಕೆಯವರಿಗೆ ಸಂಕಟಗಳು ಒಂದರ ಮೇಲೊಂದರಂತೆ ಬಂದು ಅಪ್ಪಳಿಸಿದರೂ ಅವುಗಳನ್ನೆಲ್ಲ ಈಶ್ವರೀಯ ಕೃಪಾ ಪ್ರಸಾದವೆಂದು ನುಂಗಿ ಮುಂದೆ ಧೀಮಂತ ಹೆಜ್ಜೆಯಲ್ಲಿ ಸಾಗುತ್ತಿದ್ದಾರೆ. ಮೊದಲ ಪತ್ನಿಯನ್ನು ಕಳೆದುಕೊಂಡು ಎರಡನೇ ಮದುವೆಯಾದರೂ ಅದೂ ದುರಂತದಲ್ಲಿ ಕೊನೆಗೊಂಡಿತು. ವಿಧುರಾವಸ್ಥೆಯನ್ನು ಒಂದು ವರದಾನವೆಂದು ತಿಳಿದುಕೊಂಡ ಅವರು ಸರಸ್ವತಿಯ ಉಪಾಸನೆಯನ್ನು ತನ್ಮಯತೆಯಿಂದ ಪ್ರಾರಂಭಿಸಿದರು. ಸಾಹಿತ್ಯ ಸೇವೆಯಲ್ಲಿ ಬ್ರಹ್ಮಾನಂದವನ್ನು ಕಾಣಬೇಕೆನ್ನುವ ಹಂಬಲ ಇಟ್ಟುಕೊಂಡವರು. ಅವರ ವಿನೋದಪೂರ್ಣ ಲೇಖನ ಶೈಲಿಯಿಂದ ಸಾಹಿತ್ಯಕ್ಷೇತ್ರದಲ್ಲಿ ಒಂದು ವೈಶಿಷ್ಟ್ಯಪೂರ್ಣವಾದ ಸ್ಥಾನ ಅವರಿಗೆ ಲಭ್ಯವಾಗಿದೆ. ಅವರ ಸಾಹಿತ್ಯದ ಹೊನಲಿಗೆ ಅತ್ಯಂತ ಆಳವಾದ ಜೀವನ ವಿಮರ್ಶೆ ಇರುವದು.

ಇತ್ತೀಚೆಗೆ ಅವರು ಧಾರವಾಡದಲ್ಲಿ ನೆಲೆಸಿದರೂ ಕೂಡ ಅವರು ಮೂಲತಃ

ಗದಗಿನವರು. 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಈ ಕರ್ನಾಟಕ ಗೀತೆಯ ಕರ್ತೃ ನಾರಾಯಣರಾವ ಹುಯಿಲಗೋಳ ಅವರ ಊರಿನವರು. ಗದುಗಿನ ವೀರನಾರಾಯಣ ಎನ್ಕೆ ಅವರ ಆರಾಧ್ಯ ದೈವ. ವೀರನಾರಾಯಣನೆಂದರೆ ಕುಮಾರವ್ಯಾಸನ ಸ್ಫೂರ್ತಿದೇವರೂ ಅಹುದು. ಅವರು ಕುಮಾರವ್ಯಾಸನ ಮೇಲೆ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಕುಮಾರವ್ಯಾಸನ ನಿಘಂಟು ಎನ್ನುವದು ಕನ್ನಡ ಸಾಹಿತ್ಯಕ್ಕೆ ಒಂದು ಅಪೂರ್ವವಾದ ಕೊಡುಗೆಯಾಗಿದೆ. 'ಕವಿ ಚಿರಂಜೀವಿ' ಎಂಬ ಕುಮಾರವ್ಯಾಸನ ಕುರಿತ ಏಕಾಂಕವು ಅತ್ಯಂತ ಸುಂದರವಾಗಿದೆ. ಕವಿಯ ಬಗ್ಗೆ ಇರುವ ಲೋಕಪ್ರಿಯತೆಯನ್ನು ಎನ್ಕೆ ಇಲ್ಲಿ exploit ಮಾಡಿಕೊಂಡಿದ್ದಾರೆ. ಕಥೆ, ಕಾದಂಬರಿ, ಹರಟೆ, ಚರಿತ್ರೆ, ಜೀವನ ಚರಿತ್ರೆ ಮುಂತಾದ ಸಾಹಿತ್ಯದ ಎಲ್ಲ ಕ್ಷೇತ್ರಗಳಲ್ಲಿ ಅನಿರ್ಬಂಧ ವಾಗಿ ಸಂಚರಿಸಿದರೂ ಮುಖ್ಯವಾಗಿ ನಾಟಕಕಾರರೆಂದೇ ಹೆಸರು ಗಳಿಸಿದ್ದಾರೆ.

"ಜೋಶಿಯವರೇ ತಿಂಗಳಿಗೊಮ್ಮೆಯಾದರೂ ನಾವು ಭೆಟ್ಟಿಯಾಗಬೇಕು. ನಾಲ್ಕು ದಿನ ನೀವು ನನ್ನ ಕಡೆ ಬರಬೇಕು, ನಾಲ್ಕು ದಿನ ನಾನು ನಿಮ್ಮ ಕಡೆಗೆ ಬರಬೇಕು. ಅಂದರೆ ಕೆಲವು ಕಾಲವಾದರೂ ಈ ತಾಪತ್ರಯಗಳನ್ನು ಮರೆತು ಆನಂದವಾಗಿ ಕಳೆಯ ಬಹುದು" ಎಂದು ಭೆಟ್ಟಿಯಾದಾಗ ನನಗೆ ಉಸುರುತ್ತಾರೆ. ನನ್ನದೇನೂ ಅಭ್ಯಂತರ ಇಲ್ಲ. ಕಾರಣ ಸಾಹಿತ್ಯ ಪ್ರಪಂಚದ ಜಂಜಾಟ ನನಗಿಲ್ಲ. ಅವರದು ತದ್ವಿರುದ್ಧ. ಅವರಿಂದ ಇನ್ನೂ ಅನೇಕ ಸಾಹಿತ್ಯ ಕೃತಿಗಳು ಹೊರಬರಬೇಕಾಗಿವೆ. ಮೇಲಾಗಿ ಸಾಹಿತ್ಯ ಲೋಕಕ್ಕೆ ಕಡ್ಡಾಯವಾಗಿ ಬೇಕಾದ ವ್ಯಕ್ತಿ ಅವರು. ಕಾರಣ ಎಷ್ಟೇ ಇಚ್ಛೆ ಇದ್ದರೂ ನಾನು ಅವರಲ್ಲಿಗೆ ಹೋಗುವದನ್ನು ತಪ್ಪಿಸುತ್ತೇನೆ. ಅವರಿಂದ ಅಖಂಡ ಸಾಹಿತ್ಯಸೇವೆ ನಡೆಯಬೇಕು, ಅದರ ಲಾಭ ನಮ್ಮಂತಹ ಅಭಿಮಾನಿಗಳಗೆ ದೊರಕ ಬೇಕೆಂದು ನನ್ನ ಮಹದಾಸೆ. ಈಗಾಗಲೇ ಅವರು ಡಾ. ವಿ. ಕೃ. ಗೋಕಾಕರ ಜೀವನ ಚರಿತ್ರೆ ಸಾಹಿತ್ಯ ಸಮೀಕ್ಷೆಯನ್ನು ಮುಗಿಸುವ ಹಂತದಲ್ಲಿದ್ದಾರೆ. ತಮ್ಮ ಆತ್ಮಚರಿತ್ರೆ ಯನ್ನು ಬರೆಯುತ್ತಿದ್ದಾರೆ ಎಂದೂ ಕೇಳಿದ್ದೇನೆ. ಅದು ಅವರ ಒಂದು ಅಮರ ಕಲಾ ಕೃತಿಯಾಗುವುದೆಂದು ನನ್ನ ನಂಬಿಕೆ.

ಮೇಲಿಂದ ಮೇಲೆ ಪತ್ರ ಬರೆಯದಿದ್ದರೆ ಅವರಿಗೆ ಅಸಮಾಧಾನವಾಗುತ್ತದೆ. ಕಾರಣ ನಾನು ಸಿಕ್ಕಷ್ಟು ಸಮಯದಲ್ಲಿ ಕಾಗದ ಬರೆಯುತ್ತಿರುತ್ತೇನೆ. ನನ್ನ ಓಲೆ ಮುಟ್ಟಿದ ಮರುದಿನವೇ ಅವರಿಂದ ಸುದೀರ್ಘ ಉತ್ತರ ಬರುತ್ತದೆ. ಈ ಪತ್ರದಲ್ಲಿ ವ್ಯಕ್ತವಾಗುವ ನನ್ನ ಮೇಲಿನ ಅವರ ಅಭಿಮಾನ, ಮಮತೆ, ವಾತ್ಸಲ್ಯ ನೋಡಿ ನಾನು ತತ್ತರಿಸಿ ಹೋಗುತ್ತೇನೆ. ನಾವು ಭೆಟ್ಟಿಯಾಗದೇನೇ ಭೆಟ್ಟಿಯಾಗುತ್ತೇವೆ, ಮಾತನಾಡ ದೆಯೇ ಮಾತನಾಡುತ್ತೇವೆ. ಅಖಂಡವಾಗಿ ಒಂದು ತರಹದ ಟೆಲಿಪಥಿ ಇದೆ ನಮ್ಮಿಬ್ಬ ರಲ್ಲಿ. "ವ್ಯತಿಷಜತಿ ಪದಾರ್ಥಾನ್ ಆಂತರಃ ಕೋsಪಿಹೇತುಃ। ನ ಖಲು ಬಹಿರು

ಪಾಧೀನ್ ಪ್ರೀತಯಃ ಸಂಶ್ರಯಂತೇ||" ಎಂಬ ಭವಭೂತಿಯ ವಾಣಿಯಂತೆ ನಮ್ಮ ಮೈತ್ರಿಯಿದೆ.

ಋಜುತೆಗೆ ಇನ್ನೊಂದು ಹೆಸರೆಂದರೆ ಎನ್ಕೆ. ಅವರ ಆ ಸೌಜನ್ಯ, ಮಿತ್ರನ ಸಲುವಾಗಿ ತಮ್ಮ ಜೀವನವನ್ನೇ ಧಾರೆಯೆರೆಯುವ ಅವರ ಪ್ರವೃತ್ತಿ ಇವೆಲ್ಲಾ ಅವಿಸ್ಮರಣೀಯವಾಗಿವೆ. ಅವುಗಳನ್ನು ಅನುಭವಿಸಿದ ಅನುಭವಿಕ ನಾನಾಗಿದ್ದೇನೆ.

ಇನ್ನು ಕೆಲವೇ ದಿನಗಳಲ್ಲಿ ಅವರು ಎಪ್ಪತ್ತೊಂದರಲ್ಲಿ ಕಾಲಿಡುವರು. ಭಗವಂತನು ಅವರನ್ನು 'ಜೀವೇತ ಶರದಃ ಶತಂ' ಮಾಡಬೇಕು. ಅದರಂತೆ ಮುಂದೆ ಸಹ ಅಖಂಡವಾಗಿ ಸಾಹಿತ್ಯಸೇವೆ ಮುಂದುವರಿಸಬೇಕೆಂದು ನನ್ನಂತಹ ಅವರ ಅಭಿಮಾನಿಗಳ ಇಚ್ಛೆ ಹಾಗೂ ಅಪೇಕ್ಷೆ.

# ನಮ್ಮ ಸಹಜೀವನ

ಜಿ. ವ್ಹಿ. ಹಿರೇಮಠ

ನಾನು ಹೈಸ್ಕೂಲಿನಲ್ಲಿ ಕಲಿಯುತ್ತಿದ್ದಾಗಿನಿಂದ ಹಿಡಿದು ಎನ್ಕೆಯವರು ನಿವೃತ್ತಿ ಹೊಂದುವವರೆಗೂ ಕೂಡಿ ಬಾಳಿದವರು. ಗದುಗಿನ ಮುನ್ಸಿಪಲ್ ಹೈಸ್ಕೂಲಿಲ್ಲಿ ನಾನು ವಿದ್ಯಾರ್ಥಿಯಾಗಿದ್ದಾಗ ಶ್ರೀಮಾನ್ ಎನ್.ಕೆ, ಕುಲಕರ್ಣಿಯವರು ಸಮಿತಿ ಹೈಸ್ಕೂಲಿನಲ್ಲಿ ಮೇಸ್ಟ್ರು ಆಗಿದ್ದರು. ಆಗ ಅಲ್ಲಿ ಎನ್ಕೆಯವರು ಕಾಲೇಜ ವಿದ್ಯಾರ್ಥಿಯಾಗಿ ಬರೆದ ಇಲೆಕ್ಶನ್ ಎಂಬ ನಾಟಕವ (ಪರಿಷತ್ತಿನ ವಸಂತೋತ್ಸವದಲ್ಲಿ ಗದುಗಿನಲ್ಲಿ) ಪ್ರಯೋಗ ಮಾಡಿದಾಗ ಅವರ ಪರಿಚಯವಾಯಿತು. ಅದೇ ಸಮಯದಲ್ಲಿ ಸಮಾರಂಭವೊಂದಕ್ಕೆ ವಿ. ಸೀತಾರಾಮಯ್ಯನವರು ಮುಖ್ಯ ಅತಿಥಿಗಳಾಗಿದ್ದರಲ್ಲದೆ ಬಿ. ಎಂ. ಶ್ರೀಕಂಠಯ್ಯನವರು ಅಧ್ಯಕ್ಷರಾಗಿರುವಾಗ ಅವರ ಸಮ್ಮುಖದಲ್ಲಿ ನಡೆದ 'ನವಜೀವನ' ನಾಟಕದಲ್ಲಿ ಪಾತ್ರ ಮಾಡುವ ಯೋಗ ನನಗೆ ದೊರೆಯಿತು. ಆಮೇಲೆ ನಾನು ಶಾಂತಿನಿಕೇತನದಲ್ಲಿ ಕೆಲವು ದಿನ ಕಳೆದೆ. ಎನ್ಕೆ ಅವರ ಮುತುವರ್ಜಿಯಿಂದ ಮದ್ರಾಸದಲ್ಲಿದ್ದ ನಾಟ್ಯಾಚಾರ್ಯ ಶ್ರೀನಿವಾಸ ಕುಲಕರ್ಣಿ ಅವರನ್ನು ಗುರುವನ್ನಾಗಿ ಸ್ವೀಕರಿಸಿ ಹನ್ನೆರಡು ವರ್ಷಗಳ ವರೆಗೆ ನೃತ್ಯಕಲೆ ಕಲಿತು ಅವರ ನಾಟ್ಯ ಮಂಡಳಿಯೊಂದಿಗೆ ಮಲಯಾ, ಬರ್ಮಾ ಸಿಂಗಾಪೂರ, ಸಿಲೋನ ಇತ್ಯಾದಿ ಸ್ಥಳಗಳನ್ನು ಸುತ್ತಾಡಿ ಬಂದಾಗ ಅಂತರ್ರಾಷ್ಟ್ರೀಯ ಮಟ್ಟದ ಒಂದು ಪರಿಣತಿ ನನಗೆ ಉಂಟಾಗಿದ್ದರಿಂದ ನನ್ನ ಕಲಾಸಕ್ತಿಯನ್ನು ಕಂಡುಕೊಂಡ ಎನ್ಕೆಯವರು ನನಗೆ ಆಕಾಶವಾಣಿಯಲ್ಲಿ ಪ್ರಸಾರಗೊಳ್ಳುವ ನಾಟಕಗಳಿಗೆ, ಕರಾರು ಒಪ್ಪಂದದ ಮೇಲೆ ಕೆಲವು chance ಗಳನ್ನು ನೀಡಿದರು. ಆಮೇಲೆ ಕ್ರಮೇಣ ನನ್ನನ್ನು ಅನೌನ್ಸರ್ ಹುದ್ದೆಗೆ ನೇಮಿಸಲು ಸಹಾಯ ಮಾಡಿದರು. ಹೀಗಾಗಿ ೧೯೫೧ ರಲ್ಲಿ ನಾನು ಅನೌನ್ಸರ್ ಎಂದು ನೇಮಕಗೊಂಡ ಕೀರ್ತಿ ಎನ್ಕೆಯವರಿಗೆ ಸಲ್ಲುತ್ತದೆ. ಅವರಿಲ್ಲದಿದ್ದರೆ ನನ್ನ ನೇಮಕಾತಿ ಆಗುತ್ತಿತ್ತೋ ಇಲ್ಲವೋ ಗೊತ್ತಿಲ್ಲ.

ನಾನು ನಾಟಕ ಜೀವನವನ್ನು ಹೆಚ್ಚು ಕಳೆದಿದ್ದರಿಂದ ಅನೌನ್ಸ್‌ಮೆಂಟ್ ಹೇಗೆ ಮಾಡಬೇಕೆಂದೂ ಅದು ಹೇಗಿರಬೇಕು ಇತ್ಯಾದಿಯಾಗಿ ವಿವರಿಸಿ ಹೇಳುತ್ತ 'ಅನೌನ್ಸರ್ ಅಂದರ ಸೇಲ್ಸ್‌ಮನ್ ಇದ್ದಾಂಗ ಇರಬೇಕು ನೋಡು' ಎಂದು ಹೇಳುತ್ತಿದ್ದರು.

ಸೇಲ್ಸ್‌ಮನ್ ಗಿರಾಕಿಗಳ ಮನಸ್ಸನ್ನು ಆಕರ್ಷಿಸಲು ಹೇಗೆ ಮಾತನಾಡುತ್ತಾನೋ ಹಾಗೆ ಕೇಳುಗರ ಮನಸ್ಸನ್ನು ಸೆರೆ ಹಿಡಿಯುವಂತೆ ಮಾತನಾಡುವುದು ಅನೌನ್ಸರರಗಿರಬೇಕಾದ ಲಕ್ಷಣ ಎಂದು ಪರಿಯಾಗಿ ತಿಳಿಸಿ ಹೇಳಿದರು. ಶ್ರೋತೃಗಳಿಗೆ ಸಾಹಿತ್ಯದ ಬಗ್ಗೆ ಒಳ್ಳೆಯ ಒಲವು ಉಂಟಾಗುವಂತೆ ಮಾಡಿದ ಎಸ್ಕೆಯವರ ಪ್ರಯತ್ನ ಅತ್ಯಂತ ಹೆಮ್ಮೆಯ ವಿಷಯ. ಏಕೆಂದರೆ ಸಾಹಿತ್ಯದ ವಿಷಯಕವಾಗಿ ಹೆಚ್ಚಿನ ಅನುಭವ ನನಗಿರದಿದ್ದರೂ, ನನ್ನಂತಿರುವ ಜನರಿಗೂ ಮನಮುಟ್ಟುವಂಥ ಸಾಹಿತ್ಯದ ಮಾಧುರ್ಯವನ್ನು ಕಂಡು ಕಲಿಸಿಕೊಟ್ಟ ಅವರು ಗೌರವಾರ್ಹರು. ಅವರು ಕೇವಲ ತಮ್ಮ ಅಧಿಕಾರವ ಕೆಲಸವನ್ನು ಮಾಡದೇ ಆಕಾಶವಾಣಿಯಲ್ಲಿ ಪ್ರಸಾರವಾಗುತ್ತಿದ್ದ ಎಲ್ಲ ಕಾರ್ಯಕ್ರಮಗಳಲ್ಲಿಯೂ ಭಾಗವಹಿಸುತ್ತಿದ್ದರು. ವಿಶೇಷವಾಗಿ ಕುಮಾರವ್ಯಾಸ ಭಾರತದ ಮೇಲೆ ನೀಡಿದ ಅವರ ವಿವರಣೆ ಬಹಳ ಅರ್ಥಪೂರ್ಣ ಹಾಗೂ ಸ್ವಾರಸ್ಯವಾದದ್ದೆಂದು ಅನೇಕ ಶ್ರೋತೃಗಳು ಬರೆದು ವ್ಯಕ್ತಪಡಿಸಿದ್ದು ನನಗೆ ಇನ್ನೂ ನೆನಪಿದೆ.

ನಾನಿ, ಗುರಣ್ಣ ಮತ್ತು ಪ್ರಭಕ್ಕ ಅವರನ್ನೊಳಗೊಂಡ 'ಗೃಹಗೋಷ್ಠಿ' ಕಾರ್ಯಕ್ರಮವು ನನ್ನ ಹಾಗೂ ಎಸ್ಕೆಯವರ ಹೆಚ್ಚಿನ ಬಾಂಧವ್ಯಕ್ಕೆ ಮತ್ತು ಆತ್ಮೀಯತೆಗೆ ಕಾರಣವಾಯಿತು. ಯಾಕೆಂದರೆ ಅವರು ಒದಗಿಸುತ್ತಿದ್ದ ಸಾಹಿತ್ಯ ಹೃದಯಸ್ಪರ್ಶಿಯಾದಂಥದ್ದು ಆಗಿತ್ತು. ನನ್ನ ಆಕಾಶವಾಣಿಯ ಸೇವೆಯಲ್ಲಿ ನಾನು ಕಂಡ ಬಹಳ ಜನ ಕಾರ್ಯಕ್ರಮ ನಿಷ್ಪಾದಕರು ಕಾರ್ಯಕ್ರಮದಲ್ಲಿ ಏನಾದರೂ ಹೆಚ್ಚು ಕಡಿಮೆಯಾದಾಗ ಸಿಟ್ಟಿಗೇಳುವ ಸ್ವಭಾವದವರಾಗಿದ್ದರು, ಆದರೆ ಅವರೆಲ್ಲರಿಗೂ ಎಸ್ಕೆಯವರು ಅಪವಾದವಾಗಿದ್ದರು. ಅವರು ಎಂದೂ ಸಿಟ್ಟಿಗೆದ್ದುದನ್ನು ನಾನು ಕಾಣಲಿಲ್ಲ. ಪ್ರೇಮದಿಂದ ಹೆಚ್ಚಿನ ಕೆಲಸ ತೆಗೆದುಕೊಳ್ಳುತ್ತಿದ್ದರು. ಹೇಳಬೇಕಾದ ಎಲ್ಲವನ್ನೂ ಪ್ರೀತಿಯಿಂದ ಹೇಳಿ ಮನವರಿಕೆಯಾಗುವಂತೆ ತಿಳಿಸುತ್ತಿದ್ದುದು ಅವರ ಸ್ವಭಾವದ ಹೇಮ ವರ್ಣವಾಗಿದೆಯೆಂದು ಹೇಳಬಹುದು. ಜಯಾಪಜಯಗಳನ್ನು ಲಕ್ಷಿಸದೇ ಕಾರ್ಯಪ್ರವೃತ್ತಿಯಾಗುವದೇ ಅವರ ಜಯಕ್ಕೆ ಕಾರಣವಾಯಿತು.

ಅವರು ಒಳ್ಳೆಯ ಗುಣಗ್ರಾಹಿಯೂ ಆಗಿದ್ದರು. ಇದಕ್ಕೆ ಉದಾಹರಣೆಯಾಗಿ ನನ್ನದನ್ನೇ ನಿರೂಪಿಸಬೇಕೆಂದರೆ ನಾನು ನಾಟಕರಂಗಕ್ಕೆ ಪ್ರವೇಶಿಸುವ ಮುನ್ನ ನಮ್ಮ ಮನೆಯಲ್ಲಿ ಸಂಪ್ರದಾಯಸ್ಥರಾದ ನಮ್ಮ ಸಹೋದರರು, ಹಿರಿಯರು ನನಗೆ ತೀವ್ರತರವಾದ ವಿರೋಧವನ್ನು ಮಾಡುತ್ತಿದ್ದರು. ಒಂದು ನಾಟಕದಲ್ಲಿ ಅತ್ಯಂತ ಮಹತ್ವದ ಪಾತ್ರವನ್ನು ನಾನು ವಹಿಸಿದಾಗ ಆಗ ನಾಟಕದ ಪ್ರಯೋಗದ ದಿನವೇ ಮನೆಯಲ್ಲಿ ನಾನು ಊಟಕ್ಕೆ ಕುಳಿತಾಗ ಹೀಗೆ ನುಡಿದರು "ನೀನು ಈ ಮನೆಯಲ್ಲಿಯ ಅನ್ನವನ್ನು ಉಣ್ಣುವುದಾದರೆ ನಾಟಕದ ಗೀಳನ್ನು ಬಿಡು, ನಾಟಕವೇ ಬೇಕೆಂದರೆ ಇಂದಿನಿಂದ ಈ ಮನೆಯ ಅನ್ನ ನಿನಗಿಲ್ಲ,ನಿರ್ಧರಿಸು" ಎಂದು. ಆಗ ನಾನು ಪರಿಪರಿಯಾಗಿ ವಿನಂತಿಸಿ ಇದೊಂದು ನಾಟಕವಾಡಿದ ಮೇಲೆ ಎಂದೂ ನಾಟಕದಲ್ಲಿ ಭಾಗವಹಿಸುವದಿಲ್ಲ. ಇದೊಂದು ಸಾರೆ

ಕ್ಷಮಾ ಮಾಡಿರಿ' ಎಂದು ಕೇಳಿದರೂ ಕೊನೆಗೆ ಹೀಗೆಂದರು—'ಅದೆಲ್ಲ ಸಾಧ್ಯವಿಲ್ಲ. ಈಗ ನಾಟಕ ಬೇಕೋ ಅಥವಾ ಈ ಅನ್ನ ಬೇಕೊ-ನಾಟಕ ಬೇಕೆಂದರೆ ಈ ಅನ್ನ ಮುಟ್ಟುವ ಹಾಗಿಲ್ಲ, ಹೇಳು' ಎಂದು ನಿರ್ಧಾರದ ಕೊನೆಯ ಹಂತಕ್ಕೆ ನನ್ನನ್ನು ಒತ್ತಾಯಿಸಿದರು. ಆಗ ಒಂದು ಕ್ಷಣ ವಿಚಾರಿಸಿ (ಅನ್ನದ) ಎಡೆಯ ಎದುರಿಗೆ ಕುಳಿತಿದ್ದ ನಾನು ಆ ಅನ್ನದ ತಟ್ಟೆಗೆ ನಮಸ್ಕರಿಸಿ ಎದ್ದು ಹೊರಟು ನಾಟಕಕ್ಕೆ ಬಂದೆ. ಆಮೇಲೆ ಶ್ರೀಮಾನ್ ಶಿವರಾಮ ಕಾರಂತರ ಹತ್ತಿರ ಎರಡು ತಿಂಗಳು ಇದ್ದೆ. ಆಗ ಅವರ ಅಂತಃಕರಣ, ಜಾತಿ ರಹಿತ ಪ್ರೇಮವು ನನ್ನ ಜಂಗಮ ಜಾತಿಯ ಹೆಸರಿಗಿದ್ದ ಸ್ವಾಭಿಮಾನವನ್ನು ತೊರೆಯುವಂತೆ ಮಾಡಿತು. ಆಗಿನಿಂದ ನನ್ನ ದೃಷ್ಟಿಯಲ್ಲಿ ಜಾತೀಯತೆಯನ್ನು ಸುಟ್ಟು ಹಾಕಿದೆ. ಗುಣಗಳಿಗೆ, ವಿದ್ಯೆಗೆ ಮಹತ್ತ್ವ ಕೊಟ್ಟು ನಾಟಕರಂಗಕ್ಕೆ ಜೀವನವನ್ನು ಅರ್ಪಿಸಿದಾಗ ನನ್ನಲ್ಲಿಯ ಗುಣಕ್ಕಾಗಿ ಎನ್ಕೆಯವರು ಆಕಾಶವಾಣಿಯ ಇನ್ನಿತರ ಸಹೋದ್ಯೋಗಿಗಳ ಸಹಕಾರದಿಂದ ನನ್ನನ್ನು ಆಕಾಶವಾಣಿಯಲ್ಲಿ ಸೇರಿಸಿಕೊಂಡರು. ನಾಟಕಕ್ಕಾಗಿ, ಗುಣಗಳನ್ನು ಒಮ್ಮೆ ಕಂಡುಕೊಂಡರೆ ಸಾಕು ಎನ್ಕೆಯವರು ಆ ವ್ಯಕ್ತಿಗಳನ್ನು ತಮ್ಮ ಸನಿಹಕ್ಕೆ ಎಳೆದುಕೊಳ್ಳುತ್ತಿದ್ದರು. ಅವರ ಸ್ವಭಾವಕ್ಕೆ ನಾನೇ ಒಂದು ಉದಾಹರಣೆಯೆಂದು ಬೇರೆ ಹೇಳಬೇಕಿಲ್ಲ. ಅಲ್ಪರನ್ನು ಮೇಲೆತ್ತುವ ಎನ್ಕೆಯವರ ಔದಾರ್ಯ ನಿಜಕ್ಕೂ ಅಭಿನಂದನಾರ್ಹ. ಅಲ್ಲದೆ ಅವರು ತುಂಬ ಭಾವಜೀವಿಗಳೂ ಆಗಿದ್ದಾರೆ. ಒಬ್ಬ ಅಧಿಕಾರಿಯಾಗಿ ಸ್ವತಃ ಸಾಹಿತಿಗಳಾಗಿರುವ ಅವರು ಪ್ರತಿ ವಿಷಯದಲ್ಲಿಯೂ ಭಾವಪೂರ್ಣವಾಗಿ, ಭಾವಜೀವಿಗಳಾಗಿ ವರ್ತಿಸಿದ್ದನ್ನು ಕಂಡು ನನಗೆ ಅವರ ಬಗ್ಗೆ ಕಕ್ಕುಲತೆಯುಂಟಾಗುತ್ತಿತ್ತು. ಸಾಹಿತ್ಯಕ್ಕೆ ಬೇಕಾದ ಸಮಸ್ತ ಕಲೆಯ ಪರಿಜ್ಞಾನ ಅವರಲ್ಲಿತ್ತು. ಅದರಲ್ಲಿ ಪರಿಪಕ್ವತೆಯೂ ಇತ್ತು.

ನನ್ನ ದೃಷ್ಟಿಯಲ್ಲಿ ಮತ್ತು ಸಾಮಾನ್ಯರ ದೃಷ್ಟಿಯಲ್ಲಿ ಅವರೇ ಆಕಾಶವಾಣಿಯ ನಿರ್ದೇಶಕರಾಗಲು ಸಮರ್ಥ ದಕ್ಷತೆಯನ್ನು ಹೊಂದಿದ್ದರೂ, ಯಾವ ನಿರ್ದೇಶಕರಿಗೂ ಕಡಿಮೆಯೆನಿಸಲಾರದ ಸಾಮರ್ಥ್ಯವನ್ನು ಪಡೆದಿದ್ದರೂ, ಇನ್ನೊಂದು ದೃಷ್ಟಿಯಿಂದ ನೋಡಿದಾಗ ಅವರು ನಿರ್ದೇಶಕರಾಗದೇ ಇದ್ದುದೇ ಒಳ್ಳೆಯದೆನಿಸುತ್ತದೆ–ಯಾಕಂದರೆ ಅವರು ನಿರ್ದೇಶಕರಾಗಿದ್ದರೆ ಅವರ ಮೂಲಕ ಶ್ರೀಸಾಮಾನ್ಯರಿಗೆ ಸಿಗಬೇಕಾದ ಜೀವನದ ಅನುಭವ, ಸಾಹಿತ್ಯದ ಕೊಡುಗೆ ಸಿಗದೇ ಹೋಗುತ್ತಿತ್ತಲ್ಲದೆ, ಅಧಿಕಾರದ ಆಡಳಿತದಲ್ಲಿ, ಒಳ್ಳೆಯ ಪ್ರಾಧ್ಯಾಪಕನು ಅಧಿಕಾರಿಯಾದಾಗ ಆಗುವಂತೆ ತಮ್ಮ ಸಮಸ್ತ ಬೌದ್ಧಿಕ ಶಕ್ತಿಯನ್ನು ವ್ಯಯಮಾಡಬೇಕಾಗುತ್ತಿತ್ತು. ಅವರ ಸಾಮಾಜಿಕ ಜೀವನ ಬಗ್ಗೆ ನನಗೆ ಹೆಚ್ಚಿನ ಒಡನಾಟ ಬರದಿದ್ದರೂ ಅವರು ತಮ್ಮ ಸಾಮಾಜಿಕ ಜೀವನದಲ್ಲಿಯೂ ಅತ್ಯಂತ ಪ್ರೇಮಪೂರ್ಣ ಸ್ವಭಾವದವರಾಗಿದ್ದರೆಂದು ನಾನು ತಿಳಿದಿದ್ದೇನೆ. ಅವರು ೧೯೭೧ ರಲ್ಲಿ ನಿವೃತ್ತರಾದರು. ಆಗ ನಾನಿನ್ನೂ ಸೇವೆಯಲ್ಲಿದ್ದೆ. ಅವರಿಗೆ ಮನನೋಯುವಂತೆ ನಾನೆಂದೂ ವರ್ತಿಸಿದ್ದಿಲ್ಲ. ಆದರೆ ಒಂದು ಘಟನೆ ಮಾತ್ರ,

ನನ್ನ ತಪ್ಪಿನಿಂದಾಗಿ ಅವರಿಗೆ ನೋವು ಉಂಟು ಮಾಡಿತು. ಆ ನೋವನ್ನೂ ಕೂಡ ಅವರು ಪ್ರೀತಿಯಿಂದಲೇ ವ್ಯಕ್ತಪಡಿಸಿದರು.

ಎನ್ಕೆ ಅವರ ಒಡನಾಟದಲ್ಲಿ ನನಗೆ ಕೀರ್ತಿ, ಗೌರವ ಏಳ್ಗೆಗಳಾಗಿವೆ. 'ಹೂವಿನೊಡನೆ ದಾರವೂ ಸ್ವರ್ಗಕ್ಕೆ ಹೋದ್ಹಾಂಗ' ನನ್ನ ಜೀವನ ಅವರೊಂದಿಗೆ ಸಾರ್ಥಕತೆ ಪಡೆಯಿತೆಂದು ನಾನು ನಂಬಿದ್ದೇನೆ. ಇಂದಿಗೂ ನನ್ನನ್ನು ರೇಡಿಯೋ ಕಾಕಾ ಎಂದು ಜನರು ಗೌರವಿಸುವದು ಎನ್ಕೆಯವರ ಕೃಪೆಯಿಂದ ನಡೆದ 'ಗೃಹಗೋಷ್ಠಿ' ಮತ್ತು 'ಗಿಳಿವಿಂಡು' ಕಾರ್ಯಕ್ರಮದಿಂದಲೇ ಎಂದು ನಾನು ಎದೆತಟ್ಟಿಕೊಳ್ಳುವದು ಅವರ ಪ್ರೀತಿಗೆ ಪಾತ್ರನಾದವನೆಂದು ಭಾವಿಸಿರುವೆ. ಅವರ ಕಾದಂಬರಿ, ಹರಟೆ, ವಿಮರ್ಶೆ, ಏಕಾಂಕ ನಾಟಕಗಳು ನನ್ನ ಮನಸ್ಸಿಗೆ ಒಂದು ಹೊಸ ಸಂಸ್ಕಾರ ನೀಡಿದವು. ವಿಶೇಷವಾಗಿ ಅವರ ಏಕಾಂಕಗಳಲ್ಲಿಯ ಪಾತ್ರವು ನನಗೆ ಅಮಿತಾನಂದವನ್ನು ತಂದವಲ್ಲದೇ ಹೆಮ್ಮೆಗೆ ಕಾರಣವೆನಿಸಿದವು. ಅವರು ಬರೆದು ಪ್ರಸ್ತುತಪಡಿಸಿದ 'ಗಾಂಧೀ ಗೀತ'ವು ಸ್ವಾತಂತ್ರ್ಯ ಪೂರ್ವದ ಗಾಂಧೀ ಜೀವನದ ಸಮಸ್ತ ಪರಿಶ್ರಮಗಳ ಸಮಷ್ಟಿಯನ್ನು ವ್ಯಕ್ತಪಡಿಸುವವರೊಂದಿಗೆ ಎನ್ಕೆಯವರು ಒಂದು ವಿಷಯದ ಸಮಗ್ರತೆಯನ್ನು ಒಂದೆಡೆ ನಿರೂಪಿಸುವಲ್ಲಿ ತೋರಿದ ಚಾತುರ್ಯದ ಬಗ್ಗೆ ಯಾವನಾದರೂ ತಲೆದೂಗುವಂಥದ್ದು ಎಂದು ಹೇಳಿದರೆ ಯಾವ ಅತಿಶಯೋಕ್ತಿಯಿಲ್ಲ.

ಅವರು ಗೌರಿಯು ಹಾಗಿದ್ದ ಎರಡನೆಯ ಹೆಂಡತಿಯನ್ನು ಕಳೆದುಕೊಂಡಾಗ ಅವರ ಹೃದಯ ಅಂತರಾಳದ ದುಃಖ ವ್ಯಕ್ತವಾದದ್ದು ರಾಮಾಯಣದ ಶ್ರೀರಾಮನ ಪತ್ನಿಯಿಂದ ವಿರಹಿತನಾದ ಸ್ಥಿತಿಯ ವಿವರಣೆಯಲ್ಲಿ ಅವರು ತಮ್ಮ ದುಃಖವನ್ನು ರಾಮನ ಪಾತ್ರದೊಂದಿಗೆ ತೋಡಿಕೊಂಡರು. ಅದನ್ನು ಕಂಡ ನಮಗೆಲ್ಲರಿಗೂ ಅತೀವ ಕಳವಳವಾಯಿತು. ಆ ನೋವನ್ನು ನಗುತ್ತ ಸಹಿಸಿದ ಅವರು ನಿಜಕ್ಕೂ ಸಾಹಸಿಗರೆಂದು ತೋರುವದು ಅವರು ಅಂಥ ಸಂದರ್ಭದಲ್ಲಿ ಅಲ್ಲದೇ ಇನ್ನಿತರ ಸಂದರ್ಭದಲ್ಲಿಯೂ ತಮ್ಮ ಗಟ್ಟಿತನವನ್ನು ಬಿಡದೆ ಐದ್ಹತ್ತು ಮಿನಿಟುಗಳಲ್ಲಿಯೇ ನಾಲ್ಕಾರು ತಾಸುಗಳವರೆಗೆ ಮಾತನಾಡುವಷ್ಟು ವಿಷಯ ಸಂಗ್ರಹ ಮಾಡಿ ಕೇಳುಗರಿಗೆ ಎಂದೆಂದೂ ಬೇಸರ ತರದ ರೀತಿಯಲ್ಲಿ ಪ್ರೇಮಪೂರ್ಣವಾಗಿ, ಹಾಸ್ಯಪೂರ್ಣವಾಗಿ ನಿರರ್ಗಳವಾಗಿ ಮಾತನಾಡಬಲ್ಲ ಪಾಂಡಿತ್ಯ ಸಾಮರ್ಥ್ಯವನ್ನು ಹೊಂದಿದ್ದರೆಂಬುದರಲ್ಲಿ ಸಂಶಯವೇ ಇಲ್ಲ. ರಂಗಭೂಮಿಯ ಬಗ್ಗೆ ಇದ್ದ ಅವರ ಅನುಭವ, ಅವರ ಪರಿಜ್ಞಾನ ಯಾರನ್ನೂ ಮೆಚ್ಚಿಸುವಂಥದ್ದು. ಅಂದರೆ ೨೬-೨-೧೯೮೩ ರಂದು ಹುಬ್ಬಳ್ಳಿಯ ಸವಾಯಿ ಗಂಧರ್ವ ಹಾಲಿನಲ್ಲಿ ನಡೆದ ರಂಗಚಟುವಟಿಕೆಯ ಕಾರ್ಯಕ್ರಮದಲ್ಲಿ ಎನ್ಕೆಯವರು ಮಾಡಿದ ಸಮಾರೋಪ ಭಾಷಣ ನಮ್ಮ ನಾಡಿಗೊಂದು ಆದರ್ಶ ಭಾಷಣ. ಅವರ ಪ್ರವೃತ್ತಿಗೆ ಭೂಷಣವೆಂದು ಭಾವಿಸಿರುವೆ. ಯಾಕೆಂದರೆ ಒಂದು ಶಾಸ್ತ್ರಾಭ್ಯಾಸಕ್ಕೆ ಪೂರಕವಾದ

ಸಂಸ್ಕೃತದ ಜ್ಞಾನ ಪ್ರಾಮುಖ್ಯವಾಗಿ ಬೇಕಾಗಿರುವದರಿಂದ ಅದು ಅವರಲ್ಲಿದ್ದುದರಿಂದ ವಿಷಯ ವಿವೇಚನೆ, ವಿಶ್ಲೇಷಣೆ ಅವರಿಗೆ ಸುಲಭವೆನಿಸುತ್ತದೆ. ಜೀವನದಲ್ಲಿ ಅವರು ಅನೇಕ ಸಿಹಿಕಹಿಗಳನ್ನು ಕಂಡುಕೊಂಡಿದ್ದರೂ ತಮ್ಮ ಆರೋಗ್ಯವನ್ನು ಮಾತ್ರ ಕೆಡಿಸಿ ಕೊಳ್ಳಲಿಲ್ಲ. ದ್ರಾಕ್ಷಿ, ಗೋಡಂಬಿ, ಬದಾಮಿ, ಕಲ್ಲುಸಕ್ಕರೆ ಇವುಗಳು ಅವರ ಬಿಡುವಿನ ವೇಳೆಯಲ್ಲಿ ಬಳಸುವ ಪದಾರ್ಥಗಳಾಗಿದ್ದವು. ಅವರ ಆರೋಗ್ಯದ ಗುಟ್ಟಿಗೆ ಕಾರಣ ವೇನೆಂದು ಯಾರಾದರೂ ಕೇಳಿದರೆ 'ಸದಾ ಹಸನ್ಮುಖಿತೆ ಮತ್ತು ಮತ್ತು ಇಂಥ ತಿನಿಸು ಗಳು ಅವರ ಆರೋಗ್ಯದ ಗುಟ್ಟಿನ ಕಾರಣವಾಗಿವೆ'ಯೆಂದು ಹಾಸ್ಯ ಮಾಡುತ್ತಿದ್ದೆ.

ಅವರಲ್ಲಿ ಮತಭೇದವಿದ್ದಿಲ್ಲವೆಂಬುದಕ್ಕೆ ನನ್ನನ್ನು ಅವರು ಹತ್ತಿರಕ್ಕೆ ಎಳೆದು ಕೊಂಡುದೊಂದು ಸಾಕ್ಷಿ ಮಾತು. ಸಂಕುಚಿತ ಮನೋಭಾವವನ್ನೇ ಎಂದೂ ಹೊಂದಿರದ ಅವರು ಗುಣಶ್ರೇಷ್ಠತೆಗೆ ಮಹತ್ವಕೊಟ್ಟ ಮಹಾ ಅನುಭಾವಿಗಳೆಂದು ನಾನು ಭಾವಿಸಿರುವೆ.

ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ಅವರು 'ಜಗವೆಲ್ಲ ನಗುತಿರಲಿ, ಜಗವಳಲು ಎನಗಿರಲಿ' ಎಂಬ ಈಶ್ವರ ಸಣಕಲ್ಲರ ಕವಿವಾಣಿಯೇ ಮೂರ್ತಿವೆತ್ತಂತಹ ವ್ಯಕ್ತಿ.

# ಎನ್ಕೆ ಜೀವನ ನಾಟಕ

---

ಪರಿಮಳಾ ಬಾಡಗಂಡಿ

ಜೀವನ ನಾಟಕದಲ್ಲಿ ಬಗೆಬಗೆಯ ಪಾತ್ರಗಳನ್ನು ರಚಿಸಿ ಸುಖದುಃಖ ಭಾವ ಮಿಶ್ರಿತ ಕತೆಯನ್ನು ರಚಿಸಿ ಆಯಾ ಸಮಯಕ್ಕೆ ತಕ್ಕಂತೆ ಪಾತ್ರಗಳನ್ನು ತಂದು ನಂತರ ಮರೆಯಾಗಿಸಿ ಅಂಕದ ಪರದೆಗಳನ್ನು ಏರಿಳಿಸಿ ನಡೆವ ನಾಟಕ ನೋಡಿ ನಲಿಯುವ ಭಗವಂತ ಬಗೆಬಗೆಯ ಭಾವಬಂಧನಗಳಿಂದ ಮಾನವ ಜೀವಿಯು ಸುಖದುಃಖಗಳನ್ನು ಅನುಭವಿಸುವಂತೆ ಮಾಡುತ್ತಾನೆ. ಪೂರ್ವಜನ್ಮದ ಪುಣ್ಯದ ಫಲವೊ ಈ ಜನ್ಮದಲ್ಲಿ ನನಗೆ ಆತ್ಮೀಯ ವ್ಯಕ್ತಿಗಳ ಆತ್ಮೀಯತೆಯಲ್ಲಿ, ಮಮತೆಯಲ್ಲಿ ಮಿಂದು ನಲಿದ ಆತ್ಮಾನಂದ ನನಗಿದೆ. ನನ್ನ ಜೀವನ ರೂಪುಗೊಳ್ಳುವಲ್ಲಿ ಅನೇಕ ಬಗೆಯಿಂದ ಪ್ರೀತಿ, ವಾತ್ಸಲ್ಯದಿಂದ ಚಿತ್ರಪ್ರೇಮವನ್ನು ಧಾರೆಯೆರೆದ ಶ್ರೇಯಸ್ಸು ನನ್ನ ಪೂಜನೀಯ ಎನ್ಕೆಕಾಕಾನಿಗೇ ಸಲ್ಲುತ್ತದೆ. ಅವರ ವ್ಯಕ್ತಿತ್ವದ ಪ್ರಭಾವ ನನ್ನಲ್ಲಿ ಅಚ್ಚಳಿಯದೇ ಹಚ್ಚ ಹಸಿರಾಗಿದೆ. ಎನ್ಕೆ ಸಾಹಿತಿ, ನಾಟಕಕಾರರಾಗಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿಯ ಪ್ರಮುಖ ವ್ಯಕ್ತಿಯಾದರೂ ನನಗೆ ಅಕ್ಕರೆಯ 'ಕಾಕಾ' ಆಗಿಯೇ ಆತ್ಮೀಯತೆಯಲ್ಲಿ ಅಂತಃಕರಣದಲ್ಲಿ ಹೆಚ್ಚು ಸಮೀಪವಾಗಿದ್ದಾರೆ.

"ಯಾವ ಜನ್ಮದ ಮೈತ್ರಿ ಈ ಜನ್ಮದಲ್ಲಿ ಬಂದು ನಮ್ಮಿಬ್ಬರನು ಮತ್ತೆ ಬಂಧಿಸಿಹುದೊ"... ಕುವೆಂಪುವಾಣಿಯಂತೆ ಪೂರ್ವಜನ್ಮದ ಮೈತ್ರಿ ನಮ್ಮನ್ನು ಪ್ರೀತಿಯ ಬಂಧನದಲ್ಲಿ ಬಂಧಿಸಿದೆ. ಕಾಕಾ ಮಗಳ ವಾತ್ಸಲ್ಯ, ಮಮತಾನುರಾಗ, ಪ್ರೇಮದ ಅಮೃತ ಸಿಂಚನಗಳ ಮಳೆಯಲ್ಲಿ ಮಿಂದು ಬಂದ ಪುನೀತ ಪುಷ್ಪದ ಪರಿಮಳವೇ ಪದ-ಪಂಕ್ತಿಯಲ್ಲಿ ಮೂಡಿದೆ.

೧೫ ವರ್ಷಗಳ ಹಿಂದೆ ಆಕಾಶವಾಣಿಯನ್ನು ನೋಡಲು ಹೋದಾಗ ಅವರ ಪ್ರಥಮ ಪರಿಚಯ ನನಗಾಯಿತ್ತು. ಅವರಾಗ ಪ್ರೋಗ್ರಾಂ ಎಕ್ಸಿಕ್ಯೂಟಿವ್ಹ ಆಗಿ ಸೇವೆ ಸಲ್ಲಿಸುತ್ತಿದ್ದರು. ಸುಪ್ರಭಾತದಲ್ಲಿ ಬಾನುಲಿಯ ವೀಣೆಯ 'ವಿಚಾರವೇದಿಕೆ'ಎಂಬ ತಂತಿಯನ್ನು ಮಿಡಿಯುತ್ತಿದ್ದ ಪ್ರೇರಕ. ನನಗೆ ನಿತ್ಯವೂ ರೇಡಿಯೋದಲ್ಲಿ ಕೇಳಿದ ಸವಿಸ್ವರದ ವ್ಯಕ್ತಿಯನ್ನು ನೋಡಬೇಕೆಂಬ ತವಕ. ಅವರನ್ನು ಪರಿಚಯಿಸಿಕೊಂಡ ಕೆಲವೇ

ಕೆಲ ಗಂಟೆಗಳಲ್ಲಿ ಅರಿಯದ ಆತ್ಮೀಯತೆಯನ್ನು ಕಂಡೆ. ಮೊದಲ ನೋಟದಲ್ಲಿ ನಗು ಮೊಗದಿಂದ ವಿರಾಜಿಸುವ ಆ ಹಿರಿಯ ಹೃದಯಕ್ಕೆ ತಲೆಬಾಗಿ ಸೋತೆ. ಹಾಗೇ ಕಾಲೇಜಿನಲ್ಲಿ ಓದುತ್ತಿರುವಾಗ ಕತೆ ಕವನ ಬರೆವ ಹುಚ್ಚು ನನ್ನದಾಗಿತ್ತು. ಅವುಗಳನ್ನು ಅವರಿಗೆ ತೋರಿಸಿ ತಿದ್ದುಪಡಿ ಮಾಡಿಸಿಕೊಳ್ಳುತ್ತಿದ್ದೆ. ಹಾಗೇ ಪತ್ರ ವಿನಿಮಯ ನಮ್ಮಲ್ಲಿ ಪ್ರಾರಂಭವಾಯ್ತು. ನಮ್ಮ ಸ್ನೇಹವೃಂದದ ರೇಡಿಯೋ ಕಾರ್ಯಕ್ರಮಕ್ಕೆಂದು ಆಕಾಶವಾಣಿಗೆ ಹೋದಾಗಲೆಲ್ಲ ಅವರನ್ನು ಕಾಣದೇ ಬರುತ್ತಿರಲಿಲ್ಲ.

ದಿನಗಳುರುಳುತ್ತಿದ್ದಂತೇ ಅವರ ಪಿತೃವಾತ್ಸಲ್ಯದ ಬಂಧನದಲ್ಲಿ ಬಂದಿಯಾದೆ. ನಾನು ಅವರಲ್ಲಿ ಹೋದಾಗಲೆಲ್ಲ ತುಂಬು ಅಕ್ಕರೆಯಿಂದ ಪ್ರೀತಿ ವಿಶ್ವಾಸದಿಂದ ನನ್ನೊಡನೆ ಮಾತಾಡುತ್ತಿದ್ದರು. ರಕ್ಷಾಬಂಧನ ಹಬ್ಬದ ದಿನ ಅವರು ರಚಿಸಿದ "ಭಾವಬಂಧನಾ ಬಂಧುಭಾವನಾ ರಕ್ಷಾ ದೀಕ್ಷೆಯ ಸಾಧನಾ..."ಎಂಬ ಹಾಡು ನನಗೆ ಮೆಚ್ಚಿಗೆಯ ಹಾಡಾಗಿತ್ತು. ಭಾವಗೀತೆಗಳನ್ನು ನನ್ನಿಂದ ಹಾಡಿಸಿಕೊಳ್ಳುತ್ತಿದ್ದರು. ಮಾತು ಮಾತಿನಲ್ಲಿ ನಮ್ಮಲ್ಲಿಯ ಆತ್ಮೀಯತೆಯ ಮೂಲ ಒಂದು ದಿನ ಗೋಚರಿಸಿತು. ತಮ್ಮ ಜೀವನ ಸುಖದುಃಖಗಳನ್ನು ಬಿಚ್ಚು ಮನಸ್ಸಿನಿಂದ ನನ್ನೆದುರು ಹೇಳುತ್ತಿದ್ದರು. ಆಗಿನಿಂದ ಅವರ ಅಕ್ಕರೆಯ ಅಚ್ಚೆಯ ಮಗಳು ನಾನಾದೆ. ನನ್ನ ಪ್ರೀತಿಯ ಕಾಕಾ ಅವರಾದರು. ಆ ಆತ್ಮೀಯತೆಯ ಆನಂದ ನನ್ನನ್ನು ಅವರಲ್ಲಿ ಏಕವಚನದಲ್ಲಿ ಮಾತನಾಡುವಂತೆ ಮಾಡಿತು. ದೇವರನ್ನು ತಾಯಿ-ತಂದೆಯನ್ನು ಅತ್ಯಾತ್ಮೀಯ ಪ್ರೀತಿಯ ವ್ಯಕ್ತಿಯನ್ನು ನಾವು ಏಕವಚನದಲ್ಲಿಯೇ ಅಲ್ಲವೇ ಕರೆಯುವದು?

ಸಹೃದಯತೆಗೆ ಇನ್ನೊಂದು ಹೆಸರು ಎನ್ಕೆ. ಸರ್ವರಲ್ಲೂ ತನ್ನತನವನ್ನೇ ಕಾಣುವ ವ್ಯಕ್ತಿ. "ತನ್ನಂತೆ ಪರರ ಬಗೆದೊಡೆ ಕೈಲಾಸ" ಎಂಬ ಸರ್ವಜ್ಞನ ವಚನದ ಸತ್ಯಸಾಕ್ಷಿ. ಎಲ್ಲರ ಸುಖದುಃಖದಲ್ಲಿ ಸಮನಾಗಿ ಪಾಲ್ಗೊಳ್ಳುವ ಧೀಮಂತ ವ್ಯಕ್ತಿ. ನಮ್ಮನೆಯವರಲ್ಲೊಬ್ಬರಾಗಿ ಬೆರೆತು ಸಕಲ ಕಾರ್ಯಗಳಲ್ಲೂ ಭಾಗವಹಿಸಿದ್ದಾರೆ. ನಮ್ಮ ತಾಯಿ ತಂದೆಯವರನ್ನು ತಮ್ಮ ಅಣ್ಣ ಅತ್ತಿಗೆಯಂತೆ ಗೌರವಿಸುತ್ತಿದ್ದರು. ನನ್ನ ಅಕ್ಕನಿಗೆ ಸರ್ವರೀತಿಯಿಂದಲೂ ಸಮನಾದ ಪತಿಯನ್ನು ಒದಗಿಸಿದ್ದಾರೆ. ನಮ್ಮ ಭಾವ ಮತ್ತು ಅಕ್ಕ ಈರ್ವರೂ ಹೆಸರಾಂತ ವೈದ್ಯ ದಂಪತಿಗಳು. ಡಾ. ಆರ್. ಎನ್. ಜೋಶಿ ಹಾಗೂ ಶ್ರೀಮತಿ ಡಾ. ಪುಷ್ಪಾ ಜೋಶಿ. ನನ್ನ ತಾಯಿ ತಂದೆ ಈಗಿಲ್ಲ. ಅವರು ತಮ್ಮ ಕೊನೆಯುಸುರಿನ ವರೆಗೂ ಎನ್ಕೆಯವರ ಉಪಕಾರವನ್ನು ನೆನೆಯುತ್ತಿದ್ದರು. ಮೊಗ ನೋಡಿ ಮನ ಅರಿವ ಕಲೆ ಇವರಲ್ಲಿದೆ. ತಮ್ಮಲ್ಲಿಗೆ ಯಾರೇ ಬರಲಿ ಸಹೃದಯತೆಯಿಂದ ಹಿರಿ ಕಿರಿಯರೆನ್ನದೇ ಪರಿಚಯಿಸಿಕೊಡ್ತಾರೆ. ಕನ್ನಡದ ಹಿರಿ ಕವಿ ಬೇಂದ್ರೆಯವರ ಪರಿಚಯ ನನಗೆ ಕಾಕಾ ಅವರಲ್ಲೇ ಆಯ್ತು.

'ಜಗವೆಲ್ಲ ನಗುತಿರಲಿ ಜಗದಳಲು ನನಗಿರಲಿ....' ಎನ್ನುತ್ತ ನೋವುಂಡು ನಗೆ ನಕ್ಕ ವ್ಯಕ್ತಿ. ತಮ್ಮ ಜೀವನದ ಹೊಗೆಯನ್ನು ನಗುವಿನಲ್ಲಡಗಿಸಿದ, ಅನೇಕ ಸಾವು

ಸೋಪನ್ನುಂಡ ಸಂಜುಂಡ, ಎಂದರೂ ಆದೀತು. ನಗುವಿನಲ್ಲಿ ಸುತ್ತುಮುತ್ತಲಿನವರನ್ನು ನಕ್ಕುನಗಿಸಿ ಸಂತೋಷ ವಾತಾವರಣ ಸೃಷ್ಟಿಸುವ ಸಂತೋಷಮಯ ಶಕ್ತಿ"ಏನು ಜಾದೂ ಮಾಡಿದ್ರಿ ಮಾಮಾಗೆ" ಅಂತಾ ಕೇಳಿದ್ರೆ ನಗುತ್ತಲೇ "ನೋಡು ಪಮ್ಮಾ ನಿಮ್ದು ಡಾಕ್ಟರ ಮನೆತನ, ಆದ್ರೂ ನಾನು ಒಂದು ಮಜವಾದ ಹೊಸ ಟಾನಿಕ್ ಕೊಟ್ಟೀನಿ ನಿಮ್ಮ ಮಾಮಾಗ. ಈಗ ಹೆಂಗ ಕಾಣಸ್ತಾರೆ"? ಎಂದು ನಮಗೆ ಮರುಸವಾಲ್. ಅವರೊಡನೆ ಮಾತಿನಲ್ಲಿ ಮುಳುಗಿದರೆ ಊಟವನ್ನು ಮಾಡಿದ ಕೈ ಹಾಗೇ ಒಣಗಿರುತ್ತಿತ್ತು. ಊಟ ಮುಗಿಸಿ ಕೈ ತೊಳೆವುದನ್ನು ಮರೆಸುತ್ತಿದ್ದರು. ನಾನು ಓದುತ್ತಿರುವಾಗ ಹಾಸ್ಟೆಲಿ ನಲ್ಲಿದ್ದೆ. ಕಾಕಾ ಅಂದರೆ ಓಡೋಡಿಯೇ ಅವರನ್ನು ಕಾಣಲು ಬರ್ತಿದ್ದೆ. ಹಾಸ್ಟೆಲ್ ಮೆಟ್ಟಲುಗಳನ್ನು ನಾಲ್ಕು ನಾಲ್ಕು ಹಾರಿ ಜಿಗಿಯುತ್ತ ಬರ್ತಿದ್ರೆ ಕಾಕಾನ ಕಾಮೆಂಟ್- "ನಿನ್ನ ಕಾಲು ನೆಲದ ಮೇಲೆ ಇರೊದಿಲ್ಲಲ್ಲಪ್ಪ? ಆಕಾಶದ ಹಕ್ಕಿಯಂಗ ರೆಕ್ಕಿಬಿಚ್ಚಿ ಹಾರಾಡ್ತಾನೇ ಇರ್ತಿಯಲ್ಲ?" ಅಂತ.

ನನ್ನ ಕಾಕಾನಿಗೆ ಇಷ್ಟವಾದ ತಿಂಡಿ ಅಂದರೆ ಜೋಯ್‌–ಅಂದ್ರೆ, ಬಿಸಿಬಿಸಿ ದೋಸೆ. ಇಲ್ಲಿ ಪಿಟ್ಟುರುಬ್ಬಿ ಕಾರ್ಡು ಬರೆದರೆ ಸಾಕು "ಜೋಯ್ ತಯಾರಾಯ್ತು?" ಅನ್ನುತ್ತ ನಗುತ್ತ ಬರ್ತಿದ್ದರು. "ದೋಸೆ ತಯಾರಿಕೆಯಲ್ಲಿ ನಿಮ್ಮ ಮಗಳು ನಿಮ್ಮನ ಮೀರಸ್ತಾಳ ಅಂದ್ರ ನಿಮಗ ಸಿಟ್ಟು ಬರೊದಿಲ್ಲ ಅಲ್ಲ ಅಮ್ಮಾ"? ಎಂದು ನನ್ನ ತಾಯಿಯನ್ನು ಛೇಡಿ ಸುತ್ತ ತಂದೆಯವರೊಂದಿಗೆ ಕುಳಿತು ನಗುತ್ತ ದೋಸೆ ತಿಂತಿದ್ರೆ ನನಗೆ ಎಷ್ಟು ಮಾಡಿ ದರೂ ಕಡಿಮೆ ಅನಿಸುತ್ತಿತ್ತು. ಈಗಲೂ ಸಹ ನಮ್ಮಲ್ಲಿ ಜೋಯ್ ಕಾರ್ಯಕ್ರಮ ಆದ್ರೆ 'ಎನ್ಕೆಕಾಕಾ ಅರ್ಪಣ ಮಸ್ತು' ಒಂದು ದೋಸೆ ನಾನೇ ಅವರ ಹೆಸರಿನಲ್ಲಿ ತಿನ್ನುತ್ತೇನೆ.

ಎನ್ಕೆ ಅರಳಿದ ಹೂವಿನಂತಹ ಸೊಗಸೂಸುವ ಹಸನ್ಮುಖಿ ಪ್ರಫುಲ್ಲ ಪ್ರಸನ್ನ ಚಿತ್ತದ ಸಂಕೇತ. ಕಾಕಾನಲ್ಲಿಗೆ ಯಾವ ಹೊತ್ತಿನಲ್ಲಿ ಹೋದರೂ ನಮಗೆ ನಗುಮುಖದ ಸ್ವಾಗತವೇ ಸಿದ್ಧ. ಆ ಒಂದು ಮುಗುಳ್ನಗೆಯ ಕಿರಣ ಮನಕಾನಂದದ ಮಧುರತೆ ಯನ್ನು ನೀಡುತ್ತದೆ. ಮುಗುಳುನಗೆಯಿಂದೊಡಗೂಡಿದ ಮಧುರಕಂಠದಿಂದ ಹೊರ ಹೊಮ್ಮಿದ ಮುತ್ತುಗಳಂತಹ ಮಾತುಗಳನ್ನಾಲಿಸುತ್ತ ಕುಳಿತರೆ ಸಮಯದ ಅರಿವೇ ಇರುವದಿಲ್ಲ. ನಾವೆಲ್ಲರೂ ಅವರಲ್ಲಿಗೆ ಹೋಗಿ ಸ್ವಲ್ಪ ದೂರ ಕುಳಿತರೆ "ಬರ್ರಿ ಅಳಿಯಂದ್ರ ಅಷ್ಟು ದೂರ ಕೂತ್ರ ಹ್ಯಾಂಗ? ಒಂದಕಡೆ ಮಗಳು ಇದ್ರ ಇನ್ನೊಂದುಕಡ ಅಳಿಯಂದ್ರಿರಬೇಕು. ಅಂದ್ರನs ನಮ್ಮ ಹರಟೀ ಊಟಕ್ಕ ಕಳೆ ಇರ್ತದ," ಅಂತಾ ಇವತ್ತಿಗೂ ತಮ್ಮ ಮಂಚದಲ್ಲಿ ಅಕ್ಕಪಕ್ಕದಲ್ಲಿ ನಮ್ಮೆಲ್ಲರನ್ನ ಕೂಡಿಸಿಕೊಂಡೇ ಮಾತಿಗೆ ಪ್ರಾರಂಭ. ಹಾಂಡೇಲಿಯಲ್ಲಿ ಅರವಿಂದರ ಅಮೃತ ಕಳಶದ ಸ್ಥಾಪನೆಯ ಕಾರ್ಯಕ್ರಮಕ್ಕೆ ಹೋದಾಗಿನ ಆತ್ಮೀಯತೆಯ ಅನುಭವ ನಿನ್ನೆಯಂತಿದೆ. ಒಂದೇ ಟೇಬಲ್ ಮೇಲೆ ಕವಿ

ಬೇಂದ್ರೆ, ದೇವದತ್ತ, ಎಸ್ಕೆಯವರೊಟ್ಟಿಗೆ ಉಂಡ ಆ ಮೃಷ್ಟಾನ್ನ ಭೋಜನ ಮರೆಯಲಾಗದು.

ಮನೆಯಲ್ಲಿ ಕಾಕಾನ ಸ್ವಂತ ಕೋಣೆ ಅಂದರೆ ಒಂದು ಪುಟ್ಟ ಸರಸ್ವತೀ ಮಂದಿರ. ಚಿಕ್ಕದಾದ ಕೋಣೆಯಲ್ಲಿ ಅಚ್ಚುಕಟ್ಟುತನದಿಂದಲೇ ಜೋಡಿಸಿಟ್ಟ ಪುಸ್ತಕ ಸರಸ್ವತಿ ವಿರಾಜಮಾನಳಾಗಿದ್ದರೆ ಇನ್ನೊಂದೆಡೆ, ಅರವಿಂದ, ಮಾತೆ, ರಾಘವೇಂದ್ರಸ್ವಾಮಿಗಳ ಫೋಟೊ ಶ್ರೀಗಂಧದ ಹಾರದೊಂದಿಗೆ ಕಂಗೊಳಿಸುತ್ತದೆ. ಸದಾ ಶುಭ್ರ ಹೊದಿಕೆ ಯಿಂದೊಡಗೂಡಿದ ಮಂಚ ಸುತ್ತಲೂ ಬರವಣಿಗೆಗೆ ಅಣಿಗೊಳಿಸಿದ ಕಾಗದ. ಅವರ ಕೋಣೆಯಲ್ಲಿ ಕಾಲಿಟ್ಟೊಡನೆ ದೇವ ಮಂದಿರದ ಗರ್ಭಗುಡಿಯಲ್ಲಿ ಕಾಲಿರಿಸಿದ ಪ್ರಶಾಂತ, ದಿವ್ಯ, ಅನುಭವ. ಒಂದೆಡೆಗೆ ದೇವರ ಫೋಟೊ ದರ್ಶನವಾದರೆ ಇನ್ನೊಂದೆಡೆಗೆ ನಿರ್ಮಲ ನಗೆಯೊಂದಿಗೆ ದೈವಿಕ ಭಾವನೆಯಿಂದೊಡಗೂಡಿದ ಸಜೀವಮೂರ್ತಿ ನನ್ನ ಕಾಕಾ, ಇಷ್ಟೊಂದು ಆತ್ಮೀಯ ಪ್ರೀತಿಯನ್ನು ನಾನು ಯಾರಿಂದಲೂ ಪಡೆದಿಲ್ಲ. ನನ್ನ ಜೀವನ ದಿನಚರಿಯನ್ನು ರೂಪಿಸಿದ ಶಿಲ್ಪಿ ನನ್ನ ಕಾಕಾ. ಹುಡುಗಾಟತನದಿಂದ ಹಾರಾಡುತ್ತಲಿದ್ದ ಸಮಯದಲ್ಲಿ ದೇವರ ಧ್ಯಾನದ ದೀಪವನ್ನು ಹೊತ್ತಿಸಿ, ಸಮಯಕ್ಕೆ ತಕ್ಕ ಧ್ಯಾನ- ಪ್ರಾರ್ಥನೆಯನ್ನು ಮಾಡಿ ಆನಂದಿಸುವ ಆನಂದಜ್ಯೋತಿಯನ್ನು ಬೆಳಗಿಸಿದ್ದಾರೆ.

ನಾನು ಎಂಬ ಅಹಂಕಾರವನ್ನು ತೊರೆದು ಎಲ್ಲವೂ ನೀನೇ ಎಂದು ಭಗವಂತನಿಗೆ ತನ್ನನ್ನು ಅರ್ಪಿಸಿಕೊಂಡ ನಾನಿಕಾಕಾ ಮೃದು ಹೃದಯದ ಹೆಂಗರಳಿನವರು. ಅವರ ೬೦ನೇ ವರ್ಷದ ಷಷ್ಟಬ್ದಿ ಪೂರ್ತಿ ಸಮಾರಂಭ ನಿಮಿತ್ತ ಗದುಗಿನಲ್ಲಿ ಜರುಗಿದ ಶ್ರೋತೃ ಸಮ್ಮೇಳನದಲ್ಲಿ ಕವಿ ದೇವದತ್ತ ಹೇಳಿದ್ದನ್ನು ಸ್ಮರಿಸುತ್ತೇನೆ. "ನಾ, ನೀ ಎಂದೆನ್ನುವ ವರು ಮೆಚ್ಚುವಂಥ ಸುಮನ ಹೃದಯ ನಾನಿಯದು, ಸಿರಿವಂತಿಕೆ ನಯವಿನಯವು ಸದಯ" ತಾವು ಎಷ್ಟೇ ಉಚ್ಚ ಸ್ಥಾನಕ್ಕೆ ಏರಿದರೂ ನಿಗರ್ವಿ ಕಾಕಾನಲ್ಲಿ ಮೊದಲಿನ ಪ್ರೀತಿಯನ್ನೇ ಕಾಣುತ್ತೇನೆ. ಸಾಹಿತ್ಯ ಅಕಾದೆಮಿಯಿಂದ ಪ್ರಶಸ್ತಿ ನನ್ನ ಕಾಕಾನಿಗೆ ಬಂದಿದೆ ಎಂಬ ಹೆಮ್ಮೆಯಿಂದ ಅವರಲ್ಲಿಗೆ ಹೋದಾಗ ಎಂದಿನಂತೆ ಹಿಂದಿನ ಅರಳಿದ ಹೂವಿನಂತಹ ನಗೆ ನನಗೆ ನಾಚಿಕೆಯನ್ನುಂಟು ಮಾಡಿತು. ಮನೆ ಮಕ್ಕಳಲ್ಲಿ ಸಮಾನ ಪ್ರೀತಿಯನ್ನು ಹಂಚುತ್ತಿದ್ದಾರೆ ಎನ್ನುವದಕ್ಕೆ ಸದ್ಯದ ಧಾರವಾಡದ ಜೀವನವೇ ಸಾಕ್ಷಿ. ಧಾರವಾಡದ ಕಲ್ಯಾಣನಗರದಲ್ಲೊಂದು, ಮಾಳಮಡ್ಡಿಯಲ್ಲೊಂದು ಇರುವ ಎರಡೂ ಮನೆಗಳಲ್ಲಿ ದಿನದ ೨೪ ಗಂಟೆಗಳನ್ನು ಸಮನಾಗಿ ವಿಂಗಡಿಸಿ ಯಾರಿಗೂ ನೋವಾಗದ ರೀತಿಯಲ್ಲಿದ್ದು ಸಮನ್ವತೆಯನ್ನು ಸಹಜ ರೀತಿಯಲ್ಲಿ ಕಾಯ್ದುಕೊಂಡು ಬಂದಿದ್ದಾರೆ. ಅವರೊಟ್ಟಿಗೆ ೨ ವರ್ಷ ಹಿಂದೆ ಮಂತ್ರಾಲಯಕ್ಕೆ ಹೋಗಿದ್ದು ಮರೆಯಲಾರದ ಘಟನೆ. ಪರಸ್ಥಳದ ಅಡಚಣೆ. ಆದರೂ ನಗುತ್ತ, ನಗಿಸುತ್ತಲೇ ರಾಯರ ದರ್ಶನ ಮಾಡಿಸಿ ಕೊಂಡು ಮರಳಿದರು.

# ಎನ್ಕೆ ಅವರ ಬಹುಮುಖ ಸಾಹಿತ್ಯಸೇವೆ

**ಕೆ. ಜಿ. ಕಾಟ್ವೆ**

ದಿನಾಂಕ ೩೦-೮-೧೯೮೦ ರಂದು ಎನ್ಕೆಯವರನ್ನು ನಾನು ಮೊದಲು ಕಂಡದ್ದು; ಸ್ಥಳ, ಬಾಗಲಕೋಟೆ; ಸಂದರ್ಭ, ಕರ್ನಾಟಕ ಆರೋವಿಲ್ ಮಿತ್ರ ಸಂಘವು ತನ್ನ ಬಾಗಲಕೋಟೆ ಶಾಖೆಯ ಆಶ್ರಯದಲ್ಲಿ ಏರ್ಪಡಿಸಿದ್ದ ವಿಚಾರ ಸಂಕಿರಣ. ಇಡೀ ದಿವಸ ನಡೆದ ಈ ಕಾರ್ಯಕ್ರಮದ ವಿಷಯ, ಶ್ರೀ ಮಾತಾರವಿಂದರ ತತ್ವ ಬೋಧಕ್ಕೆ ಸಂಬಂಧಪಟ್ಟಿದ್ದು. ಮುಖ್ಯ ಉಪನ್ಯಾಸಕರು ಶ್ರೀ ಅರವಿಂದ ಆಶ್ರಮದ ಹಿರಿಯ ಸಾಧಕರಾದ ಡಾ. ಮಹೇಶ್ವರಿ ಮತ್ತು ಪ್ರಾ. ಸಿ. ಎಸ್. ಶರ್ಮ ಅಲ್ಲದೆ ಎನ್ಕೆ ಅವರು. ಈ ಪ್ರಥಮ ಭೇಟಿಯಲ್ಲಿ ಆರೋವಿಲ್ ಮಿತ್ರ ಸಂಘದ ಸಂಚಾಲಕ ಎಸ್. ವಿ. ಸಬ್ನೀಸ್ ಅವರು ಕರ್ನಾಟಕ ಸಾಹಿತ್ಯ ಪ್ರಪಂಚದ ಒಬ್ಬ ಅಗ್ರಗಣ್ಯ ಸಾಹಿತಿ ಎಂಬ ಅಭಿದಾನದಿಂದ ಎನ್ಕೆಯವರನ್ನು ನನಗೆ ಪರಿಚಯ ಮಾಡಿಕೊಟ್ಟರು.

ಇದರ ಸತ್ಯಾಂಶವು ಕೂಡಲೇ ನನಗೆ ಎರಡು ವಿಧಗಳಿಂದ ಪೂರ್ಣ ರೀತಿಯಲ್ಲಿ ಮನವರಿಕೆಯಾಯಿತು. ಮೊದಲನೆಯದು, ಎನ್ಕೆಯವರು ವಿಚಾರ ಸಂಕಿರಣದಲ್ಲಿ ಸ್ವತಃ ಮಾಡಿದ ಸಾಹಿತ್ಯ ಮತ್ತು ಆಧ್ಯಾತ್ಮಿಕ ದೃಷ್ಟಿಗಳಿಂದ ಪ್ರತಿಭಾಪೂರ್ಣವಾದ ಉಪನ್ಯಾಸ. ಎರಡನೆಯದು, ಡಾ. ಮಹೇಶ್ವರಿ ಮತ್ತು ಪ್ರಾ. ಶರ್ಮ ಇವರು ಆಂಗ್ಲ ಭಾಷೆಯಲ್ಲಿ ಮಾಡಿದ ಉಪನ್ಯಾಸಗಳನ್ನು ಸಂಕಿರಣದಲ್ಲಿ ಭಾಗವಹಿಸಿದ ಅನೇಕರಿಗೆ ಚೆನ್ನಾಗಿ ತಿಳಿಯುವಂತೆ ಕನ್ನಡದಲ್ಲಿ ಸಾರಾಂಶ ರೂಪದಲ್ಲಿ ತಿಳಿಸಿದ್ದು. ಈ ಕಷ್ಟತರವಾದ ಜವಾಬ್ದಾರಿಯನ್ನು ಅವರು ನಿರರ್ಗಳವಾಗಿ ಮತ್ತು ಸುಂದರ ಕನ್ನಡ ಶೈಲಿಯಲ್ಲಿ ನಿರ್ವಹಿಸಿದ್ದನ್ನು ನೋಡುತ್ತಿದ್ದ ನನಗೆ ಎನ್ಕೆಯವರ ಬಗ್ಗೆ ಅತೀವ ಗೌರವ ಮತ್ತು ಆದರಾಭಿಮಾನಗಳು ಉಂಟಾದದ್ದು ಆಶ್ಚರ್ಯವೇನಲ್ಲ.

ಸ್ವಲ್ಪ ಕಾಲದ ನಂತರ ಮಿತ್ರ ಕೆ. ಎಸ್. ಅನಂತರಾಮಯ್ಯನವರ ಮನೆಯಲ್ಲಿ ಏರ್ಪಡಿಸಿದ್ದ ಆರೋವಿಲ್ ಮಿತ್ರ ಸಂಘದ ಸತ್ಸಂಗದಲ್ಲಿ ಶ್ರೀ ಅರವಿಂದರ ಮಹೋನ್ನತ "ಸಾವಿತ್ರಿ" ಕಾವ್ಯದ ಬಗ್ಗೆ ಎನ್ಕೆಯವರು ಮಾಡಿದ ಪ್ರವಚನವನ್ನು ಕೇಳುವ ಸದವಕಾಶವು ನನಗೆ ಲಭಿಸಿತು. ಆಗ ಕೂಡ ಅತ್ಯಂತ ಮೇಲ್ಮಟ್ಟದ ಪ್ರಜ್ಞಾಸ್ಥಿತಿಯಲ್ಲಿ ಶ್ರೀ ಅರವಿಂದರು ಉದ್ಗರಿಸಿದ ಈ ಆಧ್ಯಾತ್ಮಿಕ ಕಾವ್ಯಕುಸುಮದ ಕೆಲವು ಅಂಶಗಳನ್ನು

ನಮ್ಮ ಗ್ರಾಹ್ಯಕ್ಕೆ ನಿಲುಕುವಂತೆ ಎನ್ಕೆಯವರು ಹೇಳಿದ್ದನ್ನು ಕೇಳಿ ಅವರ ಮೇಲಿನ ನನ್ನ ಗೌರವ ಭಾವನೆ ಇಮ್ಮಡಿಯಾಯಿತು.

ಇನ್ನೊಂದು ಬಾರಿ ನಮ್ಮ ಸಮಾಗಮವಾದದ್ದು ಮಿತ್ರ ಎಸ್. ವಿ. ಸಬ್ನೀಸ್ ಅವರ ಮನೆಯಲ್ಲಿ ಕನ್ನಡ ಸಾಹಿತ್ಯಕ್ಕೆ ಅವಿಶ್ರಾಂತವಾಗಿ ದುಡಿದ ಎನ್ಕೆಯವರಿಗೆ ಕರ್ನಾಟಕ ಸಾಹಿತ್ಯ ಅಕಾದೆಮಿ ಪ್ರಶಸ್ತಿಯು ದೊರಕಿದ ಸಂದರ್ಭದಲ್ಲಿ ಅವರನ್ನು ಸತ್ಕರಿಸುವ ಉದ್ದೇಶದಿಂದ ಒಂದು ಸಮಾರಂಭವನ್ನು ಅರೋವಿಲ್ ಮಿತ್ರ ಸಂಘದ ವತಿಯಿಂದ ಏರ್ಪಡಿಸಲಾಗಿತ್ತು. ವಿನಯ, ಗಾಂಭೀರ್ಯ ಮತ್ತು ಪಾಂಡಿತ್ಯಗಳೇ ಮೂರ್ತಿವೆತ್ತಂತೆ ಅವರು ನಮ್ಮ ಅಭಿನಂದನೆಗೆ ಉತ್ತರ ಕೊಡುತ್ತ ಮಾತಾಡಿದ ದೃಶ್ಯವು ಇನ್ನೂ ನನ್ನ ಮನಃಪಟಲದ ಮೇಲೆ ಚಿತ್ರೀಕರಣವಾದಂತೆ ಭಾಸವಾಗುತ್ತದೆ.

ಕರ್ನಾಟಕ ಅರೋವಿಲ್ ಮಿತ್ರ ಸಂಘವು ೧೯೮೨ ರ ಪೂರ್ವಾರ್ಧದಲ್ಲಿ ಭಗವಾನ್ ಶ್ರೀ ಅರವಿಂದರ ತತ್ವಗಳನ್ನು ಸಾಂಪ್ರದಾಯಕ ವೇದಾಂತ ತತ್ವಗಳೊಡನೆ ಹೋಲಿಸಿ ಶ್ರೀ ಅರವಿಂದರ ವಿಶೇಷತರ ಕೊಡುಗೆಯಾದ ಪೂರ್ಣಯೋಗದ ಬಗ್ಗೆ ಕನ್ನಡದಲ್ಲಿ ಪ್ರಚಾರ ಮಾಡಲಿಕ್ಕೆ ಒಂದು ಗ್ರಂಥಮಾಲಿಕೆಯನ್ನು ಪ್ರಕಾಶ ಮಾಡಬೇಕೆಂಬ ನಿರ್ಣಯವನ್ನು ತೆಗೆದುಕೊಂಡಿತು. ಇದನ್ನು ಕಾರ್ಯಗತ ಮಾಡಬೇಕೆಂಬ ನಮ್ಮ ಮನವಿಯನ್ನು ಎನ್ಕೆಯವರು ಕೂಡಲೇ ಮಾನ್ಯ ಮಾಡಿ ಅತ್ಯಲ್ಪ ಕಾಲದಲ್ಲಿ "ಭಾರತೀಯ ಧರ್ಮ ಪರಂಪರೆ ಮತ್ತು ಭಗವಾನ್ ಶ್ರೀ ಅರವಿಂದರ ದರ್ಶನ"ವೆಂಬ ಶಿರೋನಾಮೆಯಲ್ಲಿ ಒಂದು ವಿದ್ವತ್ಪ್ರಭೆಯುಳ್ಳ ಹೊತ್ತಿಗೆಯನ್ನು ಬರೆದಿದ್ದಲ್ಲದೆ ಅದರ ಮುದ್ರಣ ಕಾರ್ಯದಲ್ಲಿ ಸಹ ತಮ್ಮ ಪೂರ್ಣ ಸಹಕಾರವನ್ನು ನೀಡಿ ಈ ಪ್ರಥಮ ಪ್ರಕಾಶನವನ್ನು ಅರೋವಿಲ್ ಮಿತ್ರ ಸಂಘವು ಪೂರ್ವಭಾವಿಯಾಗಿ ಯೋಚಿಸಿದ್ದಂತೆ ಶ್ರೀ ಅರವಿಂದರ ಜನ್ಮದಿನ ಅಂದರೆ ೧೯೮೨ ರ ಆಗಸ್ಟ್ ತಿಂಗಳ ೧೫ನೇ ತಾರೀಖಿನ ದಿವಸ ನಡೆದ ಸಮಾರಂಭದಲ್ಲಿ ಡಾ. ಆರ್. ಎಸ್. ಮುಗಳಿ ಇವರ ಕರಕಮಲದಿಂದ ಬಿಡುಗಡೆ ಮಾಡಿಸಲಾಯಿತು. ಅನಿವಾರ್ಯ ಕಾರಣದಿಂದಾಗಿ ಎನ್ಕೆಯವರು ಈ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಭಾಗವಹಿಸಲಿಕ್ಕಾಗಲಿಲ್ಲ. ಆದರೂ ಮಿತ್ರ ಬಿ. ಎಸ್. ಅಂಗಡಿ ಇವರ ನೇತೃತ್ವದಲ್ಲಿ ಸಂಘದ ಗಣೇಶಗುಡಿ ಶಾಖೆಯ ಆಶ್ರಯದಲ್ಲಿ ಎನ್ಕೆಯವರನ್ನು ಸೂಕ್ತ ರೀತಿಯಲ್ಲಿ ಸನ್ಮಾನಿಸಲಾಯಿತು.

ಎನ್ಕೆಯವರು ತಮ್ಮ ಕೃತಿಯಾದ "ಭಾರತೀಯ ಧರ್ಮ ಪರಂಪರೆ ಮತ್ತು ಭಗವಾನ ಶ್ರೀ ಅರವಿಂದರ ದರ್ಶನ"ದಲ್ಲಿ ಅತ್ಯಂತ ಗಹನ ವಿಷಯಗಳನ್ನು ಸಂಕ್ಷೇಪವಾಗಿ ಮತ್ತು ಸಾಧಾರಣ ವಾಚಕರಿಗೆ ಮನದಟ್ಟಾಗುವಂತೆ ನಿರೂಪಿಸಿದ್ದಾರೆ. ಇದೇ ಸಂದರ್ಭದಲ್ಲಿ ನಮ್ಮೀರ್ವರ ನಡುವೆ ನಡೆದ ಪತ್ರ ವ್ಯವಹಾರದಿಂದಾಗಿ ನಮ್ಮ ಸ್ನೇಹ ಭಾವವು ಕ್ರಮೇಣ ಒಂದು ರೀತಿಯ ಭ್ರಾತೃಭಾವದಲ್ಲಿ ಪರಿವರ್ತನ ಹೊಂದುವಂತಾಯಿತು.

# ನಾನಿ ಎನ್ಕೆ ಆದ ಕಾಲ

---

ಎಚ್. ಎಸ್. ಪಾಟೀಲ

ಅದೇನು ಅಷ್ಟು ಹಿಂದಿನ ಕಾಲವಲ್ಲ ! ಇದೇ ಶತಮಾನದ ಮೊದಲರ್ಧದಲ್ಲಿ ಸಂಭವಿಸಿದ ಕತೆಯಿದು. ಆದರೆ ಶತಮಾನ ಎಂಬ ಶಬ್ದವನ್ನು ಓದಿದೊಡನೆ, ಓಹೊ! ಹಾಗಾದರೆ ಇದು ಹಳೆಯ ಕಂತೆ ಎಂದೇನೂ ಮೂಗು ಮುರಿಯುವಂತಿಲ್ಲ. ಈ ಶತಮಾನದ ಎರಡನೆಯ ದಶಕದ ಆರಂಭದಲ್ಲಿ ಆಗಿನ್ನೂ ಮೊದಲನೆಯ ಪ್ರಪಂಚ ಮಹಾಯುದ್ಧವು ಆರಂಭವಿರಲಿಲ್ಲ. ಅದಕ್ಕಿಂತ ಒಂದು ವರ್ಷ ಮಾತ್ರ ಮೊದಲು ಶ್ರೀ ವೀರನಾರಾಯಣನ ಊರಾದ ಗದುಗಿನಲ್ಲಿ ಜನ್ಮ ತಳೆದ ನಾರಾಯಣ ಕೃಷ್ಣ ಕುಲಕರ್ಣಿಯವರು ಇಟ್ಟುಕೊಂಡ ಹೆಸರು ಸಾರ್ಥಕವಾಗುವಂತೆ, ಆ ಸ್ಥಳದ ಅಧಿದೇವತೆಯೆನಿಸಿದ ನಾರಾಯಣನ ನಾಮಧೇಯವನ್ನು ಇವರೂ ತಳೆದಿರುವರು. ಆದರೆ ಆ ಪ್ರಥಮ ಪ್ರಪಂಚ ಯುದ್ಧವು ಆರಂಭವಾಗುವ ಕೆಲವು ತಿಂಗಳ ಮೊದಲು ಹುಟ್ಟಿದ ನನಗೆ ಎನ್ಕೆ ಅವರ ಪರಿಚಯವಾದುದು ನಾರಾಯಣ ಎಂದೂ ಅಲ್ಲ, ಎನ್ಕೆ ಎಂದೂ ಅಲ್ಲ. ಕೇವಲ "ನಾನಿ" ಎಂದು. ಕೋರ್ಟಿನಲ್ಲಿ ಕೆಲಸ ಮಾಡುತ್ತಿದ್ದ, ಅಚ್ಚುಕಟ್ಟಿನ ವೇಷಭೂಷಣಗಳನ್ನು ಮೆಚ್ಚುತ್ತಿದ್ದ ಅವರ ಭಾವಂದಿರ ಮನೆಯಲ್ಲಿ ಇರುತ್ತಿದ್ದ ನಾನಿಯು, ಹುಬ್ಬಳ್ಳಿಯಲ್ಲಿ ಅದೇ ಸ್ಟೇಶನ್ ಬೀದಿಯ ಅಡ್ಡ ಓಣಿಯ ಜಾಳವೊಂದರ ಮೊದಲನೆಯ ಮನೆಯಲ್ಲಿ ವಾಸಿಸುತ್ತಿದ್ದು, ತಮ್ಮ ಉಡುಪು-ತೊಡುಪುಗಳಲ್ಲಿ ಅಷ್ಟೇ ಅಲಕ್ಷ್ಯವನ್ನು ತಳೆದಿದ್ದು, ಅದೇ ಕೋರ್ಟಿನಲ್ಲಿ ಕೆಲಸಕ್ಕಿದ್ದ ನಮ್ಮ ಹಿರಿಯಣ್ಣನ ಮನೆಯಲ್ಲಿ ನಾನು ವಿದ್ಯಾರ್ಥಿಯಾಗಿದ್ದಾಗ ನಾನಿಯು ಕೂಡ ಕೆಲಕಾಲ ನಮ್ಮ ಶಾಲೆಗೇ ಓದಲಿಕ್ಕೆ ಬರುತ್ತಿದ್ದನು. ವಯಸ್ಸಿನಲ್ಲಿ ನನಗಿಂತ ತುಸು ಹಿರಿಯನಾದ ನಾನಿಯು ಅದೇನೊ ಕಾರಣದಿಂದಾಗಿ ವರ್ಗದಲ್ಲಿ ನನ್ನ ಹಿಂದಿನ ಇಯತ್ತೆಯಲ್ಲಿ ಓದುತ್ತಿದ್ದ. ಆ ಅಂತರವು ಕೇವಲ ನಾವು ಮೊದಲು ಓದುತ್ತಿದ್ದ ಶಾಲೆಯಲ್ಲಿ ಅಷ್ಟೆ ಅಲ್ಲದೆ ಮುಂದೆ ಅವನು, ಪರಿಸ್ಥಿತಿಯ ಕಾರಣವಾಗಿ, ಗದುಗಿಗೆ ಕಲಿಯಲಿಕ್ಕೆ ಹೋದರೂ, ಅನಂತರ ನಾವಿಬ್ಬರೂ ಕರ್ನಾಟಕ ಕಾಲೇಜಿನಲ್ಲಿ ಪದವಿ ಪರೀಕ್ಷೆಗಾಗಿ ಓದುತ್ತಿದ್ದಾಗ್ಗೆಯೂ ಮತ್ತು ಅದಕ್ಕೂ ಮುಂದೆ ಎಂ.ಎ. ಪದವಿಯನ್ನು ಪಡೆಯುವಾಗ್ಗೆ ಕೂಡ ಮುಂದುವರಿಯಿತು. ಆದರೆ ವರ್ಷಗಳಲ್ಲಿ ಹಿರಿಯ, ವರ್ಗದಲ್ಲಿ ಕಿರಿಯ ಎಂಬುದು ನಮ್ಮಿಬ್ಬರ

ಸ್ಥಿತಿ-ಗತಿಯಿದ್ದರೂ ಅದು ನಮ್ಮ ಸ್ನೇಹದಲ್ಲಿ ಎಂದೂ ಆ ಬಗೆಯ ಭೇದ ಬುದ್ಧಿಯನ್ನು ಹುಟ್ಟಿಸಿರಲಿಲ್ಲ. ಮುಂದೆ ಕಾರಣಾಂತರದಿಂದ ನನ್ನ ಮತ್ತು ಎನ್ಕೇನ ಸಂಪರ್ಕವು ಬಿಟ್ಟೂ ಬಿಡದೆ ನಡೆದರೂ ನನ್ನ ಮತ್ತು ನಾನಿಯ ಗೆಳೆತನವು ಮಾತ್ರ ಅಬಾಧಿತವಾಗಿ ಮುಂದುವರಿದಿದೆ.

ಹುಬ್ಬಳ್ಳಿಯಲ್ಲಿ ನಾವಿಬ್ಬರೂ ಶಾಲೆಯಲ್ಲಿ ಕಲಿಯುತ್ತಿದ್ದಾಗ್ಗೆ ನಾನೆ ಗಿಡ್ಡನಾಗಿದ್ದರೂ ನಾನಿಯು ಮಾತ್ರ ಅತ್ಯಂತ ಕುಳ್ಳ ಮತ್ತು ಸೀರ ಮೈಯ ಬಾಲಕನಾಗಿದ್ದ. ಅಂತೆಯೆ ನಾವು ಅವನಿಗೆ "ಸಿಬಿರುಕಡ್ಡಿಯ ಸಿಪಾಯಿ" ಎಂದು ಕರೆಯುತ್ತಿದ್ದೆವು. ತೆಳ್ಳನೆಯ ಬೆಳ್ಳನೆಯ ದೇಹ, ಬಿದಿರು ಮೆಳೆಯಲ್ಲಿ ಕಾಣುವ ದೊಡ್ಡ ಕಣ್ಣುಗಳಂತಹ ತಲೆ, ಆದರೆ ಅದರಲ್ಲಿ ಅಡಗಿಕೊಂಡಿದ್ದ ಕಣ್ಣುಗಳಲ್ಲಿ ಮಾತ್ರ ತುಂಬು ಬೆಳಕು; ಅತ್ಯಂತ ತೇಜವುಳ್ಳ ದೃಷ್ಟಿ. ಲಂಡ ಚಣ್ಣವು ಸಾಮಾನ್ಯವಾಗಿ ನಾವೆಲ್ಲರೂ ಆಗ್ಗೆ ತೊಡುತ್ತಿದ್ದ ವೇಷ. ಆದರೆ ಆ ಚಣ್ಣದ ತೋಳುಗಳಿಂದ ಕೋಲಿನಂತಹ ಕಾಲುಗಳು ಹೊರಗೆ ಕಾಣುತ್ತಿದ್ದಾಗ್ಗೆ ಈ ಹುಡುಗನು ಗಾಳಿಯ ಒತ್ತಡದಿಂದ ನಡೆಯುತ್ತಿರಬಹುದೇನು ಎಂಬ ಪ್ರಶ್ನೆಯು ಉದ್ಭವಿಸುವಂತಿತ್ತು. ಇತ್ತ ಮಾತನಾಡಲಿಕ್ಕೆ ಅವನು ಆರಂಭಿಸಿದರೆ ಮಾತ್ರ ಕೇಳುವವರು ಮುಗ್ಧರಾಗಿ ನಿಲ್ಲಬೇಕು. ಎಲ್ಲೆಲ್ಲಿಯ ಸಂಗತಿಗಳು, ಎಂತೆಂತಹ ವಿಷಯಗಳು ಅವನ ವಾಗ್ಝರಿಯಲ್ಲಿ ತೇಲಿಬರುತ್ತಿದ್ದವು; ಲೀಲಾಜಾಲವಾಗಿ ಹೆಣೆದುಕೊಂಡು ಸಾಗುತ್ತಿದ್ದವು.

ಅದು ರಾಜಕೀಯದಲ್ಲಿ ಅತ್ಯಂತ ಕ್ಷುಬ್ಧವಾದ ಕಾಲ. ಹುಬ್ಬಳ್ಳಿಯಲ್ಲಿಯಂತೂ ಎಡೆಬಿಡದ ಕಾರ್ಯಕ್ರಮಗಳು. ಆದರಲ್ಲಿ ವಿದ್ಯಾರ್ಥಿಗಳಾಗಿದ್ದ ನಾವು ಹುಡುಗರೇ ಕೆಚ್ಚೆದೆಯ ಕಾಲಾಳುಗಳು. ಸಮೀಪದ ಹಳ್ಳಿಯೊಂದರಲ್ಲಿ ಸಿಂದಿಯ (ಈಚಲು) ಮರಗಳನ್ನು ಕಡಿದು ಅಬಕಾರೀ ಕಾಯದೆಗಳನ್ನು ಮುರಿಯುವದು, ಸೈಮನ್ ಕಮೀಶನ್ನಿ (ನಿಯೋಗ)ನ ಬಹಿಷ್ಕಾರ, ಉಪ್ಪಿನ ಸತ್ಯಾಗ್ರಹ ಇವೇ ಮೊದಲಾದ ಕಾರ್ಯಕ್ರಮಗಳಿಂದ ಇಡಿಯ ನಾಡಿನಲ್ಲಿ ಹೊಸ ಬಾಳಿನ ಬಿರುಗಾಳಿಯು ಬೀಸುತ್ತಿತ್ತು. ಇತ್ತ ಸಾಹಿತ್ಯದ ಕ್ಷೇತ್ರದಲ್ಲಿ ಅದೇ ಆಗ ಶಾಂತಕವಿಗಳ "ಬೇಡಲು ಬಂದಿಹೆ ಕನ್ನಡ ದಾಸಯ್ಯ" ಎಂಬ ಹಾಡು ಮತ್ತು "ರಕ್ಷಿಸು ಕರ್ನಾಟಕ ದೇವೀ" ಎಂಬ ಪ್ರಾರ್ಥನೆಗಳು ಮನೆಮನೆಗಳಲ್ಲಿ ಕೇಳಿಸುತ್ತಿದ್ದವು. ಅಷ್ಟರಲ್ಲಿ ಮೊದಲ ಬಾರಿಗೆ ಕರ್ನಾಟಕದಲ್ಲಿ ಸೇರಿದ ಭಾರತ ರಾಷ್ಟ್ರೀಯ ಕಾಂಗ್ರೆಸಿನ ಅಧಿವೇಶನದಲ್ಲಿ, ಅದೊಂದೆ ಬಾರಿ ಅಧ್ಯಕ್ಷತೆಯನ್ನು ವಹಿಸಿದ ಮಹಾತ್ಮಾ ಗಾಂಧಿಯವರ ಸಾನ್ನಿಧ್ಯ ಮತ್ತು ಸ್ವಾಗತಗಳ ಸಂತೋಷದಲ್ಲಿ ಹುಯಿಲಗೋಳ ನಾರಾಯಣರಾಯರು ರಚಿಸಿದ "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು" ಎಂಬ ಹಾಡು ಪ್ರತಿಯೊಬ್ಬರ ಬಾಯಿಯಲ್ಲಿ, ಪ್ರತಿಯೊಂದು ಸಭೆ ಸಮಾರಂಭಗಳಲ್ಲಿ ಕೇಳಿಬರುತ್ತಿದ್ದ ನಾಡಹಾಡಾಗಿ ಸ್ಫೂರ್ತಿಯನ್ನು ನೀಡುತ್ತಿದ್ದವು. ಇತ್ತ ಸಾಲಿ ರಾಮಚಂದ್ರರಾಯರು ಬರೆದ "ಕನ್ನಡದ ಪುಲ್ಲೆನಗೆ ಪಾವನ ತುಲಸಿ"

ಎಂಬ ಭಾವಪೂರ್ಣ ಗೀತವು ಎಲ್ಲ ಜನರ ಹೃದಯವನ್ನು ಸೆಳೆದಿದ್ದರೆ, ಬೆಟಗೇರಿ ಕೃಷ್ಣಶರ್ಮರ "ಎನಿತು ಇನಿದು ಈ ಕನ್ನಡ ನುಡಿಯು" ಎಂಬ ತಾಯ್ನುಡಿಯ ಹಿರಿಮೆಯನ್ನು ಸಾರಿ ಹೇಳಿ ಪ್ರತಿಯೊಬ್ಬ ತರುಣನ ಮನೋಮಂದಿರದಲ್ಲಿ ಮನೆ ಮಾಡಿಕೊಂಡು ಅವನ ಅಭಿಮಾನವನ್ನು ಕುದುರಿಸಿ ಅವನನ್ನು ಜಾಗ್ರತಗೊಳಿಸುವಂತಹ ಪದ್ಯವು ಅತ್ಯಂತ ಲೋಕಪ್ರಿಯವಾಗಿತ್ತು. ಆಗ ಶಾಲೆಯ ಮಾಧ್ಯಮಿಕ ತರಗತಿಗಳಲ್ಲಿ ಓದುತ್ತಿದ್ದ ನಾನು ಇತ್ತ ಬೆಂಜಾಮಿನ್ ಡಿಸ್ರೇಲಿಯ ಭಾಷಣಗಳನ್ನು ಓದುವದು, ಲೋಕಮಾನ್ಯ ತಿಲಕರಂತಹ ಭಾರತೀಯ ಕ್ರಾಂತಿಕಾರಕ ಮೇಧಾವಿಗಳ ಪುಣ್ಯಸ್ಮೃತಿಯ ರೂಪದಲ್ಲಿ ಲೇಖನಗಳನ್ನು ಬರೆಯುವದು, ಹುಯಿಲಗೋಳ ನಾರಾಯಣರಾಯರ "ಶಿಕ್ಷಣ ಸಂಭ್ರಮ" ಮತ್ತು ಕೆರೂರ ವಾಸುದೇವಾಚಾರ್ಯರ "ಪತಿವಶೀಕರಣ"ದಂತಹ ನವೀನ ರೀತಿಯ ಸಾಮಾಜಿಕ ನಾಟಕಗಳಲ್ಲಿ ಪಾತ್ರಗಳನ್ನು ವಹಿಸಿ, ನಾಟಕಗಳನ್ನು ಕಳೆಯೇರಿಸುವದು, ಸ್ವಂತದ ಕಲಾ ನೈಪುಣ್ಯವನ್ನು ಮೆರೆಸುವದು ಮೊದಲಾದ ಸಾಹಿತ್ಯಿಕ - ಸಾಂಸ್ಕೃತಿಕ ಕಾರ್ಯಕಲಾಪಗಳಲ್ಲಿ ತೊಡಗಿದಾಗ್ಗೆ ಒಂದು ದಿನ ಹಠಾತ್ತಾಗಿ ಗದುಗಿನಿಂದ ನನಗೊಂದು ಹಾಳೆಗಳ ಕಟ್ಟು ಅಂಚೆಯಲ್ಲಿ ಬಂದಿತು. ಅದನ್ನು ತಿರುತಿರುವಿ ನೋಡಲಾಗಿ ಅದು ನಾನಿಯಿಂದ ಬಂದ ಕಾಗದಗಳ ಕಟ್ಟು ಎಂಬುದು ತಿಳಿದು ಬಂದಿತು. ನನಗೆ ಸಂತೋಷದ ಜೊತೆಯಲ್ಲಿ, ಇಂತಹ ಹಾಳೆಗಳನ್ನು, ಅದೂ ಮುದ್ರಿತ ಹಾಳೆಗಳನ್ನು ಕಳಿಸುವವರ ರಹಸ್ಯವೇನಿರಬಹುದು ಎಂಬ ಆಶ್ಚರ್ಯವೂ ಆಯಿತು. ಆ ಕಟ್ಟನ್ನು ಒಡೆದು ನೋಡುತ್ತೇನೆ ಅದು ಸ್ವಚ್ಛ ಮತ್ತು ಶುದ್ಧ ಕನ್ನಡದಲ್ಲಿ ರಚಿತವಾದ ಒಗಟುಗಳ ಸಂಕಲನವಾಗಿತ್ತು. ಅದರ ತಲೆಯ ಭಾಗದಲ್ಲಿ "ನಿನ್ನ ಅತ್ತಿಗೆಯವರಿಗೆ ಓದಿ ತೋರಿಸು, ಕೊಡು" ಎಂಬ ಒಕ್ಕಣಿಕೆಯಿತ್ತು. ನಾನು ಆ ಒಗಟುಗಳನ್ನು ಓದಿದೆ, ಮತ್ತೆ ಮತ್ತೆ ಓದಿದೆ. ನಾನಿಯ ನವೀನ ವಿಚಾರಧಾರೆ, ಮತ್ತು ಸ್ವಭಾಷೆಯ ಉತ್ಕಟ ಅಭಿಮಾನದ ವಿಷಯವಾಗಿ ನನಗೆ ಅತ್ಯಂತ ಗೌರವವೆನಿಸಿತು. ಅವನ ಅಪೇಕ್ಷೆಯ ಮೇರೆಗೆ ಅಂದು ಸಂಜೆಯಲ್ಲಿ ನಾನು ಅವುಗಳಲ್ಲಿ ಕೆಲವನ್ನು ನನ್ನ ಅತ್ತಿಗೆಯವರಿಗೆ ಓದಿ ತೋರಿಸಿದೆ. ಅವರಿಗೆ ರೂಢಿಗತ ಮರಾಠಿಯ ಒಗಟುಗಳ ಬಳಕೆಗೆ ಒಳಗಾದ ಅವರಿಗೆ ಈ ಒಗಟುಗಳ ಭಾಷೆ, ಭಾವ ಮತ್ತು ಬಂಧಗಳು ಅಷ್ಟು ರುಚಿಸದಿದ್ದರೂ, ಕೇವಲ ಅದರ ನಾವೀನ್ಯಕ್ಕಾಗಿ ಮತ್ತು ಸರಳತೆಗಾಗಿ ಅವರು ಅವುಗಳನ್ನು ಒಪ್ಪಿದರು, ಕೊಂಡಾಡಿದರು.

ನವಕರ್ನಾಟಕದ ಅರುಣೋದಯದ ಆ ಕಾಲದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಅನೇಕ ಹೊಸಬಗೆಯ ಪ್ರಯತ್ನ - ಪ್ರಯೋಗಗಳು ನಡೆಯುತ್ತಿದ್ದರೂ ಸಾಮಾಜಿಕ ವಲಯಗಳಲ್ಲಿ, ಅನೇಕ ಸಾಂಸ್ಕೃತಿಕ ರೀತಿ-ನೀತಿಗಳಲ್ಲಿ ತನ್ನತನದ ಅರಿವು ಇನ್ನೂ ಅಷ್ಟು ಆಗಿರಲಿಲ್ಲ. ಉತ್ತರ ಕರ್ನಾಟಕದ ಮದುವೆ ಮೊದಲಾದ ಸಂದರ್ಭಗಳಲ್ಲಿ ಉರುಟಣೆಯ ಹಾಡು, ಬೀಗರ ಹಾಡು, ಹಸೆಗೆ ಕರೆಯುವ ಹಾಡು, ಮುಯ್ಯದ ಹಾಡು ಮೊದ

ಲಾದವು ಸುದೈವದಿಂದ ಅಚ್ಚಕನ್ನಡದಲ್ಲಿ ಪ್ರಚಲಿತವಾಗಿದ್ದರೂ ಮದುವೆಯ ಕಾಲದಲ್ಲಿ ಬಳಕೆಯಲ್ಲಿದ್ದ ಒಗಟುಗಳು ಮಾತ್ರ ಕನ್ನಡದಲ್ಲಿ ಇರಲೇ ಇಲ್ಲ. ಹೆಚ್ಚಾಗಿ ತಪ್ಪು ತಪ್ಪು ರಚನೆಯ ಮತ್ತು ದೋಷಯುಕ್ತ ಉಚ್ಚಾರದ ಸ್ಥಿತಿಯಲ್ಲಿ ಮರಾಠಿಯ ಒಗಟುಗಳು ಮತ್ತು ಸುಧಾರಿಸಿದ ಕಾದಂಬರಿಗಳಲ್ಲಿ ಅಲ್ಲಲ್ಲಿ ಹಿಂದಿಯ ಮತ್ತು ಇಂಗ್ಲಿಷ್ ಒಗಟುಗಳು ಕೇಳಬರುತ್ತಿದ್ದವು. ಈ ದುಃಸ್ಥಿತಿಯನ್ನು ಕಂಡು ಮರುಗಿಯೋ, ಇಡಿಯ ಕನ್ನಡ ನಾಡು ಹೊಸ ಗಾಳಿಯನ್ನು ಪ್ರತಿಯುಸಿರಿನಲ್ಲಿ ಸೇವಿಸುತ್ತ ಸ್ವಭಾಷೆಯ ಅಭಿಮಾನದಲ್ಲಿ ತವಕಿಸುತ್ತಿದ್ದಾಗ್ಗೆ ತಾನೂ ಒಂದು ಹೊಸ ಕ್ಷೇತ್ರದಲ್ಲಿ ಪ್ರಯೋಗವನ್ನು ಮಾಡಬೇಕು ಎಂದು ಪ್ರೇರಿತನಾಗಿಯೊ ನಾನಿಯು ತನ್ನ ಈ ನವೀನ ಸಾಹಿತ್ಯ ರಚನೆಗೆ ಕೈಹಾಕಿದಂತಿತ್ತು. ದೇಶದಲ್ಲಿ ನಡೆಯುತ್ತಿದ್ದ ಹೊಸ ಬಗೆಯ ಸಾಂಸ್ಕೃತಿಕ ಕಾರ್ಯಕಲಾಪಗಳಲ್ಲಿ ನಾನಿಯೂ ತನ್ನ ಕಾಣಿಕೆಯನ್ನು ಸಲ್ಲಿಸಿದನಲ್ಲ ಎಂಬ ಭಾವನೆಯು ಈಗ ಆ ಪ್ರಯತ್ನಕ್ಕಾಗಿ ಅಭಿನಂದನೆಗಳನ್ನು ಸಲ್ಲಿಸುವಂತಾಗಿದೆ.

ಅನಂತರ ನಾವು ಕೂಡ ನಮ್ಮ ಅಣ್ಣಂದಿರ ವರ್ಗಕ್ಕೆ ಅನುಸಾರವಾಗಿ ಗದುಗಿನ ವಾಸವನ್ನು ತೀರಿಸಿಕೊಂಡು ಧಾರವಾಡಕ್ಕೆ ಬಂದಿದ್ದೆವು. ಶುಕ್ರವಾರಪೇಟೆಯ ದಾರಿಯಲ್ಲಿದ್ದ ಚಿತ್ರಗಾರ ಓಣಿಯಲ್ಲಿ ನೆಲೆಸಿದ್ದೆವು. ಅದೇ ಭಾಗದ ಪ್ರಮುಖ ಬೀದಿಯಲ್ಲಿ ತನ್ನ ಮಾವಂದಿರ ಮನೆಯಲ್ಲಿ ನಾನಿಯು ಇರುತ್ತಿದ್ದನು. ಆಗ್ಗೆ ನಾನು ಊರಲ್ಲಿಯ ಗೆಳೆಯರೊಂದಿಗೆ ಶ್ರೀರಂಗರ "ಇದೇ ಸಂಸಾರ" ಎಂಬ ನಾಟಕದಲ್ಲಿ ಮತ್ತು ಕಾಲೇಜಿನಲ್ಲಿ ಅವರವೇ ಆದ "ವೈದ್ಯರಾಜ", "ದರಿದ್ರ ನಾರಾಯಣ" ಮೊದಲಾದ ನಾಟಕಗಳಲ್ಲಿ ಮತ್ತು ಬೇಂದ್ರೆಯವರ "ತಿರುಕರ ಪಿಡುಗು" ಎಂಬ ಏಕಪಾತ್ರಾಭಿನಯದ ನಾಟಕದಲ್ಲಿ ಪಾತ್ರವಹಿಸಿ ಒಡನಾಡಿಗಳಲ್ಲಿ ಪರಿಚಿತನಾಗಿದ್ದೆ. ಅದು ಧಾರವಾಡದಲ್ಲಿ ಅಪೂರ್ವವಾದ ಪ್ರಭಾವ ಬೀರುತ್ತಿದ್ದ ಬೇಂದ್ರೆಯವರಿಂದ ಪ್ರಾಮುಖ್ಯವನ್ನು ಪಡೆಯುತ್ತಿದ್ದ ಗೆಳೆಯರ ಗುಂಪಿನ ಚಟುವಟಿಕೆಗಳ ಕಾಲ; ಇತ್ತ ಕಾಲೇಜಿನ ಆವರಣದಲ್ಲಿ ಶ್ರೀರಂಗರಿಂದ ಪ್ರೇರಣೆಯನ್ನು ಪಡೆಯುತ್ತಿದ್ದ ಕನ್ನಡ ನಾಟ್ಯವಿಲಾಸಿಗಳ ಸಂಘದ ಕಾರ್ಯಕಲಾಪಗಳ ಕಾಲ. ನಾನಿ ಮತ್ತು ನಾನು ಊರಲ್ಲಿ ವಾಸಿಸುತ್ತಿದ್ದ ಕಾರಣದಿಂದ ಮತ್ತು ಕಾಲೇಜಿನಲ್ಲಿ ಕಲಿಯುತ್ತಿದ್ದ ಸಂಬಂಧದಿಂದ ಈ ಎರಡೂ ಗುಂಪುಗಳ ಜನರಲ್ಲಿ ಓಡಾಡಿಕೊಂಡು ಇದ್ದೆವು.

ಊರಲ್ಲಿಯೆ ಸ್ಥಾಪಿತವಾಗಿ ಹೆಚ್ಚು ಜನ ಕಾಲೇಜ ವಿದ್ಯಾರ್ಥಿಗಳಲ್ಲಿ ಆಕರ್ಷಕವಾಗಿದ್ದ ಇನ್ನೊಂದು ಸಂಸ್ಥೆಯೆಂದರೆ ಮಲ್ಲಸಜ್ಜನ ವ್ಯಾಯಾಮ ಶಾಲೆ. ನಾನು ಅಲ್ಲಿಗೆ ನಿಯಮಿತವಾದ ರೀತಿಯಲ್ಲಿ ಹೋಗುತ್ತಿದ್ದೆ; ಅತ್ತ ನಾನಿಯೂ ಆ ಸಂಸ್ಥೆಯ ಆಟ-ವ್ಯಾಯಾಮ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಿದ್ದ. ನಾನು ಪ್ರತಿದಿನ ಮುಂಜಾವಿನಲ್ಲಿ ತಿರುಗಾಡಲಿಕ್ಕೆ ಹೋಗುತ್ತಿದ್ದ ಸಂಗತಿಯು ನಾನಿಗೆ ತಿಳಿದು "ನಾನೂ ನಿನ್ನ ಸಂಗಡ ಬರುವೆ" ಎಂದು ಆತನು ಒಂದು ದಿನ ಹೇಳಿದನು. "ಆಗಲಿ ಬಾ" ಎಂದೆ ನಾನು.

"ಆದರೆ ಒಂದು ಜಿನ್ನಹ" ಎಂದು ಆತನು ಮುಂದುವರಿಸಿದ. "ನನ್ನದು ತುಸು ಗಾಢ ನಿದ್ರೆ. ನೀನು ನನ್ನನ್ನು ಎಬ್ಬಿಸಿ ಕರೆದುಕೊಂಡು ಹೋಗಬೇಕು" ಎಂದನು ಆತ. ನನಗೆ ಗೊತ್ತು. ಮಲಗಿದವರನ್ನು ಎಬ್ಬಿಸುವದು, ಅವರಲ್ಲಿಯೂ ನಾನಿಯು ಇರುವಂತಹ ಪರಿಸ್ಥಿತಿಯಲ್ಲಿ ಅವನನ್ನು ಎಬ್ಬಿಸುವದು ಎಷ್ಟು ಕಠಿಣ ಎಂಬುದು. ಅಂತೆಯೆ ಆ ಮಾತಿಗೆ "ಹೂ" ಎಂದ ನಾನು "ಆದರೆ ಬೀದಿಯಿಂದ, ನಿಮ್ಮ ಹೆಬ್ಬಾಗಿಲ ಮುಂದಿನಿಂದ ಮಾತ್ರ ನಾನು ಕೂಗುವೆನು, ನೀನು ಅಷ್ಟಕ್ಕೆ ಎದ್ದು ಬರಬೇಕು" ಎಂಬ ಮಾತನ್ನು ನಾನು ಜೋಡಿಸಿದೆ. ಆತ ಒಪ್ಪಿದ.

ಹಾಗೆ ಪ್ರತಿದಿನ ಬೆಳಗಿನಲ್ಲಿ ನಾವಿಬ್ಬರೂ ಎಷ್ಟೋ ದಿನ ಸೋಮೇಶ್ವರದ ದಾರಿಯಲ್ಲಿ, ರೇಲ್ವೆಯ ಹಳಿಗಳ ಆಚೆಗೆ ಹೋಗಿ ಒಂದು ದಿಬ್ಬದ ಮೇಲೆ ನಿಂತು, ಆದೇ ಉದಯವಾಗುತ್ತಿದ್ದ ಸೂರ್ಯನಿಗೆ ಸೂರ್ಯ ನಮಸ್ಕಾರ ಹಾಕುವದು, ೩೦-೪೦ ಉಠ-ಬೈಠಗಳನ್ನು ನಡೆಸುವದು ಮೊದಲಾದ ರೀತಿಯಲ್ಲಿ ಕಿರು ವ್ಯಾಯಾಮವನ್ನು ಮಾಡಿ ಬರುತ್ತಿದ್ದೆವು. ನಾಲ್ಕಾರು ವಾರಗಳ ವರೆಗೆ ಹೀಗೆ ನಮ್ಮ ಕಾರ್ಯಕ್ರಮವು ನಡೆದ ಮೇಲೆ ಒಂದು ದಿನ ನಾನಿಯು, ತಿರುಗಿ ಬರುವಾಗ್ಗೆ, ತನ್ನ ತೋಳ ಮೇಲಿನ ಶರ್ಟನ್ನು ಸರಿಸಿ, ರಟ್ಟೆಯ ಸ್ನಾಯುಗಳನ್ನು ಉಬ್ಬಿಸಿ ತೋರಿಸಿ ಅತ್ಯಂತ ಆನಂದ, ಅಭಿಮಾನಗಳ ಮುದ್ರೆಯಲ್ಲಿ "ನೋಡು, ನನ್ನ ಮಸಲ್ಸ್ ಹೇಗೆ ಡೆವಲಪ್ ಆಗುತ್ತಿವೆ" ಎಂದ. ನನಗೂ ಸಂತೋಷವಾಗಿತ್ತು. ಆದರೆ ಪರಿಣಾಮದಲ್ಲಿ ಮಾತ್ರ ನಮ್ಮ ಅಲ್ಪ ಕಾಲದ ವ್ಯಾಯಾಮವು ಈಪ್ಸಿತ ಫಲವನ್ನು ಆ ಪ್ರಮಾಣದಲ್ಲಿ ಕೊಟ್ಟಿಲ್ಲ ಎಂಬುದು ಗೋಚರವಾಗಿ "ಹೌದಪ್ಪ! ಇಲ್ಲಿಯ ವರೆಗೆ ಕಡ್ಡಿಯ ಪೈಲವಾನನಾದ ನೀನು ಈ ಮುಂಜಾನೆ-ಸಂಜೆಯ ವ್ಯಾಯಾಮದಿಂದ ಗರಡಿಯ ಪೈಲವಾನನಾಗಿರುವಿ" ಎಂದೆ. ಆ ಮಾತಿನ ಸೂಕ್ಷ್ಮವು ಅವನಿಗೂ ತಿಳಿದುಬಂದಿತು.

ನಾನಿಯ ಸ್ವಭಾವ, ನಮ್ಮ ಕಡೆ ಹೇಳುತ್ತಾರಲ್ಲ ಹಾಗೆ, ಹೆಣ್ಣುರುಳಿನ ಸ್ವಭಾವ. ಅದಕ್ಕೆ ಅವನು ಬಹುಶಃ ತನ್ನ ಬಿ. ಎ. ಪದವಿಯ ಕಾಲಕ್ಕೆ ಓದಿ ವ್ಯಕ್ತ ಪಡಿಸಿದ "ಕಾಂತಾ-ಸಮ್ಮಿತಿ" ಎಂದು ಹೇಳಬಹುದು. ಅತ್ಯಂತ ಕಳಕಳಿ, ತೊಂದರೆಯಲ್ಲಿದ್ದವರ ವಿಷಯವಾಗಿ ಅನುಕಂಪ, ತನಗಿಂತ ಕಡಿಮೆ ಸೌಕರ್ಯದ ಸ್ಥಿತಿಯಲ್ಲಿದ್ದವರಿಗೆ ಸಾಧ್ಯವಿದ್ದ ಸಹಾಯ ಮಾಡುವದು, ಯೋಗ್ಯತೆಯಿದ್ದು ಶಕ್ತಿಯಿರದಿದ್ದರೆ ಸಹಾನುಭೂತಿಯನ್ನು ತೋರಿಸಿ ಪ್ರೋತ್ಸಾಹ ನೀಡುವದು, ಕೈಕೊಂಡ ಕಾರ್ಯದಲ್ಲಿ ಅತ್ಯಂತ ಕಾತರದ ದೃಷ್ಟಿ, ಮಾಡುತ್ತಿರುವ ಕೆಲಸಕ್ಕೆ ಕೂಡಲೆ ಪ್ರತಿಫಲವು ದೊರೆಯಬೇಕು ಎಂಬ ಆತುರ ಇವು ಆ ಸ್ವಭಾವದ ಪ್ರಮುಖ ಅಂಶಗಳಾಗಿದ್ದರೂ, ತನ್ನ ಅಭಿಪ್ರಾಯಕ್ಕೆ ಅನ್ಯರು ಅನುಕೂಲವಾಗಿರಬೇಕು ಎಂಬಲ್ಲಿ ಅವರನ್ನು ಮನವೊಲಿಸಿಕೊಳ್ಳುವ ಅವನ ರೀತಿಯು ಆ ಸ್ವಭಾವದ ಹಿರಿಯ ಗುಣ.

ಕಾಲೇಜಿನಲ್ಲಿ ನಾವು ಆಗಲೇ ಪಳಗಿದ ವಿದ್ಯಾರ್ಥಿಗಳಾಗಿದ್ದೆವು. ನಾಟಕ

ಪ್ರವರ್ಶನದ ವಿಷಯದಲ್ಲಿ ನಾವು ಪ್ರತಿಯೊಂದು ಪ್ರಯೋಗದ ಪ್ರಮುಖ ಪಾತ್ರಧಾರಿಗಳು; ಹಾಗೆಯೆ ಸಾಹಿತ್ಯ ಕ್ಷೇತ್ರದಲ್ಲಿ ಅದೇ ಆಗ ತನ್ನ "ಸಂಪಿಗೆ" ಎಂಬ ಕಥಾಸಂಗ್ರಹವನ್ನು ಪ್ರಕಟಿಸಿ, ಕನ್ನಡ ನಾಟ್ಯವಿಲಾಸಿಗಳ ಸಂಘದ ಸದಸ್ಯರ ಸಹಕಾರ-ಸಹಾಯಗಳನ್ನು ಅಪೇಕ್ಷಿಸಿ ತುಂಗಭದ್ರೆಯ ಪ್ರೇಮಾಯತನವು ನಡೆಸುತ್ತಿದ್ದ ಪಂಡಿತ ತಾರಾನಾಥರ "ಪ್ರೇಮ" ಎಂಬ ತ್ರೈಮಾಸಿಕವನ್ನು ನಡೆಯಿಸುವ ಹೊಣೆಯನ್ನು ಹೊತ್ತ ನಾಟ್ಯಾಚಾರ್ಯ ಕುಲಕರ್ಣಿ ಶ್ರೀ ನಿ ವಾ ಸ ರು, ನಾನಿಯ ಸತತ ಸಹವಾಸ - ವಿಚಾರ ವಿನಿಮಯ ಮತ್ತು ಸಹಕಾರದೊಂದಿಗೆ ನರ್ತನವನ್ನು ಅಭ್ಯಸಿಸಿಕೊಂಡಂತೆಯೆ ಸಾಹಿತ್ಯದಲ್ಲಿಯೂ ಮುಂದುವರಿಯುತ್ತಿದ್ದರು. ಆಗ ನಾನು ಧಾರವಾಡದಿಂದ ಪ್ರಕಟವಾಗುತ್ತಿದ್ದ "ಪ್ರೇಮ" ಪತ್ರಿಕೆಯಲ್ಲಿ ಒಂದೆರಡು ಟಿಪ್ಪಣಿಗಳನ್ನು, ಕಿರುಬರೆಹಗಳನ್ನು ಮತ್ತು ಅನುವಾದಿತ ಲೇಖನಗಳನ್ನು ಪ್ರಕಟಿಸಿದಂತೆಯೆ ನಾನಿಯು ಕೂಡ ಅಷ್ಟರಲ್ಲಿ ಕೆಲವು ಚಿಕ್ಕ ಏಕಾಂಕಗಳನ್ನು ಮತ್ತು ರೂಪಕಗಳನ್ನು ಬರೆದಿದ್ದ. ಅವುಗಳಲ್ಲಿ ಆ ವರ್ಷ ಶ್ರೀನಿವಾಸರು ನಾನಿಯ "ಇಲೆಕ್ಶನ್" ಎಂಬ ಪ್ರಹಸನವನ್ನು ಪ್ರದರ್ಶಿಸಬೇಕು ಎಂದು ನಿರ್ಧರಿಸಿ ರಂಗತಾಲೀಮನ್ನು ಆರಂಭ ಮಾಡಿದರು.

ಶ್ರೀನಿವಾಸರ ಮನೆಯಲ್ಲಿಯೆ, ಧಾರವಾಡದ ಕೆರೆಯ ಕೆಳಗಿನ ಓಣಿಯಲ್ಲಿ ರಂಗತಾಲೀಮು ನಡೆಯುತ್ತಿದ್ದವು. ನಾಟಕದ ತುಂಬೆಲ್ಲ ಲಘು ಮಧುರ ಹಾಸ್ಯದ ಚಟಾಕಿಗಳು, ಕಾಲೇಜ ಇಲೆಕ್ಶನ್ ವಾತಾವರಣದ ರಸನಿಮಿಷಗಳ ವರ್ಣನೆ; ವಿರೋಧ, ಮೋಸ, ಪ್ರತಿಭಟನೆಗಳ ವಿಷಪೂರಿತ ಘಟನೆಗಳ ಪ್ರಸ್ತಾಪ. ನಾಟಕದ ನಾಯಕಿಯೊ ಮುಗ್ಧ, ಮನೋಹರ ಬಾಲೆ. ಹೊಸ ಬಾಳಿಗಾಗಿ ಹಂಬಲಿಸುತ್ತಿದ್ದ ಕಾಲೇಜಿನ ವಿದ್ಯಾರ್ಥಿ - ಗಂಡನ ವಿಷಯವಾಗಿ ಅಸ್ಪಷ್ಟ ಅಭಿಮಾನ, ಅಪ್ರಕಾಶಿತ ಪ್ರೀತಿ. ಸಂಪ್ರದಾಯದ ಸಂಸಾರದಲ್ಲಿ ಬೆಳೆದಿದ್ದರೂ ತುಂಬ ಚುರುಕು ಸ್ವಭಾವದ ಕನ್ಯೆ! ಸಾಧಾರಣವಾದುದಾದರೂ ಅಚ್ಚುಕಟ್ಟಿನಿಂದ ವೇಷ-ಭೂಷಣಗಳಿಂದ ಒಪ್ಪುವ ವನಿತೆ! ನಾಯಕನ ಪಾತ್ರವನ್ನು ಶ್ರೀನಿವಾಸರೇ ಮಾಡುತ್ತಿದ್ದರು. ನಾನು ಆಗೊಮ್ಮೆ ಈಗೊಮ್ಮೆ ರಂಗತಾಲೀಮಿಗೆ ಹೋಗುತ್ತಿದ್ದೆ. ನಾನಿಯು ಪ್ರತಿಯೊಬ್ಬ ಪಾತ್ರಧಾರಿಗೆ ಮಾತಿನ ರೀತಿಯನ್ನು, ರಂಗಭೂಮಿಯ ಮೇಲೆ ಓಡಾಡುವ ಶೈಲಿಯನ್ನು, ನಿಲ್ಲುವ ಭಂಗಿಯನ್ನು, ತನ್ನ ವಾಡಿಕೆಯ ಮೃದುಹಾಸ್ಯಮಿಶ್ರಿತ ಧ್ವನಿಯಲ್ಲಿ ತಿಳಿಸಿಕೊಡುತ್ತಿದ್ದ. ಸಿದ್ಧ ಹಸ್ತರಾಗಿದ್ದ ಶ್ರೀನಿವಾಸರು ಮಾತಿನ ಚಳಕವನ್ನು, ವಿನೋದಮಯ ಸಂಭಾಷಣೆಯನ್ನು ಪರಿಣಾಮಕಾರಕವಾದ, ಪಕ್ವವಾದ ರೀತಿಯಲ್ಲಿ ನಡೆಯಿಸಿದ್ದುದನ್ನು ಕೇಳುತ್ತ ನಾನಿಯು ಅತ್ಯಂತ ಸಮಾಧಾನದಿಂದ ಮುಗುಳುನಗುತ್ತ ತನ್ನ ಸಮ್ಮತಿಯನ್ನು ಸೂಚಿಸುತ್ತಿದ್ದ. ಆ ಪ್ರಹಸನದಲ್ಲಿ ನನಗೆ ಪಾತ್ರ ಇರಲಿಲ್ಲವಾದರೂ ನಾನು ಒಮ್ಮೊಮ್ಮೆ ತಾಲೀಮಿಗೆ ಹೋಗುತ್ತಿದ್ದುದನ್ನು ನೋಡಿದ ನಾನಿಯು "ನೀನು ಪ್ರತಿದಿನ ತಾಲೀಮಿಗೆ ಏಕೆ ಬರಬಾರದು" ಎಂದು ಕೇಳಿದ. "ನನಗೇನು ಅದರಲ್ಲಿ ಪಾತ್ರವಿಲ್ಲವಲ್ಲ" ಎಂದೆ ನಾನು.

"ಅದರೆ ನೀನು ಪ್ರಾಂಪ್ಟಿಂಗ್ ಮಾಡಬಹುದು, ನೀನು ಪ್ರತಿದಿನ ಬರಲಿಕ್ಕೆ ಅದೊಂದು ಕಾರಣವಾಗುತ್ತದೆ" ಎಂದು ನಾನಿಯು ತನ್ನ ಆಶಯವನ್ನು ವ್ಯಕ್ತಪಡಿಸಿದ. ಆ ಮಾತಿನ ಹಿನ್ನೆಲೆಯಲ್ಲಿ ತನ್ನ ನಾಟಕದ ಪ್ರಯೋಗಕ್ಕೆ ನನ್ನಂತಹ ಅಭಿಮಾನಿಗಳ ಸಹವಾಸ ಮತ್ತು ಸಹಕಾರಗಳು ಪ್ರಯೋಜನಕಾರಿಯಾಗುವವು ಎಂಬ ಭಾವನೆಯಿದ್ದಿತು. ಅದನ್ನೆ ನಾನಿಯು ಈ ರೀತಿಯಾಗಿ ಮಾತನ್ನು ಬದಲಿಸಿ ಹೇಳಿದ್ದ. ನಾನು ತಾಲೀಮಿಗೆ ಹೋಗತೊಡಗಿದೆ. ಅಷ್ಟರಲ್ಲಿ ತರುಣ ಪತ್ನಿಯ ಪಾತ್ರವನ್ನು ವಹಿಸುತ್ತಿದ್ದ ಸ್ನೇಹಿತನು ನಿಯಮಿತವಾಗಿ ತಾಲೀಮಿಗೆ ಬರುತ್ತಿದ್ದಿಲ್ಲವೆಂದೊ, ಪ್ರಾಂಪ್ಟಿಂಗ್ ಸಮಯದಲ್ಲಿ ಅನೇಕ ಕಡೆ ನಾನು ಹೇಳುತ್ತಿದ್ದ ಮಾತಿನ Intonation ಹೆಚ್ಚು ಸಮರ್ಪಕವಾಗಿರುತ್ತಿತ್ತು ಎಂದೊ ಒಂದು ದಿನ ನಾನಿಯು "ವಚ್ಚಿಸ್ಸಾ! ಆ ಪಾತ್ರವನ್ನು ನೀನೇ ಮಾಡಿ ಬಿಡು ಮಹಾರಾಯಾ" ಎಂಬ ತನ್ನ ಕಳಕಳಿಯ, ಮನವೊಲಿಸುವ ಮಾತಿನಲ್ಲಿ ಹೇಳಿದ. ಅದಕ್ಕೆ ಶ್ರೀನಿವಾಸರು ಕೂಡ "ನಾನೂ ಅದನ್ನೆ ಹೇಳಬೇಕೆಂದು ಮಾಡಿದ್ದೆ" ಎಂದು ದನಿಗೂಡಿಸಿದರು. ಅದರ ಪರಿಣಾಮವಾಗಿ ಪ್ರದರ್ಶನದ ದಿನ ಆ ನಾಟಕವು ಜನರಲ್ಲಿ ಅತ್ಯಂತ ಹೆಚ್ಚಿನ ಮೆಚ್ಚುಗೆಯನ್ನು ಪಡೆಯಿತು. ಬೆಳಕು ಹರಿಯುವಷ್ಟರಲ್ಲಿ ಕರ್ನಾಟಕ ಕಾಲೇಜಿನಲ್ಲಿ ಒಬ್ಬ ಯಶಸ್ವಿಯಾದ ನಾಟಕಕಾರ ನಾನಿಯಲ್ಲಿ ರೂಪುಗೊಂಡಿದ್ದ!

ಅಷ್ಟರಲ್ಲಿ ನಾನು ಅಭ್ಯಾಸದ ಅನುಕೂಲಕ್ಕೆಂದು ಕಾಲೇಜಿನ ಒಂದು ಹಾಸ್ಟೆಲಿನಲ್ಲಿ ಕೋಣೆಯೊಂದನ್ನು ಹಿಡಿದು ಅಲ್ಲಿ ಇರುತ್ತಿದ್ದೆ. ಮನೆಯಲ್ಲಿ ಊಟ ಮಾಡುವದು, ಮಧ್ಯಾಹ್ನ ವರ್ಗಗಳಿಗೆ ಹೋಗುವದು, ಬಿಡುವಿನ ಸಮಯದಲ್ಲಿ ಮತ್ತು ರಾತ್ರಿ ಓದಿನಲ್ಲಿ ತೊಡಗುವದು ಇದು ನಮ್ಮ ದಿನಚರಿಯಾಗಿತ್ತು. ನಾನಿಯು ಅಷ್ಟರಲ್ಲಿ ಕೆಲವು ಹರಟೆಗಳನ್ನು, ಪ್ರಬಂಧಗಳನ್ನು ಬರೆಯುವದಲ್ಲದೆ ಸಣ್ಣ ಸಣ್ಣ ಏಕಾಂಕಗಳನ್ನು ಬರೆದು ತರುಣ ಲೇಖಕನೆಂದು ಹೆಸರನ್ನು ಮಾಡಿಕೊಂಡಿದ್ದ. ಆ ಹೇಳ್ಮೆಯ ಮನ್ನಣೆಯೆಂದು ನಾನಿಯನ್ನು ನಮ್ಮ ಕಾಲೇಜಿನ ಮಿಸಲೆನಿಯ ಕನ್ನಡ ವಿಭಾಗದ ಸಂಪಾದಕನೆಂದು ಕಾಲೇಜಿನ ಅಧಿಕಾರಿಗಳು ನೇಮಿಸಿದ್ದರು. ನಾನು ಅಷ್ಟರಲ್ಲಿ ಒಂದೆರಡು ಲಘು ನಿಬಂಧಗಳನ್ನು, ಕೆಲವು ಸಣ್ಣ ಕತೆಗಳನ್ನು ಬರೆದಿದ್ದೆನಾದರೂ ಅವುಗಳ ಪ್ರಕಟನೆಯ ಗೋಜಿಗೆ ಹೋಗಿರಲಿಲ್ಲ. ಮೇಲಾಗಿ ಆಗಿನ ಪರಿಸ್ಥಿತಿಯಲ್ಲಿ ಆ ಭಾಗದಲ್ಲಿ ಅಂತಹ ನಿಯತಕಾಲಿಕಗಳೂ ಇರಲಿಲ್ಲ. ಹೊಸ ಪೀಳಿಗೆಯ ಯುವಜನರ ಬರೆಹಗಳನ್ನು ಮುದ್ರಿಸಿ ಅವರನ್ನು ಪ್ರೋತ್ಸಾಹಿಸುವಂತಹ ವಾತಾವರಣವೇ ಇರಲಿಲ್ಲ. ಇದ್ದುದೆಂದರೆ "ಪ್ರೇಮ". ಅದೂ ತ್ರೈಮಾಸಿಕ. ಅತ್ತ "ಜಯಕರ್ನಾಟಕ"ವು ಪಕ್ವ-ಪರಿಶುದ್ಧ ಪ್ರಯೋಗಸಿದ್ಧ ಬರೆಹಗಳನ್ನು ಕೊಡುವಂತಹ ಪಳಗಿದ ಲೇಖಕರಿಗೇ ಸಾಕಷ್ಟು ಅವಕಾಶವನ್ನು ಕೊಡದಂತಹ ಸ್ತರವನ್ನು ತಲುಪಿತ್ತು. ಇತ್ತ "ಪ್ರೇಮ"ವು ಕೆಲಜನ ಹೊಸ ಹುರುಪಿನ ಹರೆಯದ ಜನರಿಂದ ನಡೆಯಿಸಲ್ಪಡುತ್ತಿದ್ದರೂ ಒಂದು ಕಡೆಯಿಂದ ಆರ್ಥಿಕ ತೊಂದರೆ, ಇನ್ನೊಂದು ಕಡೆಯಿಂದ ಕಾರ್ಯಕ್ಷಮತೆಯ ಅಭಾವ ಇವು

ಗಳಿಂದ ಬಳಲುತ್ತಿತ್ತು ಮತ್ತು ತಮ್ಮ ನೆಲೆಯೇ ಗಟ್ಟಿಯಾಗಿರದಂತಹ ವಿದ್ಯಾರ್ಥಿ ವೃಂದದ ಕೈಯಲ್ಲಿತ್ತು. ಅಂತೆಯೆ ಅದು ಕುಂಟುತ್ತ, ಕುಸಿಯುತ್ತ ನಡೆದುದು ಅಲ್ಪ ಕಾಲದಲ್ಲಿಯೆ ಅಸ್ತಂಗತವಾಯಿತು. ಹೀಗಾಗಿ ನಮ್ಮ ಪೀಳಿಗೆಯ ಜನರಿಗೆ ಸ್ವಂತ ಕೃತಿಗಳನ್ನು ನಿರ್ಮಿಸಲಿಕ್ಕೆ ತಕ್ಕ ಪ್ರೋತ್ಸಾಹವಾಗಲಿ, ಅವುಗಳಿಗೆ ಯೋಗ್ಯ ಮನ್ನಣೆ ಪ್ರಚಾರಗಳು ಸಿಗುವಂತಹ ಮಾಧ್ಯಮವಾಗಲಿ ಇರಲಿಲ್ಲ. ಆದರೂ ಬರೆಯುವ ಕಾರ್ಯದಲ್ಲಿ ಅವರು ಮಗ್ನರಾಗಿಯೆ ಇದ್ದರು. ಹೀಗೆಯೆ ಒಂದು ದಿನ ನಾನು ನಮ್ಮ ಸಹಚರರೊಂದಿಗೆ ಹರಟೆಯಲ್ಲಿ ತೊಡಗಿದಾಗ್ಗೆ ನಮ್ಮ ಹಾಸ್ಟೆಲ್ಲಿಗೆ ನಾನಿಯು ಬಂದ. ನನ್ನ ಮೇಜಿನ ಮೇಲೆ ಒಂದು ಕಾಗದಗಳ ಸಂಚಯವಿದ್ದಿತು. ಅದರ ತಲೆಕಟ್ಟಿನ ಮೇಲೆ ನಾನಿಯ ಕಣ್ಣು ಹರಿದು, ಸಂಪಾದಕನೆಂಬ ಸಂಬಂಧದಲ್ಲಿ ಲೇಖನಗಳನ್ನು ಹುಡುಕುವ (scouting) ಕಾರ್ಯದಲ್ಲಿ ತಲ್ಲೀನನಾಗಿದ್ದ ಅವನು "ಇದನ್ನು ನಾನು ನೋಡಬಹುದೆ?" ಎಂದು ಕೇಳಿದ. ನಾನು "ಆಗಬಹುದು" ಎಂದು ನಗುನಗುತ್ತ ಹೇಳಿದೆ. ಆತನು ಆ ಬರೆಹವನ್ನು ಓದುತ್ತೋದುತ್ತ ನಸುನಗೆಯನ್ನು ಮುಖದ ಮೇಲೆ ತಳೆದು, ಓದುವದು ಮುಗಿಯುತ್ತಲೇ ತನ್ನ ವಾಡಿಕೆಯ 'ಹೊಟ್ಟೆತುಂಬ' ನಗುವನ್ನು ಮನಃಪೂರ್ವಕವಾಗಿ ವ್ಯಕ್ತಗೊಳಿಸಿ "ನನಗೆ ಇದು ಬೇಕು, ಒಯ್ಯಬಹುದೆ?" ಎಂದು ಕೇಳಿದನು.

"ಆಗಲಿ" ಎಂದು ನಾನು ನುಡಿಯುವಷ್ಟರಲ್ಲಿ ನಾನಿಯು ಅದನ್ನು ತನ್ನ ವಶಕ್ಕೆ ತೆಗೆದುಕೊಂಡಿದ್ದ. ಮುಂದೆ ಕೆಲವು ದಿನಗಳಲ್ಲಿ ನೋಡಲಾಗಿ, ಅದು ನಮ್ಮ ಕಾಲೇಜಿನ ಮಿಸಲೆನಿಯಲ್ಲಿ ಪ್ರಕಟವಾದ ನನ್ನ ಚಿಕ್ಕಕತೆ "ಸಂತೋಷಕೂಟ"ವಾಗಿತ್ತು. ಅದರೊಳಗಿನ ಸನ್ನಿವೇಶ ಹೀಗಿತ್ತು. ಕಾಲೇಜ ಹಾಸ್ಟೆಲ್ ಒಂದದಲ್ಲಿ ವಾಸಿಸುವ ಕೆಲ ವಿದ್ಯಾರ್ಥಿಗಳು ತಮ್ಮ ಪ್ರಾಧ್ಯಾಪಕರ ಗೌರವಾರ್ಥವಾಗಿ ಒಂದು ಸತ್ಕಾರ ಸಭೆಯನ್ನು ಏರ್ಪಡಿಸಿದ್ದರು. ಆ ಗುಂಪಿನ ಕಾರ್ಯದರ್ಶಿಯು ಅಂದಿನ ಅತಿಥಿಗಳಿಗೆ ಹಾಕಲೆಂದು ಒಂದು ಹಾರವನ್ನು ಆ ವಸತಿಗೃಹದ ಸೇವಕನಿಗೆ ಹೇಳಿ ಸಂಜೆಯ ಅಯ್ದು ಗಂಟೆಯೊಳಗೇ ಅದನ್ನು ತಂದುಕೊಡುವಂತೆ ತಿಳಿಸಿದ್ದನು. ಆ ಸಮಯಕ್ಕೆ ಹಾರವನ್ನು ತೆಗೆದುಕೊಂಡು ಆತನು ಬರಲಿಲ್ಲ ಎಂದು ಅಲ್ಲಿಯೆ ಇದ್ದ ಅವನ ಮನೆಗೆ ಹೋಗಲಾಗಿ ಕಾರ್ಯದರ್ಶಿಯು ನೋಡಿದ ದೃಶ್ಯದಿಂದ ವಿಸ್ಮಯಾನಂದಗಳನ್ನು ಪಡೆದು ತಿರುಗಿ ಬಂದಿದ್ದನು. ಆ ಸೇವಕನು ತಾನು ತಂದು ಹಾರವನ್ನು ತನ್ನ ಮನದನ್ನೆಗೆ ಹಾಕಿ ಸಂತೋಷಿಸುತ್ತಿದ್ದಾಗ್ಗೆ ಕಾರ್ಯದರ್ಶಿಯು ಬಂದು ಹೋದ ಸಂದರ್ಭವು ಹೃದಯ ಸ್ಪರ್ಶಿಯಾಗಿತ್ತು. ಇದರಿಂದ ನಾನಿಯು ಪ್ರಭಾವಿತನಾದಂತೆ ತೋರಿತೆಂದೇ, ಅದನ್ನು ಓದಿದಾಗ್ಗೆ ಆತನಿಗೆ ಆ ಬಗೆಯ ಹೃದಯ ತುಂಬಿದ ನಗೆಯು ಮುಖದಲ್ಲಿ ಮೂಡಿರುವದನ್ನು ನೋಡಿ, ನಾನಿಯ ರಸಿಕತೆಯ ಬಗ್ಗೆ ಮತ್ತು ಅವನ ಸ್ವಭಾವದಲ್ಲಿ ಹುದುಗಿಕೊಂಡಿದ್ದ ಕಲಾವಿದನ ವಿಷಯವಾಗಿ ನನಗೆ ಸಂತೋಷವಾಯಿತು.

ನಾನಿಕಾಕಾ: ಎನ್ನ ಬದುಕು/೧೩೫

ಮುಂದೆ ಕೆಲವು ದಿನಗಳಲ್ಲಿ ನಾನು ನನ್ನ ಪದವೀ ಪರೀಕ್ಷೆಯನ್ನು ಮುಗಿಸಿಕೊಂಡು ಕೆಲಸಕ್ಕಾಗಿ ಅತ್ತಿತ್ತ ಪರದಾಡಿದೆ. ಅದು ಕೆಲಸದ ದೃಷ್ಟಿಯಿಂದ ಅತ್ಯಂತ ಕ್ಷೀಣವೆನಿಸಿದ ಕಾಲ. ಅಂತೆಯೆ ನಾನು ಕೆಲದಿನ ಓದು ಹೇಳುವದು, ಕೆಲದಿನ ನಮ್ಮ ಕಾಲೇಜಿನ ಪ್ರಾಧ್ಯಾಪಕರಲ್ಲಿ ಒಬ್ಬಿಬ್ಬರಿಗೆ ಅವರು ಸ್ಪರ್ಧಿಸಿದ ಸಿನೇಟ್ ಚುನಾವಣೆಯಲ್ಲಿ ಸಹಾಯುಮಾಡುವದು, ಮೊದಲಾದ ಕೆಲಸಗಳಲ್ಲಿ ತೊಡಗಿದ್ದೆ. ನಾಸಿಯು ಆಗ್ಗೆ ತನ್ನ ಪದವೀ ಪರೀಕ್ಷೆಗಾಗಿ ಓದುತ್ತಿದ್ದ. ಕೊನೆಗೆ ನಾನು ಬೇಸತ್ತು 'ವೇಷಮರೆಸಿದ ನಿರುದ್ಯೋಗ' (Disguised unemployment) ಎನಿಸಿದ ಸ್ನಾತಕೋತ್ತರ ಪದವಿಗಾಗಿ ಅಲ್ಲಿಯೆ ಎಂ. ಎ. ವರ್ಗವನ್ನು ಸೇರಿದೆ. ಆದರೆ ಆಗಿನ ಕಾಲೇಜಿನಲ್ಲಿ ಪಾಠಗಳನ್ನು ನಡೆಯಿಸುವ ಕ್ರಮವು ಅಷ್ಟು ಪ್ರೋತ್ಸಾಹಕವಾಗಿರಲಿಲ್ಲವೆಂದು ನಾನು ಮರುವರ್ಷ ಎಂ. ಎ. ವರ್ಗದ ಕೊನೆಯ ವರ್ಷದ ವ್ಯಾಸಂಗಕ್ಕೆಂದು ಮುಂಬಯಿಗೆ ತೆರಳಿದೆ; ನಿಜವಾಗಿಯೂ ಅದು ನನ್ನ ಉದ್ದೇಶವಾಗಿದ್ದರೂ, ಮುಂಬಯಿಗೆ ಹೋಗಲಿಕ್ಕೆ ಹಿರಿಯರ ಅಪ್ಪಣೆ ಮತ್ತು ಸಹಾಯಗಳನ್ನು ದೊರಕಿಸುವದು ಸುಸಾಧ್ಯವಾಗಬೇಕೆಂದು ನಾನು ಜಿ. ಕಾಂ. ಪರೀಕ್ಷೆಗಾಗಿ ಮುಂಬಯಿಗೆ ಹೋಗುವೆ ಎಂದು ಹೇಳಿ ಹೊರಟಿದ್ದೆ. ನಾಸಿಯು ಬಿ. ಎ. ಪರೀಕ್ಷೆಯಲ್ಲಿ ಕನ್ನಡ ಸಾಹಿತ್ಯವನ್ನು ತನ್ನ ಐಚ್ಛಿಕ ವಿಷಯವನ್ನಾಗಿಸಿಕೊಂಡು ವಿಶ್ವವಿದ್ಯಾಲಯಕ್ಕೆ ಮೊದಲಿಗನಾಗಿ ಉತ್ತೀರ್ಣನಾಗಿರುವ ಎಂಬ ಸುದ್ದಿಯನ್ನು ಕೇಳಿ ಸಂತಸಬಟ್ಟೆ.

ಆ ಪರೀಕ್ಷೆಯಲ್ಲಿ ಗಳಿಸಿದ ಯಶಸ್ಸಿನ ಫಲವಾಗಿಯೆ ನಾಸಿಯು ಕೂಡ ಎಂ. ಎ. ಗಾಗಿ ತನ್ನ ಅಧ್ಯಯನವನ್ನು ಮುಂದುವರಿಸಿದ. ಅಷ್ಟರಲ್ಲಿ ಒಂದು ಕಡೆಯಿಂದ ಅವನಿಗೆ ಉದಯೋನ್ಮುಖ ನಾಟಕಕಾರ ಎಂಬ ಅಭಿದಾನವು ಪ್ರಾಪ್ತವಾಗಿದ್ದರೆ ಇನ್ನೊಂದು ಕಡೆಯಿಂದ ಅವನನ್ನು ತನ್ನ ಊರ ಹಿರಿಯ ಕವಿಯಾದ ನಾರಣಪ್ಪನ ಸ್ಫೂರ್ತಿಯು ಕೂಡ ಆವರಿಸತೊಡಗಿತ್ತು. ಆಗಿನ್ನೂ ಅವನು "ಕುಮಾರವ್ಯಾಸ ಕಾವ್ಯಕೋವಿದ"ನಾಗಿರದಿದ್ದರೂ ಕೋಳಿವಾಡದ ಆ ಆದರ್ಶ ವ್ಯಕ್ತಿಯಾದ ನಾರಣಪ್ಪನು ಈ ನಾರಾಯಣನಿಗೂ ಆದರ್ಶ ಲೇಖಕನಾಗಿ ಕಂಡಿರುವಲ್ಲಿ ಆಶ್ಚರ್ಯವೇನಿಲ್ಲ!

ನಾನು ಎಂ. ಎ. ಪರೀಕ್ಷೆಯನ್ನು ಮುಗಿಸಿ ಬಿ. ಕಾಂ. ಪದವಿಗಾಗಿ ಅಭ್ಯಸಿಸುತ್ತಿದ್ದೆ. ಅಷ್ಟರಲ್ಲಿ ನಮ್ಮ ಮನೆತನದ ಮಾಸಪತ್ರವೆಂದು ನಾವು "ನರಸಿಂಹ" (ಈಗಿನ "ಕ್ಷೇಮ") ಎಂಬ ಮಾಸಪತ್ರಿಕೆಯನ್ನು ಹೊರಡಿಸುವ ಹೊಣೆಯನ್ನು ಹೊತ್ತಿದ್ದೆವು. ಮೊದಲು ಧಾರವಾಡದಲ್ಲಿ ಅದನ್ನು ಹಸ್ತಪ್ರತಿಯ ರೂಪದಲ್ಲಿ ಹೊರಡಿಸಿ, ನಾಲ್ಕು ಪ್ರತಿಗಳನ್ನು ಮಾಡಿ, ಕುಟುಂಬದ ಸದಸ್ಯರಲ್ಲಿ ಸುತ್ತುವಂತೆ ಅದನ್ನು ಕಳಿಸುತ್ತಿದ್ದೆವು. ಅನಂತರ ಕೆಲಕಾಲ ಅದನ್ನು ಚಿರಳಚ್ಚಿನಲ್ಲಿ ಬರೆದು ೬೦-೫೦ ಪ್ರತಿಗಳನ್ನು ತೆಗೆದು ಬಳಗದ ಜನರಿಗೆಲ್ಲ ಕಳಿಸುತ್ತಿದ್ದೆವು. ಆ ಮೇಲೆ ಕೆಲವೇ ದಿನಗಳಲ್ಲಿ ಅದನ್ನು ನಾವು ಮುದ್ರಿಸತೊಡಗಿದೆವು. ಮನೆಯ ಜನರ ಕಾರ್ಯಕಲಾಪಗಳ ಸುದ್ದಿಗಳೆ ಈ ಪತ್ರಿಕೆಯು

ಜೀವಾಳವಾಗಿತ್ತು. ಅದಲ್ಲದೆ ಕೌಟುಂಬಿಕ ಸಮಸ್ಯೆಗಳ ಚರ್ಚೆ, ಅಡುಗೆಯ ವಸ್ತುಗಳ ಲೇಖನಗಳು, ವೈದ್ಯಕ, ವಿನೋದ ಮೊದಲಾದ ಎಂಟು ಪುಟಗಳ ಆ ಪತ್ರಿಕೆಯು ಸಾಹಿತಿಗಳನೇಕರ ಮನಸ್ಸನ್ನು ಸೆಳೆದಿತ್ತು, ಅನುಭವಿಗಳ ಮೆಚ್ಚುಗೆಯನ್ನು ಪಡೆದಿತ್ತು. ನಾನಿಯು ಈ ನವೀನ ರೂಪದ ಪತ್ರಿಕೋದ್ಯಮದ ಪ್ರಯೋಗವನ್ನು ಕಂಡು ಮೊದಲಿನಿಂದ ಕೌತುಕ, ಉತ್ಸಾಹ ಮತ್ತು ಸಂತೋಷಗಳನ್ನು ವ್ಯಕ್ತಪಡಿಸುತ್ತ ನಾವು ಕೈಕೊಂಡ ಕಾರ್ಯದಲ್ಲಿ ತಕ್ಕಮಟ್ಟಿಗೆ ಸಹಾಯವನ್ನು ಮಾಡುತ್ತಿದ್ದ.

ಅಷ್ಟರಲ್ಲಿ ಎಂ. ಎ. ಪರೀಕ್ಷೆಯ ದಿನಗಳು ಸಮೀಪ ಬಂದುದರಿಂದ ನಾನಿಯು ಪರೀಕ್ಷೆಗೆ ಮೊದಲು ಕೆಲದಿನ ಮುಂಬಯಿಗೆ ಬಂದು ಎಂ. ಎ. ಪರೀಕ್ಷೆಗಾಗಿ ಅಂದಿನ ಪರಿಸ್ಥಿತಿಯಲ್ಲಿ ಮುಂಬಯಿಯೊಂದೆ ಕೇಂದ್ರವಾಗಿದ್ದ ಕಾರಣ ವಿನ್ಸೆಂಟ್ ರೋಡಿನಲ್ಲಿರುವ ತನ್ನ ಚಿಕ್ಕ ಮಾವಂದಿರ ಮನೆಯಲ್ಲಿ ಇರುತ್ತಿದ್ದ. ಆಗ್ಗೆ ಮೊದಲೇ ಬಿ. ಕಾಂ. ಪರೀಕ್ಷೆಯನ್ನು ಮುಗಿಸಿಕೊಂಡು ನಮ್ಮ ಸಮಕಾಲೀನನೂ, ಸಹಚರನೂ ಆಗಿದ್ದ ಆರ್.ಎ. ಪಾಂಡುರಂಗಿಯು ಕೆಲಸವನ್ನು ಹಿಡಿದು ತನ್ನ ಸೋದರ ಮಾವನ ಮನೆಯಲ್ಲಿ ಇರುತ್ತಿದ್ದ. ನಾನು ಹಿಂದೂ ಕಾಲನಿಯಲ್ಲಿ ಒಂದು ಮನೆಯನ್ನು ಬಾಡಿಗೆಗೆ ಹಿಡಿದು ಮಿಕ್ಕ ೨-೩ ಜನ ಸ್ನೇಹಿತರೊಂದಿಗೆ ಇರುತ್ತ ನನ್ನ ವ್ಯಾಸಂಗವನ್ನು ಮುಂದುವರಿಸಿದ್ದೆ. ಇಬ್ಬರಿಗೂ ಪರಿಚಿತನಾದ ನಾನಿಯು ಆಗಾಗ್ಗೆ ನನ್ನನ್ನೂ ಪಾಂಡುರಂಗಿಯವರನ್ನೂ ಭೆಟ್ಟಿಯಾಗುತ್ತಿದ್ದ. ಒಂದು ದಿನ ನಮ್ಮ ನಮ್ಮ ಪರೀಕ್ಷೆಗಳು ಮುಗಿದ ನಂತರ ನಾನಿಯು ನಮ್ಮಿಬ್ಬರನ್ನು ಕೂಡಿಯೆ ಭೆಟ್ಟಿಯಾದಾಗ, ಅತ್ತಿತ್ತ ತಿರುಗಾಡಿ ಸಂಜೆಯ ಹೊತ್ತಿಗೆ ಭಾರತದ ಮಹಾದ್ವಾರ (Gateway of India) ದತ್ತ ಹೊರಟಿದ್ದೆವು. ದಾರಿಯಲ್ಲಿ ತನ್ನ ವಾಡಿಕೆಯ ದೀನವಾಣಿಯಂತೆ ಕಂಡರೂ ಗಟ್ಟಿಯಾದ ಮಾತುಗಳಲ್ಲಿ "ನನ್ನ ಪರೀಕ್ಷೆಯ ಪರಿಣಾಮವನ್ನು ಮಾತ್ರ ನೀವಿಬ್ಬರೂ ನನಗೆ ತಂತಿಯಿಂದ ತಿಳಿಸಬೇಕು" ಎಂದು ಹೇಳಿದ. ನಾವು ಮೌನ ಸಮ್ಮತಿಯನ್ನು ವ್ಯಕ್ತಮಾಡಿದೆವು. ಪರೀಕ್ಷೆಯ ಪರಿಣಾಮವೂ ಬಂದಿತು; ನಾವು ತಂತಿಯನ್ನು ಕಳಿಸಿದೆವು. ಆದರೆ ಮುಂದೆ ಒಂದೆರಡು ತಿಂಗಳ ನಂತರ ನಾನು ಧಾರವಾಡಕ್ಕೆ ಹೋದಾಗ ಆ ವಿಷಯವಾಗಿ ನಾನಿಯಿಂದ ಏನೂ ಪ್ರಸ್ತಾಪವೇ ಬರಲಿಲ್ಲ ಎಂಬುದನ್ನು ಕಂಡು ನಾನು ಕುತೂಹಲದಿಂದ ಅವನನ್ನು ಕೇಳಿದೆ. "ನಮ್ಮ ತಂತಿಯು ತಲುಪಿತೇನು?" ಎಂದು. ಆತನಿಗೆ ಕೆಲಕಾಲ ದಿಗಿಲಾಯಿತು. ನಾನು ಅವನಿಗೆ ಬಿಡಿಸಿ ಹೇಳಿದೆ. "PAT-RANGI" ಎಂಬ ಹೆಸರಿನಲ್ಲಿ ನಿನಗೆ ತಂತಿಯೊಂದು ಬರಲಿಲ್ಲವೆ?" ಎಂದು ಕೇಳಿದೆ. ಆದರೂ ಅವನ ಸಮಸ್ಯೆಯು ಬಗೆಹರಿಯಲಿಲ್ಲ. ಒಂದು ಕ್ಷಣದಲ್ಲಿ ನನ್ನ ಕೈಯನ್ನು ಹಿಡಿದು ಕುಲುಕಿ ಬೊಳ್ಳೆಂಬು ಹೊಟ್ಟೆ ತುಂಬ ನಕ್ಕ. ಅದು PATIL ಮತ್ತು PANDURANGI ಎಂಬ ಎರಡೂ ಹೆಸರುಗಳನ್ನು ಸೇರಿಸಿ ತಂತಿಗಾಗಿ ಒಂದು ಮಿತವ್ಯಯದ ಶಬ್ದವನ್ನು ಮಾಡಿದ ರಹಸ್ಯದ ಅರಿವಿನ ಆಸ್ವಾದನೆಯಾಗಿತ್ತು, ಆ ನಗೆ!

ನಾವು ವಿಶ್ವವಿದ್ಯಾಲಯದ ಪರೀಕ್ಷೆಗಳನ್ನು ಮುಗಿಸಿಕೊಂಡು ಇನ್ನು ಜೀವನದಲ್ಲಿ ಕಾಲಿರಿಸಬೇಕು. ಆಗ್ಗೆ ವಿಶ್ವದ ಅತಿ ಕಠೋರವಾದ ಆರ್ಥಿಕ ಮುಗ್ಗಟ್ಟು ಆರಂಭವಾದ ಕಾಲವಾಗಿತ್ತು. ಅದೊಂದು ಅತ್ಯುಗ್ರವಾದ "ನಿರುದ್ಯೋಗ ಪರ್ವ" ನಮಗೆಲ್ಲರಿಗೂ! ನಾನು ಚಿಕ್ಕಪುಟ್ಟ ಅವಧಿಗಳ ಅಧ್ಯಾಪಕ, ಕೆಲಕಾಲ ಭಾಷಾಂತರಕಾರ, ಸ್ವಲ್ಪದಿನ ಪ್ರಾಧ್ಯಾಪಕರೊಬ್ಬರು ಬರೆದ "ಭಾರತೀಯ ಅರ್ಥಶಾಸ್ತ್ರ" ಎಂಬ ಪುಸ್ತಕದ ಹೊಸ ಆವೃತ್ತಿಗೆ ನವೀನ ಸಂಖ್ಯಾಪಟಗಳನ್ನು ಸಿದ್ಧಗೊಳಿಸಿ ಅದರ ನವೀಕರಣದಲ್ಲಿ ಸಹಾಯ ಮಾಡುವುದು ಮೊದಲಾದ ಪುಡಿಗೆಲಸಗಳಲ್ಲಿ ತೊಡಗಿದ್ದೆ. ಇತ್ತ ನಾಣಿಯು ಮಾತ್ರ ಅಧ್ಯಾಪಕ ವೃತ್ತಿ ಮತ್ತು ಸಾಹಿತ್ಯ ಸೇವೆ ಇವುಗಳ ದೀಕ್ಷೆಯನ್ನು ನಿಃಸಂಕೋಚವಾಗಿ ಪಡೆದು ಆ ಕೆಲಸಗಳಲ್ಲಿ ಮೊದಲ ಹೆಜ್ಜೆಗಳನ್ನು ಇಡತೊಡಗಿದ್ದನು. ಶಿಕ್ಷಕನ ಸೇವಾ ಕಾರ್ಯವನ್ನೇನೊ ಆರಂಭಿಸಿದ್ದನು ನಿಜ; ಆದರೆ ಅದರಲ್ಲಿ ಸಮಾಧಾನವಾಗದ್ದರಿಂದಲೊ, ಸಾಹಿತ್ಯ ಸೇವೆಯು ಅದಕ್ಕಿಂತ ಬಲವತ್ತರವಾದ ಆಕರ್ಷಣೆಯಾಗಿತ್ತು ಎಂದೊ ಆತನು ಕೂಡಲೆ ಪತ್ರಿಕಾಕರ್ತನ ಕಾರ್ಯವನ್ನು ಕೈಕೊಂಡ. ಅಂತು ಜನ್ಮ ತಳೆಯಿತು—"ವಸಂತ"! ಅದು ಕನ್ನಡದ ಪತ್ರಿಕೋದ್ಯಮದಲ್ಲಿ ವಸಂತವಾಗಿ ಪರಿಣಮಿಸಿದುದೇನೊ ನಿಜ. ನಾನು ಆ ಮೊದಲೇ "ಜಯಂತಿ"ಯಲ್ಲಿ ಕೆಲವು ಲೇಖನಗಳನ್ನು ಬರೆದಿದ್ದೆ. ನಾವೇ ನಾಲ್ಕು ಜನರು ಕೂಡಿ ಆರಂಭಿಸಿದ "ರಂಗಮಂಗ ಪ್ರಕಾಶನ"ದಲ್ಲಿ ಒಂದೆರಡು ಕಿರುಹೊತ್ತಗೆಗಳ ಲೇಖಕನೂ ಆಗಿದ್ದೆ. ಆಗ್ಗೆ ಮುಂಬಯಿಯಲ್ಲಿ ನಡೆಯುತ್ತಿದ್ದ "ಮುಂಬಯಿ ಕನ್ನಡಿಗ" ಎಂಬ ವಾರಪತ್ರಿಕೆಯಲ್ಲಿ ಕೆಲವು ನನ್ನ ಪ್ರಬಂಧಗಳೂ ಅಚ್ಚಾಗಿದ್ದವು. ಇದನ್ನೆಲ್ಲ ನೋಡಿದ ನಾಣಿಯು ನಮ್ಮ ಮೊದಲಿನ ಸ್ನೇಹ-ಸಹವಾಸ-ಸಾಹಚರ್ಯದ ಆತ್ಮೀಯತೆಯಲ್ಲಿ ವಸಂತದ ಒಂದು ಪ್ರತಿಯನ್ನು ನನಗೆ ಕಳಿಸಿ, ತುಂಬ ಕಕ್ಕುಲತೆಯ ಪತ್ರವೊಂದನ್ನು ಬರೆದು ನನಗೆ ಅದಕ್ಕಾಗಿ ಲೇಖನಗಳನ್ನು ಕಳಿಸುವಂತೆ ಕೇಳಿಕೊಂಡಿದ್ದನು.

"ವಸಂತ" ಮಾಸಪತ್ರಿಕೆಯು ಪತ್ರಿಕೋದ್ಯಮದಲ್ಲಿ ಒಂದು ಹಚ್ಚಹಸಿರಾದ ಪ್ರಯೋಗ! ಅದರಿಂದ ಅದು ಕಸುಕು ಆಗಿತ್ತು, ಅದರಲ್ಲಿ ಒಗರು ಹೆಚ್ಚಿತ್ತು ಎಂದು ಯಾರೂ ಅರ್ಥಮಾಡಿಕೊಳ್ಳಬಾರದು. ಹೊಸ ದೃಷ್ಟಿಯ ತರುಣ ಲೇಖಕರಿಗೆ ಅದೊಂದು ಆಶ್ರಯ ಸ್ಥಾನವಾಗಿತ್ತು. ಉತ್ಸಾಹದ ಸ್ರೋತವಾಗಿತ್ತು; ಸಂತೃಪ್ತಿಯ ಸಾಧನವಾಗಿತ್ತು. ಪುಟಪುಟಗಳಲ್ಲಿ ಹೊಚ್ಚಹೊಸ ಲೇಖಕರ ಬರೆಹಗಳು ನವ ಮನುಷ್ಯಿನ ಪ್ರತಿನಿಧಿಗಳಾಗಿ ಕಂಗೊಳಿಸುತ್ತಿದ್ದವು. ವಿಷಯಗಳ ಆಯ್ಕೆ, ಭಾಷೆಯ ಪರಿಶುದ್ಧತೆ, ವಸ್ತುಗಳ ವೈವಿಧ್ಯ, ವಿನ್ಯಾಸದ ನಾವೀನ್ಯ, ನಿಯಮಿತತನದ ವೈಶಿಷ್ಟ್ಯ ಇವು "ವಸಂತ"ದ ಹಿರಿಯ ಗುಣಗಳಾಗಿದ್ದವು. ಅದರಲ್ಲಿ 'ಬಳಗದವರು' ಎಂಬ ಶೀರ್ಷಿಕೆಯಲ್ಲಿ ಅತ್ತಿಗೆ, ಶಾಲಕ, ನಾದಿನಿ. ಹನ್ನಕ, ಅಬಚಿ ಮೊದಲಾದ ನನ್ನ ಪ್ರಬಂಧಗಳು ಪ್ರಕಟವಾದುವು. ಪ್ರತಿಯೊಂದು ಲೇಖನವು ಮುದ್ರಿತವಾದಾಗ್ಗೆ ನಾಣಿಯು ಕೂಡಲೇ

ಪತ್ರ ಬರೆದು, ಅದನ್ನು ಮನವಾರೆ ಹೊಗಳಿ ಮುಂದಿನ ಕಂತಿಗಾಗಿ ಮತ್ತೆ ತನ್ನ ಸೂಚನೆಯನ್ನು ಮಾಡುತ್ತಿದ್ದ. ಆದರೇನು? ಅದು ನಮ್ಮ ದೇಶದ ಜನಸಂಖ್ಯೆಯಲ್ಲಿ ಶಿಶು ಮರಣದ ಪ್ರಮಾಣವು ಇನ್ನೂ ಅತಿಯಾಗಿದ್ದ ಕಾಲ. ನಿಯತಕಾಲಿಕೆಗಳಿಗೂ ಅಂತಹ ತಪ್ಪಿಸಲಾರದ ಬಾಲಗ್ರಹದ ಪೀಡೆಯಾಗಿತ್ತು. ತರುಣ ಬರೆಹಗಾರರ ತಂಡವು ಲೇಖನಗಳನ್ನು ಕಳಿಸುತ್ತಲೇ ಇದ್ದಿತು. ಹಿರಿಯ ಸಾಹಿತಿಗಳು ತಮ್ಮ ಮೆಚ್ಚುಗೆಯ ಪ್ರೋತ್ಸಾಹದ ಮಾತುಗಳನ್ನು ಆಡುತ್ತಲೇ ಇದ್ದರು! ಓದುವವರು ಅತ್ಯಂತ ಹೆಮ್ಮೆಯಿಂದ ಉತ್ಕಂಠೆಯಿಂದ ಪ್ರತಿಯೊಂದು ಸಂಚಿಕೆಯನ್ನು ಬರಮಾಡಿಕೊಂಡು ಹುಮ್ಮಸ್ಸಿನಿಂದ ಓದುತ್ತಲೇ ಇದ್ದರು. ಆದರೆ ಅವರಲ್ಲಿ ಯಾರೂ ದುಡ್ಡು ಕೊಟ್ಟು ಓದುವವರಾಗಿರಲಿಲ್ಲ. ಇತ್ತ ಕಾಗದ, ಮುದ್ರಣ, ಏಜಂಟರ ಕಮೀಶನ್, ಅಂಚೆ ಇವುಗಳಿಗಾಗಿ ನಗದು ಹಣವನ್ನು ಕೊಟ್ಟು ಅವನ್ನು ಪಡೆಯುವದೇನು ತಪ್ಪಿರಲಿಲ್ಲ. ಈಗಿನಂತೆ ಸರಕಾರದ ಮತ್ತು ಇತರ ಜಾಹೀರಾತುಗಳ ಮೂಲಕ ಸಹಾಯಧನವೂ ದೊರೆಯುತ್ತಿರಲಿಲ್ಲ. ಹೀಗಾಗಿ "ವಸಂತ"ವು ಕೂಡ ಅಲ್ಪಾಯುಷಿಯಾಗಿ ಕಣ್ಣುಮುಚ್ಚಬೇಕಾಯಿತು. ಆದರೆ ನಾನಿಗೆ ಮಾತ್ರ ಸೋಲಿಗೆ, ನಿರಾಶೆಗೆ ಅದು ಕಾರಣವಾಗುವಂತಾದರೂ ಸಾಹಿತ್ಯರಂಗದಲ್ಲಿ ಒಂದು ಪ್ರಬುದ್ಧವಾದ ಸ್ಥಾನವನ್ನು ಕಲ್ಪಿಸಿಕೊಟ್ಟ ಸಮಾಧಾನವನ್ನು, ಆತ್ಮವಿಶ್ವಾಸವನ್ನು ಅದು ತಂದುಕೊಟ್ಟಿತು. ಅಂತು ನಾನಿಯು ಎನ್ನೆ ಆದಂತಾಯಿತು ಆ ಪ್ರಯೋಗದಿಂದ!

# ಮುರಿಯಲಾರದ ಮೈತ್ರಿಯ ಮಾದರಿ

ಎಸ್. ಜಿ. ನಾಡಗೇರ

ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಆತ್ಮೀಯ ಗೆಳೆಯ, ಸುಪ್ರಸಿದ್ಧ ಸಾಹಿತಿ 'ನನ್ನ ಸಹೋದ್ಯೋಗಿ ಎಸ್ಕೆ' ಎಂಬುದರ ಬಗ್ಗೆ ಒಂದು ಲೇಖನ ಬರೆಯಲು ಕೇಳಿದ್ದಾರೆ. ಅವರ ವಿಶ್ವಾಸಕ್ಕೆ ನಾನು ಋಣಿ. ಆದರೆ ನಾನು ಸಾಹಿತ್ಯದ ಬಗ್ಗೆ ಅಭಿರುಚಿಯುಳ್ಳವನಾದರೂ ಸಾಹಿತಿಯಲ್ಲ. ಆದ್ದರಿಂದ ಈ ಲೇಖನದಲ್ಲಿ ಯಾರಾದರೂ ಸಾಹಿತಿಯ ಕೃತಿಯಲ್ಲಿ ಅಪೇಕ್ಷಿಸಬಹುದಾದ ಮಾತಿನ ಚಮತ್ಕೃತಿ, ಮಿಂಚು ಇತ್ಯಾದಿಗಳನ್ನು ಅಪೇಕ್ಷಿಸದಿರಲು ಬಿನ್ನಹ.

ಎಸ್ಕೆ ಹಾಗೂ ನನ್ನ ಪ್ರಕೃತಿ, ದೃಷ್ಟಿಕೋನಗಳಲ್ಲಿ ಸಾಕಷ್ಟು ಭಿನ್ನತೆ ಇದೆ. ಇಬ್ಬರೂ ಆರಿಸಿಕೊಂಡ ಕ್ಷೇತ್ರಗಳು ಬೇರೆ. ಆದರೂ ನಮ್ಮಿಬ್ಬರ ನಡುವೆ ಅಂತಃಕರಣದ ನಿಷ್ಕಪಟ ಆತ್ಮೀಯತೆಯ ಸೂಕ್ಷ್ಮವಾದ ಸೂತ್ರವು ನಮ್ಮಿಬ್ಬರನ್ನು ಕಟ್ಟಿದೆ. ಗೆಳೆತನದ ಈ ಸೂತ್ರವು ಗಾಳಿಗಿಂತ ಹಗುರಾಗಿದ್ದರೂ ಉಕ್ಕಿಗಿಂತ ಬಿರುಸಾಗಿದೆ; ಬಾಹ್ಯಬಂಧನವಿಲ್ಲದೆ ಬಂಧುರವಾಗಿದೆ. ಸ್ವಚ್ಛಂದವಾಗಿದ್ದರೂ ಸುಂದರವಾಗಿದೆ. ಆದ್ದರಿಂದ ಎಸ್ಕೆಯವರ ಕೂಡ ನನ್ನ ಸಂಬಂಧ ಸಹೋದ್ಯೋಗಿಯೆಂದು ಸೀಮಿತವಾಗಿಲ್ಲ.

ನಮ್ಮಿಬ್ಬರ ಗೆಳೆತನ ಸುವರ್ಣ ಮಹೋತ್ಸವದ ಅವಧಿಯನ್ನು ದಾಟಿ ವಜ್ರ ಮಹೋತ್ಸವದ ಕಡೆಗೆ ಮುಖ ಚಾಚಿದೆ. ದುರಹಂಕಾರ, ದ್ವೇಷ, ಅಸೂಯೆ ಮತ್ತು ದುರ್ಭಾವನೆಗಳು ಮನ-ಮನೆಗಳನ್ನು ಮುರಿಯಲು ಕಾರಣ. ನಮ್ಮಿಬ್ಬರ ಮನ ಮುರಿದು ಗೆಳೆತನವನ್ನು ಗಾಳಿಗೆ ತೂರದಂತೆ ಮಾಡಲು ಮೇಲಿನ ದುಷ್ಟಚತುಷ್ಟಯದ ಅಭಾವವೇ ಕಾರಣ. ನಾವಿಬ್ಬರೂ ಸಾಕಷ್ಟು ವಿಷಯಗಳ ಬಗ್ಗೆ ಸಂವಾದ ಮಾಡಿದ್ದೇವೆ. ಆದರೆ ಇತ್ತಂಡ ವಾದಕ್ಕೆ ಇಳಿದಿಲ್ಲ. ಕೆನ್ನೀರ ಕೆಸರನ್ನು ಕಲಕುವಂತೆ ಡೊಂಕು ಕೊಂಕುಗಳನ್ನು ನುಡಿದಿಲ್ಲ. ಅದಕ್ಕಾಗಿಯೇ ನಮ್ಮ ಗೆಳೆತನ ಇಡಿಗಾಳಿನಂತೆ ಇನ್ನೂ ಹಾಗೆಯೇ ಉಳಿದಿದೆ.

ಎಸ್ಕೆ ಹಾಗೂ ನನ್ನ ಗೆಳೆತನದ ಸಂಬಂಧದ ಬಗ್ಗೆ ಮಾತನಾಡುವಾಗ ಜೀವನದ ದುಪ್ಪಟಿಯಿಂದ ಎಸ್ಕೆಯವರ ಒಂದೇ ಸೂತ್ರವನ್ನು ಎಳೆದು ತೋರಿಸಲಿಕ್ಕಾಗದು.

ಅವರ ಕೂಡ ಉಳಿದ ಸುಸಂಗತಗಳನ್ನು ಎಳೆದು ವರ್ಣಿಸಿವರೆ ಅಪ್ರಸ್ತುತವೆಂದು ಯಾರೂ ತಿಳಿದುಕೊಳ್ಳಬಾರದು.

ಎನ್ಕೆಯವರು ನಾನು ಕಲಿತ ವಿಕ್ಟೋರಿಯಾ ಹಾಯಸ್ಕೂಲಿನಲ್ಲಿಯೇ ಕೆಲ ತಿಂಗಳು ಇದ್ದುದು ಮಸುಕುಮಸುಕಾದ ನೆನಪು. ನಮ್ಮಿಬ್ಬರಿಗೂ ಆಗ ನಮಗೆ ಕಲಿಸಿದ ಕೆಲವು ಶಿಕ್ಷಕರ ಬಗ್ಗೆ— ಶ್ರೀಗಳಾದ ಕಡಗದಕೈ, ಬೇಂದ್ರೆ, ಕಟ್ಟಿ, ಗೋಡಖಿಂಡಿ, ಸಿರಸಂಗಿ— ಅಪಾರ ಅಭಿಮಾನ.

ನಾವೆಲ್ಲ— ಎನ್ಕೆ, ದಿಗಂಬರ ದೇಶಪಾಂಡೆ ಮತ್ತು ನಾನು— ೧೯೩೨ರಲ್ಲಿ ಮ್ಯಾಟ್ರಿಕ್ ಪಾಸಾಗಿ ಕರ್ನಾಟಕ ಕಾಲೇಜನ್ನು ಸೇರಿದೆವು. ಪ್ರತಿದಿನ ಕೂಡಿಯೇ ಕಾಲೇಜಿಗೆ ಹೋಗುತ್ತಿದ್ದೆವು. ಎನ್ಕೆ ಅವರ ತಿಳಿಹಾಸ್ಯ, ವಿಶೇಷ ಸಂದರ್ಭಗಳಲ್ಲಿ ಹೊರಹೊಮ್ಮುವ ಸಂಗೀತಲಹರಿ, ಆ ದಿನಗಳಲ್ಲಿ ಹೊಸ ಉತ್ಸಾಹವನ್ನು ಕೊಟ್ಟಿತು. ಹೋಗುವಾಗ, ತಿರುಗಿ ಬರುವಾಗ ಆ ದಿನ ಪಾಠ ನಡೆಸಿದ ಪ್ರೊಫೆಸರರ ವಿಮರ್ಶೆ ಆಗುತ್ತಿತ್ತು. ನಾದಿರಶಹಾನಂತಹ ಉದ್ದ ಟೊಪ್ಪಿಗೆ ಹಾಕಿಕೊಂಡ ಇಂಗ್ಲೀಷ ಕಲಿಸುವ ಪ್ರೊಫೆಸರರ ಸರಳ ಜೀವನದ ಬಗ್ಗೆ ಆದರವಿತ್ತು. ತಿಳಿಯಲಾರದಂತೆ ಭೌತ ವಿಜ್ಞಾನ ವನ್ನು ಮತ್ತು ಬೀಜಗಣಿತ, ಜ್ಯಾಮಿತಿ ಮೊದಲಾದವುಗಳನ್ನು ಕಲಿಸುವ ಪ್ರೊಫೆಸರರ ಕೈಯಿಂದ ಎಂದು ಪಾರಾಗುವೆವೋ ಎಂದು ಹಾದಿ ಕಾಯುತ್ತಿದ್ದೆವು. ಇವರೆಲ್ಲರಿಗಿಂತ ನಾವು ಹೆಚ್ಚಿಗೆ ಹೆದರಿದ್ದು, ಡೆಮೋನ್ಸ್ಟ್ರೇಟರರಿಗೆ. ಏನೇ ಇರಲಿ, ನಮ್ಮ ಗೆಳೆತನ ಬೆಳೆಯಲು ಅವರೆಲ್ಲ ಅಪರೋಕ್ಷವಾಗಿ ಸಹಾಯಕರಾದರು. ಕಾಲೇಜಿನ ಮೊದಲ ವರ್ಷದಲ್ಲಿ ತೇರ್ಗಡೆ ಹೊಂದಿ ಇಂಟರಕ್ಕೆ ಸೇರಿದಾಗ ಸಿಂಹದ ಬಾಯಿಯಿಂದ ಪಾರಾಗಿ ಬಂದಂತೆ ಹಾಯ್ ಎನಿಸಿತ್ತು.

ದಿಗಂಬರ ದೇಶಪಾಂಡೆ ಹೆಸರಿಗೆ ತಕ್ಕಂತೆ ಖರ್ಚಿಕ. ಆದರೆ ತಂದೆ ಕಳೆದು ಕೊಂಡ ಆಸ್ತಿಯನ್ನು ಪುನಃ ಪಡೆಯುವ ಸ್ಥಿತಿಯಲ್ಲಿದ್ದ. ಎನ್ಕೆ ಹಾಗೂ ನನಗೆ ಹೊಟ್ಟೆಗೆ ಸೆತ್ತಿಗೆ ದದಾತಿ ಇರದಿದ್ದರೂ ಮೇಲಿನ ಖರ್ಚಿಗೆ ಹಣವಿರುತ್ತಿರಲಿಲ್ಲ. ಒಂದು ದಿನ ದೇಶಪಾಂಡೆನಿಗೆ 'ಸ್ವಾನ್ ಇಂಕ್' ಕೊಳ್ಳಲು ನಾಲ್ಕಾಣೆ ಕೇಳಿದಾಗ, 'ನನಗೆ ಸಿನೆಮಾಕ್ಕೆ ಹೋಗಲು ನಾಲ್ಕಾಣೆ ಇಲ್ಲ, ನಿನಗೆಲ್ಲಿಂದ ಇಂಕಿಗೆ ಕೊಡಲಿ?' ಎಂದು ಕೇಳಿ ದಾಗ ನಾವೆಲ್ಲ ನಕ್ಕಿದ್ದೆವು.

ಇಂಟರ್‌ದಲ್ಲಿದ್ದಾಗ, ತೆಳ್ಳಗೆ ಇದ್ದ ಮೈಯನ್ನು ಸ್ವಲ್ಪ ತುಂಬಿಕೊಳ್ಳುವಂತೆ ಮಾಡಲು ಎನ್ಕೆ ನನ್ನ ಕೂಡ ಮಲ್ಲಸಜ್ಜನ ವ್ಯಾಯಾಮ ಶಾಲೆಗೆ ಬರಹತ್ತಿದರು. ಪರೀಕ್ಷೆ ಸಮೀಪಿಸಿದ ಹಾಗೆ ವ್ಯಾಯಾಮದ ಪರಿಣಾಮವಾಗಿ ನಿದ್ರಾಂಗನೆಯ ಭಾರ ತಾಳಲಾರದೆ ವ್ಯಾಯಾಮಕ್ಕೆ ತಿಲಾಂಜಲಿ ಕೊಟ್ಟರು. ಈ ನಡುವೆ ಶ್ರೀನಿವಾಸ ಕುಲಕರ್ಣಿಯವರ, ಎನ್ಕೆ ಕುಲಕರ್ಣಿಯ ಪರಿಚಯವಾಗಿ ಸಾಹಿತ್ಯದ ಕಡೆಯ ಒಲವು

ಬಲವತ್ತರವಾಯಿತು. ಶ್ರೀನಿವಾಸರು "ಪ್ರೇಮ" ಎಂಬ ಮಾಸಪತ್ರಿಕೆಯನ್ನು ಹೊರಡಿಸುತ್ತಿದ್ದರು.

ಇಂಟರ್ ಪಾಸಾಗಿ, ಬಿ. ಎ. ಪ್ರಥಮ ವರುಷಕ್ಕೆ ಬಂದ ಬಳಿಕ ಎನ್ಕೆಯವರ ಕನ್ನಡ ಸಾಹಿತ್ಯ ಸೇವೆ ದಾಂಗುಡಿ ಇಡಹತ್ತಿತು. ತರುಣರೂ, ಶ್ರೇಷ್ಠ ವಿಮರ್ಶಕರೂ ಆದ ಎ. ಟಿ. ಸಾಸನೂರ ಹಾಗೂ ಆರ್. ವಿ. ಜಹಗೀರದಾರರ ಆಗಮನದಿಂದ, ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಸಾಹಿತ್ಯ ಸೇವೆಯ ಹೊನಲು ತುಂಬಿ ಹರಿಯ ಹತ್ತಿತು. ಕನ್ನಡದ ಹುಚ್ಚು, ಕೆಚ್ಚು ಇದ್ದ ಎನ್ಕೆ ಸ್ವಾಭಾವಿಕವಾಗಿಯೇ ಕನ್ನಡವನ್ನು ಪ್ರಧಾನ ವಿಷಯವಾಗಿ ತೆಗೆದುಕೊಂಡರು. ಎಚ್. ಟಿ. ಸಾಸನೂರ ಮತ್ತು ನಾನು ಇಂಗ್ಲೀಷನ್ನು ಪ್ರಧಾನ ವಿಷಯವನ್ನಾಗಿಯೂ, ಕನ್ನಡವನ್ನು ಉಪಪ್ರಧಾನ ವಿಷಯ ವನ್ನಾಗಿಯೂ ತೆಗೆದುಕೊಂಡೆವು. ದೇಶಪಾಂಡೆ ಮಾತ್ರ ಇಂಟರಿನಲ್ಲಿ ತರ್ಕಶಾಸ್ತ್ರದಲ್ಲಿ ಹೆಚ್ಚು ಗುಣಗಳನ್ನು ಪಡೆದ ಕಾರಣ ತತ್ವಜ್ಞಾನ ವಿಷಯವನ್ನು ತೆಗೆದುಕೊಂಡ. ಇದರಿಂದಲೂ ನಮ್ಮ ಗೆಳೆತನಕ್ಕೆ ಭಂಗ ಬರಲಿಲ್ಲ.

ಇಂಟರ್ ಮತ್ತು ಜ್ಯೂನಿಯರ ಬಿ. ಎ.ದಲ್ಲಿ ನಡೆದ ಕಾಲೇಜ ಚುನಾವಣೆಯ ವೈಖರಿ, ಕೆಲವು ಭಾವೀ ವ್ಯಕ್ತಿಗಳ ರೀತಿನೀತಿಗಳು, ಭಾವೀ ನಾಟಕಕಾರ ಎನ್ಕೆಯವರ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಿದವು. ಅದೇ ವೇಳೆಗೆ ಅವರ ವಿವಾಹವೂ ಜರುಗಿತು. ಹೊಸ ವೈವಾಹಿಕ ಜೀವನವು ಹೊಸ ಹರುಷದ, ಉತ್ಸಾಹದ ಚಿಲುಮೆ ಯನ್ನು ಚಿಮ್ಮಿಸಿತು. ಇವೆರಡರ ಮಧುರ ಸಮ್ಮಿಲನವೇ ಸಾಕಾರ ರೂಪ ತಾಳಿ 'ಇಲೆಕ್ಶನ್' ಎಂಬ ನಾಟಕವಾಗಿ ಹೊರಹೊಮ್ಮಿತು. ಬರಲಿಪ ಹಾಡಿನ ರುಚಿಯನ್ನು ಪ್ರಥಮತಃ ಕಂಡು, ಹುದುಗಿದ ಪರಾಗಕ್ಕೆ ಮುಖ ಸ್ಪರ್ಶಮಾಡಿ, ಹೊಸ ಸೃಷ್ಟಿಯು ಬರುವಂತೆ ಮಾಡಿದವರೆಂದರೆ ಶ್ರೀರಂಗರು ಹಾಗೂ ಎ. ಟಿ. ಸಾಸನೂರ ಅವರು. ಇದರಿಂದಾಗಿಯೇ 'ಸಾಹಿತ್ಯವಾಹಿನಿ'ಯೂ ಹರಿಯಿತು. 'ಇಲೆಕ್ಶನ್' ನಾಟಕದಿಂದ ಎನ್ಕೆಯವರ ಹೆಸರು ಎಲ್ಲರ ನಾಲಿಗೆಯ ಮೇಲೆ ನಲಿಯಿತು. ಅನಂತರ ಒಂದಾದ ನಂತರ ಒಂದರಂತೆ ಅನೇಕ ಸಾಹಿತ್ಯ ಕೃತಿಗಳು ಪ್ರಕಟವಾದವು.

ಎನ್ಕೆ ಕನ್ನಡವನ್ನೇ ಪ್ರಧಾನ ವಿಷಯವಾಗಿ ತೆಗೆದುಕೊಂಡು, ಎಂ. ಎ. ಪರೀಕ್ಷೆ ಪಾಸಾದ ನಂತರ ಬಿ. ಟಿ. ಪದವಿಯನ್ನೂ ೧೯೩೯–೪೦ರಲ್ಲಿ ಪಡೆದು ಮಾಳಮಡ್ಡಿ ಯಲ್ಲಿಯ ಕೆ.ಇ. ಬೋರ್ಡಿನ ಶಾಲೆಯಲ್ಲಿ ಶಿಕ್ಷಕರಾಗಿ ಸೇರಿದರು. ನಾನು ೧೯೩೮ ರಲ್ಲಿಯೇ ಈ ಶಾಲೆಯನ್ನು ಸೇರಿ, ಶಾರೀರಿಕ ಶಿಕ್ಷಣದಲ್ಲಿ ತರಬೇತು ಪಡೆದಿದ್ದೆ. ಈಗ ನಾವಿಬ್ಬರು ಗೆಳೆಯರು ೧೯೩೮ರ ನಂತರ ಪುನಃ ಒಂದೆಡೆ ಸೇರಿದೆವು.

ಎನ್ಕೆಯವರು ಈ ಶಾಲೆಯನ್ನು ಸೇರಿದಾಗ ಸ್ಥಳೀಯ ಸಂಸ್ಥೆಯ ಮುಖ್ಯಾ ಧ್ಯಾಪಕರೊಬ್ಬರು ಅವರಿಗೆ ಇಲ್ಲಿಗಿಂತ ಹೆಚ್ಚು ಪಗಾರ ಕೊಡುವ ಆಮಿಷ ತೋರಿ ಸಿದರು. ಆಗ ಕಾರ್ಯಾಧ್ಯಕ್ಷರಾದ ಡಾ. ಕಬ್ಬೂರ ಅವರಿಗೆ ಇವರ ಸುಳಿವು ಹತ್ತಿತು.

ಅವರು ಎನ್ಕೆ ಅವರನ್ನು ಕರೆದು, ಅವರ ಕೂಡ ಮಾತನಾಡಿ, ಅವರ ಅಗತ್ಯದ ಬೇಡಿಕೆಗಳನ್ನು ಈಡೇರಿಸಿದರು.

ದೇಸಾಯಿ ಕಂಪೌಂಡಿನಲ್ಲಿದ್ದ ನಮ್ಮ ಶಾಲೆಯಲ್ಲಿ ೧೯೪೦ ರಲ್ಲಿ ೧೦ ಜನ ಶಿಕ್ಷಕರಿದ್ದರು. ಅವರಲ್ಲಿ ನಾವು ಮೂವರ ಜತ್ತು-ಎನ್ಕೆ, ಕೆ.ಕೆ. ಶೆಟ್ಟಿ ಹಾಗೂ ನಾನು-ಎಲ್ಲರ ಕಣ್ಣಲ್ಲಿಯೂ ಒತ್ತುವ ಹಾಗೆ ಇತ್ತು. ತಡಮಾಡಿ ಬಂದಾಗ ಮುಖ್ಯಾಧ್ಯಾಪಕರು ಕೆಂಪು ಮಸಿಯಿಂದ ಗುರುತು ಹಾಕಿದರೆ ಎನ್ಕೆಯವರು 'ಇಂದು ಕೆಂಪು ಕಾಟು ಬಿದ್ದಿದೆ. ಅದಕ್ಕಾಗಿ ಚಹ ಕುಡಿಸಬೇಕು' ಎಂದು ಚೇಷ್ಟೆ ಮಾಡುತ್ತಿದ್ದರು. ಅದಕ್ಕೆ ತಡವೂ ಆಗುತ್ತಿದ್ದಿಲ್ಲ. ಶಾಲೆಯ ಕಂಪೌಂಡಿನಲ್ಲಿ ನಿಂತು ಕೂಗಿದರೆ, ರಾಮಕೃಷ್ಣನ ಚಹದ ಅಂಗಡಿಯಿಂದ ಬಿಸಿಬಿಸಿ ದೋಸೆ, ಚಹ ಪಾರ್ಸಲ್ ಆಗಿ ಬರುತ್ತಿದ್ದವು.

ಆಗ ಶಾರೀರಿಕ ಶಿಕ್ಷಣ ವಿದ್ಯಾರ್ಥಿಗಳಿಗೂ ಹಾಗೂ ಶಿಕ್ಷಕರಿಗೂ ಕಡ್ಡಾಯವಾಗಿತ್ತು. ಅದರ ಪ್ರಖರತೆಯೂ ಬಹಳವಿತ್ತು. ಶಾರೀರಿಕ ಶಿಕ್ಷಣದ ವರ್ಗಗಳನ್ನು ನಡೆಸಲು ಶಿಕ್ಷಕರಿಗೆ ಅಲ್ಪಾವಧಿಯ ಶಿಬಿರವನ್ನೇರ್ಪಡಿಸಿ ತರಬೇತು ಕೊಡಲಾಗುತ್ತಿತ್ತು. ಎಲ್ಲ ಶಿಕ್ಷಕರಂತೆ ಎನ್ಕೆ ಸಹ ಲಂಡ ಚಣ್ಣ, ಲಂಡ ಅಂಗಿ ಹಾಕಿಕೊಂಡು 'ಜಂಪಿಂಗ್ ಜಾಕ್' ಮೊದಲಾದ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರುವುದನ್ನು ನೋಡುವುದೇ ಒಂದು ಮೋಜು. ಪ್ರತಿದಿನ ಸಂಜೆಗೆ ವಿದ್ಯಾರ್ಥಿಗಳ ಕೂಡ ವ್ಹಾಲಿಬಾಲ್ ಆಡುತ್ತಿದ್ದೆವು. ಹುತುತು ಆಡಲು ಎನ್ಕೆ ಬರುತ್ತಿರಲಿಲ್ಲ. ಶೆಟ್ಟಿಯವರಿಗೆ ಹಾಕಿಯು ಹುಚ್ಚು. ಅದಕ್ಕಾಗಿ ರೇಲ್ವೆ ಗ್ರೌಂಡಿಗೆ ಹುಡುಗರನ್ನು ಕರೆದುಕೊಂಡು ಹೋಗುತ್ತಿದ್ದರು.

ನಮ್ಮ ಸಂಸ್ಥೆಯು ಪರವಾಗಿ ಹೊರಡಿಸುತ್ತಿದ್ದ "ತೇಜಸ್ವಿ" ಪತ್ರಿಕೆ ೧೯೪೦ ರಲ್ಲಿ ಎನ್ಕೆ ಅವರ ಸಂಪಾದಕತ್ವದಲ್ಲಿ ಅಚ್ಚಾಗಿ ಪ್ರಕಟಗೊಂಡುದು ಒಂದು ವಿಶೇಷ ದಾಖಲೆ. ವಿದ್ಯಾರ್ಥಿಗಳಲ್ಲಿ ಶಂಕರ ಮೊಖಾಸಿ ಶಂಕರ ಪಾಟೀಲ, ವ್ಹಿ.ಜಿ. ಪಾಟೀಲ ವಿದ್ಯಾರ್ಥಿನಿಯರಲ್ಲಿ ಶಿವಣಗಿ ಸೋದರಿಯರು, ಕುಮಾರಿ ಪಂಚಮುಖಿ ಮೊದಲಾದವರಿಂದ ಲೇಖನಗಳನ್ನು ಬರೆಯಿಸಿ. ಅವನ್ನು ತಿದ್ದಿ ಎನ್ಕೆ ಅವರು ಸುಂದರವಾಗಿ ಸಂಪಾದಿಸಿ ಪ್ರಕಟಿಸಿದ್ದರು. ಅಂದಿನ ಕೆಲವರು ವಿದ್ಯಾರ್ಥಿ ಲೇಖಕರು ಇಂದು ಸಾಹಿತಿಗಳಾಗಿ, ಪ್ರಾಧ್ಯಾಪಕರಾಗಿ, ಆಫೀಸರರಾಗಿ ಖ್ಯಾತರಾಗಿದ್ದಾರೆ.

ವಿದ್ಯಾರ್ಥಿಗಳ ಕೂಡ ನಿಕಟ ಸಂಪರ್ಕವುಂಟಾಗುವಂತೆ ಮಾಡಲು ಆಟಪಾಟಗಳಲ್ಲದೆ ವನಭೋಜನ, ಗುಡ್ಡ ಸುತ್ತುವುದು ಇತ್ಯಾದಿ ಕಾರ್ಯಕ್ರಮಗಳನ್ನು ಏರ್ಪಡಿಸಲಾಗುತ್ತಿತ್ತು. ಅವೆಲ್ಲವುಗಳಲ್ಲಿ ನಾವು ಮೂವರು ಕೂಡಿಯೇ ಇರುತ್ತಿದ್ದೆವು. ಸೋಮೇಶ್ವರ, ನುಗ್ಗಿಕೇರಿ, ಹತ್ತಿಕೊಳ್ಳ, ಎತ್ತಿನಗುಡ್ಡ ಮೊದಲಾದವುಗಳಿಗೆ ವಿದ್ಯಾರ್ಥಿಗಳ ಕೂಡ ಅನೇಕ ಸಲ ಭೆಟ್ಟಿ. ನುಗ್ಗಿಕೇರಿಯ ವನಭೋಜನದ ವರ್ಣನೆ ಮಾಡಿದ ಒಂದನೆಯ ಈಯತ್ತೆಯ ಕುಮಾರಿ ಸುಮಿತ್ರಾ ಪಂಚಮುಖಿಯು 'ನಮ್ಮ ಮಂಗಳೂರು ಸೀಮೆಯ ಮಾಸ್ತರರು ಮಾತ್ರ ತಮ್ಮ ಆನೆಯ ದಪ್ಪ ಅಕ್ಕಿಯ ಅನ್ನವನ್ನು, ಮತ್ತು

ಮರುದಿನ ಶಿಕ್ಷಕರೆಲ್ಲರೂ ಮೂಗಿನ ದನಿಯಲ್ಲಿ ಮಾತನಾಡಿದುದನ್ನು ಗೇಲಿ ಮಾಡಿದ್ದು ಇನ್ನೂ ನೆನಪಿನಂಗಳದಲ್ಲಿ ಹಚ್ಚ ಹಸರಾಗಿಯೇ ಇದೆ.

ಪ್ರತಿ ಆದಿತ್ಯವಾರ ಎನ್ಕೆ ಅಥವಾ ಶೆಟ್ಟಿಯವರ ಮನೆಯಲ್ಲಿ ನಾವಷ್ಟೇ ಸೇರುತ್ತಿದ್ದೆವು. ಅವರಿಬ್ಬರಿಗೂ ದೇಶಪಾಂಡೆ ಗಲ್ಲಿಯಲ್ಲಿದ್ದ ನಮ್ಮ ಮನೆಗೆ ಬರಲು ಅಂಜಿಕೆ. ನಮ್ಮ ತಂದೆಯವರು ಅವರಿಗೆ ಹುಲಿಯಂತೆ ಕಾಣುತ್ತಿದ್ದರು. ಒಂದು ಸಲ ಭಾರತ ಹುಣ್ಣಿಮೆಯ ದಿನ ಬೆಳದಿಂಗಳ ಊಟ ಮಾಡಬೇಕೆಂದು ಅವರಿಬ್ಬರೂ ನಿರ್ಧರಿಸಿ ನನ್ನನ್ನು ಕರೆಯಲು ರಾತ್ರಿ ೮ ಗಂಟೆಗೆ ಬಂದರು. ಅಂದು ನಾನಿನ್ನೂ ಮನೆಗೆ ಹೋಗಿದ್ದಿಲ್ಲ. ಓಣಿಯ ಕೊಟಿಗೆ ನಿಂತು ಚರ್ಚೆ ಮಾಡಿ ಕಡೆಗೆ ಶೆಟ್ಟಿಯವರೇ ಕರೆಯಲು ಧೈರ್ಯ ಮಾಡಿ ಮನೆಗೆ ಬಂದು ಬಾಗಿಲು ಬಡಿದಾಗ—'ಯಾರು, ಶಿವಾ ಬೇಕೇನು? ಅವ ಇಷ್ಟ ಲಗೂ ಎಲ್ಲಿ ಬರತಾನ, ಯಾರೋ ಶೆಟ್ಟಿ, ಎನ್ಕೆ ಅಂತ ಅವರ ಸಂಗತಿ ತಿರುಗಾಡತಾನ' ಎಂಬ ಗುಡುಗನ್ನು ಕೇಳಿ ಅವರು ಕಟ್ಟೆಯಿಂದ ಒಂದೇ ಜಿಗಿತಕ್ಕೆ ಎನ್ಕೆಯವರ ಕಡೆಗೆ ಓಡಿಬಂದ ಮಾತು ಇನ್ನೂ ಅಚ್ಚಳಿಯದೆ ನಮ್ಮ ಮನಸ್ಸಿನಲ್ಲಿ ಉಳಿದಿದೆ.

ಈ ಮೊದಲೆ ಹೇಳಿದಂತೆ ನಮ್ಮಿಬ್ಬರ ರುಚಿ, ಅಭಿರುಚಿ, ನಡೆನುಡಿ ತೀರ ಭಿನ್ನ. ಎನ್ಕೆ ಅವರಿಗೆ ಊಟ ಉಪಾಹಾರಗಳಲ್ಲಿ ಖಾರದ ತಿನಿಸುಗಳೆಂದರೆ ಪಂಚಪ್ರಾಣ.ನಾನೂ ಸಿಹಿ ಎಂದರೆ ಪ್ರಾಣ ಕಳೆದುಕೊಳ್ಳುವವ. ೧೯೪೦ ರ ಒಂದು ಸಿಹಿ ಸಂದರ್ಭದಲ್ಲಿ ಎನ್ಕೆ ನಮ್ಮ ಮನೆ ಊಟಕ್ಕೆ ಬಂದಿದ್ದರು. ಎಂದಿನಂತೆ ಎಲೆಯಲ್ಲಿ ಬಡಿಸಿದ್ದೆಲ್ಲವೂ ಸಿಹಿಮಯ. ಕೊನೆ 'ಚಟ್ನಿ ಆದರೂ ಇನ್ನೊಂದು ಸ್ವಲ್ಪ ಹಾಕ್ರಿ,' ಎಂದರು. ಊಟಕ್ಕೆ ಕೂತಮೇಲೆ ಪಾಯಸಕ್ಕೆ ಮೊದಲಿಗೆ ಚಟ್ನಿಯನ್ನೆ ಬಾಡಿಸಿಕೊಂಡರು. ಅದು ಕೂಡ ಸಿಹಿ ಇರಬೇಕೆ? ಅದನ್ನೆ ತಮ್ಮ ಮನೆಯವರಿಗೆ (ದಿ. ಇಂದಕ್ಕ) ಹೇಳಿದ್ದರು. ಸರಿ, ಅಂದಿನಿಂದ ಎನ್ಕೆ ಯವರ ಮನೆಯಲ್ಲಿ ಹೋಳಿಯಲ್ಲಿ ಬೆಲ್ಲ ಬಿದ್ದಾಗಲೆಲ್ಲಾ ಇಂದಕ್ಕ ನನ್ನ ಪಾಲನ್ನು ಮೀಸಲಾಗಿಟ್ಟಿರುತ್ತಿದ್ದರು. ೧೯೪೪ ರಲ್ಲಿ ಎನ್ಕೆ ಅವರು ತಮ್ಮ ಮೊದಲನೆಯ ಮನೆ ಬಿಟ್ಟು ಸ್ಟೇಶನ್ ರಸ್ತೆಯ ಪ್ರಭು ಚಾಳಿಗೆ ಬಂದಿದ್ದರು. ಒಂದು ಸಂಜೆ ಎನ್ಕೆ ಅವರಲ್ಲಿ ಹರಟೆ ಮುಗಿಸಿಕೊಂಡು ಹೊರಬೀಳುವ ಹೊತ್ತಿಗೆ ಇಂದಕ್ಕ ಹೊರಗಿನಿಂದ ಬಂದರು. ನಾನು ಹೊತ್ತಾಯಿತೆಂದು ಹೊರಬಿದ್ದು ಹತ್ತು ಹೆಜ್ಜೆ ಪ್ರೋತವಾರ ಶೀನಪ್ಪನ ಮನೆಯ ಹತ್ತಿರ ಹೋಗಿರಬೇಕು. ಎನ್ಕೆ ಓಡುತ್ತ ಬಂದರು. ಹೌದು ಇಂದಕ್ಕನೇ ಹೇಳಿಕಳಿಸಿರಬೇಕು. 'ಇವೊತ್ತು ಟೀಕಾಚಾರ್ಯರ ಪುಣ್ಯತಿಥಿ. ಹೋಳಿಗಿ ಮಾಡಿದ್ದರು. ನಾ ಮರ್ತೇ ಬಿಟ್ಟಿದ್ದೆ. ನಿಮ್ಮ ಪಾಲಿನ ಹೋಳಿಗಿ ನಿಮ್ಮನ್ನ ಕರೀತದ' ಎಂದು ಎನ್ಕೆ ಮತ್ತೆ ಕರೆದೊಯ್ದರು. ಇಂದಕ್ಕ ನಗುತ್ತ ನನ್ನ ಪಾಲಿನ ನೈವೇದ್ಯ ತರಲು ಅಡುಗೆ ಮನೆಗೆ ನಡೆದರು. ಈ ಉದಾರ ಅಂತಃಕರಣದ ರೀತಿ ನನ್ನ ಹೃದಯದಲ್ಲಿ ಆ ಗೃಹಿಣಿ ಕಣ್ಮರೆಯಾಗಿ ೩೮ವರ್ಷಗಳಾದರೂ ಇನ್ನೂ ಅಚ್ಚೊತ್ತಿದಂತಿದೆ.

ಎನ್ಕೆಯವರ ಸಾಹಿತ್ಯದ ಅಭಿರುಚಿ ಹುಡುಗರಿಗೂ ಹರಡಿತು. ಶಾಲೆಯ ಅಭ್ಯಾಸ ಮಂಡಲ ಪ್ರಾರಂಭವಾಯಿತು. ಕನ್ನಡ ಗ್ರಂಥಗಳ ಸಂಕಲನ ಸತ್ರ ಪ್ರಾರಂಭ ವಾಯಿತು. ಲೇಖನ ಬರೆಹ, ಚರ್ಚಾಕೂಟಗಳಿಗೆ ವಿಶೇಷ ಕಳೆ ಬಂದಿತು. ಎನ್ಕೆಯವ ರಿಗೆ ಬೆನ್ನೆಲುಬಾಗಿ ಶೆಟ್ಟಿಯವರು ನಿಂತರು. ಶ್ರೀಮಾನ್ ಮುಳಿಯ ತಿಮ್ಮಪ್ಪಯ್ಯನವರ ಭಾಷಣವು ಏರ್ಪಟ್ಟುದೇ ಇದಕ್ಕೆ ಸಾಕ್ಷಿ. ವಿದ್ಯಾರ್ಥಿಗಳಿಗೆ ವಿಷಯ ಕೊಟ್ಟು ನಿಬಂಧ ಬರೆಯಲು ಹೇಳಿ ಮಾದರಿಗಾಗಿ ಎನ್ಕೆಯವರು ಬರೆಯುವ ಪರಿಪಾಠವನ್ನಿಟ್ಟುಕೊಂಡಿ ದ್ದರು. 'ಒಂದು ಹೋಟೆಲಿನ ದೃಶ್ಯ', 'ಧರ್ಮ ಶಾಲೆ' ಮೊದಲಾದ ಹರಟೆಗಳೇ ಇದಕ್ಕೆ ನಿದರ್ಶನಗಳು.

ಎನ್ಕೆಯವರು ಬರೆದು ಪ್ರಕಟಿಸಿದ 'ಬೆಳ್ಳಿಹಬ್ಬ'ವೆಂಬ ಏಕಾಂಕ ನಾಟಕಗಳ ಸಂಕಲನವು ಪ್ರಕಟವಾದುದು ಇದೇ ವೇಳೆಗೆ. ಬಿ.ಟಿ. ಬುದ್ಧಿವಂತ, ಹೆರಿಗೆಯ ಹಿಟ್ಲರ್, ವಸುಂಧರಾಖ್ಯಾನ, ಅದ್ಭುತ ಶಿಕ್ಷಣ, ಉಷಃಪಾರಾಯಣ— ಇವುಗಳಲ್ಲಿ ಮೂಡಿದ ರಸವಂತಿಕೆ ಎಲ್ಲರಿಗೂ ಮೆಚ್ಚಿಕೆಯಾದವು. ನಮ್ಮ 'ತೇಜಸ್ವಿ' ಪತ್ರಿಕೆಯಲ್ಲಿ ವಿಮರ್ಶೆಯೂ ಪ್ರಕಟವಾಯಿತು. ಅಖಿಲ ಭಾರತ ಆಕಾಶವಾಣಿಯ ಶಾಲಾ ಪ್ರಸಾರದಲ್ಲಿ ಕೆ. ವಿ. ಪುಟ್ಟಪ್ಪನವರು ಬರೆದ 'ಧನ್ವಂತರಿ ಚಿಕಿತ್ಸೆ' ಎಂಬ ಸಣ್ಣ ಕಥೆಯ ಮೇಲೆ ಭಾಷಣ ವನ್ನು ೧೯೪೦ ರಲ್ಲಿ ಏರ್ಪಡಿಸಲಾಗಿತ್ತೆಂಬುದು ಒಂದು ವಿಶೇಷ ಸಂಗತಿ.

೧೯೪೨ ರ ಅಗಸ್ಟ ಕ್ರಾಂತಿಯಿಂದ ಪರಿಸ್ಥಿತಿಯು ಪಲ್ಲಟಿಸಿತು. ರಾಷ್ಟ್ರೀಯ ಸಂಸ್ಥೆಯೆಂದು ಹೆಸರಾದ ಕೆ.ಇ. ಬೋರ್ಡಿನ ಸಂಸ್ಥೆಗಳಿಗೆ ಉಳಿದ ಸ್ಥಾನಿಕ ಸಂಸ್ಥೆಗಳಿ ಗಿಂತ ಹೆಚ್ಚು ಬಿಸಿ ತಟ್ಟಿತು. ಕರ್ನಾಟಕ ಹೈಸ್ಕೂಲ ಮತ್ತು ಮಾಳಮಡ್ಡಿ ಹಾಯಸ್ಕೂಲ ಗಳು ಚಳುವಳಿಯ ಕೇಂದ್ರಗಳಾದವು. ಶ್ರೀ ಶೆಟ್ಟಿಯವರು ಸಪ್ಟೆಂಬರ ತಿಂಗಳಲ್ಲಿ ರಾಜೀನಾಮೆ ಕೊಟ್ಟು ಚಳವಳಿಯಲ್ಲಿ ಧುಮುಕಿ ೧ ವರ್ಷ ಸೆರೆಮನೆವಾಸವನ್ನು ಅನುಭವಿಸಿದರು. ಎಂತೆಂತಹರಿಗೆ ಸ್ವಾತಂತ್ರ್ಯ ಯೋಧರೆಂದು ಸರಕಾರದಿಂದ ಧನ ಸಹಾಯ ದೊರಕಿದರೂ ಶೆಟ್ಟಿಯವರಿಗೆ ಇನ್ನೂವರೆಗೆ ಅದು ದೊರೆಯದೆ ಇದ್ದುದು ನಮ್ಮ ಸಮಾಜದ ವ್ಯತ್ಯಸ್ತ ಪರಿಸ್ಥಿತಿಯ ಸಂಕೇತವಾಗಿದೆ; ಶೆಟ್ಟಿಯವರ ದುರ್ದೈವವೂ ಆಗಿದೆ.

ಎನ್ಕೆಯವರು ೧೯೪೩ ಫೆಬ್ರುವರಿ ತಿಂಗಳಲ್ಲಿ ಐತಿಹಾಸಿಕ ಸಂಶೋಧನಾ ಸಂಸ್ಥೆ ಯನ್ನು ಸೇರಿದರು. ಆಗ ನಮ್ಮ ತ್ರಿಕೂಟ ಮೈತ್ರಿಗೆ ವ್ಯತ್ಯಯವುಂಟಾಯಿತು. ಎನ್ಕೆ ಯವರು ಆವಾಗಲೇ ಪಿಎಚ್.ಡಿ.ಗಾಗಿ 'ಕುಮಾರವ್ಯಾಸ ಭಾರತ' ಎಂಬ ವಿಷಯವನ್ನು ಆಯ್ದುಕೊಂಡು ಅದರ ಅಭ್ಯಾಸ ಮುಂದುವರಿಸಿದರು. ಶ್ರೀ ಹಲಸಿಗಿಯವರ ಮನೆ ಯಲ್ಲಿ ದೇಶಪಾಂಡೆ ಗುರುರಾಯರ ಭಾರತವಾಚನ ಮತ್ತು ಕೃಷ್ಣಶರ್ಮರ ಕೂಲಂಕಷ ವಿಮರ್ಶೆ ಕೇಳಲುಎನ್ಕೆಯವರ ಕೂಡ ನಾನೂ ಹೋಗುತ್ತಿದ್ದೆ. ಇದು ನಮ್ಮ ಸಹಜೀವನ.

# ಎಲೆಮರೆಯ ಕಾಯಿ

## ಪ್ರೇಮಾ ಭಟ್

ಸುಮಾರು ಹದಿನೈದು ಹದಿನಾರು ವರ್ಷಗಳ ಹಿಂದಿನ ಪರಿಚಯ. ಆಗ ಎನ್ಕೆ ಬೆಂಗಳೂರು ಆಕಾಶವಾಣಿ ಕೇಂದ್ರದಲ್ಲಿ ಕಾರ್ಯ ನಿರ್ವಹಿಸುತ್ತಿದ್ದರು. ನಾನಿಕಾಕಾ ಎಂದು ಹೆಸರಾದ ಎನ್ಕೆ ಅವರಲ್ಲಿ ನನಗೆ ಹಿರಿಯ ಅಣ್ಣನಲ್ಲಿರಬೇಕಾದ ಗೌರವ. ಇದಕ್ಕೆ ಕಾರಣವೂ ಇಲ್ಲದಿಲ್ಲ. ನಾವು ಮಲ್ಲೇಶ್ವರದ ಬಾಡಿಗೆ ಮನೆಯಲ್ಲಿದ್ದಾಗ, ಶೇಷಾದ್ರಿಪುರದಲ್ಲಿದ್ದ ಅವರ ಮನೆಗೆ ಆಗಾಗ ನಮ್ಮ ಭೇಟಿ. ತುಂಬು ಹೃದಯದಿಂದ ಸ್ವಾಗತಿಸುತ್ತಿದ್ದ ದಂಪತಿಗಳಿಗೆ ಹೆಣ್ಣು ಮಕ್ಕಳಿಲ್ಲದ ಕಾರಣಕ್ಕಾಗಿಯೋ ಏನೋ ನಾನು ಹತ್ತಿರದವಳಾಗಿದ್ದೆ. ಕುಮಾರವ್ಯಾಸನನ್ನು ಬಣ್ಣಿಸುವುದೆಂದರೆ ಎನ್ಕೆ ಅವರಿಗೆ ಎಲ್ಲಿಲ್ಲದ ಉತ್ಸಾಹ ಮೇರೆ ಮೀರಿ ಹರಿಯುತ್ತಿತ್ತು. ಕುಮಾರವ್ಯಾಸ ಸೃಷ್ಟಿಸಿದ ಪಾತ್ರಗಳೆಲ್ಲವೂ ಮಹರ್ಷಿ ವ್ಯಾಸರ ಸೃಷ್ಟಿಯೇ ಆದರೂ, ಕುಮಾರವ್ಯಾಸ ಮೂಲಭೂತವಾಗಿ ಅವರಲ್ಲಿ ಐಕ್ಯಹೊಂದಿದ್ದಾನೆ. ಭಾಷೆಯ ಮೇಲೆ ಪ್ರಭುತ್ವ ಸಾಧಿಸಿ, ಎಲ್ಲಾ ಅನುಭವಗಳ ಸಾರಸರ್ವಸ್ವವನ್ನೇ ಅರೆದು ಕುಡಿದಿದ್ದಾನೆ, ಎಂದು ಹೇಳುತ್ತಿದ್ದರು. ಕುಮಾರವ್ಯಾಸನನ್ನು ತಿಳಿದುಕೊಂಡರೆ ಸಾಕು— ಅವರು ಆಗಾಗ ನನಗೆ ಹೇಳುತ್ತಿದ್ದ ಮಾತು. ಅವರ ಭೇಟಿಯ ಕಾಲದಲ್ಲಿ ನಡೆಯುತ್ತಿದ್ದುದೆ, ಸಾಹಿತ್ಯಕವಾಗಿ ಮಾತುಕತೆ. ನಡುನಡುವೆ ಕುಮಾರವ್ಯಾಸನ ಭಾರತ ವರ್ಣನವನ್ನು ಮಾಡಿಕೊಡದೆ ಇರುತ್ತಿರಲಿಲ್ಲ. ಅವರು ಬೆಂಗಳೂರು ಆಕಾಶವಾಣಿ ಕೇಂದ್ರದಿಂದ ವರ್ಗವಾಗಿ ಧಾರವಾಡಕ್ಕೆ ಹೋದರೂ ಆಗಾಗ ಅವರಿಂದ ಬರುತ್ತಿದ್ದ ಓಲೆಗಳಲ್ಲಿ ಕುಮಾರವ್ಯಾಸನ ಸಾಹಿತ್ಯದ ಏನಾದರೊಂದು ತುಣುಕು ಇದ್ದೇ ಇರುತ್ತಿತ್ತು. ಕುಮಾರವ್ಯಾಸನನ್ನು ಆಳವಾಗಿ ಅಭ್ಯಾಸ ಮಾಡಿದವರಲ್ಲಿ ಬಹುಶಃ ಎನ್ಕೆ ಅವರು ಮೊದಲಿಗರು ಎಂದು ನನಗನಿಸುತ್ತದೆ.

ನನ್ನ ಬರವಣಿಗೆ ಕುರಿತು ಎನ್ಕೆಯವರು ಚರ್ಚೆ ನಡೆಸದೆ ಇರುತ್ತಿರಲಿಲ್ಲ. ಮೆಚ್ಚಿಗೆ ಯಾದುದನ್ನು ಹೃದಯವಂತಿಕೆಯಿಂದ ಮೆಚ್ಚಿಕೊಳ್ಳುತ್ತಿದ್ದರು. ಸರಿ ಕಾಣದಿದ್ದರೆ ನಯವಾಗಿ ಟೀಕೆಯೂ ಇರುತ್ತಿತ್ತು. ಅವರು ಧಾರವಾಡಕ್ಕೆ ಹೋದಬಳಿಕ ಪತ್ರ ಮುಖೇನ ಇದು ಮುಂದುವರೆದಿತ್ತು. ನಾನು ಪತ್ರ ಬರೆಯುವುದರಲ್ಲಿ ಮಹಾ ಸೋಮಾರಿ. ಅವರು ಹಾಗಲ್ಲ, ಬರೆದಷ್ಟಕ್ಕೆ ಕೂಡಲೇ ಉತ್ತರ ಬರೆಯುವ ಪರಿಪಾಠ ಇಟ್ಟುಕೊಂಡಿ

ರುವುವನ್ನು ನೋಡಿವರೆ ಇವರ ಸದ್ಗುಣಗಳಲ್ಲಿ ಇದೂ ಒಂದು. ಎಲ್ಲಾ ವಿಧದಲ್ಲೂ ನನಗಿಂತ ಬಹಳ ಹಿರಿಯರಾದ ಎನ್ಕೆ ಅವರಲ್ಲಿ ನಾನು ಕಂಡದ್ದು ನಿಷ್ಕಪಟ ಅಂತಃಕರಣ. ಅವರ ಬಹುಮುಖ ಸಾಹಿತ್ಯದಲ್ಲಿ ಸ್ತ್ರೀಯ ಬಗ್ಗೆ ಅವರು ತಳೆದಿರುವ ಗೌರವಭಾವವನ್ನು ನಾವು ಗುರುತಿಸಬಹುದು. ಸ್ತ್ರೀಯ ಬಗ್ಗೆ ಅವರ ಭಾವ, ಅಂತಃಕರಣ ಮಾನವೀಯ ಮೌಲ್ಯ ಉಳ್ಳದ್ದು.

ಪತ್ರ ವ್ಯವಹಾರದ ಮಧ್ಯೆ ಎನ್ಕೆ ಅವರಿಂದ ಒಂದು ಕಾಗದ ಬಂತು. ಅದು ದುಃಖದ ಸುದ್ದಿ ಹೊತ್ತು ಬಂದ ಪತ್ರ. 'ನಿನ್ನ ಅತ್ತಿಗೆ ಹೋಗಿಬಿಟ್ಟಳು.' ಎನ್ಕೆ ಅಣ್ಣನಿಗೆ ಪತ್ನಿ ವಿಯೋಗವಾಗಿದೆ ಎಂದು ಅರಿಯಲು ನನಗೆ ಕೆಲವು ಕ್ಷಣಗಳೇ ಬೇಕಾದುವು. ಹಿಂದಿನ ಪತ್ರದಲ್ಲಿ ಈ ಬಗ್ಗೆ ಯಾವ ಸುದ್ದಿಯೂ ಇರಲಿಲ್ಲ. ಬೆಂಗಳೂರಿನಲ್ಲಿರುವಾಗ ಅತ್ತಿಗೆ ಒಂದು ದಿನ ಆರೋಗ್ಯ ತಪ್ಪಿ ಮಲಗಿದವರಲ್ಲ. ಮೂರುದಿನ ಕುಳಿತು ಯೋಚಿಸಿದೆ. ಏನು ಉತ್ತರ ಬರೆಯಬೇಕೋ ತಿಳಿಯಲಿಲ್ಲ. ದುಃಖದಿಂದ ಭಾರವಾದ ಮನಸ್ಸಿಗೆ ಏನು ಬರೆದರೂ ಒಂದೆ, ಅಳಿದು ಸುರಿದು ಎರಡು ಸಾಲು ಗೀಚಿದೆ. 'ಧೈರ್ಯ ತಂದುಕೊಳ್ಳಿ. ಮುತ್ತೈದೆ ಸಾವು ಎಲ್ಲರಿಗೂ ದಕ್ಕೋದಿಲ್ಲ. ಅತ್ತಿಗೆ ಪುಣ್ಯಮಾಡಿದ್ರು,' ಅಂತ ಮಾಮೂಲಿ ಸಾಂತ್ವನದ ಮಾತುಗಳನ್ನು ಬರೆದೆ. ಉತ್ತರವನ್ನು ನಿರೀಕ್ಷಿಸಬೇಕಾಗಿರಲಿಲ್ಲ. ಆ ದುಃಖದಲ್ಲೂ ಎನ್ಕೆ ಅವರು ಕೊಂಚ ದೀರ್ಘವಾದ ಪತ್ರವನ್ನೇ ಬರೆದಿದ್ದರು. 'ಅಂತಹ ದೊಡ್ಡ ಕಾಹಿಲೆ ಏನೂ ಅಲ್ಲ; ಸಾಯುವುದಕ್ಕೆ ಒಂದು ನೆವ ಅಷ್ಟೆ. ಅವಳಿಲ್ಲದ ಮೇಲೆ ನನಗೂ ಬದುಕಬೇಕೆನ್ನುವ ಅಪೇಕ್ಷೆ ಕುಗ್ಗುತದೆ'ಎನ್ನುವ ಕೊರಗು ಆ ಕಾಗದದಲ್ಲಿ ಇಣುಕುತ್ತಿತ್ತು. 'Man forms and educates the world, but woman educates Man.' ಅಂತ ಹಿರಿಯರು ಹೇಳಿದ ಉಕ್ತಿಯನ್ನು ಜ್ಞಾಪಿಸಿಕೊಂಡು ಬರೆದಿದ್ದರು. ಅಂತಹ ಒಬ್ಬ ಶಿಕ್ಷಕಿಯನ್ನು ಕಳೆದುಕೊಂಡೆನಲ್ಲ ಎನಿಸುತ್ತದೆ ಎಂದು ಬರೆದಿದ್ದರು. ಆದರೆ ಕೆಲವೇ ದಿವಸಗಳಲ್ಲಿ ಎನ್ಕೆ ಅವರಲ್ಲಿ ಆದ ಬದಲಾವಣೆಯು ಹೆಗ್ಗುರುತು, ಮೇಲಿಂದ ಮೇಲೆ ಪತ್ರಿಕೆಗಳಲ್ಲಿ ಪ್ರಕಟವಾಗತೊಡಗಿದ ಅವರ ಬರಹಗಳು ಅವರು ಪತ್ನಿ ಅಗಲಿಕೆ ಮರೆಯಲು ನಡೆಸಿದ ಹೋರಾಟ ಎಂದು ಬೇರೆ ಹೇಳಬೇಕಾಗಿಲ್ಲ. ಅಂತಹ ಒಂದು ಅನ್ಯೋನ್ಯ ದಾಂಪತ್ಯ ಅವರದು. ಮತ್ತೆ ಕರ್ತವ್ಯದ ಕಡೆಗೆ ಮುಖ ಮಾಡಿ ಹಿರಿಯ ಮಗನಿಗೆ ಮದುವೆ ಮಾಡಿದರು.

ಅಣ್ಣ ಎನ್ಕೆ ಅವರನ್ನು ನಾನು ಆಗಲೂ ಈಗಲೂ ಮೆಚ್ಚಲು ಕಾರಣವೇನೆಂದರೆ, ಅವರಿಗೆ ಮಾನವ ಸಮುದಾಯದ ಮೇಲೆ ಇರುವ ಪೂರ್ಣ ವಿಶ್ವಾಸ. ಯಾರನ್ನು ಯಾವ ಗಳಿಗೆಯಲ್ಲೂ ಕೆಡಿಸಿಕೊಳ್ಳದ ಮನೋಪ್ರವೃತ್ತಿ. ಮಧ್ಯಮವರ್ಗದ ಕುಟುಂಬ ಜೀವನದಲ್ಲಿರುವ ಕಾಳಜಿ. ನೋಡುವ ಬಿಳಿಗಣ್ಣು, ತೆರೆದ ಹೃದಯ ಮಿಡಿವ ಮನಸ್ಸು 'ವೈನಿ' ಕಾದಂಬರಿಯಲ್ಲಿ ಸ್ತ್ರೀಯ ಬಗ್ಗೆ ಅವರು ತಳೆದ ಗೌರವಭಾವ, ಅವರಲ್ಲಿದ್ದ ಮಾತೃಪ್ರೇಮ ಪ್ರತಿಧ್ವನಿಸುತ್ತದೆ.

ನಾನಿಕಾಕಾ : ಎನ್ಕೆಬದುಕು/೧೪೭

ಎನ್ಕೆ ಅವರು ಕವಿ ಕುಮಾರವ್ಯಾಸನ ಸ್ತ್ರೀಪಾತ್ರಗಳನ್ನು ಪರಿಚಯ ಮಾಡಿ ಕೊಟ್ಟಿದ್ದಾರೆ. ಇವರಿಂದ ಎನ್ಕೆ ಅವರಿಗೆ ಸ್ತ್ರೀಯ ಬಗ್ಗೆ ಎಷ್ಟು ಅನುಕಂಪ ಇದೆ ಎನ್ನು ವುದು ಅರ್ಥವಾಗುತ್ತದೆ. ಮಹಾಭಾರತದ ಕುಂತಿಯ ಬಾಳು ಎಷ್ಟು ಅಧಮ ಮತ್ತು ನಿಷ್ಠುರ. ಕನ್ಯೆ ಇದ್ದಾಗಲೇ ಕರ್ಣನನ್ನು ಪಡೆದ ಅವಳ ಪಾಡು ಎಂತಹುದು! ಜನ ಅಪವಾದಕ್ಕೆ ಹೆದರಿ ಬೆದರಿ ಕೊರಗುವ ಕುಂತಿಯ ಕಂಬನಿ ಬೇರೊಬ್ಬರಿಗೆ ತಿಳಿಯು ವಂತಿಲ್ಲ. ತನ್ನೊಳಗೆ, ದುಃಖ ನುಂಗಿ ಕೊರಗುವ ಆ ತಾಯಿ, ಭಾರತದ ಯುದ್ಧದ ಮುನ್ನಾದಿನ ಶ್ರೀಕೃಷ್ಣ ಪರಮಾತ್ಮನ ಸಲಹೆಯಂತೆ ಕರ್ಣನನ್ನು ಸಂಧಿಸಿ ತನ್ನ ಐವರು ಮಕ್ಕಳ ಜೀವದಾನವನ್ನು ಬೇಡಿ ಪಡೆಯುವುದು. ಈ ಎಲ್ಲ ಸಂದರ್ಭದಲ್ಲಿ ಆ ತಾಯಿ ಹೃದಯ ಎಷ್ಟೊಂದು ನೊಂದಿರಬೇಡ ಎನ್ನುವ ಕಳಕಳಿ ಎನ್ಕೆ ಅವರನ್ನು ಬಾಧಿಸಿದೆ. ಅಂತೆಯೇ ಕುಮಾರವ್ಯಾಸನ ದ್ರೌಪದಿಯನ್ನು ಮೆಚ್ಚಿಕೊಂಡಿದ್ದಾರೆ. ಅವಳ ಬಿಚ್ಚು ಮನಸ್ಸಿನ ಕೆಚ್ಚನ್ನು ಒಪ್ಪಿಕೊಂಡಿದ್ದಾರೆ. ಭೀಮನಂತಹ ಗಂಡನನ್ನು ಷಂಡನೆಂದು ದ್ರೌಪದಿ ಜರೆಯಬೇಕಾದರೆ, ದ್ರೌಪದಿಯ ಗಂಡು ಸತ್ವ ಎಂತಹದಿರಬೇಕು! ಛಲಿ ನಿನ್ನಂತಹ ಹೆಣ್ಣಿರಬೇಕು ಎನ್ನುವ ಎನ್ಕೆ ಅವರು ಕುಮಾರವ್ಯಾಸನ ದ್ರೌಪದಿ ಒಬ್ಬಳೇ ಹೀಗೆ ಬಿರುನುಡಿಯಬಲ್ಲಳು ಎನ್ನುತ್ತಾರೆ. ಅಂದರೆ ಶೋಷಣೆಯ ವಿರುದ್ಧ ಎಲ್ಲಾ ಹೆಣ್ಣು ದ್ರೌಪದಿಯಂತೆ ಸಿಡಿದೇಳಬೇಕು ಎನ್ನುವ ಅರ್ಥವನ್ನು ಇದು ಸೂಚ್ಯವಾಗಿ ಕೊಡಬಲ್ಲದು. ಹೆಣ್ಣನ್ನು ಅಕ್ಕರೆಯ ತಾಯಿ, ಸೋದರಿಯಲ್ಲಿ ಕಂಡಿದ್ದಾರೆ ಎನ್ಕೆ ಅವರು. ಅವರ ಒಂದೊಂದು ಓಲೆಯಿಂದ ಒಂದೊಂದು ಉದಾಹರಣೆ ಕೊಡ ಬಹುದು. 'ನನ್ನ ಅಕ್ಕರೆಯ ತಂಗಿ', 'ನನ್ನ ಜೀವದ ತಂಗಿ', ಎಂದು ಪ್ರಾರಂಭಿಸುವ ಪರಿಗೆ ಬೆಣ್ಣೆ ಕರಗಿ ನೀರಾಗಬೇಕು. ಅವರ ಅಂತಃಕರಣಕ್ಕೆ ಕನ್ನಡಿ ಹಿಡಿದಂತೆ ಅವರ ಒಂದೊಂದು ಸಾಲು. ಅವರ ಹೃದಯದ ಪ್ರತ್ಯಕ್ಷ ದರ್ಶನ ಮಾಡಿಕೊಡುವುದಕ್ಕಾಗಿ ಎರಡು ಪತ್ರಗಳ ಕೆಲವು ಸಾಲು ನಿಮ್ಮ ಮುಂದಿಟ್ಟಿದ್ದೇನೆ:

"ಬಹಳ ಬಹಳ ದಿನಗಳ ಮೇಲೆ ಮುತ್ತಿನಂತಹ ಕಸ್ತೂರಿಯ ಕನ್ನಡ ಅಕ್ಕರಗಳ ನಿನ್ನ ಓಲೆ ಓದಿ ಹೆಚ್ಚು ಎನಿಸಿತು ತಂಗಿ. ಅದಕ್ಕಾಗಿ ತುಂಬ ಕೃತಜ್ಞ. ನನಗೆ ರಾಜ್ಯ ಪ್ರಶಸ್ತಿ ಸಿಕ್ಕಾಗ ನೀನು ಬರೆದಿದ್ದೆ ಎಂಬ ಪತ್ರ ಏಕೆ ನನ್ನ ಕೈಗೆ ಸಿಗಲಿಲ್ಲ? ಇಂದಿಗೂ ಆ ಸಂದರ್ಭದ ಶುಭಾಶಯ ಪತ್ರಗಳೆಲ್ಲ ನನ್ನ ಬಳಿಯೇ ಇವೆ. ನಾನು ಆ ಸಂದರ್ಭದಲ್ಲಿ ಬೆಂಗಳೂರಿಗೆ ಬಂದಿದ್ದೆ. ನನ್ನ ತಂಗಿ ಸಭೆಗೂ ಬಂದಿಲ್ಲ ಎಂಬ ಒಂದಿಷ್ಟು ಅಸಮಾ ಧಾನದಿಂದ ಹೊಸಳ್ಳಿಗೆ ಬರಲಿಲ್ಲ. ಇದ್ದ ಮಾತು ಹೇಳುತ್ತೇನೆ, ಬೇಸರ ಮಾಡಿಕೊಳ್ಳ ಬೇಡ. ಆದರೆ ನನ್ನ ತಂಗಿಯನ್ನು ಕಾಣುವ ಹಂಬಲ ಒಳಗೇ ಕುದಿಯುತ್ತಿತ್ತು. ಈ ಜೀವದ ಅನುಬಂಧ ಎಲ್ಲಿ ಹೋದೀತು ತಂಗಿ? ಇರಲಿ, ಈಗ ನೀವಿಬ್ಬರೂ ನಿಮ್ಮ ಪುಟ್ಟ ಮಕ್ಕಳನ್ನು ಕರೆದುಕೊಂಡು ಒಮ್ಮೆ ಬರ್‍ರಿ. ನಾನು ಈಗ ಬಾಳಸಂಜೆಯಲ್ಲಿ ಕಾಲಿಟ್ಟಿ ದ್ದೇನೆ. ಆರೋಗ್ಯ ಯಾವಾಗಲೂ ಸಮನಾಗಿ ಇರುವುದಿಲ್ಲ. ಚಿ. ರವಿ ಆತನ ಹೆಂಡತಿ

ಮಾಜಾ, ಇನ್ನಿಬ್ಬರು ದೊಡ್ಡ ಸೊಸೆಯಂದಿರೂ ಮಕ್ಕಳೂ ಅಷ್ಟೆ—ನನ್ನನ್ನು ಕೂಸಿನಂತೆ ನೋಡಿಕೊಳ್ಳುತ್ತಾರೆ. ಅವರು ನನಗೆ ಸೊಸೆಯಂದಿರಲ್ಲ, ನನಗೆ ಹೆಣ್ಣುಮಕ್ಕಳು. ನನಗೆ ಹೆಣ್ಣುಮಕ್ಕಳಿಲ್ಲ ನೋಡು! ಕೈಯಲ್ಲಿ ಬರೆವಣಿಗೆ ಕೆಲಸ ತುಂಬ ಇದೆ. ಆದರೆ ಹೆಸರು, ಹಣ ತರುವಂತಹದ್ದೊಂದೂ ಅಲ್ಲ. ಡಾ. ವಿನಾಯಕರನ್ನು ಕುರಿತು ಒಂದು ಬೃಹತ್ ಗ್ರಂಥ ಮುಗಿಯುವ ಹಂತದಲ್ಲಿದೆ, 'ವಿನಾಯಕ ದರ್ಶನ'. ಅರವಿಂದರ ಬಗ್ಗೆ ಒಂದು ಗ್ರಂಥ ಬರೆಯಲು ಅರವಿಂದ ಮಂಡಳಿಯವರು ವಿಧಿಸಿದ್ದಾರೆ."

"ಇತ್ತೀಚೆಗೆ ನನ್ನದೊಂದು ದೊಡ್ಡ ಗ್ರಂಥ ಹೊರಬಂದಿದೆ. 'ಕನ್ನಡ ವ್ಯಾಸ ಭಾರತ'. ಇದರಲ್ಲಿ ಕುಮಾರವ್ಯಾಸನ ೧೦ ಪರ್ವ, ತಿಮ್ಮಣ್ಣನ ೮ ಪರ್ವಗಳ ಗದ್ಯಸಾರದೊಂದಿಗೆ ವಿಮರ್ಶಾತ್ಮಕ ವಿಸ್ತೃತ ಮುನ್ನುಡಿಯೂ ಸೇರಿದೆ. ೭೦೦ ಪುಟದ (ಡೆಮ್ಮಿ ಯಾಕಾರದ) ಗ್ರಂಥವಾಗಿದೆ. ಇದೇ ತಿಂಗಳಲ್ಲಿ ಐ.ಬಿ.ಹೆಚ್. ಪ್ರಕಾಶನದಿಂದ 'ಸಾವಿರದ ವರಕವಿ ಬೇಂದ್ರೆ' ಎಂಬ ಚಿಕ್ಕ ಹೊತ್ತಿಗೆಯೂ ಬಂದಿದೆ. ಇದಲ್ಲದೆ ಶ್ರೀ ಅರವಿಂದರ 'ಪೂರ್ಣಯೋಗ ದಿವ್ಯ ಜೀವನಗಳ' ಕೊಡುಗೆ ಮತ್ತು ಭಾರತೀಯ ವೈದಿಕ ಪರಂಪರೆಯ ಒಂದು ಗ್ರಂಥವೂ ಬಂದಿದೆ. ಕಾದಂಬರಿ ಮಾತ್ರ ಯಾಕೋ ನನ್ನ ಕೈಗೆ ಇತ್ತೀಚೆಗೆ ಎಟುಕಿಲ್ಲ. ಬರೆಯಬೇಕು ಎನ್ನುತ್ತದೆ ಮನಸ್ಸು. ಆಗಲೊಲ್ಲದು..."

ಇಷ್ಟೆಲ್ಲ ಇದ್ದೂ ಯಾವ ಸದ್ದುಗದ್ದಲಕ್ಕೂ ಹೋಗದೆ ಎಲೆಮರೆಯ ಕಾಯಂತೆ ಅಗ್ಗದ ಪ್ರಚಾರಕ್ಕೆ ಕಿವಿಗೊಡದೆ ಸದಾ ಕಾರ್ಯೋನ್ಮುಖರಾಗಿರುವ ಎನ್ಕೆ ಅವರು ಒಬ್ಬ ಮುಗ್ಧ ಮಾನವ.

# ಎನ್ಕೆ ಮತ್ತು ನಾನು

## ಎ. ಎಂ. ಅಣ್ಣಿಗೇರಿ

ಎನ್ಕೆ ಕುಲಕರ್ಣಿ ಅವರನ್ನು ನಾನು ಕಳೆದ ಐವತ್ತೈದು ವರ್ಷಗಳಿಂದಲೂ ಬಲ್ಲೆ. ನಾನು ಇಂಗ್ಲೀಷ ನಾಲ್ಕನೆಯ ಇಯತ್ತೆಯಲ್ಲಿ ಧಾರವಾಡದ ವಿಕ್ಟೋರಿಯಾ ಹಾಯ ಸ್ಕೂಲಿನಲ್ಲಿ ಓದುತ್ತಿದ್ದಾಗ ಅವರು ಆ ಕ್ಲಾಸಿಗೆ ಒಂದು ಟರ್ಮಿನ ಮಟ್ಟಿಗೆ ಬಂದಿದ್ದರು. ಅವರು ಚುರುಕು ವಿದ್ಯಾರ್ಥಿಯೆಂದು ಕಾಣಿಸಿಕೊಂಡಿದ್ದರು. ಮುಂದೆ ಅವರು ಹುಬ್ಬಳ್ಳಿಗೆ ಕಲಿಯಲು ಹೋದಂತೆ ನೆನಪಿದೆ.

### ಕಾಲೇಜ ಅಭ್ಯಾಸ

ಎನ್ಕೆ ಅವರ ಜೊತೆಗೆ ಕರ್ನಾಟಕ ಕಾಲೇಜಿನಲ್ಲಿ ಸಹಪಾಠಿಯಾಗಿ ಓದುವ ಸಂದರ್ಭ ನನಗೂ ದೊರೆಯಿತು. ಅಂದಿನಿಂದ ನಮ್ಮಿಬ್ಬರಲ್ಲಿ ಬೆಳೆದು ಬಂದ ಸ್ನೇಹ, ವಿಶ್ವಾಸ ಈವರೆಗೂ ಉಳಿದು ಬಂದಿದೆ. ಅವರು ಪ್ರೀವ್ಹಿಯಸ್‌ನಲ್ಲಿದ್ದಾಗಿನಿಂದ ಮಾವಂದಿರಾದ ಬುರ್ಲಿ ಅವರ ಮನೆಯಲ್ಲಿಯೇ ವಾಸಮಾಡಿದ್ದರು. ನಾವು ಅವರನ್ನು ಕಾಣಲು ಮೇಲಿಂದ ಮೇಲೆ ಬುರ್ಲಿ ಅವರ ಮನೆಗೆ ಹೋಗುತ್ತಿದ್ದೆ. ಆಗ ನನಗೆ ಸಿಕ್ಕ ಅವರ, ಆತಿಥ್ಯಗಳು ಇನ್ನೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿವೆ. ಆಗಲೇ ಶ್ರೀರಂಗರ ನಾಟಕ ಪ್ರಭಾವ, ದ. ರಾ. ಬೇಂದ್ರೆ ಅವರ ಕಾವ್ಯದ ಪ್ರಭಾವ ಎನ್ಕೆ ಅವರ ಮೇಲೆ ಆಗಿತ್ತು. ಬೇಂದ್ರೆ ಅವರ ಕವಿತೆಗಳನ್ನು ಓದುವುದು, ಬೇಂದ್ರೆ ಅವರ ಧಾಟಿಯಲ್ಲಿಯೆ ಹಾಡುವದು ಮತ್ತು ಬೇಂದ್ರೆ ಅವರ ಕವನಗಳ ರೀತಿಯಲ್ಲಿಯೆ ಕವಿತೆಗಳನ್ನು ರಚಿಸು ವದು ಎನ್ಕೆ ಅವರ ದಿನಚರ್ಯೆಗಳಲ್ಲಿ ಒಂದಾಗಿತ್ತೆಂದರೆ ತಪ್ಪಾಗದು.

ಎನ್ಕೆ ಮತ್ತು ನಾನು ಬಿ.ಎ.ದಲ್ಲಿ ಕನ್ನಡವನ್ನು ಮುಖ್ಯ ಐಚ್ಛಿಕ ವಿಷಯವನ್ನಾಗಿ ತೆಗೆದುಕೊಂಡಿದ್ದೆವು. ಆಗ ಪ್ರೊ. ಎ. ಟಿ. ಸಾಸನೂರ ಅವರು ನಮಗೆ ಕನ್ನಡ ಕಲಿಸು ತ್ತಿದ್ದರು. ಎನ್ಕೆ ಅವರು ೧೯೩೭ರಲ್ಲಿ ಬಿ.ಎ. ಆನರ್ಸ ಪರೀಕ್ಷೆಯಲ್ಲಿ ಉತ್ತಮ ರೀತಿ ಯಿಂದ ರ‍್ಯಾಂಕಿನಲ್ಲಿ ಪಾಸಾದರು. ನಾನಾಗಲಿಲ್ಲ. ಮುಂದೆ ಎನ್ಕೆ ಅವರು ಎಂ.ಎ. ಅಭ್ಯಸಿಸಲು ಸಾಂಗ್ಲಿಯ ವಿಲಿಂಗ್ಡನ್ ಕಾಲೇಜಿಗೆ ಹೋದರು. ಆಗ ಧಾರವಾಡದಲ್ಲಿ ಎಂ.ಎ.ಗೆ ಕನ್ನಡವನ್ನು ಮುಖ್ಯ ವಿಷಯವನ್ನಾಗಿ ತೆಗೆದುಕೊಂಡು ಪರೀಕ್ಷೆಗೆ ಕೂಡಲು ಸೌಕರ್ಯವಿರಲಿಲ್ಲ. ಪ್ರೊ. ಆರ್. ಎಸ್. ಮುಗಳಿ ಅವರು ವಿಲಿಂಗ್ಡನ್ ಕಾಲೇಜಿನಲ್ಲಿ

ಕನ್ನಡ ಪ್ರಾಧ್ಯಾಪಕರಾಗಿದ್ದರು. ಆ ಸಮಯಕ್ಕೆ, ವಿದ್ಯಾರ್ಥಿಗಳು ಟರ್ಮಿಗೆ ಕೆಲವು ಲೆಕ್ಚರುಗಳನ್ನು ಮಾತ್ರ ಕೇಳಲು ಹೋಗಿದ್ದರೆ ಎಂ.ಎ. ಪರೀಕ್ಷೆಗೆ ಕೂಡಲು ಪರವಾನಿಗೆ ಸಿಗುತ್ತಿತ್ತು. ಎನ್ಕೆ ಅವರು ಹೋದಂತೆಯೆ ಮುಂದಿನ ವರ್ಷ ನಾನೂ ವಿಲಿಂಗ್ಡನ್ ಕಾಲೇಜಿಗೆ ಎಂ.ಎ.ಗೆ ಕನ್ನಡವನ್ನು ಮುಖ್ಯ ಐಚ್ಛಿಕ ವಿಷಯವಾಗಿ ತೆಗೆದುಕೊಂಡು ಹೆಸರು ಹಚ್ಚಿದೆ. ಈ ರೀತಿ ಎನ್ಕೆ ಮತ್ತು ನನ್ನಲ್ಲಿ ನಿಕಟ ಸಂಬಂಧ ಬೆಳೆಯಿತು. ಅವರು ತೆಗೆದುಕೊಂಡ ಟಿಪ್ಪಣಿಗಳನ್ನು ನಾನೂ ಬಳಸಿಕೊಂಡೆ. ಅಭ್ಯಾಸ ಮಾಡಲು ಅವರು ಉಪಯೋಗಿಸಿದ ಪುಸ್ತಕಗಳು ನನಗೂ ಲಭ್ಯವಾದವು.

ಟಿ. ಡಿ. ನಾಯಕ, ಹಾಂಸಭಾವಿಯ ಕುಲಕರ್ಣಿ ಶ್ರೀನಿವಾಸ (ಇವರು ಉತ್ತಮ ನಟರೆಂದು ಪ್ರಸಿದ್ಧರಾದರು) ಮತ್ತು ನಾನು ಕೂಡಿಯೇ ಸಾಂಗ್ಲೀ ಕಾಲೇಜಿಗೆ ರೇಲ್ವೆ ಗಾಡಿಯಲ್ಲಿ ಹೋಗುತ್ತಿದ್ದಾಗ ಒಂದು ಮೋಜಿನ ಸಂಗತಿ ಘಟಿಸಿತು. ಆಗ ಬೆಳಗಾವಿಯಿಂದ ಕೊಲ್ಹಾಪುರಕ್ಕೆ ರೇಲ್ವೆ ಚಾರ್ಜು ಕೇವಲ ಹದಿನಾಲ್ಕು ಆಣೆಯಿದ್ದಂತೆ ತೋರುವದು. ಈ ಪ್ರಕಾರ ಬೆಳಗಾವದಿಂದ ಕೊಲ್ಹಾಪುರಕ್ಕೆ ಮೋಟಾರಿನಿಂದ ಹೋಗುತ್ತಿದ್ದ ಪ್ರವಾಸಿಗರನ್ನು ರೇಲ್ವೆದಲ್ಲಿ ಪ್ರವಾಸ ಮಾಡುವಂತೆ ಆಕರ್ಷಿಸುವದು ರೇಲ್ವೆದವರ ಉದ್ದೇಶವಾಗಿತ್ತು. ಕುಲಕರ್ಣಿ ಶ್ರೀನಿವಾಸ ಮತ್ತು ನಾನು ಸೌಕರ್ಯದರದ ಟಿಕೀಟು ಕೊಂಡುಕೊಂಡು ಮಿರಜದವರೆಗೆ ಪ್ರಯಾಣ ಮಾಡಿ ಮಿರಜದಲ್ಲಿ ಇಳಿದು ಅಲ್ಲಿಂದ ಸಾಂಗ್ಲಿಗೆ ಮತ್ತೊಂದು ಟಿಕೀಟನ್ನು ಕೊಳ್ಳಲು ಹೋದೆವು. ಅದಕ್ಕೆ ರೇಲ್ವೆ ಟಿಕೆಟ್ ಕಲೆಕ್ಟರರು ಆಕ್ಷೇಪವೆತ್ತಿ 'ನೀವು ಕೊಲ್ಹಾಪುರದವರೆಗೆ ಸೌಕರ್ಯ ದರದ ಟಿಕೆಟ್ ಪಡೆದಿದ್ದೀರಿ. ಆದಕಾರಣ ನೀವು ಕೊಲ್ಹಾಪುರದವರೆಗೂ ಪ್ರವಾಸ ಮಾಡಲೇಬೇಕು. ಇಲ್ಲವೆ ಮಿರಜದವರೆಗಿದ್ದ ಹೆಚ್ಚಿನ ದರವನ್ನು ಕೊಡಬೇಕೆಂದು' ಆಗ್ರಹ ಮಾಡಿದನು. ಅದರಂತೆ ನಾವು ನಮ್ಮ ರೇಲ್ವೆ ಪ್ರಯಾಣವನ್ನು ಕೊಲ್ಹಾಪುರದವರೆಗೆ ಬೆಳಸಲೇ ಬೇಕಾಯಿತು. ನಮ್ಮ ಸಂಗಡವೇ ಪ್ರಯಾಣ ಮಾಡುತ್ತಿದ್ದ ಟಿ. ಡಿ. ನಾಯಕರು ಸಾಂಗ್ಲಿಗೆ ಮೊದಲೇ ಹೋಗಿ ಮಿರಜದಲ್ಲಿ ನಡೆದ ಘಟನೆಯನ್ನು ನಮ್ಮ ಪ್ರೊಫೆಸರರಿಗೆ ತಿಳಿಸಿದ್ದರು. ನಮಗಿಂತ ಮೊದಲೇ ಸಾಂಗ್ಲಿಗೆ ಹೋಗಿದ್ದ ಎನ್ಕೆ ಮತ್ತು ಪ್ರೊಫೆಸರರನ್ನು ಸಾಂಗ್ಲಿಗೆ ಹೋಗಿ ನಾವು ಭೆಟ್ಟಿಯಾದಾಗ ಅವರಿಬ್ಬರೂ ನಮ್ಮ ಹೆಚ್ಚಿನ ಜಾಣತನ ನೋಡಿ ನಕ್ಕರು, ನಾವೂ ನಕ್ಕೆವು.ನಮ್ಮೀರ್ವರ ಕೊಲ್ಹಾಪುರ ಭೆಟ್ಟಿಯಿಂದ ನಾವು ಅಂದಿನ ಕ್ಲಾಸನ್ನು ಕಳೆದುಕೊಂಡಿದ್ದೆವು.

ಎನ್ಕೆ ಅವರು ಕರ್ನಾಟಕ ಕಾಲೇಜದಲ್ಲಿದ್ದಾಗ ಕಾಲೇಜ ಮಿಸಲೆನಿಯ ಕನ್ನಡ ವಿಭಾಗದ ಉಪಸಂಪಾದಕರಾಗಿದ್ದರು. ಆಗ ಅವರು ಬರೆದ 'ಇಲೆಕ್ಶನ್' ಎಂಬ ನಾಟಕವೂ ಪ್ರಕಟವಾಗಿತ್ತು.

## ನವಕರಿ

ನಾವು ಕಲಿಯುವ ಕಾಲದಲ್ಲಿ ನವಕರಿ ಸಿಗುವದು ಕಷ್ಟವಾಗಿತ್ತು. ಎನ್ಕೆ ಅವರಿಗೆ ಕೆ. ಇ. ಜೋರ್ಡ ಹಾಯ್‌ಸ್ಕೂಲಿನಲ್ಲಿ ಮಾಸ್ತರ ಎಂದು ನವಕರಿ ದೊರೆಯಿತು.

ಮುಂದೆ ಅವರು ಬೆಳಗಾವಿಯಲ್ಲಿಯ ಬಿ.ಟಿ. ಕಾಲೇಜಿನಲ್ಲಿ ಬಿ.ಟಿ. ಅಭ್ಯಾಸ ಮಾಡಿದರು.

ಎಸ್ಕೆ ಅವರು ಲಗ್ನವಾಗಿ ಕೆಲವು ವರ್ಷ ಸುಖಮಯವಾದ ದಾಂಪತ್ಯ ಜೀವನ ವನ್ನು ನಡೆಸಿದರು. ನಾನು ನವಕರಿ ಮಾಡುತ್ತಿದ್ದ ಕನ್ನಡ ಸಂಶೋಧನ ಸಂಸ್ಥೆಯಲ್ಲಿಯೆ ಅವರು ಮುಂದೆ ಸಂಶೋಧಕ ಶಿಷ್ಯವೃತ್ತಿ ಪಡೆದು ಮೂರು ವರ್ಷಕ್ಕಿಂತಲೂ ಹೆಚ್ಚು ಅವಧಿಯವರೆಗೆ ಪಿಎಚ್.ಡಿ.ಗೆಂದು ಕುಮಾರವ್ಯಾಸಪ್ರಣೀತ ಕನ್ನಡ ಭಾರತವನ್ನು ಕುರಿತು ಸಂಶೋಧನೆ ಮಾಡಿದರು. ಆದರೆ ಅವರ ಕೌಟುಂಬಿಕ ಜೀವನದಲ್ಲಿ ವಿಪತ್ತು ಗಳು ಒಂದರ ಮೇಲೊಂದರಂತೆ ಬಂದದ್ದರಿಂದ ಅವರು ತಮ್ಮ ಪ್ರಬಂಧವನ್ನು ಪೂರ್ಣಗೊಳಿಸಲಾಗಲಿಲ್ಲ. ಎಸ್ಕೆ ಅವರಿಗೆ ಪ್ರೋತ್ಸಾಹದಾಯಕರೂ ಆಧಾರಸ್ತಂಭರೂ ಆಗಿದ್ದ ಅವರ ಮಾವಂದಿರಾದ ಬುರ್ಲಿ ಅವರು ಮೊದಲು ತೀರಿಕೊಂಡರು. ಅನಂತರ ಸ್ವಲ್ಪ ಅವಧಿಯಲ್ಲಿಯೆ ಅವರ ಹೆಂಡತಿ ಮತ್ತು ಪುತ್ರಿ ಇಹಲೋಕದ ಯಾತ್ರೆಯನ್ನು ಮುಗಿಸಿದರು. ಆಗ ಎಸ್ಕೆ ಅವರು ಧಾರವಾಡದ ವಾತಾವರಣವನ್ನೇ ಬಿಟ್ಟು ಮುಂಬೈಗೆ ಹೋಗಿ ತಮ್ಮ ದುಃಖವನ್ನು ಮರೆಯಲು ಯತ್ನಿಸಿದರು. ಆಗ ಉಂಟಾಗಿದ್ದ ಅವರ ಮಾನಸಿಕ ತಾಕಲಾಟವನ್ನು ಅವರು ಬರೆದ 'ಎರಡನೆಯ ಸಂಬಂಧ' ಎಂಬ ಕಾದಂಬರಿ ಯಲ್ಲಿ ಕಾಣಬಹುದು.

ಮುಂಬೈಯಲ್ಲಿ ಅವರು 'ಲೋಕರಾಜ್ಯ' ಪತ್ರಿಕೆಯ ಕನ್ನಡ ಸಂಪಾದಕರಾಗಿಯೂ ಪಿ.ಇ.ಎಸ್. ಸಂಸ್ಥೆಯಲ್ಲಿ ಕೆಲವು ಸಮಯ ಕಾಲಂ ಲೇಖನ ಮಾಡಿಯೂ ಅಲ್ಲಿಯೇ ಇದ್ದ ಆಲ್ ಇಂಡಿಯಾ ರೇಡಿಯೋದಲ್ಲಿ ಗ್ರಾಮಸ್ಥರಿಗಾಗಿ ಮೀಸಲಾಗಿದ್ದ ಕನ್ನಡ ವಿಭಾಗವನ್ನು ಸೇರಿದರು. ಅನಂತರ ಅವರಿಗೆ ಊರ್ಜಿತ ಸ್ಥಿತಿ ಬಂದೊದಗಿತು. ಅವರು ಮುಂಬೈಯಲ್ಲಿದ್ದಾಗ ಗ್ರಾಮೊಫೋನಿಗಾಗಿ ಅನೇಕ ಹಾಡುಗಳನ್ನು ಬರೆದರು. ಹೊಸ ಧಾಟಿಯ ಹಿಂದೀ ಮತ್ತು ಮರಾಠಿ ಹಾಡುಗಳನ್ನು ಕೇಳಿದ ಕೂಡಲೆ ಅದೇ ಚಾಲಿನಲ್ಲಿ ಕನ್ನಡ ಹಾಡುಗಳನ್ನು ರಚಿಸುವ ಅವರ ಕೌಶಲ ಮೆಚ್ಚತಕ್ಕಂಥದ್ದಾಗಿತ್ತು. ಅದೇ ಕೌಶಲ್ಯವನ್ನು ಅವರು ಈವರೆಗೂ ಬೆಳೆಸಿಕೊಂಡು ಜೀವಂತವಾಗಿಟ್ಟುಕೊಂಡಿದ್ದಾರೆ.

## ಸಾಹಿತಿ

ಈಗ ಎಸ್ಕೆ ಅವರು ಕನ್ನಡದ ಗಣ್ಯ ಸಾಹಿತಿಗಳಲ್ಲಿ ಒಬ್ಬರಾಗಿದ್ದಾರೆ. ಅವರ ಪ್ರತಿಭೆ ಬಹುಮುಖ ರಂಗಗಳಲ್ಲಿ ಹರಿದಿದೆ. ಅವರು ಉತ್ತಮ ಪ್ರಬಂಧಕಾರರು, ಕಾದಂಬರಿಕಾರರು, ನಾಟಕಕಾರರು. ಪಾಂಡಿತ್ಯಪೂರ್ಣವಾಗಿ ರಾಮಾಯಣ ಮತ್ತು ಮಹಾಭಾರತಗಳ ಬಗೆಗೆ ಮಾತನಾಡಬಲ್ಲವರು ಆಗಿದ್ದಾರೆ. ಅವರು ಸುಮಾರು ೫೦ ಗ್ರಂಥಗಳನ್ನು ಬರೆದಿದ್ದಾರೆ. ಅವರಿಂದ ರಚಿತವಾದ ಬಿಡಿ ಲೇಖನಗಳು ವಿವಿಧ ಕನ್ನಡ ಮಾಸಪತ್ರಿಕೆ, ವಾರಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಅವರು ಈವರೆಗೂ ಸಾವಿರಕ್ಕೂ ಮಿಕ್ಕಿ ಕವನಗಳನ್ನು ರಚಿಸಿದ್ದಾರೆ. ಅವರ ಲೇಖನಗಳು ಜೀವನದ ವಾಸ್ತವಿಕ ಚಿತ್ರಣ

ವನ್ನು ಹೊಂದಿರುವವಲ್ಲದೆ ಹಾಸ್ಯಪೂರಿತವೂ ಆಗಿವೆ. ಅವರಿಗೆ ಥಟ್ಟನೆ ಹಾಸ್ಯ ಮಾಡುವ ಪ್ರವೃತ್ತಿಯಿದೆ. ಒಮ್ಮೆ ಒಬ್ಬ ವಿದ್ವಾಂಸರು ತಮ್ಮ ಪಿಎಚ್. ಡಿ. ವಿದ್ಯಾರ್ಥಿಗೆ ತಪ್ಪಿ, ರಾಮದಾಸ ರಾಮಾಯಣ ಎಂದು ಹೇಳಿದರು. ಆ ಮಾತನ್ನು ಕೇಳಿದ ಎನ್ಕೆ ಅವರು ತಕ್ಷಣವೆ ರಾಮದಾಸನ ಚಹಾದಂಗಡಿ ಮಾತ್ರ ನಮಗೆ ಗೊತ್ತು; ರಾಮದಾಸನು ಬರೆದ ರಾಮಾಯಣ ತಮಗೆ ಗೊತ್ತಿಲ್ಲವೆಂದು ನನ್ನೆದುರಿಗೆ ಹೇಳಿದರು. ಇಂಥ ಅನೇಕ ಹಾಸ್ಯದ ಮಾತುಗಳನ್ನು ಅವರ ಮುಖದಿಂದ ನಾನು ಕೇಳಿದ್ದೇನೆ.

ನಾನು ಒಂದೆರಡು ವರ್ಷ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕೆಲಸ ಮಾಡುತ್ತಿದ್ದಾಗ ಎನ್ಕೆ ಅವರೂ ಪರಿಷತ್ತಿನ ಪರವಾಗಿ ಕೆಲಸ ಮಾಡುತ್ತಿದ್ದರು. ಆಗ ಪರಿಷತ್ತು ಅವರಿಗೆ ಕರ್ನಾಟಕದ ಹಿರಿಯ ವಿದ್ವಾಂಸರನ್ನು ಭೆಟ್ಟಿಯಾಗಿ, ಅವರೊಡನೆ ಸಂಭಾಷಣೆ ನಡೆಸಿ, ಅವರ ವಿಚಾರಗಳನ್ನು ಟೇಪರಿಕಾರ್ಡ ಮಾಡಿಕೊಳ್ಳುವ ಕಾರ್ಯ ವನ್ನು ವಹಿಸಿಕೊಟ್ಟಿತ್ತು. ಕೆಲವು ಸಮಯ ಅವರು ಈ ರೀತಿಯ ಕೆಲಸವನ್ನು ಪರಿ ಷತ್ತಿಗಾಗಿ ಮಾಡಿಕೊಟ್ಟಿದ್ದಾರೆ.

ದ. ರಾ. ಬೇಂದ್ರೆ, ವ್ಹಿ. ಕೆ. ಗೋಕಾಕ, ಎಸ್. ಎಸ್. ಮಾಳವಾಡ ಮೊದ ಲಾದವರ ಪ್ರಭಾವಕ್ಕೆ ಒಳಗಾಗಿ ಎನ್ಕೆ ಅವರು ಅರವಿಂದ ತತ್ವಜ್ಞಾನವನ್ನು ಅಭ್ಯಸಿಸಿ ದ್ದಾರೆ. ಅರವಿಂದರ ವಿಚಾರಗಳ ಬಗೆಗೆ ಇತ್ತೀಚೆಗೆ ಅವರು ಒಂದು ಚಿಕ್ಕ ಗ್ರಂಥವನ್ನು ರಚಿಸಿದ್ದಾರೆ.

ಈ ಪ್ರಕಾರವಾಗಿ ಜೀವನದ ವಿವಿಧ ರಂಗಗಳಲ್ಲಿ ವಿಶೇಷ ಸೇವೆ ಸಲ್ಲಿಸಿದ ಎನ್ಕೆ ಅವರ ಮಿತ್ರತ್ವ ಸುದೀರ್ಘ ಕಾಲದವರೆಗೆ ನನಗೆ ದೊರೆತದ್ದು ಸುದೈವವೆಂದು ಭಾವಿಸಿ ದ್ದೇನೆ. ಎನ್ಕೆ ಅವರು ಇಂದಿಗೂ ವ್ಯವಸ್ಥಿತವಾದ ಜೀವನ ನಡೆಸುತ್ತ ಬಂದಿದ್ದಾರೆ.

# ಆರೋಗ್ಯಕರ ಹಾಸ್ಯದ ತತ್ವಜ್ಞಾನಿ

## ಡಾ. ಸರೋಜಿನಿ ಶಿಂತ್ರಿ

ಜೀವನವೆಂದರೆ ಒಂದು ಜಾತ್ರೆ. ಎಷ್ಟೋ ಜನರೊಂದಿಗೆ ಕೂಡುತ್ತೇವೆ, ನಲಿಯುತ್ತೇವೆ, ಮಾತನಾಡುತ್ತೇವೆ, ಅಗಲುತ್ತೇವೆ, ಮರೆಯುತ್ತೇವೆ. ಅರುವಿಗಿಂತ ಮರೆವು ಎನ್ನುವುದು ದೊಡ್ಡದು. ಆದರೆ ಕೆಲವರು ಮಾತ್ರ ಆ ಮರೆವಿನ ಕತ್ತಲೆಯಲ್ಲಿ ಮುಳುಗದೆ ನೆನಪಿನಲ್ಲಿ ತೇಲುತ್ತಿರುತ್ತಾರೆ. ಒಮ್ಮೊಮ್ಮೆ ನನ್ನ ಮನಸ್ಸು ಖಾಲಿಯಿದ್ದಾಗ ಏನೇನನ್ನೋ ಹುಡುಕುತ್ತ ಮೆಲುಕು ಹಾಕುತ್ತ ಕುಳಿತಾಗ, ಸುಳಿಯುತ್ತ ಬರುವ ಕೆಲವೇ ಕೆಲವು ವ್ಯಕ್ತಿಗಳಲ್ಲಿ ಎನ್ಕೆಯವರು ಒಬ್ಬರು. ನಾವು ಅವರೂ ಕೂಡಿ ಕೆಲಸ ಮಾಡಿದವರಲ್ಲ, ಒಡನಾಡಿಗಳೂ ಅಲ್ಲ. ಅವರ ಕಾರ್ಯಕ್ಷೇತ್ರ ಆಕಾಶವಾಣಿಯಾದರೆ ನನ್ನದು ಕರ್ನಾಟಕ ಕಾಲೇಜು ಮತ್ತು ವಿಶ್ವವಿದ್ಯಾಲಯ. ಆದರೆ ಅಕಸ್ಮಾತ್ ದಾರಿಯ ಮೇಲೆ ಆಗೊಮ್ಮೆ ಈಗೊಮ್ಮೆ ಭೆಟ್ಟಿಯಾಗಿ ಮಾತನಾಡಿದಾಗ ಏನೋ ಎಷ್ಟೋ ವರುಷಗಳಿಂದ ಒಬ್ಬರನ್ನೊಬ್ಬರು ಅರಿತಿರುವೆವೇನೋ ಎಂಬ ಆತ್ಮೀಯ ಧಾಟಿಯಲ್ಲಿ ಮಾತನಾಡಿದ್ದುಂಟು. ನಂತರ ಸ್ನೇಹಿತೆಯರೊಂದಿಗೆ, 'ನೋಡು, ಈ ಹೊತ್ತು ಎನ್ಕೆಯವರು ಕಾಲೇಜಿಗೆ ಬರುವಾಗ ಸಿಕ್ಕಿದ್ದರು. ಅವರು ಹೀಗೆ ಅಂದರು' ಎಂದು ನನ್ನ ಅನುಭವವನ್ನು ಹಂಚಿಕೊಂಡದ್ದುಂಟು. ಎನ್ಕೆಯವರ ವ್ಯಕ್ತಿತ್ವದ ಪ್ರಭಾವವೇ ಹೀಗೆ. Familiarity breeds contempt ಎಂಬ ಮಾತು ಇವರ ವಿಷಯದಲ್ಲಿ ಸುಳ್ಳು. ಎಷ್ಟೋ ಜನ ರಿಟಾಯರ್ಡ್ ಆಗುವ ಮೊದಲೇ ಟಾಯರ್ಡ್ ಆಗಿ ಜೊತೆಗಿದ್ದವರನ್ನೂ ಟಾಯರ್ಡ್ ಆಗುವ ಹಾಗೆ ಮಾಡುತ್ತಿರುತ್ತಾರೆ. ಎಪ್ಪತ್ತರ ಪೂರ್ಣ ಜೀವನವನ್ನು ಬಾಳಿದ ಎನ್ಕೆಯವರು ಮುಪ್ಪಿನ ಕಪ್ಪು ಛಾಯೆಯನ್ನು ಬದಿಗಿರಿಸಿ ತಾರುಣ್ಯದ ಬೆಳಕಿನಲ್ಲಿಯೇ ನಿಂತಿದ್ದಾರೆ; ಜೀವಂತಿಕೆಯ ಸ್ವರೂಪರಾಗಿದ್ದಾರೆ. ಲವಲವಿಕೆ, ಹವ್ಯಾಸಗಳಿಗೆ ಕೊರತೆಯಿಲ್ಲ. ಇವರ ಗುಟ್ಟು ಏನಿರಬಹುದು ?—ಎಂದು ನನ್ನನ್ನು ನಾನೇ ಕೇಳಿಕೊಂಡಿದ್ದೇನೆ. ಜೀವನವೇನೂ ಅವರಿಗೆ ಸುಖದ ಸುಪ್ಪತ್ತಿಗೆಯಾಗಿರಲಿಲ್ಲ ಎಂಬುದನ್ನು ನಾನು ಕೇಳಿಬಲ್ಲೆ. ಅಳುವು–ನೋವುಗಳನ್ನು ಸಾಕಷ್ಟು ಅನುಭವಿಸಿದ್ದಾರೆ. ನಡುಹರಯದಲ್ಲಿಯೇ ಹೆಂಡತಿಯನ್ನು ಕಳೆದುಕೊಂಡರು. ಏಕಾಂಗಿಯಾದರು, ಮರುಮದುವೆಯಾಯಿತು. ದುರದೃಷ್ಟದಿಂದ ಆಕೆಯೂ ಅಗಲಿದಳು. ಏಕಾಂಗಿತನ ಇವರನ್ನು

ಬೆನ್ನಟ್ಟಿದ್ದರೂ ಅವರ ಕೈಗೆ ಇವರು ಸಿಕ್ಕದೆ ದೊಡ್ಡ ಬಳಗವನ್ನೇ ಕಟ್ಟಿಕೊಂಡರು. ಇವರು ಸ್ನೇಹ ಜೀವಿಗಳು, Love is boundless as the sea. ಪ್ರೇಮವು ಕೊಟ್ಟಷ್ಟು ಕಡಿಮೆಯಾಗದೆ, ದ್ವಿಗುಣಿತಗೊಳ್ಳುತ್ತ ಹೋಗುತ್ತದೆ. ಆದರೆ ಕೊಡುವ ಮನಸ್ಸು ಬೇಕು, ಕೊಟ್ಟಾಗಲೇ ಅದು ಸಿಕ್ಕುವುದೂ ಉಂಟು. ಈ ಪ್ರೇಮ ಮತ್ತು ಸ್ನೇಹ ಅವರನ್ನು cynical ಆಗಿ ಮಾಡಿಲ್ಲ. ಅವರು ಎಲ್ಲರಿಗೂ ಬೇಕಾದವರು. ಸಂಘ, ಸಂಸ್ಥೆ, ಶಾಲೆ, ಕಾಲೇಜುಗಳಲ್ಲಿ ಸಭೆ ಸಮಾರಂಭಗಳನ್ನು ಏರ್ಪಡಿಸುವವರಿಗೆ ಎಲ್ಲ ರೀತಿಯಲ್ಲಿಯೂ ಇವರು ಬೇಕಾದ ಮುಖ್ಯ ಅತಿಥಿ. ವಯಸ್ಸಾದಂತೆ ಉಳಿದ ಸಾಹಿತಿಗಳಿಗೆ demand ಕಡಿಮೆ ಆಗುತ್ತ ಬಂದರೆ ಇವರಿಗೆ ಮಾತ್ರ ಹೆಚ್ಚುತ್ತಲೇ ಇದೆ. ಸಭಿಕರು ಪಂಡಿತರೇ ಆಗಿರಲಿ, ಪಾಮರರೇ ಆಗಿರಲಿ, ದೊಡ್ಡವರೇ ಆಗಿರಲಿ, ಚಿಕ್ಕವರೇ ಆಗಿರಲಿ, ಎಲ್ಲರನ್ನು ರಂಜಿಸುವ ಕಲೆ ಇವರಿಗೆ ಕರತಲಾಮಲಕವಾಗಿದೆ.

And still they gazed, and still the wonder grew
That one small head could carry all he knew.

ನಾನೂ ಇವರೊಂದಿಗೆ ಭಾಷಣ ಬಿಗಿಯಲು ಹೋದದ್ದುಂಟು, ಬಹು ಸೊಗಸುಗಾರ ಭಾಷಣಕಾರರೆಂಬುದನ್ನು ಕಂಡದ್ದುಂಟು. ಅಷ್ಟೇ ರಂಜನೀಯವಾದ ಲೇಖಕರೂ ಹೌದು. ಇವರು ಕೈಯಾಡಿಸಿದ ಸಾಹಿತ್ಯ ಪ್ರಕಾರಗಳನ್ನು ನೆನಿಸಿಕೊಂಡಾಗ ಯಾರೂ ಅಚ್ಚರಿಪಡಬೇಕು. ಕಾದಂಬರಿಕಾರರೂ ಹೌದು, ಸಣ್ಣ ಕತೆಗಾರರೂ ಹೌದು. ನಾಟಕಗಳಂತೂ ಸರಿಯೇ. ಲಲಿತ ಪ್ರಬಂಧ, ಜೀವನ ಚರಿತ್ರೆ, ಸಾಹಿತ್ಯ, ಇತಿಹಾಸಗಳೂ ಹೊರತಾಗಿಲ್ಲ. ಒಂದಾನೊಂದು ಕಾಲದಲ್ಲಿ ಕವಿತೆಗಳನ್ನು ಬರೆದಿದ್ದಾರೆ. ಇವರ ಶೈಲಿ ಶುದ್ಧ ಸರಳ. ಗಹನವಾದದ್ದನ್ನು ಎಲ್ಲರಿಗೂ ತಿಳಿಯುವಂತೆ ಹೇಳಬಲ್ಲರು. ಸುಲಭವಾಗಿ ತಿಳಿಯುವವರಿಂದ ಇವರಲ್ಲಿ ಗಹನವಾದುದೇ ಇಲ್ಲವೆಂದು ಹೇಳುವ ವಿಮರ್ಶಕ ಮಹಾಶಯರೂ ನಮ್ಮಲ್ಲಿ ಇದ್ದಾರೆ. ತಾವು ಸರಿಯಾಗಿ ತಿಳಿದುಕೊಳ್ಳದೆ, ತಿಳಿಹೇಳಲು ಬಾರದೇ ಇದ್ದವರು ಬುದ್ಧಿಜೀವಿಯೆಂದು ನಾಮಫಲಕವನ್ನು ಹಚ್ಚಿಕೊಂಡು ಮೆರೆದಾಡುವದನ್ನು ನಾವು ನೋಡುತ್ತಿದ್ದೇವೆ. ಎನ್ಕೆಯವರು ಪರಂಪರೆ ಪ್ರಿಯರು. ಇವರಿಗೆ ಗತಿ ಇರುವದು ನಾಟಕಕ್ಷೇತ್ರದಲ್ಲಿ. ರೇಡಿಯೋ ನಾಟಕೋತ್ಸವ ಇವರ ನಾಟಕವಿಲ್ಲದೆ ಪೂರ್ತಿಗೊಳ್ಳಲಾರದು. ಯಾವುದೇ ವಿಷಯಗಳನ್ನು ರೇಡಿಯೋದವರು ಇವರಿಗೆ ಕೊಡಲಿ, ಅವುಗಳಿಗೆ ತಕ್ಕಂತೆ ಇವರ ನಾಟಕಗಳು ಸಿದ್ಧ. ಕುಟುಂಬ ಯೋಜನೆ, ಪಾನ ಪ್ರತಿಬಂಧ, ಹರಿಜನೋದ್ಧಾರ, ಮಹಿಳೆಯರ ಕಲ್ಯಾಣ ಮುಂತಾದ ಅನೇಕ ಸಮಸ್ಯೆಗಳ ಮೇಲೆ ಇವರು ನಾಟಕಗಳನ್ನು ಬರೆದು ಪ್ರಸ್ತುತ ಪಡಿಸಿದ್ದುಂಟು. ಆದರೆ Propaganda ಸಾಹಿತ್ಯದ ಹಾಗೆ ಇವು ಶುಷ್ಕವಾಗಿಲ್ಲ. ೧೯೭೫ರಲ್ಲಿ ನಮ್ಮ ವಿಶ್ವವಿದ್ಯಾಲಯದಲ್ಲಿ ಮಹಿಳಾ ವರ್ಷವನ್ನು ಬೃಹತ್ ಪ್ರಮಾಣದಲ್ಲಿ ಆಚರಿಸಲಾಯಿತು. ಅದರ ಅಂಗವಾಗಿ ಸಾಂಸ್ಕೃತಿಕ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಅವರು ಆಡಿದ ಎನ್ಕೆಯವರ

ನಾಟಕವನ್ನು ನೋಡಿ ಎಲ್ಲರೂ ಕೇಳುವವರೇ, "ಏನ್ರಿ, ಯಾರ ಬರದಾರ್ರೀ ಈ ನಾಟಕಾನ್ನ? ಎಂಥಾ ಚೆಂದ ಇತ್ತು." "ಭಲೋ ನಾಟಕಾ ಅಂದ್ರ ಎನ್ಕೆಯವರ ನಾಟಕಾನ ಇರಬೇಕು" ಎಂಬ ಮಾತನ್ನು ಅವರು ಉಳಿಸಿಕೊಂಡು ಬಂದಿದ್ದಾರೆ.ನಾಟಕಗಳ ಸಂವಾದದಲ್ಲಿ ಕಂಡುಬರುವ ಸೊಗಸನ್ನು ಅವರ ಮಾತುಗಾರಿಕೆಯಲ್ಲಿಯೂ ಕಾಣುತ್ತೇವೆ. ಯಾರ ಮನಸ್ಸನ್ನೂ ನೋಯಿಸದೆ, ಸತ್ಯವು ಎಷ್ಟು ಅಪ್ರಿಯವಾದರೂ, ಪ್ರಿಯವಾಗುವಂತೆ ಹೇಳುವುದು ಇವರ ವೈಶಿಷ್ಟ್ಯ. ಅದಕ್ಕೆ ಕಾರಣ ಅವರ ಹಾಸ್ಯ ಪ್ರಜ್ಞೆ. ಕನ್ನಡ ಸಾಹಿತ್ಯದಲ್ಲಿ ಹಾಸ್ಯ ಲೇಖಕರ ಸಂಖ್ಯೆ ಕಡಿಮೆ. ಇತ್ತಿತ್ತಲಾಗಿ ಕೆಲವರು ತಲೆ ಎತ್ತಿದ್ದಾರೆ. ಆದರೆ ಅವರು ಮೂಗು ಮೇಲೆ ಮಾಡಿ ಜೋಕು ಹೊಡೆದರೆ ಎದುರು ಕುಳಿತ ಸುಸಂಸ್ಕೃತರು ತಲೆ ಕೆಳಗೆ ಹಾಕಬೇಕು. ಆದರೆ ಎನ್ಕೆಯವರ ಹಾಸ್ಯ ಆರೋಗ್ಯದಾಯಕವಾದದ್ದು. ಉಪ್ಪಿನ ಕಾಯಿಯಂತೆ ರುಚಿ. ಬಾಡಿಸಿಕೊಂಡಂತೆ ಬಾಯಿ ಚಪ್ಪರಿಸಬೇಕೆನ್ನಿಸುತ್ತದೆ. ಇವರ ಚುಟಾಕಿಗಳಿಂದ ಒಮ್ಮೊಮ್ಮೆ ನಗು ಹೊನಲಾಗಿ ಹರಿಯಬಹುದು. ಮತ್ತೊಮ್ಮೆ ಬರೀ ತುಟಿಯ ಮೇಲೆ ಲಾಸ್ಯವಾಡಿ ಮಾಯವಾಗಬಹುದು. ನಗು ನಗುತ್ತಲೇ ಮತ್ತು ನಗಿಸುತ್ತಲೇ ತನ್ನ ಸುತ್ತಲೂ ಆಕರ್ಷಣೆಯ ಸುಮಧುರ ಹಂದರವನ್ನೇ ಹೆಣೆದು ಆಹ್ಲಾದಕಾರಕ ತಂಪನ್ನು ಒದಗಿಸುವ ಈ ತತ್ವಜ್ಞಾನಿಯ ವ್ಯಕ್ತಿತ್ವವನ್ನು ಬಹುವಾಗಿ ಮೆಚ್ಚಿಕೊಂಡಿದ್ದೇನೆ.

# ಬಾನುಲಿ ಮಿತ್ರ

## ಎನ್. ಎಸ್. ವಾಮನ್

'ಬಾನುಲಿಯ ಮಿತ್ರ ಎನ್ಕೆ' ಎಂಬ ವಿಷಯವಾಗಿ ಒಂದು ಲೇಖನವನ್ನು ಬರೆದು ಕಳುಹಿಸಬೇಕೆಂದು ಕೇಳಿ ಮಾನ್ಯ ಸ್ನೇಹಿತರಾದ ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಬರೆದ ಪತ್ರ ನನ್ನ ಕೈಸೇರಿ, ನನಗಾದ ಆನಂದವನ್ನು ವರ್ಣಿಸಲು ಸಾಧ್ಯವೇ ಇಲ್ಲ. ಎನ್ಕೆ ಯವರನ್ನು ನನ್ನ ಮಿತ್ರ ಎಂದು ಹೇಳಿಕೊಳ್ಳುವುದಕ್ಕಿಂತ, ಅವರು ಆಕಾಶವಾಣಿಯಲ್ಲಿ ನನ್ನ ಒಬ್ಬ ಆತ್ಮೀಯ ಅಧಿಕಾರಿ ಎಂದು ವರ್ಣಿಸುವುದು ಸಮಂಜಸವಾದೀತು. ಯಾಕಂದರೆ, ಅವರು ನನಗಿಂತ ವಯಸ್ಸಿನಲ್ಲಿ ಹಿರಿಯರು. ಜ್ಞಾನದಲ್ಲಿ ಅತಿಹಿರಿಯರು. ಅವರು ಬಾನುಲಿ ಕೇಂದ್ರದಲ್ಲಿ ಅಧಿಕಾರಿಯಾಗಿದ್ದರೂ- ಅದರ ದರ್ಪ ತೋರಿಸದೇ ಎಲ್ಲರೊಡನೆಯೂ ಬಹುಸೌಜನ್ಯದಿಂದ ವರ್ತಿಸುತ್ತಿದ್ದರು. ಅವರೊಡನೆ ಕೆಲವು ವರ್ಷ ಗಳ ಕಾಲ ಬಾನುಲಿ ಕೇಂದ್ರದಲ್ಲಿ ಕೆಲಸ ಮಾಡುವ ಸೌಭಾಗ್ಯ ನನ್ನದಾಗಿತ್ತು. ಎಲ್ಲರನ್ನೂ ಬಹು ಗೌರವದಿಂದ ಕಾಣುತ್ತಿದ್ದರು. ಎಂತಹ ಸಮಸ್ಯೆಯನ್ನಾಗಲಿ ಅವರ ಮುಂದಿಟ್ಟರೆ ಕ್ಷಣಾರ್ಧದಲ್ಲಿ, ಬಹು ಸಮರ್ಪಕ ರೀತಿಯಲ್ಲಿ ಬಗೆಹರಿಸುವ ಚಾಕಚಕ್ಯತೆ ಅವರಲ್ಲಿತ್ತು. ನಗುನಗುತ್ತಾ ಕೆಲಸ ನಿರ್ವಹಿಸುತ್ತಿದ್ದರು. ಅವರೊಡನೆ ನಾನು ಕಳೆದ ಕ್ಷಣಗಳು ಅವಿಸ್ಮರಣೀಯ.

ಯಾವ ವಿಷಯದ ಬಗ್ಗೆಯಾಗಲಿ, ಪ್ರಭುತ್ವದಿಂದ ಮಾತನಾಡಬಲ್ಲ ಈ ವಾಗ್ಮಿ ಯೊಡನೆ, ಹಲವಾರು ಸಭೆಗಳಿಗೆ ಹೋದದ್ದುಂಟು. ಪ್ರೇಕ್ಷಕ ಮನವನ್ನಾಕರ್ಷಿಸಿ, ನಿರರ್ಗಳವಾಗಿ ಅವರು ಮಾಡಿದ ಸತ್ವಪೂರ್ಣ ಭಾಷಣಗಳನ್ನೂ, ಮಧ್ಯೆಮಧ್ಯೆ ಹಾರಿ ಸುತ್ತಿದ್ದ ಸ್ವಾರಸ್ಯಕರವಾದ ಚಟಾಕಿಗಳನ್ನೂ ಆಲಿಸಿ, ಅನೇಕ ಬಾರಿ ನಾನು ಮಂತ್ರ ಮುಗ್ಧನಾಗಿದ್ದೇನೆ.

ಪ್ರಸಾರ ಕ್ಷೇತ್ರದಲ್ಲಂತೂ ಅವರು ಅಮೋಘ ಸೇವೆ ಸಲ್ಲಿಸಿದ್ದಾರೆ. ಈ ಮಾಧ್ಯ ಮಕ್ಕೆ ಅನುಗುಣವಾಗಿ, ಅತಿ ಪ್ರಶಂಶನೀಯ ರೀತಿಯಲ್ಲಿ ಭಾಷಣವನ್ನಾಗಲೀ, ನಾಟಕ ವನ್ನಾಗಲೀ, ಗೀತೆಗಳನ್ನಾಗಲಿ ರಚಿಸುವ ಕಲೆ ಇವರಿಗೆ ಕರಗತವಾಗಿತ್ತು. 'ಕಸಿಹೃದಯ ಕಣ್ತೆರೆದಿತ್ತು' ಎಂಬ ಅವರ ರಾಷ್ಟ್ರೀಯ ನಾಟಕ, ಅವರಿಗೆ ಅಪಾರ ಕೀರ್ತಿಯನ್ನೂ ತಂದು ಕೊಟ್ಟಿತು. ಇವರ ಈ ಕೃತಿಗೆ ಶ್ರೀಮತಿ ಯಮುನಾ ಮೂರ್ತಿಯವರ

ನಿರ್ದೇಶನ ಚಿನ್ನದ ಕಲಶವನ್ನಿಟ್ಟಿತು. ಆ ನಾಟಕದ ಸಂಭಾಷಣೆಗಳನ್ನು ನಾನು ಈಗಲೂ ಮೆಲುಕು ಹಾಕುತ್ತಿರುತ್ತೇನೆ. ಅಷ್ಟು ಸೊಗಸಾಗಿವೆ ಅವು. ಪದ್ಮವಿಭೂಷಣ ಡಾಕ್ಟರ್ ರಾಜಕುಮಾರರ ಮನವೊಲಿಸಿ, ಎನ್ಕೆ ಅವರ ಕೈಯಲ್ಲಿ ಗದುಗಿನ ನಾರಣಪ್ಪನನ್ನು ಕುರಿತ ನಾಟಕ ಬರೆಸಿ, ಅವರಲ್ಲಿ ಡಾ. ರಾಜಕುಮಾರ್ ಅವರ ಕೈಲಿ ಮುಖ್ಯ ಪಾತ್ರ ಮಾಡಿಸುವ ಪ್ರಯತ್ನ ನಡೆಸಿದೆ. ಅವರೂ ಸಹ ಬಹು ಸಂತೋಷದಿಂದ ಒಪ್ಪಿಕೊಂಡಿದ್ದರು. ಆದರೆ, ನನ್ನ ದುರದೃಷ್ಟದಿಂದ, ಅವರು 'ಗಂಧದ ಗುಡಿ' ಎಂಬ ಚಿತ್ರದಲ್ಲಿ ನಿರತರಾಗಿದ್ದು, ಸಮಯ ಸಿಗದೆ, ತಮ್ಮ ದುಃಖವನ್ನು ವ್ಯಕ್ತಪಡಿಸಿ, ನನಗೆ ಪತ್ರ ಬರೆದಾಗ, ನನಗಾದ ನಿರಾಸೆ ಅಷ್ಟಿಷ್ಟಲ್ಲ, ಬಾನುಲಿ ನಾಟಕೋತ್ಸವದ ಸಲುವಾಗಿ ರಚಿಸಲ್ಪಟ್ಟ, ಎನ್ಕೆ ವಿರಚಿತ 'ಕವಿ ಚಿರಂಜೀವಿ' ಎಂಬ ಈ ನಾಟಕದಲ್ಲಿ ನಾನೇ ನಾರಣಪ್ಪನ ಪಾತ್ರವನ್ನೂ ವಹಿಸಿ, ಆ ನಾಟಕವನ್ನು ನಿರ್ದೇಶಿಸುವ ಸದವಕಾಶ ಒದಗಿ ಬಂದರೂ, ಡಾ. ರಾಜಕುಮಾರ್ ಅವರು ಆ ಪಾತ್ರ ಮಾಡಿದ್ದರೆ, ನನ್ನ ಸಂತೋಷಕ್ಕೆ ಪಾರವೇ ಇರುತ್ತಿರಲಿಲ್ಲ. ಬಹು ಸೊಗಸಾಗಿ ಹೆಣೆದಿದ್ದರು ಎನ್ಕೆ ಈ ನಾಟಕವನ್ನು. ಇದು ಗಳಿಸಿದ ಕೀರ್ತಿ ಪ್ರಶಂಸೆಗಳು ಅವರಿಗೇ ಸೇರಬೇಕು.

ಆದರೆ ಇವೆಲ್ಲಕ್ಕಿಂತ ಹೆಚ್ಚಾಗಿ ನನ್ನ ಮೆಚ್ಚುಗೆಗೆ ಪಾತ್ರವಾದ ಇವರ ಕೃತಿಯೆಂದರೆ, ಇವರು ಹಲವಾರು ವರ್ಷಗಳ ಕಾಲ ಪ್ರಸ್ತುತ ಪಡಿಸಿದ 'ಗೃಹಗೋಷ್ಠಿ' ಎಂಬ ಕಾರ್ಯಕ್ರಮ. ಇದರಲ್ಲಿ ಇವರು, ಕುಮಾರಿ ಪ್ರಭಾ ಸಿರೂರ್ ಮತ್ತು ರೇಡಿಯೋ ಕಾಕಾ ಎಂದು ಹೆಸರು ಪಡೆದ ಜಿ. ವಿ. ಹಿರೇಮಠ್ ಇವರ ಸಹಕಾರದೊಡನೆ 'ನಾನಿಕಾಕಾ' ಎಂಬ ಹೆಸರಿನಲ್ಲಿ ರಚಿಸಿ ಚಿತ್ರಿಸುತ್ತಿದ್ದ ಈ 'ಗೃಹಗೋಷ್ಠಿ'ಯನ್ನು ಕೇಳಲು, ಅಸಂಖ್ಯ ಶ್ರೋತೃಗಳು ಹಾತೊರೆಯುತ್ತಿದ್ದರು. ಬಹು ಸ್ವಾರಸ್ಯಕರವಾದ ಈ ಕಾರ್ಯಕ್ರಮವನ್ನು ಕೇಳಲು ಪ್ರತಿವಾರವೂ ಚಡಪಡಿಸುತ್ತಿದ್ದವರಲ್ಲಿ ನಾನೂ ಒಬ್ಬ. ಒಂದು ದಿನವೂ ನಾನು ಅದನ್ನು ತಪ್ಪಿಸಿಕೊಂಡಿಲ್ಲ. ಹದಿನೈದು ನಿಮಿಷ ನಮಗರಿವಿಲ್ಲದಂತೆ ಹಾರಿ ಹೋಗುತ್ತಿತ್ತು. ಅಂತಹ ಆಕರ್ಷಣೆ ಈ 'ಗೃಹಗೋಷ್ಠಿ'ಯಲ್ಲಿತ್ತು. ಇವರ ಭಾವಗೀತೆಗಳಂತೂ ಅನೇಕ ಬಾನುಲಿ ಕೇಂದ್ರಗಳಿಂದ ಪ್ರಸಾರವಾಗುತ್ತಲೇ ಇವೆ. ಕಾದಂಬರಿ, ವಿಮರ್ಶೆ, ಜೀವನ ಚಿತ್ರ ಮುಂತಾದ ವಿವಿಧ ಕ್ಷೇತ್ರಗಳಲ್ಲಿ ಸಾಹಿತ್ಯದ ಕೃಷಿ ಮಾಡಿರುವ, ಈಗಲೂ, ಸರ್ಕಾರಿ ಸೇವೆಯಿಂದ ನಿವೃತ್ತರಾದ ಮೇಲೂ, ಸದ ಕೈಕಟ್ಟಿ ಕೂರದೇ, ಹುರುಪಿನಿಂದ ಸಾಹಿತ್ಯ ನಿರ್ಮಾಣ ಮಾಡುತ್ತಿರುವ ಬಹುಮುಖ ವ್ಯಕ್ತಿ ಎನ್ಕೆ.

# ಖರೇ ದೋಸ್ತಿಗೆ ಇನ್ನೊಂದು ಹೆಸರು

**ಅನಿಲ ಚಿಟಗೇರಿ**

ಖರೇ ದೋಸ್ತಿಗೆ ಇನ್ನೊಂದು ಹೆಸರೇ ಎನ್ಕೆ. ಆಯ್ ಮೀನ್ ನಾನೀಕಾಕಾ. ನನ್ನ ಅವರ ದೋಸ್ತಿಯಲ್ಲಿ ಇದು ನನ್ನ ಅನುಭವ.

ಬೌದ್ಧಿಕವಾಗಿ ಅವರು ಆಕಾಶ. ನಾನು ನೆಲ. ಆದರೆ ಈ 'ಸಾದಾತನ ಪ್ರಿಯ' ವ್ಯಕ್ತಿಗೆ ಹಿರಿಯ–ಕಿರಿಯ ಎಂಬ ಭೇದಭಾವ ದೋಸ್ತಿ ವಿಷಯದಲ್ಲಿ ಮಾತ್ರ ಇಲ್ಲವೇ ಇಲ್ಲ. ಮತ್ತೊಬ್ಬರಲ್ಲಿ ಸ್ವಲ್ಪಾದರೂ ಪ್ರತಿಭೆ ಕಂಡರೆ ಸಾಕು ಸ್ನೇಹಹಸ್ತ ಚಾಚುವ ಮುಗ್ಧ ಸ್ವಭಾವ. ಮುಕ್ತ ಕಂಠದಿಂದ ಪ್ರಶಂಸೆ. ತಪ್ಪು ಒಪ್ಪುಗಳ ವಿಮರ್ಶೆ.

ಹೀಗಾಗಿ ನಮ್ಮ ದೋಸ್ತಿ–ಪ್ರಸಂಗಗಳಲ್ಲಿ ಎಷ್ಟೋ ಬಾರಿ ಈ ನಾನೀಕಾಕಾ ಇವರೋ ಅಥವಾ "ನಾನಽ ಈಽಽ ಕಾಕಾನೋ" ಎಂಬುವಷ್ಟು ಕನ್‌ಫ್ಯೂಜ್ ಮಾಡಿಕೊಂಡದ್ದೂ ಉಂಟು.

ಎನ್ಕೆ ಅವರನ್ನು ನಾನು ಕಾಣುವ ಮುಂಚೆ ಅವರೇ ನನ್ನನ್ನು ಕಂಡು ಪ್ರೋತ್ಸಾಹಿಸಿ ಆಶೀರ್ವದಿಸಿದ್ದಾರೆ. ಅವರ ಸರಳತನಕ್ಕೆ ಸಾಕ್ಷಿ ಇದು. ಇಂಥ ಅಪರೂಪದ ವ್ಯಕ್ತಿಯ ಪ್ರೋತ್ಸಾಹ ಆರಂಭದ ನನ್ನ ಸಾಹಿತ್ಯ ಕಲೆಗೆ ಸಿಕ್ಕಿದ್ದು ನನ್ನ ಸೌಭಾಗ್ಯ.

ನಿರುದ್ಯೋಗಿಯಾಗಿ ಅಲೆದಾಡುತ್ತಿದ್ದ ಅಂದಿನ ದಿನಗಳಲ್ಲಿ ಬಂಡೆಗಲ್ಲಿನಂತಿದ್ದ ನನ್ನನ್ನು ಆಕಾಶವಾಣಿಯ ನಾಟಕ ವಿಭಾಗದ ಮುಖ್ಯಸ್ಥೆ ಯಮುನಾಮೂರ್ತಿ ಅವರು ತಿದ್ದಿದ್ದಾರೆ, ಎನ್ಕೆ ಪ್ರೋತ್ಸಾಹದ ಚಾಲನೆ ನೀಡಿದ್ದಾರೆ.

ಆರಂಭದಲ್ಲಿ ನಾನು ಬರೆದ 'ನಾನು–ರಾಮ–ರಾವಣ' ಬಾನುಲಿ ನಾಟಕ ಕೇಳಿ ಸಂತೋಷಗೊಂಡಿದ್ದ ಎನ್ಕೆ ಅವರು ರಸ್ತೆಯಲ್ಲೇ ಬಿಗಿದಪ್ಪಿ ಶಹಬ್ಬಾಸ್‌ಗಿರಿ ಕೊಟ್ಟ ಚಿತ್ರ ಇಂದಿಗೂ ಕಣ್ಣೆದುರು ಕಟ್ಟಿದೆ.

ತಮ್ಮ ಉಕ್ಕಿ ಹರಿವ ಸಂತೋಷಕ್ಕೆ ಸಾಂಕೇತಿಕವಾಗಿ ಹತ್ತಿರದಲ್ಲಿದ್ದ ನನ್ನ ಬಂಧುಗಳ ಮನೆಗೆ ನನ್ನೊಡನೇ ಬಂದು ಮೆಚ್ಚುಗೆಯ ಲೇಖಿ–ಸರ್ಟಿಫಿಕೇಟ ನೀಡಿದ್ದರು.

ಅಂದಿನ ಅವರ ಸರ್ಟಿಫಿಕೇಟು ಇಂದಿಗೂ ಆಶೀರ್ವಾದ ರೂಪದಲ್ಲಿ ನನ್ನ ಫೈಲುಗಳಲ್ಲಿ ಶೋಭಿಸುತ್ತಿದೆ.

ಇಂತಹ ಅಪರೂಪದ ಲೇಖಕರು ಎಷ್ಟು ಜನ ಇದ್ದಾರೆ? ಇದೊಂದು ಪ್ರಸಂಗ ನೆನಪಾದಾಗ ಕನಸೋ ನನಸೋ ಎಂದುಕೊಳ್ಳುವಂತಾಗುತ್ತದೆ. ಗಾಂಧೀ ಚೌಕಿನ ಜನ

ಭರಿತ ರಸ್ತೆಯಲ್ಲಿ ಎಸ್ಕೆ ಭೆಟ್ಟಿ ಆದರು. ನಾನು ನೋಡಿರಲಿಲ್ಲ. ಅವರೇ ನೋಡಿ ಕೂಗಿ ನಿಲ್ಲಿಸಿ,

"ಇತ್ತಿತ್ತಲಾಗಿ ನೀ 'ಮನೆ ಮನೆಗಳಲ್ಲಿ' ಭಾಳ ಛಂದ ಬರೀಲೀಕತ್ತೀದಿ, ಖರೇ ಹೇಳಬೇಕಂದ್ರ ಈ ಸರ್ತಿ ನನಗಿಂತಾ ಛಂದ ಬರ್ದೀದಿss" ಎಂದು ಅಚ್ಚ ಧಾರವಾಡೀ ಭಾಷೆಯಲ್ಲಿ ನುಡಿದು ಆ್ಯಜ್ ಯೂಜವಲ್ ಬೆನ್ನಿಗೆ ಶಹಬ್ಬಾಸಗಿರಿ ಕೊಟ್ಟಿದ್ದರು.

ಎಸ್ಕೆ ನನ್ನ ಪಾಲಿಗೆ ಪ್ರೋತ್ಸಾಹದ ಪೆಟ್ರೋಲ್ ತುಂಬಿ ಪ್ರತಿಭಾವಂತರನ್ನು ಮುಂದೆ ನೂಕುವ ಕಾಕಾ. ಇನ್ನೊಬ್ಬರ ನಗು ಕಂಡು ತಾವೂ ಆನಂದಿಸುವ ಅಪರೂಪದ ಚಾಚಾ.

ಇತ್ತೀಚೆಗೆ ನನಗೆ ವಿಜಾಪುರಕ್ಕೆ ವರ್ಗವಾದ ಸಂದರ್ಭವಲ್ಲಿ ಒಂದುಸಲ ನಸುಕಿನಲ್ಲಿ ನಮ್ಮ ಮನೆಯ ಮುಂದೆ ವಾಕಿಂಗ್ ಹೋಗುತ್ತಿದ್ದರು. ಮನೆಯ ಮುಂದೆ ಥಳಿ ಹಾಕುತ್ತಿದ್ದ ನಮ್ಮ ಅವ್ವನನ್ನು ಕಂಡು,

"ನಮ್ಮ ಅನಿಲ ಧಾರವಾಡ ಬಿಟ್ಟಾನs ಬಿಟ್ಟಾನss ಉಪ್ಪ ಇಲ್ದ ಊಟ ಆದಂಗ ಆಗೇದ ನೋಡ್ರಿ" ಎಂದು ತಮ್ಮ ವಿರಹ ವ್ಯಕ್ತ ಮಾಡಿದರಂತೆ.

ಎಸ್ಕೆ ಸಾಹಿತ್ಯ ವಿಮರ್ಶಿಸುವ ಶಕ್ತಿ ನನ್ನದಲ್ಲ. ಎಸ್ಕೆ ಅವರ ಸವಿ ಸಂಪರ್ಕ ಹೊಂದಿದ್ದಕ್ಕೆ ಅವರ ಬಗ್ಗೆ ನೇರವಾಗಿ ಹೇಳಬಹುದಾದ ಅಧಿಕಾರ ಮಾತ್ರ ಇದೆಯೆಂದು ನನ್ನ ವಿಶ್ವಾಸ.

ಎಸ್ಕೆ ಅವರ ನಗೆ–ನಡೆ–ನುಡಿ ನಾಡಿಗೇಕೆ, ಕಾಡಿಗೂ ಪ್ರಿಯ. ಎಸ್ಕೆ ನಮ್ಮ ನಾಡಿನ ಒಂದು ಸುಂದರ ಪುಷ್ಪ. ನೀರವ ಶಬ್ದಗಳಲ್ಲಿ ಆಕರ್ಷಣೆಯ ಪರಿಮಳ ಸೂಸು ವದೇ ಈ ಪುಷ್ಪದ ಗಮ್ಮತ್ತು.

ದೂರದ ವಿಜಾಪುರದಲ್ಲಿ ಕುಳಿತು ಈ ಲೇಖ ಬರೆಯುತ್ತಿದ್ದಂತೇ ಎಸ್ಕೆ ನನ್ನ ನೆನಪಿನಂಗಳದಲ್ಲಿ ಕಾಲಿಡುತ್ತಿದ್ದಾರೆ. ಹೃದಯ ತುಂಬಿ ಕೈ ಓಡುತ್ತಿಲ್ಲ. ಈಗ ನನ್ನ ಅನಿಸಿಕೆ ಇಷ್ಟೇ: ಎಸ್ಕೆ ಅವರ ಸಂಪರ್ಕ ಮಾತ್ರವಲ್ಲ, ಅವರ ನೆನಪೂ ಸುಂದರ.

# ಜ್ಯೋತಿಷಿಯ ದೃಷ್ಟಿಯಲ್ಲಿ ಎನ್ಕೆ

ಎಚ್. ಜಿ. ಜೋಶಿ



ಜನನ ತಾರೀಖು ೨೯/೨೮–೮–೧೯೧೩.

ಕೊಟ್ಟ ವೇಳೆ– ೪.೩೦ ನಸುಕಿನಲ್ಲಿ

ಸರಿಪಡಿಸಿದ ವೇಳೆ– ೪.೦೪ ನಸುಕಿನಲ್ಲಿ

ವಾರ– ಗುರುವಾರ ಮಧ್ಯರಾತ್ರಿಯನಂತರ ಜನನ.

ಸಾಯನ ಲಗ್ನ ಕುಂಡಲಿ

೪೦

| | | | | |
|---|---|---|---|---|
| ೭ | ೬<br>ಕೇತು ರವಿ<br>೨೫.೦ ೫.೦ | ೫<br>ಬುಧ<br>೧೮.೧೫ | ೪<br>ನೇ ಚಂದ್ರ<br>೨೭.೧೦ ೨೩.೨೦<br>ಶುಕ್ರ<br>೨೬.೦ | |
| ೯ | ೮ | ೨ | ೩<br>ಮಂ ಶನಿ<br>೧೯.೪೦ ೧೭.೧೨ | ೪೦ |
| ೧೦<br>R<br>ಗುರು<br>೮.೪ | ೧೧<br>R<br>೪.೨೫ | ೧೨<br>ರಾಹು<br>೨೫.೦ | ೧ | |

| ಶುಭ ಯೋಗಗಳು | ಅಶುಭ ಯೋಗಗಳು |
|---|---|
| ರವಿ △ ಗುರು | ಮಂ ☌ ಶನಿ |
| ರವಿ △ M.C. | ರವಿ ⚼ ಹರ್ಶಲ್ |
| ಶನಿ ⚹ ಬುಧ | ಹ □ M.C. |
| ಮಂ ⚹ ಬುಧ | |
| ಚಂದ್ರ ☌ ಶುಕ್ರ | |
| ಚಂದ್ರ ☌ ನೇಪ | |
| ಶುಕ್ರ ☌ ನೇಪ. | |

ಜಾತರು ಬಾದಶಾಹಿರಾಶಿಯೆನಿಸಿದ ಸಿಂಹದಲ್ಲಿ ಜನಿಸಿರುವರು. (ನಿರಯನ ಕರ್ಕ ಲಗ್ನವು; ಸಾಯನ ಸಿಂಹ ಲಗ್ನವು.)

ಸಿಂಹ ಲಗ್ನದಲ್ಲಿ ಜನಿಸಿರುವವರು ವಿಶ್ವಾಸಿ ಇರುವರು. ಸರಳತನವಿರುವದು. ಯಾಜಮಾನ್ಯರಿರುವರು. ಎಲ್ಲವನ್ನೂ ಬಿಚ್ಚಿಡುವದಿಲ್ಲ. ಕವಿತ್ವ, ನಾಟಕಗಳ ಪ್ರೇಮವಿರುವದು. ಸೂರ್ಯಪ್ರಕಾಶದ ಪ್ರೇಮ, ತೇಜಸ್ವಿ ಪದಾರ್ಥಗಳ ರುಚಿ ಇರುವದು. ಕಲಾಭಿಜ್ಞರು, ಸೌಂದರ್ಯಾರಾಧಕರೂ ಆಗಿರುವರು. ಚಿಕಿತ್ಸಕ ಬುದ್ಧಿಯಿರುವದು. ಸ್ವಭಾವದಲ್ಲಿ ಕೆಲಮಟ್ಟಿಗೆ ಭೋಳೆತನವಿರುವದು. ಪಿನ್ಸೆಯವರಲ್ಲಿ ಈ ಎಲ್ಲ ಗುಣಗಳಿರುವುದು ಅವರೊಡನೆ ಸಂಪರ್ಕ ಬಂದ ಎಲ್ಲರ ಅನುಭವವಾಗಿದೆ.

'ಪಿತೃಪ್ರತಾಪಾರೋಗ್ಯ ಮನಃ ಶುಚಿಃ ರುಚಿಃ ಜ್ಞಾನೋದಯ ಕಾರಕಃ ಸೂರ್ಯಃ'

ಲಗ್ನಾಧಿಪತಿ ರವಿಯು ಜಾತಕ ಕುಂಡಲಿಯಲ್ಲಿ ಬಲಿಷ್ಠನಿದ್ದಾನೆ. ವಿಶೇಷತಃ ಆತನು ಗುರುವಿನೊಡನೆ ಶುಭಯೋಗವನ್ನು ಮಾಡುತ್ತಿರುವುದು ಗಮನಾರ್ಹ. ಅದು ಜಾತರಿಗೆ ಸರ್ವವಿಧದ ಬಲವನ್ನು ತಂದಿದೆ.

ಜಾತರು ದೀರ್ಘಾಯುಷಿಗಳೆಂಬುದರಲ್ಲಿ ಸಂದೇಹವಿರದು. ರವಿ ದಶಮಾಂಶದೊಡನೆ ಶುಭಯೋಗ ಮಾಡುತ್ತಿರುವುದು ದೀರ್ಘಾಯುಷ್ಯಕ್ಕೆ ಮತ್ತೊಂದು ಸಹಕಾರಿ ಯೋಗವು. ಜಾತರು ಸಹಸ್ರಪೂರ್ಣ ಚಂದ್ರದರ್ಶನ ಮಹೋತ್ಸವವನ್ನು ಕಾಣುವ ಸಾಧ್ಯತೆಯಿದೆ. ಜಾತರ ೮೦ನೆಯ ವರ್ಷ ರವಿ–ಮಂಗಳ ಶುಭಯೋಗವಾಗಿದೆ. ಮಂಗಳನು ಚತುರ್ಥ, ನವಮಗಳ ಅಧಿಪತಿ. ಮೂಲ ಕುಂಡಲಿಯಲ್ಲಿ ಮಂಗಳನು ದೂಷಿತನಿರುವದರಿಂದ ಆ ವರ್ಷವಾಗುವ ಶುಭಯೋಗದ ಫಲವು ಹೆಚ್ಚಿನ ಪ್ರಮಾಣದಲ್ಲಿ ದೊರಕದಿದ್ದರೂ ಕೆಲಮಟ್ಟಿಗಾದರೂ ಅದರ ಶುಭ ಫಲವು ದೊರಕದೆ ಇರಲಾರದು.

ರವಿ ಗುರು ಶುಭಯೋಗವು ಜಾತರಿಗೆ ಮಾನಗೌರವ ಸನ್ಮಾನಗಳನ್ನು ಜೀವನದಲ್ಲಿ ತಂದುಕೊಟ್ಟಿದೆ. ಗುರುಷಷ್ಟದಲ್ಲಿ ಇದ್ದುದರಿಂದ ಜಾತರ ನೌಕರಿಯ ಜೀವನವು ಮಾಸ್ತರಿಕೆಯಿಂದ ಪ್ರಾರಂಭವಾಯಿತು. ದಶಮಾಧಿಪತಿ ಶುಕ್ರನು ಚಂದ್ರನ ಶುಭ ಯೋಗದಲ್ಲಿ ಇದ್ದುದರಿಂದ ಜಾತರು ರೇಡಿಯೋ ಕೇಂದ್ರದತ್ತ ನಡೆದರು. ಶುಕ್ರ

ಚಂದ್ರರ ಶುಭಯೋಗವು ಸಾಹಿತ್ಯ ಸಂಗೀತಗಳಲ್ಲಿ ಅಭಿರುಚಿಯನ್ನು ಹುಟ್ಟಿಸಿವೆ. ನಾಟಕಗಳ ನಿರ್ಮಾಣಕ್ಕೂ ಈ ಯೋಗವೇ ಮುಖ್ಯ ಕಾರಣ. ಶುಕ್ರನು ತೃತೀಯಾಧಿಪತಿಯಾಗಿರುವುದು ನಾಟಕ ರಚನೆಗೆ ಪೋಷಕ. ನಯವಿನಯ ಸಂಪನ್ನತೆಗಳನ್ನು ತಂದು ಕೊಟ್ಟವುದ್ದೂ ಶುಕ್ರ–ಚಂದ್ರ ಯುತಿಯೇ! ಎನ್ಕೆಯವರು ತುಂಬ ರಸಿಕರು. ಆ ರಾಸಿಕ್ಯಕ್ಕೆ ಚಂದ್ರ–ಶುಕ್ರಯುತಿ ಕಾರಣ.

ಶುಕ್ರನು ಶೃಂಗಾರರಸ ಪೋಷಕ ಭಕ್ತಿ ಭಾವನೆಯ ಉದ್ದೀಪಕ ಕಾವ್ಯ, ನಾಟಕ, ಕಾದಂಬರಿಗಳ ಸೃಷ್ಟಿಯಾಗಬೇಕಾದರೆ ಶುಕ್ರನ ಬಲಬೇಕು. ಸಂಸಾರ ಸುಖಕ್ಕೂ ಶುಕ್ರನೇ ಕಾರಣ. ಎನ್ಕೆಯವರಿಗೆ ಕುಟುಂಬ ಸೌಖ್ಯವೊಂದನ್ನು ಬಿಟ್ಟು ಉಳಿದೆಲ್ಲ ಸಂಗತಿಗಳೂ ದೊರಕಿವೆ. ಬುಧ ಶನಿ ಯೋಗವೂ ಭಾಷೆಯ ಮೇಲೆ ಪ್ರಭುತ್ವವನ್ನು ತಂದುಕೊಟ್ಟಿದೆ. ಬುಧನು ವಾಣೀಕಾರಕ. ವಕ್ತೃತ್ವ ಲೇಖನಕಲೆ, ವಿದ್ಯೆಯಲ್ಲಿ ಯಶಸ್ಸು, ವಿದ್ಯಾವ್ಯಾಸಂಗೀ ಜನರ ಸಂಪರ್ಕ, ಪುಸ್ತಕ ಪ್ರಕಾಶನ ಇವೆಲ್ಲವುಗಳಿಗೆ ಕಾರಣೀಭೂತನಾದವನು ಬುಧನು ಶನಿಯೊಡನೆ ಉತ್ತಮ ಶುಭಯೋಗವನ್ನು ಮಾಡುತ್ತಿರುವನು. ಇದು ಜಾತರಿಗೆ ನ್ಯಾಯಬುದ್ಧಿಯನ್ನು ತಂದುಕೊಟ್ಟಿದೆ. ನ್ಯಾಯವಾದಿ ಮಿತ್ರರು, ಲೆಕ್ಕಾಚಾರದ ಮಿತ್ರರೂ ಜಾತರಿಗೆ ಇರುವರು.

ಧನಾಧಿಪತಿ ಬುಧನು ಬಲಿಷ್ಠ. ಒರತಿಯ ನೀರಿನಂತೆ ಜೀವನದಲ್ಲಿ ದುಡ್ಡು ಬಂದೇ ಬರುತ್ತದೆ. ಉದ್ಯೋಗದಿಂದಲ್ಲದೆ ಗ್ರಂಥ ಪ್ರಕಟನೆಯಿಂದಲೂ ಧನ ಪ್ರಾಪ್ತಿ. ರವಿ ಗುರು ಶುಭಯೋಗವು ಸರಕಾರಿ ನೌಕರಿಯನ್ನು ಕೊಟ್ಟಿತು. ಗಂಡು ಸಂತಾನಕ್ಕೂ ಅದುವೇ ಕಾರಣ. ಜಾತರಿಗೆ ಕೇವಲ ಮೂರು ಜನ ಗಂಡುಮಕ್ಕಳು; ಹೆಣ್ಣು ಸಂತತಿಯಿರುವದಿಲ್ಲ. ಪಂಚಮಾಧಿಪತಿ ಗುರು ಇದ್ದು ಆತನು ಲಗ್ನಾಧಿಪತಿಯಾದ ರವಿಯೊಡನೆ ಶುಭಯೋಗವನ್ನು ಮಾಡುತ್ತಿರುವುದೇ ಕಾರಣವು. ದೊಡ್ಡ ಜನರ ಸಂಪರ್ಕ ಸಹವಾಸ ಅವರಿಂದ ಸಹಾಯಕ್ಕೂ ಈ ಯೋಗವೇ ಕಾರಣವು.

ಎನ್ಕೆಯವರ ೬೬, ೬೭, ೬೮, ೭೦ನೆಯ ವರ್ಷಗಳು ಮಾನ ಸನ್ಮಾನ ಗೌರವ, ಪ್ರಕಾಶನ ಧನಪ್ರಾಪ್ತಿಗಳ ದೃಷ್ಟಿಯಿಂದ ಒಳ್ಳೆಯ ವರ್ಷಗಳು. ಜಾತರ ೬೬ ನೆಯ ವರ್ಷವು ಪ್ರಾರಂಭವಾದಾಗ (ಸಪ್ಟಂಬರ ೧೯೭೮) ಸರಕಾರದಿಂದ ಮಾಸಾಶನ ಸಿಕ್ಕಿತು. ಈಗ ನಡೆಯುತ್ತಿರುವ ೭೦ನೆಯ ವರುಷದ ಗೌರವ ಕಾರ್ಯಕ್ರಮವು ೭೦ನೆಯ ವರ್ಷ ಆಗುತ್ತಿರುವ ರವಿ–ಗುರು ಶುಭಯೋಗದ ಪರಿಣಾಮವು. (ಮೂಲದಲ್ಲಿಯೂ ಆ ಯೋಗ ಉಂಟು.) ಕಾಣಿಕೆಯ ರೂಪದಲ್ಲಿ ಧನಾಗಮದ ಸಂಭವ.

ಎನ್ಕೆಯವರ ಕುಂಡಲಿಯಲ್ಲಿರುವ ಅತ್ಯಂತ ಪ್ರಬಲವಾದ ಅಶುಭಯೋಗವೆಂದರೆ ಶನಿ–ಮಂಗಳ ಯುತಿಯು. ಇದು ಜಾಯಾ ಸುಖವನ್ನು ಹರಣ ಮಾಡಿದೆ. ಏಕೆಂದರೆ ಶನಿಯೇ ಸಪ್ತಮಾಧಿಪತಿಯು. ಜಾತರಿಗೆ ಗೃಹ ಸೌಖ್ಯವೂ ಕಡಿಮೆಯೇ. ಏಕೆಂದರೆ ಮಂಗಳನು ಚತುರ್ಥಾಧಿಪತಿಯಾಗಿದ್ದಾನೆ.

ಅವರೆ ಚಂದ್ರ ಶುಕ್ರಯುತಿ; ಶುಕ್ರನೆಪಚ್ಯೂನ ಯುತಿಗಳು ಕೆಲಮಟ್ಟಿಗೆ ಸಂಸಾರ ಸೌಖ್ಯವನ್ನು ಕೊಟ್ಟಿವೆ. ಸ್ತ್ರೀಯರ ವಿಷಯದಲ್ಲಿ ಜಾತರು ದಾಕ್ಷಿಣ್ಯಪರರಾಗಿರಲು ಈ ಯೋಗಗಳೇ ಕಾರಣ.

ರವಿ ಆತ್ಮಕಾರಕ, ಚಂದ್ರನು ಮನಃಕಾರಕ. ಜಾತರ ಅಂತಃಕರಣವು ಕೋಮಲ ವಿರುವದಕ್ಕೆ ಚಂದ್ರ ಶುಕ್ರರ ಯುತಿಯೇ ಕಾರಣವು. ಜಾತರ ಮನಸ್ಸು ಮೃದು; ಗುರು ಬಲಿಷ್ಠನಾಗಿದ್ದರೆ ಮರಣಾನಂತರವೂ ಕೀರ್ತಿ ಉಳಿಯುತ್ತದೆಂದು ಎಲೆನ್ ಲಿಯೋ ಹೇಳುತ್ತಾರೆ. ಜಾತರು ನಿರ್ಮಾಣ ಮಾಡಿದ ಗ್ರಂಥಗಳು ಮರಣಾನಂತರವೂ ಅವರ ಹೆಸರನ್ನು ಉಳಿಸುತ್ತವೆಂಬುದರಲ್ಲಿ ಸಂದೇಹವಿರದು.

ಚಂದ್ರ ನೆಪಚ್ಯೂನ ಯುತಿಯು ಕರ್ಕ ರಾಶಿಯಲ್ಲಾಗಿದೆ. ಇದು ಉತ್ತಮ ಯೋಗವು ಮನುಷ್ಯನನ್ನು ಸಂಸ್ಕಾರಗೊಳಿಸುತ್ತದೆ. ಎನ್ಕೆಯವರು ಸಂಸ್ಕಾರಪ್ರಿಯ ರಾಗಲು ಈ ಯೋಗವೇ ಕಾರಣೀಭೂತವಾಗಿದೆ. ಸ್ಫೂರ್ತಿಯು ಶಕ್ತಿಯಿಂದ ಅಪ್ರತಿಮ ಕಾರ್ಯ ಮಾಡಿಸುವ ಯೋಗವಿದು. ಕಲ್ಪನಾ ಚಾತುರ್ಯವನ್ನು ಕೊಡುವದಲ್ಲದೆ ಗಾಯನ ವಾದನಗಳಲ್ಲಿ ಅಭಿರುಚಿಯನ್ನು ಹುಟ್ಟಿಸುತ್ತದೆ. ಜಲಕಾರಕ ವಸ್ತುಗಳಲ್ಲಿ ಪ್ರೀತಿಯಿರುವದು. ಚಂದ್ರ ನೆಪಚ್ಯೂನ ಯುತಿಯು ಕವಿ ಕಾದಂಬರಿಕಾರ ನಟರಿಗೆ ಪೋಷಕ. ಎನ್ಕೆಯವರಲ್ಲಿ ನಟನಾ ಚಾತುರ್ಯವೂ ಇದೆ.

ಶುಕ್ರ ನೆಪಚ್ಯೂನ ಯುತಿಯು ಸೃಷ್ಟಿ ಸೌಂದರ್ಯದ ಮಾರ್ಮಿಕ ಪರೀಕ್ಷಕರನ್ನು ಹುಟ್ಟಿಸುವದು. ಟಾಪಟೀಪ ಇರುವರು. ನಟ ನೈಪುಣ್ಯವಿರುವದು. ಸ್ವಚ್ಛತೆಯ ಕಡೆಗೆ ವಿಶೇಷ ಗಮನ. ಸೌಂದರ್ಯದ ಕಲ್ಪನೆ ಶೃಂಗಾರ ಪ್ರೀತಿ ಇಂತಹ ಗುಣಗಳು ಕಂಡು ಬರುವವು.

ಎಪ್ಪತ್ತರ ಹರಯದಲ್ಲಿಯೂ ನಿರಿಗೆ ಜೀಳದ ಸೂಟುಧಾರಿಗಳಾಗಿ ಧಾರವಾಡದ ಸೃಷ್ಟಿ ಸೌಂದರ್ಯವನ್ನು ಸವಿಯುತ್ತ ಸಂಧ್ಯಾಕಾಲದಲ್ಲಿ ನಸುನಗುತ್ತ ತಿರುಗುವ ಎನ್ಕೆ ಯವರನ್ನು ಕಂಡಾಗಲೆಲ್ಲಾ ನನಗೆ ಅವರ ಕುಂಡಲಿಯಲ್ಲಿಯ ಶುಕ್ರ–ನೆಪಚ್ಯೂನ ಯುತಿಯ ಸ್ಮರಣೆಯಾಗುತ್ತದೆ.

ನೋವನುಂಡು ನಲಿವನೀವ ಶಕ್ತಿಯನ್ನು ಕೊಟ್ಟದ್ದು ಅವರ ಲಗ್ನ. ಮನಸ್ಸನ್ನು ಸಂಸ್ಕರಿಸಿದ್ದು ಶುಕ್ರ ಚಂದ್ರರ ಯುತಿ.

ಕವಿಗಳನ್ನು ಕಾದಂಬರಿಕಾರರನ್ನು ಹುಟ್ಟಿಸಿದ್ದು ಚಂದ್ರ–ಶುಕ್ರ ನೆಪಚ್ಯೂನರ ಒಕ್ಕೂಟ. ಅವೇ ಮೂರು ಗ್ರಹಗಳು ನಾನೀಕಾಕಾನನ್ನು ನಿರ್ಮಿಸಿದವು. ಕೀರ್ತಿ ಗೌರವಗಳನ್ನು ತಂದುದು ರವಿ–ಗುರು ಶುಭಯೋಗವು. ಅದುವೇ ಜಾತರಿಗೆ ದೀರ್ಘಾ ಯುಷ್ಯವನ್ನೂ ಕೊಟ್ಟಿದೆ. ಒಂದಲ್ಲ ಎರಡು ಪತ್ನಿಯರ ಮರಣಕ್ಕೆ ಕಾರಣವಾದುದು ಶನಿ–ಮಂಗಳಯುತಿ.

# ಶಿಷ್ಯ ವಾತ್ಸಲ್ಯದ ಗುರು

**ಶಂಕರ ಪಾಟೀಲ**

'ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪಗವಾಗುವುದು'. ಕುಮಾರ ವ್ಯಾಸ ಭಾರತ ಕುರಿತು ಕುವೆಂಪು ವ್ಯಕ್ತಪಡಿಸಿದ ಗೌರವ. ಬಹು ಭಾವಪೂರ್ಣವಾದ ಕವನ. ಇಂಥ ಕವನವನ್ನು ಅಷ್ಟು ಭಾವಪೂರ್ಣವಾಗಿ ಹಾಡಿ ವರ್ಗದ ವಿದ್ಯಾರ್ಥಿಗಳನ್ನು ಮುಗ್ಧಗೊಳಿಸಿದ ಶಿಕ್ಷಕರೂ ಕುಮಾರವ್ಯಾಸನ ಭಕ್ತರೂ ಅವನನ್ನು ಅರೆದು ಕುಡಿದವ ರೆಂದು ಹೆಸರಾದವರು. ಈ ಹಾಡು ಕೇಳಿದ ಶಿಷ್ಯರು "ಕೃಷ್ಣನ ಕೊಳಲಿನ ನಾದಲೋಲ ತೆಗೆ ಮುಗ್ಧರಾದ ಗೋಪಿಯರಂತೆ" ಅದರಲ್ಲಿ ತನ್ಮಯವಾಗಿದ್ದರು. ಶಿಕ್ಷಕರು ಈ ಹಾಡು ಪೂರೈಸಿ ಆ ಬಗೆಗೆ ವಿವರಣೆ ನೀಡುತ್ತ ಕುಮಾರವ್ಯಾಸನನ್ನು ಕಿರಿದರಲ್ಲಿ ಶಿಷ್ಯರೆ ನುರು ಬಿಚ್ಚಿ ಇರಿಸಿದಾಗ ಕುಮಾರವ್ಯಾಸನ ಬಗೆಗೆ ಶಿಷ್ಯರಲ್ಲಿ ಅಗಾಧ ಭಕ್ತಿ ಉದಯಿಸಿ ನಿಂತಿತ್ತು. ಇಂಥ ಒಂದು ಭಕ್ತಿಯುತ ರಸಮಯ ಸನ್ನಿವೇಶವನ್ನು ಸೃಷ್ಟಿಸಿದವರ ಬಗೆಗೂ ಗಾಢ ಭಕ್ತಿ ಉದಯಿಸಿ ನಿಂತಿತು. ಹಾವಾಡಿಗನ ಇಂಥ ಪುಂಗಿಯ ನಾದಕ್ಕೆ ಮರುಳಾದ ಶಿಷ್ಯರಲ್ಲಿ ನಾನೂ ಒಬ್ಬ. ಇಂಥ ಪರಿಸರ ಸೃಷ್ಟಿಸಿದವರು ಇಂದು ಜನಪ್ರಿಯ ಮತ್ತು ಖ್ಯಾತ ಸಾಹಿತಿಯೆನಿಸಿದ ಎನ್ಕೆಯವರೆಂದೇ ಪರಿಚಿತರಾದ ಎನ್.ಕೆ. ಕುಲಕರ್ಣಿ ಅವರು. ಸುಮಾರು ನಾಲ್ಕೂವರೆ ದಶಕಗಳ ಹಿಂದಿನ ಮಾತು ಇದು. ಧಾರವಾಡದ ಕೆ.ಇ. ಬೋರ್ಡ ಹಾಯಸ್ಕೂಲಿನಲ್ಲಿ ನಾನು ೩ನೇ ವರ್ಗಕ್ಕೆ ಅದೇ ವರುಷ ಪ್ರವೇಶ ಪಡೆದವ. ಗುರುಗಳ ಈ ಹಾಡುಗಾರಿಕೆ,ಮಾತಿನ ಮೋಡಿ ನನ್ನನ್ನು ಮರುಳುಗೊಳಿಸಿತು. ಅವರ ಬಗೆಗೆ ಸಹಜವಾಗಿಯೇ ನನ್ನಲ್ಲಿ ಕುತೂಹಲ, ವಿಶೇಷ ಆಸಕ್ತಿಗಳು ಮೂಡಿ ನಿಂತವು.

ಎನ್ಕೆ ನಮಗೆ ಕಲಿಸಿದ್ದು ಕೇವಲ ಒಂದು ವರುಷ ಮಾತ್ರ. ಆ ಒಂದು ವರುಷದಲ್ಲಿ ಅವರ ಕಲಿಸುವಿಕೆಯ ಅರಿವು ನಮ್ಮಲ್ಲಿ ಮೂಡಿನಿಂತಿತ್ತು. ನಮಗೆ ಅವರು ಕನ್ನಡ ವಿಷಯವನ್ನು ಕಲಿಸುತ್ತಿದ್ದರು. ಕನ್ನಡ ಭಾಷೆಯ ಬಗೆಗೆ ನಮ್ಮಲ್ಲಿ ತಿಳುವಳಿಕೆ ಮೂಡಿಸಿ ಅಭಿಮಾನವನ್ನು ಉಂಟುಮಾಡಿದರು. ಕನ್ನಡ ಸಾಹಿತ್ಯದಲ್ಲಿಯ ಸವಿ ಹಾಗೂ ಮಾಧುರ್ಯವನ್ನು ಉಣಿಸಿದ್ದರು. ಕನ್ನಡದ ಕಣಜವನ್ನು ತಮ್ಮ ಕಾದಂಬರಿ ಗಳಿಂದ ತುಂಬಿ ಶ್ರೀಮಂತಗೊಳಿಸಿದ ಗಳಗನಾಥರ ಕಾರ್ಯಕ್ಷೇತ್ರ ಹಾವೇರಿಯಿಂದ

ಬಂದ ನನಗೆ ಈ ಗುರುಗಳು ಈ ಭಾಷೆಯ ಸಾಹಿತ್ಯದ ಅಗಾಧತೆಯನ್ನು ಪರಿಚಯ ಮಾಡಿಕೊಟ್ಟರು. ಅವರ ಪಾಠಗಳು ನಮಗೆಲ್ಲರಿಗೂ ತುಂಬ ಪ್ರಿಯವಾಗಿದ್ದವು. ಅವರ ವಾತ್ಸಲ್ಯವಂತೂ ತುಂಬ ಹೆಚ್ಚಿನದು. ಶಿಷ್ಯರನ್ನು ಅವರು ತುಂಬ ಆತ್ಮೀಯತೆ ಯಿಂದ ಕಾಣುತ್ತಿದ್ದರು. ಹೆಚ್ಚಿನ ಅಧ್ಯಯನಕ್ಕಾಗಿ ಅವರು ನಮ್ಮ ಸಂಸ್ಥೆಯಿಂದ ನಿರ್ಗಮಿಸಿದರೂ ಅವರೊಂದಿಗಿನ ನಮ್ಮ ಸಂಪರ್ಕವು ಮುಂದುವರಿಯಿತು. ನಮ್ಮಲ್ಲಿಯ ಆತ್ಮೀಯತೆ ಹೆಚ್ಚುತ್ತಲೇ ಹೋಯಿತು. ಅವರು ಇದ್ದಲ್ಲಿಗೆ ನಾನು ಮತ್ತು ನನ್ನ ಕೆಲ ಸ್ನೇಹಿತರು ಹೋಗುತ್ತಿದ್ದೆವು. ನಮಗೆ ತಿಳಿಯಬೇಕಾದ ಅಂಶಗಳ ಬಗೆಗೆ ವಿಚಾರಿಸು ತ್ತಿದ್ದೆವು. ಈ ಎಲ್ಲ ಸಂದರ್ಭದಲ್ಲಿಯೂ ಅವರು ತುಸುವು ಬೇಸರಿಸಿಕೊಳ್ಳದೆ ಅದೇ ಮಂದಹಾಸ ಬೀರಿ ತಿಳಿಹೇಳುತ್ತಿದ್ದರು. ಅವರ ಈ ಆತ್ಮೀಯತೆ ನಮ್ಮಲ್ಲಿಯ ಸಂಕೋಚವನ್ನು ನಿವಾರಿಸುತ್ತಿತ್ತು. ಇದರಿಂದಾಗಿ ನಾವು ಇನ್ನೂ ಅವರ ಸಮೀಪಕ್ಕೆ ಬಂದೆವು.

ನಾನು ಮತ್ತು ನನ್ನ ಇಬ್ಬರು ಮಿತ್ರರು ಸೇರಿ ಅವರ ಒಂದು ಏಕಾಂಕ 'ಹೆರಿಗೆಯ ಹಿಟ್ಲರ್' ಅಭಿನಯಿಸಿದ ಸಂಗತಿಯನ್ನು ಅದು ಹೇಗೋ ತಿಳಿದ ಎನ್ಕೆಯವರು ತುಂಬಾ ದಿನಗಳ ನಂತರವೂ ಈ ಶಿಷ್ಯರನ್ನು ಅಭಿನಂದಿಸಲು ಮರೆಯಲಿಲ್ಲ. ಹಾಯಸ್ಕೂಲಿನ ಕೊನೆಯ ವರುಷದಲ್ಲಿರುವಾಗ ಅವರು ನಮಗಾಗಿಯೇ ಒಂದು ನಾಟಕವನ್ನು ಬರೆದು ಕೊಟ್ಟರು. ನಾವದನ್ನು ಅಭಿನಯಿಸಿದಾಗ ಅವರು ವ್ಯಕ್ತಪಡಿಸಿದ ಖುಷಿ ನಮಗೆಲ್ಲರಿಗೂ ತುಂಬ ಉತ್ತೇಜನಕಾರಿಯಾಗಿ ಪರಿಣಮಿಸಿತು.

ಎನ್ಕೆಯವರು ತಮ್ಮ ಸಂಪರ್ಕದಲ್ಲಿ ಬಂದ ಯಾರನ್ನೂ ವಿಶೇಷವಾಗಿ ಶಿಷ್ಯರನ್ನು ಎಂದೂ ಮರೆತವರಲ್ಲ. ನಾನು "ಕರ್ಮವೀರ"ದ ಸಹಾಯಕ ಸಂಪಾದಕನಾಗಿದ್ದಾಗ ಕರ್ಮವೀರ ದೀಪಾವಳಿ ಸಂಚಿಕೆಯಲ್ಲಿ ಅವರ ಏಕಾಂಕ ನಾಟಕವೊಂದನ್ನು ಪ್ರಕಟಿಸ ಲಾಗಿತ್ತು. ಅವರಿಗೆ ಕಳಿಸಿದ ಲೇಖಕನ ಪ್ರತಿ ತಲುಪಿರಲಿಲ್ಲ. ಎರಡು ಸಲ ಅವರು ಪತ್ರ ಬರೆದರು. ಎರಡೂ ಸಲವೂ ಪ್ರತಿ ಕಳಿಸಿದೆ. ಆದರೆ ಅದು ಹೇಗೊ ತಲುಪಲಿಲ್ಲ. ಬಹಳ ಕೋಪಗೊಂಡು ಪತ್ರ ಬರೆದರು. ಆಗ ನಮ್ಮ ಸಂಪಾದಕರು ಊರಲ್ಲಿರಲಿಲ್ಲ. ಹೀಗಾಗಿ ನಾನೇ ಪತ್ರ ಬರೆದೆ, ನಮ್ಮ ದೋಷವೇನೂ ಇಲ್ಲವೆಂದು ಸ್ಪಷ್ಟಪಡಿಸಿ ಕೋಪಕ್ಕೆ ಅವಕಾಶಕೊಡಬಾರದೆಂದು ತಿಳಿಸಿ ಒಂದು ಪ್ರತಿಯನ್ನು ರಿಜಿಸ್ಟರಿನಿಂದ ಕಳಿಸಿದೆ. ನನ್ನ ಹೆಸರು ಅವರನ್ನು ನೆನಪಿನಾಳಕ್ಕೆ ತಳ್ಳಿರಬೇಕು. ಈ ಶಿಷ್ಯನನ್ನು ನೆನಪಿಸಿಕೊಂಡು ಸಂಪಾದಕರಿಗೆ ಪತ್ರ ಬರೆದು ವಿಚಾರಿಸಿದ್ದರು. "ಶಂಕರ ಪಾಟೀಲ ಎಂದು ನನ್ನ ಶಿಷ್ಯ ರಿದ್ದರು. ಈ ಪತ್ರ ಬರೆದವರೂ ಅವರೋ?" ಎಂದು ತಿಳಿಯಬಯಸಿದ್ದರು. ಅದರಲ್ಲಿ ನನಗೆ ವಂದನೆಗಳನ್ನು ತಿಳಿಸಲು ಹೇಳಿದ್ದರು. ಯಾವ ಶಿಷ್ಯರೂ ಅವರ ನೆನಪಿನಿಂದ ಮಾಸುತ್ತಿರಲಿಲ್ಲ ಅಂಥ ಒಂದು ಆತ್ಮೀಯತೆ ಅವರದು. ಶಿಷ್ಯವಾತ್ಸಲ್ಯ ಅವರದು.

ಅವರು ನಮ್ಮ ಗುರುವಾಗಿದ್ದಾಗಲೇ ಅವರು ಒಳ್ಳೇ ನಾಟಕಕಾರರು, ಹರಟೆ ಗಾರರು ಎಂಬ ಸ್ಥೂಲ ಪರಿಚಯ ನನಗಾಗಿತ್ತು. ನಾನು ಪತ್ರಿಕೋದ್ಯಮಿಯಾಗಿ

ಕರ್ಮವೀರದ ಸಹಾಯಕ ಸಂಪಾದಕನಾದ ನಂತರ ಈ ಗುರು ಪ್ರಜ್ಞಾವಂತ ಲೇಖಕನೂ ಹೌದು ಎಂಬ ಅರಿವು ಮೂಡಿತು. ಅವರು ಬೆಂಗಳೂರಿನಿಂದ ಧಾರವಾಡಕ್ಕೆ ಬಂದ ನಂತರ ನನಗೆ ಅವರ ಲೇಖನಿಯ ವಿಶೇಷ ನೆರವು ಬೆಂಬಲಗಳು ದೊರೆತವು. ಅವರಲ್ಲಿ ನಾನು ಗಮನಿಸಿದ ಮೊದಲ ಅಂಶವೆಂದರೆ ಲೇಖನವನ್ನು ಒಪ್ಪಿಕೊಂಡ ಸಮಯಕ್ಕೆ ಸರಿಯಾಗಿ ಅಣಿಗೊಳಿಸಿ ಸಕಾಲಕ್ಕೆ ತಲುಪಿಸುವುದು.ಕಳಿಸುವ ಪೂರ್ವದಲ್ಲಿ ಅವರು ಸರಿಯಾಗಿ ಮತ್ತೆಮತ್ತೆ ಪರಿಶೀಲಿಸಿರುತ್ತಿದ್ದರು ಎಂಬ ಅಂಶ ಅವರ ಹಸ್ತಪ್ರತಿಯಲ್ಲಿಯ ಒಂದೆರಡು ಚಿಕ್ಕಪುಟ್ಟ ಬದಲಾವಣೆಗಳು ತೋರುತ್ತಿದ್ದವು. ಆದರೂ ನನಗೊಂದು ಪತ್ರ ಬರೆದು ಎಲ್ಲಿಯಾದರೂ ತಪ್ಪುತಡೆ ಉಳಿದಿದ್ದರೆ ತಿದ್ದಿಕೊಂಡು ಪ್ರಕಟಿಸಲು ಕೇಳಿಕೊಳ್ಳುತ್ತಿದ್ದರು. ಇಷ್ಟಕ್ಕೂ ಅವರಿಗೆ ಸಮಾಧಾನವಾಗುತ್ತಿರಲಿಲ್ಲ. ತಾವು ಮತ್ತೆ ವಿಚಾರಿಸಿದಾಗ ಹೊಸ ಅಂಶವೇನಾದರೂ ಹೊಳೆದರೆ, ಸೂಚಿತವಾದರೆ ಇಷ್ಟನೇ ಸಾಲು, ಇಲ್ಲವೇ ಪರಿಚ್ಛೇದದ ಬದಲು ಇದನ್ನು ಸೇರಿಸಿಕೊಳ್ಳಬೇಕೆಂದು ಹೇಳಿ ಕಾಗದ ಬರೆಯುತ್ತಿದ್ದರು. ಲೇಖನ ಸ್ಫುಟವಾಗಿರುವಂತೆ, ಅಚ್ಚುಕಟ್ಟಾಗಿರುವಂತೆ ನಿರ್ದೋಷವಾಗಿರುವಂತೆ ಅವರು ತುಂಬ ಜಾಗರೂಕತೆ ವಹಿಸುತ್ತಿದ್ದರು. ಇಂಥ ಒಂದು 'ಲೇಖನ ಪ್ರಜ್ಞೆ' ಅವರು ಬೆಳೆಸಿಕೊಂಡು ಬಂದುದರಿಂದ ಸಂಪಾದಕರ ಕಾರ್ಯವನ್ನು ಅವರು ಬಹು ಸುಲಭಗೊಳಿಸುತ್ತಿದ್ದರೆಂದು ನನ್ನ ಅನುಭವ; ಆದರೆ ಈ ಹಿಂದೆಯೇ ತಿಳಿಸಿದಂತೆ ಲೇಖನ ಪ್ರಕಟವಾದ ಪ್ರತಿ ಮಾತ್ರ ಸಕಾಲಕ್ಕೆ ತಲುಪಲೇಬೇಕು. ಆ ವಿಷಯದಲ್ಲಿ ಅವರು ರಾಜಿ ಆಗುತ್ತಿರಲಿಲ್ಲ, ಯಾವುದೇ ರಿಯಾಯತಿಯನ್ನು ತೋರುತ್ತಿರಲಿಲ್ಲ. ಒಂದೇ ಒಂದು ದಿನವಾದರೆ ವಿಲಂಬವಾದರೂ ಅವರ ಕಟುವಾದ ಪತ್ರ ಬರುತ್ತಿತ್ತು. ಆದರೆ ಅದರ ಬೆನ್ನಹಿಂದೆಯೇ ಆ ಬಗೆಗೆ ವಿಷಾದಿಸಿ ಪತ್ರ ಬರೆಯುತ್ತಿದ್ದರು. ವಿಷಯಕ್ಕೆ ಸೀಮಿತವಾಗಿ ಬರೆಯುವುದು ಅವರ ಇನ್ನೊಂದು ಗುಣವಿಶೇಷ. ಲೇಖನಕ್ಕೆ ಹಾಕಿದ ಮಿತಿಯನ್ನು ದಾಟುತ್ತಿರಲಿಲ್ಲ. ವಿಷಯಾಂತರದ ಪ್ರಶ್ನೆಯೂ ಅವರ ಲೇಖನಗಳ ಬಳಿ ಸುಳಿದಿಲ್ಲ. ಇನ್ನೊಬ್ಬರ ಲೇಖನಗಳನ್ನು ಅಷ್ಟು ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಳ್ಳುತ್ತಿದ್ದರು. ಅದೊಂದು ಅವರಲ್ಲಿಯ ಹಿರಿಯ ಗುಣವೇ ಸರಿ.

ಎನ್ಕೆಯವರು ಎಲ್ಲರನ್ನು ಹಚ್ಚಿಕೊಳ್ಳುವ ಸ್ವಭಾವದವರು. ಆತ್ಮೀಯವಾಗಿ ಕಾಣುವವರು. ಅವರ ಆತ್ಮೀಯತೆ ವಾತ್ಸಲ್ಯಗಳನ್ನು ಸವಿದಂತೆ ಅವರ ಲೇಖನಿಯ ನೆರವನ್ನೂ ತುಂಬ ಪಡೆದಿದ್ದೇನೆ. ಬಹು ದಿನಗಳಿಂದ ಅವರನ್ನು ಕಂಡಿರಲಿಲ್ಲ. ಬರೆಯುವುದೂ ಆಗಿರಲಿಲ್ಲ. ಕಳೆದ ವರುಷದ 'ಸೀಮಾ' ದೀಪಾವಳಿ ಸಂಚಿಕೆ ಕಳಿಸಿ ದೀಪಾವಳಿಯ ಶುಭ ಸಂದೇಶ ಕಳಿಸಿದಾಗ, ಅವರಿಂದ ಕೂಡಲೇ ಉತ್ತರ ಬಂತು. "ನಿಮ್ಮ ಪತ್ರ ಕಂಡು ತುಂಬ ಸಂತೋಷವೆನಿಸಿತು, ಸಮಾಧಾನವಾಯಿತು.ಅಂತೂಒಮ್ಮೆ ಭಾರೀ ಮೌನವನ್ನು ಮುರಿದು ಮೌನಲೋಕದಿಂದ ಹೊರಬಿದ್ದಿರಲ್ಲ!" ಹೌದು, ಅವರ ವಾತ್ಸಲ್ಯ ಬತ್ತುವಂಥದೇ ಅಲ್ಲ ಎಂಬುದನ್ನು ಮಾತ್ರ ನನಗೆ ತೋರಿದರು. ನಿಜ, ಅದು ಬತ್ತದ ಒರತೆಯೆಂಬುದು ನನ್ನ ಅನುಭವದ ಮಾತಾಗಿದೆ.

# ಆ ಸನ್ನಿವೇಶ

## ಎಸ್. ಜಿ. ರಘುರಾಂ

ಅಂದು ಬೆಳಿಗ್ಗೆ ಹತ್ತುಘಂಟೆಯಸಮಯ.ಪೋಸ್ಟ್‌ಮನ್‌ಗಾಗಿ ಕಾಯುತ್ತ ನಿಂತಿದ್ದೆ. ಆತ ಸರಿಯಾದ ಸಮಯಕ್ಕೆ ಬಂದ. ನನಗೊಂದು ಕಾಗದವನ್ನೂ ತಂದ. ಸರಸರನೇ ಬಾಗಿಲಲ್ಲೇ ಒಡೆದೆ. ಅವಸರದಲ್ಲಿ ಕಾಗದ ಎಸೆದು ಕವರು ಹಿಂದುಮುಂದು ನೋಡಿದೆ. ಪೆಚ್ಚು ಮೋರೆ ಹಾಕಿ ಕಾಗದವನ್ನು ಎತ್ತಿಕೊಂಡೆ. ನಾನು ನಿರೀಕ್ಷಿಸಿದ ಕಾಗದ ಅದಲ್ಲ. ಆದರೆ ಅದು ಇನ್ನೂ ಹೆಚ್ಚು ಮುಖ್ಯವಾದ ಕಾಗದ ಆಗಿತ್ತು.V.I.P. ಅನ್ನುತ್ತಾರಲ್ಲ V.V I.L. ಆಗಿತ್ತು. ನನ್ನ ಹೃದಯದ ಒಂದು ಮೂಲೆಯಲ್ಲಿ ಶಾಶ್ವತ ಸ್ಥಳ ಗಿಟ್ಟಿಸಿರುವ ನನ್ನ ಆತ್ಮೀಯರಾದ ಅಗ್ರಜ ಎನ್ಕೆಯವರ ಬಗೆಗಿನ ಪತ್ರ 'ಎನ್ಕೆ ಬದುಕು' ಮತ್ತು 'ಎನ್ಕೆ ಬರೆಹ'ಗಳ 'ನಾನಿಕಾಕಾ' ಎಂಬ ಸಮ್ಮಿಳಿತ ಸಂಪುಟಗಳನ್ನು ಪ್ರಕಟಿಸುತ್ತಿದ್ದೇವೆ. ಈ ಸಂಪುಟಗಳನ್ನು ನೀವೂ ನಿಮ್ಮ ಮಿತ್ರರೂ ಕೊಳ್ಳಿ ಎಂದು ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಬರೆದಿದ್ದರು. ಅವರು ಅಷ್ಟಕ್ಕೆ ಬಿಟ್ಟಿದ್ದರೆ ಚೆನ್ನಿತ್ತು. ನಾನು ಕುಣಿದಾಡುತ್ತಿದ್ದೆ. ಈ ಕೊಡುಗೆ ಒಂದು ಹಣಿಯೆಂದು ಭಾವಿಸಿ ಹಣಕೂಡಿಸಿ ಪುಸ್ತಕಗಳಿಗಾಗಿ ಪೋಸ್ಟ್‌ಮನ್‌ಗಾಗಿ ಕಾಯುತ್ತಿದ್ದೆ. 'ನಾನುಕಂಡ ಎನ್ಕೆ' ಎಂಬ ಲೇಖನವನ್ನು ಬರೆದು ಕಳುಹಿಸಿ ಅದೂ ಇಪ್ಪತ್ತು ದಿನಗಳ ಒಳಗೆ ಎಂದೂ ಸೂಚಿಸಿದ್ದರು. ಜಂಘಾಬಲ ಉಡುಗಿತು. ಇಪ್ಪತ್ತು ದಿನದಲ್ಲಿ ಎನ್ಕೆಯವರ ಬಗ್ಗೆ ಲೇಖನವೇ! ಯೋಚಿಸಿದೆ. ತಲೆ ಕೆರೆದೆ. ಊಹೂ. ಸಾಗರದ ನೀರನ್ನು ಒಂದೇ ಆಪೋಷಣದಲ್ಲಿ ಕುಡಿಯಲು ನಾನೇನು ವ್ಯಾಸನೇ? ಆದರೆ ಪ್ರೀತಿ ವಿಶ್ವಾಸಗಳ ಮುಂದೆ ಮನುಷ್ಯನ ಸೋಲು ಖಂಡಿತ. ಎನ್ಕೆಯವರ ಬಗ್ಗೆ ಏನಾದರೊಂದು, ನನ್ನ ಪೆನ್ನಿಗೆ ತೋರಿದ್ದನ್ನು ಬರೆಯಲೇಬೇಕೆಂಬ ಛಲವೋ, ಹಟವೋ ಬಂತು. ಬರೆಯುತ್ತಿದ್ದೇನೆ.

ಸುಮಾರು ೧೯೫೮ ರಲ್ಲಿ ನಾನು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎಸ್‌ಸಿ. ತರಗತಿಯಲ್ಲಿ ಓದುತ್ತಿದ್ದೆ. ಬೆಂಗಳೂರು ಆಕಾಶವಾಣಿಯವರು ಕಾಲೇಜಿನ ವಿದ್ಯಾರ್ಥಿಗಳಿಗಾಗಿ ಭಾವಗೀತೆ ಸ್ಪರ್ಧೆ ಏರ್ಪಡಿಸಿದ್ದರು. ಇಂತಹ ಒಳ್ಳೆಯ ಕೆಲಸವನ್ನು ಆಕಾಶವಾಣಿಯವರು ಆಗ ಮಾಡುತ್ತಿದ್ದರು ಅನ್ನಿ. ನಾನು ಸೆಂಟ್ರಲ್ ಕಾಲೇಜಿನ

ಪ್ರತಿನಿಧಿ. ಸ್ಪರ್ಧೆ ಇದ್ದದ್ದು ೨ ಘಂಟೆಗೆ. ನಾನು ಆಕಾಶವಾಣಿಗೆ ಹೋದದ್ದು ೫ ಘಂಟೆಗೆ, ಮಂತ್ರಿಗಳಂತೆ. ಕಾರಣ ನನಗಿನ್ನೂ ಸಿಕ್ಕಿಲ್ಲ. ಬಾಗಿಲಲ್ಲಿ ವಿಚಾರಿಸಿದೆ. 'ಒಳಗೆ ಹೋಗಿ' ಎಂದರು ಅಲ್ಲಿದ್ದವರು. ಒಳಕ್ಕೆ ಹೋಗಿ ಎಡಗಡೆ ತಿರುಗಿದೆ ಬೆವರೊರಸಿಕೊಂಡೆ. ನೀಟಾಗಿ ಬಾಚಲು ಸಾಧ್ಯವಾಗದ, ಪುರುಚುಲು ಕೂದಲಿನ, ಚೂಪು ಮೂಗಿನ ಒಬ್ಬ ವ್ಯಕ್ತಿ ಮಂದಹಾಸ ಬೀರುತ್ತ, ವೀಳ್ಯವನ್ನು ಜಗ್ಗುತ್ತ ಸ್ಟುಡಿಯೋದಿಂದ ಹೊರ ಬರುತ್ತಿದ್ದರು.

"ಏನ್ರಿ ಏನಾಗಬೇಕಿತ್ತು?"

'ನಾನು ಭಾವಗೀತೆ ಸ್ಪರ್ಧೆಗೆ ಬಂದಿದ್ದೇನೆ. ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿ' ಎಂದು ಆಕಾಶವಾಣಿ ಕಳುಹಿಸಿದ್ದ ಕಾಗದ ಕೊಟ್ಟೆ. 'ಊರ ಕೊಳ್ಳಿ ಹೊಡೆದಮ್ಯಾಗೆ ದಿಡ್ಡಿ ಬಾಗಿಲ ಹಾಕಿದರಂತೆ ಅಂಜೋ ಹಾಗೆ ಈಗ ಬಂದಿದೀರಲ್ರಿ; ನಿಮಗೆ ವ್ಯಾಳೆ ಗೊತ್ತಿರ ಲಿಲ್ಲೇನು?'–ನಕ್ಕರು. ಆ ನಗು ಇನ್ನೂ ನನ್ನ ಮನಸ್ಸಿನಲ್ಲಿ ಹಸಿರಾಗಿದೆ. ನನ್ನನ್ನ ಮೋಡಿ ಮಾಡಿತು. ಮಗುವಿನಂತಹ ಆ ಮುಗ್ಧ ನಗು ನನ್ನನ್ನು ನನಗರಿವಿಲ್ಲದಂತೆಯೇ ಅವರಲ್ಲಿ ಎಳೆದುಕೊಂಡಿತು. ಅವರಲ್ಲಿ ಆಕರ್ಷಿತನಾದೆ. ಎನ್ಕೆಯವರು ಹೆಣ್ಣಾಗಿದ್ದಿದ್ದರೆ, ಬಿಡಿ ಆ ಮಾತೇಕೆ ಈಗ...ಆಗಿ ಹೋಗದ್ದು, "ಸಾರ್ ನನ್ನ ಸೈಕಲ್ ಬರೋವಾಗ ಪಂಕ್ಚರ್ ಆಯ್ತು, ಅದಕ್ಕೆ ಲೇಟಾಯ್ತು. ಸಾರಿ ಸರ್" ಎಂದು ಬುಲೆಟಿನ್ ಬಿಟ್ಟೆ.

ಕಾಲೇಜು ಹುಡುಗ ಅಂದಮೇಲೆ ಇಷ್ಟೂ ಬೇಡವೇ!

'ಏನೋಪ್ಪಾ. ಹುಡುಗರೇ ಹೀಗೇ ಅಂತೀನಿ ಇರ್ರಿ. ನೋಡ್ತೀನಿ ಜಡ್ಜಿಗಳು ಇದ್ದರೆ ನಿಮಗೊಂದು ಛಾನ್ಸ ಕೊಡಿ, ಅಂತ ಅನ್ತೀನಿ ಇಲ್ಲೇ ಇರಿ ಬಂದೆ' ಎಂದು ಎಡಗೈಯಲ್ಲಿ ಪ್ಯಾಂಟನ್ನು ಮೇಲಕ್ಕೆಳೆದುಕೊಂಡು ಕಂಕುಳಲ್ಲಿದ್ದ ಫೈಲನ್ನು ಸರಿಮಾಡಿ ಕೊಂಡು ಹೋದರು.

ನಾನು ಅಲ್ಲಿ ನೇತು ಹಾಕಿದ್ದ ಗಾಂಧಿಯನ್ನು ನೋಡುತ್ತಾ ನಿಂತೆ. ಒಂದುನಿಮಿಷ ಆಗಿತ್ತೋ ಇಲ್ಲವೋ, 'ಬರ್ರಿ ಬೇಗ ಬರ್ರಿ, ಐದು ಮಿನಿಟು ಇಗ್ರಿ ಅಂತ ಹೇಳಿ ಬಂದಿದ್ದೇನೆ. ಹಾಡಿ' ಎಂದು ನನ್ನನ್ನು ಕೈ ಹಿಡಿದು ಎಳೆದುಕೊಂಡೇ ಹೋದರು.

ನನಗೋ ಎಲ್ಲಿಲ್ಲದ ಸಂತೋಷ. ಅವರೊಂದಿಗೇ ಓಡಿದೆ ಕುರಿಯಂತೆ. ಹಾಡಿದೆ. ಮೊದಲನೇ ಬಹುಮಾನ ಬಂತು! 'ಅಲ್ರಿ ಕೊನ್ಯಾಗ ಬಂದು ಮೊದಲನೇ ಪ್ರೈಜ್ ಗಿಟ್ಟಿಸಬಿಟ್ರಲ್ಲ? ಛಲೋ ಆತು. ಇನ್ನು ನಡೀರಿ ನಾನು ನಿಮಗೆ ಕಾಗದ ಬರೀತೀನಿ.' ಅಂದರು.

ಇಂತಹ ಸೌಜನ್ಯಮೂರ್ತಿ, ಸಹನಶೀಲ, ಚೆಲುಮೊಗದ, ವ್ಯಕ್ತಿ ಯಾರಿರ ಬಹುದು, ಕುತೂಹಲ ಕೆರಳಿತು. ನಾನು ಅವರನ್ನೆ ಕೇಳಲೇ? ಉಂಟೇ! ಯಾಕೋ ಸಂಕೋಚವಾಯಿತು. ಬಾಗಿಲಿಗೆ ಬಂದೆ. ಅಲ್ಲಿದ್ದವರನ್ನು ಕೇಳಿದೆ:

'ಸರಿಹೋಯ್ತು! ನಿಮ್ಮದು ಯಾವ ಊರು?'

'ಯಾಕೆ ನಾನು ಹ್ಯಾಗೆ ಕಾಣ್ತೇನಿ?'

ಕವನ ಬರೆದಿದ್ದಾರೆ, ಏಕಾಂಕ ಬರೆದಿದ್ದಾರೆ. ಕಾದಂಬರಿ, ಪ್ರಬಂಧ, ವಿಮರ್ಶೆ, ಹರಟೆ ಎಲ್ಲವನ್ನು ಬರೆದಿದ್ದಾರೆ. ವೈನಿ, ಎರಡನೇ ಸಂಬಂಧ, ಸಾವಿನ ಉಡಿಯಲ್ಲಿ ಮೊದಲಾದ ಅವರ ಕೃತಿಗಳಲ್ಲಿ ಅವರು ನಮ್ಮೆದುರು ನಗುನಗುತ್ತಲಿದ್ದರೂ ಅನೇಕ ಅಘಾತಗಳಲ್ಲಿ ಅವರು ಸಿಕ್ಕಿಕೊಂಡಾಗ ತಮ್ಮ ಭಾವನೆಗಳನ್ನು ಪ್ರತಿಬಿಂಬಿಸಿದ್ದಾರೆ. ಇಂದಿನ ಸಮಾಜ ಜೀವನದ ಮೇಲೆ ಬೆಳಕು ಚೆಲ್ಲುವ ಒಳ್ಳೆಯ ಕೃತಿಗಳು ಅವು. ಎನ್ಕೆ ಯವರ ಹೃದಯಾಂತರಾಳವನ್ನು ಈ ಕೃತಿಗಳಲ್ಲಿ ತೆರೆದಿಟ್ಟಿರುವುದನ್ನು ಗುರುತಿಸ ಬಹುದು.

ರೇಡಿಯೊದಲ್ಲಿ ಬರುತ್ತಿದ್ದ 'ನಾನಿಕಾಕಾ'ನನ್ನು ಯಾರೂ ಮರೆಯುವಂತಿಲ್ಲ, ಮಕ್ಕಳಿಂದ ಮುದುಕರವರೆಗೂ ಈ ನಾನಿಕಾಕಾ ಹಾಸ್ಯದ ಹೊನಲು ಹರಿಸಿ ಚಿರಪರಿಚಿತ. ಆದರೆ ಅಲ್ಲಿಂದ ಅವರು ನಿವೃತ್ತರಾದ ಮೇಲೆ ಆ ಕಾರ್ಯಕ್ರಮ ಸಪ್ಪೆಯೊ ಸಪ್ಪೆ.

ಎನ್ಕೆ ಒಳ್ಳೆಯ ಸ್ನೇಹಿತರು. ಕರ್ನಾಟಕ ತುಂಬೆಲ್ಲ ಸ್ನೇಹಿತರನ್ನು ಪಡೆದು ಕೊಂಡಿದ್ದಾರೆ. ಒಮ್ಮೆ ಗುರುತಾಯಿತೆಂದರೆ ಅದನ್ನು ಆತ್ಮೀಯತೆ ರೂಪುಗೊಟ್ಟು ಬೆಳೆಸಿಕೊಳ್ಳುವ ಗುಣ ಅವರದು.

ನಿವೃತ್ತಿ ಕವಿಗಳಿಗಿಲ್ಲ, ಲೇಖಕರಿಗಿಲ್ಲ. ಅಂತೆಯೆ ಎನ್ಕೆಯವರು ಇನ್ನೂ ಸಾಹಿತ್ಯ ರಂಗದಲ್ಲಿ ಸೇವೆ ನೀಡುತ್ತಿದ್ದಾರೆ. ಇಳಿ ವಯಸ್ಸಿನಲ್ಲಿಯೂ ಕಾಣುವ ಹರೆಯದ ನಗು ಮಿಂಚು ಅವರ ಹೃದಯದ ನೋವನ್ನೆಲ್ಲ ಮಾಸಿ ನಗಿಸುತ್ತದೆ. ಈ ಅವರ ಸಾಧನೆಯ ಗುಟ್ಟೇನೂ ನನಗಿನ್ನೂ ತಿಳಿಯದು.

ಅವರ ಸರಳ ಸಜ್ಜನಿಕೆ ಸ್ನೇಹಪರತೆ ಮೃದು ಸ್ವಭಾವ ಇವೆಲ್ಲ ನನ್ನನ್ನು ಆಕರ್ಷಿಸಿದ ವಿಶೇಷತೆಗಳು.

# ಜೋಗದರ್ಶನ

## ಎನ್. ಎಸ್. ಗದಗಕರ

'ಸಲುಗೆಯೆ ಆದರೆ ಕಾಡೆನಿಸದ, ಸುಂದರ ಆದರೆ ನಿರಾಡಂಬರ ಆಂಗ್ಲ ಶೈಲಿಯನ್ನು ಹಸ್ತಗತ ಮಾಡಿಕೊಳ್ಳಬೇಕೆಂದು ಹಾತೊರೆಯುವ ಯಾರೂ, ಹಗಲು ರಾತ್ರಿ ಆ್ಯಡಿಸನ್‌ರ ಸಂಪುಟಗಳನ್ನು ಶ್ರದ್ಧೆಯಿಂದ ಅಭ್ಯಸಿಸಬೇಕು'–ಎಂಬ ಡಾಕ್ಟರ ಜಾನ್ಸನ್‌ರ ಉದ್ಗಾರ ಎನ್ಕೆಯವರ ಬರೆಹ, ಜೀವನ ರೀತಿಯ ಬಗೆಗೆ ಸಮುಚಿತವಾಗಿ ಅನ್ವಯಿಸುವದು. ಹಾಗೆ ಪರ್ಯಾಲೋಚಿಸುವಾಗ, ಸಹಜವಾಗಿ, ನನಗೆ ಹಿಂದಿನ ನೆನಪುಗಳು ಮರುಕಳಿಸಿ ಬರುವವು. ಬಹುಶಃ ಅದು ನಾಲ್ಕನೆಯ ದಶಕ ಇರಲು ಸಾಕು. ಗೆಳೆಯ ದತ್ತಾತ್ರಯ ಕುಲಕರ್ಣಿಯವರ ರೋಮಹರ್ಷಕ ಸಹವಾಸದಲ್ಲಿ ನನಗೆ ಎನ್ಕೆಯವರ ಅರಮರ್ಧ ಗೆಳೆತನ ಮೊದಲು ಸಾಧಿಸಿತು. ಆಗಲೆ ಅವರು ಸಿದ್ಧಹಸ್ತ ಬರಹಗಾರರು. ಆದರೆ ಜೀವನದ ಕಷ್ಟ ನಷ್ಟಗಳನ್ನು ಅವರಷ್ಟು ಆಗ ನನ್ನ ಗೆಳೆಯರಾರೂ ಅನುಭವಿಸಿರಲಿಕ್ಕಿಲ್ಲ. ಆತ್ಮಚರಿತೆಯ ಧರ್ತಿಯ ಆ ಪ್ರಪ್ರಥಮ ಕಾದಂಬರಿ ಧಾರವಾಡದಲ್ಲಿ ಓದುವವನ್ನು ಕೇಳುತ್ತಿರುವಾಗಲೆ ಎನ್ಕೆಯವರ ಬರವಣಿಗೆಯ ಬಗೆಗೆ ಕುತೂಹಲದ ಊರ್ಮಿಗಳು ಸಮುದ್ಭವಿಸಿದವು. ಬರಹದ ಆ ಆತ್ಮೀಯತೆಗೆ ದತ್ತಣ್ಣ, ನಾನು ತಲೆದೂಗಿದ್ದೇ ತಲೆದೂಗಿದ್ದು. ಬರೆದರೆ ಹೀಗೆ ಬರೆಯಬೇಕು ಎಂದು ಮನಸ್ಸಿನಲ್ಲಿಯೇ 'ಶರಾ' ಹಾಕಿದೆವು.

ಕ್ರಮೇಣ ಲೀಲಾಜಾಲವಾಗಿ ಕಾಲ ಗೆಜ್ಜೆಯ ಅಡಿ ಇಡತೊಡಗಿತು. ಎನ್ಕೆ ಅವರ ಮುಖತಃ ಪರಿಚಯು ಕಡಿಮೆ ಆದರೂ (ಅವರು ಮುಂಬಯಿ ಆಕಾಶವಾಣಿಗೆ ಹೋದರು) ಅವರ ಕಲಾಕೃತಿಗಳನ್ನು ಶಿಕ್ಷಕ ಎಂದು ಕಲಿಸುವ, ಅಭ್ಯಸಿಸುವ ಭಾಗ್ಯಕ್ಕೆ ಇನಿತು ಎರವಾಗಲಿಲ್ಲ. ಆ "ಜೋಗದರ್ಶನ" ಪ್ರಬಂಧವಂತೂ ಮಬ್ಬು ಹಿಡಿಸಿತು. ಒಮ್ಮೊಮ್ಮೆ ಆಂಗ್ಲ ಪ್ರಬಂಧಕಾರರನ್ನು ಅದರೆದುರು ನಿವಾಳಿಸಿ, ಚೆಲ್ಲಬೇಕೆನಿಸುತ್ತಿತ್ತು. ಹಾಗೆಯೇ ಅವರ 'ಮಗ್ನತೆ', 'ಆ ಧರ್ಮಶಾಲೆ'ಯ ಸೊಬಗು. ಎಲ್ಲ ವಿನೋದ, ವಿಡಂಬನೆಯ ಆಗರ. ಮೇಲೆ ಸಾಹಿತ್ಯ ಸಂಸ್ಕಾರದ ದೈವೀ ಮೆರುಗು !

ಬರೀ ಪ್ರಬಂಧಕಾರರೆಂದು ಹೆಸರಾಗಿದ್ದರೆ ಎನ್ಕೆ ಅವರಿಗೂ ನನಗೂ ವಿಶೇಷ ಬಳಕೆ, ಪ್ರಭಾವ ಸಾಧಿಸುತ್ತಿರಲಿಲ್ಲ. ಅವರು ಏಕಾಂಕ ಲೇಖಕರು, ಒಳ್ಳೆ ಕುಶಲರು.

ಕಾಲೇಜಿನ ದಿನಮಾನದ ಗೀಳು ಅದು. ಅವರ 'ಇಲೆಕ್ಶನ್' ರಂಗಸ್ಥಳದ ಮೇಲೆ ನೋಡಿ ಮಬ್ಬು ಹಿಡಿದಿತ್ತು. ಅವರ ಕಥಾನಾಯಕ, ನಾಯಿಕೆಯರು ಸಾಮಾನ್ಯ ನಿಜ. ಆದರೆ ರಸಿಕರು, ಮಹತ್ವಾಕಾಂಕ್ಷಿಗಳು. ಕಥಾನಾಯಕನು ನಾಮಾಂಕಿತ ಲೇಖಕನಾಗುವ ಹಂಬಲ ತಳೆದಿದ್ದ. ಆದರೆ ಸಾಧಿಸಲಿಲ್ಲ. ಆದರೆ ಒಳ್ಳೆ ಕವಿ ಹೃದಯ ಉಳ್ಳವ. ಅವನ 'ಮುಗಿಲು ಮಾರಿಗೆ ರಾಗ ರತಿಯ ನಂಜು ಏರಿತ್ತ । ಆಗ ಸಂಜೆ ಆಗಿತ್ತ'— ಎಂಬುದರ ಅಣುಕು ಕೇಳಿ ಥಕ್ಕಾದೆ. ಆಗ ನಗದವರೆ ಪಾಪಿಗಳು ! ನಾಟಕದ ವಿಷಯ ಸಂಪೂರ್ಣ ಕಾಲೇಜ ಜೀವನ. ಎಲ್ಲಿಯೂ ಗಾಂಭೀರ್ಯಕ್ಕೆ ಎಡೆ ಇಲ್ಲ. ಆದರೆ ರಸ ಮಯ ಸೃಜ ಚಿತ್ರಣ. ಮುಂದೆ ಬಹುಶಃ ಎನ್ಕೆ ಅವರಿಗೆ ಈ 'ಮೂಡು' ಉಳಿದಿರ ಲಿಕ್ಕಿಲ್ಲ. ಎಷ್ಟೋ ಏಕೋಕ್ತಿದೃಶ್ಯ (Soliloquy), ಏಕಾಂಕ ಬರೆದರು. ಆದರೆ ಈ ಆತ್ಮೀಯತೆಯ, ಸಲುಗೆಯ, ಉತ್ಸಾಹದ ಮಿಂಚು ಏಕೋ ಉಳಿಯಲಿಲ್ಲ ! ಅದು ಅವರ ತಪ್ಪಲ್ಲ. ಕಾಲಚಕ್ರದ ದೋಷ.

ಇರಲಿ, ಧಾರವಾಡ ಬಿಟ್ಟರೂ ಕೂಡ ಎನ್ಕೆ ಅವರ ಸಂಪರ್ಕ ನನಗೆ ಸಾಧಿಸಿದುದು ಮನನೀಯ ಅಂಶ. ಮುಂಬಯಿಯಲ್ಲಿದ್ದಾಗಲೂ ಧಾರವಾಡ ನಿವಾಸಿ ಆದ. ಶಿಕ್ಷಕವೃತ್ತಿ ಯಲ್ಲಿಯ ನನ್ನ ಸಂಬಂಧ ಮರೆಯಲಿಲ್ಲ. ಅವರು ಹಳೆಯ ದೈವಿ ಗೆಳೆತನ ನೆನಪಿಟ್ಟು ಔದಾರ್ಯದಿಂದ ಆಕಾಶವಾಣಿಗೆ ಲೇಖನ ಕಳಿಸೆಂದು ಹೇಳುತ್ತಿದ್ದರು.ಅವುಗಳೊ? ಪೂರ್ಣ ವಿನೋದ ಪ್ರಚುರ. ಅಂತೇ 'Airy nothingness'. ಆದರೆ ಸಾಮಾನ್ಯ ಜನತೆಗೆ ವಿದ್ವನ್ಮಯ ಲೇಖನದಿಂದ ಏನು ಪ್ರಯೋಜನ ? ಆಗಲೆ ನಾನು 'ಶುಂಭ ಹುಂಬ'ರ ಮೇಲೆ ಲೇಖನಮಾಲೆ ಬರೆದೆ. ಅನಂತರ ಧಾರವಾಡಕ್ಕೆ ಬಂದ ಮೇಲೂ ನನ್ನಂತಹ ಸಾಮಾನ್ಯ ಮಟ್ಟದ ಲೇಖಕನನ್ನು ಅವರು ಮರೆಯಲಿಲ್ಲ. ಸಂಸ್ಕೃತ ಕಾವ್ಯಗಳ ಬಗೆಗೆ ಸಂಭಾಷಣೆ ಬರೆಯಿಸಿದರು ನನ್ನಿಂದ. ಹೆಚ್ಚೇನು ?

ಮುಖ್ಯವಾಗಿ ಎನ್ಕೆಯವರ ಬರವಣಿಗೆ ಬಹುಮುಖವಾದುದು. ಅತ್ಯಂತ ರಂಜಕ. ಇಂತಹ ವೈವಿಧ್ಯ ತೀರ ಹಲವರದೇ ಸೊತ್ತು ಸರಿ. ಸರಳ ರಗಳೆಯಲ್ಲಿಯೇ ವಿಡಂಬ ನಾತ್ಮಕ ನಾಟಕ ರಚಿಸಿ, ರಂಗಕ್ಕೆತಂದುದು ಎನ್ಕೆಯವರ ಹೆಗ್ಗಳಿಕೆ, ವೈಶಿಷ್ಟ್ಯ. ಕನ್ನಡದ ಅತ್ಯಾಧುನಿಕ ಸಾಹಿತ್ಯ ರಂಗದಲ್ಲಿಯೇ ಇಂತಹ ಕಲಾಕೃತಿಗಳು ವಿರಳ. ವಿನೋದ, ಪಾಂಡಿತ್ಯ, ಸಾಮಾಜಿಕ ಪ್ರಜ್ಞೆಯ ತ್ರಿವೇಣಿ ಸಂಗಮ ಅವರ ನಾಟ್ಯರಂಗ, ಎಂದರೆ ಸರಿ ಯಾದ ವಿಮರ್ಶೆ.

ಎನ್ಕೆ ಅವರಿಗೆ ಮೊದಲಿನಿಂದಲೆ ಕುಮಾರವ್ಯಾಸನ ಮೇಲೆ ದೈವೀ ವಾತ್ಸಲ್ಯ. ಏಕೋ ಅವನ ಬಗೆಗೇ ಬರೆದು ಅವರು ಪಿಎಚ್.ಡಿ. ಪಡೆಯಲಿಲ್ಲ ! ಆದರೆ ಅವನ ಪ್ರತಿಭೆಯ ಅಭ್ಯಾಸಕ್ಕೆ ಜೀವನ ಮುಡಿಪಾಗಿ ಇರಿಸಿದುದು ಗಮನಾರ್ಹ ಅಂಶ. ಅವನ ಬಗೆಗೆ ಎಷ್ಟು ಬರೆದರೂ ಎನ್ಕೆ ಅವರಿಗೆ ಬೇಸರದ ಲವಲೇಶವಿಲ್ಲ. ಬಿಟ್ಟರೇ ಹಳಹಳಿ! ಸರಿ ಅವರ ಅಭ್ಯಾಸದ ಧರ್ತಿಯನ್ನು ಕಂಡಾಗ ಸಹಜವಾಗಿ ನನಗೆ 'ಶ್ರೀಕೃಷ್ಣರಾಯ

ಭಾರತವಲ್ಲಿಯ ವಿದುರನ ಅಪ್ರತಿಮ ಭಕ್ತಿಯು ನೆನಪು ಮಿಂಚುವದು. ಕೃಷ್ಣನನ್ನು ಎಷ್ಟು ಕಂಡರೂ ಅವನಿಗೆ ತೃಪ್ತಿಯು ಲವಲೇಶವಿಲ್ಲ.

"ಕೊಡೆ ಕುಣಿದನು ಮನೆಯ ಮುರಿದೀ
ಡಾಡಿದನು ಮೈಮರೆದ ಹರುಷದ
ಗಾಡಿಕೆಯುಲಪ್ರತಿಮನೆಸೆದನು ಬಕುತಿ ಕೇಳಿಯಲಿ"

ಎಂಬ ಪಂಕ್ತಿಗಳು ನೆನಪಿಗೆ ಬರುವವು. ಏನು ದೈವೀ ವ್ಯಾಮೋಹ ! ಹಾಗೇ

"ಸಿರಿ ಮೊಗದ ಕಿರು ಬೆಮರ ತೇಜಿಯ
ಖುರಪುಟದ ಕೆಂಧೂಳಿ ಸೋಂಕಿದ
ಸಿರಿ ಮುಡಿಯು ಕುಡಿ ಮೀಸೆಯಲಿ ಕೆಂಪಡರ್ದ ರೇಣುಗಳ
ಖರ ಮರೀಚಿಯ ಜಳಕೆ ಬಾಡಿದ
ತರುಣ ತುಲಸಿಯ ದಂಡೆಯೊಪ್ಪುವ
ಗರುವ ದೇವನ ಬರವ ಕಂಡನು ಬಾಗಿಲಲಿ ವಿದುರ"

—ಎಂಬ ಕೃಷ್ಣನ ಮೇಲಿನ ಭಕ್ತಿಯ ಉತ್ಕಟತೆ, ಕುಮಾರವ್ಯಾಸನ ಬಗೆಗಿನ ದೈವಿಕ ಪಾಂಡಿತ್ಯಕ್ಕೆ ಸರಿದೊರೆ ಎನಿಸುವದು. ಎಂತಹ ಅನ್ಯಾದೃಶ ಪ್ರೇಮ !

ಎನ್ಕೆ ಅವರ ವ್ಯಕ್ತಿತ್ವದ ಯಾವ ಅಂಶದ ಮೈಮರೆವು ಒಮ್ಮೊಮ್ಮೆ ಆದರೂ ಅವರ ಮಾತುಗಾರಿಕೆಯ ಜಾದೂಗಾರಿಕೆ ಎಂದೂ ಸಂಸ್ಮರಣೀಯ. 'Be brief, be bright, be gone' ಎಂಬುದು ಅವರ ತತ್ವ. ಆದರೂ ಹೇಳುವದನ್ನು ಅಚ್ಚು ಕಟ್ಟಾಗಿ, ಮಾರ್ಮಿಕವಾಗಿ, ವಿಮರ್ಶಾತ್ಮಕವಾಗಿ–ಖೊಟ್ಟಿ ಆಗದೆ ಹೇಳುವ ಕಲೆ— ಹೇಳದೆ ಬಿಡರು. ಕುರುಡು ಅನುಸರಣೆಗೂ ಎನ್ಕೆ ಅವರ ರಸವಂತಿಕೆಗೂ ಅಜ ಗಜಾಂತರ !

ಕೊನೆಗೆ ಏನು ಬರೆದರೂ ಎನ್ಕೆ ಅವರು ಸಜೀವತೆಯನ್ನು ಬಿಟ್ಟುಕೊಡರು. 'He touched nothing that he did not adorn' –ಎಂಬ ಸರಸ ಕಾದಂಬರಿ ಕಾರ ಆಲಿವ್ಹರ ಗೋಲ್ಡ್ ಸ್ಮಿಥ್‌ನ ಧರ್ತಿ ಎನ್ಕೆ ಅವರದು. ಹಾಗೆ ನಿತ್ಯದ ಮಾತಿ ನಲ್ಲಿಯೂ ಅಪೂರ್ವ ಮಾರ್ದವತೆ. ಈ ಮಾನದಿಂದ ಅವರು ಕನ್ನಡದ ಆಸ್ತಿ ಮಾಸ್ತಿ ಅವರಿಗೆ ಸರಿ ಸರಿ. ಈ ದೊಡ್ಡ ಗುಣವಿಲ್ಲದ್ದಕ್ಕೇ ಲೋಕಪ್ರಿಯತೆಗೆ ಎರವಾದ ಜಾಗತಿಕ ಮಟ್ಟದ ಲೇಖಕರು ಎಷ್ಟು ಜನರಿಲ್ಲ ?

# ಎನ್ಕೆ–ಎ–ನಗೆ

ಚಂದ್ರಮೌಳಿ ನಾಯ್ಕರ

೧೯೬೮–೬೯ರ ವರ್ಷ ನಾನು ಕರ್ನಾಟಕ ಕಾಲೇಜಿನಲ್ಲಿ ಪ್ರಥಮ ವರ್ಷ ಓದಲು ಬಂದೆ. ಮೊದಲನೆ ದಿನ ಕ್ಲಾಸಿನಲ್ಲಿ ಮುಂದಿನ ಡೆಸ್ಕಿನಲ್ಲಿ ನಾನು ಕುಳಿತಾಗ ಒಬ್ಬ ಅತಿ ನೀಳವಾದ ಗಿಳಿಮೂಗಿನ ವಿದ್ಯಾರ್ಥಿ ಬಂದು ನನ್ನ ಪಕ್ಕದಲ್ಲಿ ಕುಳಿತರು. ನಾನು ಯಾವ ಊರಿನವನು, ಏನು ಹೆಸರು ಇತ್ಯಾದಿಯಾಗಿ ಕೇಳಿದ್ದಕ್ಕೆ ಉತ್ತರಿಸಿದೆ. ಆಮೇಲೆ ನಾನೂ ಅವರ ಊರ ಹೆಸರು, ಹೆಸರು ಕೇಳಿದ್ದಕ್ಕೆ ಉತ್ತರಿಸಿ, 'ನಾನು ಎನ್ಕೆಯವರ ಮಗ' ಅಂದರು. ಹೆಸರು ಮೊದಲು ವಿಚಿತ್ರವೆನಿಸಿದರೂ ಪರಿಚಿತ ಹೆಸರಾದುದರಿಂದ ಪ್ರತ್ಯಕ್ಷವಾಗಿ ಅಪ್ರತ್ಯಕ್ಷವಾಗಿ ಆ ಹೆಸರಿನ ಬಗ್ಗೆ ಇದ್ದ ನನ್ನ ಕುತೂಹಲಕ್ಕೆ ಸ್ಫೂರ್ತಿ ದೊರೆತಂತಾಯಿತು. ರೇಡಿಯೋದಲ್ಲಿ ಪ್ರಸಾರಗೊಳ್ಳುವ ವಿಚಾರ ದೀಪಿಕೆಯಲ್ಲಿ ಶ್ರೀರಾಮನ ವನವಾಸ, ಪತ್ನಿ ಪರಿತ್ಯಾಗ, ಔದಾರ್ಯಾದಿಗಳ ವಿಷಯವಾಗಿ ಸ್ವಾರಸ್ಯಕರವಾಗಿ, ಹೃದಯಸ್ಪರ್ಶಿಯಾದ ವಿಚಾರಗಳನ್ನು ಹೇಳುತ್ತ ಒಗಟೆನಂತಿರುವ ಜೀವನದ ಅನೇಕ ಮೌಲ್ಯಗಳನ್ನೂ ರಹಸ್ಯಗಳನ್ನು ಕೇಳಿದ್ದ ನನಗೆ ಎನ್ಕೆಯವರನ್ನು ಕಾಣುವ ಹಂಬಲ ಬಹಳವಾಗಿದ್ದರೂ, ಹೇಗೆ ಕಾಣಬೇಕೆಂದು ಗೊಂದಲಕ್ಕೆ ಬಿದ್ದಿದ್ದೆ. ಅಲ್ಲದೆ 'ನಾನಿಕಾಕಾ' ಎಂದು ಪ್ರಸಿದ್ಧಗೊಂಡ ಚಿರಪರಿಚಿತ ವ್ಯಕ್ತಿಯ ಬಗ್ಗೆಯೂ ನನಗೆ ಒಂದು ಥರ ಧ್ವನಿಯ ಸಾಮ್ಯದಿಂದಾಗಿ ಎನ್ಕೆ ಅಂದರೆ ಯಾರು ? ಮತ್ತು 'ನಾನಿಕಾಕಾ' ಅಂದರೆ ಯಾರು ? ಎಂದು ಸಂದೇಹವುಂಟಾದ ಒಂದು ಪರಿಸ್ಥಿತಿಯಲ್ಲಿ 'ಎನ್ಕೆಯವರ ಮಗ' ಎಂದು ಹೇಳುವ ಒಬ್ಬರು ಸಿಕ್ಕ ಕೂಡಲೇ ನನಗೆ 'ಹುಡಿಕ್ಯಾಡುವ ಬಳ್ಳಿ ಕಾಲಾಗ ತೊಡಕ್ಯಾಡಿಕೊಂಡಿತ್ತಂತ' ಅನ್ನುವ ಗಾದೆ ಮಾತು ನೆನಪಾಯಿತು.

ಆ ದಿನ ನಮ್ಮ ಕ್ಲಾಸುಗಳು ನಡೆಯಲಿಲ್ಲ. ಆದರೆ ಸೂಟು ಧರಿಸಿದ ಒಬ್ಬರು ಬಂದರು. ಅವರ ಹಿಂದೆ ಹತ್ತೆಂಟು ಜನ ದೊಡ್ಡವರಂತೆ ಕಾಣುವ ವ್ಯಕ್ತಿಗಳು ಬಂದು ನಮ್ಮ ಕ್ಲಾಸಿನಲ್ಲಿ ಕುಳಿತರು. ಸೂಟು ಧರಿಸಿದವರು 'ಮಟಕಾಲಾಜಿ' ಎಂಬ ವಿಷಯದ ಮೇಲೆ ತಮ್ಮ ಉಪನ್ಯಾಸ ಆರಂಭಿಸಿದರು. ನಮಗಂತೂ 'ಮಟಕಾಲಾಜಿ' ಅಂದರೇನೆಂಬುದೇ ತಿಳಿದಿದ್ದಿಲ್ಲ. ಮಧ್ಯದಲ್ಲಿ ಹಿಂದೆ ಕುಳಿತಿದ್ದ ದೊಡ್ಡ ವ್ಯಕ್ತಿಗಳಂಥ ವಿದ್ಯಾರ್ಥಿಗಳು ನಗುತ್ತಿದ್ದರು. ನಾನು ಕೊನೆಗೆ ನನ್ನ ಪಕ್ಕದಲ್ಲಿ ಕುಳಿತ, 'ಎನ್ಕೆ ಅವರ ಮಗ'

ಅವರನ್ನು 'ಇವರು ಯಾರು ?' ಎಂದು ಕೇಳಿದಾಗ ನಗುತ್ತ, 'ಅವರು ನಮ್ಮ ಕಾಕಾ' ಅಂದರು. ನಾನು ಕೇಳಿದೆ, 'ನಿಮ್ಮ ಕಾಕಾ ಏನಿದ್ದಾರೆ ?' ಆಗ ಅವರು ಒಂದು ಥರಾ ಗಾಬರಿಗೊಂಡಂತೆ ವರ್ತಿಸಿ ಸಾವರಿಸಿಕೊಂಡು, 'ನಮ್ಮ ತಂದೆಯವರಿಗೆ ನಾವು ಕಾಕಾ ಅನ್ನುತ್ತೇವೆ' ಅಂದರು. ಆಗ ನನಗೆ ತಕ್ಷಣ 'ನಾನಿಕಾಕಾ' ಅವರ ನೆನಪಾಗಿ ಕೇಳಿಯೇ ಬಿಟ್ಟೆ. 'ಆ ರೇಡಿಯೋದಲ್ಲಿಯ ನಾನಿಕಾಕಾ ನಿಮ್ಮ ಕಾಕಾ ಅವರಿಗೆ ಏನಾದರೂ ಸಂಬಂಧವೆ ? ಯಾಕಂದರೆ ನಿಮ್ಮ ಕಾಕಾ ಹಾಗೂ ನಾನಿಕಾಕಾ ಅವರ ಧ್ವನಿಯೂ ಒಂದೇ ರೀತಿಯಾಗಿದೆ' ಅಂದೆ. ಆಗ ಅವರು ಹೇಳಿದರು, 'ಎಸ್ಕೆಯವರು ನಾನಿಕಾಕಾ ಆದದ್ದಕ್ಕೆ ನಾವೂ ಅವರಿಗೆ ಮನೆಯಲ್ಲಿ ಕಾಕಾ ಎಂದು ಕರೆಯುತ್ತೇವೆ'.

ಮಾರನೇ ದಿನ ನಾನು ಕ್ಲಾಸಿಗೆ ಹೋದಾಗ ನನ್ನ ನಿನ್ನೆಯ ಸ್ನೇಹಿತರು ರವಿ ಕುಲಕರ್ಣಿಯವರು ಬಂದರು. ಇಬ್ಬರೂ ಒಂದೇ ಡೆಸ್ಕಿನಲ್ಲಿ ಕುಳಿತೆವು. ಅಂದೂ ಕ್ಲಾಸು ಗಳು ನಡೆಯಲಿಲ್ಲ. ಆದ್ದರಿಂದ ನಾವಿಬ್ಬರೂ ಮಾತನಾಡುತ್ತ ಅವರ ಮನೆಗೆ ಹೋದೆವು. ರವಿ ನನ್ನ ಪರಿಚಯ ಮಾಡಿಸಿದಾಗ ಅತ್ಯಂತ ತುಂಬು ನಗೆಯಿಂದ ಹಾರ್ದಿಕವಾಗಿ ನನ್ನನ್ನು ಮಾತನಾಡಿಸುತ್ತ ನನ್ನ ಪರಿಚಯ ಮಾಡಿಕೊಂಡರು. ಎಸ್ಕೆಯವರು ನನಗೆ ಅತ್ಯಂತ ಆದರದ ಆತಿಥ್ಯ ಮಾಡಿದರು.

ಅವರು ಆಗ ಇನ್ನೂ 'ಪ್ರೋಗ್ರಾಂ ಎಗ್ಝಿಕ್ಯೂಟಿವ್' ಇದ್ದರು. ನನಗೆ ಸಂಸ್ಕೃತ ಪಾಠಗಳಲ್ಲಿ ಭಾಗವಹಿಸಲು ಅನುಕೂಲ ಮಾಡಿಕೊಟ್ಟರು. ಆಗಾಗ ನನಗೆ ರಾಮಾ ಯಣದ ಅಂಶಗಳನ್ನು ಹೇಳಿಕೊಟ್ಟರು. ಅವರ ಸಂಸ್ಕೃತದ ಪಾಂಡಿತ್ಯ ನನಗೆ ಹೆಚ್ಚಿನ ಹೆಮ್ಮೆ ತಂದಿತು.

ಎಸ್ಕೆಯವರು ಕರ್ನಾಟಕ ಕಾಲೇಜಿನ ಬಿಡುವಿನ ವೇಳೆಯಾದ ಮಧ್ಯಾಹ್ನದ ೨ ರಿಂದ ೨-೩೦ರವರೆಗೆ ನಡೆಯುವ ಕಾಲೇಜು ವಿದ್ಯಾರ್ಥಿಗಳ ವಿನೋದಾವಳಿಗಳ ಬಗ್ಗೆ ಬರೆದ ಲೇಖನ ಬಹು ಜನಪ್ರಿಯವಾಗಿತ್ತು. ಅವರ ರಸಿಕತನವನ್ನು ಮೆಚ್ಚದಿರಲಿಕ್ಕೆ ಸಾಧ್ಯವಿಲ್ಲ. ಯಾವದೇ ವಿಷಯವನ್ನು ಹಾಸ್ಯಮಯವಾಗಿ ಹೇಳಬಲ್ಲ ಅವರ ಚಾತುರ್ಯ, ಯಾವದೇ ವಿಷಯದ ಬಗ್ಗೆ ಮಾತನಾಡಲು ಹೇಳಿ ೫-೧೦ ಮಿನಿಟುಗಳಲ್ಲಿ ನಾಲ್ಕಾರು ತಾಸುಗಳವರೆಗೆ ನಿರರ್ಗಳವಾಗಿ ಮಾತನಾಡುವ ಅವರ ಮಾತುಗಾರಿಕೆ, ಅವರ ವೈಚಾರಿಕ ಪ್ರಜ್ಞೆ ಇವು ಅದ್ಭುತವೆಂದು ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಅವರು ಹಾರಿಸುವ ಮಾತಿನ ಚಟಾಕಿಗಳು ಸಂಪೂರ್ಣ ನವೀನತರವಾದವುಗಳು. ಅವರ ಭಾಷಣ ವನ್ನು ನಾನು ನೂರಾರು ಸಲ ಕೇಳಿರುವೆ. ಸದಾ ಹಸನ್ಮುಖಿಯಾಗಿ ರಸಿಕತೆಯ ನುಡಿ ಗಳನ್ನಾಡುತ್ತ ಜೀವನದ ಮೌಲ್ಯಗಳನ್ನು ಹೇಳುವ ಅವರ ಮಾತುಗಳು ಆಕರ್ಷಕ ವಾಗಿರುತ್ತವೆ.

ನನಗೆಷ್ಟೊ ಸಾರೆ ಅನಿಸಿದೆ. ಎಲ್ಲ ತರಹದ ಯೋಗ್ಯತೆಯಿರುವ ಎಸ್ಕೆಯವರು ಹಿರಿಯರು. ಆದರೂ ಅವರಂಥವರಿಗೆ ಆಕಾಶವಾಣಿಯ ನಿರ್ದೇಶಕರ ಪದವಿ ದೊರೆ

ಯದೇ ಹೋದುದು ಬಹು ಆಶ್ಚರ್ಯದ ಸಂಗತಿಯಾದರೂ ಅವರು ಯಾವ ನಿರ್ದೇಶಕರಿಗೂ ಕಡಿಮೆಯಿರದ ಪಾಂಡಿತ್ಯ, ಯೋಗ್ಯತೆಯನ್ನು ಹೊಂದಿರುವರೆಂದು ಹೇಳಿದರೆ ಅತಿಶಯೋಕ್ತಿಯೆನಿಸಲಾರದು. ಗಾಂಧೀಜಿಯ ವಿಷಯವಾಗಿ ಬರೆದ ಅವರ ಕವನ 'ಮುಕ್ತಳಾದಳೊ ಭಾರತ ಮಾತಾ ಇದು ಗಾಂಧೀಗೀತ' ನನಗಂತೂ ಹುಚ್ಚುಹಿಡಿಸಿತ್ತು. ಅವರ ಏಕಾಂಕ, ಪೂರ್ಣಾವಧಿ ನಾಟಕ, ಕಾದಂಬರಿ, ಹರಟೆ, ವಿಮರ್ಶೆ, ಸಾಹಿತ್ಯಚರಿತ್ರೆ, ಜೀವನಚರಿತ್ರೆ ಇತ್ಯಾದಿಗಳು ಅವರ ಸಾಹಿತ್ಯ ಸೇವೆಯ ಸಿದ್ಧಿಗಳಾಗಿವೆ. ಇಷ್ಟೆಲ್ಲ ತಿಳಿದರೂ ಅವರ ವೈಯಕ್ತಿಕ ಬದುಕಿನ ನೋವುಗಳನ್ನು ಅರಿತಾಗ ಶ್ರೀಸಾಮಾನ್ಯನಿಗೂ ಹೃದಯ ಕರಗಿ ಬರುವದು. ದುರಂತಗಳನ್ನು ಸಹಿಸಿ ಎದುರಿಸಿದ ನಿರ್ಭಾಗ್ಯರಾದರೂ, ರಸಿಕತೆಯನ್ನು ಬಿಡದ ಶಿಖಾಮಣಿ. ಎಲ್ಲ ಕಷ್ಟಗಳಲ್ಲಿ ನೋವುಗಳನ್ನು ಬದಿಗೊತ್ತಿ ನಲಿವಿನ ಸಂತಸದ ಚಿತ್ರಗಳನ್ನು ಕೇಳುಗರಿಗೆ, ಓದುಗರಿಗೆ ಮತ್ತು ಪ್ರೇಕ್ಷಕರಿಗೆ ನೀಡಿದ ಕೀರ್ತಿ ಎನ್ಕೆಯವರಿಗೆ ಸಲ್ಲುತ್ತದೆ.




# ನೋವುಂಡ ನಗೆಗಾರ

ಬಿ. ಆರ್. ನಾಡಗೌಡ

೧೯೪೮-೪೯ನೆಯ ಇಸ್ವಿಯಲ್ಲಿ– ನಾನು ಅದೇ ಹಾಯಸ್ಕೂಲಿಗೆ ಕಾಲಿಟ್ಟ ವರ್ಷ– ಎನ್ಕೆಯವರ ಉಪನ್ಯಾಸವೊಂದು ವಿಜಾಪೂರದಲ್ಲಿ ಶಪರ್ಡ ಹಾಲಿನಲ್ಲಿ ಏರ್ಪಡಿಸಲಾಗಿದೆ ಯೆಂದು ಕೇಳಿ ಸಂಜೆ ಅಲ್ಲಿಗೆ ಓಡಿದೆ. ಮೈಕಿನ ವ್ಯವಸ್ಥೆ ಇರಲಿಲ್ಲ. ದೂರದಲ್ಲಿ ನಿಂತು ಮಂದ ಬೆಳಕಿನಲ್ಲಿ ಅವರನ್ನು ನೋಡಿದೆ. ಅಷ್ಟಿಷ್ಟು ಧ್ವನಿಯೂ ಕೇಳಿಸಿತು. ಉಪನ್ಯಾಸದ ವಿಷಯ ಸ್ಪಷ್ಟವಾಗದಿದ್ದರೂ ಅವರನ್ನು ನೋಡಿದೆ ಎನ್ನುವ ಸಂತೋಷ ಭಾವ ನನ್ನಲ್ಲಿ ಮೂಡಿತ್ತು. ಅದಾಗಲೇ ಅವರ 'ಗ್ರೀನ ರೂಂ' ಎಂಬ ಲಘು ಹರಟೆ, ಹಾಗೂ ಕಿರು ಏಕಾಂಕ ನಾಟಕವೊಂದನ್ನು ಓದಿದ್ದೆ. ಅವರ ಒಂದೆರಡು ಭಾವಗೀತೆ ಗಳನ್ನೂ ಕಲಾವಿದರು ಹಾಡಿದ್ದನ್ನು ಕೇಳಿದ್ದೆ. ನಾನು ಬೆಳೆದಂತೆ ಎನ್ಕೆಯವರ ಸಾಹಿತ್ಯ ವೈವಿಧ್ಯವನ್ನು ಹರಟೆ, ಕಾದಂಬರಿ (ಸಾವಿನ ಉಡಿಯಲ್ಲಿ, ವೈನಿ) ನಾಟಕ (ಪಲ್ಲವಿ, ಕಸಿಹೃದಯ ಕಣ್ತೆರೆದಿತ್ತು.) ಕುಮಾರವ್ಯಾಸನ ಬಗೆಗಿನ ರೂಪಕ ಹಾಗೂ ಗದ್ಯಾನು ವಾದ, ಸಂದರ್ಶನ— ಬೇಂದ್ರೆಯವರಂಥ ಸಾಹಿತಿಗಳ, ಹಾಗೂ ಕಲಾವಿದ ಮುಂತಾ ದವರ– ಓದಿ ಆಕಾಶವಾಣಿಯಲ್ಲಿ ಕೇಳಿ– ಸಂತೋಷಪಟ್ಟಿದ್ದೇನೆ. ಇಷ್ಟೇ ಅಲ್ಲ ನನ್ನನ್ನು ಪ್ರಭಾವಿತಗೊಳಿಸಿದವರಲ್ಲಿ ಅವರೂ ಒಬ್ಬರು. ಪಿ.ಡಿ.ಜೆ. ಹಾಯಸ್ಕೂಲಿನ ಸುವರ್ಣ ಮಹೋತ್ಸವದಲ್ಲಿ ಹಿಂದಿನ ವಿದ್ಯಾರ್ಥಿಗಳ ಪರವಾಗಿ ಎನ್ಕೆಯವರ ನಗೆಯು ನಾಟಕ ಮಾಡಿ ದಿ. ತಿರುಮಲೆ ತಾತಾಚಾರ್ಯರಿಂದ 'ಶಹಾಭಾಸಗಿರಿ' ಪಡೆದುದೂ ನನ್ನ ಸುದೈವ ವೆಂದೇ ಭಾವಿಸಿದ್ದೇನೆ.

ಆಕಾಶವಾಣಿಯಿಂದ ಅವರು ನಿವೃತ್ತರಾಗುವ ಸಂದರ್ಭದಲ್ಲಿ ಆಕಾಶವಾಣಿಯಲ್ಲಿ ಶ್ರೋತೃಗಳನ್ನು ಬೀಳ್ಕೊಡುವಾಗ ತಮ್ಮ ಅನುಭವಗಳನ್ನು, ತಾವು ನೆರವೇರಿಸಿದ ತಮ್ಮ ಕರ್ತವ್ಯವನ್ನು ವಿವರಿಸುತ್ತ, ಸುದೀರ್ಘ ಸೇವೆಯನ್ನು ಸಮಾಪನಗೊಳಿಸಿ ಬೀಳ್ಕೊಂಡಾಗ ನಮ್ಮ ಆತ್ಮೀಯರೊಬ್ಬರು ನಮ್ಮೊಡನೆ ಮಾತನಾಡಿ ನಗಿಸಿ ಹರಟೆ ಹೊಡೆದು ನಮ್ಮ ಮನೆಯಿಂದಲೇ ಹೊರಟು ಹೋದ ಅನುಭವವಾದಾಗ ನನ್ನ ಕಣ್ಣು ಗಳು ತೇವಗೊಂಡಿದ್ದವು. ಅನಂತರ ಅನೇಕರು ಭೇಟಿಯಾದಾಗ ಈ ವಿಷಯ ಕುರಿತು ಮಾತನಾಡಿದಾಗ ನನ್ನ ಅನುಭವವೇ ಅವರದೂ ಆಗಿತ್ತು. ಆಕಾಶವಾಣಿಯ

ಮುಖಾಂತರ ಪ್ರತಿಯೊಬ್ಬ ಕೇಳುಗನ ಹೃದಯವನ್ನು ಅವರು ಹೀಗೆ ನೇರವಾಗಿ ತಟ್ಟಿದ್ದರು.

ಹಾಗೆ ನೋಡಿದರೆ ಅವರನ್ನು ಸಮಕ್ಷಮ ಭೆಟ್ಟಿಯಾಗಿ ಮಾತನಾಡಿದ್ದು ಹನ್ನೆರಡು ಹದಿಮೂರು ವರ್ಷಗಳ ಹಿಂದೆ– ಅವರ ನಿವೃತ್ತಿಯ ನಂತರವೇ. ಆ ದಿನ ಯು.ಬಿ. ಹಿಲ್ ರೋಡ (ಉಳವಿ ಬಸಪ್ಪನ ಗುಡ್ಡದ ಹಾದಿ) ಮೇಲೆ ಇದ್ದ ಅವರ ಮನೆಯ ಕರೆ ಗಂಟೆಯನ್ನು ಕಿಣಿಕಿಣಿಸಿದಾಗ ಅವರೇ ಬಂದು ಬಾಗಿಲು ತೆರೆದು, ಕರೆದು ಕೂಡಿಸಿಕೊಂಡು ಆತ್ಮೀಯವಾಗಿ ಮಾತನಾಡಿದರು. ಮಧುರ ಧ್ವನಿ, ನಗುಮುಖ; ಯಾವ ಕೃತ್ರಿಮ ಉಪಚಾರವೂ ಇಲ್ಲದ ಅವರ ಮಾತುಗಳು ನನ್ನ ಮೇಲೆ ಇನ್ನಷ್ಟು ಪರಿಣಾಮವನ್ನುಂಟು ಮಾಡಿದವು. ಅದೇ ಸಂದರ್ಭದಲ್ಲಿ ಸಿಂದಗಿಯ ಭಾರತೀಯ ಸಂಸ್ಕೃತಿ ಪ್ರಸಾರ ಮಂಡಳದ ಆಶ್ರಯದಲ್ಲಿ ಅವರನ್ನು ಉಪನ್ಯಾಸಕ್ಕಾಗಿ ಆಹ್ವಾನಿಸಿದೆ. ಅವರು ಸಂತೋಷದಿಂದ ಒಪ್ಪಿಕೊಂಡು ಬಂದರು. ಅವರು 'ನಮ್ಮ ಸಂಸ್ಕೃತಿ' ಎಂಬ ವಿಷಯವನ್ನು ಕುರಿತು ಮಾತನಾಡುತ್ತ ಆಕಾಶವಾಣಿ, ಚಲನಚಿತ್ರ, ಹಾಗೂ ರಂಗಭೂಮಿಗಳ ಮಾಧ್ಯಮದಿಂದ ಜನಸಾಮಾನ್ಯರಿಗೆ ಹೇಗೆ ಸಂಸ್ಕಾರ ಕೊಡಬಹುದು ಎಂಬುದನ್ನು ಅನೇಕ ಉದಾಹರಣೆಗಳಿಂದ ವಿವರಿಸಿದರು. ಅದರ ಜೊತೆಗೇ ಚಲನಚಿತ್ರದಲ್ಲಿನ ಸಂಕೇತಗಳನ್ನು ಅರ್ಥೈಸಿದರು. ಅಂದು ಕೂಡ ವಿದ್ಯುತ್ ಪೂರೈಕೆಯ ವ್ಯತ್ಯಯ ಸ್ವಲ್ಪ ಹುಟ್ಟಿಗಾದರೂ ಕಿಕ್ಕಿರಿದು ನೆರೆದ ಶ್ರೋತೃಗಳು ಅವರ ತಿಳಿ ಹಾಸ್ಯದ, ಅಷ್ಟೇ ಅರ್ಥಪೂರ್ಣವಾದ ಅವರ ಉಪನ್ಯಾಸವನ್ನು ಶಾಂತವಾಗಿ ಕೇಳಿದರು. ಅಂದಿನ ಸಭೆಯ ಅಧ್ಯಕ್ಷತೆಯನ್ನು ಶ್ರೀ. ಬಿ. ನಾಯಕರು ವಹಿಸಿದ್ದರು. ಪ್ರಾರಂಭದಲ್ಲಿ ಮಾಲಾರ್ಪಣೆ ನಡೆದಾಗ ಅವರ ಅಭಿಮಾನಿಗಳೊಬ್ಬರು "ಸದಾ ಮಲ್ಲಿಗೆ" ಹಾರವನ್ನೂ ಜೊತೆಗೆ ಚೀಟಿಯನ್ನು ಕಳಿಸಿ ತಮ್ಮ ಪರವಾಗಿ ಮಾಲಾರ್ಪಣೆ ಮಾಡಬೇಕೆಂದು ಕೇಳಿಕೊಂಡಿದ್ದರು. ನನಗೆ ಸ್ವಲ್ಪ ಮುಜುಗರವಾಯಿತು. 'ಸದಾ ಮಲ್ಲಿಗೆ'ಯ ಹಾರವನ್ನು ಹೇಗೆ ಹಾಕಬೇಕೆಂದು ಹಾಗೇ ಕ್ಷಣಕಾಲ ನಿಂತು ಅದನ್ನು ಮೇಜಿನ ಮೇಲೆ ಇಡುವಾಗ ಎನ್ಕೆಯವರು ಎದ್ದು ನಿಂತು "ಪಾಪ ಅಭಿಮಾನದಿಂದ ಕಳಿಸ್ಯಾರ ಹಾಕ್ರಿ" ಎಂದರು. ನಾನು ಹಾರ ತೆಗೆದುಕೊಂಡು ಹಾಕಿದಾಗ ಆ ಅಭಿಮಾನಿಗಳಿಗೆ ಅದೆಷ್ಟು ಸಂತೋಷ! ಅಂದು ಊರಲ್ಲಿ ಬೇರೆ ಹೂಗಳೇ ಸಿಗಲಿಲ್ಲವೆಂದೂ ತಮ್ಮ ನೆಚ್ಚಿನ ಸಾಹಿತಿಗೆ ಹಾರ ಹಾಕದೇ ಇದ್ದರೆ ತಮ್ಮ ಮನಸ್ಸಿಗೆ ಹಳಹಳಿಯಾಗುತ್ತಿತ್ತೆಂದೂ ಆಮೇಲೆ ಅವರು ಹೇಳಿದರು. ಹಾರ ಹಾಕದೇ ಇದ್ದರೆ ನನ್ನಿಂದ ಪ್ರಮಾದವೇ ಆಗುತ್ತಿತ್ತು. ಎನ್ಕೆಯವರ ಪ್ರಸಂಗಾವಧಾನದಿಂದ ತಪ್ಪಿತು.

ಆನಂತರ ಎನ್ಕೆಯವರ ಭೇಟಿ ಧಾರವಾಡಕ್ಕೆ ಹೋದಾಗೊಮ್ಮೆ ಆಗುತ್ತದೆ. ನನಗೆ ಹಿರಿಯರೊಬ್ಬರನ್ನು ಕಂಡ ಸಂತಸವಾಗುತ್ತದೆ. ಬಹಳ ದಿನಗಳ ನಂತರ ಭೆಟ್ಟಿಯಾದರಂತೂ ಮೊದಲು ತಬ್ಬಿಕೊಂಡು ನಂತರ ಮಾತನಾಡಿಯಾರು. ಅವರು ಹರಟೆ

ಹೊಡೆಯುವಾಗ, ಸಭೆ ಸಮಾರಂಭಗಳಲ್ಲಿ ಮಾತನಾಡುವಾಗ ಬೇಂದ್ರೆಯವರ ಒಂದೆರಡು ಮಾತುಗಳನ್ನಾದರೂ ಉದಾಹರಿಸುತ್ತಾರೆ. ನಿಜವಾಗಿಯೂ ಬೇಂದ್ರೆ ಕಾವ್ಯದ ಭಾಷ್ಯಕಾರರಲ್ಲಿ ಅವರು ಅಗ್ರಮಾನ್ಯರು. ಅದಕ್ಕೆ ಕಾರಣ ಬೇಂದ್ರೆಯವರ ಸಹವಾಸ, ಸಂವಾದ ನಿರಂತರವಾಗಿ ಎಸ್ಕೆಯವರಿಗೆ ದೊರೆತಿದೆ.

ಒಂದು ಸಲ ಧಾರವಾಡಕ್ಕೆ ಹೋದಾಗ ಬೆಳಗ್ಗೆ ಅವರ ಮನೆಯಲ್ಲಿ ಕಾಲಿಡುವಾಗಲೇ 'ನೀವು ಶೀಘ್ರವಾಗಿ ಬೇಂದ್ರೆಯವರ ಮನೆಗೆ ಹೋಗ್ರಿ. ಕಳೆದ ಎರಡು ಮೂರು ದಿನಗಳಿಂದ ನಿಮ್ಮನ್ನು ನೆನಸುತ್ತಿದ್ದಾರೆ. ನಿನ್ನೆ ಸಾಯಂಕಾಲ ಕೂಡ ಪುನಃ ನಿಮ್ಮ ನೆನಪು ಮಾಡಿದರು. ಹೋಗಿ ಬನ್ನಿ' ಎಂದು ತಿಳಿಸಿದರು. ಬೇಂದ್ರೆಯವರನ್ನು ಕಂಡು ಮಾತನಾಡಿ ಬಂದ ನಂತರ ಎಸ್ಕೆಯವರನ್ನು ಕಂಡೆ. ಸಾಧ್ಯವಾದಷ್ಟು ಅಂಥವರನ್ನು ಯಾವಾಗಲೂ ಕಾಣಬೇಕು. ಇಂಥ ಭೆಟ್ಟಿಗಳೇ ಜೀವನಕ್ಕೆ ಸ್ಫೂರ್ತಿಗಳಾಗಬಲ್ಲವು ಎಂದು ಹೇಳಿದರು. ಮತ್ತೊಂದು ಸಲ ಬೆಟಗೇರಿ ಕೃಷ್ಣಶರ್ಮರನ್ನು ಕಾಣಲು ಕಳಿಸಿದ್ದರು. ಆಗ ಬೆಟಗೇರಿಯವರ ಆರೋಗ್ಯ ಬಹಳೇ ನಾಜೂಕವಾಗಿತ್ತು. ಆದರೂ ಕೂಡ ಅವರು ನಿಧಾನವಾಗಿ ಮಾತನಾಡಲು ಶಕ್ತರಾಗಿದ್ದರು. ಅವರ ಜೊತೆಗೆ ಅನೇಕ ವಿಷಯಗಳನ್ನು ಮಾತನಾಡಲು ಸಾಧ್ಯವಾಯಿತು. (ಅವರಿಂದಲೇ ಬಹಳಷ್ಟು ವಿಷಯವನ್ನು ಕೇಳಿ ತಿಳಿದೆ ಎನ್ನುವದೇ ಹೆಚ್ಚು ಸೂಕ್ತ.) ಎಸ್ಕೆಯವರ ಸಲಹೆಯಂತೆ ಅಲ್ಲಿ ಹೋಗಿರದಿದ್ದರೆ ಅವರ ಜೊತೆಗೆ ಕೊನೆಯ ಬಾರಿಗೆ ಮಾತನಾಡುವ ಅವಕಾಶ ನನಗೆ ಸಿಗುತ್ತಿರಲಿಲ್ಲ.

ಸಾಹಿತ್ಯ ಪರಿಷತ್ತಿನ ವತಿಯಿಂದ ಅನೇಕ ಸಾಹಿತಿಗಳ ಧ್ವನಿ ಮುದ್ರಣಕ್ಕಾಗಿ ಉತ್ತರ ಕರ್ನಾಟಕದಲ್ಲಿ ಪ್ರವಾಸ ಕೈಕೊಂಡಿದ್ದರು. ಆಗ ನನಗೊಂದು ಪತ್ರ ಬರೆದು ತಾವು ವಿಜಾಪುರಕ್ಕೆ ಬರುವದಾಗಿಯೂ, ಅಲ್ಲಿ ಕೆಲವರ ಭೆಟ್ಟಿಯಾಗಬೇಕಿದ್ದು ತಮ್ಮ ಜೊತೆಗೆ 'ಕಂಪನಿ' ಕೊಡಬೇಕೆಂದೂ, ಸಿಂದಗಿಯ ಭೀಮಾಶಂಕರ ಮಠದ ಪರಂಪರೆಯ ಬಗ್ಗೆ ಮಾತನಾಡಬೇಕೆಂದೂ ಅದನ್ನು ಧ್ವನಿಮುದ್ರಿಸಿಕೊಳ್ಳಲಾಗುವದೆಂದೂ ಎಸ್ಕೆ ತಿಳಿಸಿದರು. ನಾನು ವಿಜಾಪುರಕ್ಕೆ ಹೋದೆ. ಎಸ್ಕೆಯವರ ಜೊತೆಗೆ ಕಲಾವಿದ ಪಿ. ಆರ್. ಭಾಗವತ ಬಂದಿದ್ದರು. ಅನಂತಾಚಾರ್ಯ ಮತ್ತು ವ್ಹಿ. ಬಿ. ನಾಯಕರನ್ನು ಭೆಟ್ಟಿಯಾದೆವಲ್ಲದೇ ಅವರಿಬ್ಬರ ಧ್ವನಿಮುದ್ರಣ ತೆಗೆದುಕೊಂಡರು. ನಂತರ ನಾನು, ವ್ಹಿ. ಬಿ. ನಾಯಕರು, ಎಸ್ಕೆಯವರ ಜೊತೆಗೆ ಆಗ ವಿಜಾಪೂರ ಜಿಲ್ಲಾ ನ್ಯಾಯಾಧೀಶರಾದ ಕೋ. ಚೆನ್ನಬಸಪ್ಪನವರ ಮನೆಗೆ ಹೋದೆವು. ಅಲ್ಲಿ ಸಣ್ಣದೊಂದು ಸಾಹಿತ್ಯ ಗೋಷ್ಠಿಯೇ ನಡೆಯಿತು. ಎಸ್ಕೆಯವರು ನಿರರ್ಗಳವಾಗಿ ಹರಟೆ ಹೊಡೆಯುವಂತೆ ಗಂಭೀರವಾಗಿ ಕುಳಿತು, ಇನ್ನೊಬ್ಬರ ವಿಚಾರವನ್ನೂ ಸಂಪೂರ್ಣವಾಗಿ ಪ್ರಶ್ನೆ-ಉಪ ಪ್ರಶ್ನೆಗಳಿಲ್ಲದೆಯೇ-ಕೇಳಿ-ನಂತರ ನಿಧಾನವಾಗಿ ಅದೇ ನಗುಮುಖದಿಂದ ತಮ್ಮ ವಿಚಾರಗಳನ್ನು ಮುಂಡಿಸಿಯಾರು. ಅಂದು ಶ್ರೀ ಅರವಿಂದರ ಲೇಖನದ ಯಾವದೋ ವಿಷಯ

ಕುರಿತು ಚರ್ಚಿಸಿದರು. (ಅರವಿಂದರ ಕೃತಿಯೊಂದನ್ನು ಕೋ. ಚೆನ್ನಬಸಪ್ಪನವರು ಅನುವಾದಿಸುತ್ತಿದ್ದರು. ಇತ್ತೀಚೆಗೆ ಪ್ರಕಟವಾಗಿದೆ.) ಮರುದಿನ ನನ್ನ ಕಿರು ಉಪನ್ಯಾಸವನ್ನು ಧ್ವನಿಮುದ್ರಿಸಿಕೊಂಡರು. ಆ ಒಂದು ದಿನದ ಅವರ ಸಹವಾಸ ನನಗೆ ಅನೇಕ ವಿಷಯಗಳನ್ನು ಕುರಿತು ಅಧ್ಯಯಿಸಸಬೇಕೆಂದು ಪ್ರೇರೇಪಿಸಿತು.

ಮಡಿಕೇರಿ ಸಾಹಿತ್ಯ ಸಮ್ಮೇಲನದಲ್ಲಿ ಪ್ರಚಾರ ಮಾಧ್ಯಮ ವಿಷಯವನ್ನು ಕುರಿತು ಮಾತನಾಡುವಾಗ– ದೀರ್ಘಕಾಲದ ಆಕಾಶವಾಣಿಯ ಸೇವೆಯ ಅನುಭವದಿಂದ ತಮ್ಮದೇ ಆದ ಶೈಲಿಯಲ್ಲಿ ಆಕಾಶವಾಣಿಯ ಲೋಪದೋಷಗಳನ್ನು ಮಾರ್ಮಿಕವಾಗಿ, ಹಾಸ್ಯಪೂರ್ಣವಾಗಿ ಕಟೂಕ್ತಿಗಳಿಂದ ಎತ್ತಿ ತೋರಿಸಿದರು. ಆಕಾಶವಾಣಿ ಹೇಗೆ 'ಅವಕಾಶವಾಣಿ'ಯಾಗುತ್ತದೆಂದು ಹೇಳಿದರು. ಆಕಾಶವಾಣಿ ಸರ್ಕಾರೀ ಶಂಖವೆಂದು ನಿರ್ದಾಕ್ಷಿಣ್ಯವಾಗಿ ಜಾಲಾಡಿದರು; ಆಕಾಶವಾಣಿ ಪ್ರತ್ಯೇಕವಾದ ಕಾರ್ಪೊರೇಶನ್ ಆಗಿ ಪರಿವರ್ತನೆ ಹೊಂದಿದರೆ ಮಾತ್ರ ಜನಸಾಮಾನ್ಯರಿಗೆ ಉಪಯೋಗವೆಂದು ಸ್ಪಷ್ಟಪಡಿಸಿದರು. ಅಂದಿನ ಕೇಳುಗರಿಗೆ ಅದೊಂದು ಅಪೂರ್ವ ಅವಕಾಶವಾಗಿತ್ತು.

ಎಸ್ಕೆಯವರ ಸೌಜನ್ಯ ಸಂಸ್ಕೃತಿಯ ಅನುಭವ ಪ್ರತಿಯೊಬ್ಬರಿಗೂ ಆಗಿದೆ ಎಂದು ನನ್ನ ಭಾವನೆ. ಅವರು ಒಂದು ಸಂದರ್ಭದಲ್ಲಿ 'ಇಂದಿನ ದಿನಗಳಲ್ಲಿ ಸಾವು ಸೋವಿ ಆಗೇದ. ಬದುಕು ಕಠಿಣ ಆಗೇದ.' ಎಂದು ಹೇಳಿದರು. ಈ ಮಾತು ಅತ್ಯಂತ ವ್ಯಾಪಕ ಅರ್ಥ ಉಳ್ಳದ್ದಾಗಿತ್ತು. ಸಮಾಜದ ಧುರೀಣರಿಗೆ, ಸರಕಾರಕ್ಕೆ ಎಚ್ಚರಿಕೆಯ ಗಂಟೆಯಾಗಿತ್ತು. ಇದೇ ಮಾತನ್ನು ಅನೇಕ ಕಡೆಗೆ ಪುನರುಚ್ಚರಿಸಿರಲೂ ಸಾಕು.

'ರಸವೆ ಜನನ ವಿರಸ ಮರಣ ಸಮರಸವೆ ಜೀವನ' ಎಂಬ ಹಿರಿಯ ಕವಿಯ ಉಕ್ತಿಯನ್ನು ಎಸ್ಕೆಯವರು ಸಮಗ್ರವಾಗಿ ತಮ್ಮ ಬಾಳಿಗೆ ಅನ್ವಯ ಮಾಡಿಕೊಂಡು ಬದುಕಿದ ಹಿರಿಯ ಜೀವ. ನೋವು ಉಂಡು ರಸಿಕರನ್ನು ನಲಿಸಿದ ನಗೆಗಾರ. ಹಳೆಯ ತಲೆಮಾರಿನ ಹಾಗೂ ಹೊಸ ತಲೆಮಾರಿನ ಸಾಹಿತಿಗಳಿಗೆ ಸಮನ್ವಯ ಮಾರ್ಗ ನಿರ್ಮಿಸಿದ ಹರಿಕಾರ; ಇತ್ತೀಚೆಗೆ ಪ್ರೊ. ಮಾಳವಾಡ ಅವರ ಜೊತೆಗೆ ಶ್ರೀ ಅರವಿಂದ-ಶ್ರೀಮಾತೆಯವರ ತತ್ವಗಳನ್ನು ಅಂಗೀಕರಿಸಿ ಅಧ್ಯಾತ್ಮದತ್ತ ಸಾಗಿದ ದಾರಿಕಾರ. ಅವರದು ಸಾರ್ಥಕ ಬದುಕು.

# ಅಣ್ಣ ಎನ್ಕೆ

ಸ್ವಾ. ರಾ. ಕುಲಕರ್ಣಿ

ಶ್ರೀಯುತ ಎನ್. ಕೆ. ಕುಲಕರ್ಣಿ ಹಾಗೂ ನಾನು ಒಡಹುಟ್ಟಿದ ಅಣ್ಣತಮ್ಮರಲ್ಲ; ಒಡನಾಡಿದ ಗೆಳೆಯರೂ ಅಲ್ಲ; ಒಂದೇ ಊರು ಕೇರಿಯ ಮೊದಲ ಸಹವಾಸವೂ ನಮಗಿಲ್ಲ. ಆದರೂ ತೀರ ದೂರದಿಂದ ಒಬ್ಬರನ್ನೊಬ್ಬರು ನೋಡಿದವರು ಕಾಲಾಂತರದಲ್ಲಿ, ಕಾರಣಾಂತರದಿಂದ ಕೂಡಿ ದುಡಿದೆವು, ನಡೆದೆವು, ಆತ್ಮೀಯತೆಯನ್ನು ಪಡೆದೆವು.

ಎನ್ಕೆ ಅವರನ್ನು ನಾನು ಅವರ ಹುಟ್ಟು ಹೆಸರಿನಿಂದ ಎಂದೂ ಕರೆದಿಲ್ಲ, ಕರೆಯುವುದೂ ಇಲ್ಲ. ಏಕೆಂದರೆ ಅವರ ನಮ್ಮ ಪರಿಚಯವೆ ನಡುವಯಸ್ಸಿನದು. ಆದರೂ ಗಾಢ.

ನಾನು ೧೯೩೮ರಲ್ಲಿ ಧಾರವಾಡದ ಕರ್ನಾಟಕ ಕಾಲೇಜಿನ ವಿದ್ಯಾರ್ಥಿಯಾಗಿದ್ದೆ. ಅವರೂ ನನಗಿಂತ ಹಿರಿಯರಾದುದರಿಂದ ಅಲ್ಲಿಯೆ ಹೆಚ್ಚಿನ ತರಗತಿಯಲ್ಲಿ ಓದುತ್ತಿದ್ದರು. ನನಗೆ ನಾಟಕದ ಗೀಳು. ಹೈಸ್ಕೂಲಿನಲ್ಲಿದ್ದಾಗ ಬರೆದು ಆಡಿ, ಆಡಿಸಿ, ರೂಢಿ; ಕಾಲೇಜಿನಲ್ಲಿಯೂ ಅಂಥ ಸಂದರ್ಭಗಳನ್ನು ತಪ್ಪಿಸಿಕೊಳ್ಳುತ್ತಿರಲಿಲ್ಲ. ಶ್ರೀಯುತ ಎನ್ಕೆ ಕುಲಕರ್ಣಿ ಅವರನ್ನು ನಾನು ಮೊದಲು ಕಂಡದ್ದು ಕಾಲೇಜಿನ ಸ್ಟೇಜಿನ ಮೇಲೆ. ಅವರ ಸಾಮಾಜಿಕ ನಾಟಕ 'ಇಲೆಕ್ಶನ್'ನಲ್ಲಿ. ಒಳ್ಳೇ ಹಾಸ್ಯಪ್ರಧಾನವಾದ ಏಕಾಂಕ. ಅವರೆ ಅದರಲ್ಲಿ ಮುಖ್ಯ ಪಾತ್ರಧಾರಿಗಳು. ತೆಳ್ಳಗಿನ ಚುರುಕಾದ ವ್ಯಕ್ತಿತ್ವ. ಆಗ ಅವರನ್ನು ದೂರಿಂದ ನೋಡಿದೆನೆ ಹೊರತು ಸಂಧಿಸಿ ಮಾತನಾಡಲಿಲ್ಲ. ಅದು ನನ್ನ ಜಾಯಮಾನವೂ ಅಲ್ಲ.

ಮುಂದೆ ಒಂದೆರಡು ವರ್ಷಗಳಲ್ಲಿ ಅವರು ತಮ್ಮ ಪದವೀ ಪರೀಕ್ಷೆ ಕೊಟ್ಟು ಶಿಕ್ಷಕರಾಗಿದ್ದರು. ನಾನೂ ಅದೇ ಶಿಕ್ಷಣ ಸಂಸ್ಥೆ (ಮಾಳಮಡ್ಡಿ ಹೈಸ್ಕೂಲ) ಯಲ್ಲಿ ಶಿಕ್ಷಕನಾಗಿ ಬಂದಾಗ ಅವರ ತಿಳಿಹಾಸ್ಯದ ಮಾತುಗಾರಿಕೆ, ತೀರ ಆತ್ಮೀಯವಾದ ನಡವಳಿಕೆ ನಮ್ಮಿಬ್ಬರನ್ನು ಸಮೀಪಕ್ಕೆ ತಂದವು. ಆಗ ನಾವು ಇದ್ದುದೂ ಒಂದೇ ಸ್ಥಳ (ಮಾಳಮರಡಿ), ಮನೆಗಳೂ ಸಮೀಪ. ಇಬ್ಬರಿಗೂ ಸಾಮೀಪ್ಯ ಇನ್ನೂ ಹೆಚ್ಚಾದುದು ಎಲ್ಲಕ್ಕಿಂತ ಹೆಚ್ಚಾಗಿರುವ ನಮ್ಮ ಅವರ ಮನೆಯವರ ಪರಿಚಯದಿಂದಲೂ.

ಅದು ಯುದ್ಧಕಾಲವಾದುದರಿಂದ ಜೀವನ ನಡೆಸುವುದೇ ದುಸ್ತರವಾಗುತ್ತಿದ್ದಾಗ ನಾಟಕಾದಿ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಅವರೂ ತೊಡಗಿರಲಿಕ್ಕಿಲ್ಲ, ನನಗೂ ಅಷ್ಟರಲ್ಲಿ

ಆ ಹುಚ್ಚು ದೂರ ಸರಿದಿತ್ತು. ಅವರೂ ಮಕ್ಕಳಿಗೆ ಹೇಳಿಕೊಡುವುದರಲ್ಲಿ ನಮ್ಮಿಬ್ಬರಿಗೆ ಅಷ್ಟೇ ಆಸಕ್ತಿ. ಅಷ್ಟರ ಮಟ್ಟಿಗೆ ಮಕ್ಕಳ ಪ್ರೀತಿಯನ್ನು ಕೂಡ ನಾವು ಸಂಪಾದಿಸಿದ್ದು ನೆನಪಿದೆ.

ಆಗ ನಮಗೆ ತಿಂಗಳಿಗೆ ಸಂಬಳದ ರೂಪದಲ್ಲಿ ದೊರಕುತ್ತಿದ್ದುದು ಕೇವಲ ನಾಲ್ವತ್ತು ರೂಪಾಯಿ. ಮೇಲಿಲ್ಲ, ಕೆಳಗಿಲ್ಲ. ನಾನು ಆದೇ ಮದುವೆಯಾದವನಾದುದ ರಿಂದ ಬಹುಶಃ ನನ್ನ ಜೀವನ ನಿರ್ವಹಣೆ ಅಷ್ಟೊಂದು ಭಾರವಾಗಿರಲಿಲ್ಲ. ಅವರು ಮಾತ್ರ ಆ ಭಾರವನ್ನು ಸಹಿಸುತ್ತ ಸಾಗುತ್ತಿದ್ದರೇನೊ. ತನ್ನ ಎಂದಿನ ನಗೆ ಮೊಗ ದಿಂದಲೇ ಒಂದು ದಿನ ನನ್ನೊಡನೆ ಹೀಗೆ ಅಂದುದು ನೆನಪಿದೆ— "ಸ್ವಾಮಿರಾಯರೆ, ನೀವು ರೂಪಾಯಿ ಆಣೆ ಪೈಗಳಲ್ಲಿ ಲೆಕ್ಕ ಹಾಕುವುದೇ ಇಲ್ಲವಲ್ಲ" ಎಂದು. ಅದು ಒಂದನೆಯ ತಾರೀಖು—ಅವರು ಸಂಬಳ ತರುತ್ತಿದ್ದಾಗ ನಾನು ಇನ್ನೂ ಮಕ್ಕಳೊಡನೆ ಯಾವುದೊ ಚರ್ಚೆಯಲ್ಲಿ ತೊಡಗಿರುವುದನ್ನು ನೋಡಿ ಹಾಗೆಂದರೇನೊ.

ತುಸು ದಿನಗಳಲ್ಲಿ ಅವರಿಗೆ ಕರ್ನಾಟಕ ಸಂಶೋಧನ ಕೇಂದ್ರದ (ಅದು ಆದೇ ಆರಂಭ ವಾಗಿತ್ತು) ಸಂಶೋಧಕ ವಿದ್ಯಾರ್ಥಿಯಾಗಲು ಕರೆ ಬಂತೆಂದು ಕಾಣುತ್ತದೆ. ಇಲ್ಲಿಗಿಂತ ವರಮಾನವೂ ಜಾಸ್ತಿ. ಅವರಿಗೆ ಬರಹದಲ್ಲಿಯಂತೆ ಸಂಶೋಧನೆಯಲ್ಲಿಯೂ ಹೆಚ್ಚಿನ ಆಸಕ್ತಿ. ಪಂಚಮುಖಿ ಅವರ ಸಮರ್ಥ ನೇತೃತ್ವ. ಹೀಗಾಗಿ ಅವರು ನನ್ನಿಂದ ದೂರವಾದರು. ಆದರೆ ಪರಿಚಯ ಮಾತ್ರ ಇನ್ನೂ ಸಮೀಪ ಸರಿಯಿತು. ನನಗೆ ಅವರ ಮುಖಾಂತರ ಅವರ ಹೊಸ ಸಂಸ್ಥೆಯೂ ಸಮೀಪವಾಯಿತು. ಅಲ್ಲಿಯ ಪುಸ್ತಕಗಳೂ ಬಹಳ ಹಿಡಿಸಿದವು.

ಎಸ್ಕೆ ಅವರನ್ನು ಆಮೇಲೆ ನೋಡಿದುದು ಅವರು ತೀರ ದಾರುಣ ಸ್ಥಿತಿಯಲ್ಲಿ— 'ಸಾವಿನ ಉಡಿಯಲ್ಲಿ'— ಇದ್ದಾಗ. ಕಾಮನಕಟ್ಟಿಯಲ್ಲಿರುವ ಅವರ ಮಾವನ ಮನೆಗೆ ಹೋದಾಗ ಅವರ ಮುಖದಲ್ಲಿ ಅದೇ ನಗೆಮೊಗವಿದ್ದರೂ ದುಃಖದ ಛಗೆ ಆವರಿಸಿತ್ತು. ಒಂದೇ ವಾರದಲ್ಲಿ ಮೂರು ಸಾವುಗಳನ್ನು ಕಂಡ (ಮಾವ, ಹೆಂಡತಿ, ಮಗಳು) ಈ ನಂಜುಂಡ ತಲೆ ಎತ್ತಿ ನಿಂತಿದ್ದರು. ಎಂಥ ದುಗುಡ ದುಮ್ಮಾನಗಳನ್ನೂ ಉಂಡು ಅರಗಿಸಿಕೊಳ್ಳುವ ಈ ಮೃತ್ಯುಂಜಯತ್ವ ಅವರಿಗೆ ಬಾಲ್ಯದ ಒಡನಾಡಿಯಾಗಿರಬೇಕು. ಏಕೆಂದರೆ ನಾನು ತಿಳಿದಂತೆ ಅವರು ಮದುವೆಯಾದುದು ಬಹು ಬೇಗ (ಮ್ಯಾಟ್ರಿಕ್ ಅನಂತರ). ಬಾಳ ಕುಲುಮೆ ಈ ಲೋಹವನ್ನು ಬಹುಕಾಲ ಕಾಸಿದೆಯಲ್ಲದೆ ಬಹಳ ಗಟ್ಟಿಯಾಗಿ ಬಡೆದಿದೆ.

ಮುಂದಿನ ನಮ್ಮ ಒಡನಾಟ ಮುಂಬಯಿ ಆಕಾಶವಾಣಿಯ ಗ್ರಾಮಸ್ಥರ ಕಾರ್ಯಕ್ರಮದ ವಿಭಾಗದಲ್ಲಿ ಸಹೋದ್ಯೋಗಿಗಳಾಗಿ. ಅಷ್ಟರಲ್ಲಿ ಅವರೂ ಮುಂಬೈ ಸೇರಿದ್ದರು. ನನ್ನನ್ನು ಸೇರಿಸಿದವರು ಎಸ್ಕೆ. ಉಭಯತರ ಹಿತೈಷಿಗಳಾದ ಡಾ. ಕೃಷ್ಣರಾವ ಮುಹಿಷಿ ಯವರ ಸಹಾಯವನ್ನು ಈ ಸಂದರ್ಭದಲ್ಲಿ ಮರೆಯಲಾರೆ.

ನನಕಿಂತಲೂ ಆರೆಂಟು ತಿಂಗಳ ಮೊದಲೇ ಆಕಾಶವಾಣಿಯನ್ನು (ಆಗ ಅದು ಆಲ್ ಇಂಡಿಯಾ ರೇಡಿಯೋ ಮಾತ್ರ) ಸೇರಿದ ಅವರಿಗೆ ಅಲ್ಲಿಯ ಸಹೋದ್ಯೋಗಿಗಳಲ್ಲದೆ ಗೆಳೆಯರ, ಬರಹಗಾರರ ಹಾಗೂ ಕಲಾವಿದರ ಅಪಾರ ಬಳಗ.ಮೊದಮೊದಲು ಮುಂಬೈ ಮಹಾನಗರಿ ನನ್ನನ್ನು ಗಾಬರಿಗೊಳಿಸಿದರೂ ಬರಬರುತ್ತ ಅವರ ಬಳಗದಲ್ಲಿ ನಾನೂ ಒಬ್ಬ ನಾದೆ. ಮೈ ಚಳಿ ಕಳೆದುಕೊಂಡೆ. ಇಲ್ಲಿ ತೀರ ಆತ್ಮೀಯರಾಗಿ ಸಮೀಪಿಸಿದ ಇಮಾರತಿ ಹಣಮಂತರಾಯರು, ಟಂಕಸಾಲಿ ಬಿಂದೂರಾಯರಲ್ಲದೆ ಅಪಾರ ಬರಹಗಾರರನ್ನು, ಗೆಳೆಯರನ್ನು ಅವರ ಸಹಾಯ ಸಹಕಾರಗಳನ್ನು ನಾವು ಕೃತಜ್ಞತೆಯಿಂದ ನೆನೆಯಬೇಕು.

ಮೊದಮೊದಲು ದಿನನಿತ್ಯ ಸಂಜೆಗೆ ಮಾತ್ರ ಕೇವಲ ಇಪ್ಪತ್ತು ನಿಮಿಷಗಳಿಗಾಗಿ ಆರಂಭವಾದ ಕನ್ನಡಿಗರ ಈ ಬಾನುಲಿಯ ಕೊಡುಗೆ ಮುಂದೆ ಮೂವತ್ತು ನಿಮಿಷ ಬಿತ್ತರಗೊಂಡಿತು. ದೂರದ ಕನ್ನಡ ಜಿಲ್ಲೆಗಳಿಗೆ ಮಾತ್ರ ಕೇಳಿಸಬೇಕಾಗಿರುವುದರಿಂದ ಶಾರ್ಟ ವೇವ್‌ದಲ್ಲಿ ಮಾತ್ರ ಪ್ರಸಾರವಾಗತೊಡಗಿದ ಈ ಕಾರ್ಯಕ್ರಮ ಜನಪ್ರಿಯತೆ ಯಿಂದಾಗಿ ಮೀಡಿಯಂ ವೇವ್‌ದಲ್ಲಿಯೂ ಪ್ರಸಾರವಾಗತೊಡಗಿತು. ಈ ಸಾಫಲ್ಯದ ಸಿಂಹಪಾಲು ಶ್ರೀ ಎನ್ಕೆ ಅವರ ಮನಮೆಚ್ಚುವ ಲೇಖನ, ವಾಚನ ಹಾಗೂ ಪ್ರಸಾರ ನಿರ್ವಹಣೆ ಎಂಬುದು ನಿರ್ವಿವಾದ.

೧೯೪೭ರ ಎಪ್ರಿಲ್‌ನಲ್ಲಿ ಆರಂಭವಾದ ನಮ್ಮ ಮುಂಬೈ ಸಹಭಾಗಿತ್ವ ೧೯೫೦ರ ವರೆಗೆ ನಡೆಯಿತು. ಅವರು ಆಗ ಅದೇ ಆರಂಭವಾದ ಧಾರವಾಡದ ಆಕಾಶವಾಣಿಗೆ ವರ್ಗವಾಗಿ ಬಂದರು. ನಾನು ಮೂಲ ಪೀಠದಲ್ಲಿಯೆ ಮುಂದುವರಿದೆ. ಇನಾಮ ದಾರ ಲಕ್ಷ್ಮೀಕಾಂತರು ನನ್ನ ಹೊಸ ಸಹೋದ್ಯೋಗಿಗಳಾದರು. ಹೀಗೆ ಎನ್ಕೆ ಬೇರೆ ಕೇಂದ್ರದಲ್ಲಿದ್ದರೂ ನಮ್ಮನ್ನು ಬಿಟ್ಟು ಹೋದಂತೆ ನಮಗೆ ಎನಿಸಲೇ ಇಲ್ಲ. ಏಕೆಂದರೆ ಅವರ ಹಲವಾರು ಜನಪ್ರಿಯ ಧ್ವನಿಮುದ್ರಿತ ಕನ್ನಡ ಹಾಡುಗಳು, ಕತೆ, ನಾಟಕಾದಿ ಗಳನ್ನು ನಾವು ಪುನಃ ಪ್ರಸಾರ ಮಾಡುತ್ತಿದ್ದೆವಲ್ಲದೆ ಹೊಸದಾಗಿ ಬರೆಸಿ ತರಿಸುತ್ತಲೂ ಇದ್ದೆವು. ಅವರು ಸಿದ್ಧಹಸ್ತರು. ಆಡು ಮುಟ್ಟದ ಗಿಡವಿಲ್ಲ, ಎನ್ಕೆ ಬರೆಯದ ವಿಷಯ ವಿಲ್ಲ. ಸಂದರ್ಭಕ್ಕೆ ತಕ್ಕ ಹಾಗೆ ಎಲ್ಲ ಪ್ರಚಾರಕರಂತೆ ಅವರೂ ಸಂತೆಗೆ ಮೂರು ಮೊಳ ಹೊಲಿದದ್ದೂ ಉಂಟು. ಆದರೆ ನೂಲು, ಬಣ್ಣ, ಚಿತ್ರಗಾರಿಕೆ ಪಕ್ಕಾ.

ಆ ಮುಂದಿನ ಮತ್ತು ಈಗ ನಡೆದಿರುವ ನಮ್ಮ ಉಭಯತರ ತೀರ ಆತ್ಮೀಯತೆಯ ಬಾಳ ಘಟ್ಟವೇ ನಿವೃತ್ತಿಯ ಅನಂತರದ್ದು. ಎಂದೂ ಪರಿಚಯವಿಲ್ಲದೆ ಬಾಳ ಕಡಲಲ್ಲಿ ತೇಲಿಬಂದ ಈ 'ಕಾಷ್ಠ'ಗಳು ಕೂಡಿ ಸಾಗಿವೆ. ಏರಿಳಿತಗಳಲ್ಲಿ ಸರಸವಿರಸಗಳನ್ನು ಅನುಭವಿಸಿಯೂ ಸಂತಸಗೊಂಡಿವೆ. ತಮ್ಮಂತೆ ಮನೆಯವರು, ಮಕ್ಕಳು ಪರಸ್ಪರ ಆತ್ಮೀಯತೆಯಿಂದ ಬೆಳೆಯುವ ವಾತಾವರಣವನ್ನು ಸೃಷ್ಟಿಸಿವೆ. ಅವರು ಬೆಂಗಳೂರಿನ ತಮ್ಮ ವಾಸದ ಕಾಲದಲ್ಲಿ ಕಟ್ಟಿಸಿಟ್ಟ 'ಮಾತೋಶ್ರೀ'ಯ ನೆಲೆಯಲ್ಲಿಯೆ ನೆರಳಲ್ಲಿಯೆ ನಮ್ಮ 'ಹೇಮಾದ್ರಿ' ಹುಟ್ಟಿಕೊಂಡಿದೆ, ಬೆಳೆಯುತ್ತಿದೆ.

ಈ ಆಶ್ರಯದಾತ 'ಅಣ್ಣ' ನನಗೆ. ನಗೆಮೊಗದ 'ಕಾಕಾ' ನನ್ನ ಮಕ್ಕಳಿಗೆ. ನಿತ್ಯ ವಂದ್ಯರು ಇವರು.

# ನನ್ನ ಹಳೆಯ ಗೆಳೆಯ

**ಪಿ. ಪಿ. ತಾಂಬೆ**

ಸುಮಾರು ಐವತ್ತು ವರ್ಷಗಳ ಹಿಂದೆ, ಕರ್ನಾಟಕ ಕಾಲೇಜಿನ 'ಮಿಸಿಲೆನಿ'ಗಳಲ್ಲಿ ಎನ್. ಕೆ. ಕುಲಕರ್ಣಿ ಎಂಬವರಿಂದ ಪ್ರಕಟವಾದ ಅನೇಕ ಹಾಸ್ಯ ಲೇಖನ, ಏಕಾಂಕ ನಾಟಕ, ವಿದ್ವತ್ಪೂರ್ಣವಾದ ಲೇಖನಗಳಿಂದ ಪ್ರಭಾವಿತನಾಗಿದ್ದೆ. ಸುದೈವದಿಂದ ೧೯೩೮ ರಲ್ಲಿಯೇ ಎನ್ಕೆಯವರು ತಮ್ಮ ಎಂ.ಎ. ಪದವೀ ಪಡೆದ ಕೂಡಲೇ ಗದುಗಿನ ವಿದ್ಯಾದಾನ ಸಮಿತಿಯ ಹೈಸ್ಕೂಲಿನಲ್ಲಿ ಮಾಸ್ತರಿಕೆಗಾಗಿ ಬಂದರು. ನಾವೆಲ್ಲ, ವಿಶೇಷ ವಾಗಿ ಬೆಟಗೇರಿ ಭಾಗದ ತರುಣರೆಲ್ಲ ಸಾಹಿತ್ಯ ಅಭ್ಯಾಸಕ್ಕಾಗಿ 'ಗೆಳೆಯರ ಬಳಗ' ಎಂಬ ಸಂಸ್ಥೆಯನ್ನು ಮಾಡಿಕೊಂಡಿದ್ದೆವು. ಅದೇ ಸಮಯದಲ್ಲಿ, ಆಗಿನ ವಾರಪತ್ರಿಕೆ "ಕರ್ನಾಟಕ ಬಂಧು"ದಲ್ಲಿ ಹರಿದಾಸ, ಬಸವರಾಜ ಕಟ್ಟೀಮನಿ, ಜಿ. ವಿ. ಹಿರೇಮಠ (ಬಾನುಲಿಯ ಗುರಣ್ಣ) ಎನ್ಕೆಯವರೆಲ್ಲ ತಮ್ಮ ಲೇಖನ ವ್ಯವಸಾಯದ ಗರಡೀ ಸಾಧನೆ ಮಾಡುತ್ತಿದ್ದರು.

ಹೊಸಬರಿಗೆ ಮುಂದೆ ಬರಲು, ಅವಕಾಶ ಕಲ್ಪಿಸುವ, ವೇದಿಕೆಯ ಮೇಲೆ ಎಳೆದು ತರುವ, ಪ್ರೇಮಪೂರ್ವಕ ಬೆನ್ನು ಚಪ್ಪರಿಸುವ ವಿಶೇಷ ಕಾರ್ಯಕ್ರಮದ ಮೂಲಕ ಗೆಳೆಯರ ಬಳಗ ಕೂಡಲೇ ತರುಣರಲ್ಲಿ, ವಿಶೇಷವಾಗಿ ಸಾಹಿತ್ಯ ಅಭ್ಯಾಸಿಗಳಲ್ಲಿ ಪ್ರಿಯ ವಾಯಿತು.

ಗೆಳೆಯರ ಬಳಗದ ವಾರ್ಷಿಕ ಸಭೆಗೆ ಎನ್ಕೆಯವರಿಗೆ ಪ್ರಥಮ ಅವಕಾಶ. ಗದಗ-ಬೆಟಗೇರಿಯ ವೇದಿಕೆಯ ಮೇಲೆ ಬರುವದಕ್ಕಾಗಿ ಅವರನ್ನು ಒಪ್ಪಿಸುವ ಕೆಲಸ ನನಗೆ ಕೊಡಲಾಗಿತ್ತು. ನನಗೆ ಮಾತ್ರ ಅವರನ್ನು ಕಂಡಾಗ ಆಶ್ಚರ್ಯ ದಾಗು ನಿರಾಶೆ ಕಾದಿತ್ತು. ತಮಗೆ ಗುರುಸ್ಥಾನದಲ್ಲಿದ್ದ ಹುಯಿಲಗೋಳ ನಾರಾಯಣರಾಯರು, ಗುರಾಚಾರ್ಯ ಜೋಶಿಯವರ ಮುಂದೆ, ತಾವು ಯಾವ ಗಿಡದ ತಪ್ಪಲು, ಎಂಬ ಸಂಕೋಚದಿಂದ ನನ್ನನ್ನು ಈ ಕೆಲಸಕ್ಕಾಗಿ ವಿನಂತಿಸಬಾರದೆಂದು ಸವಿಮಾತಿನಲ್ಲಿಯೇ ನಿರಾಕರಿಸಿದರು. ನಾನು ನಮ್ಮ 'ಗೆಳೆಯರ ಬಳಗ'ದ ಉದ್ದೇಶವೇ, ತಮ್ಮಂತಹ ಹೊಸಬರಿಗಾಗಿ ಅವಕಾಶ ಕಲ್ಪಿಸುವದೇ ಆಗಿದೆ ಎಂದು ಬಹಳೇ ಒತ್ತಾಯಪೂರ್ವಕ ಗಂಟೇ ಬಿದ್ದಾಗ ಸಮಾರಂಭದ ಯಶಸ್ಸು, ಅಪಯಶಸ್ಸು ಗೆಳೆಯರ ಬಳಗದ ಮೇಲೆಯೇ ಹೊತ್ತುಕೊಂಡಾಗ, ಬಹು ಸಂಕೋಚದಿಂದ ಒಪ್ಪಿಕೊಂಡರು.

ಅಂದಿನ ಆಗಸ್ಟ ಒಂದು ೧೯೩೮ ರಷ್ಟು ಹಿಂದೆ, ಸಮಾರಂಭಕ್ಕೆ ಒಂದು ಸಾವಿರ ಜನ, ಬರಿ ನೆಲದ ಮೇಲೆ ಕುಳಿತು, ಗಂಟೆಗಟ್ಟಲೆ ಎನ್ಕೆಯವರ ಭಾಷಣ ಕೇಳಿ ಸಂತೋಷ ಬಟ್ಟರೆಂದು ಹೇಳಿದರೆ ಈಗಿನ ಜನ, ಖುರ್ಚಿಗಳಿಲ್ಲದೆ, ಚಹದ ಕಾರ್ಯಕ್ರಮವಿಲ್ಲದೆ, ಅಂಥ ಕಾರ್ಯಕ್ರಮ ಜರುಗಿತೆಂದು ನಂಬಲು ಸಾಧ್ಯವಾಗಲಿಕ್ಕಿಲ್ಲ.

ಆ ದಿನದಂದಿನಿಂದ ಎನ್ಕೆ ಮತ್ತು ನನ್ನ ಸ್ನೇಹಕ್ಕೆ ಸುರುವಾಯಿತು. ಮುಂದೆ ಅನೇಕ ಸಲ ಅವರನ್ನು ಕಂಡು ಅವರ ಸ್ನೇಹದ ಸವಿಜೇನನ್ನು ಸವಿಯುವ ಸುದೈವ ನನ್ನದಾಗಿದೆ. ೧೯೪೫ರ ಧಾರವಾಡದ ಸಾಹಿತ್ಯ ಸಮ್ಮೇಲನ, ಅಳಣಾವರದಲ್ಲಿಯ ಹಾಯಸ್ಕೂಲಿನ ವಾರ್ಷಿಕ ಸಮಾರಂಭ, ಬೆಂಗಳೂರಿನ ೧೯೭೦ನೆಯ ಡಿಸೆಂಬರ ಸಾಹಿತ್ಯ ಸಮ್ಮೇಲನ, ೧೯೭೩ರಲ್ಲಿ ಅವರ ಷಷ್ಟ್ಯಬ್ದಿ ಸಮಾರಂಬ, ೧೯೭೪ರಲ್ಲಿ ಗದುಗಿನಲ್ಲಿ ಜರುಗಿದ ಬಾನುಲಿ ಕೇಳುಗರ ಸಮ್ಮೇಲನ ಇಂತಹ ಸಮಯದಲ್ಲಿ ಪರಸ್ಪರ ಕಂಡು ಗೆಳೆತನದ ವೃದ್ಧಿಯಾಗುತ್ತಲೇ ಇದೆ.

ಜೀವನದಲ್ಲಿ ಇಂತಹ ಸ್ನೇಹವೊಂದೇ ನಿಜವಾದ ಆಶಾಗ್ರಂಥಿ, ಬಾಳ ಕಡಲನ್ನು ಈಜುವುದಕ್ಕೆ. ಈ ಗೆಳೆತನವೇ ಒಂದು ಈಜುಬೆಂಡು. ಅವರ ಈ ಬಾಂಧವ್ಯವನ್ನು ಏನೆಂದು ಬಣ್ಣಿಸಲಿ. ಬೇಂದ್ರೆಯವರು ಹೇಳಿದಂತೆ ಚಹದ ಕೂಡಾ ಚೂಡಾ ಇದ್ದಂತೆ. ನನ್ನ ಬಗ್ಗೆ ಅವರಲ್ಲಿರುವ ಭಾವನಾತ್ಮಕ ಪ್ರೇಮ, ಸ್ನಿಗ್ಧ ಸ್ನೇಹ. ಅವರ ಯಾವದೇ ಗ್ರಂಥದ ಬಗ್ಗೆ, ಆಕಾಶವಾಣಿಯಲ್ಲಿಯ ವಿಶೇಷ ಕಾರ್ಯಕ್ರಮದ ಬಗ್ಗೆ ನನ್ನ ಅನಿಸಿಕೆ ಅವರಿಗೆ ಒಂದು ಟಾನಿಕ್ಕು ಎಂದು ಅವರೇ ಹೇಳುತ್ತಾರೆ.

ನನಗಂತೂ, ಅವರು ನನ್ನ ಮೇಲೆ ತೋರುತ್ತಿರುವ ಸ್ನೇಹ, ಪ್ರೀತಿಗಳೇ ಸಂಪತ್ತು.

# ಹಾಡು ಬೇಕಾದರೆ ಎನ್ಕೆ

## ಗಂಗೂಬಾಯಿ ಹಾನಗಲ್ಲ

'ಹಾಡು ಬೇಕಾದರ ಎನ್ಕೆ ಅವರನ್ನು ಕೇಳು'. ನನ್ನ ಮಗಳು ಕೃಷ್ಣಾಳಿಗೆ ಎಷ್ಟೋ ಬಾರಿ ಈ ಮಾತು ಹೇಳಿದ್ದೇನೆ. ಎನ್ಕೆ ಅವರ ಹತ್ತಿರ ಹೋದರೆ ಆಕೆಗೆ ಬೇಕಾದಂಥ ಹಾಡುಗಳು ಸಿಗಬಹುದೆಂದು ನನಗೆ ವಿಶ್ವಾಸ. ಅದು ಎಂದೂ ಹುಸಿಯಾಗಲಿಲ್ಲ. ಎನ್ಕೆ ಬರೆದ ಎಷ್ಟೋ ಹಾಡುಗಳನ್ನು ಆಕೆ ಹಲವು ಸಮಾರಂಭಗಳಲ್ಲಿ, ಆಕಾಶವಾಣಿಯಲ್ಲಿ, ಹಾಡಿದ್ದಾಳೆ. ಶ್ರೀಮತಿ ಹೀರಾಬಾಯಿ ಬಡೋದೆಕರರನ್ನು ಹುಬ್ಬಳ್ಳಿಯಲ್ಲಿ, ಸತ್ಕರಿಸಿದಾಗ ಎನ್ಕೆಯವರು ಆ ಸಂದರ್ಭಕ್ಕೆಂದೇ ಹೀರಾಬಾಯಿಯವರ ಬಗ್ಗೆ ಒಂದು ಪದ ಬರೆದಿದ್ದರು. ಸಮಾರಂಭದಲ್ಲಿ ಕೃಷ್ಣಾ ಅದನ್ನು ಹಾಡಿದಳು. ಹಲವು ವರ್ಷಗಳ ಹಿಂದೆ ಕೃಷ್ಣಾ ಹಾಡಿದ ಎನ್ಕೆಯವರ ಆರು ಹಾಡುಗಳನ್ನು ಹಿಸ್ ಮಾಸ್ಟರ್ಸ್ ವಾಯಿಸ್ ಕಂಪನಿಯವರು ಧ್ವನಿಮುದ್ರಿಸಿಕೊಂಡಿದ್ದರು.

ಆತ್ಮೀಯ ಬಂಧು ಎನ್ಕೆ ಅವರನ್ನು ನಾನು ಕಂಡದ್ದು ಸುಮಾರು ೩೭ ವರ್ಷಗಳ ಹಿಂದೆ. ಆಕಾಶವಾಣಿ ಕಾರ್ಯಕ್ರಮಕ್ಕೆಂದು ನಾನು ಮುಂಬೈಗೆ ಹೋಗುತ್ತಿದ್ದಾಗ ಗಾಡಿಯಲ್ಲಿ ಅವರ ಭೆಟ್ಟಿಯಾಯಿತು. ತಮ್ಮ ಸಂಬಂಧಿಕರೊಬ್ಬರನ್ನು ಅವರು ಚಿಕಿತ್ಸೆಗೆಂದು ಮುಂಬೈಗೆ ಕರೆದುಕೊಂಡು ಹೊರಟಿದ್ದರು. ಅದೇ ನನ್ನ ಹಾಗೂ ಅವರ ಪ್ರಥಮ ಭೆಟ್ಟಿ. ಮುಂದೆ ಅವರು ಮುಂಬೈ ಆಕಾಶವಾಣಿಯ ಕನ್ನಡ ವಿಭಾಗದಲ್ಲಿ ಸೇರಿದ ಬಳಿಕ ಪರಿಚಯ ಹೆಚ್ಚಿತು. ಧಾರವಾಡದಲ್ಲಿ ಆಕಾಶವಾಣಿ ನಿಲಯ ಪ್ರಾರಂಭವಾಗಿ ಅವರು ಇಲ್ಲಿಗೆ ಬಂದ ಮೇಲೆ ಬಂಧನದ ಬೆಸುಗೆ ಮತ್ತಷ್ಟು ಗಟ್ಟಿಯಾಯಿತು.

ಎನ್ಕೆ ನನಗೊಬ್ಬ ಸಹೋದರನಿದ್ದಂತೆ. ಪರಸ್ಪರರ ಸುಖ ದುಃಖಗಳನ್ನು ಹೇಳಿಕೊಳ್ಳುವದು ಹಾಗೂ ಹಂಚಿಕೊಳ್ಳುವದು ನಾವು ಭೆಟ್ಟಿಯಾದಾಗಲೆಲ್ಲ ನಡೆಯುವದು. ಯಾರೊಬ್ಬರೊಡನೆ ಬಂಧುತ್ವ ಬೆಳೆಯಬೇಕಾದರೆ ನಾವು ಮೆಚ್ಚುವ ಗುಣ ಆ ವ್ಯಕ್ತಿಯಲ್ಲಿರಬೇಕಷ್ಟೇ. ಅಂಥ ಗುಣಗಳನ್ನು ನಾನು ಎನ್ಕೆ ಅವರಲ್ಲಿ ಕಂಡಿದ್ದೇನೆ.

ಕಲಾವಿದರ ಬಗ್ಗೆ, ಅದರಲ್ಲಿಯೂ ನಮ್ಮ ಘರಾಣೆಯ ಹಿರಿಯರ ಬಗ್ಗೆ ಎನ್ಕೆ ಅವರಿಗೆ ಬಹಳ ಗೌರವ. ನನ್ನ ಗುರು ಸವಾಯಿ ಗಂಧರ್ವರು ಹಾಗೂ ಪರಮಗುರು

ಅಬ್ದುಲ್ ಕರೀಮುಖಾನರ ಚರಿತ್ರೆಗಳನ್ನು ಅವರು ಬರೆದಿದ್ದಾರೆ. ಎನ್ಕೆ ಆತ್ಮೀಯರೆನಿಸಲು ಇದೂ ಒಂದು ಕಾರಣ.

ಸಾಹಿತಿ, ನಾಟಕಕಾರ ಎನ್ಕೆಯವರ ಮುಖ ನನಗೆ ಅಷ್ಟೊಂದು ಪರಿಚಯವಿದ್ದಲ್ಲ. ಯಾಕೆಂದರೆ ಸಾಹಿತ್ಯದ ಬಗ್ಗೆ ನನಗೇನೂ ಗೊತ್ತಿಲ್ಲ. ಆದರೆ ಅವರ ಕಾದಂಬರಿಗಳನ್ನು ಓದಿ ಮೆಚ್ಚಿದ್ದೇನೆ. ಇತರ ಸಾಹಿತ್ಯ ಕೃತಿಗಳನ್ನು ಬೇರೆಯವರು ಓದಿ ಮೆಚ್ಚಿ ಆಡಿದ ಮಾತುಗಳನ್ನು ಕೇಳಿದ್ದೇನೆ. ಆತ್ಮೀಯರ ಬಗ್ಗೆ ಮೆಚ್ಚಿಗೆಯ ಮಾತು ಕೇಳುವದಕ್ಕಿಂತ ಹೆಚ್ಚಿನ ಸಂತೋಷದ ಸಂಗತಿ ಬೇರೇನಿದೆ ?

# ಎನ್ಕೆಕಾಕಾ–ನನ್ನ ಕಣ್ಣಲ್ಲಿ

**ಲೀನಾ ಶೇಣ್ವಿ**

ಎನ್ಕೆಯವರ ಹೆಸರು ಕೇಳದಂಥ, ಅವರು ರಚಿಸಿದ ಸಾಹಿತ್ಯದ ರಸಪಾನ ಮಾಡ ದಂಥ ಕನ್ನಡಿಗ ಒಬ್ಬನೂ ಸಿಗಲಾರನೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಅವರು ನಾಟಕ, ಕಥೆ, ಕವನ, ಕಾದಂಬರಿ, ಸಾಹಿತ್ಯ ವಿಮರ್ಶೆ, ಹರಟೆ, ನಾಟ್ಯ ಘಟ ಮುಂತಾದ ಸಾಹಿತ್ಯದ ಎಲ್ಲ ರಂಗಗಳಲ್ಲಿಯೂ ತಮ್ಮ ಲೆಕ್ಕಣಿಕೆಯನ್ನು ಯಶಸ್ವಿಯಾಗಿ ಓಡಿಸಿದ್ದಾರೆ. ಹಾಸ್ಯಭರಿತ ಭಾಷಣ ಮಾಡುವವರಲ್ಲಿ, ನಗೆ ಬರಹಗಳನ್ನು ಬರೆಯುವ ವರಲ್ಲಿ ಅವರದು ಎತ್ತಿದ ಕೈ. ಅವರ ಮಾತು ಕೇಳುತ್ತ ಕುಳಿತರೆ ಸಾಕು, ಹೊತ್ತು ಗೊತ್ತಿಲ್ಲದಂತೆ ಉರುಳುತ್ತದೆ. ಅವರ ಲೇಖನ ಓದಲು, ಆರಂಭಿಸಿದರೆ ಮುಕ್ತಾಯ ವಾದದ್ದೇ ಗೊತ್ತಾಗಲೊಲ್ಲದು.

ಅವರೇ ಬರೆದ 'ಶ್ರಾವಣದ ಕೊಳೆ' ಎಂಬ ನಗೆಬರಹ ಮೊಟ್ಟಮೊದಲಿಗೆ ಓದಿದ್ದ ನೆನಪಾಗುತ್ತದೆ. ಆಗ ನಾನು ಮಾಧ್ಯಮಿಕ ಶಾಲೆಯ ಕಟ್ಟೆ ಹತ್ತಿದ್ದೆ ಅಷ್ಟೆ. ಅವರ ಈ ನಗೆಬರಹ ನಮಗೆ ಕನ್ನಡ ವಾಚನದಲ್ಲಿ ಪಾಠ ಎಂದು ಇದ್ದಿತ್ತು. ಅದರಲ್ಲಿ ಅವರು ಧಾರವಾಡದ ಮಳೆಯ ವರ್ಣನೆಯನ್ನು ತುಂಬಾ ರಸವತ್ತಾಗಿ ಸರಳವಾದ ಆಕರ್ಷಕ ಶೈಲಿಯಲ್ಲಿ ನಿರೂಪಿಸಿದ್ದರು. ಅವರ ಒಂದೊಂದು ಮಾತಿನಲ್ಲಿಯೂ ನಗೆಯ ಕಾರಂಜಿ ಪುಟಿದೇಳುತ್ತಿತ್ತು. ಧಾರವಾಡದ ಮಳೆ ನೀರಿನಿಂದ ಹಿಡಿದು ಹಾಲುಕೊಡುವ ಗಂಗವ್ವನ ಹಾಲುನೀರಿನ ತನಕ ಅಷ್ಟೇ ಅಲ್ಲ ಮಾರ್ಕೆಟ್ಟಿನಿಂದ ಮಾಳಮಡ್ಡಿಯ ತನಕ ಚಕ್ರವ್ಯೂಹದಲ್ಲಿ ಸಿಲುಕಿದ ಅಭಿಮನ್ಯುವಿನಂತೆ ಬಗೆಬಗೆಯ ಯಾತನೆಗಳನ್ನು ಸಹಿಸುತ್ತ ತನ್ನ ಮನೆಗೆ ಹೋಗುವಂಥ ಸೈಕಲ ಸವಾರನ ಚಿತ್ರ ಇನ್ನೂ ಕಣ್ಣಿಗೆ ಕಟ್ಟಿದಂತೆ ಇದೆ. ಆಗಂತೂ ನಾನು ಅದೊಂದೇ ಪಾಠವನ್ನು ಅದೆಷ್ಟೋ ಸಲ ಓದುತ್ತಿದ್ದೆ ಮತ್ತು ನನ್ನಷ್ಟಕ್ಕೆ ನಾನೇ ನಗುತ್ತಿದ್ದೆ. ಅಂದಿನಿಂದಲೇ ಅವರನ್ನು ಕಾಣಬೇಕು, ಅವರ ಪರಿಚಯ ಮಾಡಿಕೊಳ್ಳಬೇಕು ಅವರ ಉನ್ನತ ಉದಾತ್ತ ವಿಚಾರಗಳನ್ನು ಅರಿಯಬೇಕು ಎಂದು ನನ್ನ ಬಾಲಮನಸ್ಸು ಹಂಬಲಿಸುತ್ತಿತ್ತು.

ಅಂತೂ ನನ್ನೀ ಹಂಬಲ ಕೈಗೂಡಬೇಕಾದರೆ ೮–೯ ವರ್ಷ ಕಾಯಬೇಕಾಯಿತು. ಅದೂ ಕೂಡ ನಾನು ಆಕಾಶವಾಣಿಯಲ್ಲಿ ನಿಲಯದ ಕಲಾವಿದೆ ಎಂದು ಕೆಲಸಕ್ಕೆ ಸೇರಿ

ದಾಗ. ಮೊದಮೊದಲು ಅವರ ಜೊತೆಗೆ ಮಾತನಾಡಬೇಕೆಂದು ಮನಸ್ಸು ತುಂಬಾ ಹಂಬಲಿಸುತ್ತಿತ್ತು. ಆದರೆ ಇಷ್ಟೊಂದು ದೊಡ್ಡ ಸಾಹಿತಿ ನಮ್ಮಂಥ ಸಾಮಾನ್ಯರ ಜೊತೆಗೆ ಮಾತನಾಡುತ್ತಾರೋ ಇಲ್ಲವೋ ಎಂಬ ಸಂಶಯದಿಂದ ದೂರದೂರ ಇರುತ್ತಿದ್ದೆ. ಆದರೂ ಒಮ್ಮೆ ಧೈರ್ಯಮಾಡಿ ಅವರ ಹತ್ತಿರ ಮಾತನಾಡಲು ಪ್ರಯತ್ನಿಸಿದೆ. ಆಗ ಅವರು ತಾನೊಬ್ಬ ದೊಡ್ಡ ಸಾಹಿತಿ ಎಂಬ ಗರ್ವ ತಿಲಮಾತ್ರವೂ ಇಟ್ಟುಕೊಳ್ಳದೆ ನನ್ನ ಜೊತೆಗೆ ತುಂಬಾ ಸಹಜವಾಗಿ ಮಮತೆಯಿಂದ ಮಾತನಾಡಿದರು. ಈ ಸಿಹಿ ಘಟನೆಯಿಂದ ನನ್ನ ಮನಸ್ಸೂ ಕೂಡ ಅಭಿಮಾನದಿಂದ ಉಬ್ಬಿತು. ಹಿರಿಯರ ಹಿರಿತನದ ಹಿರಿಮೆ ಅವರಲ್ಲಿ ಕಂಡೆ, ತುಂಬಿದ ಕೊಡ ತುಳುಕುವದಿಲ್ಲವೆಂದು ಮನಗಂಡೆ.

ಒಮ್ಮೆ ನಾವು ಆಫೀಸಿನಿಂದ ಮನೆಗೆ ಮರಳುತ್ತಿರುವಾಗ ಮಾತಿಗೆ ಮಾತು ಬಂದು "ಏನಮ್ಮಾ ಸುಧಾ (ನನ್ನ ಮದುವೆಯ ಮುಂಚಿನ ಹೆಸರು), ನೀನಂತೂ ತುಂಬಾ ಚಿಕ್ಕವಳಿದ್ದು ನನ್ನ ಮಗಳ ಹಾಗೆ ಇರುವಿ, ಅಂದ ಬಳಿಕ ನಿನ್ನ ಹತ್ತಿರ ಬಹು ವಚನದಿಂದ ಮಾತನಾಡುವದೆಂದರೆ ನನ್ನ ಮನಸ್ಸಿಗೇಕೋ ಮುಜಗರೆಯಾಗುತ್ತದೆ, ನೋಡು ಏಕವಚನದಿಂದ ಮಾತನಾಡಿದರೆ ನಿನಗೆ ಬೇಸರವಾಗುವದಿಲ್ಲ ತಾನೆ?" ಎಂದು ಕೇಳಿದಾಗ ನನಗಾದ ಸಂತೋಷಕ್ಕೆ ಮೇರೆಯೇ ಇದ್ದಿರಲಿಲ್ಲ ಅವರು ನನಗೆ ತಮ್ಮ ಮಗಳೆಂದು ಭಾವಿಸಿದ್ದನ್ನು ಕಂಡಾಗ ನನ್ನ ಹೃದಯ ಸಂತಸದಿಂದ ಹೂವಾಗಿ ಅರಳಿತ್ತು. ಸಕ್ಕರೆಯ ಸಿಹಿಯನ್ನು ಅಳೆಯಬಹುದು ಆದರೆ ಅಕ್ಕರೆಯ ಆಳವನ್ನು ಅಳೆಯಲು ಸಾಧ್ಯವೆ? ಇಷ್ಟೇ ಅಲ್ಲ ನನಗೆ ಅವರು ಕನ್ನಡ, ಕೊಂಕಣಿ ಕವನಗಳನ್ನು ಬರೆಯುವದರಲ್ಲಿ ಆಗಾಗ ಮಾರ್ಗದರ್ಶನ ಮಾಡುತ್ತ ಪ್ರೋತ್ಸಾಹ ಕೊಡುತ್ತ ಬಂದಿದ್ದಾರೆ. ಅವರ ಈ ಮಹದುಪಕಾರ ನಾನೆಂದಿಗೂ ಮರೆಯಲಾರೆ.

ಅವರು ಆಕಾಶವಾಣಿಯಲ್ಲಿ ಉಚ್ಚ ಅಧಿಕಾರದಲ್ಲಿದ್ದರೂ ಅಧಿಕಾರ ಮಾತ್ರ ಯಾರ ಮೇಲೆಯೂ ನಡೆಸುತ್ತಿರಲಿಲ್ಲ. ತೊಳೆದ ಕನ್ನಡಿಯಂತೆ ಅವರ ನಡೆ–ನುಡಿ ಇದ್ದರೆ ಹರಿವ ಝರಿಯಂತೆ ಸದಾ ನಗಿಸಿ, ನಗುವ ಸುಸ್ವಭಾವ. ಅದಕ್ಕೇ ಅವರು ಇಂದಿಗೂ ಎಲ್ಲರ ಅಚ್ಚುಮೆಚ್ಚಿನ ಅಕ್ಕರೆಯ ಕಾಕಾ ಆಗಿದ್ದಾರೆ.

# ಆಪ್ತ ಸ್ನೇಹಿತ

ಜಿ. ಎಸ್. ಜೋಶಿ

ಅಧಿಕಮಾಸದಲ್ಲಿ ಮೂವತ್ತುಮೂರು ಸಂಖ್ಯೆಯಲ್ಲಿ ಬಾಗಿಣ ಕೊಡುವಂತೆ ಮೂವತ್ತುಮೂರು ವರುಷಗಳ ನಂತರ ಪ್ರಿಯ ಎನ್ಕೆ ಅವರಿಂದ ಒಂದೇ ಕಾಗದ ಬಂದಿತು–ಮರುಭೂಮಿಯಲ್ಲಿ ಜಲಾಶಯದಂತೆ–೧೯೪೬ ರಲ್ಲಿ. ನಾಶಿಕದ ಹತ್ತಿರ ದೇವ ಲಾಲಿ ಸೈನ್ಯ ಠಾಣೆಯಲ್ಲಿ Defence Accounts ಖಾತೆಯಲ್ಲಿ ನಾನು ಕೆಲಸ ಮಾಡು ತ್ತಿದ್ದೆ. ಅದೇ ಆಗ ಪರದೇಶದಿಂದ ಮರಳಿ ಬಂದು ಧಾರವಾಡದ ಸಿವ್ಹಿಲ್ ಆಸ್ಪತ್ರೆ ಯಲ್ಲಿ ಕೆಲಸ ಮಾಡುತ್ತಿದ್ದ ನನ್ನ ಕಿರಿಯ ಸಹೋದರನ ಮದುವೆಯ ಕುರಿತು ಅವರ ಕಾಗದದ ಒಕ್ಕಣಿಕೆಯಾಗಿತ್ತು. ಅವರು ಸೂಚಿಸಿದ ವಧುವನ್ನು ನನ್ನ ತಮ್ಮನಿಗೆ ಮಡದಿಯೆಂದು ಸ್ವೀಕರಿಸಿದರೆ ಬಂಗಾರಕ್ಕೆ ಕುಂದಣ ಕೂಡಿಸಿದಂತೆ ಎಂದು ತಿಳಿಸಿದ್ದರು. ಇವರು ಸೂಚಿಸಿದ ವಧುವನ್ನೇ ನನ್ನ ತಮ್ಮನೂ ಒಪ್ಪಿದ್ದರಿಂದ ಈ ಮಂಗಳ ಕಾರ್ಯ ದಲ್ಲಿ ಎನ್ಕೆ ಅವರು ಹಿರಿದಾದ ಪಾತ್ರವಹಿಸಿ-ಆಧದಿಂದ ಇತಿಯವರೆಗೆ-ನಿಂತು, ಕಳೆದು ಕೊಂಡ ತಮ್ಮ ಸ್ವಂತ ಮಗಳೇ ಇದ್ದಿದ್ದರೆ ಹೇಗೆ ಮದುವೆ ಜರುಗಬೇಕೋ ಹಾಗೆಯೇ ಈ ಮಂಗಳ ಕಾರ್ಯ ಪೂರೈಸಿ ಕೃತಕೃತ್ಯರಾದವರಂತೆ ಸಂಭ್ರಮಪಟ್ಟರು. ಈ ವಧುವಿನ ಮನೆತನಕ್ಕೂ ನಿಮಗೂ ಏನು ಸಂಬಂಧವೆಂದು ಕೇಳಿದರೆ, ಸಂಬಂಧವೇ ಏಕೆ, ಅತಿಥಿಯಾಗಿ ಒಮ್ಮೆ ಅವರ ಮನೆಗೆ ಬಂದಿದ್ದೆ, ಮುಂದೆ ಅವರ ಮನೆಯವರಲ್ಲಿ ಒಬ್ಬ ನಾದೆ ಎಂದು ಸ್ವಾಭಾವಿಕವಾಗಿಯೇ ಹೇಳಿದರು. ವಿಶ್ವ ಕುಟುಂಬೀ ಮಾನವ ಸದ್ವೃತ ದೃಷ್ಟಿ.

ಈ ಒಂದು ಘಟನೆ ಓಡಿಸಿತು ನನ್ನ ಮನಸ್ಸನ್ನು ಮೂವತ್ತೇಳು ವರುಷಗಳ ಹಿಂದೆ. ಆಗಿನ ದಿನಗಳನ್ನು ನೆನೆದುಕೊಂಡು ಮೆಲುಕು ಹಾಕುವದೇ ಒಂದು ಆನಂದ. ಆವರೆ ಆಗಿನ ಎನ್ಕೆ ಈಗಲೂ ಹಾಗೇನೇ ಸ್ವಭಾವದಲ್ಲಿ. ಕರ್ನಾಟಕ ಕಾಲೇಜಿನಲ್ಲಿ ಒಂದೇ ವರ್ಗದಲ್ಲಿ ಓದುತ್ತಿದ್ದುದರಿಂದ ನಮ್ಮ ನಮಸ್ಕಾರ-ಚಮತ್ಕಾರಗಳು ಸ್ನೇಹದಲ್ಲಿ ಪರಿಣಮಿಸಿ ಈ ಸ್ನೇಹವು ಗಾಢವೂ ಆಯಿತು. ಆಗಲೇ ಅವರು ಚತುರ್ಭುಜ ರಾಗಿದ್ದರು. ಕೆಲವು ಸಲ ಅವರ ಮನೆಗೆ ಹೋಗಿ ಆದರಾತಿಥ್ಯವನ್ನು ಸ್ವೀಕರಿಸಿದ್ದೆ. ಆಗಲೇ ಅವರು 'ಇಲೆಕ್ಶನ್' ಮುಂತಾದ ಪ್ರಹಸನಗಳನ್ನು ಬರೆದರಷ್ಟೇ ಅಲ್ಲ ಮೇಲಿಂದ

ಮೇಲೆ ನಾವಿರುವಲ್ಲಿಗೆ ಬಂದು ತಮ್ಮ ನಾಟಕಗಳು ನಮಗೆ ಹೇಗೆ ಅನಿಸುತ್ತವೆ ಎಂದು ಕೇಳಿ ಅವುಗಳನ್ನು ರಂಗಭೂಮಿಯ ಮೇಲೆ ತರಲು ಬಿನ್ನವಿಸಿ ಹುರುಪುಕೊಡುತ್ತಿದ್ದರು. ಅವರಂತೆ ಅವರ ಎಷ್ಟೋ ನಾಟಕಗಳಲ್ಲಿ ನಾನೂ ಭಾಗವಹಿಸಿ ಅಭಿನಯಿಸಿದೆ. ಕಾಲೇಜಿನಲ್ಲಿರುವಾಗ್ಗೆ ನಾಟಕಗಳೆಲ್ಲವೂ ಶ್ರೀರಂಗರ ಮಾರ್ಗದರ್ಶನದಲ್ಲಿಯೇ ರಂಗದ ಮೇಲೆ ಪ್ರದರ್ಶನವಾಗುತ್ತಿದ್ದವು. ಶ್ರೀರಂಗರ ನಾಟಕಗಳು ಎನ್ಕೆ ಅವರ ಮೇಲೆ ಪ್ರಭಾವ ವೇನೋ ಬೀರಿವವು. ಆದರೂ ಎನ್ಕೆ ಅವರು ಸ್ವತಂತ್ರ ನಾಟಕಕಾರರೇ ಆದರು. ಶ್ರೀರಂಗರೂ ಕೂಡ ಅವರನ್ನು ಆರೀತಿ ಹರಸಿದ್ದಾರೆ. ಅಭಿನಯಿಸಿದ ಅಷ್ಟೆಲ್ಲ ಎನ್ಕೆ ಅವರ ಪ್ರಹಸನಗಳಲ್ಲಿ ಈ ವರೆಗೂ ಅಚ್ಚಳಿಯದೇ ಮನಸ್ಸಿನಲ್ಲಿ ಉಳಿದುದು ಅವರ— ಬಾರ್‌ರೂಮು. ಈ ಪ್ರಹಸನದಲ್ಲಿ ಎನ್ಕೆ ಅವರದು-ಚಂಚೀ ವಕೀಲನ ಪಾತ್ರ. ನೈಜವಾಗಿ, ರಸವತ್ತಾಗಿ ಅಭಿನಯಿಸಿ ಒಳ್ಳೆಯ ನಟರೆಂದೆನಿಸಿಕೊಂಡರು. ಎಲ್ಲ ಶಾಲೆ-ಕಾಲೇಜುಗಳ ವಾರ್ಷಿಕೋತ್ಸವಗಳಲ್ಲಿ ಎನ್ಕೆ ಅವರ ನಾಟಕಗಳೇ ಪುನಃ ಪುನಃ ತೆರೆಯ ಮೇಲೆ ಬರುತ್ತಿದ್ದವು.ಅಷ್ಟೊಂದು ಬೇಡಿಕೆ ಹಾಗೂ ಜನಪ್ರಿಯ ಪ್ರಹಸನಗಳು.

೧೯೩೬ ರಲ್ಲಿ ಅವರು ಬಿ.ಎ. ಪಾಸು ಮಾಡಿ, ಎಂ.ಎಂ.ಬಿ.ಟಿ. ಎಂದು ಅವರು ಬೇರೆ ಕಡೆ ಹೋದರು. ಮುಂದೆ ಅವರ ನನ್ನ ಅಗಲುವಿಕೆ ಮೂವತ್ತುಮೂರು ವರುಷಗಳವರೆಗೆ ಈ ದೀರ್ಘಾವಧಿಯಲ್ಲಿ ದೊರೆತ ಎಷ್ಟೋ ಅವರ ಸಾಹಿತ್ಯ ಕೃತಿಗಳನ್ನು ಅಭಿಮಾನದಿಂದ ಓದಿದವರಲ್ಲಿ ನಾನೂ ಒಬ್ಬನು. ನಾನೂ ಸೇವಾ ನಿವೃತ್ತನಾದ ಬಳಿಕ ಧಾರವಾಡದಲ್ಲಿಯೇ ಇರುವದರಿಂದ ಯಾವಾಗಲಾದರೂ ಕಲೆಯುತ್ತೇವೆ ಮತ್ತು ಮುಕ್ತಮನಸ್ಸಿನಿಂದ ಮಾತನಾಡುತ್ತೇವೆ. ನನ್ನ ಸಹಪಾಠಿ, ಸ್ನೇಹಿತ-ಅಮೂ—ಆಪ್ತ ಸ್ನೇಹಿತರಾದ ಎನ್ಕೆ ಉನ್ನತ ಮಟ್ಟದ ಸಾಹಿತಿಗಳ ಮಾಲೆಯಲ್ಲಿ ರಾರಾಜಿಸುವದು ನನಗೆ ಅತೀವ ಹೆಮ್ಮೆಯ ವಿಷಯ.

ಧಾರವಾಡಕ್ಕೆ ಮರಳಿ ಬಂದಂದಿನಿಂದ ಎನ್ಕೆ ಅವರನ್ನು ನೋಡುತ್ತಲಿದ್ದೇನೆ, ಅವರು ಬಾನಿನೆತ್ತರ ಬೆಳೆದಿರುವರೆಂದು. ಕಾಲೇಜಿನಲ್ಲಿರುವಾಗ್ಗೆ ಅವರಲ್ಲಿ ಸುಪ್ತವಾಗಿದ್ದ ಪ್ರತಿಭೆ ನಮಗೆ ಅಷ್ಟೊಂದು ಕಂಡುಬರಲಿಲ್ಲ. “ಏ ನಮ್ಮ ಎನ್ಕೆ ಅಡ್ಡಿ ಇಲ್ಲಪಾ” ಎಂದು ಹಗುರಾಗಿ, ಲಘುವಾಗಿ ತಿಳಿದಿದ್ದೆವು. ಆರತಿ ಹಾಡು—ಹಸೆಗೆ ಕರೆದ ಹಾಡು—ಬೀಗರ ಹಾಡು-ದೇವರ ನಾಮುಗಳಿಂದ ಏಕಾಂಕ ನಾಟಕ-ಏಕಾಂಕದಿಂದ ಪೂರ್ಣಾವಧಿ ನಾಟಕಗಳವರೆಗೂ, ಸಣ್ಣ ಸಣ್ಣ ಕತೆಗಳಿಂದ ಕಾದಂಬರಿವರೆಗೂ ನಡೆದು ಬಂದ ಇವರ ದಾರಿ ಮೆಚ್ಚುವಂತಹದು. ಹರಟೆ, ವಿಮರ್ಶೆ. ಸಾಹಿತ್ಯ,ಚರಿತ್ರೆ, ಜೀವನ ಚಿತ್ರದಂತಹ ವಿವಿಧಕ್ಷೇತ್ರಗಳಲ್ಲಿ ಮನಸ್ಸು ಸೆರೆಹಿಡಿಯುವಂತೆ ಕೃಷಿಮಾಡಿರುತ್ತಾರೆ.ಎನ್ಕೆ ಒಬ್ಬ ಸಾಹಿತಿ, ಒಬ್ಬ ಕಲೋಪಾಸಕ, ಕಲಾವಿದ ಮಾತ್ರವಲ್ಲ—ಅವರು ಒಬ್ಬ ಸ್ನೇಹಿತ-ಮನೆಯ ಯಜಮಾನ-ಪ್ರಬುದ್ಧ, ಒಳ್ಳೆಯ ಮೂವರು ಗಂಡುಮಕ್ಕಳ ತಂದೆಯೆಂದು-ಮೂವರು ಸೊಸೆಯರಿಗೆ ಪೂಜ್ಯರೆಂದು ಬೇರೆ ಬೇರೆ ಯೋಚನೆ ಮಾಡಿದಾಗ ಅವರು ಎಲ್ಲ ಗುಣ

ಗಳಿಂದಲೂ ಪ್ರತ್ಯೇಕವಾದ ನಿರ್ಮಲ ವ್ಯಕ್ತಿ ಹಾಗೂ ವಿನಯಶೀಲರು ಎಂಬುದು ನಿರ್ವಿವಾದ.

ಎನ್ಕೆ ತಮ್ಮ ಜೀವಮಾನದಲ್ಲಿ ಬಹಳಷ್ಟು ಕಷ್ಟಯನ್ನುಂಡವರು. ಬಹುಶಃ ಇವರಷ್ಟು ಕಷ್ಟ ಸನ್ನಿವೇಶಗಳನ್ನು ಎದುರಿಸಿದವರು ಬೇರೆ ಇರಲಿಕ್ಕಿಲ್ಲ. ಜೀವನದ ಈ ಕಷ್ಟಯನ್ನೇ ತಮ್ಮ ಲೇಖನಗಳ ಮುಖಾಂತರ-ಕಷ್ಟರಸವನ್ನಾಗಿಳಿಸದೇ–ಕರುಣಾರಸವನ್ನಾಗಿ ತೋಡಿಕೊಂಡಿದ್ದಾರೆ. ಕಾದಂಬರಿಗಳಲ್ಲಿ ಅತಿಯಾದ-ಈ ಕರುಣಾರಸದಿಂದ ಹೊರಬರಲು ಅವರು ತಮ್ಮ ನಾಟಕ-ಹರಟೆಗಳ ಮುಖಾಂತರ ಹಾಸ್ಯದ ಹೊನಲಿನಲ್ಲಿ ನಲಿದಾಡಿ-ನಕ್ಕು-ನಗಿಸಿದ್ದಾರೆ. "ಜೀವನದ ವಿಕ್ಷಿಪ್ತತೆ ಹಾಗೂ ಸೂಕ್ಷ್ಮದರ್ಶನಗಳನ್ನು" ರೂಪಿಸಿ ನಗೆಯ ಲಹರಿಗಳಲ್ಲಿ ಮಿನುಗಿದ್ದಾರೆ. "ಸಂಕಟಗಳೆಷ್ಟೇ ಬಂದರೂ ಸತ್ವವನ್ನು ಬಿಟ್ಟುಕೊಡುವದಿಲ್ಲ" ಎಂಬ ತತ್ವಕ್ಕೆ ಅಂಟಿಕೊಂಡು-ಹಸ್ತಾಂತರ-ಎಂಬ ನಾಟಕ ಬರೆದಿರುವರೇನೋ, ಇವರನ್ನು ಕಂಡು ಮಾತನಾಡಿಸಿದವರಿಗೆ ಇವರ ಮುಖದ ಮೇಲೆ ಸದಾ ಲಾಸ್ಯವಾಡುವ ಮುಗುಳ್ನಗೆ, ಸರಳತೆಯ ಚಿನ್ಹ, ಮುದಮೋದಿತ ಮಾತು ಹಾಗೂ ವಿನಯಗಳು ಇವರನ್ನು ಜೀವನದಲ್ಲಿ ಎಷ್ಟೊಂದು ಸುಖಿಯಾಗಿರಿಸಿವೆಯೆಂದು ಅನಿಸುತ್ತದೆ. ಆದರೆ ವರಕವಿ ಪೂಜ್ಯ ಬೇಂದ್ರೆ ಅವರು ಹೇಳುವಂತೆ, 'ಮಮತಾಜಳನು ಹುಗಿದು ತಾಜಮಹಲನು ಕಟ್ಟಿ ನಿಜದುಃಖ ಮರೆಸಬಹುದೇ,' ಎಂಬಂತೆ. ಇವರ ಜೀವನದಲ್ಲಿಯ ಘಟನೆಗಳನ್ನು ಬಲ್ಲವರೇ ಬಲ್ಲರು. ಆದರೆ ಇವರು ಸೃಷ್ಟಿಸಿದ ಸಾಹಿತ್ಯದಲ್ಲಿ ಅಷ್ಟೇ ಅಲ್ಲ ತಮ್ಮ ನಿತ್ಯಜೀವನದಲ್ಲಿಯೂ ಕೂಡ ಶಕ್ತಿಮೀರಿ ಸಾಧಿಸುತ್ತಿರುವ ಅವರ ತತ್ವವೆಂದರೆ ದುಃಖಗಳೆಲ್ಲವೂ ನನಗೇ ಇರಲಿ, ಮತ್ತೊಬ್ಬರಿಗೆ ಆಗುವ ಸುಖದಲ್ಲಿ, ತಮಗೆ ಪಾಲು ಇರದಿದ್ದರೂ ಚಿಂತೆ ಇಲ್ಲ, ಅವರು ಸುಖಿಯಾಗಿರಲಿ ಎಂಬುದು.

ಎನ್ಕೆ ಅವರದು ಬಹುಮುಖ ಪ್ರತಿಭೆ, ಪತ್ರಿಕಾ ಸಂಪಾದಕರಾಗಿ, ಪ್ರಾಧ್ಯಾಪಕರಾಗಿ, ಲೇಖಕರಾಗಿ, ಆ ಬಳಿಕ ಆಕಾಶವಾಣಿಯಲ್ಲಿ ಸೇವೆಗಾಗಿ ಸೇರಿದರು. ಜೀವನಕ್ಕೆ ಒಂದು ನೆಲೆ ದೊರಕಿತೆಂದು ಸುಮ್ಮನಿರಲಿಲ್ಲ ಇವರು. ಸೇವೆ ಸಲ್ಲಿಸುತ್ತಲೇ ಗೀತನಾಟಕ-ರೂಪಕ, ನಾಟಕ ಇನ್ನೂ ಅನೇಕ ಏಕಾಂಕ ನಾಟಕಗಳು–ಏಕಾಂಕ ನಾಟಕವೆಂದರೆ ಎನ್ಕೆ-ಹೊರಹೊಮ್ಮಿದವು ಇವರ ಪ್ರತಿಭೆಯ ಬತ್ತಳಿಕೆಯಿಂದ. ಇವರ ಹಾಸ್ಯದ ಹಾಗ್ಗಾರಿಕೆಯನ್ನು ಮೆಚ್ಚಿ ಅನೇಕ ಸಂಘ ಸಂಸ್ಥೆಗಳು ಗೌರವಿಸಿವೆ. 'ಬಾರ್‌ರೂಮ್'ದಂತಹವು ಶ್ರೈಜನಾಟಕಗಳೆಂದು ಪ್ರಶಂಸಿಸಿದರೆ, 'ಕಸಿ ಹೃದಯ ಕಣ್ತೆರೆದಿತ್ತು' ಮೊದಲಾದವು ರಾಷ್ಟ್ರೀಯ ಮಟ್ಟದ ನಾಟಕಗಳೆಂದು ಗೌರವಿಸಿವೆ. ಕರ್ನಾಟಕ ಸಾಹಿತ್ಯ ಅಕಾದೆಮಿಯು ಪ್ರಶಸ್ತಿ ನೀಡಿ ಸನ್ಮಾನಿಸಿವೆ. ೧೯೬೦-೬೧ ರಲ್ಲಿ ಹುಬ್ಬಳ್ಳಿಯ ಲಾಯನ್ಸ ಕ್ಲಬ್ಬಿನ ಪ್ರಾರಂಭೋತ್ಸವಕ್ಕೆ ಕವಿ ವಿನಾಯಕರು ಮುಖ್ಯ ಅತಿಥಿಗಳಾಗಿ ಆಮಂತ್ರಿತರಾಗಿದ್ದರು. ಹುಬ್ಬಳ್ಳಿ-ಧಾರವಾಡಗಳಲ್ಲಿ ರವರ ೩-೪ ದಿವಸಗಳ ವಾಸ್ತವ್ಯದ ಕಾಲಕ್ಕೆ ಎನ್ಕೆ ಅವರಿಗೆ ಸದಾ ತಮ್ಮ ಹತ್ತಿರವೇ ಇರಲು ವಿನಂತಿಸಿಕೊಂಡಿದ್ದರು. ಒಂದು ಬೃಹದ್ಗ್ರಂಥವನ್ನು

ಬರೆದು ತೆಗೆಯಲು ಆಗಲೇ ಕವಿ ವಿನಾಯಕರು ಎನ್ಕೆ ಅವರಿಗೆ ಮಾರ್ಗದರ್ಶಕರಾಗಿದ್ದರು. ಗ್ರಂಥ ಪೂರ್ತಿಯಾಗುವ ಹಂತಕ್ಕೆ ಬಂದಿದೆ. ಆಗ್ಗೆ ಎನ್ಕೆ ಹಾಗೂ ನಾನು ಇಡೀ ಒಂದು ದಿವಸ ಕೂಡಿಯೇ ಇರುವ ಸದವಕಾಶ ಒದಗಿತ್ತು.

ಒಳ್ಳೆಯ ಜೀವನವು ಒಂದು ಸಾಧನೆಯೆಂದು ತಿಳಿದವರು ಎನ್ಕೆ. ಜೀವನದ ಅವ್ಯಾಹತ ತಪಸ್ಸಿನಲ್ಲಿ ಸಿದ್ಧಿಯ ಹೂವು ಅರಳಿ ಜೀವದ ಶ್ರೇಷ್ಠತೆಯನ್ನು ಕಂಡು ಕೊಂಡವರು. ಅದಕ್ಕೆ ಕಾರಣವೆಂದರೆ ಜೀವನವು ಸಹನೆ–ತಾಳ್ಮೆಗಳ ಸರಪಣಿ. ಈ ಸರಪಣಿ ಬಿಗಿಯಾದಷ್ಟು ಜೀವಕ್ಕೆ ಮಹತ್ವ ಎಂಬುದನ್ನು ಅರಿತು ಆ ರೀತಿ ಸಾಧನೆಗೈದ ಸಂಸಾರ ಸಾಧಕರೂ ಹೌದು-ಸಾಹಿತಿ ಕಲೋಪಾಸಕರೂ ಹೌದು. ಅಂತೆಯೇ ಅವರು ಹೊಣೆಗಾರ ಲೇಖಕರು. ಕಾದಂಬರಿ, ನಾಟಕ, ಕವಿತೆ, ಹರಟೆ ಯಾವುದನ್ನು ಬರೆದರೂ ಈ ನೆಲದ ನೂತನ ಸುಗಂಧವನ್ನು ಬೀರುತ್ತವೆ, ಅವರ ಕೃತಿಗಳು. ಆದ್ದರಿಂದ ಎನ್ಕೆ ಅವರು ರೀತಿವಂತ ಲೇಖಕರ ಪಂಕ್ತಿಯಲ್ಲಿ ಸೇರಿದವರು.

ಎನ್ಕೆ ಅವರು ಮೊದಲಿನಿಂದಲೂ ರಸಿಕರು. ಅವರ ನಡೆ, ನುಡಿ, ವೇಷ ಎಲ್ಲವೂ ನಿರಾಡಂಬರ. ಗೃಹಲಕ್ಷ್ಮಿ ಇದ್ದಾಗಲಂತೂ ಸರಿಯೇ, ಈಗಲೂ ಕೂಡ ಮನೆಯಲ್ಲಿ ರಾಶಿ–ರಾಶಿ ಪುಸ್ತಕಗಳು ಒಟ್ಟಿದ್ದರೂ, ಅವೆಲ್ಲವೂ ಕಚ್ಚುಕಟ್ಟಾಗಿ ಮನದುಂಬುವ ಶಿಸ್ತಿನಲ್ಲಿ ಕೂಚು ಮಾಡುವ ಸೈನಿಕರಂತೆ ಶೋಭಿಸುತ್ತವೆ. ಯಾವಾಗಲೂ ಬಹುಶಃ ನಡು ರಾತ್ರಿಯ ನಿದ್ದೆಗಣ್ಣಿನಲ್ಲಿಯೂ 'ನಾನಿಯ ಲಹರಿಗೆ' ಯಾವುದೇ ಪುಸ್ತಕ ಬೇಕಾದರೂ ಒಮ್ಮೆಲೆ ಕೈಗೆಟಕುವಂತಹ ಅಚ್ಚುಕಟ್ಟುತನ. ಒಮ್ಮೆ ಒಂದು ಸಮ್ಮೇಳನದಲ್ಲಿ ನಾಟಕ ವಾಚನ ಮಾಡಬೇಕಿತ್ತು ನಾನು. ಎನ್ಕೆ ಅವರಿಗೆ ಕೃಷ್ಣಮೂರ್ತಿ ಪುರಾಣಿಕರು ಬರೆದ "ಸೈರಂಧ್ರಿ" ಪುಸ್ತಕ ಬೇಡಿದೆ. ತನ್ನ ಹತ್ತಿರ ಇದ್ದಿಲ್ಲವಾದ್ದರಿಂದ, ಇನ್ನೊಬ್ಬ ಮಗನ ಮನೆಯಲ್ಲಿರಬೇಕು, ಹುಡುಕಿಕೊಡುವೆ, ಒಂದು ದಿವಸ ತಡೆಯಿರೆಂದು ಹೇಳಿದರು. ನನಗೆ ಅಂದಿನ ದಿನವೇ ಬೇಕಾಗಿತ್ತು ಆ ಪುಸ್ತಕ. ಈ ಮಧ್ಯೆ ನೀವೇನಾದರೂ ಅಂತಹ ಪುಸ್ತಕ ಸರಳರಗಳೆಯಲ್ಲಿ ಬರೆದಿರುವಿರಾ ಎಂದು ಕೇಳಿದ್ದಕ್ಕೆ ಅವರು ಮೊದಲು ಏನೂ ಹೇಳದೇ ಇದ್ದರೂ ಬಲವಂತ ಮಾಡಿದ ಮೇಲೆ ಅವರೂ 'ಕೀಚಕ ವಧೆ' ಎಂಬ ಕೈಬರಹದ ಕರಡು ಕೊಟ್ಟು-ಇದಿನ್ನೂ ಅಚ್ಚಾಗಿಲ್ಲ-ವಾಚನ ಮಾಡಲು ತೊಂದರೆ ಯಾದೀತು; ಪುರಾಣಿಕರದೇ ಚೆನ್ನಾಗಿದೆ. ಯೋಗ್ಯವಾದುದನ್ನೇ ಆರಿಸಿರುವಿರಿ ಎಂದು ಹೇಳಿದರು. ಇದು ಎನ್ಕೆ ಅವರ ವಿನಯವಷ್ಟೇ ಅಲ್ಲ ಮತ್ತೊಬ್ಬ ಸಾಹಿತಿಗೆ ತೋರಿಸಿದ ಆತ್ಮೀಯ ಗೌರವವೂ ಅಲ್ಲವೇ?

ಅಧ್ಯಾತ್ಮ ವಿಷಯದಲ್ಲಿಯೂ ಅವರದು ನಿಸ್ಸೀಮ ಅಭ್ಯಾಸವೆಂದು ನನಗೆ ಕಂಡು ಬಂದಿದೆ. ಬಹು ಕಷ್ಟಸಾಧ್ಯವಾದ ಯುಗಾಂತರಗಳ ಧ್ಯಾನ, ಅನುಷ್ಠಾನ-ಪರಿಚರ್ಯಾದಿಗಳು-ಈ ಕಲಿಯುಗಕ್ಕೆ ಬೇಕಿಲ್ಲ. ಅವುಗಳಿಂದ ಸಾಧ್ಯವಾದ-ಆಗುವ ಸದ್ಗತಿ ಕೇವಲ ಸುಲಭದಿಂದ ಆಚರಿಸಬಹುದಾದ ಸತ್ಸಂಗ-ಹರಿ ಕೀರ್ತನೆಗಳಿಂದ ಲಭಿಸುತ್ತದೆ. ಸರ್ವ

ಧರ್ಮ ಸಮನ್ವಯ ದೃಷ್ಟಿಯುಳ್ಳ ಎನ್ಕೆ ಅವರು ಶ್ರೀ ದತ್ತಾತ್ರೇಯ, ಶ್ರೀಗುರು ರಾಘವೇಂದ್ರ, ಶ್ರೀ ಜಿನೇಶ್ವರ, ಶ್ರೀ ಬಸವೇಶ್ವರ, ಕನ್ನಡ ದೇವಿಯಂತೂ ಸರಿಯೇ-ದೇವತೆಗಳ ಪ್ರಾತಃಸ್ಮರಣೀಯ ಹಾಡು ಕಟ್ಟಿ ಆರಾಧಿಸಿರುತ್ತಾರೆ. ಗಹನವಾದುವನ್ನು ತಿಳಿದುಕೊಳ್ಳಲು ಮೂರ್ತಿಮಂತವಾಗಿರುವ-ಅಂದರೆ-ಸಾಕಾರವಾದುದೇನಾದರನ್ನೂ ಮಾನವನು ಬೇಡುತ್ತಾನೆ. ದೇವನು ಒಬ್ಬನೇ–ಅವನ ಒಂದೊಂದು ಗುಣವೂ ಒಂದೊಂದು ರೂಪ. ಈ ತೆರನಾದ ಅನೇಕ ರೂಪಗಳನ್ನು ಅನೇಕ ಜನರು ತಮ್ಮಿಷ್ಟ ದಂತೆ ಆರಾಧಿಸುತ್ತಾರೆಂದು ಘೋಷಿಸುವ ಎನ್ಕೆ ಅವರ ವೈಖರಿ ಅವರಿಂದಲೇ ಕೇಳಿ ತಿಳಿದುಕೊಳ್ಳಬೇಕು.

ಎನ್ಕೆ ಅವರು ವರಕವಿ ಪೂಜ್ಯ ಬೇಂದ್ರೆ ಅವರನ್ನು ಕುರಿತು ಒಂದು ಗ್ರಂಥ ಬರೆಯಲು ಸಂಕಲ್ಪ ಮಾಡಿದ್ದಾರೆ. ಬೇಂದ್ರೆ ಅವರು ಸಹ ಎನ್ಕೆ ಅವರನ್ನು ತಮ್ಮ ಪರಮ ಶಿಷ್ಯರೆಂದು ಆಶೀರ್ವದಿಸಿದ್ದಾರೆ. ಇದಕ್ಕೆ ಪೂರ್ವಪೀಠಿಕೆ ಎಂಬಂತೆ ಪೂಜ್ಯ ಬೇಂದ್ರೆ ಅವರನ್ನು ಪೂರ್ಣ ತಿಳಿದುಕೊಳ್ಳಲು 'ಬೇಂದ್ರೆ:ನಾ(ನಾರಾಯಣ) ದ(ದತ್ತ) ಸಂವಾದ' ಎಂಬ ಎನ್ಕೆ ಅವರ ಲಘು ಪ್ರಬಂಧಗಳ ಸಂಕಲನ ಗ್ರಂಥ ೧೯೭೬ ರಲ್ಲಿಯೇ ಪ್ರಕಟವಾಗಿದೆ.

ಇಂತಹ ಮೇಧಾವೀ ಆಪ್ತ ಸ್ನೇಹಿತ ಎನ್ಕೆ ಅವರ ಇನ್ನೂ ಎಷ್ಟೊಂಟು ಕೃತಿಗಳು ಪ್ರಕಟಣೆಗಾಗಿ ಕಾದು ಕುಳಿತಿವೆ: ಹಾಗೂ ಅಪ್ರಕಟಿತ ಕೃತಿಗಳನ್ನು ಪ್ರಕಟಿಸಲು ಒಂದು ಸ್ಪಷ್ಟ ಯೋಜನೆಯನ್ನು ಹಾಕಿಕೊಳ್ಳಬೇಕಾಗಿದೆಯೆಂದು ಸಿದ್ಧಲಿಂಗ ಪಟ್ಟಣಶೆಟ್ಟಿಅವರು ತಿಳಿಸಿದ್ದಾರೆ. ಅತ್ಯಂತ ಸ್ತುತ್ಯ ಕಾರ್ಯ. ಅವರಿಗೆ ಅನೇಕಾನೇಕ ಹೃತ್ಪೂರ್ವಕ ಅಭಿನಂದನೆಗಳು. ಈ ಮಹತ್ತರ ಕಾರ್ಯದಲ್ಲಿ ಅವರಿಗೆ ತುಂಬಾ ಯಶ ದೊರೆಯಲಿ, ಇದಕ್ಕೆ ಅಭಿಮಾನಿ ಕನ್ನಡಿಗರೆಲ್ಲರ ಸಹಾಯ ಅತ್ಯವಶ್ಯವೆಂದು ಬೇರೆ ಹೇಳಬೇಕಿಲ್ಲ.

# ನಮ್ಮ ಎನ್ಕೆ ಮಾಸ್ತರ್

## ಪದ್ಮಾ ಮುದಕವಿ

ನನ್ನ ಶಾಲೆಯ ದಿನಗಳ ನೆನಪಾದಾಗಲೆಲ್ಲ ನನಗೆ ಗುರುವರ್ಯ ಎನ್ಕೆ ಕುಲಕರ್ಣಿಯವರ ನೆನಪು ಪ್ರಥಮವಾಗಿ ಬರುತ್ತದೆ. ಅವರ ಆಗಿನ ಹಸನ್ಮುಖ ನಲ್ವತ್ತು ವರ್ಷಗಳ ನಂತರವೂ ಈಗಲೂ ಇನ್ನೂ ಹಾಗೆಯೇ ಉಳಿದಿದೆ. ಆಗ ಅವರು ನಮಗೆ ಕನ್ನಡ ಕಲಿಸುತ್ತಿದ್ದರು. ಹಾವಭಾವದೊಂದಿಗೆ ಅವರ ವಿಷಯ ನಿರೂಪಣಾ ಶೈಲಿ ವಿದಾರ್ಥಿಗಳ ಮನ ಸೆಳೆಯುವಂತಿತ್ತು. ಎಂತಹ ಜಡ ವಿದ್ಯಾರ್ಥಿಗಳಲ್ಲೂ ಕಲಿಯುವ ಬಗ್ಗೆ ಕುತೂಹಲ ಆಸಕ್ತಿ ಕೆರಳಿಸುತ್ತಿತ್ತು. ಅವರ ಪೀರಿಯಡ್ಡು ಯಾವಾಗ ಬರುವದೋ ಎಂದು ನಾವು ಉತ್ಸುಕತೆಯಿಂದ ಕಾಯುತ್ತಿದ್ದೆವು.

ನಿಜವಾಗಿಯೂ ಕನ್ನಡ ಸಾಹಿತ್ಯದ ಬಗ್ಗೆ ನನಗೆ ಅಭಿರುಚಿ ಹುಟ್ಟಲು ಶ್ರೀಯುತರ ಸಾಹಿತ್ಯ ಕೃತಿಗಳೇ ಕಾರಣವಾದವು. ನನ್ನ ಶಿಕ್ಷಣವು ಒಂದು ಮ್ಯಾಟ್ರಿಕ್‌ದ ಹಂತದ ವರೆಗಾದರೂ ಮುಂದುವರಿಯಲೂ ಕೂಡ ಅವುಗಳೇ ಕಾರಣ. ಇದನ್ನು ನಾನು ಸದಾ ಗೌರವಪೂರ್ವಕ ನೆನೆಸುತ್ತೇನೆ. ಶಾಲೆಯ ಸ್ನೇಹ-ಸಮ್ಮೇಲನದ ಅಂಗವಾಗಿ ಅವರೇ ಬರೆವ ವಸುಂಧರಾಖ್ಯಾನವನ್ನು ನಾವು ಆಡಿದ ನೆನಪು ನನ್ನ ಮನದಲ್ಲಿ ಇನ್ನೂ ಹಚ್ಚ ಹಸಿರಾಗಿವೆ. ಅವರ ನಿರ್ದೇಶನದಲ್ಲಿ ಅದರ ರಂಗತಾಲೀಮಿನ ಕಾಲದಲ್ಲಿ ನಡೆದ ರಸ ನಿಮಿಷಗಳ ನೆನಪು ನನ್ನಲ್ಲಿ ಇನ್ನೂ ಅಚ್ಚಳಿಯದೆ ಉಳಿದಿವೆ. ನೆನಸಿದಾಗಲೆಲ್ಲ ನಾನಿನ್ನೂ ವಿದ್ಯಾರ್ಥಿದೆಸೆಯಲ್ಲಿಯೇ ಇರುವೆನೋ ಎಂಬ ಭಾವನೆ ಬರುತ್ತದೆ.

ಆಗಿನ ಮಧುರ ಸ್ಮೃತಿಗಳಲ್ಲಿ ವಿಶೇಷವಾಗಿ ನೆನಪುಳಿದದ್ದೆಂದರೆ ನಾನು ನಮ್ಮ ಮಾಸ್ತರರ ಪ್ರೋತ್ಸಾಹದಿಂದ ನಮ್ಮ ಶಾಲಾ ವಾರ್ಷಿಕ ಪತ್ರಿಕೆಯಾದ 'ತೇಜಸ್ವಿ'ಯ ಪ್ರಕಟನೆಯಲ್ಲಿ ಭಾಗವಹಿಸಿದ್ದು. ಅದರಲ್ಲಿ ನನ್ನ ಎರಡು ಕವಿತೆಗಳೂ ಒಂದು ಲೇಖನವೂ ಪ್ರಕಟದಾದದ್ದಲ್ಲದೆ ಶಾಲೆಯ ಹೊಸ ಕಟ್ಟಡದ ಬಗ್ಗೆ ನಾನು ಬರೆದ ಮೂರನೆ ಕವಿತೆ ಮೊದಲ ಪುಟದಲ್ಲಿಯೇ ಅಚ್ಚಾಗಿ ನನಗೆ ಅತ್ಯಂತ ಆನಂದವನ್ನುಂಟುಮಾಡಿತು. ಇದಕ್ಕೆ ಸ್ಫೂರ್ತಿ ಹಾಗೂ ಪ್ರೇರಣೆ ನೀಡಿದವರೇ ಗುರುಗಳಾದ ಎನ್ಕೆಯವರು. ಅವರು ವಿದ್ಯಾರ್ಥಿಗಳಲ್ಲಿ ಬರೆಯುಬಲ್ಲವರಾದವರನ್ನು ಅರಿತುಕೊಂಡು ಅವರ ಬುದ್ಧಿಗೆ ಚಾಲನೆ ಕೊಡುತ್ತಿದ್ದರು. ಅಂದಿನ ತೇಜಸ್ವಿಯ ಬರಹಗಾರರ ಬಳಗದಲ್ಲಿ ಇಂದು ಅನೇಕರು

ಸುಪ್ರಸಿದ್ಧ ಸಾಹಿತಿಗಳಾಗಿದ್ದಾರೆ. ಶಂಕರ ಮೊಕಾಶಿ ಪುಣೇಕರ ಅವರು ಅವರಲ್ಲೊಬ್ಬರು. ಕುಮಟಾ ಕಾಲೇಜದಲ್ಲಿ ಉಪನ್ಯಾಸಕರಾಗಿದ್ದ ಎಲ್. ಜಿ. ಜೋಶಿಯವರೂ ಇವರ ವಿದ್ಯಾರ್ಥಿಗಳೇ.

ಇನ್ನೊಂದು ನನ್ನ ನೆನಪಿನ ಅಣಿಮುತ್ತೆಂದರೆ ನಾವು ಮೂವರು ಗೆಳತಿಯರು ಶಾಂತಾ ನಾಡಿಗೇರ, ಪ್ರಮೀಲಾ ಕುಲಕರ್ಣಿ (ಈಗ ವಿದೇಶದಲ್ಲಿರುವಳು) ಮತ್ತು ನಾನು ನಮ್ಮ ಗುರುಗಳ ಗುಂಪಿಗೆ ಪಾನಕ ಕೋಸಂಬ್ರಿಗಳ ಸರಬರಾಯಿ ಮಾಡಿದ್ದು. ಆ ಸಂದರ್ಭ ಹೀಗೆ: ನಮ್ಮ ಶಾಲೆಯು ಆಗ, ಈಗಿನ ಮಾಳಮಡ್ಡಿಯ ಈಗಿನ ಕೆನರಾ ಬ್ಯಾಂಕಿನ ಹಿಂದುಗಡೆಯ ಹಳೆಯ ಕಟ್ಟಡದಲ್ಲಿತ್ತು. ನಮ್ಮ ವಾರ್ಷಿಕ ಪರೀಕ್ಷೆ ಮುಗಿದ ನಂತರ ಎಲ್ಲ ಮಾಸ್ತರರು ಪೂಜ್ಯ ಮುಳಿಯವರು, ಹರಪನಹಳ್ಳಿಯವರು, ಎಸ್. ಜಿ. ನಾಡಿಗೇರ ಅವರೂ ಕೆ. ಕೆ. ಶೆಟ್ಟಿಯವರೂ ಮತ್ತು ಪನ್ನಾಯವರೂ ತಮ್ಮ ತಮ್ಮ ಕ್ಲಾಸಿನ ಪೇಪರ ತಪಾಸು, ರಿಝಲ್ಟ್ ಶೀಟ ತಯಾರಿಸಲು ದಿನಾಲೂ ಶಾಲೆಯಲ್ಲಿ ಸೇರುತ್ತಿದ್ದರು. ಅಂದು ನಮ್ಮ ಮನೆಯಲ್ಲಿ ಚೈತ್ರಗೌರಿಯ ದೊಡ್ಡ ಹೂವೀಳ್ಯ ಮಾಡಿದ್ದು ನಮ್ಮ ಮನೆಯ ಹತ್ತಿರವೇ ವಾಸವಾಗಿದ್ದ ಕುಲಕರ್ಣಿಯವರಿಗೆ ಗೊತ್ತಿತ್ತು. ನಾನು ನನ್ನ ತಂಗಿ ಸಾವಿತ್ರಿ ಮನೆಯಲ್ಲಿ ಅಂಥ ಸಮಾರಂಭ ನಡೆದಿದ್ದರೂ, ಮೆಲ್ಲಗೆ ಮನೆಯಿಂದ ಹೊರಬಿದ್ದು ಗೆಳತಿಯರೊಂದಿಗೆ ಶಾಲೆಗೆ ಹೋಗಿ ನಮ್ಮ ಗುಣಾಂಕಗಳನ್ನು ಮೊದಲೇ ಅರಿತುಕೊಳ್ಳಲು ಅವರನ್ನು ಪೀಡಿಸಹತ್ತಿದೆವು. ಮಾಸ್ತರರೂ ತಮಾಷೆಗೆ 'ನಮಗೂ ಪಾನಕ ಕೋಸಂಬ್ರಿ ಕೊಟ್ಟರಷ್ಟೇ ನಿಮ್ಮ ಮಾರ್ಕ್ಸ ಹೇಳುವೆ'ವೆಂದರು. ಕೂಡಲೇ ನಾನು ಮನೆವರೆಗೆ ಒಂದೇ ಓಟ ಕಿತ್ತು ದೊಡ್ಡ ತಂಬಿಗೆ ತುಂಬ ಪಾನಕ, ಬುಟ್ಟಿ ಕೋಸಂಬರಿಗಳನ್ನು ತಂದು ಎಲ್ಲ ಗುರುಗಳಿಗೂ ಹಂಚಿ ನನ್ನ ಗುಣಗಳನ್ನು ತಿಳಿದುಕೊಂಡು ಮನೆಗೆ ಓಡಿದ್ದೆ. ಆ ಸಲವೂ ಎಂದಿನಂತೆ ಕನ್ನಡ ವಿಷಯದಲ್ಲಿ ನನ್ನ ವರ್ಗಕ್ಕೆ ಮೊದಲಿಗಳೇ ಆಗಿದ್ದೆ. ನನ್ನಣ್ಣ ಮಾತ್ರ ಪಾನಕ ಕೋಸಂಬ್ರಿ ಲಂಚದಿಂದ ರ‍್ಯಾಂಕ ಗಿಟ್ಟಿಸಿದೆ ಎಂದು ಇಂದಿಗೂ ನನಗೆ ಚೇಷ್ಟೆ ಮಾಡುತ್ತಿರುತ್ತಾನೆ. ಇವೆಲ್ಲ ನನ್ನ ನೆನಪಿನ ಸುಳಿಯಲ್ಲಿ ಸುಳಿದಾಗ ಆಗ ನಾವು ಈ ಗುರುಗಳ ಸಾನ್ನಿಧ್ಯದಲ್ಲಿ ಎಷ್ಟೊಂದು ಉಲ್ಲಾಸಮಯವಾದ ವಿದ್ಯಾರ್ಥಿ ಜೀವನವನ್ನು ಕಳೆದೆವು ಎಂಬುದು ವ್ಯಕ್ತವಾಗುತ್ತದೆ. ಇಂದಿಗೂ ಆ ದಿನಗಳು ನನಗೆ ಅವಿಸ್ಮರಣೀಯವಾಗಿ ಉಳಿದಿವೆ. ನಮ್ಮ ಗುರುಗಳು ನಮ್ಮೆಲ್ಲರಲ್ಲಿಯೂ ಎಷ್ಟೊಂದು ವಾತ್ಸಲ್ಯವನ್ನಿಟ್ಟಿದ್ದರು.

ನಮಗೆ ಅವರು ಕಲಿಸಿದ್ದು ತೀರ ಅತ್ಯಲ್ಪ ಸಮಯವಾಗಿದ್ದರೂ ಅವರ ಬಗ್ಗೆ ನನ್ನಲ್ಲಿ ಅತ್ಯಂತ ಆತ್ಮೀಯತೆ ಬೆಳೆದು ಬಂದಿತು. ಅವರನ್ನು ಕಂಡಾಗ ನನಗೆ ನನ್ನ ಅಣ್ಣನನ್ನೇ ಕಂಡಂತಾಗುತ್ತದೆ. ಇಷ್ಟು ದೀರ್ಘ ಕಾಲದ ನಂತರವೂ ಭೆಟ್ಟಿಯಾದಾಗೊಮ್ಮೆ ಅವರೂ ಅದೇ ಸುಪರಿಚಿತವಾದ ಮುಗುಳ್ನಗೆಯಿಂದ ನಮ್ಮೆಲ್ಲರ ಕ್ಷೇಮವನ್ನು ವಿಚಾರಿಸುತ್ತಾರೆ.

ಅವರನ್ನು ಸಾಧಾರಣ ಸಮೀಪದಿಂದ ಬಲ್ಲ ನನಗೆ ತಮ್ಮ ಜೀವನದಲ್ಲಿ ಅವರು ಸಾಕಷ್ಟು ಸಾವು ನೋವಿನ ನಂಜನ್ನುಂಡಿದ್ದಾರೆಂಬುದು ಗೊತ್ತು. ಆದರೂ ಅದನ್ನು ನಂಜುಂಡೇಶ್ವರನಂತೆ ನುಂಗಿ, ಅನ್ಯರಿಗೆ ತೋರಿಸದೆ ಆ ಶಕ್ತಿಯನ್ನು ಸಾಹಿತ್ಯ ರಚನೆಯಲ್ಲಿ ಪರಿವರ್ತಿಸಿ ತಮ್ಮ ಅನುಭವ ವಿದ್ವತ್ತೆಗಳನ್ನು ತಮ್ಮ ಅಸಂಖ್ಯ ಕೃತಿಗಳಲ್ಲಿ ಹೊರ ಹೊಮ್ಮಿಸಿದ್ದಾರೆ.

ಅವರ ಇತ್ತೀಚಿನ ಮಹತ್ವದ ಕೃತಿಯಾದ ಕನ್ನಡ (ಕುಮಾರವ್ಯಾಸ + ತಿಮ್ಮಣ್ಣ) ವ್ಯಾಸ ಭಾರತವನ್ನು ಓದಿದಾಗ ಕುಮಾರವ್ಯಾಸನೊಂದಿಗೆ ಅವರು ಹೊಂದಿದ ಸಮರಸ ಭಾವ ಹಾಗೂ ಅವರ ಮಾಗಿದ ಜೀವನದೃಷ್ಟಿ ಅಭಿವ್ಯಕ್ತವಾಗುತ್ತದೆ. ಅದರಲ್ಲೂ ಧರ್ಮರಾಜನಿಗೆ ಭೀಷ್ಮರು ಮಾಡಿದ ಉಪದೇಶದ ಭಾಗವಂತೂ ಎಂತಹರಿಗೂ ಮನ ಮುಟ್ಟಿ ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸುತ್ತ ಶಾಂತಿಯನ್ನೂ ದೃಢತೆಯನ್ನೂ ಈಯುವಂತಹದಾಗಿದೆ. ಆಬಾಲವೃದ್ಧರಿಗೆ ಬೋಧಪ್ರದವಾಗಿದ್ದು ನನಗಂತೂ ಅದು ನಿತ್ಯವಿನೂತನವೂ ಜೀವನದ ದಾರಿದೀಪವೂ ಆಗಿದೆ.

ಕನ್ನಡ ನಾಡಿನ ಹಿರಿಯ ಸಾಹಿತಿಗಳಾದ ಎನ್ಕೆ ಕುಲಕರ್ಣಿಯವರು ನನ್ನ ಗುರುಗಳಾಗಿ ದೊರೆತದ್ದು ನನ್ನ ಭಾಗ್ಯ ಹಾಗೂ ಸಂತತ ಹೆಮ್ಮೆಯ ವಿಷಯ. ನಮ್ಮ ಮಾಸ್ತರರು ನನ್ನಂತೆಯೇ ಅಸಂಖ್ಯ ವಿದ್ಯಾರ್ಥಿ ಪರಿವಾರವನ್ನು ಹೊಂದಿದ್ದು ಅವರಲ್ಲಿ ಈಗಿನ ಶ್ರೇಷ್ಠ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಾದ ವ್ಹಿ. ಎಸ್. ಮಳೀಮಠರೂ ಒಬ್ಬರು. ಮತ್ತು ಈಗ ವಿದೇಶದಲ್ಲಿ ನೆಲೆಸಿರುವ ಸುಪ್ರಸಿದ್ಧ ಹೃದಯ ಶಸ್ತ್ರಚಿಕಿತ್ಸಕರಾದ ಕೆ. ಎಸ್. ಜೈಚವಾಳರು ಇನ್ನೊಬ್ಬರು.

# ನನ್ನ ಬಾಳಿಗೊಂದು ತಿರುವು ಕೊಟ್ಟವರು

**ವತ್ಸಲಾ ಕುಲಕರ್ಣಿ**

ಎನ್ಕೆ ನನ್ನ ಪಾಲಿಗೆ ಕಾಕಾ, ತಂದೆ. ಎನ್ಕೆ ಅವರ ಪರಿಚಯ ನನಗೆ ಹೇಗೆ ಆಯಿತು ಅಂದರೆ ನಿಮಗೆಲ್ಲ ಆಶ್ಚರ್ಯ ಆಗಬಹುದು. ನಾನು ನನ್ನ ಚಿಕ್ಕ ವಯಸ್ಸಿನಲ್ಲೇ ನನ್ನ ಹೆತ್ತ ತಂದೆಯನ್ನು ಕಳೆದುಕೊಂಡೆ. ಎಸ್.ಎಸ್.ಎಲ್.ಸಿ. ಪಾಸುಮಾಡಿದೆ. ಹಾಗೂ ಹೀಗೂ ಬಿ.ಎ. ಮುಗಿಸಿದೆ. ಮುಂದೆ ? ಬಡತನದ ಭೂತ ತಾಂಡವವಾಡುತ್ತಿತ್ತು. ಕಂಡಲ್ಲಿ ನೌಕರಿಗಾಗಿ ಅಲೆದಾಡಿದೆ. ಕೊನೆಗೆ ಒಂದು ದಿನ ಎನ್ಕೆ ಅವರ ಸೋದರ— ಅವರೂ ಎಸ್. ಕೆ. ಕುಲಕರ್ಣಿ— ನಮ್ಮ ಮನೆಗೆ ಬಂದಿದ್ದರು ಅವರು ನನ್ನ ಸ್ವರ್ಗಸ್ಥ ತಂದೆಯ ಮಿತ್ರರು. ಆಗ ನಮ್ಮ ಮನೆಯ ಪರಿಸ್ಥಿತಿ ನೋಡಿ ಅವರೆಂದರು, ನನ್ನ ಸೋದರ ಎನ್ಕೆ ಅಂತ ಒಬ್ಬರು ಆಕಾಶವಾಣಿಯಲ್ಲಿ ಇರುವರು. ಅವರಿಗೆ ನೀನು ನೌಕರಿಗಾಗಿ ಕೇಳು, ಅಂದರು.

ನನಗೆ ಆಗ ಎನ್ಕೆ ಅಂದರೆ ಯಾರು ಹೇಗಿರುವರು ಗೊತ್ತಿರಲಿಲ್ಲ. ಆದರೂ ಅವರ ಮನೆಯ ಮೆಟ್ಟಿಲು ಮೊದಲ ಸಲ ಹತ್ತಿ ಎನ್ಕೆ ಅವರು ಇದ್ದಾರೆಯೇ ಅಂತ ಕೇಳಿದೆ ಆಗ ಬಾಗಿಲು ತೆಗೆದ ವ್ಯಕ್ತಿ, 'ನಾನೇ ಎನ್ಕೆ' ಒಳಗೆ ಬಾ, ಏನಾಗ ಬೇಕಿತ್ತು' ಅಂದರು. ನನ್ನ ಬಡತನದ ಪರಿಸ್ಥಿತಿ ಹೇಳಿ ಅತ್ತೆ. ಆಗ ಎನ್ಕೆ ನನಗೆ ಸಮಾಧಾನ ಹೇಳಿ, 'ಕಾಳಜಿ ಮಾಡಬೇಡ, ನಾನು ನಿನ್ನ ನೌಕರಿಗೆ ಪ್ರಯತ್ನಿಸುವೆ', ಅಂತ ಹೇಳಿ ನನಗೆ ತಮ್ಮ ಮನೆಯಲ್ಲಿ ಅದೇ ತಾನೇ ಮಾಡಿದ ಬಿಸಿ ಬಿಸಿ ಭಕ್ಕರಿ, ಪಲ್ಯ ತಿನ್ನಲು ಕೊಟ್ಟು ಕಳುಹಿಸಿದರು. ನಾನು ದಿನವೂ ರಾತ್ರಿ-ಹಗಲು ಎಡತಾಕಿದೆ. ಕೊನೆಗೆ ಅವರ ಪ್ರಯತ್ನದಿಂದ ನನಗೆ ಧಾರವಾಡ ಆಕಾಶವಾಣಿಯಲ್ಲಿ ಅನೌನ್ಸರ್ ಅಂತ ನೌಕರಿ ಸಿಕ್ಕಿತು. ಈ ಕಾಕಾ ನೌಕರಿ ಕೊಡಿಸಿ, ನನ್ನ ಜೀವನಕ್ಕೆ ಒಂದು ರೂಪ ಕೊಟ್ಟರು.

ನಾನು ಆಗಿನಿಂದ ಅವರಿಗೆ ಕಾಕಾ ಅನ್ನಹತ್ತಿದೆ. ನಾನೊರ್ವ ಸ್ಟೇಜ್ ಡ್ರಾಮಾ ಆರ್ಟಿಸ್ಟ್. ಹೀಗಾಗಿ ನಾನು ಎಲ್ಲೆ ನಾಟಕ ಮಾಡಲಿ, ನಾಟಕ ಮುಗಿದ ತಕ್ಷಣ, ನನ್ನ ಬೆನ್ನು ಚಪ್ಪರಿಸಿ 'ಭಾಳ ಛಲೋ ಮಾಡಿದಿ ವತ್ಸಲಾ' ಅಂದಾಗ ನಾನು ಸಂತೋಷದಿಂದ ಅಳುತ್ತಿದ್ದೆ. ಈಗಲೂ ಕೂಡಾ ಆಕಾಶವಾಣಿಯಲ್ಲಿ ಪ್ರಸಾರವಾಗುವ 'ಮನೆಮನೆಯಲ್ಲಿ' ಕೌಟುಂಬಿಕ ಚರ್ಚೆಯನ್ನು ಬರೆಯುತ್ತಾರೆ. ನಾನು ಅದರಲ್ಲಿ ಮುಖ್ಯ ಪಾತ್ರವಹಿಸುತ್ತಿದ್ದೆ.

ಆಗ ನನಗೆ ತುಂಬಾ ಅಭಿಮಾನ ಹಾಗು ಸ್ವಲ್ಪ ಗರ್ವ. ನನ್ನ ಕಾಕಾ ಬರೆದ ನಾಟಕದಲ್ಲಿ ನಾನು ಮುಖ್ಯ ಪಾತ್ರವಹಿಸುತ್ತಿರುವೆನಲ್ಲ ಅಂತ !

ಎನ್ಕೆ ಕಾಕಾ ಆಕಾಶವಾಣಿಗೆ ಬಂದಾಗೊಮ್ಮೆ ನನಗೆ 'ಆಕಾಶವಾಣಿಯ ಬಿದಿರು' ಅನ್ನುತ್ತಾರೆ. ಯಾಕೆ ಗೊತ್ತೆ ? ನಾನು ನೋಡಲು ತುಂಬಾ ತೆಳ್ಳಗಿರುವವರಿಂದ 'AIR ದಲ್ಲಿ ನಮ್ಮ ವತ್ಸಲಾ ಬರಿ air (ಹವಾ) ತಿನ್ನತಾಳೆ' ಅಂದಾಗ ನನ್ನ ಮುಖದ ಮೇಲಿನ ಸಂತೋಷ ಹಾಗು ಅಭಿಮಾನದ ಕಳೆ ನೋಡಿದವರಿಗೇ ಗೊತ್ತು.

ಇಂದು ನಾನು ಮನೆಯಲ್ಲಿ ದೇವರಿಗೆ ದೀಪ ಹಚ್ಚುವಾಗು ಎನ್ಕೆ ಕಾಕಾನ ಹೆಸರಲಿ ಹಚ್ಚುವೆ.

# ನೈನಿ ಇಲ್ಲದ ನನ್ನಣ್ಣ

## ಲಲಿತ ರಾಮಣ್ಣ

ಎನ್ಕೆಯವರ ಮತ್ತು ನಮ್ಮ ಪರಿಚಯವಾದದ್ದು ಬಹುಶಃ ೧೯೫೭ ಅಥವಾ ೫೮ರ ಸುಮಾರಿನಲ್ಲಿರಬೇಕು, ಆಗಿನ್ನೂ ಮುಂಬಯಿಯ, ಆಕಾಶವಾಣಿಯ ಕನ್ನಡ ವಿಭಾಗಕ್ಕೆಂದು ಬಂದಿದ್ದ ಎನ್ಕೆಯವರು– ಇಲ್ಲಿನ ಕನ್ನಡ ಸಂಘದವರು ಜರುಗಿಸಿದ ಪುರಂದರದಾಸರ ದಿನಾಚರಣೆಯ ನಿಮಿತ್ತ ಏರ್ಪಡಿಸಿದ್ದ "ದಾಸ ಸಾಹಿತ್ಯದಿಂದ ಪರಿಜನೋದ್ಧಾರ" ಎಂಬ ಪ್ರಬಂಧ ಸ್ಪರ್ಧೆಯ ಮೇಲಾಟಕ್ಕೆ ಅವರೂ ಒಬ್ಬ ಪರೀಕ್ಷಕರಾಗಿ ನೇಮಿಸಲ್ಪಟ್ಟಿದ್ದರು. ನಮ್ಮ ಮತ್ತು ಎನ್ಕೆಯವರ ಪರಿಚಯ ಅಂದಿನ ವರೆವಿಗೂ ಇರಲಿಲ್ಲ. ನನ್ನ ಪ್ರಬಂಧ ಲೇಖನವನ್ನು ಓದಿದ ಎನ್ಕೆಯವರು ತಮ್ಮ ಮೆಚ್ಚಿಗೆಯನ್ನು ಸೂಚಿಸಿದ್ದರು. ಪ್ರಥಮ ಬಹುಮಾನವೂ ದೊರಕಿತ್ತು. ನನಗೋ ಎಲ್ಲಿಲ್ಲದ ಹೆಮ್ಮೆ! ಮುಂದೆ ಕೆಲವು ರೇಡಿಯೋ ರೂಪಕಗಳಲ್ಲಿ ಭಾಗವಹಿಸಲು ಅವಕಾಶ ಕೊಟ್ಟಿದ್ದಲ್ಲದೆ, ಬಾಲಿಶವಾಗಿ ಬರೆಯುತ್ತಿದ್ದ ನನ್ನ ಕಥೆಗಳಿಗೂ ಅವಕಾಶ ಕಲ್ಪಿಸಿಕೊಟ್ಟರು.

ಎನ್ಕೆಯವರು ಇಲ್ಲಿದ್ದಷ್ಟು ದಿನದಲ್ಲಿ ನನಗೆ ಅವರಲ್ಲಿಗೆ ಆಗಾಗ್ಗೆ ಹೋಗುವ ಪ್ರಸಂಗ ಬರುತ್ತಲಿತ್ತು. ನಾನು ಬರೆಯುತ್ತಿದ್ದ ಕಥೆ, ಲೇಖನ, ರೇಡಿಯೋ ರೂಪಕಗಳನ್ನು ಅವರಿಗೆ ತೋರಿಸಿ, ಏನಾದರೂ ತಿದ್ದುಪಡಿ ಬೇಕಾಗಿದ್ದರೆ, ತಿದ್ದಿಸಿಕೊಂಡು ಮುಂದೆ ಹೋಗುತ್ತಲಿದ್ದೆ. ಅದೆಷ್ಟು ಶಾಂತಚಿತ್ತದಿಂದ ತಿದ್ದಿ ಕೊಡುತ್ತಿದ್ದರು! ಎನ್ಕೆಯವರಿಗೆ ಮಹಿಳಾ ಬರಹಗಾರರ ಸಂಖ್ಯೆ ಬಹಳ ಕಡಿಮೆ ಇದೆ. ಅದಷ್ಟು ಅವರನ್ನು ಎಚ್ಚರಗೊಳಿಸಿ ಮುಂದೆ ತರಬೇಕೆಂಬ ಆಕಾಂಕ್ಷೆ ಎದ್ದು ತೋರುತ್ತಲಿತ್ತು. ಇನ್ನೂ ಇವತ್ತಿಗಾದರೂ ಆ ಗುಣ ಹೋಗಿಲ್ಲ. ನನ್ನನ್ನು ಪ್ರೋತ್ಸಾಹಿಸಿ ಆಗಾಗ್ಗೆ ಪತ್ರ ಬರೆಯುತ್ತಲೇ ಇರುತ್ತಾರೆ. ಮನೋಹರ ಗ್ರಂಥಮಾಲೆಯವರು ಪ್ರಕಟಿಸಿದ ನನ್ನ ಕಥಾ ಸಂಕಲನಕ್ಕೆ 'ಬಾಗಿನ' ಎಂಬ ಸಂಕಲನಕ್ಕೆ ಸಂತೋಷದಿಂದ ಮುನ್ನುಡಿ ಬರೆದು ಪ್ರೋತ್ಸಾಹಿಸಿದ್ದಾರೆ.

ಸದಾ ಹಸನ್ಮುಖಿಯಾಗಿರುತ್ತಿದ್ದ ಎನ್ಕೆಯವರು ನಾನು ನನ್ನ ಬರಹಗಳ ಕಡತವನ್ನು ಹೊತ್ತಿಲ್ಲದ ಹೊತ್ತಿನಲ್ಲಿ ಒಯ್ದು ಅವರ ಮುಂದಿಟ್ಟು ಓದಿ ತೋರಿಸುವಾಗ ಒಂದು ದಿನವಾದರೂ ಅವರು 'ತಮ್ಮ ಸಮಯ ಹಾಳಾಯಿತು, ಹೇಳದೆ, ಕೇಳದೆ ಬಂದ

ಕಿಲ್ಲಾ ಈ ಹೆಂಗಸು' ಎಂದು ಅಪ್ರಸನ್ನತೆಯನ್ನು ತೋರುತ್ತಿರಲಿಲ್ಲ. ಹೆಣ್ಣುಮಕ್ಕಳ ಬಗ್ಗೆ ಅವರಿಗಿದ್ದ ಗೌರವ ಅಷ್ಟು! ಆಕಾಶವಾಣಿಯ ಕಾರ್ಯಕ್ರಮಗಳಲ್ಲಿಯೂ ಅಷ್ಟೆ ಎಂದೂ ಕಿಟಿಕಿಟಿ ಮಾಡಿದವರಲ್ಲ!

ನನ್ನವರಿಗೆ ಎನ್ಕೆಯವರ ಬಗ್ಗೆ ಬಹಳ ಆದರ. ಇವರು ಇಂದಿಗೂ ಹೇಳುವುದು ಇಷ್ಟೆ. 'ನೋಡು ಎನ್ಕೆಯವರು ಎಂ.ಎ.ಬಿ.ಟಿ. ಪಾಸು ಮಾಡಿಕೊಂಡು, ಹೆಸರಾಂತ ಬರಹಗಾರ, ನಾಟಕಕಾರನಾಗಿದ್ದರೂ ಈ ವ್ಯಕ್ತಿಗೆ ಇಷ್ಟು ಜಂಭವಿಲ್ಲ' ಎಂದು. ಎಂ.ಎ. ಮಾಡಿಕೊಂಡ ನನ್ನ ಮಗಳಿಗೆ, ಡಾಕ್ಟರ್ ಆಗಿರುವ ನನ್ನ ಮಗನಿಗೆ ಆಗಾಗ್ಗೆ ಇವರ ಆದರ್ಶವನ್ನು ಹೇಳಿ ತೋರಿಸುತ್ತಲಿರುತ್ತಾರೆ.

ನಾನು ಅವರ ಮನೆಗೆ ಎಷ್ಟೋ ಬಾರಿ ಹೋಗಿ ಬಂದು ಮಾಡುತ್ತಿದ್ದರೂ, ಅಷ್ಟಾಗಿ ಅವರ ಸೌಭಾಗ್ಯವತಿಯವರ ಹೆಸರು ಗೊತ್ತಿರಲಿಲ್ಲ. ಒಮ್ಮೆ ಅವರಲ್ಲಿಗೆ ಹೋಗಿದ್ದಾಗ್ಗೆ, ಎನ್ಕೆಯವರು ಬೇರೇನೋ ಓದಿನಲ್ಲಿ ಮಗ್ನರಾಗಿದ್ದರು. ಐದ್ಹತ್ತು ನಿಮಿಷ ಕಳೆದಿರಬಹುದು. ಸುಮ್ಮನೆ ಕುಳಿತಿದ್ದ ನನ್ನನ್ನುದ್ದೇಶಿಸಿ, ಒಳಗೆ ಹೋಗ್ರಿ ನಾಗವೇಣಿ ಬಾಯಿ ಇರಲಿಕ್ಕಿ ಸಾಕು ಎಂದರು. ಅಂದಿನಿಂದ ನನಗೆ ಆ ತಾಯಿಯ ಹೆಸರು ಗೊತ್ತಾಯಿತು. ಹೀಗೆ ಬೇರೊಂದು ದಿನ ನಾವೆಲ್ಲಾ ಮಾತನಾಡುತ್ತ ಕುಳಿತಿದ್ದಾಗ 'ನಿಮ್ಮ ಹೆಸರು ನಾಗವೇಣಿಬಾಯೇರಂತ ಇಲ್ಲೀತನಕ ಗೊತ್ತಿದ್ದಿಲ್ಲ' ಎಂದೆ. ಒಡನೆಯೇ ನಮ್ಮ ಎನ್ಕೆಯವರು 'ಛಲೋ ಆತು ಬಿಡ್ರಿ, ಖರೇವಂದ್ರ ಆಕಿ ವೃಶ್ಚಿಕ ವೇಣೀನ ಇದ್ದಾಳ. ಏನೋ ಅರಿವಿಲ್ಲದ ಮಂದಿ ನಾಮಕರಣ ಮಾಡ್ಯಾರ ನಾಗವೇಣೀಂತ' ಎಂದು ಎಲ್ಲರನ್ನು ನಗಿಸಿದರು. ಆದರೆ... ಈ ನಗಚಾಟಿಕೆ ನಾಗವೇಣಿಬಾಯಿಯವರನ್ನು ಕೋಪಿಸಿಕೊಳ್ಳುವಂತೆ ಮಾಡಲಿಲ್ಲ. ಅದಕ್ಕೆ ಬದಲಾಗಿ, ಇರಲಿ ಬಿಡ್ರಿ... ನಾಗವೇಣಿ, ವೃಶ್ಚಿಕವೇಣಿ, ಇಬ್ಬರೂ ಒಂದೇ ಅಂಬಾಡ ಹಾಕ್ಕೊಂಬಾವರೆ, ಪ್ಯಾಟೀಕಡೆ ಹೋಗತಿದ್ದರೆ– ನನಗ ಒಂದು ಮಾಲೀ ತಂದುಕೊಡ್ರಿ' ಎಂದರು. ಇದೆಲ್ಲ ಅವರ ಕುರ್ಲಾದೊಳಗಿನ ಮನೆಯ ಮಾತಾಯಿತು.

ಹೌದು ನಾಗೂಬಾಯಿಯವರಿಗೆ ಮಾಲೆ ಎಂದರೆ ಎಷ್ಟು ಪ್ರೀತಿ! ಸದಾ ತುರುಬಿನಲ್ಲಿ ಮಾಲೆ ಮುಡಿದೇ ಇರುತ್ತಿದ್ದರು. ಮಾಲೆಯ ಕೂಡೆಯೇ ಮೇಲೆ ಹೋಗಿ ಮುತ್ತೈದೆಯ ಧನ್ಯತೆಯನ್ನು ಪಡೆದರು.

ಈಗ ನಮ್ಮ ಅವರ ಸ್ನೇಹ ಅಣ್ಣ–ವೈನಿಯವರ ಆತ್ಮೀಯತೆಯ ವರೆವಿಗೂ ಬೆಳೆದು ಬಂದಿದೆ. ಇಂದು ನಮ್ಮ ವೈನಿ ಇಲ್ಲ. ನಾನಾದರೊ ಎನ್ಕೆಯವರಿಗೆ ಆದರಣೀಯ ಖಾಪ ತಂಗಿ ಮತ್ತು ನನ್ನವರು ಭಾವಯ್ಯನವರು. ಇದು ಯಾವ ಜನ್ಮದ ನಂಟೋ ತಿಳಿಯದು!

ಅವರು ಇಲ್ಲಿದಾಗ್ಗೆ ನಮಗೆ ಭಕ್ರಿ–ಮುಳಗಾಯಿ ಎಣ್ಣೆಗಾಯಿನ ಪಲ್ಲೆ, ಅಥವಾ ಜವಳೀಕಾಯಿಪಲ್ಲೆ ಬುತ್ತಿಯ ಸವಿಭೋಜನ ಸಿಗುತ್ತಿತ್ತು. ಅಂತೆಯೇ ಅವರೂ

ನಮ್ಮಲ್ಲಿಗೆ ಬಂದು– "ಗಸಗಸೆ ಪಾಯಸ, ಬಿಸಿಬೇಳೆ ಭಾತು" ಉಂಡು ಸಂತೋಷ ಪಡುತ್ತಿದ್ದರು.

ಇಷ್ಟೆಲ್ಲ ಸ್ನೇಹ ಬೆಳೆದು ಬಂದಿದ್ದರೂ ನಮಗೆ ನಾಗೂಬಾಯಿಯವರು ಎನ್ಕೆಯವರ ಎರಡನೆ ಹೆಂಡತಿ ಎಂಬುದು ಗೊತ್ತಿರಲಿಲ್ಲ. ಅಂದರೆ ಈ ದಂಪತಿಗಳು ಎಷ್ಟು ಅನ್ಯೋನ್ಯವಾಗಿ ಸಂಸಾರ ಸಾಗಿಸುತ್ತಿದ್ದರು ಎಂಬುದು ಗೊತ್ತಾಗುತ್ತಿತ್ತು. ಈ ಗುಟ್ಟನ್ನು ರಟ್ಟು ಮಾಡಿದವರು ಚಂದ್ರಕಾಪಿ ದಂಪತಿಗಳು. "ನಾಳೆ ಅವರ ಪ್ರಹ್ಲಾದ ಬರುವವನಿದ್ದಾನೆ. ಅವನು ಎನ್ಕೆಯವರ ಮೊದಲ ಹೆಂಡತಿ ಮಗ. ನೀವು ಈ ಕುರಿತು ಏನೂ ಕೇಳಬೇಡಿ, ಅವರಿಗೆ ಬೇಸರವಾದೀತು" ಎಂದರು.

ಎನ್ಕೆಯವರ "ಎರಡನೆಯ ಸಂಬಂಧ", "ಸಾವಿನ ಉಡಿಯಲ್ಲಿ" ಎಂಬ ಕಾದಂಬರಿಗಳನ್ನು ಓದಿದಾಗಲೇ ಅವರ ನೋವಿನ ಬಾಳುವೆಯು ಅರಿವಾದದ್ದು, ಆದರೂ ಎಂಥ ರಸಿಕ ಹಾಸ್ಯಗಾರ ಈ ಬರವಗಾರ! ನಕ್ಕು, ನಗಿಸಿ, ಜೀವನದ ನೋವನ್ನು ಮರೆಸುವ ಜಾಣ ಹಾಸ್ಯ ಇವರಲ್ಲಿ ತುಂಬಿದೆ, ಬಹುಶಃ ಮಾಯದ ಗಾಯಕ್ಕೆ ಈ ಜಾಣ್ಮೆಯ ಹಾಸ್ಯವೇ ಮುಲಾಮುಪಟ್ಟಿ ಏನೋ.

# ನಗುಮೊಗದ ಎನ್ಕೆ

**ಕೆ. ಎಸ್. ದೇಶಪಾಂಡೆ**

೧

ನಾನಿನ್ನೂ ಹೈಸ್ಕೂಲಿನಲ್ಲಿದ್ದಾಗಲೇ ಅಣ್ಣ ಎನ್ಕೆ ನನ್ನ ಜೀವನದ ದಿಗಂತದಲ್ಲಿ ಮೂಡಿದರು. ತಮ್ಮ ಬರಹದ ಮೂಲಕ ಭದ್ರ ಜೀವನದ ತಳಹದಿಯಾದ, ನವುರಾದ, ಶುಚಿಯಾದ, ಸಹಜವಾದ, ಹಾಸ್ಯದ ಪರಿಚಯ ಮಾಡಿಕೊಟ್ಟರು. ಆಗಲೇ ಅವರ 'ಇಲೆಕ್ಶನ್' ಹಾಗೂ ಇತರ ಹಾಸ್ಯಮಯ ಏಕಾಂಕಗಳನ್ನು ಓದಿ ಅವರಿಗೆ ನಾನು ಮಾರುಹೋಗಿದ್ದೆ; ಎನ್ಕೆ "ಫ್ಯಾನ್" ಕೂಡ ಆಗಿಬಿಟ್ಟಿದ್ದೆ.

೨

ಮಾಳಮಡ್ಡಿಯ ನನ್ನ ಸಹಪಾಠಿಗಳೂ ನಾನೂ ಸೇರಿ, ಪ್ರೊ. ಕೆ. ಆರ್. ಮಹಿಷಿ, ಎನ್. ಟಿ. ಪತಕಿ ಮುಂತಾದ ಹಿರಿಯ ಹಿತೈಷಿಗಳ ಮಾರ್ಗದರ್ಶನದಲ್ಲಿ 'ಬಾಲಮಿತ್ರ ನಾಟಕ ಮಂಡಳಿ'ಯೊಂದನ್ನು ಆಗ ಪ್ರಾರಂಭಿಸಿದ್ದೆವು. ವರ್ಷಕ್ಕೊಮ್ಮೆ ನಮ್ಮ ಕಂಪೌಂಡಿನಲ್ಲಿಯ ಗಾಡಿಖಾನೆಯನ್ನೇ (ಡಮಣಿ ಇಡುವ ಆವರಣ) ರಂಗಭೂಮಿಯನ್ನಾಗಿ ಮಾರ್ಪಡಿಸಿಕೊಂಡು ಲಘು, ಹಾಸ್ಯಮಯ, ನಾಟಕಗಳನ್ನಾಗಲೀ ಅಥವಾ ಅವುಗಳಲ್ಲಿನ ಸ್ವಾರಸ್ಯಮಯವಾದ ಭಾಗಗಳನ್ನಾಗಲೀ ನಾವು ಪ್ರದರ್ಶಿಸುತ್ತಿದ್ದೆವು.

ಹೀಗೆ ರಂಗಕ್ಕಿಳಿಸಿದ ಮೊಟ್ಟ ಮೊದಲನೆಯ ನಾಟಕ "ಇಲೆಕ್ಶನ್" ಎಂದು ನನಗೆ ನೆನಪು. ಆ ನಾಟಕದ ಭಾಗಗಳನ್ನೇ ಆಡಿದ ಆ ದಿನ ಪ್ರೊ. ಕೆ. ಆರ್. ಮಹಿಷಿ ನಮ್ಮ ಮುಖ್ಯ ಅತಿಥಿಯಾಗಿದ್ದರು. ನಾಟಕದ ಅಭಿನಯ ಪ್ರೇಕ್ಷಕರಲ್ಲಿ ಹಾಸ್ಯದ ಹೊನಲನ್ನೇ ಹರಿಸಿತ್ತು. ಎಲ್ಲರೂ ಸಂತೋಷ ವ್ಯಕ್ತಪಡಿಸಿದ್ದರು.

೩

ಎನ್ಕೆ ಅವರ ಧ್ವನಿ ನಾನು ಮೊಟ್ಟ ಮೊದಲು ಕೇಳಿದ್ದು ಅವರು ಮುಂಬಯಿ ಬಾನುಲಿ ಸೇರಿದಾಗ. ಅವರ ಆ ಧ್ವನಿಯಲ್ಲಿ ಒಂದು ತೆರನಾದ ಆತ್ಮೀಯತೆ, ಆಕರ್ಷತೆ, ಮೋಹಕತೆ ನಾನು ಗುರುತಿಸಿಕೊಂಡೆ. ಆ ಧ್ವನಿ ಕೇಳಿದಾಗಲೆಲ್ಲ "ಇವರೊಬ್ಬ ಸರಳ ಅಂತಃಕರಣಮಯ ವ್ಯಕ್ತಿ ಇರಲಿಕ್ಕೇ ಬೇಕು" ಎಂದು ನನಗನಿಸುತ್ತಿತ್ತು.

ನನ್ನ ಅಣ್ಣ (ಅಬಚಿಯ ಮಗ) ಮಧುಸೂದನ ಕುಲಹಳ್ಳಿ–ಮುಂಬಯಿಯಲ್ಲಿ ಕೆಲಸ ಮಾಡುತ್ತಿದ್ದರು–ಅವನೂ ಒಬ್ಬ ಭಾವನಾಪ್ರಧಾನ ವ್ಯಕ್ತಿ. ರಜೆ ತೆಗೆದುಕೊಂಡು

ಧಾರವಾಡಕ್ಕೆ ಬಂದಾಗ ಅಥವಾ ನಾನೇ ಅಥಣಿಗೆ (ಅಥಣಿ ನಮ್ಮ ಅಜ್ಜಿಯ ಊರು). ಹೋದಾಗ ನಮ್ಮ ಸಂಭಾಷಣೆಯಲ್ಲಿ ಎನ್ಕೆ ಪ್ರಸ್ತಾಪ ಬಂದೇ ಬರುತ್ತಿತ್ತು. ಎನ್ಕೆ ಪರೋಪಕಾರಿ, ಅಂತಃಕರಣಿ, ಹಾಸ್ಯಮಯ ಶುಚಿ ಸಾಹಿತಿ ಹಾಗೂ ಆತ್ಮೀಯ ವ್ಯಕ್ತಿ ಎಂದು ಅವನು ಅವರನ್ನು ಬಣ್ಣಿಸುತ್ತಿದ್ದ.

ಹೀಗೆ ಎನ್ಕೆ ಸಾಹಿತ್ಯ ಓದಿ, ಅವರ ವಿನೋದಕ ಧ್ವನಿ ಆಲಿಸಿ, ಅವರ ಬಗ್ಗೆ ಹಿತವಚನ ದಿಂದ ಹಿಡಿನುಡಿ ಕೇಳಿ ಅವರನ್ನು ಕಂಡು ಮಾತಾಡಿಸಬೇಕೆಂಬ ನನ್ನ ತವಕ ಹೆಚ್ಚಿತು.

೪

ಎನ್ಕೆ ಧಾರವಾಡ ಆಕಾಶವಾಣಿ ಕೇಂದ್ರಕ್ಕೆ ವರ್ಗವಾಗಿ ಬಂದ ಮೇಲೆಯೇ ಇಂಥ ಸದವಕಾಶ ನನಗೆ ದೊರೆತದ್ದು. ಆ ಮೊದಲ ದಿನಗಳಲ್ಲಿ ನಾನು ಅವರನ್ನು ಕಂಡದ್ದು ಎನ್. ಕೆ. ದೀಕ್ಷಿತರ ಮನೆಯಲ್ಲಿ ಅಥವಾ ಪ್ರೊ. ಮಾಳವಾಡರ ಮನೆಯಲ್ಲಿ. ಪ್ರಸಂಗ ಶ್ರೀ ಅರವಿಂದ ಮಂಡಳಿಯ ಪ್ರಾರ್ಥನಾ ಸಭೆಗಳು. ಶ್ರೀ ಅರವಿಂದರ ತತ್ವಜ್ಞಾನ ಗಹನ ಗಂಭೀರ–ಸಭೆಗಳ ವಾತಾವರಣ ಸಹಜವಾಗಿಯೂ ಅಲೌಕಿಕವಾಗಿರುತ್ತಿತ್ತು. ಮೇಲಾಗಿ ಈ ಸಭೆಗಳು ನಡೆಯುತ್ತಿರುವ ಮನೆಗಳ ಹಿರಿಯರೂ ಗಹನ ಗಂಭೀರ ಸ್ವಭಾವದವರು.

ಸಭೆ ಮುಗಿದ ನಂತರ ನಮ್ಮ ನಮ್ಮ ಮನೆಗೆ ತೆರಳಬೇಕಾದ ಪ್ರಸಂಗಗಳಲ್ಲಿ ಎನ್ಕೆ ತಮ್ಮ ಶುಚಿ ಸಹಜ ಹಾಸ್ಯದಿಂದ ಅಂತಃಕರಣದಿಂದ ನಮ್ಮನ್ನೆಲ್ಲ ಬೀಳ್ಕೊಡುತ್ತಿದ್ದರು.

ಓದುಪ್ರಿಯ, ಪುಸ್ತಕಪ್ರಿಯರಾದ ಎನ್ಕೆ ತಮ್ಮ ರೇಡಿಯೋ ಕಾರ್ಯಕ್ರಮ ಗಳಿಗಾಗಿ ಅಥವಾ ವೈಯಕ್ತಿಕ ಬರಹ ಕಾರ್ಯಕ್ಕಾಗಿ ಪುಸ್ತಕಗಳ ಸಲುವಾಗಿ ನನ್ನ ಕಡೆ ಮೇಲಿಂದ ಮೇಲೆ ಬರುತ್ತಿದ್ದರು.

ಈ ಎಲ್ಲ ಪ್ರಸಂಗಗಳು ನಮ್ಮಿಬ್ಬರನ್ನು ಸಮೀಪಕ್ಕೆ ತಂದವು. ಗಾಢವಾದ ಸೋದರ ಬಾಂಧವ್ಯದಲ್ಲಿ ಬಂಧಿಸಿದವು.

೫

ಹತ್ತು ವರುಷಗಳ ಹಿಂದೆ ಕ. ವಿ. ವ. ಸಂಘದ ಕಾರ್ಯಾಧ್ಯಕ್ಷನಾಗಿ ಕಾರ್ಯ ಮಾಡುವ ಭಾಗ್ಯ ನನ್ನ ಪಾಲಿಗೆ ಬಂದಿತು. ತಾತ ಕಟ್ಟಿ ಬೆಳೆಸಿದ ಈ ಮಹಾ ಸಂಸ್ಥೆಯ ಸೇವಾವಕಾಶ ನನಗೆ ದೊರೆತದ್ದು ನನ್ನ ಸುಕೃತದ ಫಲವೆಂದು ಅದನ್ನು ಅಂಗೀಕರಿಸಿದೆ. ಸಂಘದ ಮುಖಪತ್ರಿಕೆಯಾದ ವಾಗ್ಭೂಷಣ ನಿದ್ರೆ ಹೋಗಿ ಅನೇಕ ದಶಕಗಳೇ ಸಂದಿದ್ದವು. ಅದರ ಪುನರುಜ್ಜೀವನ ಸಂಘಕ್ಕೆ ಅನುಕೂಲಕರ ವಾತಾವರಣ ಕಲ್ಪಿಸುವದರಲ್ಲಿ ಅಮೃತ ಸಿಂಚನ ಮಾಡುವದರಲ್ಲಿ ಸಂದೇಹವಿಲ್ಲ ಎಂದು ನಂಬಿಕೊಂಡು ಆ ಕಾರ್ಯದ ಸಂಕಲ್ಪ ಮಾಡಿಕೊಂಡೆ. ಆ ಸಂಕಲ್ಪ ಕಾರ್ಯಗತಗೊಳಿಸುವಲ್ಲಿ, ಅದಕ್ಕೆ ರೆಕ್ಕೆ ಮೂಡಿ ಸುವಲ್ಲಿ ನಾನು ಅವಲಂಬಿಸಿದ ಕೆಲವೇ ಕೆಲವು ಆಪ್ತ ಮಿತ್ರರಲ್ಲಿ, ಶಕ್ತಿ ಸಂಚಯಗಳಲ್ಲಿ

ಎನ್ಕೆ ಪ್ರಮುಖರು. ಅವರ ನಿಷ್ಕಾಮ ನಿರಂತರ, ನಿರುಪಮ, ನೆರವು ಇಲ್ಲದೆ ಹೋಗಿದ್ದಲ್ಲಿ ನನ್ನ ಕನಸು ನನಸಾಗುತ್ತಿರಲಿಲ್ಲ. **ವಾಗ್ಭೂಷಣ** ಮತ್ತೆ ಬೆಳಕು ಕಾಣುತ್ತಿರಲಿಲ್ಲ.

೬

ಮೂರು ವರುಷಗಳ ಹಿಂದೆ ನನ್ನ ಪೂಜ್ಯ ತಂದೆ ಶ್ರೀಪಾದ ರಾಮಚಂದ್ರ ದೇಶಪಾಂಡೆ ಅವರು ತಮ್ಮ ೯೪ನೆಯ ವಯಸ್ಸಿನಲ್ಲಿ ನಮ್ಮನ್ನಗಲಿ ಹೋದರು. ಕನ್ನಡ ತಾಯಿ ಸೇವೆಯಲ್ಲಿ ಅವರು ತ್ಯಾಗಮಯ, ನಿಷ್ಠಾವಂತ ಜೀವನ ನಡೆಸಿಕೊಂಡು ಬಂದಿದ್ದರು. ಇವನ್ನು ದೂರದಿಂದಲೇ ತಮ್ಮ ಸೂಕ್ಷ್ಮ ದೃಷ್ಟಿಯಿಂದ ಗಮನಿಸಿದ್ದ ಎನ್ಕೆ ಅವರ ಬಗ್ಗೆ ಅಪಾರ ಗೌರವ ಪ್ರೀತಿ ಇಟ್ಟುಕೊಂಡಿದ್ದರು. ಅವರು ಅಗಲಿ ಹೋದ ಆ ಕೋಮಲ ಪ್ರಸಂಗವಲ್ಲಿ ಎನ್ಕೆ ನಮ್ಮಲ್ಲಿಗೆ ಬಂದು ಅಣ್ಣನೋಪಾದಿಯಲ್ಲಿ ನಮ್ಮನ್ನು ಸಾಂತ್ವನಗೊಳಿಸಿದರು. ನನ್ನ ತಂದೆಯನ್ನು ಕುರಿತು ಒಂದು ಸುಂದರ ವ್ಯಕ್ತಿ ಚಿತ್ರಣವನ್ನು ಹೆಣೆದು **ಸಂಯುಕ್ತ ಕರ್ನಾಟಕದಲ್ಲಿ** ಪ್ರಕಟಿಸಿದರು ಕೂಡ.

೭

ಹೀಗಾಗಿ ನಮಗೆಲ್ಲ ಎನ್ಕೆ ಅಂತಃಕರಣದ ಆಗರವಾಗಿ ಸಜ್ಜನಿಕೆಯ ಸಾಕಾರ ಮೂರ್ತಿಯಾಗಿ ಮೈದೋರಿದರು.

ಅವರದು ಯಾವಾಗಲೂ ನಗುಮೊಗ. ತಮ್ಮ ಕಷ್ಟಕಾರ್ಪಣ್ಯ ನುಂಗಿ, ನಕ್ಕು, ಉಳಿದವರನ್ನೆಲ್ಲ ನಗಿಸಿ ಗೆದ್ದವರು ಎನ್ಕೆ. ಒಂದು ದೃಷ್ಟಿಯಿಂದ ನೋಡಿದಲ್ಲಿ ಈ ಮನುಷ್ಯನಲ್ಲಿ ನನಗೆ ಕೃತ್ರಿಮತೆಯ ಲವಲೇಶವೂ ಕಾಣಲಿಲ್ಲ.

ಅವರ ಲೇಖನಿಯಿಂದ ಹೊರಬಂದ ಸಾಹಿತ್ಯ ಶುಚಿಯಾದ ಸಹಜವಾದ ಸತ್ವಯುತವಾದ ಸಾಹಿತ್ಯ. ಅವರ ಬರಹದಲ್ಲಿ ಮಧ್ಯಮ ವರ್ಗದ ಕುಟುಂಬದ ಸಮಸ್ಯೆಗಳ ನೈಜ, ಮಾರ್ಮಿಕ, ಹೃದಯಂಗಮ, ಚಿತ್ರಗಳನ್ನು ನಾವು ಕಾಣಬಹುದು. ಅವರ ಸಾಹಿತ್ಯ ಕೃತಿಗಳನ್ನೆ ನನ್ನ ತಾಯಿ ಹಾಗೂ ಇತರೇ ಬಂಧು ಬಳಗದವರಿಗೆ ಓದಿ ತೋರಿಸಿ ಅವರನ್ನು ಆನಂದತುಂದಿಲರನ್ನಾಗಿ ಮಾಡುತ್ತಿದ್ದೆ. ನವ್ಯದ ಹೆಸರಿನಲ್ಲಿ ಬೀಭತ್ಸ ಚಿತ್ರಿಸುವ ಗೋಜಿಗೆ ಅವರೆಂದೂ ಹೋಗಲಿಲ್ಲ. ಅದರಿಂದ ದೂರ, ಬಹು ದೂರ, ಅವರು ಇದ್ದು ಬಿಟ್ಟಿದ್ದಾರೆ.

೮

ಆಸೆಯ ಮೇಲೆ, ಸಿಟ್ಟಿನ ಮೇಲೆ, ನಾಲಿಗೆಯ ಮೇಲೆ, ಲೇಖನಿಯ ಮೇಲೆ ಕಠೋರವಾದ ನಿಗ್ರಹ ಇಟ್ಟುಕೊಂಡ ಶುಚಿ ಸಾಹಿತ್ಯ ನಿರ್ಮಾಪಕರಲ್ಲಿ ಎನ್ಕೆ ಗಣ್ಯರು.

ಎನ್ಕೆ ಪ್ರಶಸ್ತಿಗಾಗಿ, ಪ್ರಸಿದ್ಧಿಗಾಗಿ ಕಾತರಪಟ್ಟುದನ್ನು ತಡಕಾಡಿದುದನ್ನು ನಾನೆಂದೂ ನೋಡಲಿಲ್ಲ.

'ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ । ಭದ್ರಂ ಪಶ್ಯೇಮಾರ್ಯಭಿರ್ಯಜತ್ರಾಃ' ಎಂಬ ಉಪನಿಷತ್ತಿನ ವಾಕ್ಯಗಳು ಅವರ ಜೀವನದ ಮಂತ್ರಗಳಾಗಿವೆ.

ಎಲ್ಲರಿಗೂ ಹಿತವನ್ನೇ, ಒಳ್ಳೆಯದನ್ನೇ, ಬಯಸಿದ, ಬಯಸುತ್ತಿರುವ ಅವರು ನನಗೆ ಆದರಣೀಯ ವ್ಯಕ್ತಿ.

ನಮ್ಮ ಮನೆಗೆ ಏನೊಂದು ಕಾರಣದಿಂದ ಮೇಲಿಂದ ಮೇಲೆ ಬರುತ್ತಿದ್ದ ಸಾಹಿತಿಗಳಲ್ಲಿ ಗಳಗನಾಥರು ಮೊದಲಿನವರು; ಬೇಂದ್ರೆ ನಂತರದವರು; ಎನ್ಕೆ ಇತ್ತೀಚಿನವರು. ಅವರ ಅಮೃತ ಸಹವಾಸ ನಾನು ಸದಾ ಎಳಸುತ್ತೇನೆ.

ಎನ್ಕೆ ಬಹಳ ದಿವಸ ಬರದಿದ್ದರೇ ನನ್ನ ಮನಸ್ಸು ಚಡಪಡಿಸುತ್ತದೆ; ಅವರ ಮಾತು ಕೇಳಬೇಕೆನ್ನಿಸುತ್ತದೆ; ನಗುಮೊಗ ನೋಡಬೇಕೆನ್ನಿಸುತ್ತದೆ.

# ಎನ್ಕೆ ಓ. ಕೆ.

## ಶ್ರೀನಿವಾಸ ಕುಲಕರ್ಣಿ

'ಅಳು ನುಂಗಿ ನಗು ಒಮ್ಮೆ' ಎಂಬುದು ಕವಿವಾಣಿಯಾದರೆ ಅಳು ನುಂಗಿ ಸದಾ ನಗುವದು ಎನ್ಕೆ ಬದುಕಿನ ಜೀವನಾಡಿಯಾಗಿದೆ. ಎನ್ಕೆ ಅಳು ನುಂಗಿ ತಮ್ಮಷ್ಟಕ್ಕೆ ತಾವು ನಕ್ಕು ಬಿಡುವವರಲ್ಲ-ತಮ್ಮ ಸುತ್ತಮುತ್ತಲಿನ ಜನತೆಯನ್ನು ನಗಿಸುತ್ತಾರೆ–ತಮ್ಮ ಮಾತುಗಳಿಂದ; ಕೃತಿಗಳಿಂದ. ಅವರನ್ನು ಅತ್ಯಂತ ಸನಿಹದಿಂದ ಕಂಡ ನಾನು ಅವರ ಹೃದಯದ ಒರತೆಯ ತಿಳಿನೀರನ್ನೂ ಸವಿದಿದ್ದೇನೆ. ನಾನು ಆಕಾಶವಾಣಿ ಸೇವೆಯಲ್ಲಿ ಪದಾರ್ಪಣೆಗೈದಾಗ ಧಾರವಾಡದಲ್ಲಿ ನನಗೆ 'ಎನ್ಕೆ' ಮಾರ್ಗದರ್ಶನ ದೊರೆತದ್ದು ಒಂದು ಸದವಕಾಶ. ಮರೆಯಲಾಗದ ಆ ದಿನಗಳ ಒಂದೆರಡು 'ಮಳ್ಳಿ' ನೆನಪಿಸಿ ಕೊಂಡಿದ್ದೇನೆ ಇಲ್ಲಿ.

### ವಯಸ್ಸಿನಷ್ಟು ಕೃತಿಗಳು

ಬರೆಯುವ ಹವ್ಯಾಸ ನನಗಿದ್ದರೂ ಬರೆದದ್ದನ್ನು ಇನ್ನೊಬ್ಬರೆದುರು ಓದಿ 'ಬೋರ್'' ಮಾಡುವ ಚಟ ನನಗಿಲ್ಲ ಎಂದುಕೊಂಡಿದ್ದೇನೆ. ಆದಾಗ್ಯೂ ಹಲವಾರು ಸಲ ಎನ್ಕೆ ಅವರ ಮುಂದೆ ಅವರ ಆತ್ಮೀಯ ಒತ್ತಡಕ್ಕೆ ನನ್ನ ಕಥೆ ಕವನಗಳನ್ನು ಓದಿ ತೋರಿಸಿದ್ದೇನೆ. ಬೆಣ್ಣೆಯೊಳಗಿನ ಎಳೆಯನ್ನು ಎಳೆದಂತೆ ಅವರ ವಿಮರ್ಶೆ. ಅಷ್ಟೇ ಹಿತಮಿತ. ಒಂದು ಸಲ ಅವರು ತಮ್ಮ ಕವನವನ್ನು ನನ್ನೆದುರು ಓದಿ 'ಇದ್ರಾಗ ಏನಾದರು ಸಲಹೆ–ಸೂಚನೆ ತಿದ್ದುಪಡೆ ಇದ್ರ ಹೇಳ್ರಿ'–ಎಂದ ಮಾತು ನನಗಿನ್ನೂ ನೆನಪಿದೆ.

ಆಗ ನಾನು ಹೇಳಿದ್ದೆ :

"ನೀವು ರಚಿಸಿದ ಕೃತಿಗಳ ಸಂಖ್ಯೆಯಷ್ಟು ನನ್ಗ ವಯಸ್ಸಾಗಿಲ್ಲ–ಅಂಥವ್ನ..."

"ಇಲ್ಲಿ ನೀವು ಬಳಸುವ ಪ್ರತಿಮೆ ನನಗ ಭಾಳಾ ಸೇರ್ತಾವ ನೋಡ್ರಿ."

—ಅವರ ಈ ಮಾತು ನನಗೆ ಪ್ರೋತ್ಸಾಹದ ನುಡಿಯಾಗಿದ್ದರೂ ಅವರ ಔದಾರ್ಯದ ಪ್ರತೀಕವಾಗಿತ್ತು.

### ಸಾವಿನ ಉಡಿಯಲ್ಲಿ

ನಾನು ವಿದ್ಯಾರ್ಥಿಯಾಗಿದ್ದಾಗಲೇ ಎನ್ಕೆ ಅವರ ಕೃತಿಗಳನ್ನು ಓದಿ ಪ್ರಭಾವಿತ

ನಾಗಿದ್ದೆ. ಅವರನ್ನು ಕಾಣಬೇಕು ಅವರ ಜೊತೆ ಚರ್ಚಿಸಬೇಕೆಂಬ ಆಸೆ ನನ್ನದಾಗಿತ್ತು. ಆ ಸದವಕಾಶ ಧಾರವಾಡ ಆಕಾಶವಾಣಿ ದೊರಕಿಸಿತು. ಅವರಿಂದ ಹಲವರ ವಿಷಯ ಗಳನ್ನು ಅರಿತೆ-ಕಲಿತೆ. ಏಕಕಾಲಕ್ಕೆ ಹತ್ತಾರು ಕೆಲಸಗಳನ್ನು ಅತ್ಯಂತ ಸಮರ್ಪಕವಾಗಿ ನೆರವೇರಿಸುವ ಅವರ ಸಾಮರ್ಥ್ಯ ನನ್ನನ್ನು ಆಕರ್ಷಿಸಿತು. ಕಡತಗಳ ಪರಿಶೀಲನೆ, ಗೃಹಗೋಷ್ಠಿಯ ಸಿದ್ಧತೆ, ಭಾಷಣಕಾರರು ಧ್ವನಿಮುದ್ರಿಸುವ ಬರಹದ ಚರ್ಚೆ, ಸ್ನೇಹಿತ ರೊಂದಿಗೆ ಮಾತುಕತೆ ಹೀಗೆ ಒಂದಲ್ಲ ಹತ್ತಾರು ಏಕಕಾಲಕ್ಕೆ ಅವರ ಕೋಣೆಯಲ್ಲಿ ನಡೆ ಯುತ್ತಲೇ ಇರುತ್ತಿದ್ದವು.

ಇನ್ನೊಂದು ವಿಷಯ–ಕೊನೆಯ ಗಳಿಗೆಯಲ್ಲಿ ಇನ್ನೇನು ಕಾರ್ಯಕ್ರಮ ಪ್ರಸಾರ ವಾಗಬೇಕೆನ್ನುವ ಸಂದರ್ಭದಲ್ಲಿಯೂ ಅತ್ಯಂತ ಯಶಸ್ವಿಯಾಗಿ ನಿರ್ವಹಿಸಬಲ್ಲ ವ್ಯಕ್ತಿ ಇವರು. ಈ ಒಂದು ಅಂಶವನ್ನು ಅಂದರೆ ಕೊನೆಯ ಗಳಿಗೆಯಲ್ಲಿ ಕಾರ್ಯಕ್ರಮವನ್ನು ಸಿದ್ಧಪಡಿಸುವದನ್ನು ಮಾತ್ರ ನಾನು ಚಾಚು ತಪ್ಪದೆ ಅಳವಡಿಸಿಕೊಂಡಿದ್ದೇನೆ ಎನ್ನಿ. ಕೊನೆಯ ಗಳಿಗೆ ಕಾರ್ಯಕ್ರಮ ಎಂದಾಗ ಎನ್ಕೆ ಅವರ 'ಸಾವಿನ ಉಡಿಯಲ್ಲಿ' ನೆನಪಾಗು ತ್ತದೆ ನೋಡಿ. ನನ್ನ ಮೇಲೆ ತುಂಬಾ ಪ್ರಭಾವ ಬೀರಿದ ಕಾದಂಬರಿ ಇದು. ಈ ಕಾದಂಬರಿಯನ್ನು 'ಎನ್ಕೆ' ಅವರೇ ಬಾನುಲಿಗೆ ಅಳವಡಿಸಿ ಪ್ರಸ್ತುತಪಡಿಸಬೇಕಾಗಿದ್ದ ಸಂದರ್ಭ ಅದು. ಅದರಲ್ಲಿ ನನಗೂ ಮಹತ್ವದ ಪಾತ್ರ ದೊರಕಿತ್ತು. ಇವಕ್ಕಿಂತ ಹೆಚ್ಚಾಗಿ ಇಲ್ಲಿ ನನಗೆ ಬಾನುಲಿ ಕಾರ್ಯಕ್ರಮಗಳನ್ನು ಸಿದ್ಧಪಡಿಸುವಲ್ಲಿ ಬೇಕಾಗುವ ಚಾಕ-ಚಕ್ಯತೆ, ಏಕಾಗ್ರತೆ ದಣಿಯದ ಉತ್ಸಾಹ ಎನ್ಕೆ ಅವರಿಂದ ಸಿಕ್ಕಿತು.

ಮರುದಿನ ಈ ನಾಟಕದ ಪ್ರಸಾರ–ಅದರ ಹಿಂದಿನ ರಾತ್ರಿ ರೋಮಾಂಚಕ ಸಿದ್ಧತೆ ರಾತ್ರಿ ಹತ್ತು ಗಂಟೆಯಿಂದ ಪ್ರಾರಂಭವಾದ ಈ ನಾಟಕದ ಧ್ವನಿಮುದ್ರಣ ಬೆಳಗಿನ ಜಾವ ಐದು ಗಂಟೆಯವರೆಗೂ ಸತತವಾಗಿ ನಡೆಯಿತು. ಕಾದಂಬರಿಯನ್ನು ಮುಂದೆ ಇಟ್ಟುಕೊಂಡು ಎನ್ಕೆಒಂದೊಂದೇ ದೃಶ್ಯವನ್ನು ಬರೆದು ಕೊಡುತ್ತಿದ್ದರು. ಆಯಾ ದೃಶ್ಯ ದಲ್ಲಿ ಬರುವ ಕಲಾವಿದರು ರಿಹರ್ಸಲ್-ರಿಕಾರ್ಡಿಂಗ್‌ಗೆ ಸಿದ್ಧರಾಗುತ್ತಿದ್ದರು. (ಸ್ವತಃ ಎನ್ಕೆ ಅವರೇ ಮುಖ್ಯಪಾತ್ರ ವಹಿಸಿದ್ದರು.) ಇದೀ ನಾಟಕದಲ್ಲಿ ಒಂದೆರಡು ಮಾತು ಗಳಿದ್ದ ಕಲಾವಿದರು ಸ್ಟುಡಿಯೋದಲ್ಲಿ ನಿದ್ದೆ ಹೋಗಿದ್ದು ಉಂಟು. ಅಷ್ಟೇ ಏಕೆ ತೂಕಡಿಸುವ ಕಲಾವಿದೆಯ ಮುಖಕ್ಕೆ ನೀರು ಸಿಂಪಡಿಸಿ-ಧ್ವನಿಮುದ್ರಣಕ್ಕೆ ಕರೆದುಕೊಂಡು ಹೋಗಿದ್ದೂ ಇದೆ. ಇಂಥ ಅವಸರದ ಮೂಸೆಯಲ್ಲಿಯೂ ಮುಪ್ಪುರಿಗೊಳ್ಳುವ ಈ ಕಲಾ ಕೃತಿಗಳು ಅವರವು.

## ವರದಾಚಾರ್ ಮೂಗು

ಎನ್ಕೆ ಜೊತೆ ಸುತ್ತುವದು ಒಂದು ಸೊಗಸು. ಅವರ ವಿಶಿಷ್ಟವಾದ ನಗೆ, ಮಾತು ಮಾತಿಗೆ ಚಿಮ್ಮಿಸುವ ಲಹರಿ ಬಲು ಹಿತ. ಒಂದೆರಡು ಮೋಜಿನ ಸನ್ನಿವೇಶಗಳ ನೆನಪು ಇಲ್ಲಿದೆ.

ಮಿತವಾಗಿ ಚಹ ಸೇವಿಸುವ ಅವರು ಬೆಳಗಿನ ಹೊತ್ತು ಆಫೀಸಿನಲ್ಲಿ ಯಾರಾದರೂ 'ಚಹಾ ಕುಡಿಸ್ತೀನಿ ಬರ್‍ರಿ' ಎಂದು ಕರೆದರೆ 'ಲಂಚ ಟೈಂನ್ಯಾಗ ಕುಡಸರ್ರಿ—ಎಂದು ನಗಿಸುತ್ತಿದ್ದರು. ಅವರ ಚಹಾ ಸೇವಿಸುವ ಪದ್ಧತಿಯು ಸ್ವಾರಸ್ಯಕರ. ಚಹದ ಜೊತೆ ಏನಾದರೂ ತಿನಿಸು ಇರಲೇಬೇಕು. ಒಮ್ಮೆ ನಾನು ಚಹ ಕುಡಿಯುತ್ತಿದ್ದಾಗ ಎನ್ಕೆ ಬಾಯಲ್ಲಿ ಭಜಿ ಹಾಕಿಕೊಂಡು ಅವರ ಹಿಂದೇ ಚಹ ಗುಟಕರಿಸಿ 'ಸುಪರ್ ಇಂಪೋಜ್ ಮಾಡ್ತೀನಿ' ಎಂದರು. ನಾನು 'ಕೂಡಲೇ ಬ್ರಾಡಕಾಸ್ಟ ಮಾಡಬೇಡಿ' ಎಂದೆ–ನಗು ಚಿಮ್ಮಿತು.

ಆಕಾಶವಾಣಿ ಕಾರ್ಯಕ್ರಮಗಳಲ್ಲಿ ಎನ್ಕೆ ಜೊತೆ ಭಾಗವಹಿಸುವದೂ ಒಂದು ಮೋಜು. ಧಾರವಾಡ ಆಕಾಶವಾಣಿಯ ಜನಪ್ರಿಯ ಕಾರ್ಯಕ್ರಮಗಳಲ್ಲೊಂದಾದ 'ರವಿವಾರದ ರಂಜನೆ'ಯನ್ನು ಪ್ರಾರಂಭದ ದಿನಗಳಲ್ಲಿ ಎನ್ಕೆ, ನಾನು, ಹಂಪಿಹೊಳಿ, ಸರಲಾ ಪ್ರತಿ ರವಿವಾರ ಬೆಳಿಗ್ಗೆ ಈ ಕಾರ್ಯಕ್ರಮವನ್ನು ಪ್ರಸ್ತುತಪಡಿಸುತ್ತಿದ್ದೆವು. ಹೆಚ್ಚಾಗಿ ಈ ಕಾರ್ಯಕ್ರಮ ನೇರ ಪ್ರಸಾರವಾಗಿರುತ್ತಿತ್ತು–ಯಾವದಾದರೂ ಒಂದು ವಿಷಯವನ್ನು ಎತ್ತಿಕೊಂಡು ಮಾತಾಡಲು ಪ್ರಾರಂಭಿಸುತ್ತಿದ್ದೆವು; ಆಗ ಯಾವನೋ ಒಬ್ಬ ಉದ್ದನೆಯ ಉಗುರು ಬೆಳಸುವಲ್ಲಿ ದಾಖಲೆ ಸಾಧಿಸಿದ್ದ–ಅದಕ್ಕಾಗಿ ಉಗುರಿನ ಮೇಲೆ ಹರಟೆ ಹೊಡೆದು–ಅವನನ್ನು 'ಉಗರಪತಿ' ಮಾಡಿದೆವು. ನಂತರದ ರವಿವಾರ ಇರಬಹುದು. 'ಮೂಗಿ'ನ ಬಗ್ಗೆ ನಮ್ಮ ಹರಟೆ ನೇರ ಪ್ರಸಾರದಲ್ಲಿ ಸಾಗಿತು. ಮೂಗಿನ ಅವಶ್ಯಕತೆ–ಮೂಗಿನ ವಿವಿಧ ಆಕಾರಗಳನ್ನು ವಿವರಿಸುತ್ತ-ಥಟ್ಟನೆ 'ನಮ್ಮ ವರದಾಚಾರ ಮೂಗು ಅದ ಅಲ್ಲ'–ಎಂದರು. ನಾನು ಹಂಪಿಹೊಳಿ-ಒಬ್ಬರನ್ನೊಬ್ಬರು ಪಿಕಿಪಿಕಿ ನೋಡತೊಡಗಿದೆವು. ನಮ್ಮ ಆಫೀಸಿನ ಕಲಾವಿದರಾದ ವರದಾಚಾರ್ ಅವರನ್ನು ಕುರಿತು ಎನ್ಕೆ ಹೇಳಿದ್ದು, ಆದರೆ ಪ್ರಸಾರದಲ್ಲಿ ಇದು ಸರಿಯೆ ?–ಎಂಬ ಪ್ರಶ್ನೆ ನಮಗೆ ಉದ್ಭವಿಸಿತ್ತು. ಅಷ್ಟರಲ್ಲಿ ಎನ್ಕೆ ಅವರಿಗೆ ನಡೆದ ಘಟನೆ ಅರಿವಾಯಿತು. ಜೋರಾಗಿ ನಗುತ್ತ–'ಮೂಗು-ಎಂಥಾ ಮೂಗರಿ ವರದಾಚಾರದು-ನಾಟ್ಯ ಶಿರೋಮಣಿ ವರದಾಚಾರ್‌ದು'–ಎಂದರು. ನಾವು ಜೋರಾಗಿ ನಗಹತ್ತಿದೆವು. ಮೂಗಿನ ಬಗ್ಗೆ ಅಲ್ಲ-ಅವರ ಮಾತಿನ ಜಾಣ್ಮೆಗೆ; ಸಮಯ ಸ್ಫೂರ್ತಿಗೆ. ಇದಕ್ಕಾಗಿಯೇ ಇರಬೇಕು ನಿಲಯದ ನಿವೃತ್ತ-ನಿರ್ದೇಶಕರೊಬ್ಬರು ಎನ್ಕೆ ಅವರು ಭಾಗವಹಿಸುವ ಮತ್ತು ಪ್ರಸ್ತುತಪಡಿಸುವ ಕಾರ್ಯಕ್ರಮಗಳ ಬಗ್ಗೆ ಯಾವಾಗಲು ಎನ್ಕೆ–ಓ. ಕೆ. ಎನ್ನುತ್ತಿದ್ದುದು.

# ಬಾನುಲಿ ಬಂಧು

**ಎಚ್. ಆರ್. ಲೀಲಾವತಿ**

ನಾನು ಬೆಂಗಳೂರು ಬಾನುಲಿ ಕೇಂದ್ರದಿಂದ ಭಾವಗೀತೆಗಳನ್ನು ಚಿತ್ರಿಸಲು ಹೋಗುತ್ತಿದ್ದ ಕಾಲ. ಅದೇ ಬಾನುಲಿ ಕೇಂದ್ರದಲ್ಲಿ ಕಾರ್ಯಕ್ರಮ ನಿರ್ವಾಹಕರಾಗಿ ಕೆಲಸ ಮಾಡುತ್ತಿದ್ದರು ಕವಿ ಎನ್ಕೆ. ಇಪ್ಪತ್ತೈದು ವರ್ಷಗಳ ಹಿಂದಿನ ಮಾತಿದು. ಕವಿಗಳಿಗೂ, ಗಾಯಕ-ಗಾಯಕರಿಗೂ ಬಹಳ ಹತ್ತಿರದ ನಂಟಲ್ಲವೇ? ಹೀಗಾಗಿ ಕವಿ ಎನ್ಕೆ ಹಾಗೂ ಗಾಯಕಿ ಲೀಲಾವತಿಯವರ ಪರಿಚಯವಾದದ್ದು ಬಾನುಲಿ ಸಮಯದಲ್ಲಿ. ಇಂದಿಗೆ ನಮ್ಮ ಪರಿಚಯ ಸಿಲ್ವರ್ ಜೂಬಿಲಿ ಕೂಡ ಆಗಿದೆಯೆನ್ನಿ. ಆದರೆ ಎನ್ಕೆ ಬರಿ ನನ್ನ ಬಾನುಲಿ ಬಂಧುವೆಂದರೆ ತಪ್ಪಾದೀತು, ಹೆಚ್ಚಾಗಿ ಅವರು ನನ್ನ ಆತ್ಮೀಯ ಬಂಧು ಪ್ರೀತಿ, ವಾತ್ಸಲ್ಯ, ಮಮತೆಯ ಮಳೆಗರೆವ ನನ್ನ ಆತ್ಮೀಯ ಸೋದರ, ಹಿರಿಯಣ್ಣನಾಗಿದ್ದಾರೆ.

ಎನ್ಕೆಯವರ ಅನೇಕ ಕವನಗಳನ್ನು ನಾನು ಬಾನುಲಿ ನಿಲಯಗಳಿಂದ ಹಾಡಿದ್ದೇನೆ. ಅವರ ಅರ್ಥಪೂರ್ಣ, ಸುಂದರ ಭಾವಗೀತೆಗಳಿಂದ ನಾನು ಪುಲಕಿತಗೊಂಡಿದ್ದೇನೆ. 'ರಾಮದರುಶನ ಪಡೆದ ದಿವ್ಯ ಚೇತನ', 'ತುಂಗಾತೀರದ ಶಾಂತ ಸಮೀರಣ', 'ವೇದ ಶಾರ ಪುತ್ರ ಜನನಿ', 'ಭಜಿಸೋ ರಾಮದಯಾಘನನ', 'ಏಳು ಸೀತೆ ಈರೇಳು ವರುಷ', 'ಹಾಡೆಲೆ ಹರುಷಮುಖಿ ಕೋಗಿಲೆ', 'ವಿಷಮ ಜಗದ ವಿಷವ ಕುಡಿದು', 'ಪ್ರೇಮ ಕುಸುಮ...' ಬರೀತಾ ಹೋದರ ಪಟ್ಟಿ ಬೆಳೆತಾನೇ ಹೋಗುತ್ತೆ–ಇವೆಲ್ಲ ಒಂದಕ್ಕಿಂತ ಒಂದು ಚೆಂದ. ಒಂದೊಂದೂ ಒಂದೊಂದು ಆಣಿಮುತ್ತು.

ನನ್ನವರಿಗೆ ಎನ್ಕೆಯವರ 'ರಾಮದರುಶನ', 'ತುಂಗಾತೀರದ ಶಾಂತ ಸಮೀರಣ', 'ಭಜಿಸೋ ರಾಮದಯಾ ಘನನಾ' ಇವು ಬಹಳ ಪ್ರಿಯವಾದ ಗೀತೆಗಳು ನಮ್ಮ ಮದುವೆಗೆ ಮುಂಚೆ ಎನ್ಕೆಯವರ ಈ ಹಾಡುಗಳ ಧ್ವನಿಮುದ್ರಿತ ಟೇಪುಗಳನ್ನು ಬಹಳಷ್ಟು ಸಾರಿ ಕೇಳಿಸಿದ್ದೆ ನನ್ನವರಿಗೆ. "ಈ ಹಾಡುಗಳ Tape ಕೇಳಿಸಿ ಕೇಳಿಸಿ ಮೋಡಿ ಮಾಡಿ ನನ್ನನ್ನ ಮದುವೆಗೆ ಒಪ್ಪಿಸಿಕೊಂಡು ಬಿಟ್ಟೆ" ಅಂತ ನನ್ನವರು ಈಗಲೂ ನನ್ನ ಕೀಟಲೆ ಮಾಡ್ತಿರ್ತಾರೆ. ಅಣ್ಣ ಎನ್ಕೆಯವರು ಕವನಗಳನ್ನು ರಚಿಸಿ ರಚಿಸಿಯೇ ತಮ್ಮ

ತಂಗಿಗೆ ವರಸನ್ನು ಗೊತ್ತು ಮಾಡಿರಬೇಕಾದ್ರೆ, ಅದೇನು ಸಾಮಾನ್ಯದ ವಿಷಯವೇ? ಇದೂ ಒಂದು ನನ್ನ ಬಾನುಲಿ ಬಂಧುವಿನ ವೈಶಿಷ್ಟ್ಯ.

ಒಮ್ಮೆ ಎನ್ಕೆಯವರ 'ಸ್ವೀಕರಿಸುವೆಯಾ ದೇವಾ, ಜೀವದ ಜಾವದ ಹೂವಾ' ಕವನವನ್ನು ವಾರದ ಹೊಸ ಹಾಡಾಗಿ ಹಾಡಿದೆ. ಆ ಹಾಡು ಬಹಳ ಜನಪ್ರಿಯವಾಯ್ತು. ಖ್ಯಾತ ವಿಮರ್ಶಕರಾದ ಬಿ.ವಿ.ಕೆ. ಶಾಸ್ತ್ರಿಯವರು ಈ ಕವನದ ಬಗ್ಗೆ ಬರೆಯುತ್ತ 'ಈ ಗೀತ ಕುಸುಮವನ್ನ ದೇವರು ಸ್ವೀಕರಿಸಿದನೋ ಇಲ್ಲವೋ ಶ್ರೋತೃಗಳಂತೂ ಮನಃಪೂರ್ವಕವಾಗಿ ಸ್ವೀಕರಿಸಿದ್ದಾರೆ. ಎಚ್. ಆರ್. ಲೀಲಾವತಿಯವರು ಬಹಳ ಮಧುರವಾಗಿ ಹಾಡಿದ್ದಾರೆ' ಎಂದು ಬರೆದರು.

ಪ್ರಾಯಶಃ ೬೫-೬೬ನೇ ಇಸವಿ ಇರಬೇಕು. ಖ್ಯಾತ ನೃತ್ಯತಾರೆ ಶ್ರೀಮತಿ ವೈಜಯಂತಿಮಾಲಾ ಬಾಲಿಯವರು ಮೈಸೂರಿಗೆ ಬಂದಿದ್ದರು. ಅವರಿಗೆ ಸನ್ಮಾನ, ಅಂದು ಆ ಕಾರ್ಯಕ್ರಮಕ್ಕೆನನ್ನದೆ ಪ್ರಾರ್ಥನೆ ಎನ್ಕೆಯವರ 'ವೇದವಾಣಿ ಪುಣ್ಯಜನನಿ', ಹಾಡಿದೆ. ಹಾಡು ಮುಗಿದ ಮೇಲೆ ನನ್ನನ್ನು ಅವರು ಬಳಿಗೆ ಕರೆದರು. 'ಯಾವುದು ಈ ಹಾಡು? ಯಾರು ಬರೆದದ್ದು?' ಅಂದರು. ನಾನು ಎನ್ಕೆ ಅಂದೆ. 'ತುಂಬಾ ಚೆನ್ನಾಗಿದೆ, ಬಹಳ ಚೆನ್ನಾಗಿ ಹಾಡ್ತೀರಿ' ಅಂದ್ರು. ಪ್ರಾಯಶಃ ಎನ್ಕೆಯವರ ಈ ಒಂದು ಕವನ ಸಹಸ್ರ ಸಹಸ್ರ ನಾಲಿಗೆಯ ಮೇಲೆ ನಲಿಗಿದೆ ನಲಿಯುತ್ತಿದೆ. ಯಾವೊಂದು ಭಾವಗೀತಾ ಸ್ಪರ್ಧೆಯಲ್ಲಾಗಲೀ, ಬಾನುಲಿಯಲ್ಲಿ ಪ್ರಸಾರವಾಗುವ ಮಕ್ಕಳ ಕಾರ್ಯಕ್ರಮ, ಮಹಿಳೆಯರ ಕಾರ್ಯಕ್ರಮ, ಅಥವಾ ಯುವವಾಣಿಯಲ್ಲಾಗಲೀ, ಸಾಕಷ್ಟು ಸಾರಿ ಈ ಹಾಡು ಕಿವಿಗೆ ಬೀಳುತ್ತಲೇ ಇರುತ್ತದೆ. ಎನ್ಕೆಯವರು ನನ್ನ ಗಾಯನ ಪ್ರಪಂಚದಲ್ಲಿ ಎಂದೆಂದಿಗೂ ಮಿನುಗುವ ಉಜ್ವಲ ತಾರೆಯಾಗಿದ್ದಾರೆ.

ಎನ್ಕೆಯವರು ಬಾನುಲಿ ಕೇಂದ್ರದ ಕೆಲಸದಿಂದ ನಿವೃತ್ತರಾದರು. ಪ್ರಾಯಶಃ ನಾನು ಅದೇ ವೇಳೆಗೆ ಬಾನುಲಿ ಕೇಂದ್ರದಲ್ಲಿ ಸಂಗೀತ ನಿರ್ದೇಶಕಳಾಗಿ ಕೆಲಸಕ್ಕೆ ಸೇರಿದೆ. ಈಗಂತೂ ನನ್ನ ಅಣ್ಣ ಎನ್ಕೆಯವರನ್ನ ಕಾಡುವುದು ಇನ್ನೂ ಹೆಚ್ಚಾಯ್ತು. "ಅಣ್ಣಾ ನಾನು ಚೈತ್ರೋಲ್ಲಾಸ ಅಂತ ಕಾರ್ಯಕ್ರಮ ಮಾಡ್ತಿದ್ದೀನಿ. ನೀವೊಂದು ಕವನ ಬರೆದು ಕಳುಹಿಸಿ, ಸಂಕ್ರಾಂತಿ ಬಂತು, ಪದ್ಯಬೇಕು. ಕನ್ನಡನಾಡಿನ ಬಗ್ಗೆ ಕಾರ್ಯಕ್ರಮ ಮಾಡ್ತಿದ್ದೀನಿ. ಹೊಸಾ ಕವನಬೇಕು". ಹೀಗೆ ಸಂದರ್ಭಕ್ಕನುಗುಣವಾದ ಕವನಕ್ಕಾಗಿ ಪಾಪ ಅವರನ್ನ ಎಷ್ಟು ಗೋಳುಹುಯ್ದುಕೊಳ್ತಿದ್ದಿನೊ? ನನ್ನ ಅಣ್ಣನಿಗೆ ನನ್ನ ಕಾಟ ಇಷ್ಟಕ್ಕೆ ಮುಗಿಯಲಿಲ್ಲ. ನನಗೆ ಕವನ ಬರೆಯುವ ಹುಚ್ಚಿದೆ. ಭಾವಗೀತೆಗಳನ್ನ ಹಾಡಿ ಹಾಡಿ, ಕವನ ಬರೆಯೋ ಹುಚ್ಚು ಅಂಟಿಕೊಂಡು ಬಿಡ್ತೇನೋ? ನವಿಲನ್ನು ಕಂಡು ಕೆಂಬೂತ ಪುಕ್ಕ ಪರಚಿಕೊಂಡ ಹಾಗೇನ್ನಿ. ಕವನಗಳನ್ನ ಬರೆದ ಮೇಲೆ ಅದನ್ನ ಜನಕ್ಕೆ ಕೇಳಿಸ ಬೇಡವೇ? ಜನ ಮೆಚ್ಚಬೇಡವೇ? ಅರ್ಥವಾಗುತ್ತೋ ಬಿಡತ್ತೋ, ಅಂತೂ ಇದೂ ಒಂದು ಹುಚ್ಚಾಟನೆ ಅನ್ನಿ.

ಬರೆದ ಕವನಗಳನ್ನ ರಾತ್ರೋ ರಾತ್ರಿ ಪ್ರತಿಗಳನ್ನ ತಯಾರಿಸಿದೆ. ಬರೆದ ಕವನಗಳಿಗೆ ಸರ್ಟಿಫಿಕೇಟ್ ಬೇಡವೇ? ಸರಿ ತಕ್ಷಣ ಸಿಕ್ಕಿದವರು ನನ್ನ ಅಣ್ಣ ಎಸ್ಕೆ ಅವರಿಗೆ ಕಳುಹಿಸಿ, "ಓದಲೇಬೇಕು. ಓದಿ ಅಭಿಪ್ರಾಯ ತಿಳಿಸಲೇಬೇಕು" ಎಂದು ಸರ್ಕಾರಿ ಕಾಗದ ಬರೆದು ಉತ್ತರಕ್ಕಾಗಿ ಜಾತಕ ಪಕ್ಷಿಯಂತೆ ಕಾದು ಕುಳಿತೆ.

ಪಾಪ ಎಸ್ಕೆಯವರು ಆಡೋಕ್ಕಿಲ್ಲ, ಅನುಭವಿಸೋಕ್ಕಿಲ್ಲ ಅನ್ನೋಹಾಗೆ ಒಂದಲ್ಲ ಹತ್ತು ಬಾರಿ ನನ್ನ ಕವನಗಳನ್ನ ಓದಿರಬೇಕು. ಅವರೂ ಬೇಸರಪಟ್ಟುಕೊಳ್ಳದೆ ಸೂಕ್ತ ತಿದ್ದುಪಡಿ, ಸಲಹೆಗಳೊಂದಿಗೆ ನಾಲ್ಕೇ ದಿನಗಳಲ್ಲಿ ನನ್ನ ಕಡತವನ್ನ ಮರಳಿ ಹಿಂದಕ್ಕೆ ಕಳುಹಿಸಿಕೊಟ್ಟಾಗ, ಅವರ ಕೆಲಸದ ವೈಖರಿ ಕಂಡು ಆಶ್ಚರ್ಯಪಟ್ಟೆ.

ನನ್ನ ಅಣ್ಣ ಎಸ್ಕೆಯವರಿಗೆ ಹೀಗೆ ಹಲವು ಹತ್ತು ಬಾರಿ ತೊಂದರೆ ಕೊಟ್ಟಿದ್ದೇನೆ ಅಂದಾಕ್ಷಣ ಅದು ಅಂದಿಗೆ ಮುಗಿದು ಹೋಯ್ತೇನೋ ಅಂದ್ಕೋಬೇಡಿ. ನನ್ನ ಕಾಟ ಅವರಿಗೆ ತಪ್ಪಿದ್ದೇ ಇಲ್ಲ. ಪಾಪ ನನ್ನ ಬಾನುಲಿ ಬಂಧುವಿನ ಸಹನೆಗೆ ನಮೋ ನಮಃ. ಸದಾ ಹಸನ್ಮುಖಿಯಾದ ಎಸ್ಕೆಯವರೊಂದಿಗೆ ಮಾತನಾಡುವಾಗ ಹೃದಯ ತುಂಬಿ ಬರುತ್ತದೆ.

ಎಸ್ಕೆಯವರ ನನ್ನ ಬಾಂಧವ್ಯ ಕವಿತಾ ರಚನೆ, ಗಾಯನಕ್ಕಷ್ಟೇ ಸೀಮಿತವಾದದ್ದಲ್ಲ. ನನ್ನ ಬಾಳಿನ ನೋವು ನಲಿವುಗಳಲ್ಲಿ ಭಾಗಿಯಾಗಿ ನನ್ನ ನಲಿವಿನಲ್ಲಿ ಸಂತೋಷಪಟ್ಟು, ನೋವಿನಲ್ಲಿ ಕಣ್ಣೀರೊರೆಸಿದ ದೊಡ್ಡ ಜೀವ. ನನಗೆ ಅವರು ಬರೆದಿಡುವ ಪತ್ರಗಳನ್ನು ಕೋರ್ಟ ಕಾಗದ ಪತ್ರಗಳಂತೆ ನನ್ನ ಕಬ್ಬಿಣದ ಬೀರುವಿನಲ್ಲಿ ಜೋಪಾನವಾಗಿ ಇಟ್ಟಿದ್ದೇನೆ. ಅವರು ಮುನ್ನೂರು ಮೈಲಿ ಆಚೆ ಇದ್ದರೂ ಅವರನ್ನು ನೆನೆಯುವ ದಿನ ಇಲ್ಲ.




# ಸರಳ ಸಜ್ಜನ ಸಾಹಿತಿ

## ದತ್ತಾತ್ರೇಯ ಕೆ. ಮೆಂಡನ್

೧೯೪೯–೧೯೫೦ರಲ್ಲಿರಬೇಕು. ಒಂದು ದಿನ ನಾನು ಎನ್ಕೆಯವರನ್ನು ಕಂಡೆ.

ಮುಂಬೈಯ ಚರ್ಚಗೇಟ್ ಸಮೀಪ, ಕ್ವೀನ್ಸ್ ರೋಡ್ (ಈಗ ಮಹರ್ಷಿ ಕರ್ವೆ ರೋಡ್)ನಲ್ಲಿ ದೊಡ್ಡ ಕೋಟೆಯಂಥ ಕೆಂಪು ಕಟ್ಟಡದ ನಾಲ್ಕನೇ ಮಹಡಿಯನ್ನೇರಿ ಅಂದಿನ ಆಕಾಶವಾಣಿಯ ಕನ್ನಡ ವಿಭಾಗಕ್ಕೆ ಧಾವಿಸಿದೆ. ಒಳಗೆ ಗದ್ದಲವೋ ಗದ್ದಲ. ಮರುದಿನದ ಹಳ್ಳಿಗರ ಕಾರ್ಯಕ್ರಮ 'ಕಲ್ಲಪ್ಪ–ಮಲ್ಲಪ್ಪ'ರ ತಾಲೀಮು ನಡೆಯುತ್ತಿತ್ತು. ಗುರುತಿಲ್ಲದ ನನ್ನನ್ನು ನೋಡಿದ ಜವಾನನ ಸವಾಲು—

"ಕಿಸ್‌ಸೆ ಮಿಲ್ನಾ ಹೈ ?"

"ಎನ್. ಕೆ. ಕುಲಕರ್ಣಿ" ಎಂದಷ್ಟೆ ಹೇಳಿದಾಗ, 'ಎನ್ಕೆ'ಯವರೇ ಎದುರಿಗೆ ಬಂದರು. ಎನ್ಕೆಯವರ ಬಗ್ಗೆ ನಾನು ಕೇಳಿದ್ದೆ. ಆದರೆ ಅವರನ್ನು ಭೇಟಿ ಮಾಡಿದ್ದು ಇದೇ ಮೊದಲು ಬಾರಿ. ಎದುರಿಗಿದ್ದ ಕುರ್ಚಿಯಲ್ಲಿ ಕೂಡಲು ಹೇಳಿ ತಾವೂ ಕೂತರು. 'ನಾನು ಕನ್ನಡ ವಿದ್ಯಾರ್ಥಿ ಪರಿಷತ್ತಿನ ಪರವಾಗಿ ಬಂದಿದ್ದೇನೆ' ಎಂದಾಗ ಉತ್ತರ ಬಂತು—"ಸರಿ, ಸರಿ, ನಿಮ್ಮ ಕಾಗದ ಸಿಕ್ಕಿದೆ. ನಾನು ಬರುತ್ತೇನೆ" ಎಂದರು.

ಕನ್ನಡ ವಿದ್ಯಾರ್ಥಿ ಪರಿಷತ್ತಿನ ಸಮ್ಮೇಲನವೊಂದು ಆಮೇಲೆ ಒಂದು ವಾರದ ತರುವಾಯ ಜರುಗಬೇಕಾಗಿತ್ತು. ಅಂದು ಸಮಯಕ್ಕೆ ಸರಿಯಾಗಿ ದಯಮಾಡಿಸಿದ ಎನ್ಕೆಯವರು ಸುಮಾರು ೪೫ ನಿಮಿಷ ನಿರರ್ಗಳವಾಗಿ ಮಾತಾಡುತ್ತ 'ವಿದ್ಯಾರ್ಥಿಗಳು ಬರೇ ಹಾಡು ಕಟ್ಟುವವರಾಗಬಾರದು, ನಾಡು ಕಟ್ಟುವವರಾಗಬೇಕು; ಕರ್ಮಠರಾಗಬೇಕು.' ಇವರಿಗೆ ೩೫–೩೪ ವರ್ಷಗಳಷ್ಟು ಹಿಂದೆ, ಮುಂಬೈ ಶಹರಿನಲ್ಲಿ ಕನ್ನಡ ಕಣ್ಣು ಬಿಡುತ್ತಿದ್ದ ಕಾಲದಲ್ಲಿ, ಯುವ ಪೀಳಿಗೆಗೆ ಎನ್ಕೆಯವರಿತ್ತ ಸಂದೇಶ.

ಪ್ರಾರಂಭದಲ್ಲಿ ಮುಂಬೈ ರಾಜ್ಯದ ಪಾನನಿರೋಧ ಖಾತೆಯ ಪಾಕ್ಷಿಕ ಪತ್ರಿಕೆ 'ಸಂಜೀವಿನಿ'ಯ ಸಂಪಾದಕ ವರ್ಗದಲ್ಲಿ ಕೆಲಕಾಲ ಕೆಲಸ ಮಾಡಿದ ಎನ್ಕೆಯವರ ಸೃಜನಶೀಲ ಮನೋವೃತ್ತಿ ಮುಕ್ತ ವಾತಾವರಣದಲ್ಲಿ ಹಕ್ಕಿಯಂತೆ ಹಾರಾಡಬಯಸಿತು. ಹಾಗಾಗಿ ಇದ್ದಕ್ಕಿದ್ದಂತೆ ಅವರು ಒಂದು ದಿನ ಆಕಾಶವಾಣಿಯ ಕನ್ನಡ ವಿಭಾಗದಲ್ಲಿ ನಿಲಯ ಕಲಾವಿದನಾಗಿ ಕಾಣಿಸಿಕೊಂಡರು. ಇಲ್ಲಿ ಅವರು ಆಶಿಸಿದಂತೆ ಮುಕ್ತ ವಾತಾ

ವರಣ ದೊರೆಯುದಿದ್ದರೂ, ವಾರಕ್ಕೊಂದು ನಾಟಕ ಇಲ್ಲವೆ ಗೀತ ರೂಪಕ, ಹಾಗೂ ಹಬ್ಬ ಹರಿದಿನಗಳಲ್ಲಿ ವಿಶೇಷ ರೂಪಕಗಳ ರಚನೆ–ಹೀಗೆ ಬಿಡುವಿಲ್ಲದ ದುಡಿಮೆ ! ಬರೆದು ಚಿತ್ತರಿಸುವ ಜವಾಬ್ದಾರಿಯೆಲ್ಲ 'ಎನ್ಕೆ'ಯವರದ್ದೇ. ಆಕಾಶವಾಣಿಯ ಬೇರೆ ಬೇರೆ ಕಾರ್ಯಕ್ರಮಗಳಿಗೆ ಕಲಾವಿದರನ್ನು ಹುಡುಕುವುದು, ಭಾಷಣಕಾರರನ್ನು ಅಣಿಗೊಳಿಸುವುದು, 'ಹಕ್ಕಿಯ ಗೂಡು' ಕಾರ್ಯಕ್ರಮಕ್ಕೆ ಮಕ್ಕಳನ್ನು ಕಲಿ ಹಾಕುವುದು, ಹಾಗೆಯೇ ಹಳ್ಳಿಯ ಬಂಧುಗಳ ಕಾರ್ಯಕ್ರಮಗಳನ್ನು ಯೋಜಿಸುವುದು ಎಲ್ಲ ಎನ್ಕೆಯವರ ಹೊಣೆಗಾರಿಕೆ.

ಹೀಗೆ ಆಗಸ್ಟ ೧೯೪೬ ರಿಂದ ೧೯೭೧ರ ಆಗಸ್ಟ ೨೮ರ ವರೆಗೆ ಎನ್ಕೆಯವರಿಗೆ, ಮೊದಲು ೪ ವರ್ಷ ಮುಂಬಯಿ, ಆಮೇಲೆ ಏಳು ವರ್ಷ ಧಾರವಾಡ ಮತ್ತೆ ೧೯೫೭ರಲ್ಲಿ ರಾಜ್ಯಗಳ ಪುನರ್ವಿಂಗಡನೆಯಾದ ಮೇಲೆ ಬೆಂಗಳೂರು ಪುನಃ ೧೯೬೬ರಲ್ಲಿ ಧಾರವಾಡ– ಹೀಗೆ ಬಾನುಲಿಯಲ್ಲಿಯೇ ಬದುಕಾಯಿತು, ಅಥವಾ ಅವರ ಬದುಕೇ ಬಾನುಲಿಯಾಯಿತು.

ನಿರಂತರವಾಗಿ ೨೫ ವರ್ಷಕಾಲ ಮೈಕು, ಕೆಂಪು ದೀಪ, ಡೆಸ್ಕು, ಪೆನ್ನು, ಬಾನುಲಿ ಬಳಗ, ಬಾನುಲಿ ಪರಿಸರ ಇವೇ ಅವರಿಗೆ ಸರ್ವಸ್ವವಾಗಿದ್ದು ತಮ್ಮ ಜೀವನದ ಬಹು ಅಮೂಲ್ಯ ಭಾಗವನ್ನು ಆಕಾಶವಾಣಿಗೆ ಧಾರೆಯೆರೆದರು.

ಬದುಕಿನುದ್ದಕ್ಕೂ ಬಿರುಗಾಳಿಯನ್ನೆದುರಿಸಿಯೇ ಮುನ್ನಡೆದ 'ಎನ್ಕೆ'ಯವರ ತಂದೆ ತೀರಿದಾಗ ಅವರಿಗೆ ೧೦ ವರ್ಷ, ತಾಯಿ ಅಗಲಿದಾಗ ೧೨ ವರ್ಷ, ಜೋಪಾನ ಮಾಡಿದ ಅಕ್ಕ ಅಗಲಿದಾಗ ೧೪ ವರ್ಷ, ತಾಯಿಗೆ ಸಮನಾದ ಅತ್ತಿಗೆ ಸತ್ತಾಗ ೨೬ ವರ್ಷ, ಮೊದಲ ಹೆಂಡತಿ ತೀರಿಕೊಂಡಾಗ ೩೧ ವರ್ಷ, ಎರಡನೇ ಹೆಂಡತಿ ಅಗಲಿದಾಗ ೫೪ ವರ್ಷ. ಈ ಎಲ್ಲ ದುರಂತವನ್ನು ಎದುರಿಸಿಯೂ ಕುಲಕರಣಿಯವರು ಅಧೀರರಾಗಲಿಲ್ಲ! ಎನ್ಕೆ ಬಾಲ್ಯದಲ್ಲಿ ಬಡತನವನ್ನು ಕಂಡರು. ಕಂತಿನಲ್ಲಿ ಪಡೆದ ವರದಕ್ಷಿಣೆಯ ಹಣದಿಂದ ಅವರ ಕಾಲೇಜು ವ್ಯಾಸಂಗ ಸಾಗಿತು. ಕನ್ನಡವನ್ನು ಪ್ರಧಾನ ವಿಷಯವನ್ನಾಗಿಸಿಕೊಂಡು ಮುಂಬೈ ವಿಶ್ವವಿದ್ಯಾಲಯದ ಬಿ.ಎ.ದಲ್ಲಿ ಪ್ರಥಮರಾಗಿ ಉತ್ತೀರ್ಣರಾಗಿ ಮುಂದೆ ೧೯೩೮ರಲ್ಲಿ ಕನ್ನಡ ಮತ್ತು ಸಂಸ್ಕೃತಗಳೊಂದಿಗೆ ಎಂ.ಎ. ಪದವಿ ಪಡೆದರು. ಆಮೇಲೆ ೧೯೪೦ರಲ್ಲಿ ಬಿ.ಟಿ. ಆದರು.

ಪ್ರಾರಂಭದಲ್ಲಿ ಕಾವ್ಯವೇ ಅವರ ಅಭಿವ್ಯಕ್ತಿಯ ಮಾಧ್ಯಮವಾಯಿತು. ಹೈಸ್ಕೂಲಿನಲ್ಲಿದ್ದಾಗಲೇ ಬೀಗರ ಹಾಡುಗಳು, ಭೂಮದ ಹಾಡುಗಳು ಮುಂತಾದುವನ್ನು ರಚಿಸಿ ಅವರು ಲೇಖಕರಾದರು. ನಂತರ ನಾಟಕಕಾರರಾಗಿ ಅವರು ಬರೆದ 'ಇಲೆಕ್ಶನ್' ನಾಟಕ ಅವರಿಗೆ ಕೀರ್ತಿ ತಂದುಕೊಟ್ಟಿತು. ಆಮೇಲೆ ಒಂದೊಂದರಂತೆ ಅನೇಕ ನಾಟಕ ಸಂಗ್ರಹಗಳು ಹೊರಬಂದು ಜನಪ್ರಿಯರಾದರು.

'ವೈನಿ', 'ಎರಡನೆಯ ಸಂಬಂಧ', 'ಕಲೋಪಜೀವಿ', 'ಗೌರಿಶಂಕರ', 'ಮೂರು ತಲೆಮಾರು', ಅವರ ಕೆಲವು ಕಾದಂಬರಿಗಳು. 'ಸಾವಿನ ಉಡಿಯಲ್ಲಿ' ಅವರ ಒಂದು

ಉತ್ತಮ ಕಾದಂಬರಿ. ಅವರ ರಚನೆ 'ಸಾಕ್ಷಾತ್ಕಾರ' ತಾತ್ವಿಕ ವಿವೇಚನೆಗೆ ಮೀಸಲಾದುದು.

ಒಬ್ಬ ಮನುಷ್ಯ ಏನೇನು ಆಗಿರಬಹುದು ? ಎನ್ಕೆಯವರು ಹಲವು ಹರವು. ಕವಿ, ಲೇಖಕ, ವಿಮರ್ಶಕ, ನಾಟಕಕಾರ, ಕಾದಂಬರಿಕಾರ, ವ್ಯಕ್ತಿ ಚಿತ್ರಗಾರ–ವಿಸ್ತಾರ, ವೈವಿಧ್ಯ ಹಾಗೂ ತುಂಬ ವಿಪುಲ ಆಕರ್ಷಣೀಯ ಬಹು ವರ್ಣಮಯ ವ್ಯಕ್ತಿ ಅವರು.

ಕಿರಿಯ ವಯಸ್ಸಿನಲ್ಲೇ ಹಿರಿಯ ಹೆಸರನ್ನು ಪಡೆದು ಬೆಳೆದರು. ಹಳಗನ್ನಡ ಸಾಹಿತ್ಯದ ಮೇಲೆ ಅವರಿಗಿರುವ ಪ್ರಭುತ್ವ ಅನ್ಯಾದೃಶವಾದುದು. ಗದುಗಿನ ಶ್ರೀ ನಾರಾಯಣನ ಸಂಪೂರ್ಣ ವ್ಯಾಸ ಭಾರತವನ್ನು ಕುಲಕರ್ಣಿಯವರು ಹೊಸಗನ್ನಡ ಗದ್ಯದಲ್ಲಿ ರಚಿಸಿ ಕನ್ನಡ ಸಾರಸ್ವತ ಲೋಕಕ್ಕೆ ಅರ್ಪಿಸಿದ್ದಾರೆ. ಏಳುನೂರು ಪುಟಗಳ ಈ ಬೃಹತ್ ಗ್ರಂಥ ಲೇಖಕರ ದೀರ್ಘ ಕಾಲದ ಪರಿಶ್ರಮದ ಫಲವಾಗಿದೆ. ಪ್ರಾಚೀನ ಕಾವ್ಯಗಳಲ್ಲಿನ ಭಾರತದ ಕಥೆಗಳನ್ನೊಳಗೊಂಡಿರುವ ಈ ಕೃತಿಯನ್ನು 'ಎನ್ಕೆ ಭಾರತ' ಎಂದೂ ಕರೆಯಬಹುದಾಗಿದೆ. ಒಟ್ಟಿನಲ್ಲಿ ಲಘು ಬರಹಗಳಿಗೆ ಪ್ರಸಿದ್ಧರಾಗಿರುವ ಎನ್ಕೆಯವರ ಮಹತ್ವಪೂರ್ಣ ಕೃತಿ ಈ ಕನ್ನಡ ವ್ಯಾಸಭಾರತ ಎಂದು ಧಾರಾಳವಾಗಿ ಹೇಳಬಹುದಾಗಿದೆ. ಒಂದಾನೊಂದು ಕಾಲದಲ್ಲಿ 'ಪ್ರಜಾಮತ'ದಲ್ಲಿ ವಾರವಾರವೂ ಬರುತ್ತಿದ್ದ ಎನ್ಕೆಯವರ ವ್ಯಂಗ್ಯ ಲೇಖನವನ್ನು ಓದಿ ಬಲ್ಲವರು, ಅವರ ವಿಡಂಬನೆಯ ವೈಖರಿಗೆ ತಲೆದೂಗಬಹುದು.

ಲಘು ಬರಹ ಮತ್ತು ವಿಡಂಬನಾ ಸಾಹಿತ್ಯ ಕ್ಷೇತ್ರದಲ್ಲಿ 'ಬೀಚಿ'ಯವರ ಜೊತೆಗೇ ಬರುವ ಮತ್ತೊಂದು ಗಣನೀಯ ಹೆಸರು ಎನ್ಕೆಯವರದು. ಅವರ ಬರೆವಣಿಗೆ ನಮ್ಮನ್ನು ಉದ್ದಕ್ಕೂ ಓದಿಸಿಕೊಂಡು ಹೋಗುತ್ತದೆ. ಬರವಣಿಗೆಯ ಮುಖ್ಯ ಲಕ್ಷಣ ಓದಿಸಿಕೊಂಡು ಹೋಗುವಂತೆ ಇರಬೇಕು. ಓದಿಸಿಕೊಳ್ಳುವ ಗುಣ ಇರುವಂಥ ಬರೆವಣಿಗೆಯಲ್ಲಿ ಏನೋ ಒಂದು ತರದ ಆಕರ್ಷಣೆಯಿರುತ್ತದೆ. ಎನ್ಕೆಯವರು ಆ ಕಲೆಯನ್ನು ಕರತಲಾಮಲಕ ಮಾಡಿಕೊಂಡಿದ್ದಾರೆ. ತೂಕ ಮಾಡಿದಂತೆ ಅವರು ಶಬ್ದಗಳನ್ನು ಬಳಸುತ್ತಾರೆ. ಹಾಗೆಯೇ ಅವರ ಬರೆವಣಿಗೆಯಲ್ಲಿ ನಾವು ಶಬ್ದಗಳ ಗೊಂದಲವನ್ನೆಂದೂ ಕಾಣುವುದಿಲ್ಲ. ವಿಚಾರ ಮಾಡುವುದನ್ನು ತಿಳಿದವರು ವಿಚಾರಗಳ ಗೊಂದಲದಲ್ಲಿ ಸಿಲುಕಿಕೊಂಡಿರುವುದಿಲ್ಲ. ಹೇಗೆ ವಿಚಾರ ಮಾಡಬೇಕೆನ್ನುವುದು ಎನ್ಕೆಯವರಿಗೆ ತಿಳಿದಿರುವುದರಿಂದ ಏನು ವಿಚಾರ ಮಾಡುವುದೆನ್ನುವುದನ್ನು ಅವರು ಬಲ್ಲರು.

ಬೋಧನೆಗಿಂತಲೂ ಬದುಕು ಅವರನ್ನು ಹೆಚ್ಚು ಪ್ರಭಾವಿಸಿದೆ. ಅವರ ಜೀವನದಲ್ಲಿ ಪುರಾತನ ಜ್ಞಾನ, ಮಧ್ಯಯುಗದ ಶ್ರದ್ಧೆ ಹಾಗೂ ಅರ್ವಾಚೀನ ಕಾಲದ ವೈಜ್ಞಾನಿಕ ದೃಷ್ಟಿ ಇರುವುದರಿಂದಲೇ ಅವರ ಜೀವನ ನೌಕೆ ಹೊಯ್ದಾಡದಂತೆ ನಡೆದಿದೆ. ದೇಶ ವತ್ಸಲರೂ, ಸಾಹಿತ್ಯ ವತ್ಸಲರೂ ಆದ ಅವರು ಕುಟುಂಬ ವತ್ಸಲರೂ ಹೌದು. ಮಕ್ಕಳೊಂದಿಗೆ, ಸೊಸೆಯರೊಂದಿಗೆ, ಮೊಮ್ಮಕ್ಕಳೊಂದಿಗೆ ತುಂಬು ಜೀವನ ಸಾಗಿಸುವ ಎನ್ಕೆ ತುಂಬ ಸ್ನೇಹಜೀವಿ.

ನಾ ಸಿ ಕಾ ಕಾ : ಎನ್ಕೆ ಬದುಕು/೨೧೭

ವಯಸ್ಸು, ಅನುಭವ, ವಿಚಾರಗಳಲ್ಲಿ ಸಾಕಷ್ಟು ಎತ್ತರದಲ್ಲಿದ್ದರೂ ಅವರು ತರುಣರೊಂದಿಗೆ ಸ್ನೇಹದಿಂದ ನಡೆದುಕೊಳ್ಳುವುದನ್ನು ಕಂಡು ಎಷ್ಟೋ ವೇಳೆ ನಾನು ಆಶ್ಚರ್ಯಭರಿತನೂ, ಸಂತೋಷಭರಿತನೂ ಆಗಿದ್ದೇನೆ.

ಸಂಕ್ಷಿಪ್ತವಾಗಿ ಹೇಳುವುದಾದರೆ ಯಾವ ಗುಂಪನ್ನೂ ಕಟ್ಟಿಕೊಳ್ಳದೆ, ಯಾವ ಬಣಕ್ಕೂ ಸೇರದೆ, ಸಿದ್ಧಿ ಪಡೆದಷ್ಟು ಪ್ರಸಿದ್ಧಿ ಪಡೆಯದ ಸರಳ-ಸಜ್ಜನ ಸಾಹಿತಿ ಎನ್ಕೆ. 'ತಾಯಿನುಡಿ' ಬಳಗಕ್ಕೆ ಅವರು ದೊಡ್ಡಣ್ಣನಂತೆ–ಅವರ ನಗುಮೊಗ ಸ್ನೇಹ, ಸಲುಗೆ ಸೌಹಾರ್ದದ ಆಗರ, ಅವರಿಗೆ ನಮ್ಮೆಲ್ಲರ ನಮನ.

# ಕುಮಾರವ್ಯಾಸ ವ್ಯಾಸಂಗಿ

ಎಂ. ವಿ. ಸುಬ್ಬರಾಯ

ಸುಮಾರು ೧೯೫೭ ರಿಂದ ೧೯೬೫. ಆ ಕಾಲದಲ್ಲಿ ಬೆಂಗಳೂರಿನಲ್ಲಿ "ಗಮಕ ಕಲೆ" ಅರ್ಥಾತ್ "ಕಾವ್ಯವಾಚನ" ಸಾಕಷ್ಟು ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲ. ಅದರಲ್ಲೂ ಗಮಕಿಗಳಿಗೆ ವಿಶೇಷ ಹುಮ್ಮಸ್ಸು. ಆಗ ನಗರದಲ್ಲಿ ಪ್ರತಿದಿನ ಸಂಜೆ ನಾಲ್ಕಾರು ಕಡೆ ಕಾವ್ಯವಾಚನ ಕಾರ್ಯಕ್ರಮ ನಡೆಯುತ್ತಿತ್ತು. ಅಲ್ಲೆಲ್ಲ ಗಮಕ ಕಲಾವಿದರು, ಗಮಕ ಕಲಾಭ್ಯಾಸಿಗಳು, ಗಮಕ ಕಲಾಭಿಮಾನಿಗಳ ಮೇಳ ಸೇರುತ್ತಿತ್ತು. ಅದರಲ್ಲೂ "ಕುಮಾರ ವ್ಯಾಸ ಭಾರತ"ದಿಂದ ವಾಚನ ಅಂದರೆ ತೀರಿತು. ಅಲ್ಲಿ ಬಹುಮಟ್ಟಿಗೆ ಸಿದ್ದವ್ವನಹಳ್ಳಿ ಕೃಷ್ಣಶರ್ಮ, ಜಿ. ಪಿ. ರಾಜರತ್ನಂ, ಪಂಡಿತ ರಾಮಾರಾಧ್ಯರು, ಪಂಡಿತ ಎಂ. ವಿ. ಚಕ್ರವರ್ತಿ, ಗಮಕಿಗಳಾದ ಕೆ. ವಿ. ಸಂಪತ್ಕುಮಾರಾಚಾರ್ಯರು,ಟಿ.ಆರ್. ಜಯರಾಯರು ಬಿ. ಎಸ್. ಪಾಂಡುರಂಗರಾಯರು, ಶ್ರೀಮತಿ ಶಕುಂತಳಾಬಾಯಿ ಪಾಂಡುರಂಗರಾಯರು, ಶ್ರೀಮತಿ ಅನ್ನಪೂರ್ಣಮ್ಮ ರಘುಪತಿ ಶಾಸ್ತ್ರಿ, ಜಿ. ಬಿ. ಗೋಪಿನಾಥರಾಯರು ಹಾಗೂ ನಾನು ನಾವೆಲ್ಲ ಮಾಮೂಲು ಜನ. ಇವರುಗಳೇ ಅಲ್ಲದೆ ಇದೇ ಮಟ್ಟದ ಇನ್ನೂ ೨೫-೩೦ ಜನ ಕೂಡ್ತುತ್ತಿದ್ದರು. ಕಾವ್ಯವಾಚನ ಮುಗಿದ ನಂತರ ಕಾವ್ಯದ ಬಗ್ಗೆ ಚರ್ಚೆ, ಗಮಕವನ್ನು ಗಮಕಿಯಾದವನು ಇನ್ನೂ ಹೇಗೆ ಹಾಡಿದರೆ ಕಲೆಯನ್ನು ಜನರಂಜನೀಯ ವನ್ನಾಗಿ ಮಾಡಬಹುದು; ಕವಿ ಕುಮಾರವ್ಯಾಸನನ್ನು, ಅವನ ಕಾವ್ಯವನ್ನು ನೋಡಿ ರುವ, ನೋಡುತ್ತಿರುವ, ನೋಡಬೇಕಾದ ದೃಷ್ಟಿ ಯಾವುದು; ಇದರ ಬಗ್ಗೆ ನಿರಂತರ ಚಿಂತನ, ಮಂಥನ ನಡೆಯುತ್ತಿತ್ತು, ಇದು ಅಂದಿನ ಸಾಮಾನ್ಯ ಸ್ಥಿತಿ. ಅಂದು ಈ ಎಲ್ಲ ಚಟುವಟಿಕೆಗಳ ಹಿಂದೆ ಇದ್ದ ವ್ಯಕ್ತಿ, ಚಾಲನ ಶಕ್ತಿ, ಸ್ಫೂರ್ತಿಯ ಕೇಂದ್ರದ ಅವಮ್ಯ ಚೇತನದ ಶ್ರೀಶಕ್ತಿ ಎನ್ಕೆ ಅವರೆಂದರೆ ಬಹುಶಃ ಇಂದಿನ ಜನ ನಂಬುವರೋ ಇಲ್ಲವೋ ತಿಳಿಯದು. ಆದರೂ ಇದು ಸತ್ಯ. ಆ ಸಮಯದಲ್ಲಿ ಎನ್ಕೆ ಅವರು ಬೆಂಗಳೂರು ಆಕಾಶವಾಣಿಯಲ್ಲಿದ್ದರು. ಆಗ ಪ್ರತಿ ವಾರ ಒಂದು ಅಥವಾ ಎರಡು ಬಾರಿ ಆಕಾಶ ವಾಣಿಯಲ್ಲಿ ಕುಮಾರವ್ಯಾಸ ಭಾರತ, ಹರಿಶ್ಚಂದ್ರ ಕಾವ್ಯ ಮುಂತಾದ ಪ್ರಾಚೀನ ಕಾವ್ಯ ಗಳಿಂದ ಕಾವ್ಯವಾಚನ, 'ರೂಪಕ'ಗಳು ಪ್ರಸಾರವಾಗುತ್ತಿದ್ದವು. ಅದರಲ್ಲಿ ಸಾಹಿತಿಗಳೂ, ಗಮಕಿಗಳೂ, ರಂಗಭೂಮಿಯ ಕಲಾವಿದರೂ ಭಾಗವಹಿಸುತ್ತಿದ್ದರು. ಇದರಿಂದಾಗಿ

ಅಂದಿನ ಅನೇಕ ತರುಣ ಗಮಕಿಗಳು ತಾವೂ ಆಕಾಶವಾಣಿ ಕಾರ್ಯಕ್ರಮಗಳಲ್ಲಿ ಭಾಗ ವಹಿಸಲು ಸಾಕಷ್ಟು ಶ್ರದ್ಧೆಯಿಂದ ಕಾವ್ಯಾಭ್ಯಾಸ ಮಾಡುತ್ತಿದ್ದರು. ಒಟ್ಟಿನಲ್ಲಿ ಅಂದು ಬೆಂಗಳೂರಿನಲ್ಲಿ ಉತ್ತಮ ಸಾಹಿತ್ಯಕ ಚಿಂತನೆಯ ಕಾರ್ಯ ನಿರಂತರವಾಗಿ ನಡೆಯುತ್ತಿತ್ತು. ಇದಲ್ಲದೆ ಪ್ರತಿ ಭಾನುವಾರ ಎನ್ಕೆ ಅವರ ಮನೆಯಲ್ಲಿ 'ಕುಮಾರವ್ಯಾಸ ಭಾರತ'ದ ಬಗ್ಗೆ ಗೋಷ್ಠಿ ನಡೆಯುತ್ತಿತ್ತು. ಅದರಲ್ಲಿಯೂ ಅನೇಕ ಹಿರಿಯರು ಭಾಗವಹಿಸುತ್ತಿದ್ದರು. ಕೆ. ವಿ. ಸಂಪತ್ಕುಮಾರಾಚಾರ್ಯರು ಗಮಕಿಗಳಾದ್ದರಿಂದ ಅವರು ಭಾರತ ಓದುತ್ತಿದ್ದರು. ಉಳಿದವರು ಅದರಲ್ಲಿ ಬರುವ ಪಾತ್ರ ಪರಿಚಯ, ಕವಿಸಮಯ, ಯುದ್ಧ ವರ್ಣನೆಗಳ ವೈಖರಿ, ಭಕ್ತಿಯ ಪರಾಕಾಷ್ಠತೆ ಹೀಗೆ ಅನೇಕ ಪ್ರಕಾರಗಳ ಬಗ್ಗೆ ಚರ್ಚೆ ಸಾಗುತ್ತಿತ್ತು. ಆ ಸಮಯದಲ್ಲಿ ಕುಮಾರವ್ಯಾಸನ ಬಗ್ಗೆ, ಅವನ ಕಾವ್ಯದ ಬಗ್ಗೆ ಯಾರಿಂದ ಎಷ್ಟು ಕೇಳಿದರೂ ನಮಗೆ ತೃಪ್ತಿಯಾಗುತ್ತಿರಲಿಲ್ಲ. ಇದೊಂದು ಚಿಂತನ ಸಮಾರಾಧನ, ಕಾವ್ಯ ರಸದ ದಾಸೋಹ. ಎನ್ಕೆ ಅವರು ಬೆಂಗಳೂರು ಬಿಟ್ಟು ಧಾರವಾಡ ಸೇರಿದ ಮೇಲೆ, ಇಲ್ಲಿನ ಪರಿಸ್ಥಿತಿ ಹಿಂದುಮುಂದಾಯಿತು. ಆ ಸಮಯದಲ್ಲಿ ಅ.ನ.ಕೃ. ಅವರು ಬದ ಲಾದ ಪರಿಸ್ಥಿತಿಯ ಬಗ್ಗೆ ಮನನೊಂದಿದ್ದರು. ಎನ್ಕೆ ಅವರು ಇಲ್ಲಿರುವಷ್ಟು ಕಾಲ ಅನೇಕ ಯುವಕರು ಸಾಹಿತ್ಯಚಿಂತನಶೀಲರಾಗಿದ್ದರು. ಎನ್ಕೆ ಅವರನ್ನು ಯಾರೇ ಆಗಲಿ ಎಲ್ಲೇ ಆಗಲಿ ಭಾರತದ ಬಗ್ಗೆ ಪ್ರಾಚೀನ ಕಾವ್ಯಗಳ ಬಗ್ಗೆ ಪ್ರಶ್ನೆ ಕೇಳಿದರೆ ಸೂಕ್ತ ಉತ್ತರ ದೊರೆಯುತ್ತಿತ್ತು. ಸಮಸ್ಯೆ ಪರಿಹಾರವೂ ಆಗುತ್ತಿತ್ತು. ಮಾತ್ರವಲ್ಲ ಅವರನ್ನು ಮತ್ತಷ್ಟು ಅಭ್ಯಾಸದ ಕಡೆಗೆ ಪ್ರೋತ್ಸಾಹಿಸುತ್ತಿದ್ದರು.

ಒಟ್ಟಿನಲ್ಲಿ ಒಂದು ಹಿರಿಯ ಸಾಹಿತ್ಯಕ ಸಂಸ್ಥೆ ಮಾಡಬಹುದಾದ ಕೆಲಸವನ್ನು ಎನ್ಕೆ ಅವರು ಒಬ್ಬರೇ ನಿರ್ವಹಿಸುತ್ತಿದ್ದರು. ಅಂದು ನಮ್ಮೆಲ್ಲರಿಗೆ ಎನ್ಕೆ ಅವರೆಂದರೆ ತುಂಬು ಅಭಿಮಾನ. ಅವರ ಮನೆಯೊಂದು ಕಾವ್ಯ ಮಂಟಪ. ಇದು ಒಂದು ಮುಖವಾದರೆ, ಅವರ ಇನ್ನೊಂದು ಮುಖ ಅವರು ಧಾರವಾಡ ಸೇರಿ ಸದ್ದುಗದ್ದಲವಿಲ್ಲದೆ, ಕುಮಾರ ವ್ಯಾಸ ಭಾರತದ ಬಗ್ಗೆ ಸಾಕಷ್ಟು ಚಿಂತನೆ ನಡೆಸಿದುದು. ಅದರ ಫಲ ಅವರಿಂದ ಭಾರ ತದ ಬಗ್ಗೆ ನಾಲ್ಕಾರು ಒಳ್ಳೆಯ, ಚಿರಕಾಲ ಉಳಿಯುವಂತಹ ಪುಸ್ತಕಗಳು ಹೊರ ಬಂದಿದೆ. ಈ ಮಹಾಸಾಧನೆಗಾಗಿ ಎಲ್ಲ ಕನ್ನಡಿಗರೂ ಅವರನ್ನು ಅಭಿನಂದಿಸಬೇಕಾ ಗಿದೆ. ಇದು ಎನ್ಕೆ ಅವರು ಕವಿ ಕುಮಾರವ್ಯಾಸನನ್ನು ಕುರಿತು ನಿರಂತರವಾಗಿ ಮಾಡಿದ ತಪಸ್ಸಿನ ಫಲ ಎಂದು ನನ್ನ ಭಾವನೆ.

ಹುಬ್ಬಳ್ಳಿಗೆ ಹೋದಾಗಲೆಲ್ಲಾ, ಧಾರವಾಡದಲ್ಲಿ ಮಾಳಮಡ್ಡಿಯಲ್ಲಿದ್ದ ಕನ್ನಡದ ರಸಋಷಿ ಕವಿಭೂಷಣ ಬೆಟಗೇರಿ ಕೃಷ್ಣಶರ್ಮರ ಭೇಟಿ ಆಗಿ ಬರುವುದು ಹಿಂದಿನಿಂದ ಬೆಳೆಸಿಕೊಂಡು ಬಂದ ರೂಢಿ, ಆ ವೇಳೆಗೆ ಅವರ ಆರೋಗ್ಯ ಕೆಡಲು ಆರಂಭವಾಗಿತ್ತು. ಆದರೂ ಅವರಲ್ಲಿ ಕನ್ನಡ ಸಾಹಿತ್ಯ, ಸಂಶೋಧನೆ, ಪ್ರಾಚೀನ ಕಾವ್ಯಗಳ ಬಗ್ಗೆ ಏನಾ ದರೂ ನಾಲ್ಕು ಮಾತನಾಡಿ ಬರುವುದು ವಾಡಿಕೆ. ಒಮ್ಮೆ ಭಾರತದ ಬಗ್ಗೆ ಕವಿ

ಘೋಷಣರು ಮಾತನಾಡುತ್ತಾ, ನಮ್ಮ ಎನ್ಕೆ ಕುಮಾರವ್ಯಾಸನ ಬಗ್ಗೆ ಆಳವಾಗಿ ಅಭ್ಯಾಸ ಮಾಡಿದ್ದಾರೆ, ಆದರೆ ಅವರ ಸದುಪಯೋಗ ನಮ್ಮ ಜನಕ್ಕೆ ಬೇಡವಾಗಿದೆ, ಇದು ನಾಡಿನ ದೌರ್ಭಾಗ್ಯ--ಎಂದು ನೊಂದುಕೊಂಡರು.

ಎನ್ಕೆ ಅವರು ತುಂಬ ಸರಳ ಹಾಗೂ ನಿರಾಡಂಬರ ವ್ಯಕ್ತಿ. ಎಳೆಯ ಮಗುವಿನಂತಹ ಮನಸ್ಸು. ಇನ್ನು ಹಾಸ್ಯಸಾಹಿತ್ಯ, ಏಕಾಂಕ ಹಾಗೂ ರೇಡಿಯೋ ನಾಟಕಗಳಿಗೆ ಅವರ ಕೊಡುಗೆ ಅಪಾರ. ೧೯೮೨ರಲ್ಲಿ ರಾಜ್ಯ ಸಾಹಿತ್ಯ ಅಕಾದೆಮಿ ಇವರನ್ನು ಗೌರವಿಸುವುದರ ಮೂಲಕ ತನ್ನನ್ನು ತಾನು ಗೌರವಿಸಿಕೊಂಡಿದೆ ಎಂದು ಹೇಳಿದರೆ ತಪ್ಪಾಗದೆಂದು ನನ್ನ ಅನಿಸಿಕೆ. ಅವರು ಕುಮಾರವ್ಯಾಸನ ಬಗ್ಗೆ ಬರೆದ ಗ್ರಂಥಗಳು ಕೇಂದ್ರ ಸಾಹಿತ್ಯ ಅಕಾದೆಮಿಯ ಕಣ್ಣಿಗೆ ಇನ್ನೂ ಬೀಳಲಿಲ್ಲವೇಕೆ ? ಎನ್ನುವುದು ನಿಜಕ್ಕೂ ಆಶ್ಚರ್ಯವಾಗಿದೆ. ಈಗಲಾದರೂ ಕೇಂದ್ರ ಸಾಹಿತ್ಯ ಅಕಾದೆಮಿ ಇದರ ಬಗ್ಗೆ ಗಮನ ಹರಿಸಲೆಂದು ಆಶಿಸುತ್ತೇನೆ.

# ಅಂತಃಕರಣ ಜೀವಿ

## ಜಿ. ಎನ್. ಕುಂದರಗಿ

ನಾನು ಎನ್ಕೆಯವರನ್ನು ಸಾಹಿತಿಯಾಗಿ, ಹಾಸ್ಯಗಾರರಾಗಿ, ಅಂತಃಕರಣ ಜೀವಿಯಾಗಿ ಕಂಡಿದ್ದೇನೆ. ನಾನು ಹೈಸ್ಕೂಲಿನಲ್ಲಿದ್ದಾಗ ಅವರ 'ಸಾವಿನ ಉಡಿಯಲ್ಲಿ' ಓದಿದ್ದು ನೆನಪು. ಕರ್ನಾಟಕ ಕಾಲೇಜಿನಲ್ಲಿದ್ದಾಗ ತಮ್ಮ ಕಾದಂಬರಿಯೊಂದನ್ನು 'ವಿದ್ಯಾ' ನಾಟಕವನ್ನಾಗಿ ಪರಿವರ್ತಿಸುವುದರಲ್ಲಿ ತನ್ಮಯರಾಗಿದ್ದ ಅವರ ಚಿತ್ರ ನನ್ನ ಕಣ್ಣೆದುರು ಇದೆ. 'ಹಸ್ತಾಂತರ'ವು ಒಂದು ಸಾಮಾಜಿಕ ನಾಟಕ. 'ಪ್ರೀತಿ'ಯನ್ನು ಕುರಿತು ಅವರು ಬರೆದ ಒಂದು ಕವನವನ್ನು ಭಾಗವತರು ಧಾರವಾಡದ ಮಹೇಂದ್ರಕರ ಚಾಳಿನಲ್ಲಿ ಹಾಡಿ ತೋರಿಸಿದ್ದು ಇನ್ನೂ ನೆನಪಿದೆ. 'ಕುಮಾರವ್ಯಾಸ'ನನ್ನು ಕುರಿತು ಅವರು ಬರೆದ ಗ್ರಂಥ, 'ವಿ. ಕೃ. ಗೋಕಾಕ'ರನ್ನು ಕುರಿತು ಅವರು ಬರೆಯುತ್ತಿರುವ ಗ್ರಂಥ, 'ಕನ್ನಡ ಸಾಹಿತ್ಯ ವಾಹಿನಿ' ಅವರು ಸಾಹಿತ್ಯ ಚರಿತ್ರೆ ಮತ್ತು ವಿಮರ್ಶೆಗೆ ಕೊಟ್ಟಿರುವ ಕೊಡಲಿರುವ ಕಾಣಿಕೆ.

ವಿನೋದಿಗಳಾಗಿ, ಹಾಸ್ಯಗಾರರಾಗಿ ಎನ್ಕೆ ಕನ್ನಡ ನಾಡಿಗೆ ಸುಪರಿಚಿತ. 'ಸುಳಿವು ಹೊಳವು'ನಲ್ಲಿ 'ಜೋಗ ಪ್ರವಾಸ'ವೆಂಬ ಎನ್ಕೆಯವರ ಪ್ರಬಂಧವಿದೆ. ಸಾಹಿತಿಗಳೆಲ್ಲ ಬೆಳಗಿನ ಐದು ಗಂಟೆಗೆ ಪ್ರವಾಸಕ್ಕೆ ಹೊರಟಿದ್ದಾರೆ. ದಾರಿಯಲ್ಲಿ ಚಹ–ಇಡ್ಲಿಯ ಸೇವನೆಯಾಗುತ್ತದೆ. ಮುದ್ದಣನ 'ನೀರಿಳಿಯದ ಗಂಟಲೊಳ್ ಕಡುಬಂ ತುರುಕಿದಂತಾಯ್ತು' ಎಂಬ ಮಾತನ್ನು ಅವರು 'ಚಹವಿಳಿಯದ ಗಂಟಲೊಳ್ ಇಡ್ಲಿಯಂ ತುರುಕಿದಂತಾಯ್ತು' ಎಂದು ಹೇಳುತ್ತಾರೆ. 'ಮುಂಗಾಲ್‌ಪುಟಿಗೆ' ಎಂಬ ಅವರ ಹರಟೆಯ ಸಂಗ್ರಹದಲ್ಲಿ shaving ಕುರಿತು ಬರುವ ಪ್ರಬಂಧದಲ್ಲಿ: 'Hamlet ನಿಗೆ To be or not to be ಎಂಬ ಸಮಸ್ಯೆ. ನನಗೆ To shave or not to shave ಎಂಬ ಸಮಸ್ಯೆ' ಎಂದು ಹೇಳುತ್ತಾರೆ. ಇತ್ತೀಚೆಗೆ ಗೋವಾ ಕನ್ನಡ ಸಂಘ, ಮಡಗಾಂವದವರು ಪ್ರಕಾಶಕ್ಕೆ ತಂದ 'ಹೋಪತಿ' ಸಂಸ್ಮರಣ ಸಂಚಿಕೆಗೆ ಅವರು ಕಳಿಸಿದ 'ಶ್ರೀಸಾಮಾನ್ಯನ ಫಸ್ಟ್ ಕ್ಲಾಸ್ ಪ್ರಯಾಣ' ಎಂಬ ಲೇಖನ ನಗೆಯ ಕಾರಂಜಿಯನ್ನು ಪುಟಿಸುವುದರ ಜೊತೆಗೆ ವಿಚಾರಪರರನ್ನಾಗಿಯೂ ನಮ್ಮನ್ನು ಮಾಡುತ್ತದೆ. ತಮ್ಮ ಬಾಳಿನಲ್ಲಿ ಅನುಭವಿಸಿದ ಕಹಿಯನ್ನು, ಅವರು ನಗೆಯಲ್ಲಿ ತೇಲಿಸಿಕೊಂಡು ಇತರರಿಗೆ ಆದರ್ಶಪ್ರಾಯರಾಗಿದ್ದಾರೆ.

ಎನ್ನೆ ಪ್ರಮುಖವಾಗಿ ಅಂತಃಕರಣಜೀವಿಗಳು. ಅವರ ಮುಖ, ಮಾತು, ಪ್ರೀತಿ ಅಂತಃಕರಣಗಳನ್ನೇ ಸೂಚಿಸುತ್ತವೆ. ಅವರ ಮನೆಗೆ ಹೋದಾಗ ಅವರ ಮಕ್ಕಳನ್ನು, ಸೊಸೆಯುಂದಿರನ್ನು ಅವರು ಪರಿಚಯ ಮಾಡಿಕೊಡುವ ರೀತಿ, ಚಹಾಪಾನ, ಊಟಗಳಲ್ಲಿ ಅವರ ಸೌಜನ್ಯದ ಅಂತಃಕರಣ ಉಕ್ಕೇರುತ್ತದೆ. ಮಡಗಾಂವ, ಗೋವೆಗೆ ಅವರು ಒಂದೆರಡು ಸಲ ಬಂದಾಗ ನಾವಿತ್ತ ಅಲ್ಪ ಆತಿಥ್ಯವನ್ನು ಕುರಿತು "ಕುಂದರಗಿ, ನಮ್ಮ ಮಕ್ಕಳೂ ಮಾಡಲಾರದಷ್ಟು ನೀವು ಮಾಡಿದ್ದೀರಿ" ಎಂದು ಹೇಳಿದಾಗ ನಮ್ಮ ಕಣ್ಣು ತುಂಬಿಬಂದಿದ್ದವು.

# ಮನ್ನಣೆಗೆ ಪಾತ್ರ

## ಶಾಮರಾಯ ರೋಹಿಡೇಕರ

ಕೊಲ್ಹಾಪುರದ ರಾಜಾರಾಮ ಕಾಲೇಜಿನಲ್ಲಿ ನಾನು ಬಿ.ಎ. ಕ್ಲಾಸಿನ ಇಂಗ್ಲಿಷ್ ಆನರ್ಸ್ ವಿದ್ಯಾರ್ಥಿಯಾಗಿದ್ದಾಗಲೇ (೧೯೩೬-೩೭) ಎನ್ಕೆ ತಮ್ಮ ಹಾಸ್ಯದ ಹೊನಲಿನ ಏಕಾಂಕಗಳಿಂದ ಉದಯೋನ್ಮುಖಿ ಗಣ್ಯ ನಾಟಕಕಾರರಾಗಿದ್ದರು; 'ಎನ್ಕೆ ಏಕಾಂಕ' ಎಂಬ ಕಿರುಹೊತ್ತಿಗೆ ಪ್ರಕಟವಾಗಿತ್ತು. ೧೯೩೭ರಲ್ಲಿ ಇಂಗ್ಲಿಷ್ ಆನರ್ಸ್ ಪದವಿ ಪಡೆದು ಅದೇ ರಾಜಾರಾಮ ಕಾಲೇಜಿನಲ್ಲಿ ನಾನು ಟ್ಯೂಟರ್ ಎಂದು ನೇಮಕಗೊಂಡೆ. ಪ್ರೊ. ಕೆ. ಜಿ. ಕುಂದಣಗಾರರ ಅಧ್ಯಕ್ಷತೆಯಲ್ಲಿ ನಮ್ಮ ಕರ್ನಾಟಕ ಸಂಘ ಕನ್ನಡದ ಏಳ್ಗೆಗಾಗಿ ದುಡಿಯುತ್ತಿತ್ತು. ನಾನು ಅದರ ಉಪಾಧ್ಯಕ್ಷನಾಗಿದ್ದೆ. ಆ ವರುಷ ಕಾಲೇಜಿನ ವಾರ್ಷಿಕೋತ್ಸವದಲ್ಲಿ ನಮ್ಮ ಸಂಘವು ಎನ್ಕೆ ಅವರ 'ಇಲೆಕ್ಶನ್' ಎಂಬ ಏಕಾಂಕ ನಾಟಕವನ್ನಾಡಲು ಆರಿಸಿತು. ಅದರಲ್ಲಿ ನಾಯಕನ ಪಾತ್ರವಹಿಸುವದು ನನ್ನ ಪಾಲಿಗೆ ಬಂತು. ಅತ್ಯುತ್ತಮ ನಟನೆಂದು ನನಗೆ ಬೆಳ್ಳಿಯ ಪದಕ ಸಿಕ್ಕಿತು. ಇದಕ್ಕಿಂತಲೂ ಹೆಚ್ಚಾಗಿ, ಮರಾಠೀ ಮಾತಾಡುವ ಪ್ರೇಕ್ಷಕರು ಕೂಡ ನಾಟಕವನ್ನು ನೋಡಿ ಮೆಚ್ಚಿ ಹೊಗಳಿದರು. ಆಗ ನನಗೆ ಎನ್ಕೆ ಅವರ ಮೊದಲ ಪರಿಚಯವಾದುದು. ಅಂದಿನಿಂದ ಇಂದಿನ ವರೆಗೆ ನಮ್ಮ ಸ್ನೇಹದ ಬಾಂಧವ್ಯ ಗಾಢವಾಗಿ ಬೆಳೆದು ಬಂದಿದೆ.

ಎನ್ಕೆ ಅವರು ಸ್ವಭಾವತಃ ರಸಿಕರು, ಸಹೃದಯಿಗಳು ಮತ್ತು ನಂಬಿಕೆಯ ಉತ್ತೇಜಕ ಆಪ್ತ ಮಿತ್ರರು. ಅವರು ಬೊಂಬಾಯಿಯ ಆಕಾಶವಾಣಿಯಲ್ಲಿ ಕೆಲಸ ಮಾಡುತ್ತಿದ್ದಾಗ, ನಾನು ಕಾಂದಿವಲಿಯಲ್ಲಿಯ ಶಾರೀರಿಕ ಶಿಕ್ಷಣ ತರಬೇತಿಗೆ ಹೋಗಿದ್ದೆ (೧೯೫೦-೫೧).ಎನ್ಕೆ ಅವರು ನನ್ನನ್ನು ಹಿಡಿದು ಆಕಾಶವಾಣಿಯಲ್ಲಿ ಒಂದು ಚಿಕ್ಕ ಪ್ರಹಸನವನ್ನೇ ಆಡಿಸಿದರು. ಆಗ ಅವರ ಸಾಹಿತ್ಯಿಕ ಶಕ್ತಿ ಪಕ್ವತೆಯನ್ನು ಪಡೆದಿತ್ತು. ಕವಿ, ನಾಟಕಕಾರ, ಕಾದಂಬರಿಕಾರ, ಕತೆಗಾರ ಮತ್ತು ವಿಮರ್ಶಕ ಎಂಬ ವಿವಿಧ ಮುಖಗಳಲ್ಲಿ ಅವರ ಕೃಷಿ ಸಾಗಿತ್ತು.

ನಂತರದ ೧೨ ವರ್ಷಗಳಲ್ಲಿ ನಮ್ಮ ಕಾರ್ಯದ ಕ್ಷೇತ್ರ ದೂರವಿದ್ದುದರಿಂದ, ನಮ್ಮ ನಿಕಟ ಸಂಬಂಧ ಕಡಿಮೆಯಾಗಿತ್ತು. ಆದರೆ ನಾನು ಡೆಪ್ಯುಟಿ ಡಿ.ಪಿ.ಆಯ್. ಆಗಿ ಬೆಂಗಳೂರಿಗೆ ಬಂದ ಕೂಡಲೇ (೧೯೬೩), ಮತ್ತೆ ನಮ್ಮ ಗೆಳೆತನ ಕುದುರಿ ಹೆಚ್ಚು

ಆತ್ಮೀಯವಾಯಿತು. ಒಂದು ವರ್ಷದೊಳಗಾಗಿಯೇ, ತಾವಿರುವ ಅಟ್ಟದ ಮನೆಯ ಕೆಳಗಿನ ಮನೆಗೇ ನಾನು ಬಂದು ಇರುವಂತೆ ಮಾಡಲು ತಮ್ಮ ಮುತುವರ್ಜಿ ವಹಿಸಿ ಯಶಸ್ವಿಯಾದರು. ಅಲ್ಲಿಂದ ಮುಂದೆ ನಮ್ಮ ಅವರ ಮನೆಯವರೆಲ್ಲ ಒಂದೇ ಕುಟುಂಬ ವೆಂಬಂತೆ ಇರತೊಡಗಿದೆವು.

ಮಾತಿನಲ್ಲಿ, ನಡೆಯಲ್ಲಿ, ಎನ್ಕೆ ಅವರದೊಂದು ವಿಶೇಷ ಮೋಡಿ. ಅವರ ನಗೆ ನುಡಿ ನಂದನವನದ ಪರಿಮಳಪೂರಿತ. ಯಾರ ಮನಸ್ಸನ್ನೂ ಎಂದೂ ನೋಯಿಸದೆ, ಕಂಪು ಸೂಸುವ ಮಂಜುಳ ಪುಷ್ಪದಂತೆ. ನೋವವರಲ್ಲಿ ಆತ್ಮೀಯ ಅನುಕಂಪ. 'ನೋವವರೊಳನುತಾಪವೇ ಕಾವ್ಯಕೆ ಮೊದಲ ಮಂಡನ' ಎಂಬುದು 'ಆದಿಕವಿ ವಾಲ್ಮೀಕಿ' ಎಂಬ ಕವನದಲ್ಲಿದ್ದ ಮಾಸ್ತಿಯವರ ಮಾತು. ಅದೇ ಎನ್ಕೆ ಅವರ ಬದುಕಿನ, ಸಾಹಿತ್ಯದ, ಹಾಸ್ಯ ಚಟಾಕಿಯ ಸೆಲೆ. ರೇಡಿಯೊ ನಾಟಕಗಳು, ಸರಸ ಸುಲಲಿತ ಕವನ ಗಳು, ಮಾಸಪತ್ರಿಕೆಗಳಲ್ಲಿ ಪ್ರಕಟವಾದ ನಗೆಬರಹಗಳು, ಗಂಭೀರವಾದ ವಿಮರ್ಶಾ ಗ್ರಂಥಗಳು, ಇತರ ಲೇಖನಗಳು ಹೀಗೆ ಬಹುಮುಖವಾಗಿ ಸಾಹಿತ್ಯ ದೇವಿಯ ಅಡಿಯಲ್ಲಿ ತಮ್ಮ ಸೇವಾ ಪುಷ್ಪಗಳನ್ನು ಸಲ್ಲಿಸಿದ್ದಾರೆ–ಸಲ್ಲಿಸುತ್ತಿದ್ದಾರೆ; ಓದುಗರ ಹೃದಯವನ್ನು ಸೂರೆಗೊಂಡಿದ್ದಾರೆ; ಅವರ ಮನ್ನಣೆಗೆ ಪಾತ್ರರಾಗಿದ್ದಾರೆ. ಸಾರ್ವಜನಿಕವಾಗಿ ಸಾಹಿತ್ಯಿಕ ಕ್ಷೇತ್ರದಲ್ಲಿ ಅವರಿಗೆ ಈಗಾಗಲೇ ಮನ್ನಣೆ ಸಿಕ್ಕಿದೆ; ಇನ್ನೂ ಹೆಚ್ಚಿನ ಮನ್ನಣೆಗೆ ಅವರು ಪಾತ್ರರು.

# ತಂಗಿ ಒನ್ಕೆ ಅಣ್ಣ ಎನ್ಕೆ

ಗೀತಾ ಕುಲಕರ್ಣಿ

ಹಿಂದಿನ ನೆನಪಿನ ಪುಟಗಳನ್ನು ತೆರೆಯುತ್ತಿದ್ದೇನೆ. ಹೌದು, ಇದು ನನ್ನ ಸ್ಕೂಲು ದಿನಗಳ ಸ್ವಪ್ನಲೋಕ! ಯುಕ್ತ, ಯುಕ್ತಿಗಿಂತ ನೆನಪು ಹೊತ್ತು ಕುಣಿವ ರಸನಿಮಿಷಗಳು. ಸ್ಪೋರ್ಟ್ಸ್, ಸ್ಕೂಲ್‌ಡೇಯಲ್ಲಿ ರಂಗಸ್ಥಳವನ್ನು ಧೂಳೆಬ್ಬಿಸುವ ಹುಮ್ಮಸ್ಸು. ಡಾನ್ಸ್, ಭಾವಗೀತೆ, ಟ್ಯಾಬ್ಲೊ– ಹೀಗೆ ಸಾಗಿದ್ದೂ ನಾಟಕಕ್ಕೆ ನಿಲ್ಲುತ್ತವೆ ನಮ್ಮ ಯೋಜನೆ. ಬೆಂಗಳೂರು, ಮಂಗಳೂರು ಭಾಷೆಯ ನಾಟಕ ಆಡುತ್ತಿದ್ದ ನಮ್ಮೆದುರು ಒಂದು ವಿಚಿತ್ರ ಭಾಷೆ– ಅದರದು ಕನ್ನಡ! ಮಾಡಿಯೇ ಬಿಡುವ ಛಲ ನಮ್ಮದಾಯಿತು. ಕೈಗೆ ಸಿಕ್ಕ ಪುಸ್ತಕ 'ನಡುಮನೆಯಲ್ಲಿ', ನಾಟಕಕಾರ ಎನ್ಕೆ ಕುಲಕರ್ಣಿ. ಅಂತೂ ರಂಗ ತಾಲೀಮು ಪ್ರಾರಂಭವಾಯಿತು. ಪ್ರತಿ ಶಬ್ದಕ್ಕೂ ತಲೆ ಕೆರೆದುಕೊಂಡದ್ದೇ ಬಂತು. ಅರ್ಥವಾಗದಿದ್ದರೂ ನಾಟಕದ ವಾಕ್ಯಗಳು ಬಾಯಿಪಾಠವಾಯಿತು. ಮಂಗಳೂರು ಕನ್ನಡ ಸುಂದರ ಕನ್ನಡವೆಂದು ಒಂದು ಕಿವಿಯಲ್ಲಿ ಕೇಳಿದರೆ, ಬೆಂಗಳೂರು ಕನ್ನಡ ಇಂಗ್ಲೀಷುಮಯ ಎಂದು ಇನ್ನೊಂದು ಕಿವಿ ತುರಿಸಿಕೊಳ್ಳುವಾಗ ಈ ಗಂಡು ಮೆಟ್ಟಿನ ಕನ್ನಡದಲ್ಲಿ ಪ್ರತಿ ಶಬ್ದದಲ್ಲೂ ನುಸುಳಿ ಬರುತ್ತಿರುವ ಎಸ್ಸು*ಗಳ ಹಾವಳಿಗೆ ನಾವು ಕಕ್ಕಾಬಿಕ್ಕಿಯಾಗಿದ್ದೆವು. ನೀರಿಗಿಳಿದು ಆಗಿತ್ತು. ಈಜಿ ತೋರಿಸಬೇಕು– ಸರಿ ನಮ್ಮ ನಾಟಕದ ದಿನ ಬಂತು.

ತಮ್ಮ ಮಕ್ಕಳ ಬಾಲಲೀಲೆಗಳನ್ನು ಕಾಣಲು ಚಾತಕ ಪಕ್ಷಿಗಳಂತೆ ಕಾದು ಕುಳಿತ ಪ್ರೇಕ್ಷಕ ವೃಂದ. ಹೆತ್ತವರೆದುರು ತಮ್ಮ ಪೌರುಷದ ಪ್ರದರ್ಶನ ತೋರಿಸಿ, ಶಾಭಾಶ್ ಎನಿಸಿಕೊಳ್ಳುವ ನಾವುಗಳು! ಅಂತೂ ಒಂದಾದ ನಂತರ ಒಂದರ ಪ್ರೋಗ್ರಾಮು ನಡೆಯಿತು. ಕೊನೆಯದು ನಾಟಕ!

'ನಡುಮನೆ' ನಮ್ಮ ಬಾಯಲ್ಲಿ ಹಾಂಗ್, ಹಿಂಗ್ ಮೇಲು ಕೆಳಗೆ ಸರಿದಾಡಿ ಕೊನೆಗೆ ಮುಗಿಸಿದ ಬುಸ್ಸುಗುಟ್ಟುತ್ತ ನಾಲಿಗೆ ಬಾಯೊಳಗೆಲ್ಲ ಅಡ್ಡಾತಿಡ್ಡ ಓಡಾಡಿ ನಡುಮನೆ ತುಂಬಾ ತಿರುಗಿದೆವು. ಏ ನೋಕೂs... ಇಲ್ಲಿ ಬಾರೆs ತಂಗಿ... ಹೋಗs

* ನಾವು ನಾಟಕದಲ್ಲಿ ಬರುವ ಅವಗ್ರಹಚಿಹ್ನೆ s ನ್ನು ಎಳೆದು ಮಾತಾಡದೆ S ಎಂದೇ ಇಂಗ್ಲೀಷ್ ಶಬ್ದದಲ್ಲೇ ಉಚ್ಚರಿಸುತ್ತಿದ್ದೆವು.

ನಮ್ಮಪ್ಪ... ಹಿಂಗ ಅವ್ರ ಹೆಂಗ ಮಾಡ್ಲಿs..." ಮಧ್ಯೆ ಮಧ್ಯೆ ಹಾಸ್ಯದ ಹೊಳೆ... ಈ 's'ಗಳ ಹಾವಳಿ ತಿಳಿಯದಿದ್ದ ಪ್ರೇಕ್ಷಕ ವೃಂದ, ನಟಿಸುವ ನಾವೂ ಎಸ್ಸುಗಳು ಏನೆಂದು ತಿಳಿಯದೆ ಎದುರು– ಕುಳಿತವರೂ ನಕ್ಕದ್ದೂ, ಕುಣಿಯುತ್ತಿದ್ದ ನಾವೂ ನಕ್ಕದ್ದೇ ನಕ್ಕದ್ದೂ. ಹೀಗೆ ನಮ್ಮನ್ನು ಫಜೀತಿ ಮಾಡಿದ್ದ ನಾಟಕಕಾರ ಎನ್ಕೆಯವರ ಹಾಸ್ಯ ನನ್ನ ನೆನಪಿನಾಳದಲ್ಲಿ ಅಚ್ಚೊತ್ತಿ ನಿಂತದ್ದು.

ಮುಂದೆ ಎರಡೇ ವರ್ಷಕ್ಕೆ ನಾನು ಧಾರವಾಡಕ್ಕೆ ಗೃಹಿಣಿಯಾಗಿ ಬಂದಿದ್ದರೂ ಭಾವ ಕಾರಂತರು ನನ್ನ ಹಿಂದುಸ್ಥಾನಿ ಸಂಗೀತ, ಸಾಹಿತ್ಯದ ಹುಚ್ಚಿಗೆ ಧಾರವಾಡ ಸರಿಯಾದ ಸ್ಥಳ ಎಂದುದರಿಂದ ನನ್ನ ಮನಸ್ಸು ವಿದ್ಯಾರ್ಥಿಯ ಹುಚ್ಚಿನಲ್ಲೇ ಕಾಲಿರಿಸಿದ್ದು.

ಶ್ರೀ ಕುಲಕರ್ಣಿಯವರಿಗೆ ಧಾರವಾಡದಲ್ಲಿ ಬಂಧು-ಬಳಗದ ನೆರವು, ತಂದೆ– ತಾಯಿ ಇಲ್ಲದ್ದರಿಂದ ಆ ಪ್ರೀತಿಗೂ ಎರವಾಗಿದ್ದರೂ ಅವರ ಸ್ನೇಹಿತರ ದೊಡ್ಡ ಪರಿವಾರ ಕಂಡು ನಾನು ದಿಕ್ಕು ತಪ್ಪಿದಂತಾಗಿದ್ದೆ. ಅದರಲ್ಲಿ ವರಕವಿ ಬೇಂದ್ರೆ, ಕವಿಭೂಷಣ ಬೆಟಗೇರಿ ಕೃಷ್ಣಶರ್ಮ, ಸಿದ್ಧವ್ವನಹಳ್ಳಿ ಕೃಷ್ಣಶರ್ಮ, ವಿ. ಕೃ. ಗೋಕಾಕ ಸಾಹಿತ್ಯರತ್ನಗಳಾಗಿದ್ದರೆ, ಸಂಗೀತ ಸರಸ್ವತಿಯ ಕಂಠಾಭರಣದಂತಿದ್ದ ಮಲ್ಲಿಕಾರ್ಜುನ ಮನ್ಸೂರ್, ಗಂಗೂಬಾಯಿ ಹಾನಗಲ್, ಹಣಮಂತರಾವ್ ವಾಳವೇಕರ್ ಬಂಧುಗಳಿಗೂ ಮಿಗಿಲಾಗಿ ನನ್ನವರೆನಿಸಿದ್ದು. ಹೀಗಾಗಿ ರೋಗಿ ಬಯಸಿದ್ದು ಹಾಲು, ವೈದ್ಯ ಕೊಟ್ಟದ್ದೂ ಹಾಲು ಎನ್ನುವಂತಾಯಿತು ನನ್ನ ಸ್ಥಿತಿ.

ಚಿಕ್ಕಂದಿನಲ್ಲಿ ಅಪ್ಪನ್ನ ಕಳೆದುಕೊಂಡು ಬುದ್ಧಿ ತಿಳಿಯುವಾಗ ಅಪ್ಪನೂ ಇಲ್ಲವಾಗಿ, ತೀರ ಚಿಕ್ಕವಳಿರುವಾಗ್ಲೇ ಗೃಹಿಣಿಪಟ್ಟ ನನ್ನದಾಗಿ ಓದು ಅರ್ಧಕ್ಕೇ ನಿಂತಿತ್ತು. ಧಾರವಾಡದಲ್ಲಿ ಸಂಗೀತ, ಸಾಹಿತ್ಯದ ಜೊತೆಯಲ್ಲಿ ಇನ್ನಷ್ಟು ಇಂಗ್ಲೀಷೂ ಸಿಕ್ಕಿದ್ದರೆ! ಎಂದು ರಾಗ ಎಳೆದಿದ್ದೆ. "ಸರಿ ನಾಳೆ ನನ್ನ ಗೆಳೆಯ ಎನ್ಕೆನ್ನ ಕರ್ಕೊಂಡು ಬರ್ತೇನೆ" ಎಂದರು ಕುಲಕರ್ಣಿಯವರು.

ಎನ್ಕೆ! ತಟ್ಟನೆ ನೆನಪಿನ ಸುಳಿಯಲ್ಲಿ ಮುಖವೊಂದು ಹೊರಬಂತು. 'ನಡುಮನೆ'ಯ ನಾಟಕದ ಎನ್ಕೆ ಹಾಸ್ಯ ನೆನಪಾಗಿ ನಗು ಗೊಳ್ಳೆಂದು ಹೊರಬಂತು.

ಆ ದಿನ ದಾರಿಯಲ್ಲಿ ಕಣ್ಣಿಟ್ಟು ನೋಡುತ್ತಿದ್ದೆ. ಗೇಟು ತೆರೆದು ಒಳಗೆ ಬರುತ್ತಿದ್ದರು ಎನ್ಕೆ. ತಲೆಗೆ ಕಪ್ಪು ಟೋಪಿ, ಮೈಮುಚ್ಚಿದ ಕೋಟು, ಸೈಕಲ್ ಕಚ್ಚೆ (ಧೋತಿ), ಹದನಾದ ಎತ್ತರ, ಸಪೂರ ಮೈಕಟ್ಟು, ಅಂದವಾದ ಮುಖದಲ್ಲಿ ಗಿಣಿಮೂಗು ಎದ್ದು ಕಂಡಾಗ ಹಾಸ್ಯ ಕಣ್ಣಲ್ಲಿ ಹೊರಚೆಲ್ಲಿತ್ತು.

ಹೀಗೆ ಎನ್ಕೆ ನನಗೆ ಇಂಗ್ಲೀಷ್ ಕಲಿಸುವ ಗುರುವಾಗಿ ದೊರೆತದ್ದು. ಅದೂ ಪುಕ್ಕಟೆ ಮಾಸ್ತ್ರು. ಫೀಜು ಇಲ್ಲದೆ ನಾನೇ ಪಾಠ ಮುಗಿದ ಕ್ಷಣ, ತಿಂಡಿ, ಕಾಫಿ ಕೊಟ್ಟು ಅವರಲ್ಲಿ ನಾಟಕ, ಕಾದಂಬರಿಯ ಬಗ್ಗೆ ಚರ್ಚೆ ಮಾಡಿ, ಅವರ ಮಾತು ಮಾತಿನಲ್ಲಿಯ ಹಾಸ್ಯ, ಚುರುಕು ಸಂಭಾಷಣೆ, ನನ್ನ ಜೀವನದಲ್ಲಿ ಹೊಸ ಹೊಸ ವಿಚಾರಕ್ಕೆ ಪ್ರಚೋದನೆ ಕೊಟ್ಟಿತ್ತು.

ಆ ಸಮಯದಲ್ಲಿ ವಿ. ಕೃ. ಗೋಕಾಕ ಅವರು ಡಿ. ಇ. ಸೊಸೈಟಿಗೆ ರಾಜೀನಾಮೆ ಕೊಟ್ಟು ಧಾರವಾಡದಲ್ಲೇ ಇರುತ್ತಿದ್ದರು. ಸಂಜೆ ಸಾಧನ ಪ್ರೆಸ್ಸಿನ ಮಾಳಿಗೆಯಲ್ಲಿ ಗೋಕಾಕ, ಎನ್ಕೆ, ವಿ. ಎಮ್. ಇನಾಮದಾರ್, ಮಾಳವಾಡ, ದ. ಬಾ. ಕುಲಕರ್ಣಿ ಕೀರ್ತಿನಾಥ ಕುರ್ತಕೋಟಿ ಇನ್ನೂ ಕೆಲವರು ಸೇರಿ ಸಾಹಿತ್ಯಚರ್ಚೆ... ಒಮ್ಮೊಮ್ಮೆ ಇಸ್ಪೀಟೂ ಆಡುತ್ತಿದ್ದರು. ಮನೆಯೂ ಪಕ್ಕದ ವಿಂಗಿನಲ್ಲೇ ಇರುತ್ತಿದ್ದುದರಿಂದ ನಾನೂ ಒಮ್ಮೊಮ್ಮೆ ನನ್ನ ಇಂಗ್ಲೀಷ್ ಪಾಠ ಮುಗಿಸಿ ಕೆಲವು ನಿಮಿಷ ಅಲ್ಲಿ ಕೂತು ಸಾಹಿತ್ಯಚರ್ಚೆಯನ್ನು ಕೇಳುತ್ತಿದ್ದೆ.

ಒಂದು ದಿನ ನಾಟಕದ ವಿಷಯ ಬಂದಾಗ ಎನ್ಕೆಯವರಿಗೆ ಚಿಕ್ಕಂದಿನಿಂದಲೂ ನಾಟಕದ ಗೀಳು ಇದ್ದದ್ದೂ, ಮನೆಯ ಹಿರಿಯರಿಗೆ ಗೊತ್ತಾಗದಂತೆ ಪರದೆ ಎಳೆಯಲು ಸಹಾಯಕ್ಕೆ ನಿಂತು ನಾಟಕ ನೋಡುತ್ತಿದ್ದದ್ದೂ ಒಂದಿಷ್ಟು ನಾಟಕದ ಹಾಡಿನಲ್ಲೂ ಹುಚ್ಚು ಇತ್ತೆಂದೂ ಕೇಳಿದ್ದೆ.

ಇಂಗ್ಲೀಷ್ ಪಾಠದಿಂದಾಗ ಎನ್ಕೆ ನನಗೆ ಕೇವಲ ಗುರುವಾಗಿ ಉಳಿದಿರಲಿಲ್ಲ. ಅಣ್ಣ ದ. ಬಾ. ನಂತೆ ಸೋದರ ವಾತ್ಸಲ್ಯದಲ್ಲಿ ನನ್ನ ಮಾತನ್ನು ಅವರೆಂದೂ ಮೀರುತ್ತಿರಲಿಲ್ಲ.

ಒಂದು ಸಂಜೆ ಸಾಹಿತ್ಯದ ಚರ್ಚೆ ಮುಗಿದಾಗ ಎನ್ಕೆಯವರಿಗೆ ಹೇಳಿದೆ, "ನೀವು ಒಂದು ಹಾಡು ಹಾಡಲೇಬೇಕು. ಇವೊತ್ತು ಹಾಡದೆ ನಿಮ್ಮನ್ನು ಬಿಡೋದಿಲ್ಲ," ಎಂದೆ. ಎನ್ಕೆಯವರಿಗೆ ಬಂತು ಫಜೀತಿ. ಗೀತಾ ಹಟ ಮಾಡುತ್ತಿದ್ದಾಳೆ, ಇವಳು ಇನ್ನು ಬಿಡೋದಿಲ್ಲ. ಆದರೆ ಎನ್ಕೆ ನಾಚಿಕೆಯಲ್ಲಿ ಮುದುಡಿಬಿಟ್ಟರು. "ಈಗ ನಾನು ಬಾತ್‌ರೂಮು ಸಿಂಗರಮ್ಮಾ... ಇವರೆಲ್ಲರ ಎದುರು ಧನಿ ತೆಗೆದರೆ ಳರ ಬೆಳಗ್ಗಿನಲ್ಲಿ ನೀರಲ್ಲಿ ಮುಳುಗಿ ಕೂತ ನಡುಗು ಧ್ವನಿಗೆ ಬರುತ್ತದೆ. ಬೇಡ... ಗೀತಮ್ಮ ಈ ಅಣ್ಣನ ಸತ್ವ ಪರೀಕ್ಷೆ ಮಾಡಬೇಡಾ" ಎಂದರು. ಅಲ್ಲಿದ್ದವರೂ "ಪಾಪ, ಬಿಟ್ಟು ಬಿಡು. ಯಾಕೆ ಎನ್ಕೆನ್ನ ಗೋಳು ಹೊಯ್ದುಕೊಳ್ಳುತ್ತೀ?" ಎಂದರು. ನಾನು ಕೇಳಬೇಕಲ್ಲ? ಊಹೂಂ... ಎಂದೆ. "ಆಯ್ತಪ್ಪಾ ಹಾಡ್ತೇನೆ. ನನ್ನ ಮಾರಿ ನೋಡ್ಬೇಡಿ... ಎರಡು ಲೈನು ಹಾಡ್ತೇನೆ" ಎಂದು ಶರಣಾಗತರಾದರು.

ನನಗೆ ಥಟ್ಟನೆ ಒಂದು ಯೋಚನೆ ಬಂತು. ಎನ್ಕೆಯವರನ್ನು ಈಚೆಗೆ ಕರೆದೆ, ಗೋಡೆಗೊರಗಿಸಿ ಇರಿಸಿದ್ದ ಉಡನ್ ಪಾರ್ಟೀಷನ್ ಎಳೆದು ನಡುವೆ ಇಟ್ಟೆ. ಪಾರ್ಟೀಷನ್ ಆಚೆ ಎನ್ಕೆ! ಈಚೆ ಖ್ಯಾತ ಸಾಹಿತಿಗಳು! ನಡುವೆ ಹಟಮಾರಿ ಹುಡುಗಿ ನಾನು! ಎನ್ಕೆ ಹಾಡಿದರೊ... ಅತ್ತರೋ ನಡುಮಧ್ಯೆ ಸಂಗೀತದಂತಿತ್ತು, ಅಂದಿನ ಹಾಡು! ಅಣ್ಣ ಎನ್ಕೆ ಈಗಲೂ ಹೇಳ್ತಾರೆ "ಅಂತೂ ನನ್ನ ಹಟಮಾರಿ ತಂಗಿ, ನೀನು ಆಗ ಹಾಡಿಸಿದೆಯಲ್ಲಮ್ಮ... ಈಗಲೂ ನೆನಪಾದ್ರೆ ಆಗ ಹೆದರಿ ಮೈಗಂಟಿಕೊಂಡ ಬೆವರಿನ ಅಭಿಷೇಕದಲ್ಲಿದ್ದ ನನ್ನ ಬನೀಯನ್! ಮೈಕೊರೆಯುವ ತಣ್ಣೀರಲ್ಲಿ ಕೂತು ಹಾಡಿದ

ಗಮಕದ ಧನಿಯ ಸಂಗೀತ... ಆ ನೆನಪು ಇನ್ನೂ ಹಸಿಹಸಿಯಾಗಿ ಉಳಿದಿದೆ" ಎಂದು ತಮ್ಮ ತಲೆ-ಎದೆ ಮುಟ್ಟಿ ತೋರಿಸುತ್ತಾರೆ.

ಇಷ್ಟೆಲ್ಲ ಆದ ಮೇಲೆ ನಾನು ಗುರುದಕ್ಷಿಣೆಯೆಂದು ಕೊಟ್ಟದ್ದೂ ಏನು ಗೊತ್ತೇ ?

ಅದೊಂದು ಸಮ್ಮತ್ತಿನ ಪ್ರಸಂಗ. ವರಕವಿ ಬೇಂದ್ರೆಯವರ ಐವತ್ತನೆಯ ಹುಟ್ಟು ಹಬ್ಬ. ಅದರಲ್ಲೊಂದು ಉಪಕಾರ್ಯಕ್ರಮ. ಆ ಕಾರ್ಯಕ್ರಮದ ಒಂದು ಲೇಖನ 'ಜಯಂತಿ' ಮಾಸಪತ್ರಿಕೆಯಲ್ಲಿ ಆಲಂಕಾರಿಕ ಭಾಷೆಯಲ್ಲಿ ಎನ್ಕೆ ಬರೆದಿದ್ದರು. 'ಮಂಟಪ ತಳಿರು, ತೋರಣಗಳಿಂದ... ಸರಸ್ವತಿಯರಂತೆ ಮಹಿಳೆಯರೆಲ್ಲ ಗುಂಪಾಗಿ ಕುಳಿತಿದ್ದರು...' ಇತ್ಯಾದಿ ಇತ್ಯಾದಿ... ಲೇಖನ ಓದಿದ ನನಗೆ ಎನ್ಕೆಯವರನ್ನು ಛೇಡಿಸುವ ಮನಸ್ಸಾಯಿತು. ನಾನು 'ಜಯಂತಿ'ಯಲ್ಲಿ ಒಂದು ಲೇಖನ ಬರೆದೆ. ನನ್ನ ತವರಿನ ಹೆಸರು 'ಅಹಲ್ಯಾ'ಗೆ ಧಾರವಾಡದಿಂದ ಗೀತಾ ಬರೆದಂತೆ ಬರೆದೆ. ಅದರಲ್ಲಿ ಧಾರವಾಡದಲ್ಲಿ ನಡೆದ ಕಾರ್ಯಕ್ರಮದಲ್ಲಿ ಅಂದಿನ ಸಭೆಯಲ್ಲಿ ಸರಸ್ವತಿಯರಂತೆ ಮಹಿಳೆಯರು ಕುಳಿತಿದ್ದರು ಎಂದು ಎನ್ಕೆ ಬರೆದಿದ್ದಾರಲ್ಲ ? ಎಂದು ಮಂಗಳೂರಿನ ಅಹಲ್ಯಾ ಕೇಳಿದ್ದಕ್ಕೆ ಗೀತಾ ಉತ್ತರಿಸಿದ್ದಳು. "ಅಂದಿನ ಸಭೆಯಲ್ಲಿ ಯಾರೂ ವೀಣಾಪಾಣಿಗಳಾಗಿ ಕಿರೀಟಧಾರಿಣಿಯರಾಗಿ, ಮಯೂರವಾಹಿನಿಯರಾಗಿ ಬಂದು ಕುಳಿತ ಸರಸ್ವತಿಯರಾಗಿರಲಿಲ್ಲ. ನನ್ನ-ನಿನ್ನಂತೆ ಮಹಿಳೆಯರ ಗುಂಪು ನೆರೆದಿತ್ತು. ಮತ್ತೆ ನಾವು ಓದಿದ ಪುರಾಣದಲ್ಲಿ ಸರಸ್ವತಿ (ವಿದ್ಯಾದೇವತೆ) ಒಬ್ಬಳೇ ! ಎನ್ಕೆಯವರು ಸಾವಿರಾರು ಸರಸ್ವತಿಯರನ್ನು ಸೃಷ್ಟಿಸಿದ ಮಹಾಬ್ರಹ್ಮ!" ಎಂದು ಬರೆದಿದ್ದೆ.

ಮಾರನೆಯ ದಿನ ಎನ್ಕೆ ಮನೆಗೆ ಬಂದರು. ಅದೇ ಮಾತಿಗೀತ ಮೊದಲು ಕುಸುಕುಸು ನಗು-ಹಾಸ್ಯ ತುಂಬಿದ ಕಣ್ಣುಗಳು. "ಏನಮ್ಮ ಗೀತಾ... ಗುರುಗೆ ಒಳ್ಳೆ ಗುರುದಕ್ಷಿಣೆ ಕೊಟ್ಟೆಯಲ್ಲ ? ನಿನ್ನ ಬರವಣಿಗೆ ಮಾತಿನ ಚಮತ್ಕಾರಕ್ಕೆ ಖುಷಿಯಾಯಿತು. ಗುರು ಎನ್ಕೆಗೆ ಒನ್ಕೆಯಾಗಿ ಉತ್ತರಿಸಿದಳು ಶಿಷ್ಯೆ, ಶಾಭಾಶ್" ಎಂದರು.

ಆ ದಿನ ಪಾಠಕ್ಕೆ ಬಂದಾಗ "ಗೀತಮ್ಮ, ನಿನ್ನ ಮಾಸ್ತರರಿಗೆ ಬೊಂಬಾಯಿಯ ಅಶರೀರವಾಣಿಯಲ್ಲಿ ಬಡ್ತಿಯಾಗಿದೆ... ನಿಮ್ಮನ್ನೆಲ್ಲ ಬಿಟ್ಟು ಹೋಗಬೇಕಲ್ಲ ?" ಎಂದಾಗ ಯಾವಾಗಲೂ ನಗುತ್ತಿದ್ದ ಕಣ್ಣುಗಳಲ್ಲಿ ನೋವಿನೆಳೆ ಸುಳಿದು ಹೋದದ್ದೂ ತಿಳಿಯದೆ ಹೋಗಲಿಲ್ಲ. ಆದರೆ ಎಂ.ಎ.,ಬಿ.ಟಿ. ಆಗಿ ಬಡ ಮಾಸ್ತರಿಕೆಯಲ್ಲಿದ್ದ ಅಣ್ಣ ಎನ್ಕೆ, ಬೊಂಬಾಯಿ ಆಕಾಶವಾಣಿಯಲ್ಲಿ ಗೌರವಯುತ ಅಧಿಕಾರಿಯ ಹುದ್ದೆ ಕೈಮಾಡಿ ಕರೆದಾಗ ಖುಷಿಪಡಬೇಕಾದದ್ದು ಸಹಜ. ನನಗೂ ಹಾಗೇ ಆಯಿತು. ಅವರನ್ನು ನೋಡಲಾಗದಿದ್ದರೂ ರೇಡಿಯೋ ಕಿವಿ ತಿರುಗಿಸಿ ಬೊಂಬಾಯಿಯ ಅವರ ಕಾರ್ಯಕ್ರಮದಲ್ಲಿ ಧ್ವನಿ ಕೇಳಿ ಸಮಾಧಾನಪಟ್ಟೆ.

ಕೆಲ ವರುಷಗಳು ಹೀಗೆ ಉರುಳಿದವು. ಒಂದು ದಿನ ಧಾರವಾಡ ಆಕಾಶವಾಣಿಯಿಂದ ಅಣ್ಣ ಎನ್ಕೆಯವರ ಧ್ವನಿ ಕಿವಿಯಲ್ಲಿ ಬಿದ್ದಾಗ ನನಗಾದ ಸಂತಸ ಅಷ್ಟಿಷ್ಟಲ್ಲ.

ಮತ್ತೆ ಮೊದಲಿನ ಪ್ರೀತಿ, ಸ್ನೇಹ ಚಿಗುರಿಕೊಂಡಿತು. ಅವರ ಮನೆಗೆ ಹೋದಾಗ ಅತ್ತಿಗೆ ನಾಗವೇಣಿ "ನಡುಮನೆಯ" ಕನ್ನಡದಲ್ಲಿ ಮಾತಾಡುತ್ತಿದ್ದರೆ ಈಗ ನನಗೆ ಅರ್ಥವಾಗುತ್ತಿತ್ತು. ನನ್ನ ಕನ್ನಡದಲ್ಲಿ ಉತ್ತರಿಸುತ್ತಿದ್ದೆ. ಅತ್ತಿಗೆ "ದ್ವಾಸಿ (ದೋಸೆ) ಮಾಡ್ತೇನಿ... ನಿಮ್ಹಾಂಗಲ್ಲ– ಹಾಂಗ ಮಾಸಲಿ ನೋಡ್ರಿ (ರುಚಿ)" ಎಂದು ತಟ್ಟೆಯಲ್ಲಿ ಉಂಡೆಯಷ್ಟು ತುಪ್ಪ, ಚಟ್ನಿಪುಡಿ ಎದುರಿಗಿಟ್ಟು ಉಪಚಾರ ಮಾಡಿದಾಗ ಅವರ ನಿರ್ಮಲ ಪ್ರೀತಿಗೆ ಹಾಂ... ಹುಂ... ಎನ್ನದೆ ಚಟ್ನಿ ಖಾರ ಎನ್ನದೆ ಸಕ್ಕರೆ ಹಾಕಿಸಿ ತಿನ್ನುತ್ತಿದ್ದೆ.

ಒಂದು ಸಂಜೆ ಮಾರ್ಕೆಟಿನಿಂದ ನಾನು ಮಕ್ಕಳೊಂದಿಗೆ ಬರುತ್ತಿದ್ದೆ. ಮಧ್ಯೆ ದಾರಿಯಲ್ಲಿ ಎಸ್ಕೆ ದಂಪತಿಗಳು ಸಿಕ್ಕರು. ಆಗ ಅದೇ 'ಸುಧಾ' ವಾರಪತ್ರಿಕೆಯಲ್ಲಿ ನನ್ನ ಮೊದಲ ಕಾದಂಬರಿ 'ಕಂಬನಿ ಒರೆಸಿದ ಕೈ' ಧಾರಾವಾಹಿಯಾಗಿ ಬರುತ್ತಿತ್ತು. ಆ ವಾರದ 'ಸುಧಾ'ದಲ್ಲಿ ಕಾದಂಬರಿಯಲ್ಲಿಯ ಅತ್ತಿಗೆ ಶಾಲಿನಿಯ ಆಕಸ್ಮಿಕ ಸಾವಿನ ಪ್ರಕರಣ ಬಂದಿತ್ತು. ನಾಗವೇಣಿಯವರು ನನ್ನ ಕೈಯನ್ನು ಬಿಗಿಯಾಗಿ ಹಿಡಿದು "ಗೀತಾ, ನೀವು ಅಷ್ಟು ಒಳ್ಳೆಯ ಶಾಲಿನಿಯನ್ನು ಹಾಂಗ್ ಯಾಕೆ ಪಟ್‌ದಮ್ ಕೊಂದುಬಿಟ್ರಿ? ರಾತ್ರಿಯೆಲ್ಲ ನಾನು ಕಣ್ಣಿಗೆ ಕಣ್ಣೇ ಹಚ್ಚಲಿಲ್ಲ. ಎಂಥಾ ಮುತ್ತಿನಂಥ ಮಕ್ಳು ? ಬಂಗಾರದಂಥ ಗಂಡ ? ಎಲ್ರನ್ನೂ ಬಿಟ್ಟು ಹಾಂಗ್ ಹ್ಯಾಂಗ್ ಕೊಂದ್ರಿ ?" ಕಣ್ಣಲ್ಲಿ ತೊಟ್ಟಿಕ್ಕುವ ಕಣ್ಣೀರು ! ಅವರ ಮುಗ್ಧ ಮನಸ್ಸು– ಶಾಲಿನಿಯಲ್ಲಿ ಬೆರೆತ ಅವರ ಪ್ರೀತಿ ನನಗೇ ಸವಾಲಾಗಿ ನಿಂತಿತ್ತು.

"ಕಾದಂಬರಿಗೆ ತಿರುವು ಬರುವುದೇ ಅಲ್ಲಿ.... ಶಾಲಿನಿ ಹಾಗೆ ಸಾಯಲೇಬೇಕಾಯಿತು" ಎಂದೆ ನಾನು.

ಎಸ್ಕೆ ನಗುತ್ತ "ಹುಚ್ಚಿ... ಮನೇಲಿ ಅತ್ತೆ... ಈಗ ಇಲ್ಲೂ ನೀನು ಅಳುತ್ತೀ ? ಅದು ಕಥೆ... ಜೀವನದಲ್ಲಿ ಹೀಗೆ ಹುಟ್ಟು– ಸಾವು ಬರೋದಿಲ್ಲವೇ ? ಇದು ಹೇಳಿ ಕೇಳಿ ಕಾದಂಬರಿಯಲ್ಲಿಯ ಶಾಲಿನಿ ಸತ್ತದ್ದು...."

ನನ್ನ ಕೈಯನ್ನು ಇನ್ನಷ್ಟು ಬಿಗಿಯಾಗಿ ಹಿಡಿದು.... "ಹೋಗಲಿ ಬಿಡ್ರಿ ... ಇಲ್ಲಿ ಮಾತೇ ಬೇಡ... ಮುಂದಿನ ಆದಿತ್ಯವಾರ ಊಟಕ್ಕೆ ಬರ್ರಿ ಮಕ್ಕೊ, ಬರಬೇಕು ಮತ್ತೆ.... ಮರೀಬೇಡ್ರಿ... ಆಗ ಮಾತಾಡೋಣ" ಅಂದ್ರು. ನಾನೂ ಒಪ್ಪಿಕೊಂಡೆ.

ಭಾನುವಾರ ಬಂತು ! ನಾನು ಹೋದೆ. ಆದರೆ ಊಟಕ್ಕಲ್ಲ ! ಅಣ್ಣ ಎಸ್ಕೆಯವರ 'ಕಂಬನಿ ಒರಸಲು ಕೈ' ಎದುರು ಚಾಚಿದೆ.

ಶಾಲಿನಿಯನ್ನು ಹಾಗೆ ಯಾಕೆ ಒಂದು ಕ್ಷಣದಲ್ಲಿ ಕೊಂದಿರಿ?— ಎಂದು ಕೇಳಿದ ಈ ನನ್ನ ಅತ್ತಿಗೆಗೆ ಸಿಡುಬು ಬಂದು ನಾಲ್ಕೇ ನಾಲ್ಕು ದಿನದಲ್ಲಿ ಅವರನ್ನು ಕಬಳಿಸಿ, ಊಟಕ್ಕೆ ಕರೆದ ನನ್ನನ್ನು ನೋಡದೆ ಅಣ್ಣ ಎಸ್ಕೆಯನ್ನ, ಮಗ ರವಿಯನ್ನ ತಬ್ಬಲಿ ಮಾಡಿ ಹೊರಟುಹೋಗಿದ್ದರು. ದಾರಿಯಲ್ಲಿ ಶಾಲಿನಿಗಾಗಿ ಅತ್ತಿದ್ದ... ಅವರಾಡಿದ

ಮಾತು... ಒಂಟಿಯಾಗಿ ನಿಂತ ಎನ್ಕೆ– ತಬ್ಬಲಿಯಾಗಿ ಓಡಿ ಬಂದು ನನ್ನ ತಬ್ಬಿದ ಎಳೆಯ ರವಿ ನನ್ನನ್ನು ದಿಕ್ಕೆಡಿಸಿತ್ತು. ಆ ನೆನಪು ಈಗಲೂ ನನ್ನೆದೆಯನ್ನು ಕೊರೆಯುತ್ತಿದೆ.

ಎನ್ಕೆಯವರದು ಆಕಾಶವಾಣಿಯಲ್ಲಿ ಎಲ್ಲವರಲ್ಲೂ ಎತ್ತಿದ ಕೈ. ಬಿಡುವಿಲ್ಲದೆ ದುಡಿಯುವುದೇ ಈ ಜೀವಕ್ಕೆ ಸಮಾಧಾನ. ನಾನು ಅಲ್ಲಿ ಕಾರ್ಯಕ್ರಮಕ್ಕೆ ಅವರ ದಿದ್ದರೂ, ಅಥವಾ ಬೇರೆ ಕಾರ್ಯಕ್ರಮದಲ್ಲಿ ನನ್ನ ಪ್ರೋಗ್ರಾಮಿದ್ದರೂ ಅವರಿಗೆ ಧರ್ಮಸಂಕಟ. ಒಂದೆಡೆ ರೆಕಾರ್ಡಿಂಗ್, ಇನ್ನೊಂದೆಡೆ ಭಾಷಣಕ್ಕೆ ಬಂದವರನ್ನ ಸಿದ್ಧ ಪಡಿಸಬೇಕು. ಬಂದವರನ್ನು ಟಾಕ್ ರೂಮಿಗೆ ಕರ್ಕೊಂಡು ಹೋಗಬೇಕು— ಇತ್ತ ನಾನು ಬಂದಿದ್ದೇನೆ— ಮಾತಾಡಲು ಸಮಯ ದೊರೆಯದಲ್ಲ ಎನ್ನೋ ಚಿಂತೆ. "ಗೀತಮ್ಮ, ಈಗ ಬಂದೆ, ಒಂದೇ ನಿಮಿಷ— ನಿನ್ನಣ್ಣ ಇಲ್ಲಿ ಬಂಡಿಗೆ ಹೂಡಿದ ಕುದುರೆ, ಇವರನ್ನ ಸ್ಟುಡಿಯೋದಲ್ಲಿ ಕುಳ್ಳರಿಸಿ ಈಗ ಬಂದು ಬಿಟ್ಟೆ—" ಅವರ ಪೀಕಲಾಟ ಕಂಡು ನನಗೆ ನಗು, ಸಂತೋಷ. ಎಷ್ಟು ಪ್ರೀತಿ! ಎಂಥ ವಾತ್ಸಲ್ಯ? ತನ್ನ ಮಣಭಾರದ ಕೆಲಸದಲ್ಲೂ ಈ ತಂಗಿಯಲ್ಲಿ ಇಷ್ಟೊಂದು ಅಭಿಮಾನವೇ?

"ಅಣ್ಣಾ ಇಲ್ನೋಡಿ– ಇದು ನನ್ನ ಅಥವಾ ನಿಮ್ಮ ಮನೆ ಅಲ್ಲ. ಆಕಾಶವಾಣಿಯಲ್ಲಿ ನಿಮ್ಮ ಕೆಲಸ ಮುಖ್ಯ. ಇಲ್ಲಿ ಆತಿಥ್ಯ ಬೇಡ. ನನ್ನ ಕಥೆಗೆ ಬೇರೆಯವರು ಇದ್ದಾರೆ. ನೀವು ಹೋಗಿ" ಎಂದೆ. ಕಣ್ಣು–ತುಟಿಯಲ್ಲಿ ಅದೇ ಮುಸಿಮುಸಿ ನಗು, ಕೈ ಬೆರಳು ಹೊಸೆದುಕೊಂಡು– "ಬರ್ತೇನಮ್ಮ ನಾಳೆ ನಾಡದು ಪುರಸೊತ್ತು ಮಾಡಿಕೊಂಡು ಬರ್ತೇನೆ" ಎಂದು ಅಲ್ಲಿಂದ ತಿರುತಿರುಗಿ ಚಡಪಡಿಸುತ್ತ ಸ್ಟುಡಿಯೋದತ್ತ ಹೋಗೋದನ್ನ ಕಂಡಿದ್ದೇನೆ.

ಒಂದು ದಿನ ಎನ್ಕೆ ಆಫೀಸ್ ವ್ಯಾನಿನಲ್ಲೇ ಮನೆಗೆ ಬಂದು, "ಗೀತಾ, ಆಫೀಸ್ ಡ್ಯೂಟಿಯಲ್ಲೇ ಬಂದಿದ್ದೇನೆ; ಅಣ್ಣನ್ನ ನಿರಾಶೆಗೊಳಿಸಬಾರದು" ಎಂದರು. ಫಜೀತಿಯಾಯಿತಲ್ಲ! "ಏನು ಹೇಳಿ" ಎಂದೆ. "ಕಾದಂಬರಿ ಬೇಕು. ಡೈರೆಕ್ಟರ್ ಒಪ್ಪಿಸಿಕೊಂಡು ಬನ್ನಿ ಎಂದ್ರು... ಥೀಮು ಅವರೇ ಕೊಡ್ತಾರಂತೆ" ಇನ್ನೊಬ್ಬರು ಕೊಟ್ಟ ಥೀಮು ನಾನು ಒಪ್ಪೋದಿಲ್ಲವೆಂದೇ ಡೈರೆಕ್ಟರ್ ಒಳ್ಳೆಯ ಉಪಾಯವೆಂದು ಅಣ್ಣ ಎನ್ಕೆಯನ್ನ ಕಳಿಸಿದ್ದು ಎಂದೆ ಮನದಲ್ಲಿ. ಹೀಗೆ 'ದೀಪ ಮಿಂಚಿತು' ಧಾರಾವಾಹಿ ಕಾದಂಬರಿ ಪ್ರಾಯೋಗಿಕವಾಗಿ ಒಂಭತ್ತು ದಿನ ಗುಲಬರ್ಗಾ, ಧಾರವಾಡ ಆಕಾಶವಾಣಿಯಲ್ಲಿ ನನ್ನ ಧ್ವನಿಯಲ್ಲಿ ಪ್ರಸಾರಗೊಂಡಿತು. ಅಖಿಲ ಭಾರತ ಆಕಾಶವಾಣಿಯಲ್ಲಿ ಈ ಕಾದಂಬರಿಯೇ ಪ್ರಾಯೋಗಿಕ ಕಾದಂಬರಿಯೆಂದು ಮೊದಲ ಬಾರಿ ಪ್ರಸಾರಗೊಂಡದ್ದು. ಈ ಕಾದಂಬರಿಗೆ 'ದೀಪ ಮಿಂಚಿತು' ಹೆಸರು ಕೊಟ್ಟವರೂ ಅವರೇ! ಬರೆಯಿಸಿದ ಶ್ರೇಯಸ್ಸು ಅಣ್ಣ ಎನ್ಕೆಯವರಿಗೆ ಸಲ್ಲುತ್ತದೆ.

ರೇಡಿಯೋ ಎದುರಿಗಿಟ್ಟು ನಮಗೆ ಸಂಗೀತ, ಭಾಷಣ, ನಾಟಕ, ಕತೆ, ಕವಿತೆ, ಸಂದರ್ಶನ ಇತ್ಯಾದಿ ಏನು ಬೇಕಾದರೂ ಟ್ಯೂನ್ ಮಾಡಿದ ಕ್ಷಣ ಯಶಸ್ವಿ ಕಾರ್ಯಕ್ರಮ

ಕೇಳಲು ಸಿಗುತ್ತದೆ ಎನ್ನುವ ಭರವಸೆ ಎಷ್ಟು ಸತ್ಯವೊ... ಅಷ್ಟೇ ಖಂಡಿತ ಅಷ್ಟೇ ಯಶಸ್ವಿ ಈ ಎನ್ಕೆ ರೇಡಿಯೋ ಟ್ರ್ಯಾನ್ ಮಾಡಿದರೆ ನಮಗೆ ದೊರೆಯುತ್ತದೆ. ಅವರ ಮೆದುಳು ಅವರ ಕೈಯಲ್ಲಿ ಇಂಥ ಗಾರುಡಿ ಇದೆ. ಅವರು ನಾಟಕಕಾರ, ಕಾದಂಬರಿಕಾರ, ಕಥೆಗಾರ, ಹಾಸ್ಯ ವಿಡಂಬನೆಗಾರ, ವಿಮರ್ಶಕ, ವ್ಯಕ್ತಿಚಿತ್ರಗಾರ; ಕುಮಾರವ್ಯಾಸ, ದಾಸ ಸಾಹಿತ್ಯದಂಥ ಗಂಭೀರ ಸಾಹಿತ್ಯರಚನೆ, ಸಾಹಿತಿಗಳ ಕೃತಿ ರಚನೆಯಲ್ಲಿ ಪಳಗಿದ ಕೈಯಂತೆ, ಸಂಗೀತಗಾರರ, ಕಂಪನಿ ನಾಟಕಗಳ ಒಡೆಯರ ಜಾತಕಗಳನ್ನು ಬಲ್ಲ ಏಕೈಕ ವ್ಯಕ್ತಿ ಇವರು ಎನ್ನಬಹುದು.

ಉತ್ತರ ಕರ್ನಾಟಕಕ್ಕೊಂದು ಕಾಮಧೇನು ಇದ್ದಂತೆ ಎನ್ಕೆ. ಧಾರವಾಡದಲ್ಲಿ ಸಾಹಿತಿಗಳ ಸನ್ಮಾನವೇ ಇರಲಿ, ಸಂಗೀತಗಾರು, ನಾಟಕಕಾರರೇ ಬರಲಿ, ಅವರ ಪರಿಚಯ ಎನ್ಕೆಯವರಿಂದಲೇ ಆಗಬೇಕು. ಹಾಗೇ ದುಃಖಸೂಚಕ ಸಭೆಯಲ್ಲಿ ಎನ್ಕೆ ನಾಲ್ಕು ಹನಿ ಕಣ್ಣೀರು ಸುರಿಸುತ್ತಾರೆ.

ಎನ್ಕೆ ಅಜಾತಶತ್ರು. ಅವರು ತಮ್ಮ ಭಾವನೆಗಳಿಗೆ ಎಷ್ಟು ಬೆಲೆ ಕೊಡುತ್ತಾರೋ ಅಷ್ಟೇ ಮಹತ್ವ ಇನ್ನೊಬ್ಬರ ಬದುಕು ಭಾವನೆಗಳಿಗೂ ಕೊಡುತ್ತಾರೆ. ಅವರ ದಿನಚರಿಯಲ್ಲಿ ಸಮಯಕ್ಕೆ ತುಂಬ ಬೆಲೆಯಿದೆ. ಅದು ಆಕಾಶವಾಣಿಯ ಗರಡಿಯಲ್ಲಿ ಪಳಗಿದ್ದಕ್ಕೊ ಏನೋ!

ಸದಾ ಏನಾದರೂ ಬರೆಯುತ್ತಲೇ ಇರಬೇಕು. ಮಾತು ಮಾತಿನಲ್ಲಿ ಹಾಸ್ಯ-ನಗು. ಚಟುವಟಿಕೆಯಲ್ಲಿ ಇರುವ ಅವರ ಮನಸ್ಸು, ಲವಲವಿಕೆಯಲ್ಲಿ ಇರುವ ಅವರ ದೇಹ ಅವರ ಪ್ರಾಯಕ್ಕಿಂತಲೂ ಅವರನ್ನು ಚಿಕ್ಕವರನ್ನಾಗಿ ಕಾಣುವಂತೆ ಮಾಡಿದೆ.

ಕನ್ನಡ ಜನತೆಯ ಪ್ರೀತಿಯಲ್ಲಿ, ಸರಸ್ವತಿಯ ವರಪುತ್ರನಾದ ಈ ನನ್ನ ಅಣ್ಣ ಬಹುಕಾಲ ಬಾಳಬೇಕು.




# ನನಗೆ ಕಂಡ ಎನ್ಕೆ

## ಸುರೇಂದ್ರ ದಾನಿ

ಎನ್ಕೆಯವರನ್ನು ನಾನು ಕಂಡೆ ಎನ್ನುವುದು ಧಾರ್ಷ್ಟ್ಯದ ಮಾತು. ಅವರ ಆ ಐದೂಕಾಲು ಅಡಿ ಎತ್ತರದ ದೇಹವನ್ನು ಕಂಡವರು ಅನೇಕ. ಅಷ್ಟೇಕೆ ಅವರನ್ನು ಕಂಡೆನೆನ್ನುವುದು ಬಲು ಬಿಂಕದ ಮಾತು. ಆ ಬಡಕಲು ದೇಹದಲ್ಲೂ ಎಲ್ಲರಿಗೂ ಕಾಣಿಸಿಕೊಳ್ಳದ ಹಾಗೆ ಎನ್ಕೆ ಆಳದಲ್ಲಿ ಅಡಗಿರುತ್ತಾನೆ. ಕಂಡಕಂಡವರಿಗೆ ಮಾತ್ರ ಏಕೆ? ಕಾಣಬೇಕೆನ್ನುವವರಿಗೂ ಆ ಎನ್ಕೆ ಸುಲಭವಾಗಿ ಕಣ್ಣಿಗೆ ಬೀಳುವುದಿಲ್ಲ.

ಯಾಕೆಂದರೆ ಆ ಎನ್ಕೆ ಬಹಳ ಸೂಕ್ಷ್ಮ ಸ್ವಭಾವಿ. ಚಿಂತನಶೀಲ ಚೈತನ್ಯ. ಸಂವೇದನಾಶೀಲ ಜೀವಿ. ಮಕ್ಕಳ ಮನವುಳ್ಳವ. ತಾನು ತೋರಿಸಿಕೊಳ್ಳುವ ಮೊದಲು ಹೆರವರ ಮನದಲ್ಲಿ ಹಣಿಕ್ಕಿಕ್ಕುತ್ತಾನೆ. ಅಲ್ಲಿ ತನಗಿರುವ ಸ್ಥಾನ ಎಂಥದು ಎಂದು ಪರೀಕ್ಷಿಸುತ್ತಾನೆ. ಈ ಪರೀಕ್ಷೆಯಲ್ಲಿ ತೇರ್ಗಡೆಯಾಗುವವರು ಬಹಳ ಕಡಿಮೆ ಜನ. ಅಲ್ಲಿ ತನಗೆ ಸ್ಥಾನ ಇಲ್ಲವೆಂದು ಅನಿಸಿದ ಕೂಡಲೆ ಎನ್ಕೆ ಮುಖ ತಿರುವುತ್ತಾನೆ. ತನ್ನನ್ನು ಅಲ್ಲಿ ತೋರಿಸಿಕೊಳ್ಳುವುದೇ ಇಲ್ಲ. ಆದರೂ ಅವರು ಎನ್ಕೆಯನ್ನು ನೋಡಿದೆನೆಂದುಕೊಳ್ಳುತ್ತಾರೆ. ಅವರಿಗೆ ಕಾಣುವ ಎನ್ಕೆಯೇ ಬೇರೆ. ನಿಜವಾಗಿ ಇರುವ ಎನ್ಕೆಯೇ ಬೇರೆ.

ಎನ್ಕೆಯವರನ್ನು ಸಾಹಿತಿ ಎಂದು ಹೇಳಿದವರನ್ನು ಕೇಳಿದ್ದೇನೆ. ಮಾತುಗಾರ ಎಂದವರನ್ನು ಕಂಡಿದ್ದೇನೆ. ನಾಟಕಕಾರ ಎನ್ನುವವರೂ ಇದ್ದಾರೆ. ಹರಟೆಗಾರ ಎನ್ನುವವರಿಗೂ ಕೊರತೆ ಇಲ್ಲ. ಆಕಾಶವಾಣಿ ಕಲಾವಿದ ಎಂದವರೂ ಎಷ್ಟೋ ಜನ. ಆದರೆ ಅವರನ್ನು ಸ್ನೇಹಿತ ಎಂದು ಕರೆದವರೆಷ್ಟು ಜನ? ಸಹೋದರ ಎಂದು ಗುರುತಿಸಿದವರೆಷ್ಟು ಜನ?

ನಿಜವಾದ ಎನ್ಕೆ ಇರುವುದು ಈ ಎಡೆಗಳಲ್ಲಿ. ಅವರೊಡನೆ ಏಕಾಂತವಾಗಿ ಕುಳಿತು ಹರಟೆ ಹೊಡೆಯಬೇಕು. ಉದ್ದುದ್ದ ಪತ್ರ ವ್ಯವಹಾರ ಮಾಡಬೇಕು. ಅವರ ಲೆಕ್ಕಣಿಕೆಯಿಂದ ಇಳಿದುಬರುವ ಸಾಹಿತ್ಯ ಸ್ರೋತವನ್ನು ಅವರ ಜೀವನದಲ್ಲಿಯ ಸಿಹಿ ಕಹಿ ಅನುಭವಗಳ ಪಾತ್ರೆಯಲ್ಲಿ ಹಾಕಿ ಸವಿಯಬೇಕು. ಆಗ ಎನ್ಕೆಯ ನಿಜವಾದ ರುಚಿ ಗೊತ್ತಾಗುತ್ತದೆ.

ಎನ್ಕೆಯವರ ಜೀವನನೌಕೆ ಒಂದೇ ನಿರ್ದೇಶಿತ ದಾರಿಯನ್ನು ಕ್ರಮಿಸಿಲ್ಲ. ಅವರ ಚುಕ್ಕಾಣಿ ಒಂದು ಕಡೆ ತಿರುಗಿದರೆ, ಅದರ ಹಾಯಿಯನ್ನು ತುಂಬಿದ ಗಾಳಿ ಅದನ್ನು

ಬೇರೆ ಕಡೆಗೆ ಸೆಳೆದೊಯ್ದುದೆ. ಗಾಳಿಯ ರಭಸಕ್ಕೆ ಸಿಕ್ಕ ಆ ನೌಕೆ ಭದ್ರ ನೆಲೆಯನ್ನು ಕಾಣದೆ ಅತ್ತಿತ್ತ ಸುತ್ತಾಡಿದ್ದೂ ಉಂಟು. ಅದರಿಂದಾಗಿ ಎನ್ಕೆಯವರಲ್ಲಿ ಅನೇಕ ಸಲ ನಿರಾಶೆ, ಭಯ, ನಿರ್ಲಿಪ್ತತೆ, ದುಃಖ ಇತ್ಯಾದಿ ಅನೇಕ ಭಾವಗಳು ಬಂದದ್ದುಂಟು. ಅವು ಅವರ ಮನೋಭಿತ್ತಿಯ ಮೇಲೆ ಆಳವಾದ ಪರಿಣಾಮ ಮಾಡಿವೆ. ಆಯಾ ಸಂದರ್ಭಗಳು ಕಳೆದುಹೋದ ಕೂಡಲೇ ಅವು ಅಳಿಸಿಹೋಗಿಲ್ಲ. ಯಾವ ಕ್ಷಣಕ್ಕೂ ಮೇಲಿನ ಹೊದಿಕೆಯನ್ನು ತೆಗೆದರೆ ಆ ಮುದ್ರೆಗಳನ್ನು ಸ್ಪಷ್ಟವಾಗಿ ಕಾಣಬಹುದು.

ಅದೊಂದು ಹೆಂಗರುಳು. ಅಂದರೆ ಪರರಿಗಾಗಿ ಕೇವಲ ಕರಗುವ ಜೀವವಲ್ಲ. ತನ್ನ ಜೀವನದ ತಪಸ್ಸನ್ನೆಲ್ಲ ಧಾರೆಯೆರೆಯಲು ಕಾತರಿಸುತ್ತಿದ್ದರೂ ಅದನ್ನು ಸ್ವೀಕರಿಸುವ ಅರ್ಹತೆಯುಳ್ಳ ಒಂದು ಜೀವ ದೊರೆಯುತ್ತಿಲ್ಲವಲ್ಲ ಎಂದು ತನ್ನಲ್ಲೇ ಕೊರಗುವ ಕರುಳು. ಎನ್ಕೆ ತನ್ನ ಬಾಳುವೆಯುದ್ದಕ್ಕೂ ಇಂಥ ಜೊತೆಗಾರ ಜೀವನಕ್ಕಾಗಿ ಹಂಬಲಿಸಿದ್ದಾರೆ ಅದು ಕಣ್ಣಿಗೆ ಕಂಡಂತಾಗಿ ಮತ್ತೆ ಮರೆಯಾಗಿದೆ. ಅದರಿಂದಾಗಿ ಅವರ ಹಂಬಲ ಹೆಚ್ಚಿದೆ. ಹಿರಿದಾಗಿ ಬೆಳೆದು ನಿಂತಿದೆ.

ಹಡೆದ ತಾಯಿಯ ಬೆನ್ನು ರಕ್ಷೆ ಬಹಳ ದಿವಸ ಉಳಿಯಲಿಲ್ಲ. ಅವಳ ಸ್ಥಾನಕ್ಕೆ ಬಂದ ವೈನಿ ನಡುವೆಯೇ ಕೈಬಿಟ್ಟು ಹೋದಳು. ಅಕ್ಕ ಅಗಲಿದಳು. ಬಾಳ ಸಂಗಾತಿಯಾಗಲು ಬಂದ ಇಬ್ಬರು 'ಟಾ ಟಾ' ಮಾಡಿದರು. ಅಂತಃಕರಣದ ಆಸರೆಯನ್ನೇ ಜೀವನದ ಭವ್ಯ ಬಯಕೆಯನ್ನಾಗಿಸಿಕೊಂಡಿದ್ದ ಜೀವಕ್ಕೆ ಇಷ್ಟೊಂದು ಆಘಾತಗಳು ಸಾಕಲ್ಲವೆ?

ಹೊರಜೀವನದಲ್ಲಿ ತೃಪ್ತಿಯನ್ನು ಕಾಣಲು ಸಾಹಿತ್ಯದ ಕೃಷಿ, ಮಾಸ್ತರಿಕೆಯ ಜೀವನ, ಆಕಾಶವಾಣಿಯಲ್ಲಿ ನೌಕರಿ. ಏನು ಮಾಡಿದರೇನು? ಅದು ನಿಷ್ಕರುಣ ಲೋಕ. ಅದಕ್ಕೆ ನಿನ್ನೆಯ ನೆನಪಿಲ್ಲ. ನಾಳೆಯ ಕನಸಿಲ್ಲ. ಇಂದಿನ ರೊಖ ವ್ಯವಹಾರವೊಂದೇ ಅದರ ನೀತಿ. ಇದರಲ್ಲಿ ಸಿಕ್ಕ ಎನ್ಕೆ ಸಾಕಷ್ಟು ಘಾಸಿಯಾಗಿದ್ದಾರೆ.

ಅಂತೂ ಎನ್ಕೆಯವರ ಅಂತಃಕರಣ ಅತೃಪ್ತವಾಗಿಯೇ ಉಳಿದಿದೆ. ಹಂಬಲ ಇಂಗದೆಯೇ ನಿಂತಿದೆ. ಇಂಥ ಚಾತಕ ಪಕ್ಷಿಯ ಬಾಯಿಗೆ ಬಿದ್ದ ಒಂದು ಹನಿ ಮಳೆಯೂ ಅಮೃತವಾಗಿ ಪರಿಣಮಿಸುವಲ್ಲಿ ಸಂದೇಹವಿಲ್ಲ. ಈ ಅಮೃತೋತ್ಸವ ಸಮಾರಂಭದಲ್ಲಿ ಅವರಿಗೆ ಇಂಥ ಅಮೃತ ಸೇಚನೆ ಹನಿ ಮಾತ್ರ ದೊರೆಯುವದಾದರೂ ಅದಕ್ಕೆ ನಿಜವಾದ ಸಾರ್ಥಕ್ಯ.

# 'ಗಾಂಧೀಗೀತ'ದ ಎನ್ಕೆ

## ದ. ಪ. ಕರಮರಕರ

'ಮುಕ್ತಳಾದಳೊ ಭಾರತಮಾತಾ । ಇದು ಗಾಂಧೀಗೀತಾ'

ಗಾಂಧೀ ಜೀವನದ ಉದ್ದೇಶ, ಸಂದೇಶ ಎಲ್ಲವೂ ಈ ಎರಡು ಚರಣಗಳಲ್ಲಿ ಅಡಕವಾಗಿವೆ. ನಮ್ಮ ನೆಚ್ಚಿನ ರಾಷ್ಟ್ರಪಿತನ ಜೀವನ ಗಾಥೆಯನ್ನು ಕನ್ನಡದ ಕೆಚ್ಚಿನ ಭಾಷೆಯಲ್ಲಿ, ಕಾವ್ಯಮಯ ಶೈಲಿಯಲ್ಲಿ ಚಿತ್ರಿಸಿದ ಶ್ರೇಯಸ್ಸು ಎನ್ಕೆ ಅವರದು. ಗಾಂಧೀಜಿ ಶತಮಾನೋತ್ಸವದ ವಿಶೇಷ ಪ್ರಸಾರ ಕಾರ್ಯಕ್ರಮಗಳ ಅಂಗವಾಗಿ ಪ್ರಸಾರವಾದ ಈ ಗಾಂಧೀಗೀತ ನನ್ನ ಮಟ್ಟಿಗಂತೂ ಚಿರಸ್ಮರಣೀಯ, ಪ್ರಾತಃಸ್ಮರಣೀಯ. ವರುಷ ಮುದ್ದಕ್ಕೂ (೧೯೬೯) ಪ್ರತಿ ರವಿವಾರ ಮುಂಜಾನೆ ಗಾಳಿಯಲ್ಲಿ ತೇಲಿಬರುತ್ತಿದ್ದ ಈ ಗೀತವನ್ನು ಕೇಳಲು ನಾವು (ಎಂದರೆ ನಾನು ಮತ್ತು ನನ್ನ ಕುಟುಂಬದವರು) ಚಾತಕ ದಂತೆ ಕಾಯುತ್ತಿದ್ದೆವು. ಗೀತದಿಂದ ಗೀತಕ್ಕೆ ಗಾಂಧೀಜಿ ಜೀವನದ ಸ್ಮರಣೀಯ ಘಟನೆಗಳೆಲ್ಲ ಧಾರಾವಾಹಿಯಾಗಿ ಪ್ರಸಾರವಾಗುತ್ತಿದ್ದಂತೆ ಕುತೂಹಲಜನಕವಾಗಿ ರುತ್ತಿದ್ದವು. ಮತ್ತೆ ಮುಂದೇನು–ಎಂಬ ಉತ್ಸುಕತೆಯನ್ನು ಮೂಡಿಸಿ ಹಿಂದಿನ ಗೀತ ಮುಗಿಯುತ್ತಿತ್ತು. ಮತ್ತೆ ಮುಂದಿನ ವಾರ 'ಮುಕ್ತಳಾದಳೊ ಭಾರತಮಾತಾ' ಎಂಬ ಪಲ್ಲವಿಯೊಂದಿಗೆ ಪ್ರಾರಂಭ. ಹೀಗೆ ಸುಮಾರು ೭೫ ಗೀತಗಳು ಬಿತ್ತರಗೊಂಡಾಗ ಕೇಳುಗನ ಮನಸ್ಸು–ಹೃದಯಗಳು ಎತ್ತರಗೊಳ್ಳುತ್ತಿದ್ದವು. ಒಂದೊಂದು ಗೀತೆಯ ಒಂದೊಂದು ನುಡಿಯೂ ಒಂದೊಂದು ಚರಣವೂ ತೀರ ಸರಳ. ಅವರೂ ಕಬ್ಬಿನ ಮೇಲೆ ಜೇನಿಟ್ಟಂತೆ ಕಾವ್ಯಕ್ಕೆ ಸಂಗೀತದ ಜೋಡಣೆ. ಶ್ರೀಮತಿ ಅನುರಾಧಾ ಧಾರೇಶ್ವರ ಮತ್ತು ಕೇಶವ ಗುರಂ ಕವಿಯ, ಕಾವ್ಯದ ಹೃದಯವನ್ನು ಅರಿತುಕೊಂಡು, ಅಲ್ಲಿಯ ರಸ–ಭಾವಗಳಿಗೆ ತಕ್ಕಂತೆ ಮೇಳವಾಗಿ ಸರಾಗವಾಗಿ ಹಾಡುತ್ತಿದ್ದರು. ರಾಜ ಅಯ್ಯಂಗಾರ್ ಅವರ ಸಂಗೀತ ಯೋಜನೆಯೂ ಉಚ್ಚ ಮಟ್ಟದ್ದಾಗಿರುತ್ತಿತ್ತು.

ಈ ಗೀತಗಳನ್ನು ಕೇಳಿ ಆನಂದಿಸುತ್ತಿದ್ದಂತೆ ನಾನು ಕೇಂದ್ರದ ಆಗಿನ ನಿರ್ದೇಶಕ ರಾಗಿದ್ದ ಅಮೀನ್ ಅವರಿಗೆ ನನ್ನ ಮೆಚ್ಚುಗೆಯನ್ನು ತಿಳಿಸಿ ಪತ್ರ ಬರೆದೆ. ಇಷ್ಟೆ ಅಲ್ಲ, ಈ ೭೫ ಗೀತಗಳಲ್ಲಿ ಆಯ್ಕೆಯ ಹತ್ತು ಹನ್ನೆರಡು ಗೀತಗಳನ್ನೊಳಗೊಂಡ ಒಂದು ಸಂಗೀತ ಸಭೆಯನ್ನು ಆಹ್ವಾನಿತರ ಸಮ್ಮುಖದಲ್ಲಿ ಏರ್ಪಡಿಸಬೇಕೆಂದು ಅರಿಕೆ ಯನ್ನು ಮಾಡಿಕೊಂಡೆ. ಅಮೀನ್ ಅವರು ಕೂಡಲೇ ಒಪ್ಪಿಕೊಂಡು ಪತ್ರ ಬರೆದರು.

ಕರ್ನಾಟಕ ಹೈಸ್ಕೂಲ್ ಸಭಾಂಗಣದಲ್ಲಿ ಈ ಕಾರ್ಯಕ್ರಮವನ್ನೇರ್ಪಡಿಸಲಾಯಿತು. ಕೇಂದ್ರದ ಮಾಜಿ ಪ್ರಸಾರ ಮಂತ್ರಿ ದಿವಾಕರ ರಂಗರಾಯರನ್ನು ಮುಖ್ಯ ಅತಿಥಿಯನ್ನಾಗಿ ಆಮಂತ್ರಿಸಲಾಯಿತು. ಮುಖ್ಯವಾಗಿ ಗಾಂಧೀ ಗೀತದ ರಚಯಿತ ಎನ್ಕೆ ಅವರನ್ನು ಮತ್ತು ಅದರ ಸಂಯೋಜಕರನ್ನು ಅದರಲ್ಲಿ ಭಾಗವಹಿಸಿದ ಕಲಾವಿದರನ್ನು ಸತ್ಕರಿಸಿ ಗೌರವಿಸುವ ಉದ್ದೇಶ ನನ್ನದಾಗಿತ್ತು. ಆಮಂತ್ರಿತ ಸಭಿಕರ ಸಮ್ಮುಖದಲ್ಲಿ ಗಾಂಧೀ ಗೀತದ ಈ ಸಂಕ್ಷಿಪ್ತ ಕಾರ್ಯಕ್ರಮ ಎನ್ಕೆ ಅವರ ನಿರೂಪಣೆ ಸಂಗೀತಗಾರರ ರಸಾಲು ಧ್ವನಿ, ವಾದ್ಯ ವೃಂದದ ಹಿಮ್ಮೇಳ ಹಾಗೂ ಅಯ್ಯಂಗಾರರ ನಿರ್ದೇಶನ ಎಲ್ಲವೂ ಅಚ್ಚುಕಟ್ಟಾಗಿ, ಸಮರಸವಾಗಿ ಜರೆತು ಅಂದಿನ ಸಮಾರಂಭ ಸ್ಮರಣೀಯವಾದ ರೀತಿಯಲ್ಲಿ ಮುಕ್ತಾಯಗೊಂಡಿತು. ಇಂದಿಗೂ ಆ ಸುಂದರ ಸಂಜೆ ನನ್ನ ಸ್ಮೃತಿ ಪಟಲದಲ್ಲಿ ಅಚ್ಚೊತ್ತಿದಂತೆ ಮೂಡಿದೆ.

ಇಂದಿಗೂ ಈ 'ಗಾಂಧೀಗೀತ'ದ ಸಮಗ್ರ ಸಂಗೀತ ಕಾರ್ಯಕ್ರಮದ ಟೇಪ್ ಧ್ವನಿ ಮುದ್ರಣ ನನ್ನ ಬಳಿ ಇದೆ. ಮರಾಠಿಯಲ್ಲಿ 'ಗೀತ ರಾಮಾಯಣ' ಇಂದು ನಮಗೆ ಕ್ಯಾಸೆಟ್‌ಗಳಲ್ಲಿ ಲಭ್ಯವಾಗುತ್ತಿದೆ. ಗಾಂಧೀಗೀತವೂ ಯಾಕೆ ಕ್ಯಾಸೆಟ್‌ನಲ್ಲಿ ಬರಬಾರದು ? ಬಹುಜನ ಶ್ರೋತೃಗಳಿಗೆ ಇದರಿಂದ ತುಂಬ ಪ್ರಯೋಜನವಾಗಬಹುದಿತ್ತು. ಅದರೆ ನಮ್ಮ ದುರ್ದೈವಕ್ಕೆ ಆಕಾಶವಾಣಿಯ ಈ ಎಲ್ಲ ಧ್ವನಿಮುದ್ರಿತ ಗೀತಗಳು ಅಳಿಸಲ್ಪಟ್ಟಿವೆ ಎಂದು ನನಗೆ ತಿಳಿದು ಬಂದಾಗ ತುಂಬ ವ್ಯಥೆಯಾಯಿತು. ಎನ್ಕೆ ಅವರ ಶ್ರಮ ವ್ಯರ್ಥವಾಯಿತಲ್ಲ ಎಂದು ಕಳವಳವುಂಟಾಯಿತು.

'ಗಾಂಧೀಗೀತ'ದಿಂದಾಗಿ ಎನ್ಕೆ ಅವರ ಸಂಬಂಧ ಹೆಚ್ಚು ನಿಕಟವೂ ಹೆಚ್ಚು ಗಾಢವೂ ಆಯಿತು. ಧಾರವಾಡ ಆಕಾಶವಾಣಿಯು ತಲೆಯೆತ್ತಿದಾಗಿನಿಂದಲೆ ನನಗೆ ಅವರ ಸಂಪರ್ಕ–ಸಂಬಂಧಗಳು ಬಂದಿದ್ದರೂ ನಾನು ದಿಲ್ಲಿಯಿಂದ ಮರಳಿ ಬಂದು ಧಾರವಾಡದಲ್ಲಿಯೆ ನೆಲೆನಿಂತ ಮೇಲೆ, ಅದೂ ಅಮೀನ್ ಅವರು ನಿರ್ದೇಶಕರಾಗಿ ಬಂದ ಮೇಲೆ ಆಕಾಶವಾಣಿಯ ಮತ್ತು ನನ್ನ ಸಂಪರ್ಕ ಹೆಚ್ಚು ಅಧಿಕವಾಗತೊಡಗಿತು. ಯಾವುದೆ ಒಂದು ವಿಶೇಷ ಪ್ರಸಂಗದಲ್ಲಿ ನಾನು ಪ್ರಸಾರ ಭಾಷಣ ಮಾಡಲು ಆಮಂತ್ರಿಸಲ್ಪಡುತ್ತಿದ್ದೆ. ಗಾಂಧೀಜಿ ಬಗೆಗಾಗಲಿ, ಪಂಡಿತ ನೆಹರೂ ಅವರ ಬಗೆಗಾಗಲಿ ಮಾತನಾಡಲು ನನ್ನನ್ನು ಆಮಂತ್ರಿಸಿದಾಗ ನನಗೆ ಲಭ್ಯವಿಲ್ಲದ ಸಂದರ್ಭ ಗ್ರಂಥಗಳನ್ನು ಎನ್ಕೆ ಅವರೆ ಒದಗಿಸುವರು. ನನ್ನ ಭಾಷಣ ತಯಾರಾದ ಮೇಲೆ ಎನ್ಕೆ ಅವರು ಮನೆವರೆಗೂ ಬಂದು ಹಸ್ತಪ್ರತಿಯನ್ನು ಪರಿಶೀಲಿಸಿ ಅದರಿಂದ ಸಮಾಧಾನಗೊಂಡು ನಂತರ ನನ್ನನ್ನು ಆಕಾಶವಾಣಿವರೆಗೂ ಕರೆದೊಯ್ದು ನನ್ನ ಧ್ವನಿಮುದ್ರಣ ಪೂರೈಸಿದ ಮೇಲೆ ಮತ್ತೆ ಮನೆ ವರೆಗೂ ಬಂದು ತಮ್ಮ ವಾಹನದಲ್ಲಿಯೇ ಹಿಂತಿರುಗುತ್ತಿದ್ದರು. ಆಗಿನ ಪ್ರಸಾರ ಮಂತ್ರಿಗಳು ನನ್ನ ಮಿತ್ರರಾದ ಆಯ್. ಕೆ. ಗುಜರಾಲ್ ಆಗಿದ್ದರು. ಒಂದೆರಡು ಸಂದರ್ಭಗಳಲ್ಲಿ ಧಾರವಾಡ ಆಕಾಶವಾಣಿ ಸುಧಾರಣೆಗಳ ಬಗ್ಗೆ, ಸ್ವತಃ ಎನ್ಕೆ ಅವರ ಗಾಂಧೀಗೀತದ ಬಗ್ಗೆ ಬರೆದಂತೆ ನೆನಪು.

ಎನ್ಕೆ ಕ್ರಮೇಣ ನಮ್ಮ ಕೌಟುಂಬಿಕ ಮಿತ್ರರೆ ಆದರು. ಒಮ್ಮೆ ನನ್ನ ಶ್ರೀಮತಿಯ

ಕೆಲವು ದಿಲ್ಲಿ ಸ್ಮೃತಿಗಳನ್ನು ಮನೆವರೆಗೂ ಬಂದು ಧ್ವನಿಮುದ್ರಿಸಿಕೊಂಡು ಪ್ರಸಾರ ಮಾಡಿದರು. ನನ್ನ ಶ್ರೀಮತಿ ಒಂದು ಸಂದರ್ಭದಲ್ಲಿ ಪಂಡಿತ ನೆಹರೂ ಅವರಿಗೆ ಮಾವಿನ ಹಣ್ಣನ್ನು ಹೆಚ್ಚದೆ ಹೇಗೆ ತಿನ್ನಬೇಕು ಎಂಬುದನ್ನು ಪ್ರಾತ್ಯಕ್ಷಿಕೆ ಮೂಲಕ ವಿವರಿಸಿದ ಸಂಗತಿ ಮೋಜಿನದೆನಿಸಿತ್ತು. ಅದೇ ರೀತಿ ರಂಗವಲ್ಲಿಯ ಹೊಸ ಹೊಸ ವಿಧಾನಗಳನ್ನು ಇಂದಿರಾಗಾಂಧಿಯವರು ಮೆಚ್ಚಿದ ಒಂದು ಪ್ರಸಂಗವೂ ಮನೋರಂಜಕ ವೆನಿಸಿತ್ತು.

ಹೀಗೆ ಎನ್ಕೆ ನಮ್ಮ ಮನೆಯ ಒಬ್ಬ ಬಂಧುವೆಂದೆ ನಾವು ಪರಿಗಣಿಸತೊಡಗಿದೆವು. ಎನ್ಕೆಯವರು ಬರೆದು ಬಿತ್ತರಿಸಿದ ಯಾವುದೆ ಕಾರ್ಯಕ್ರಮವನ್ನು ನಾವು ಕೇಳದೆ ಬಿಡುತ್ತಿರಲಿಲ್ಲ, ಅವರ 'ಗೃಹಗೋಷ್ಠಿ'ಯಂತೂ ನಮಗೆ ವಾರದ ರಂಜನೆಯಾಗಿ ರುತ್ತಿತ್ತು. ಎನ್ಕೆ ನಿವೃತ್ತಿ ಹೊಂದುವವರೆಗೂ ಅದನ್ನು ನಡೆಸಿದರು. ಅವರ ಕೊನೆಯ ಗೃಹಗೋಷ್ಠಿ ಕಾರ್ಯಕ್ರಮವನ್ನು ಕೇಳಿರದಿದ್ದ ನಾನು ಆಕಾಶವಾಣಿವರೆಗೂ ಹೋಗಿ ಕೇಳಿ ಬಂದೆ. ಅದೇ ಕೊನೆಯದೆಂದು ತಿಳಿದಾಗ ನನ್ನ ಮನಸ್ಸು ಹುರು ಹುರು ಆಯಿತು.

'ಸಂಯುಕ್ತ ಕರ್ನಾಟಕ'ದಲ್ಲಿ ಸ್ಥಿರ ಶೀರ್ಷಿಕೆಯಲ್ಲಿ ಬರುತ್ತಿದ್ದ ಎನ್ಕೆ ಅವರ 'ಜೇಡಿಕೆ ನೀಡಿಕೆ'ಯೂ ನಮಗೆ ನಗೆಗೆ ಆಹಾರವಾಗಿತ್ತು. ಪ್ರತಿ ರವಿವಾರದ ಬೆಳಗಿನ ಬುತ್ತಿ ಆಗಿತ್ತು ಆ ಅಂಕಣ. ಅದೇ ರೀತಿ ಅವರ 'ಕರ್ಮವೀರ'ದ ಲೇಖನಗಳೂ ಆಪ್ಯಾಯಮಾನವೆನಿಸಿದ್ದವು. 'ಎನ್ಕೆ' ಎಂಬ ಕತ್ತರಿಯಂತಹ ಅವರ ಸಹಿ ಕೂಡ ನಮಗೆ ಮೋಜಿನದೆನಿಸಿತ್ತು. ಇಷ್ಟು ಎನ್ಕೆ ಬಗ್ಗೆ ನಮ್ಮ ಆಸಕ್ತಿ ಬೆಳೆದಿತ್ತು.

ಎನ್ಕೆ ಆಗಾಗ ಮನೆಗೆ ಬಂದಾಗಲೆಲ್ಲ ತಮ್ಮ ಗೃಹಕೃತ್ಯಗಳನ್ನೂ ತಮ್ಮ ಬಾಳಿನ ಸಮಸ್ಯೆಗಳನ್ನೂ ನೋವು ನಲಿವುಗಳನ್ನೂ ಕುರಿತು ನನ್ನ ಮುಂದೆ ಚರ್ಚಿಸುತ್ತಿದ್ದರು. ಅವರ ಎರಡನೆಯ ಮಗ ಚಿ. ಮುರಲಿಯ ನಿರುದ್ಯೋಗ ಅವರಿಗೊಂದು ಪರಿಹಾರ ದೊರಕದ ಸಮಸ್ಯೆಯಾಗಿತ್ತು. , ಆಯ್. ಟಿ. ಆಯ್. ತರಬೇತಿ ಹೊಂದಿದ್ದ ಆತನಿಗೆ ನಾನು ನನ್ನ ಮಿತ್ರರೂ ಕಿರ್ಲೋಸ್ಕರ ಫ್ಯಾಕ್ಟರಿಯ ಚೇರ್‌ಮನ್‌ರೂ ಆಗಿದ್ದ ಭಿರಂಗಿ ಅವರನ್ನು ಕಂಡು ಅವನಿಗೊಂದು ಅವಕಾಶ ದೊರಕಿಸಿಕೊಡಬೇಕೆಂದು ಬಿನ್ನವಿಸಿದಾಗ ಭಿರಂಗಿಯವರು ನನ್ನ ಮಾತನ್ನು ಮನ್ನಿಸಿದರು. ಇದು ಅವರ ಉದಾರ ಗುಣಕ್ಕೆ ಸಾಕ್ಷಿ. ಅವರಿಂದಾಗಿ ಎನ್ಕೆ ಅವರ ಪುತ್ರ ಮುರಲಿಗೆ ಬದುಕಿನ ದಾರಿ ಬಿಡುಗಡೆ ಯಾದಂತಾಗಿ ಶೀಘ್ರದಲ್ಲಿಯೆ ಆತ ಚತುರ್ಭುಜನೂ ಆದ. ಇಂದಿಗೂ ಎನ್ಕೆ ನನ್ನನ್ನು ಕಂಡಾಗಲೆಲ್ಲ ಈ ಸಂಗತಿಯನ್ನು ಪದೇ ಪದೇ ನೆನೆಯುತ್ತಾರೆ. ಇವಕ್ಕೆಲ್ಲ ನಾನೇ ಕಾರಣ ಎಂದು ಅವರು ಹೇಳುತ್ತಾರೆ; ಹಾಗಲ್ಲ ಅದು ಮುರಲಿಯ ಒಳ್ಳೆಯ ನಶೀಬ ಎಂದು ನಾನು ಹೇಳುತ್ತೇನೆ.

ಇಂದಿಗೂ ಎನ್ಕೆ ಮತ್ತು ನಮ್ಮ ಸಂಪರ್ಕ ಅವಿಚ್ಛಿನ್ನವಾಗಿದೆ, ಆತ್ಮೀಯತೆಯಿಂದ ಕೂಡಿದೆ.

# ಬಾನುಲಿ ನಾಟಕಗಳಲ್ಲಿ ಎನ್ಕೆ

ಲೀಲಾ ಕೇಸರಿ

೧

ಎನ್ಕೆಯವರಿಗೂ ನನಗೂ ಪರಿಚಯವಾಗಿ ಈಗ್ಗೆ ಸುಮಾರು ೩೦ ವರ್ಷಗಳೇ ಸಂದಿವೆ. ಧಾರವಾಡದಲ್ಲಿ ಆಕಾಶವಾಣಿ ಸ್ಥಾಪನೆಯಾದ ೨-೩ ವರ್ಷಗಳಲ್ಲಿಯೇ ನಾನು ಅಲ್ಲಿ ಅನೌನ್ಸರ್ ಎಂದು ಕೆಲಸ ಮಾಡಲು ಆಗಾಗ ಹೋಗುತ್ತಿದ್ದೆ. ಪ್ರೋಗ್ರಾಮ್‌ಗಳಲ್ಲಿಯೂ ಭಾಗವಹಿಸುತ್ತಿದ್ದೆ– ಹೀಗಾಗಿ ಅಲ್ಲಿಯ ಸಿಬ್ಬಂದಿಯವರೆಲ್ಲರ ಪರಿಚಯವಾಗಿತ್ತು. ಆಗ ಟ್ರಾನ್ಸ್‌ಮಿಶನ್ ಅಸಿಸ್ಟಂಟ್ ಎಂದು ಕೆಲಸ ಮಾಡುತ್ತಿದ್ದ ಎನ್ಕೆ ಕುಲಕರ್ಣಿಯವರ ಪರಿಚಯವೂ ಆಗಿತ್ತು. ಆಗಾಗ ಸಹೃದಯತೆಯಿಂದ ಮಾತನಾಡಿಸುತ್ತಿದ್ದರು. ಅವರದು ಸರಳವಾದ ಚಿಕ್ಕ ಮಾತು. ಯಾವಾಗಲೂ ಹಸನ್ಮುಖಿ, ಮಾತಿನಲ್ಲಿ ತಿಳಿಹಾಸ್ಯ– ಆಕಾಶವಾಣಿಯಲ್ಲಿ ಎಲ್ಲರಿಗೂ ಬೇಕಾದ ಸ್ನೇಹಜೀವಿ.

ಒಂದು ದಿನ ನಾನು ಆಕಾಶವಾಣಿಗೆ ಹೋದಾಗ, ನನ್ನನ್ನು ಕರೆದು, "ಏನ್ರೀ ಕೇಸರಿಯವರೇ? ರೇಡಿಯೋದೊಳಗಂತೂ ನಾಟಕ ಮಾಡ್ತೀರಿ– ಈಗ ನಾವು ಸ್ಟೇಜಿನ ಮೇಲೆ ಒಂದು ಸಣ್ಣ ನಾಟಕ ಮಾಡಬೇಕಾಗ್ಯದ– ನೀವು ನಮ್ಮ ಜೋಡಿ ಆ ನಾಟಕದೊಳಗ ಭಾಗವಹಿಸಬೇಕು" ಎಂದು ಕೇಳಿದರು. ನನ್ನದು ಮೊದಲೇ ನಾಚಿಕೆಯ ಸ್ವಭಾವ– ಸ್ಟೇಜನ್ನು ಅಲ್ಲಿಯವರೆಗೆ ಎಂದೂ ಹತ್ತಿರಲಿಲ್ಲ— ಜನರ ಮುಂದೆ ಹೋಗಿ ಸ್ಟೇಜಿನ ಮೇಲೆ ನಿಂತುಕೊಳ್ಳುವದು ಹೇಗೆ? ನಾಟಕ ಮಾಡಿ ರೂಢಿಯೇ ಇಲ್ಲದ ನನಗೆ ನಾಟಕದ ಮಾತುಗಳನ್ನೆಲ್ಲ ನೆನಪಿಟ್ಟುಕೊಳ್ಳಲು ಶಕ್ಯವಾಗಬಹುದೇ? ವಿಚಾರ ಮಾಡುತ್ತಿದ್ದಂತೆಯೇ ಮೈ ಬೆವರಿತು. ಇಲ್ಲ ಸರ್... ನನಗೆ ಸಾಧ್ಯವಿಲ್ಲ. ನನಗೆ ನಾಟಕ ಮಾಡಿ ರೂಢಿ ಇಲ್ಲ ಎಂದೆ. "ಇನ್ನ ಶುರು ಮಾಡ್ರಿ. ನೀವೇನೂ ಹೆದರಬೇಕಾಗಿಲ್ಲ. ಅದೊಂದು ಸಣ್ಣ ನಾಟಕ— ರೆಡ್‌ಕ್ರಾಸಿನವರಿಗಾಗಿ ಮಾಡಬೇಕಾಗ್ಯದ ೧೫ ಮಿನಿಟಿನ ಒಂದು ಸಣ್ಣ ಏಕಾಂಕ" ಎಂದರು. 'ನನಗೆ ಸಾಧ್ಯವೇ ಇಲ್ಲ ಸರ್— ಸ್ಟೇಜ್ ಮ್ಯಾಲೆ ಹೋಗೋ ಧೈರ್ಯ ನನಗೆ ಇಲ್ಲೇ ಇಲ್ಲ; ಮತ್ತ, ಅಧೈರ್ಯದಿಂದ ಸ್ಟೇಜ್ ಮ್ಯಾಲೆ ಹೋದಾಗ ನಾಟಕದ ಮಾತೆಲ್ಲ ಮರೆತು ಹೋದ್ರ ಎಲ್ಲರಿಗೂ ತೊಂದರಿ' ಎಂದು ಉತ್ತರಿಸಿದೆ. ಅವರು "ಅಷ್ಟ್ಯಾಕ ಹೆದರ್ತೀರೀ? ನಾನೆಲ್ಲ ನಿಮಗ ತೊಂದ್ರಿ

ಆಗಷ್ಟಾಂಗ ನೋಡಿಕೊಳ್ತೀನಿ. ಮತ್ತ ನೀವು ಹೆದ್ರೂದಿಲ್ಲ ಅನ್ನೂ ಖಾತ್ರಿನೂ ನನಗದ' ಎಂದು ಸ್ವಲ್ಪ ಧೈರ್ಯ ತುಂಬಲು ಪ್ರಯತ್ನಿಸಿದರು. ಇನ್ನೂ ನಾನು ಹಿಂಜರಿಯು ತ್ತಿದ್ದೇನೆ ಎಂದು ತಿಳಿದಾಗ, 'ನಿಮಗ ನಾಟಕದೊಳಗ ಅಧ್ಯಕ್ಷರ ಪಾತ್ರ ಕೊಟ್ಟಬಿಡ್ತೇನಿ– ಟೇಬಲ್ ಮ್ಯಾಲೆ ನಿಮ್ಮ ಮಾತಿನ ಹಾಳಿ ಇಟ್ಕೊಳ್ಳಿಕ್ಕೆ ಬರ್ತದ. ನೀವು ನಿಮ್ಮ ಮಾತುಗಳ್ನ ನೋಡಿಕೊಂಡು ಹೇಳಿಬಿಡ್ರಿ' ಎಂದು ಹೇಳಿದಾಗ ಅಂಜುತ್ತಲೇ ನಿರ್ವಾಹ ವಿಲ್ಲದೆ ಒಪ್ಪಿಕೊಂಡೆ. ಹೇಳಿದಂತೆಯೇ ಎನ್ಕೆಯವರು ನನಗೆ ಅಧ್ಯಕ್ಷರ ಪಾತ್ರವನ್ನೇ ಕೊಟ್ಟು ನಾಟಕ ರಚಿಸಿದ್ದರು ! ಎನ್ಕೆ ಹಾಗೂ ಜಿ. ವಿ. ಹಿರೇಮಠ (ರೇಡಿಯೋ ಕಾಕಾ) ಇವರೊಡನೆ ಕೊನೆಗೂ ನಾನೂ ಭಾಗವಹಿಸಿ ನಗರಸಭೆಯ ಅಟ್ಟದ ಮೇಲೆ ಆ ನಾಟಕ ವನ್ನಾಡಿದಾಗ ಜನ ನಾಟಕವನ್ನು ಮೆಚ್ಚಿಕೊಂಡರು. ಈ ರೀತಿ ಅನನುಭವಿಕರಿಗೆ ಧೈರ್ಯ, ಪ್ರೋತ್ಸಾಹಗಳನ್ನು ಕೊಡುವದು ಎನ್ಕೆಯವರ ಸ್ವಭಾವ.

೨

ಎನ್ಕೆಯವರು ಬಾನುಲಿಗಾಗಿ ಬರೆದ ಹಲವಾರು ರೂಪಕಗಳೂ ನಾಟಕಗಳೂ ಬಹಳ ಜನಪ್ರಿಯವಾಗಿವೆ, ಮೆಚ್ಚಿಕೆ ಗಳಿಸಿವೆ. ಕೆಲವು ಪ್ರಶಸ್ತಿಗಳನ್ನೂ ಗಳಿಸಿವೆ. ಭಾಷೆ, ಸಾಹಿತ್ಯವಲ್ಲಿ ಪಾಂಡಿತ್ಯವನ್ನು ಪಡೆದಿರುವ ಅವರಲ್ಲಿ ನಾಟಕಗಳನ್ನು ರಸವತ್ತಾಗಿ ರೂಪಿಸುವ ಸಹಜ ಪ್ರತಿಭೆ ಇದೆ. ಅವರ ನಾಟಕಗಳಲ್ಲಿಯ ಪಾತ್ರಗಳು ಜೀವಕಳೆ ತುಂಬಿದವುಗಳು, ಸನ್ನಿವೇಶಗಳು ಕುತೂಹಲ ಕೆರಳಿಸುವಂಥವು. ಆಡುಭಾಷೆ, ಬಾನುಲಿಯ ತಂತ್ರಗಳನ್ನೆಲ್ಲ ಬಲ್ಲ ಅವರು ಅವುಗಳನ್ನೆಲ್ಲ ಬಳಸಿಕೊಂಡು ನಾಟಕಗಳನ್ನು, ರೂಪಕಗಳನ್ನು ಪರಿಣಾಮಕಾರಿಯಾಗಿ ಮಾಡುವಲ್ಲಿ ಯಶಸ್ವಿಯಾಗಿದ್ದಾರೆ. ಅವರು ನಾಟಕಗಳಿಗಾಗಿ ರೂಪಕಗಳಿಗಾಗಿ ಬಳಸಿದ ಕಥಾವಸ್ತುಗಳಲ್ಲಿ ವೈವಿಧ್ಯತೆಯಿದೆ. ಹಿಂದುಳಿ ದವರ ಉದ್ಧಾರದ ವಿಷಯವನ್ನು ಹಿಡಿದು, ಆಧುನಿಕ ವೈಜ್ಞಾನಿಕ ಸಂಶೋಧನೆಗಳೂ ಅವರ ನಾಟಕ ವಸ್ತುಗಳಾಗಿವೆ. ಕೇವಲ ಕೌಟುಂಬಿಕ ಸಮಸ್ಯೆಗಳು, ಜೀವನದ ಆಗು ಹೋಗುಗಳು ಮಾತ್ರ ನಾಟಕಗಳಿಗೆ ಕಥಾವಸ್ತುಗಳಾಗಬಹುದೆಂಬ ಸಾಮಾನ್ಯ ತಿಳುವಳಿಕೆ ಯನ್ನು ಹೋಗಲಾಡಿಸಿ ಅವರು ವೈದ್ಯಕೀಯ, ತಾಂತ್ರಿಕ ಸಾಧನೆಗಳ ಸುತ್ತಲೂ ರಸ ವತ್ತಾದ ನಾಟಕಗಳನ್ನೂ, ರೂಪಕಗಳನ್ನೂ ಹೆಣೆದಿದ್ದಾರೆ. 'ದಲಿತ ದುಂದುಭಿ' ಎಂಬ ಶಬ್ದ ಚಿತ್ರ, ದಲಿತ ವರ್ಗದ ಸಮಸ್ಯೆಗಳನ್ನು ಎತ್ತಿಕೊಂಡು ಬರೆದದ್ದಿದ್ದು, ಅದಕ್ಕೆ ೧೯೭೬ರಲ್ಲಿ ಆಕಾಶವಾಣಿಯ ಪ್ರಶಸ್ತಿ ದೊರಕಿದೆ.

'ತಿಂಗಳ ಲೋಕದ ಅಂಗಳಕೇರಿ' ಎಂಬ ರೂಪಕವಂತೂ ಕಿರಿಯರಿಂದ ಹಿಡಿದು ಹಿರಿಯರವರೆಗೂ ಎಲ್ಲರೂ ಮೆಚ್ಚಿದ ಕೃತಿ. ಚಂದ್ರಲೋಕದ ಮೇಲೆ ಪ್ರಥಮ ಮಾನ ವನ ಅವತಾರವಾದ ಸಂದರ್ಭದಲ್ಲಿ ಅಂದರೆ ಅಮೇರಿಕೆಯ ನೀಲ್ ಆರ್ಮಸ್ಟ್ರಾಂಗ ಅಪೋಲೊವ ಮೇಲೆ ಹೋಗಿ ಚಂದ್ರನ ಮೇಲೆ ತನ್ನ ಪ್ರಥಮ ಹೆಜ್ಜೆಯನ್ನು ಮೂಡಿಸುವ ಪ್ರಸಂಗವನ್ನು ವಸ್ತುವನ್ನಾಗಿ ಬಳಸಿಕೊಂಡು ಬರೆದ ಕಾವ್ಯಮಯ

documentary ರೀತಿಯ ಶಬ್ದಚಿತ್ರ. ಕೇಳುಗರನ್ನೆಲ್ಲ ಮೊದಲಿನಿಂದ ಕೊನೆಯ ವರೆಗೂ ಸೆರೆಹಿಡಿದಿಟ್ಟಿತ್ತು.

ಅಮೇರಿಕೆಯ ಕೇಪ್‌ಟೌನಿನಲ್ಲಿ ಕ್ರಿಶ್ಚನ್ ಬರ್ನಾರ್ಡ ಎಂಬ ಡಾಕ್ಟರ ಮೊದಲ ನೆಯ ಬಾರಿ ಹೃದಯದ ಕಸಿಯನ್ನು ಪ್ರಯೋಗಿಸಿ ವೈದ್ಯಕೀಯ ರಂಗದಲ್ಲಿ ವಿಕ್ರಮವನ್ನೇ ಸ್ಥಾಪಿಸುವ–ಕಸಿಹೃದಯದ ಪ್ರಥಮ ಶಸ್ತ್ರ ಚಿಕಿತ್ಸೆಯ ವಸ್ತುವನ್ನು ಆಧಾರವಾಗಿಟ್ಟು ಕೊಂಡು, ಎನ್ಕೆ ಅವರು 'ಕಸಿಹೃದಯದ' ಸುತ್ತ ಸುಂದರವಾದ ಒಂದು ಪ್ರಣಯಕತೆ ಯನ್ನು ಹೆಣೆದು 'ಕಸಿಹೃದಯ ಕಣ್ತೆರೆದಿತ್ತು' ಎಂಬ ನಾಟಕವಲ್ಲಿ ಎಲ್ಲರನ್ನೂ ಆಶ್ಚರ್ಯ ಗೊಳಿಸಿದ್ದಾರೆ. ಇದು ರಾಷ್ಟ್ರೀಯ ನಾಟಕವಾಗಿ ಆರಿಸಲ್ಪಟ್ಟು ೧೯೭೦ರಲ್ಲಿ ಭಾರತದ ಎಲ್ಲ ಭಾಷೆಗಳಲ್ಲಿಯೂ ಪ್ರಸಾರವಾಯಿತು. ಜನಮೆಚ್ಚುಗೆಯನ್ನು ಗಳಿಸಿತು. ಅಂತೆಯೇ ೧೯೭೦ರಲ್ಲಿ ಮತ್ತೊಮ್ಮೆ ರಾಷ್ಟ್ರೀಯ ಮಟ್ಟದಲ್ಲಿ ಬಿತ್ತರವಾಯಿತು. ಕಥಾವಸ್ತುವಾಗಿ ಕಳ್ಳಸಂತೆಯ ಸಮಸ್ಯೆಯೂ ಇವರ ಲಕ್ಷ್ಯದಿಂದ ಹೊರಗೆ ಉಳಿದಿಲ್ಲ– 'ಪಲ್ಲವಿ' ಎಂಬ ನಾಟಕವಲ್ಲಿ ಕಳ್ಳಸಂತೆ ಖದೀಮರ ವಾಮಪಂಥೀಯ ಚಟುವಟಿಕೆಗಳು ತುಂಬಾ ಮಾರ್ಮಿಕ ವಾಗಿ ಚಿತ್ರಿತವಾಗಿವೆ. ಇದು ರಾಷ್ಟ್ರೀಯ ನಾಟಕ ಮಾಲಿಕೆಯಲ್ಲಿ ಪ್ರಸಾರವಾದ ಎನ್ಕೆ ಯವರ ಎರಡನೆಯ ನಾಟಕ. ದೇಶದ ಎಲ್ಲಾ ಭಾಷೆಗಳಲ್ಲೂ ಅನುವಾದಗೊಂಡು ಪ್ರಸಾರವಾಗಿದೆ.

'ಪ್ರಾಣ ತುಂಬಿದ ಪಾತ್ರ' ಎಂಬ ಅವರ ಇನ್ನೊಂದು ನಾಟಕ ನಿಜವಾಗಿಯೂ ಕೇಳುಗರಿಗೂ ಪ್ರಾಣ ತುಂಬಿದ ನಾಟಕ- Six Characters in Search of an Author ಎಂಬ ವಿಲ್ ಪಿರ್ಯಾಂಡಲೋ ಅವರ ನಾಟಕದ ಕಲ್ಪನೆಯಿಂದ ಸ್ಫೂರ್ತಿ ಗೊಂಡು ಬರೆದುದು. "ನಾಟಕಕಾರನ ಮಾನಸ ಸೃಷ್ಟಿಯ ಪಾತ್ರಗಳಿಗೂ ಒಂದು ಸ್ವತಂತ್ರ ಅಸ್ತಿತ್ವ ಇದೆ. ಯಾವುದೇ ಪಾತ್ರವನ್ನು ಸತತವಾಗಿ ನಿರ್ವಹಿಸುವವರ ಮನಸ್ಸಿನ ಮೇಲೆ ಆ ಪಾತ್ರದ ಪ್ರಭಾವ ಅಚ್ಚಳಿಯದೆ ಉಳಿಯುತ್ತದೆ. ಅವರನ್ನೇ ಪರಿವರ್ತಿಸು ತ್ತದೆ, ಎಂಬುದು ನಾಟಕದ ನೆಲೆಗಟ್ಟು. ಈ ನಾಟಕವಲ್ಲಿ ಒಬ್ಬ ಸಂಸ್ಕಾರವಿಲ್ಲದ ರಂಗ ಕಲಾವಿದೆ ರಂಗದ ಮೇಲೆ ದಿನಾಲು ಒಳ್ಳೆಯ ಪಾತ್ರವನ್ನೇ ಅಭಿನಯಿಸುವ ಕಾರಣವಾಗಿ ಅವಳ ಜೀವನವೇ ಬದಲಾಗಿ ಆಕೆ ಸುಸಂಸ್ಕೃತಗಳಾಗಬಲ್ಲಳು ಎಂಬುದನ್ನು ಸಹಜವಾಗಿ, ಮನಮುಟ್ಟುವಂತೆ ತೋರಿಸಲಾಗಿದೆ.

'ಕವಿ ಚಿರಂಜೀವಿ' ಗದುಗಿನ ಭಾರತದಿಂದ ಮಹಾಕವಿ ಎಂದು ಸುಪ್ರಸಿದ್ಧನಾದ ಕುಮಾರವ್ಯಾಸನ ಬಗ್ಗೆ ಪ್ರಚಲಿತವಾಗಿರುವ ದಂತಕತೆಗಳನ್ನೂ, ಲೋಕಕತೆಗಳನ್ನೂ ಬಳಸಿಕೊಂಡು ಕುಮಾರವ್ಯಾಸನ ಜೀವನವನ್ನು ಚಿತ್ರಿಸಿದ ನಾಟಕ.

'ಬಿಡುಗಡೆಯ ಬೇಡಿ' ನಾಟಕವಲ್ಲಿ ಎನ್ಕೆಯವರು ಸ್ವಾತಂತ್ರ್ಯದ ತಾತ್ವಿಕ ಅರ್ಥ ವನ್ನು ಚರ್ಚಿಸಿದ್ದಾರೆ. 'ಸ್ವಾತಂತ್ರ್ಯ ಎಂದರೆ ಸ್ವೈರಾಚಾರವಲ್ಲ ಅದಕ್ಕೆ ಒಂದು ನಿಯಮ, ನಿಯತಿ ಇದೆ' ಎಂಬ ತಿರುಳನ್ನು ಒಂದು ಕೌಟುಂಬಿಕ ಚಿತ್ರಣದ ಮೂಲಕ ಸಾರಿದ್ದಾರೆ.

'ಒಂಟಿ ದನಿ' ಎಂಬ ತ್ರೈಮಾಸಿಕ ವಿಶೇಷ ನಾಟಕದಲ್ಲಿ ಒಬ್ಬ ನಿವೃತ್ತನಾಗುವ ಪ್ರಾಮಾಣಿಕ ವ್ಯಕ್ತಿ, ತನ್ನ ಆಫೀಸಿನಲ್ಲಿ, ಸಮಾಜವಲ್ಲಿ ನಡೆದ ಅನ್ಯಾಯಗಳ ವಿರುದ್ಧ ಬಂಡೆದ್ದು ಹೋರಾಡುವ ಚಿತ್ರಣ. ಕೊನೆಗೆ ಅವನ ಧ್ವನಿ– ಒಂಟಿದನಿಯಾದ್ದರಿಂದ ಯಾರಿಗೂ ಕೇಳುವದಿಲ್ಲ ಹಾಗೆಯೇ ಸಾಯುತ್ತದೆ— ಅಂದರೆ ಅವನಿಗೆ ಸಮಾಜದಲ್ಲಿಯ ಅನ್ಯಾಯವನ್ನು ಹೋಗಲಾಡಿಸಲು ಸಾಧ್ಯವಾಗುವದಿಲ್ಲ— ಸಾಯುತ್ತಾನೆ— "ಫಲಕ್ಕಿಂತ ಹೋರಾಟ ಮುಖ್ಯ" ಎಂಬುದೇ ಇದರ ಸಾರ.

೩

ಅವರು ಬರೆದ ಎರಡು ಬಾನುಲಿ ನಾಟಕಗಳಲ್ಲಿ ಭಾಗವಹಿಸುವ ಸದವಕಾಶ ನನಗೆ ಸಿಕ್ಕಿತ್ತು. ಎರಡೂ ಸಾಮಾಜಿಕ ನಾಟಕಗಳು, 'ರಕ್ಷಿತೆ' ಹಾಗೂ 'ಮಾತಾಯಿ' ತುಂಬಾ ಪರಿಣಾಮಕಾರಿ. ಮನದುಂಬುವ ನಾಟಕಗಳು, 'ರಕ್ಷಿತೆ'ಯಲ್ಲಿ ಇಂದು ಸಮಾಜದಲ್ಲಿ ದುರ್ಬಲವರ್ಗದ ಮೇಲೆ ನಡೆಯುತ್ತಿರುವ ದಬ್ಬಾಳಿಕೆ ಅತ್ಯಾಚಾರಗಳನ್ನು ಕುರಿತಾದ ಪ್ರಾಸಂಗಿಕ ಕಥಾವಸ್ತು. ಒಬ್ಬ ಹುಡಿಗೆ ಕಾಮುಕ ಜನರ ಬಲೆಗೆ ಬಿದ್ದು ಜೀವನದ ಕಠಿಣ ಸನ್ನಿವೇಶಗಳನ್ನು ಎದುರಿಸುತ್ತ ಅತ್ಯಾಚಾರಕ್ಕೆ ಬಲಿಯಾದಾಗ ಆಕೆಯ ಕೈಹಿಡಿಯಲು ಮುಂದಾದ ದಿಟ್ಟ, ಉದಾರ ಹೃದಯದ ಪೋಲಿಸ್ ಕಾನ್ಸಟೇಬಲ್‌ನ ತಾಯಿಯಾಗಿ ನನ್ನ ಪಾತ್ರ. ಹುಡಿಗೆ ಕಾಮುಕರ ಬಲಿಯಾಗುವ ಸನ್ನಿವೇಶ, ಕೊನೆಯ ದುರಂತದ ತಿರುವು ಇನ್ನೂ ಕಣ್ಣಿಗೆ ಕಟ್ಟಿದಂತಾಗಿದೆ. ನೆನೆಸಿಕೊಂಡಾಗ ಇನ್ನೂ ಮನಸ್ಸಿಗೆ ಖೇದವಾಗುತ್ತದೆ.

'ಮಾತಾಯಿ' ನಾಟಕೋತ್ಸವಕ್ಕಾಗಿ ಬರೆದ ವಿಶೇಷ ನಾಟಕ. ಮಕ್ಕಳಿಲ್ಲದ ಒಬ್ಬ ಹೆಣ್ಣುಮಗಳು ಅನಾಥ ಮಕ್ಕಳನ್ನೇ ತನ್ನ ಮಕ್ಕಳೆಂದು ಭಾವಿಸಿ ತೃಪ್ತಿಪಟ್ಟುಕೊಳ್ಳುವ ಆದರ್ಶವೇ ಈ ನಾಟಕದ ಜೀವಾಳ. ಪರರ ಮಕ್ಕಳಲ್ಲಿ ತನ್ನ ಮಕ್ಕಳನ್ನು ಕಾಣುವ ತ್ಯಾಗ ಔದಾರ್ಯಗಳ ಮೂರ್ತಿಮಂತ ಹೆಣ್ಣು. ನಾಟಕದ ನಾಯಕಿ ತ್ಯಾಗಜೀವಿ ಮಾತಾಯಿಯಾಗಿ ಪಾತ್ರವಹಿಸುವ ಹೊಣೆ ನನ್ನದಾಗಿತ್ತು. ನಾಟಕದಲ್ಲಿಯ ಸನ್ನಿವೇಶಗಳು, ಹೃದಯಕ್ಕೆ ತಟ್ಟುವ ಭಾಷೆ, ಚಿತ್ರಣ, ಪಾತ್ರವಹಿಸುವಾಗ ನನ್ನನ್ನು ಆ ಆದರ್ಶದ ಮಟ್ಟಕ್ಕೆ ಮುಟ್ಟಿಸಿದ್ದವು ಎಂದು ಹೇಳಿದರೆ ಅತಿಶಯೋಕ್ತಿಯೇನಲ್ಲ.

ಈ ನಾಟಕಗಳೆಲ್ಲ ಜನರ ಕೋರಿಕೆಯ ಮೇರೆಗೆ, ಈಗಾಗಲೇ ಎರಡು ಮೂರು ಬಾರಿ ಬಿತ್ತರಗೊಂಡಿವೆ. ಅವುಗಳನ್ನು ಕೇಳಿ ಬೇಸರಪಟ್ಟವರಿಲ್ಲ. ಕೇಳಿದಾಗೊಮ್ಮೆ ಅವು ಹೊಚ್ಚ ಹೊಸತಾಗಿದ್ದಂತೆಯೇ ಕೇಳುಗರಲ್ಲಿ ಆಸ್ಥೆಯನ್ನು ಹುಟ್ಟಿಸುತ್ತವೆ. ಅವರ ನಾಟಕಗಳು ಸದಾ ಜೀವಂತವಾಗಿರುವ ನಾಟಕಗಳಾಗಿರುವದರ ಒಳಗುಟ್ಟು ನನಗೆ ತಿಳಿದಂತೆ, ಅವರ ಸರಳ ಭಾಷೆ, ಸಹಜ ಶೈಲಿ, ತೀಕ್ಷ್ಣವಾದ ದೃಷ್ಟಿ, ಬಾಳಿನಲ್ಲಿ ಆಸಕ್ತಿ ಹಾಗೂ ಮಾನವಪ್ರೇಮ ಅವರ ನಾಟಕಗಳಿಗೆ ಹೆಚ್ಚಿನ ಮೆರುಗನ್ನು ಕೊಟ್ಟಿವೆ.

# ಎಸ್ಕೆ "ವೈನಿ" ನಾನು

**ಮನೋಜ್ ಪಾಟೀಲ**

"ಖರೇ ಹೇಳಬೇಕೆಂದರೆ ನನಗೆ 'ವೈನಿ' ಅವರೇ ಮೊದಲು ಗೊತ್ತು. ನಂತರ ಎಸ್ಕೆ."

ಬಿಂದಣ್ಣ ಪತ್ತಾರಿಯವರ ಕಲ್ಪನೆಯಲ್ಲಿ ನನ್ನ ಬದುಕನ್ನೂ ಅನುಭವಿಸಲು ಬಿಟ್ಟು ಇಬ್ಬರ ದಿನಚರಿ ಓದಿದಾಗ, ನನಗೂ ಬಿಂದಣ್ಣ ಮೆಟ್ರಿಕ್ ಪಾಸಾದ ವಯಸ್ಸೇ. ಆ ಸ್ನಿಗ್ಧ ಮನದಲ್ಲಿ ವೈನಿಯ ಪುಟಗಳು ಭದ್ರ ಅಚ್ಚೊತ್ತಿವೆ.

ಯಾವುದು ಎಷ್ಟು ರುಚಿ ? ಈ ಪ್ರಶ್ನೆಗೆ ಭೇದ ಮಾಡುವಂತಿಲ್ಲ. ಸುಂದರಕ್ಕನ ಅಕ್ಷಯ ಅಡುಗೆ ಅದು. ಮೊದಲ ತುತ್ತಿಗೂ ಅದೇ ಸವಿ ಕೊನೆಗೂ ಅಷ್ಟೆ.

ಜರದ ಟೊಪ್ಪಿಗೆಯ ಬಿಂದಣ್ಣ ಬೇಲೀಫನ ಹೆಗಲ ಮೇಲೆ ಕಂಡ ಪತ್ರಲಿ. ನಕಲಿ ಗ್ರಾಮಫೋನೋ ಪ್ಲೇಟ, ಮುರುಕಿಗೆ ಹಚ್ಚುವ ಸುವಾಸನೆಯುಳ್ಳ ರ್ಝಾಂಬರ್ ! ಬಿಂದಣ್ಣನ ಅಪ್ಪನ ಸಾವು ಹೊಂಬಳದ ಹಾದಿ...

ಮೊನ್ನೆ ಎಸ್ಕೆ ಅವರನ್ನು ಕಂಡಿದ್ದೆ. ಮತ್ತೆ 'ವೈನಿ'ಯನ್ನು ನಿನ್ನೆಯ ಕತ್ತಲಿನಿಂದ ಇಂದಿನ ಬೆಳಕಿಗೆ ಕರೆತಂದೆ ನೆನಪಿಸಿದೆ.

...ನಿಮ್ಮ ವೈನಿಯಲ್ಲಿ ಸಾವಿನ ಸರಮಾಲೆಗಳು ಬಹಳ.

'ನನಗೆ ಹದಿನಾಲ್ಕು ಆಗುವ ಮೊದಲೇ ಸಾವುಗಳು ಸಾಲುಗಟ್ಟಿ ಬಂದವು. ವಾರದಲ್ಲಿ ಮೂರು ಸಾವು...'

ಎಸ್ಕೆ ಹೀಗೆ ಹೇಳುವ ಮೊದಲು ಹಾಗೂ ನಂತರ ನಕ್ಕರು. ನಾನು ಪೆಚ್ಚಾದೆ. ಆ ನಗುವಿಗೆ ಏನು ಅರ್ಥ ಹಚ್ಚಬೇಕು ? ಬಿಂದಣ್ಣ ತನ್ನ ದಿನಚರಿಯಲ್ಲಿ ಹೇಳುತ್ತಾನೆ- 'ನನಗೆ ದುಃಖವಾಗಿದ್ದಾಗ ಕಣ್ಣಲ್ಲಿ ನೀರೇ ನನಗೆ ಬರುವದಿಲ್ಲವೆಂದು.'

'ವೈನಿ'ಯಲ್ಲಿಯ ಆ ಸಾವುಗಳು ! ಬಿಂದಣ್ಣನ ಅಪ್ಪ ವೈನಿಯ ಸಾವುಗಳು ಅದೆಷ್ಟು ಗಟ್ಟಿ ಆಗಿವೆ.

ನಮ್ಮ ಅವ್ವ ಸತ್ತಿದ್ದಳು. ಸಾವು ಅಂದರೇನು ನನಗೆ ಗೊತ್ತಿರಲಿಲ್ಲ. ಎಲ್ಲರೂ ಅಳುತ್ತಿದ್ದರು. ನಾನು ಅಳುವ ನಟನೆ ಮಾಡುತ್ತ 'ಅವ್ವನನ್ನು ಚಿವುಟಿದ್ದೆ. ಏಳವ್ವಾ ಎಲ್ಲರೂ ಯಾಕೆ ಅಳತಾರ ಕೇಳವ್ವಾ ಎಂದು ಮನಸ್ಸಿನಲ್ಲೇ ಅಂದಿದ್ದೆ.

ಎನ್ಕೆ ಮತ್ತೆ ನಕ್ಕರು. ನೀಲಕಂಠನ ನಗೆ ಅದು. ಆದರೆ ನನ್ನ ಕಣ್ಣು ಮಂಜಾಗಿದ್ದವು.

"ನಾನು ವೈನಿ ಬರೆಯುವಾಗ ಕಲ್ಪನೆ ಮಾಡುತ್ತೇನೆ ಅನಿಸಲಿಲ್ಲ. ಅವರ ಜಾಗೆಯಲ್ಲಿ ನನ್ನದೇ ಕಥೆ ಇತ್ತು. ಸ್ನಿಗ್ಧ ಮನಸ್ಸಿನಲ್ಲಿ ಭದ್ರವಾಗಿ ಊರಿದ್ದ ಘಟನೆಗಳ ಬೆಂಬಲವಿತ್ತು."

ಅದಕ್ಕಾಗಿಯೇ ಇರಬೇಕು 'ವೈನಿ' ಓದುವದಿಲ್ಲ, ಅನುಭವಿಸುತ್ತೇವೆ.

'ವೈನಿ' ಯಾಕಿಷ್ಟು ಹಿಡಿಸಿತು. ಕಥೆಯೇ ? ಅಲ್ಲೇನಿದೆ ಗಂಡ-ಹೆಂಡತಿ ಆಗಬೇಕಾದವರು ಅತ್ತಿಗೆ ಮೈದುನರಾಗುತ್ತಾರೆ ಅಷ್ಟೆ.

ವೈನಿಯ ಮೊದಲ ಆಕರ್ಷಣೆ ಅವುಗಳ ಪಾತ್ರಸೃಷ್ಟಿ ಸಂದರ್ಭ ಸನ್ನಿವೇಶಗಳ ಮುಂದುವರೆಯುವಿಕೆ ಹಾಗೂ ಜೀವಂತಿಕೆ.

ಇಲ್ಲಿ ಬಿಂದಣ್ಣ ನಾವೇ ಆಗಿರಬಹುದು. ಅವನ ವಿಚಾರ ಸಹ ಹೆಚ್ಚುಕಡಿಮೆ ನಮ್ಮಂತೆಯೇ. 'ಝಾಂಬರ್' ನೋಡಿ ಅವ ಮೆಚ್ಚಿದ್ದಾನೆ. ನಕಲಿ ರಿಕಾರ್ಡ ಕೇಳಿ ನಕ್ಕಿದ್ದಾನೆ. ರೇಡಿಯೋ ನೋಡಿ ಬೆಚ್ಚಿದ್ದಾನೆ. ಆದರೆ ಈಗಿನ ಕಾಲಕ್ಕೂ ಈ ಕಥೆಗೂ ಒಂದು ತಲೆಮಾರಿನ ಅಂತರವಿದೆ. ನೈತಿಕ ಮೌಲ್ಯಗಳು ಪ್ರಬಲವಾಗಿದ್ದ ವೇಳೆಯದು !

ಸರಳ ಸಾತ್ವಿಕ ಹುಡುಗ ಬಿಂದಣ್ಣ. ಪರದೇಶಿತನ ಅವನ ತುಂಬಲಾಗದ ದೌರ್ಬಲ್ಯ. ಆ ವಯಸ್ಸಿನಲ್ಲಿ ಅನಾಥರಾಗಿರುವವರ ಎಲ್ಲರ ವಿಚಾರಗಳನ್ನೂ ಬಿಂದಣ್ಣ ಪ್ರತಿನಿಧಿಸುತ್ತಾನೆ...'ತಲೆಗೆ ಎಣ್ಣೆ ಹಚ್ಚುವರಾರು ? ಉದ್ದಂಡ ಆಯುಷ್ಯವಂತನಾಗು ಅನ್ನುವರಾರು? ಆತ್ಮೀಯತೆಯಿಂದ ಬೆನ್ನ ಮೇಲೆ ಕೈಯಾಡಿಸುವರಾರು?'

ಬಿಂದಣ್ಣನ ಪರದೇಶಿತನ, ಅವನ ತುಂಬಲಾಗದ ದೌರ್ಬಲ್ಯ. ಆದರೆ ಇವಕ್ಕೆ ಜನರಿಂದ ಅವ ಕನಿಕರ ಅಪೇಕ್ಷಿಸಲಿಲ್ಲ. ವಾಸ್ತವವಾಗಿ ಜನ ಅವನನ್ನು ಕನಿಕರ ಕಣ್ಣುಗಳಿಂದಲೇ ಕಂಡಿದ್ದಾರೆ. ವೈನಿಯಂತೂ ಸರಿಯೇ ನಿರ್ಣಾಯಕ ಘಟ್ಟದಲ್ಲಿ ವತ್ಸಲೆ, ಮುಂಬೈಯಲ್ಲಿ ಮಿಸ್ ವತ್ಸಲಾ ದೇಸಾಯಿ... ಹೀಗೆ.

ಮತ್ತೆ ಎನ್ಕೆ ಚಿತ್ರಿಸಿದ ಆ ಧಾರವಾಡ. ಹಸಿರು ಮರಗಳ ಎದೆಯ ಮೇಲೆ ಎದ್ದು ನಿಂತ ಕರ್ನಾಟಕ ಕಾಲೇಜು. ಮಧ್ಯಾಹ್ನ ಬಾರಾಕ್ಕೆ ತೋಫು ಹಾರಿಸುವ ಕಾಲ. ಲೈನಬಜಾರದ ಪೇಡೆ, ಕೆಂಪು ಮಣ್ಣಿನ ಸವಾರಿ, ಟಾಂಗಾದವರ ಹರೇಮಿತನ....

ಧಾರವಾಡದ ಅನೇಕ ನಿನ್ನೆಗಳು ಅವರ ಮೆದುಳು ಬ್ಯಾಂಕಿನಲ್ಲಿ ಭದ್ರವಾಗಿವೆ. ವಿಷಯ ಚರ್ಚಿಸಿದಂತೆಲ್ಲ ಠೇವಣಿ ಬೆಳೆಯುತ್ತಿದೆ. ಎನ್ಕೆ ಅವರ ಜೊತೆಗೆ ಹರಟೆ ಹೊಡೆದಿದ್ದೇನೆ. ಎನ್ಕೆ, ಬೇಂದ್ರೆ ಅವರು ಹರಟುವದನ್ನು ಮೂಕನಾಗಿ ಕೇಳಿ ಅನುಭವಿಸಿ ಆನಂದಿಸಿದ್ದೇನೆ.

ಎಂಟು ವರ್ಷಗಳಿಂದಲೂ ಅವರನ್ನು ಕಾಣುತ್ತಲೇ ಇದ್ದೇನೆ. ಅವರು ನನಗೆ ಕಂಡ ಬಗೆಯನ್ನು ಅವರ ಭಾವದಲ್ಲೇ ಬರೆಯುವದಾದರೆ:

'ಬಿಸಿಲಿರಬೇಕು, ಎಮ್ಮಿಕೇರಿ ಗುಡ್ಡ ಏರುತ್ತಿರಬೇಕು. ಮಡಚಿದ ಛತ್ರಿ ಮೆತ್ತಗಾಗಿ ಮಗ್ಗುಲಲ್ಲಿ ಇರಬೇಕು. ಏರಿ ಇದ್ದರೇನು, ಇಳುಕಲಿದ್ದರೇನು ಶ್ವಾಸ–ಉಚ್ಛ್ವಾಸಗಳಲ್ಲಿ ಏರಿಳಿತಗಳಲ್ಲಿ ಮಾತನಾಡಿದನೆ ಬಾಯಿತುಂಬ ಹೊಳೆಯುವ ಹಲ್ಲು ಕಾಣಬೇಕು. ಜೌಲಾಗಿ ಕೂದಲು ಬಾಚಿರಬೇಕು. ಕುಲುಕುಲು ನಗುತ್ತ ಕ್ಷೇಮ ಸಮಾಚಾರ ಕೇಳಬೇಕು...'

ಯಾರೋ ಹೇಳಿದರಂತೆ ಎನ್ಕೆ ಅವರಿಗೆ ಎಪ್ಪತ್ತಂತೆ. ನನಗಂತೂ ಇದು ಶುದ್ಧ ಸುಳ್ಳು !!

# ಸಾಹಿತ್ಯವನ್ನು ಬದುಕಿರುವ ಎನ್ಕೆ

## ಪಾಟೀಲ ಪುಟ್ಟಪ್ಪ

ಹಿಂದೆ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಶ್ರೀರಂಗರು ಹಾಗೂ ಪ್ರೊಫೆಸರ್ ಅ. ತು. ಸಾಸನೂರರು ಕನ್ನಡ ವಿದ್ಯಾರ್ಥಿಗಳಿಗೆ ತಮ್ಮ ಪ್ರತಿಭೆ ಪಾಂಡಿತ್ಯ ಹಾಗೂ ಕನ್ನಡ ಪ್ರೇಮಗಳಿಂದ ಹುಚ್ಚು ಹಿಡಿಸಿದ್ದರು. ಇದು ೪೫ ವರ್ಷಗಳ ಹಿಂದಿನ ಮಾತು. ಕಾಲೇಜಿಗೆ ಓದಲು ಬಂದಿದ್ದ ಹೊಸ ವಿದ್ಯಾರ್ಥಿಯೊಬ್ಬನು ತಾನು ಬರೆದ ಒಂದು ನಾಟಕವನ್ನು ಪ್ರೊಫೆಸರ್ ಸಾಸನೂರರಿಗೆ ತೋರಿಸಿದ. ಅದನ್ನು ಓದಿ ನೋಡಿ ಮೆಚ್ಚುಗೆ ಮಾಡಿಕೊಂಡಿದ್ದ ಅವರು ಅದನ್ನು ಶ್ರೀರಂಗರ ಕಡೆಗೆ ಕೊಟ್ಟರು. ಅವರಿಗೆ ಕೂಡಾ ಆ ನಾಟಕ ತುಂಬಾ ಹಿಡಿಸಿತು. ಕಾಲೇಜಿನ ವಾರ್ಷಿಕೋತ್ಸವದಲ್ಲಿ ಆ ನಾಟಕವನ್ನೇ ಮಾಡುವುದೆಂದು ಅವರು ತೀರ್ಮಾನಿಸಿದರು.

'ಇಲೆಕ್ಷನ್' ನಾಟಕ, ರಂಗಭೂಮಿಯ ಮೇಲೆ ಭಾರೀ 'ಯಶಸ್ವಿ ಎನಿಸಿತು. ಅದನ್ನು ಬರೆದ ಅನಾಮಧೇಯ ನಾಟಕಕಾರ ಒಮ್ಮೆಲೇ ಕಾಲೇಜಿನ ವಿದ್ಯಾರ್ಥಿವೃಂದ ಕ್ಕೆಲ್ಲ ಪ್ರಖ್ಯಾತನೆನಿಸಿದ. ಯಾರ ಪರಿಚಯವೂ ಇಲ್ಲದಿದ್ದ ಎನ್ಕೆ ಕುಲಕರ್ಣಿಯವರನ್ನು ಆಗ ಎಲ್ಲರೂ ಪರಿಚಯ ಮಾಡಿಕೊಳ್ಳಬೇಕೆಂದರು. ಚುನಾವಣೆಯಲ್ಲಿ ಗೆದ್ದ ಅಭ್ಯರ್ಥಿಗೆ ಆದ ಅನುಭವ ಅವರಿಗೆ ಆಗಿದ್ದಿತು. ಬಡ ವಿದ್ಯಾರ್ಥಿಯೊಬ್ಬನಿಗೆ ಆದ ಈ ಅನುಭವವು ಲೋಕವಿಖ್ಯಾತ ಬರೆಹಗಾರನಿಗೆ ನೋಬೆಲ್ ಬಹುಮಾನ ಬಂದ ಅನುಭವಕ್ಕಿಂತ ಕಡಿಮೆ ಯಾದುದಾಗಿರಲಿಲ್ಲ.

ಆಗಿನ ಕರ್ನಾಟಕ ಕಾಲೇಜ ಬಹುದೊಡ್ಡ ಪರಿಣತಿಗಳ ಪ್ರತಿಭಾವಂತರ ಸ್ಪರ್ಧಾ ತ್ಮಕ ಕ್ಷೇತ್ರವೆನಿಸಿದ್ದಿತು. ಕರ್ನಾಟಕ ಕಾಲೇಜಿನಲ್ಲಿ ಒಬ್ಬನು ಯಶಸ್ಸು ಪಡೆದನೆಂದರೆ ಅವನು ಎಲ್ಲೆಡೆಗಳಲ್ಲಿಯೂ ಯಶಸ್ಸನ್ನು ಪಡೆಯಲೇಬೇಕು. ಅಲ್ಲಿಯ ಗ್ಯಾಲರಿ ಹಾಲಿ ನಲ್ಲಿ ಭಾಷಣ ಮಾಡಿ ಯಾವನಾದರೂ ಪಾರಾಗಿ ಬಂದರೆ ಅವನು ಎಲ್ಲೆಡೆಗಳಲ್ಲಿಯೂ ಪಾರಾಗಿ ಬರುತ್ತಾನೆ. ತಮ್ಮ ಬರೆಹದಿಂದ ಬೆಳಕಿಗೆ ಬಂದ ಎನ್ಕೆ ಕುಲಕರ್ಣಿಯವರು ತಮ್ಮ ಮಾತಿನ ಮೋಡಿಯಿಂದಲೂ ಜನ–ಮನವನ್ನು ಹಿಡಿದುಕೊಂಡಿದ್ದರು.

ಈ ಎನ್ಕೆಯವರು ಬಹುಶ್ರುತರು. ಸಮಯ ಸಂದರ್ಭ ವಿಷಯ ಯಾವುದೇ ಇರಲಿ ಅವುಗಳಿಗೆ ಸೂಕ್ತವೆನಿಸುವ ಮಾತಿನ ಚಾತುರ್ಯ ಮನಸ್ಸಿನ ಸಿದ್ಧತೆ ಹಾಗೂ

ವಿಷಯದ ಸಂಗ್ರಹ ಅವರಲ್ಲಿ ಯಾವಾಗಲೂ ಇದ್ದೇ ಇರುತ್ತದೆ. ಆಕಾಶವಾಣಿ ಶ್ರೋತೃಗಳಿಗೆ ಅವರ ಧ್ವನಿಯಷ್ಟು ಪರಿಚಯವಾದ ಧ್ವನಿ ಇನ್ನೊಂದಿಲ್ಲ. ಮಾತನಾಡಿದರೆ ಎಸ್ಕೆಯವರಂತೆ ಮಾತನಾಡಬೇಕು, ಮಾತನಾಡುವವರಿಗೆ ಎಸ್ಕೆಯವರಿಗೆ ಇರುವ ಧ್ವನಿ ಇರಬೇಕು ಎನ್ನುವ ಮಾತು ಆಕಾಶವಾಣಿ ಶ್ರೋತೃಗಳಲ್ಲಿ ವಾಡಿಕೆಯೆನಿಸಿದ್ದಿತು.

ಗದುಗಿನ ಒಂದು ಬಡ ಕುಟುಂಬದಿಂದ ಬಂದ ಅವರಿಗೆ ನಾಟಕದ ಗೀಳು ಬಾಲ್ಯದಿಂದಲೂ ಹಿಡಿದುಕೊಂಡಿದ್ದಿತು. ಶಿರಹಟ್ಟಿ ವಾಮನರಾಯರು, ಗರುಡ ಸದಾಶಿವರಾಯರು ಎಂದರೆ ಇವರಿಗೆ ಪಂಚಪ್ರಾಣ. ಬಾಲ್ಯದಲ್ಲಿ ಹುಡುಗರಿಗೆ ತಿನ್ನುಣ್ಣುವ ಚಟ ಇದ್ದರೆ ಇವರಿಗೆ ನಾಟಕ ನೋಡುವ ಹವ್ಯಾಸ. ಅವರು ತಮ್ಮ ಊಟ ಪಾಠವನ್ನಾದರೂ ತಪ್ಪಿಸಿಯಾರು ನಾಟಕವನ್ನು ತಪ್ಪಿಸಲಾರರು. ನಾಟಕದಲ್ಲಿದ್ದವರಿಗೆ ನಾಟಕದ ಮಾತುಗಳು ಎಷ್ಟರಮಟ್ಟಿಗೆ ಬರುತ್ತಿದ್ದವೋ ಏನೋ, ಎಸ್ಕೆಯವರಿಗೆ ಮಾತ್ರ ಅವೆಲ್ಲ ಕಂಠಪಾಠವಾಗಿದ್ದವು. ಆಕಸ್ಮಾತ್ತಾಗಿ ಆ ಕಂಪನಿ ನಾಟಕದವರು ಆಡುತ್ತಿದ್ದ ನಾಟಕಗಳೆಲ್ಲ ಸುಟ್ಟು ಹೋಗಿದ್ದರೂ, ಎಸ್ಕೆಯವರೊಬ್ಬರು ಇದ್ದರೆ ಸಾಕು, ಅವರು ಅವುಗಳನ್ನು ಬರೆದುಕೊಡುತ್ತಿದ್ದರು.

ಎಸ್ಕೆಯವರಿಗೆ ಹಾಡು ಕಟ್ಟುವುದು ಅವರ ಇನ್ನುಳಿದ ಹವ್ಯಾಸಗಳಲ್ಲಿ ಒಂದು. ಅವರ ಮನೆಯ ಹೆಣ್ಣುಮಕ್ಕಳು ಎಷ್ಟೋ ಸಮಾರಂಭಗಳಲ್ಲಿ ಇವರು ಕಟ್ಟಿದ ಹಾಡುಗಳನ್ನೇ ಹಾಡುತ್ತಿದ್ದರು. ಆ ಹಾಡುಗಳನ್ನು ಕೇಳಿದ ಬಾಲಕ ಎಸ್ಕೆ ಅವರಿಗೆ ಆಕಾಶವೇ ತಲೆಗೆ ಬಡಿದಂತಾಗುತ್ತಿತ್ತು. ಅವರಷ್ಟಕ್ಕೇ ಬಿಟ್ಟಿದ್ದರೆ ಎಸ್ಕೆಯವರು ನಾಟಕ ಕಂಪನಿ ಸೇರಿ ಒಬ್ಬ ನಟರಾಗುತ್ತಿದ್ದರು. ಬಡತನದ ಸ್ಥಿತಿ ಇದ್ದರೂ ಅವರ ಮನೆಯವರು ಅವರನ್ನು ಕಾಲೇಜು ಓದಲು ಧಾರವಾಡಕ್ಕೆ ಕಳಿಸಿದರು. ಅದು ಒಂದು ರೀತಿಯಿಂದ ಅವರ ಜೀವನಕ್ಕೆ ಹೊಸ ತಿರುವನ್ನು ತಂದುಕೊಟ್ಟಿತು.

ಅಲ್ಲಿ ಅವರು ಆ.ನ.ಕೃ., ಪಂಡಿತ ತಾರಾನಾಥ, ಬೇಂದ್ರೆ, ಶ್ರೀರಂಗ, ಪ್ರೊಫೆಸರ್ ಸಾಸನೂರ ಮೊದಲಾದವರಿಂದ ಪ್ರಭಾವಿತರಾದರು. ಅವರ ಸ್ನೇಹ ಬಳಗದಲ್ಲಿ ದ. ಬಾ. ಕು, ನಾಟ್ಯಾಚಾರ್ಯ ಶ್ರೀನಿವಾಸ ಕುಲಕರ್ಣಿ, ಮೇವುಂಡಿ ಮಲ್ಲಾರಿ ಮೊದಲಾದವರಿದ್ದರು. ಈ ಸ್ನೇಹಿತರು ಪ್ರತಿನಿತ್ಯವೂ ಬೇಂದ್ರೆಯವರ ಮನೆಗೆ ಹೋಗಿ, ಅಲ್ಲಿ ಅವರೆದುರು ತಮ್ಮ ಕವಿತೆ ಹೇಳಿ, ಅವರ ಕವಿತೆ ಕೇಳಿ ಬರುವುದು ವಾಡಿಕೆಯೆನಿಸಿದ್ದಿತು. ಗದ್ಯದಂತೆ ಪದ್ಯವು ತಮ್ಮದೆನಿಸಲಾರದೆಂದು ಎಸ್ಕೆಯವರಿಗೆ ಆಗಲೇ ಮನವರಿಕೆಯಾಯಿತು. ಬೇಂದ್ರೆಯವರೆದುರು ಅವರು ತಮ್ಮ ಪದ್ಯಗಳನ್ನು ಓದಿ ತೋರಿಸಿದಾಗ ಬೇಂದ್ರೆಯವರು ಆಡಿದ ಮಾತನ್ನು ಎಸ್ಕೆಯವರು ವಿನೋದದಿಂದ ಇಂದಿಗೂ ಸ್ಮರಿಸುತ್ತಾರೆ. ಇದರಲ್ಲಿಯೂ ಕೂಡಾ ಹಾಸ್ಯ ಪ್ರವೃತ್ತಿಯನ್ನು ಮನಗಾಣಬಹುದು. ಬೇಂದ್ರೆ ಹೇಳಿದ್ದರು : "ನೀನು ಹೀಗೆಯೇ ಪದ್ಯ ಬರೆಯುತ್ತ ಹೋಗು. ಅಂದರೆ ನಿನ್ನ ಗದ್ಯ ಸುಧಾರಿಸುತ್ತದೆ."

ತಮ್ಮ ಜೀವನವಲ್ಲಿ ಬಹಳಷ್ಟು ಕಹಿಯನ್ನು ಕಂಡಿರುವ ಎನ್ಕೆಯವರು ತಮ್ಮ ಓದುಗನಿಗೆ ಸವಿಯನ್ನೇ ಒದಗಿಸಿ ಕೊಟ್ಟಿದ್ದಾರೆ. ಬೇಂದ್ರೆಯವರಿಂದ ಬಹಳಷ್ಟು ಪ್ರಭಾವಿತರಾಗಿರುವ ಎನ್ಕೆಯವರು 'ಅಳು ನುಂಗಿ, ನಗು ಒಮ್ಮೆ' ಎಂಬ ತತ್ವದವರು. ಅವರ ಲೋಕಾನುಭವವು ಬಹು ವಿಸ್ತಾರವಾದುದು. ಅವರ ಅನಿಸಿಕೆಗಳು ನಿಜವಾದವುಗಳು. ಕೃತಕತೆ ಎನ್ನುವುದನ್ನು ಅವರು ಕಂಡರಿಯರು. ಅವರ ಮಾತು ಮನಸ್ಸು ಎರಡೂ ಒಂದೇ ಬಗೆಯಾದವುಗಳು. ಕೆಲವರ ಮನಸ್ಸಿನಲ್ಲಿರುವುದು ಅವರ ಮಾತಿನಲ್ಲಿ ಇರುವುದಿಲ್ಲ; ಅವರ ಮಾತಿನಲ್ಲಿ ಇರುವುದು ಅವರ ಮನಸ್ಸಿನಲ್ಲಿ ಇರುವುದಿಲ್ಲ. ಆದರೆ, ಎನ್ಕೆ ಅಪವಾದ ಎನ್ನುವಂಥ ಅಪರೂಪದ ವ್ಯಕ್ತಿ.

ಅವರು ಜನರನ್ನು ನಗಿಸಲೂ ಬಲ್ಲರು, ಅಳಿಸಲೂ ಬಲ್ಲರು. ಎಷ್ಟಾದರೂ ಅವರು ಕುಮಾರವ್ಯಾಸನ ಸೀಮೆಗೆ ಸೇರಿದವರು. ಹಲಗೆ ಬಳಪವ ಹಿಡಿಯದ ಸಹಜತೆಯಿಂದ ಕಾವ್ಯ ರಚನೆಯು ಕುಮಾರವ್ಯಾಸನಿಗೆ ಬಂದಂತೆ, ಜನರನ್ನು ಅಳಿಸುವುದು ನಗಿಸುವುದು ಎನ್ಕೆಯವರಿಗೆ ಅಷ್ಟೇ ಸಹಜವಾಗಿ ಅಷ್ಟೇ ಸುಲಭವಾಗಿ ಬಂದಿವೆ.

ಅವರ ಲೇಖನಿಯಿಂದ ಕಾದಂಬರಿಗಳು—ಕಥೆಗಳು, ಹರಟೆಗಳು, ಪ್ರಬಂಧಗಳು, ನಾಟಕಗಳು ಹರಿದು ಬಂದಿವೆ. ಸಾಮಾನ್ಯವಾಗಿ ಒಳ್ಳೆಯ ಲೇಖಕರು ಒಳ್ಳೆಯ ವಿಮರ್ಶಕರಾಗಿರುವುದಿಲ್ಲ. ಆದರೆ, ಎನ್ಕೆಯವರು ವಿಮರ್ಶೆಯಲ್ಲಿಯೂ ಎತ್ತಿದ ಕೈ ಎನಿಸಿದ್ದಾರೆ. ಅವರು ಬೇಂದ್ರೆಯವರಿಂದ ಕಾವ್ಯದೃಷ್ಟಿಯನ್ನೂ ಶ್ರೀರಂಗರಿಂದ ನಾಟಕ ದೃಷ್ಟಿಯನ್ನೂ ಸಾಸನೂರರಿಂದ ವಿಮರ್ಶಾದೃಷ್ಟಿಯನ್ನೂ ಪಡೆದುಕೊಂಡಿದ್ದಾರೆ. ಅವರ ವಕ್ತೃತ್ವದಲ್ಲಿ ಅ.ನ.ಕೃ. ಅವರ ಬಹುಶ್ರುತತ್ವ ಕಾಣುತ್ತದೆ. ಆದರ್ಶಗಳನ್ನು ಮೆಚ್ಚುವ ಹಾಗೂ ಆದರ್ಶವಾದಿಗಳಿಗೆ ಮಾರುಹೋದ ಅವರು ವಿಶಾಲವಾದ ದೃಷ್ಟಿಯನ್ನು ಇರಿಸಿಕೊಂಡು ಬೆಳೆದು ಬಂದಿದ್ದಾರೆ. ಎನ್ಕೆಯವರ ಸಹವಾಸದಲ್ಲಿ ಬಂದವರಿಗೆಲ್ಲ ಈ ಮಾತು ಅನುಭವವಾಗಿದೆ. ಅವರು ಪೆಚ್ಚು ಮುಖ ಹಾಕಿಕೊಂಡದ್ದನ್ನು ಯಾರೂ ಕಂಡವರೇ ಇಲ್ಲ.

ಬಹುಶಃ ಕನ್ನಡ ನಾಡಿನಲ್ಲಿ ಎನ್ಕೆಯವರು ಕಂಡಷ್ಟು ಪ್ರತಿಭಾವಂತರನ್ನು ಸಮೀಪದಿಂದ ಕಂಡು, ಅವರ ಪರಿಚಯ ಮಾಡಿಕೊಂಡವರು ಯಾರೂ ಇಲ್ಲ. ಅವರಲ್ಲಿ ಅವರೆಲ್ಲರ ಧ್ವನಿಗಳು, ಅನಿಸಿಕೆಗಳು, ವಿಚಾರಗಳು ತುಂಬಿಕೊಂಡಿವೆ. ಯಾರನ್ನೇ ಕಂಡರೂ ಅವರು, ಅವರನ್ನು ವಿಶ್ವಾಸದಲ್ಲಿ ತೆಗೆದುಕೊಳ್ಳುತ್ತಾರೆ. ಸ್ನೇಹಿತರನ್ನು ಮಾಡಿಕೊಳ್ಳುವ ಮುಖ, ಮಾತು ಹಾಗೂ ಮನಸ್ಸನ್ನು ಅವರು ಪಡೆದುಕೊಂಡು ಬಂದಿದ್ದಾರೆ. ತಮಗೆ ಎಷ್ಟೇ ನೋವಾಗಿರಲಿ, ಆ ನೋವನ್ನು ತಮ್ಮ ಮನಸ್ಸಿನಲ್ಲಿಯೇ ನುಂಗಿಕೊಂಡು ಅವರು ಮುಖದ ಮೇಲೆ ನಗೆಯನ್ನು ತೇಲಿಸುತ್ತಾರೆ.

ನಮ್ಮ ನಾಡಿನ ವೈಚಿತ್ರ್ಯ ಏನೆಂದರೆ, ಕಡಿಮೆ ದರ್ಜೆಯ ಪ್ರತಿಭೆಗಳು ಮನ್ನಣೆಯನ್ನು ಪಡೆಯುತ್ತವೆ. ಇದು, ಒಂದು ದೃಷ್ಟಿಯಿಂದ ಚಲಾವಣೆಯ ನೀತಿಯನ್ನು

ತೋರಿಸಿಕೊಡುತ್ತದೆ. ಕೆಟ್ಟ ನಾಣ್ಯವು, ಒಳ್ಳೆಯ ನಾಣ್ಯವನ್ನು ಚಲಾವಣೆಯಿಂದ ಓಡಿಸುತ್ತದೆ ಎಂದು ಹಣಕಾಸಿನ ಶಾಸ್ತ್ರದಲ್ಲಿ ಹೇಳಿದೆ. ಎಸ್ಕೆಯವರಂಥ ನಿಜವಾದ ಪ್ರತಿಭಾವಂತರನ್ನು ನಮ್ಮ ನಾಡು ಇನ್ನೂ ಗೌರವಿಸಬೇಕಾಗಿದೆ.

ಎಸ್ಕೆಯವರು ಒಳ್ಳೆಯ ಲೇಖಕರು, ಒಳ್ಳೆಯ ನಾಟಕಕಾರರು, ಒಳ್ಳೆಯ ವಕ್ತೃಗಳು, ಒಳ್ಳೆಯ ವಿಮರ್ಶಕರು ಮಾತ್ರವಲ್ಲದೆ, ಒಳ್ಳೆಯ ಪಂಡಿತರೂ ಆಗಿದ್ದಾರೆ. ಕುಮಾರವ್ಯಾಸನನ್ನು ಕುರಿತು ಅವರು ಬರೆದ ಬೃಹತ್ ಪ್ರಬಂಧವು ಕುಮಾರವ್ಯಾಸನ ಕಾವ್ಯದ ಮೇಲೆ ಬಹಳಷ್ಟು ಹೊಸ ಬೆಳಕನ್ನು ಚೆಲ್ಲಿದೆ. ವಿಶ್ವವಿದ್ಯಾಲಯಗಳಿಂದ ಪಿಎಚ್. ಡಿ.ಗೋಸುಗ ಸ್ವೀಕೃತವಾಗಿರುವ ಸಾಮಾನ್ಯ ದರ್ಜೆಯ ಪ್ರಬಂಧಗಳಿಗಿಂತಲೂ ಎಸ್ಕೆಯವರ ಕೃತಿಯು ಸಾವಿರ ಪಾಲು ಮಿಗಿಲೆನಿಸಿದೆ. ನಿಜವಾದ ಪ್ರತಿಭೆಯನ್ನು ಹಾಗೂ ಪಾಂಡಿತ್ಯವನ್ನು ಮೆಚ್ಚುವ ವಿಶ್ವವಿದ್ಯಾಲಯಗಳು ರಾಜ್ಯದಲ್ಲಿ ಇದ್ದಿದ್ದರೆ ಅವು ಎಸ್ಕೆಯವರನ್ನು ಕರೆದು ಗೌರವ ಪದವಿ ಕೊಟ್ಟು ಸನ್ಮಾನಿಸುತ್ತಿದ್ದವು.

ಧೃತರಾಷ್ಟ್ರನಂತೆ ಕಣ್ಣು ಮುಚ್ಚಿಕೊಂಡಿರುವ ಸಾಹಿತ್ಯ ಪ್ರಪಂಚವು ಕಣ್ತೆರೆದು, ನಿಷ್ಪಕ್ಷಪಾತ ದೃಷ್ಟಿಯಿಂದ ನೋಡಿದರೆ, ತಮ್ಮ ಮನ್ನಣೆ ಸಲ್ಲಬೇಕಾದ ನಿಜವಾದ ಪ್ರತಿಭೆ ಇಲ್ಲಿ ಇದೆಯೆಂದು ಅದು ಎಸ್ಕೆಯವರ ಕಡೆಗೆ ಬೆರಳು ಮಾಡಿ ತೋರಿಸುತ್ತದೆ. ಎಂಥೆಂಥವರೋ ಇರುವ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ತಮ್ಮ ವಿಶಿಷ್ಟಗಾರಿಕೆ ಇರಿಸಿಕೊಂಡಿರುವ ವ್ಯಕ್ತಿ ಎಸ್ಕೆಯವರೊಬ್ಬರೇ. ಅವರ ಜೀವನ ದೃಷ್ಟಿ ಇರಿಸಿಕೊಂಡ ಬರೆಹಗಾರ ಬದುಕುವ ದೃಷ್ಟಿಯನ್ನು ಜನರಿಗೆ ನೀಡುತ್ತಾನೆ.

# ಗೌರವೋಕ್ತಿ

## ಬಿ. ಪಿ. ಭಟ್

ನನ್ನ ಜೀವನದ ದೈನಂದಿನ ಚಟುವಟಿಕೆಗೆಳಲ್ಲೂ ಆಗಾಗ ನನಗೆ ಭವಿಷ್ಯವಾಣಿ ಕೇಳಿಸಿದೆ : ಒಂದು ಕ್ಷಣದ ನೋಟ, ಒಂದು ಸಂಜ್ಞೆ, ಉದ್ದೇಶವಿಲ್ಲದೆ ಉಚ್ಚರಿಸಿದ ಒಂದು ಮಾತು, ಇಲ್ಲವೆ ಯಾವುದೋ ಗೀತದ ಯಾವುದೋ ಚರಣ ಮುಂದಾಗುವ ದನ್ನು ಒಡನುಡಿಸಿದೆ. ೧೯೫೨ರಲ್ಲಿ ಎನ್. ಕೆ. ಕುಲಕರ್ಣಿ ಅವರು ಮಾಮಾವರೇರ ಕರರ ಒಂದು ಪತ್ರದೊಂದಿಗೆ ನನ್ನನ್ನು ಪ್ರಥಮತಃ 'ಆಫೀಸಿಯಲ್' ಆಗಿ ಕಂಡಾಗಲೂ ಇದೇ ಅನುಭವ. ಆಕಾಶವಾಣಿಯ ಅವರ ನೌಕರಿಯ ಸಮಸ್ಯೆಯನ್ನು ಕುರಿತುದಾಗಿತ್ತು ಆ ಪತ್ರ. ಐದು ನಿಮಿಷಗಳ ಆ ಒಂದು ಭೆಟ್ಟಿ ಸ್ವಾಭಾವಿಕವಾಗಿಯೇ ಔಪಚಾರಿಕ ಸ್ವರೂಪದ್ದಾಗಿತ್ತು. ಸಭ್ಯ, ಸೌಮ್ಯ ಮಾತಿನ ಸ್ವಲ್ಪ ಸಂಕೋಚವೃತ್ತಿಯ ತರುಣ; ಚಿಂತನಶೀಲವಾದ ಮುಖ, ದೂರದಾಚೆಗೆ ದೃಷ್ಟಿಯನ್ನು ಬೀರುತ್ತ ಆತ ನನ್ನ ಸುಪ್ತ ಪ್ರಜ್ಞೆಯ ಯಾವುದೋ ಒಂದು ಸ್ವರದಲ್ಲಿ ತರಂಗಗಳನ್ನೆಬ್ಬಿಸಿದ. ನನ್ನ ಮನಸ್ಸು ಆತನ ಬಗ್ಗೆ ಸ್ಪಂದಿಸತೊಡಗಿತು. ಆ ಭೆಟ್ಟಿಯ ಕೊನೆಗೆ ನಾನು ಆತನಿಗೆ ಸಹಾನುಭೂತಿ ತೋರಿದೆ; ಸಹಾಯದ ಆಶ್ವಾಸನೆ ನೀಡಿದೆ. ಆತ ಹೊರಟುಹೋದ. ಎರಡು ದಿನಗಳ ತರುವಾಯ ವರೇರಕರರು ಕುಲಕರ್ಣಿಯವರನ್ನು ಈ ಸಮಸ್ಯೆಯನ್ನು ಕುರಿತು ನನ್ನ ಅಭಿಪ್ರಾಯ ಕೇಳಿವರು. "ಮಾಮಾ, ಈ ಎ.ಐ.ಆರ್. ಅವರಿಗೆ ಯೋಗ್ಯಸ್ಥಳವಲ್ಲ. ಏ.ಐ.ಆರ್.ನ ಶಬ್ದಬ್ರಹ್ಮದ ವೇಗದ ತೀವ್ರತೆಯಲ್ಲಿ ಅವರು ಕಂಗಾಲಾಗಿ ಹೋಗ ಬಹುದು," ನಾನು ಹೇಳಿದೆ. ಮಾಮಾ ತಮ್ಮ ವೈಶಿಷ್ಟ್ಯಪೂರ್ಣವಾದ ನಗೆಯೊಂದಿಗೆ "ನಿಜ– ನೀವು ನುಡಿದದ್ದು ಸರಿಯೇ ಇರಬೇಕು. ಆದರೆ ಈತ ನಾಳೆ ದೊಡ್ಡ ಬರೆಹ ಗಾರನಾಗುವನೆಂಬಲ್ಲಿ ಸಂಶಯವಿಲ್ಲ. ದುರ್ದೈವದ ಸಂಗತಿಯೆಂದರೆ ಉಪಜೀವನದ ಸಲುವಾಗಿ ಆತ ಹೋರಾಡಬೇಕಾಗಿದೆ" ಅವರು ಮಾತು ಮುಂದುವರಿಸುವ ಮೊದಲೇ "ನಾನವರಿಗೆ ಸಹಾಯವನ್ನಂತೂ ಖಂಡಿತ ಮಾಡುತ್ತೇನೆ" ಎಂದೆ. ನನ್ನ ಉತ್ತರದಿಂದ ಮಾಮಾ ಅವರಿಗೆ ಸಂತೋಷವಾದಂತೆ ತೋರಿತು.

ಆ ಕಾಲಕ್ಕೆ ನಾನು ಸ್ಟೇಶನ್ ಡೈರೆಕ್ಟರ್ ಆಗಿದ್ದೆ. ಶಿಸ್ತಿಗೆ ಬೆಲೆ ಇದ್ದ ಕಾಲವದು. ನನ್ನ ಮತ್ತು ನನ್ನ ಸಹೋದ್ಯೋಗಿಗಳ ನಡುವೆ ವಾಡಿಕೆಯ ಅಂತರವಿತ್ತು. ಅಂತೂ ಎಸ್. ಕೆ. ಕುಲಕರ್ಣಿ ಅವರ ಸಮಸ್ಯೆ ಸಮಾಧಾನಕರವಾಗಿ ಬಗೆಹರಿದಿತ್ತು. ಮುಂದೆ ಎಷ್ಟೋ ವರುಷಗಳವರೆಗೆ ಅವರ ನೌಕರಿ ಮುಂದರಿದಿತ್ತು. ನಾನು ಧಾರವಾಡಕ್ಕೆ ಹೋದಾಗ, ದಿಲ್ಲಿಯಲ್ಲಿದ್ದಾಗ ಅವರು ನನ್ನನ್ನು ಭೆಟ್ಟಿ ಆಗಿರಬೇಕೆಂದು ತೋರುತ್ತದೆ. ಇಷ್ಟು ಸಮೀಪ, ಆದರೂ ಎಷ್ಟು ದೂರ–ಎಂಬ ಭಾವನೆ ನಮ್ಮಿಬ್ಬರಲ್ಲೂ ಇತ್ತು. ಪ್ರತಿಯೊಂದು ಘಟನೆ, ಪ್ರತಿಯೊಂದು ಆಗುಹೋಗು, ಪ್ರತಿಯೊಂದು ಭೆಟ್ಟಿ ಫಲಕಾರಿ ಆಗಬೇಕಾದರೆ ಪೂರ್ವ ಸಂಕಲ್ಪಿತ ಕಾಲ ಬರಬೇಕೆಂದು ನನ್ನ ನಂಬುಗೆ. ಹೀಗೆ ಎಷ್ಟೋ ವರುಷಗಳು ಉರುಳಿದವು. ನಮ್ಮ ಜೀವನ ಪ್ರವಾಹಗಳು ಸಮಾಂತರವಲ್ಲಿ ಪ್ರವಹಿಸತೊಡಗಿ ಎಲ್ಲೋ ಅಪರೂಪವಾಗಿ ಒಂದರ ಅಂಚನ್ನು ಇನ್ನೊಂದು ತಾಗುತ್ತಿತ್ತು.

ಒಮ್ಮೆ ದಿಲೀಪಕುಮಾರ ರಾಯ್ ಅವರ ಧ್ವನಿಯಲ್ಲಿ ಒಂದು ಮೋಹಕತೆ ಇರುವುದನ್ನು ಕಂಡು ಅವರು ಭಕ್ತಿಗೀತಗಳನ್ನು ಪ್ರಸಾರ ಮಾಡುವಂತೆ ಮನವೊಲಿಸಿದಾಗ–ನನಗೊಂದು ಪ್ರಶ್ನೆ ಹಾಕಿದರು–"ಸೋದರ, ನೀವು ಪವಾಡಗಳನ್ನು ನಂಬುತ್ತೀರಾ ?" ಎಂದು. ರಾಯ್ ಅವರ ಬಗ್ಗೆ ನಾನು ತಾಳಿದ ಅಪಾರ ಪ್ರೇಮದಿಂದಾಗಿ ಪಾರಲೌಕಿಕ ವಿಷಯಗಳನ್ನು ಕುರಿತು ಚರ್ಚೆ ನಡೆಸುವ ಸಲುಗೆಯನ್ನು ನಾನು ಪಡೆದುಕೊಂಡಿದ್ದೆ. ಸ್ವಲ್ಪ ಹೊತ್ತು ಮೌನ ತಾಳಿ, ನಾನು ಅವರ ಪ್ರಶ್ನೆಗೆ–"ಓಹೋ, ಅವಶ್ಯ ನಂಬುತ್ತೇನೆ. ಸ್ವತಃ ನಾನೇ ನನ್ನ ಜೀವಮಾನದಲ್ಲಿ ಕೆಲವೊಂದು ಪವಾಡಗಳನ್ನು ಪ್ರತ್ಯಕ್ಷ ಕಂಡಿದ್ದೇನೆ. ಇದುವರೆಗೂ ಅವಕ್ಕೊಂದು ಬೌದ್ಧಿಕ ಅರ್ಥ ಹಚ್ಚುವುದು ನನಗೆ ಸಾಧ್ಯವಾಗಿಲ್ಲ" ಎಂದು ಉತ್ತರಿಸಿದೆ. ಆಮೇಲೆ ಅವರು ಈ ವಿಲಕ್ಷಣ ಅದ್ಭುತದ ಮಹತ್ವವನ್ನೂ, ಕಾರಣವನ್ನೂ ಕುರಿತು ವಿವರಿಸಿದರು. ಈ ನಮ್ಮ ಆತ್ಮೀಯ ಮಾತು–ಕಥೆಯನ್ನು ನಾನಿಲ್ಲಿ ಸ್ಮರಿಸುವ ಉದ್ದೇಶವೆಂದರೆ ಇಂಥದೊಂದು ಪವಾಡಾತ್ಮಕ ಘಟನೆ ನಾನು ನಿವೃತ್ತಿ ಹೊಂದಿದ ಮೇಲೆ ನಡೆದು ಹೋಯಿತು. ಒಂದು ಸುಂದರ ಸುಪ್ರಭಾತದಲ್ಲಿ ಕುಲಕರ್ಣಿ ಅವರಿಂದ ಒಂದು ಖಾಸಗಿ ಪತ್ರವು ತನ್ನ ಪ್ರೀತಿ, ಆತ್ಮೀಯತೆಗಳಿಂದ ನನ್ನನ್ನು ಬಡಿದೆಬ್ಬಿಸಿತು. ನಮ್ಮ ನಡುವಿನ ಅಡ್ಡಗೋಡೆಗಳೆಲ್ಲಾ ಕಡಿದುಕೊಂಡು ಬಿದ್ದವು. ಆ ಒಂದು ಪತ್ರ ನಮ್ಮನ್ನು ಬದಲೀ ಮನುಷ್ಯರನ್ನಾಗಿ ಮಾಡಿತ್ತು. ಅವರು ಈ ಅನುಭವ ಒಂದು 'ಪುನಃಶೋಧನೆ' ಎಂದು ಕರೆದರು. ಆ ತರುವಾಯ ನಮ್ಮಿಬ್ಬರ ನಡುವೆ ವೈಯಕ್ತಿಕ ಪತ್ರ ವ್ಯವಹಾರ ಪೂರ ಬಂದ ಪ್ರವಾಹದಂತೆ ಸಾಗಿದೆ. ಅವರ ಒಕ್ಕಣೆ, ಅವರ ಆಳ ಎರಡೂ ಅಮೌಲ್ಯ. ಆಗಿನಿಂದ ಅವರು ನನಗೆ 'ಎಸ್ಕೆ' ಆದರು. ಈ ಹೊತ್ತಿಗಾಗಲೆ ಅವರು ಸತ್ವಶಾಲಿ ಲೇಖಕರೆಂದು ಖ್ಯಾತಿ ಪಡೆದಿದ್ದರು. ಕನ್ನಡ ಸಾಹಿತ್ಯವಲ್ಲಿ ತಮ್ಮದೊಂದು ಸ್ಥಾನವನ್ನು ಗಳಿಸಿಕೊಂಡಿದ್ದರು.

ಬಾನುಲಿ ಬರೆವಣಿಗೆಯೆಂದರೆ ಒಂದು ವಿಶಿಷ್ಟ ಪರಿಣತಿಯ ಕಲೆ. ಎಲ್ಲ ಲೇಖಕರೂ ಪ್ರಸಾರ ಯೋಗ್ಯವಾದ ಸಾಹಿತ್ಯವನ್ನು ನಿರ್ಮಿಸಲಾರರು–ಭಾಷಣವೇ ಇರಲಿ, ನಾಟಕವೆ

ಇರಲಿ, ರೂಪಕವೇ ಇರಲಿ. ಎನ್ಕೆ ರೇಡಿಯೊ ನಾಟಕ, ರೂಪಕಕಾರರೆಂದು ಹೆಸರು ಮಾಡಿದವರು. ಅವರ ಕುಶಲ ಕೈಗಳಲ್ಲಿ ಒಂದು ಪ್ರಾಸಂಗಿಕ ವಸ್ತು ಕೂಡ ಶಾಶ್ವತ ಆಸಕ್ತಿಯ ಒಂದು ಸಾಹಿತ್ಯ ಕೃತಿಯಾಗಿ ಅರಳುತ್ತದೆ–ಅದು ಹೃದಯದ ಕಸಿಗೆ ಸಂಬಂಧಿಸಿದುದೆ ಆಗಲಿ, ಚಂದ್ರನ ಮೇಲೆ ಮಾನವನಿರಿಸಿದ ತ್ರಿವಿಕ್ರಮ ಪಾದವೆ ಆಗಲಿ, ದಲಿತರ ಶೋಚನೀಯ ಸ್ಥಿತಿಯೆ ಆಗಲಿ, ಇಲ್ಲವೆ ಕಳ್ಳಸಾಗಾಣಿಕೆಯ ಕಪ್ಪು ಲೋಕವೆ ಆಗಲಿ. ಎನ್ಕೆ ಪ್ರತಿಭೆಯಿಂದ ಇಂತಹ ವಿಷಯಗಳು ರಾಷ್ಟ್ರೀಯ ಮಟ್ಟದಲ್ಲಿ ಭಾರತದ ಎಲ್ಲ ಭಾಷೆಗಳಲ್ಲಿ ಪ್ರಸಾರವಾಗಿವೆ. ಸ್ವಪ್ರತಿಭೆಯ ಭಾರತೀಯ ರೇಡಿಯೊ ಲೇಖಕರಲ್ಲಿ ಒಬ್ಬರಾಗಿ ಎನ್ಕೆ ತಮ್ಮ ಮಟ್ಟವನ್ನು ಈ ರೀತಿಯಾಗಿ ಹೆಚ್ಚಿಸಿಕೊಂಡಿದ್ದಾರೆ. ಈ ಮೂಲಕವಾಗಿಯೆ ಅವರ ನಾಟಕಗಳು ಕನ್ನಡೇತರ ಕೇಳುಗರಿಗೂ ಕೂಡ ಆಸಕ್ತಿಯ ವಾಗಿವೆ. ಗಾಂಧೀಗೀತ ಎಂಬ ಮಾಲಿಕೆಯಲ್ಲಿ ಪವಣಿಸಲಾದ ಕವನ ಕುಸುಮಗಳು ಗಾಂಧೀಜೀವನ ಗಂಧವನ್ನು ಬೀರುವ ರಸವತ್ತಾದ ಘಟನೆಗಳಾಗಿವೆ. ಗಾಂಧೀಜಿ ಜೀವನದ ವಿವಿಧ ಪರ್ವಗಳನ್ನು ಪ್ರತಿಬಿಂಬಿಸುವ ಈ ಗೀತಗಳು ಬರೀ ಗಾಂಧೀಸ್ತವನವಾಗಿರದೆ, ಗಾಂಧೀಜಿ ಸಾಧನ–ಬೋಧನಗಳ ಪ್ರಮುಖ–ಮುಖಗಳನ್ನು ಸಂಗೀತದಲ್ಲಿ ಚಿತ್ರಿಸುತ್ತವೆ. ಇವುಗಳಲ್ಲಿ ನೀತಿ ಪ್ರಚಾರವಿಲ್ಲ, ವಸ್ತುಕ–ವರ್ಣಕಗಳ ನಡುವಿನ ರಸಾತ್ಮಕ ಮಧ್ಯ ಮಾರ್ಗವನ್ನು ಅವರು ಹಿಡಿದಿದ್ದಾರೆ. ಸಾಧು ಸಂತರಂತಿದ್ದು ರಾಷ್ಟ್ರ ನೇತಾರರಾಗಿ ದೇಶವನ್ನು ರಾಜಕೀಯವಾಗಿ ಮುನ್ನಡೆಯಿಸುವ ಮಹಾಪುರುಷರ ಬಗ್ಗೆ ಬರೆಯುವುದು ಕಠಿಣವಾದದ್ದು. ಇಂತಹ ಬರೆವಣಿಗೆ ಪತ್ರಿಕಾ ಶೈಲಿಯಾಗಬಹುದು, ಇಲ್ಲವೆ ಅಮೂರ್ತ ಸ್ವರೂಪದ್ದಾಗಬಹುದು. ಆದರೆ ಎನ್ಕೆ 'ಗಾಂಧೀಗೀತ' ಇದಾವುದೂ ಆಗಿಲ್ಲ. ಅದು ಸುಗೀತಮಯವಾಗಿ ವೈಚಾರಿಕತೆಯಿಂದ ಕೂಡಿದೆ.

ಇನ್ನೊಂದು ಪ್ರಶ್ನೆ ಬಾನುಲಿ ಬರೆವಣಿಗೆಯು–ಅದು ಪ್ರಭಾವೀ ನಾಟಕವೆ ಆಗಿರಲಿ, ರೂಪಕವೆ ಆಗಿರಲಿ, ಗೀತವೆ ಆಗಿರಲಿ ಪ್ರಕಟನೆಗೆ ಯೋಗ್ಯವೆನಿಸಿ, ಸಾಹಿತ್ಯ ಸ್ವರೂಪವನ್ನು ತಾಳಿ ವಾಚಕರಿಗೆ ರೋಚಕವೆನಿಸೀತೆ–ಎಂಬುದು. ಈ ಪ್ರಶ್ನೆಗೆ 'ಹೌದು', 'ಅಲ್ಲ' ಎರಡೂ ಉತ್ತರ ಸಾಧ್ಯವಿದೆ. ಆದರೆ 'ಎನ್ಕೆ' ಮಾತ್ರ ಈ ಎರಡೂ ಕ್ಷೇತ್ರಗಳಲ್ಲಿ ಪಳಗಿದ್ದಾರೆ. ಅವರ ರೇಡಿಯೋ ನಾಟಕಗಳು ಪ್ರಕಟನೆಯನ್ನೂ ಹೊಂದಿ, ಸಾಹಿತ್ಯಕ ಗುಣಗಳಿಂದ ಕೂಡಿವೆಯೆಂಬುದನ್ನು ತೋರಿಸಿಕೊಟ್ಟಿವೆ. ಆದುದರಿಂದ ನನ್ನ ದೃಷ್ಟಿಯಲ್ಲಿ ಎನ್ಕೆ ಸವ್ಯಸಾಚಿಯೆನಿಸಬಲ್ಲ ಸಾಹಿತಿ. ಲೋಕಪ್ರಿಯತೆಯನ್ನು ಗಳಿಸುವುದು ಒಂದು ರೀತಿ. ಆದರೆ ಸ್ಥಿರ ಆಸಕ್ತಿ, ಮೌಲ್ಯಗಳನ್ನು ಉಂಟು ಮಾಡಬಲ್ಲ ಸಾಹಿತ್ಯವನ್ನು ನಿರ್ಮಿಸುವುದು ಇನ್ನೊಂದು ರೀತಿ. ಎನ್ಕೆ ಅವರ ರೇಡಿಯೋ ಬರೆವಣಿಗೆ ನಿಸ್ಸಂದೇಹವಾಗಿ ಸತ್ವ, ತತ್ವಗಳಿಂದ ಮೌಲಿಕ ಸಾಹಿತ್ಯವಾಗಿದೆ.

ಸಾಹಿತಿ ಎನ್ಕೆ ಅವರ ಕಲೆ ಮತ್ತು ಸೃಜನಶೀಲ ಮನಸ್ಸನ್ನು ಕುರಿತು ಬರೆಯುವಲ್ಲಿ ನನಗೆ ಕೆಲವು ಅಡಚಣೆಗಳಿವೆ. ಅವರ ಸಾಹಿತ್ಯ ಕೃತಿಗಳನ್ನು ಕುರಿತ ನನ್ನ ತಿಳು

ವಳಿಕೆ ಕರ್ನಾಟಕದ ನನ್ನ ಮಾನ್ಯಮಿತ್ರರು ಅವರ ಬಗೆಗೆ ಮಾತನಾಡಿದುದರ ಮೇಲೆ ಆಧಾರಿತವಾಗಿದೆ. ನಿಜವಾಗಿಯೂ ನಾನು ಸಾಹಿತಿ ಪಸ್ಕೆ ಅವರನ್ನು ಎ. ಎಂ. ನಟೇಶ, ಎಸ್. ಎಸ್. ಮರ್ಡೀಕರ ಮತ್ತು ಬೇಂದ್ರೆ ಅವರ ಕಣ್ಣಿನಿಂದ ನೋಡಿದ್ದೇನೆ. ನನಗೆ ತೋರುವ ಮಟ್ಟಿಗೆ ಅವರೊಬ್ಬ ಮಾನವತಾವಾದಿ. ದುಃಖಿಮಾನವನ ಕರುಣೆಯ ಸಂಗೀತದ ನೆಲೆಗೆ ಅವರು ಕಿವಿಗೊಟ್ಟಿದ್ದಾರೆ. ಹಾಗೆಯೇ ಬದುಕಿನಲ್ಲಿ ಹಾಸ್ಯದ ಸೆಲೆಯನ್ನೂ ಕಂಡಿದ್ದಾರೆ. ಅವರ ಹಾಸ್ಯಪ್ರಜ್ಞೆ, ಹಾಗೂ ಹೃದಯಸ್ಪರ್ಶಿಯಾದ ಶೋಕ ರಸಗಳು ತನ್ನ ಪರಿಸರದ ಪರಿಜನರೊಡನೆ ಅವರು ತಾಳಿದ ಪ್ರೀತಿ, ಅನುಕಂಪಗಳ ಮೂಲಕ ಉಕ್ಕಿ ಬಂದಿವೆ. ಈ ನಗೆ–ಕರುಣೆಗಳ ಹಿಂದೆ ಕಲಾವಿದನ ಪರಿಪೂರ್ಣ ವ್ಯಕ್ತಿತ್ವವಿದೆ. ಶೆಲ್ಲಿಯ ಸಾಲುಗಳನ್ನಿಲ್ಲಿ ನೆನೆಯಬಹುದು.

Our Sincerest laughter
With Some pain is fraught
Our Sweetest songs are those
That tell of saddest thought

(ನಮ್ಮ ಪರಿಶುದ್ಧ ನಗೆಯು ನೋವಿನಿಂದ ಕೂಡಿರುತ್ತದೆ. ಅತಿ ವಿಷಾದದ ವಿಚಾರವನ್ನು ಹೇಳುವ ಗೀತಗಳೇ ನಮಗೆ ಅತ್ಯಂತ ಮಧುರ.)

ಸಹಜವಾಗಿಯೆ ಅವರ ಸಂವೇದನೆಯು ಮನುಷ್ಯನ ಜೀವನದ ವಿರೋಧಾಭಾಸಗಳಿಗೆ ಉತ್ತರ ನೀಡುತ್ತದೆ : ಅವರ ಕೌರೂಪ್ಯ ಮತ್ತು ಸೌಂದರ್ಯ, ಅವರ ಮೂರ್ಖತನ ಮತ್ತು ಮೂಲತಃ ಒಳ್ಳೆಯತನ; ಅವರ ಹೋರಾಟ ಮತ್ತು ಮನೋವಿಕಾರಗಳು. ಇವೆಲ್ಲಕ್ಕೂ ಮಿಗಿಲಾಗಿ ಸಚ್ಚಾರಿತ್ರ್ಯದಿಂದ ಉಳಿದವರ ಬಾಳನ್ನು ಪರಿವರ್ತಿಸುವ ಪರಮ ಸಾಧ್ಯತೆಗಳು. ಎರಡನೆಯದಾಗಿ ಅವರು ಒಬ್ಬ ಆದರ್ಶವಾದಿ. ನಮ್ಮ ಅನುವಂಶಿಕ ಮೌಲ್ಯಗಳು ಮತ್ತು ದೈವದಲ್ಲಿ ನಮ್ಮ ಶ್ರದ್ಧೆ–ಇವುಗಳೊಡನೆ ಮನುಷ್ಯನು ನೈತಿಕ ಹಾಗೂ ಆಧ್ಯಾತ್ಮಿಕ ಬಲವನ್ನು ಬೆಳೆಸಿಕೊಂಡಲ್ಲಿ ಪಾಶ್ಚಾತ್ಯರ ಆತ್ಮಹೀನ ಭೌತಿಕದ ನಾಗರಿಕತೆಯ ಹಿಂದಿನ ಹಿಂಸೆ, ಕ್ರೌರ್ಯ, ಹೃದಯಶೂನ್ಯತೆಗಳನ್ನು ಎದುರಿಸಿ ಸಹಿಸಿಕೊಳ್ಳಬಲ್ಲನು. ಮೂರನೆಯದಾಗಿ ಅವರೊಬ್ಬ ಸಾಧಕ. (ವೈಚಾರಿಕತೆಯ ಮೌಲ್ಯೀಕರಣದಲ್ಲಿ ಇದೊಂದು ಮಹತ್ವದ ಅಂಶವೆಂದು ನಾನು ತಿಳಿಯುತ್ತೇನೆ.) ಈ ಮೂಲಕ ಆತನ ದೃಷ್ಟಿಯು ವಿಸ್ತೃತಗೊಳ್ಳುತ್ತ ಹೋಗಿದೆ. ಮುಖ್ಯವಾಗಿ ಅವರ ಈಚಿನ ಬರೆವಣಿಗೆಯಲ್ಲಿ ನಾವು ಇವನ್ನು ಗಮನಿಸಬಹುದು. ಮ್ಯಾಥ್ಯೂ ಆರ್ನಾಲ್ಡ್ ಮನುಷ್ಯನ ಈ ಮಣ್ಣಿನ ಬದುಕಿನಲ್ಲಿ ಕರಾಳ ಧರ್ಮಶೂನ್ಯತೆಯನ್ನು ಕಂಡುದನ್ನು ಕೆಳಗಿನ ಸಾಲುಗಳಲ್ಲಿ ಗುರುತಿಸಬಹುದು—

And we are here as on a darkling plain
Swept with confused alarms of struggle and flight
Where ignorant armies clash by night

(ನಾವು ಈ ಕಂಗೆಡಿಸುವ ಕಪ್ಪು ನೆಲದ ಮೇಲೆ ನಿಂತಿದ್ದೇವೆ. ಹೋರಾಟ, ಹಾರಾಟಗಳ ಗರ್ಜನೆಗಳಿಂದ ನೂಕಲ್ಪಟ್ಟಿದ್ದೇವೆ. ಇಲ್ಲಿ ಅಜ್ಞಾನವು ಇರುಳ ತಾಂಡವವನ್ನು ನಡೆಸಿದೆ.)

ಎನ್ಕೆ ವಿಚಾರ ಬೇರೆ. ಅವರು ಬ್ಲೇಕ್‌ನ ವಿಚಾರಸರಣಿಯನ್ನು ಅನುಸರಿಸುವಂತೆ ತೋರುತ್ತದೆ–'If the doors of perception were cleansed everything would appear to man, as it is, infinite' ಎಂದು (ಜ್ಞಾನೇಂದ್ರಿಯಗಳ ದ್ವಾರಗಳು ನಿರ್ಮಲವಾಗಿಸಲ್ಪಟ್ಟರೆ, ಪ್ರತಿ ಪದಾರ್ಥದಲ್ಲಿಯೂ ಮನುಷ್ಯ ಅನಂತತೆಯನ್ನು ಕಾಣಬಹುದು.) ಆದುದರಿಂದ ಬರಿ ಅಸ್ತಿತ್ವ ಮಾತ್ರ ಸಾಲದು, ಆತ್ಮವಿಕಾಸವೂ ಬೇಕು. ಈ ಎರಡರ ನಡುವೆ ಎಷ್ಟೋ ಕಂದಕಗಳಿವೆ. ಮುಂಬರುವ ವರ್ಷಗಳಲ್ಲಿ ಎನ್ಕೆ ಅವರ ಬರವಣಿಗೆ ಅವರ ಶ್ರದ್ಧೆ, ಅನುಭವಗಳನ್ನೆ ಪ್ರತಿಬಿಂಬಿಸುವುದೆಂದು ನಂಬಲು ನನಗೆ ಬಲವಾದ ಕಾರಣಗಳಿವೆ.

(ಅನುವಾದ : ನಾ. ಕು.)

# ಒಂದು ಮೆಚ್ಚುಗೆ

ಜಿ. ಟಿ. ಐಯ್ಯಂಗಾರ್

ಧಾರವಾಡಕ್ಕೆ ಬರುವ ಪೂರ್ವದಲ್ಲಿಯೇ, ೧೯೬೮ ರಿಂದಲೇ, ರಾಷ್ಟ್ರೀಯ ನಾಟಕ "ಕಸಿಹೃದಯ (ಕಲೀ ಕಲಮೀ ಹೃದಯಕೀ)"ದ ಲೇಖಕರೆಂದು ಎನ್ಕೆ ಅವರ ಪರಿಚಯ ನನಗಿತ್ತು. ಈ ನಾಟಕ ನನ್ನಲ್ಲಿ ವಿಶೇಷ ಆಸಕ್ತಿಯನ್ನು ಹುಟ್ಟಿಸಿತ್ತು. ಏಕೆಂದರೆ ನಾನು ಹಿಂದಿಯಲ್ಲಿ ಅದೇ ವಸ್ತುವಿನ ಬಗ್ಗೆ ಬರೆದ ಪ್ರಹಸನ 'ದಿಲ್ ಬದಲ್ ಗಯಾ' ವಿವಿಧ ಭಾರತಿಯ ಹವಾಮಹಲ್ ಕಾರ್ಯಕ್ರಮದಲ್ಲಿ ಪ್ರಸಾರಗೊಂಡ ಅಮಿತಾ ಮಲಿಕ್ ಅವರಿಂದ ಉತ್ತಮ ವಿಮರ್ಶೆಗೆ ಪಾತ್ರವಾಗಿತ್ತು.

ಸುಮಾರು ಇಪ್ಪತ್ತೆಂಟು ತಿಂಗಳ ಕೆಳಗೆ ಆಗ ಪಣಜಿಯಲ್ಲಿ ಆಕಾಶವಾಣಿ ಕೇಂದ್ರ ನಿರ್ದೇಶಕರಾಗಿದ್ದ ಹಾಗೂ ಕವಿ, ಬರಹಗಾರರಾದ ನನ್ನ ಸಹೋದ್ಯೋಗಿ ಆರ್. ವಿ. ಇಟಗಿ ಅವರೊಡನೆ ಧಾರವಾಡದಲ್ಲಿ ಎನ್ಕೆ ಅವರನ್ನು ಭೆಟ್ಟಿಯಾದಾಗ ಅವರೆಷ್ಟು ಉತ್ತಮ ಪ್ರಸಾರಕರೆಂಬುದನ್ನರಿತೆ. ಮೊದಲ ಭೇಟಿಯಲ್ಲಿಯೇ ನಾವಿಬ್ಬರೂ ಒಬ್ಬರನ್ನೊಬ್ಬರು ಮೆಚ್ಚಿದೆವು. ಅವರ ವಿದ್ವತ್ತು, ಆಕರ್ಷಕ ವ್ಯಕ್ತಿತ್ವ, ಯುವಕರನ್ನು ನಾಚಿಸುವ ದೇಹದಾರ್ಢ್ಯ ಹಾಗೂ ಸದೃಢ ನಡೆ ಅವರ ಎಪ್ಪತ್ತು ವರ್ಷಗಳನ್ನು ಮುಸಿ ಮಾಡುತ್ತದೆ. ನಮ್ಮಿಬ್ಬರ ಸಂಬಂಧ ಸಂತಸಕರ ಹಾಗೂ ಉಪಯುಕ್ತವಾಗಿದೆ.

ಕನ್ನಡ ಸಾಹಿತ್ಯ ಪ್ರಪಂಚದ ಅತ್ಯುತ್ತಮ ಲೇಖಕರಲ್ಲೊಬ್ಬರಾದ ಎನ್ಕೆ ತಮ್ಮ ಸೃಜನಾತ್ಮಕ ಜೀವನದ ಬಹುಪಾಲನ್ನು ಆಕಾಶವಾಣಿಗೆ ಕೊಟ್ಟಿದ್ದಾರೆ. ಸುಮಾರು ೨೫ ವರ್ಷಗಳ ಕಾಲ ಆಕಾಶವಾಣಿ ಅಪೇಕ್ಷಿಸುವದನ್ನು ಎಲ್ಲರೂ ಮೆಚ್ಚುವಂತೆ ಕೊಟ್ಟಿದ್ದಾರೆ. ಕರೆ ಬಂದಾಗಲೆಲ್ಲಾ, ನಿವೃತ್ತರಾದ ಮೇಲೂ, ಆಕಾಶವಾಣಿಗೆ ಅವರು ತಮ್ಮ ಕೊಡುಗೆಗಳನ್ನು, ಅತ್ಯಲ್ಪ ಕಾಲ ಕೊಟ್ಟಾಗಲೂ (ಸಾಮಾನ್ಯವಾಗಿ ಅವರಿಗೆ ಯಾವಾಗಲೂ ಇಂತಹ ಸೂಚನೆಯೇ ಕೊಡಲ್ಪಡುವುದು!) ಉತ್ತಮವಾಗಿ ರಚಿಸಿ ನೀಡುತ್ತಿದ್ದಾರೆ. ಹೊಸ ಹೊಸ ವಿಚಾರಗಳ ಪ್ರವರ್ತಕವಾಗಿರುವ ಅವರನ್ನು ನಾನು ಯಾವುದೇ ಹೊಸ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವಾಗ— 'ಮನೆ ಮನೆಯಲ್ಲಿ— ಪಾಠದ ಕೌಟುಂಬಿಕ ಚರ್ಚೆ'ಯಂತೆ— ಅವುಗಳ ರೂಪರೇಷೆಗಳನ್ನು ಹಾಕಿಕೊಡಲು ಕೇಳಿಕೊಂಡಿದ್ದೇನೆ. ಅವರ ಶಬ್ದ ಚಿತ್ರಗಳೇ ಆಗಲೀ, ನಾಟಕವೇ ಆಗಲೀ, ಭಾಷಣವೇ

ಆಗಲೀ ರೇಡಿಯೋಗೆ ಹೇಳಿ ಮಾಡಿಸಿದಂತಿರುತ್ತವೆ. ಒಳ್ಳೆಯ ಆಕಾಶವಾಣಿ ಸಂದರ್ಶಕರಾಗಿರುವ ಅವರು ತಮ್ಮ ಸಂಭಾಷಣೆಯ ಶೈಲಿ, ಹಾಗೂ ವಿದ್ವತ್ತಿನಿಂದ ಓದುಗರ ಮನ ಸೂರೆಗೊಳ್ಳುತ್ತಾರೆ.

ಅವರು ನೀಡುವ ಮೆಚ್ಚುಗೆ ಹಾಗೂ ವಿಮರ್ಶೆಗಳನ್ನು ನಾನು ಯಾವಾಗಲೂ ಒಪ್ಪಿಕೊಂಡಿದ್ದೇನೆ. ಆದರಲ್ಲಿಯೂ ಸ್ವತಃ ಒಳ್ಳೆಯ ಮತ್ತು ಅರ್ಪಣಾ ಭಾವದಿಂದ ಕೆಲಸ ಮಾಡಿರುವ ಅವರಿಂದ ಬರುವ ವಿಮರ್ಶೆ ಬಹಳ ಮೌಲ್ಯವುಳ್ಳದ್ದು. ರಾಷ್ಟ್ರೀಯ ಹಿನ್ನೆಲೆಯಲ್ಲಿ ಎದ್ದು ಕಾಣದಿದ್ದರೂ ಪ್ರಾದೇಶಿಕ ಕೇಂದ್ರಗಳಲ್ಲಿ ಅನೇಕ ಡಿಮೆಲ್ಲೋಗಳಿದ್ದಾರೆಂದು ನನ್ನ ಮತ. ಇಂಗ್ಲೀಷಿನಲ್ಲಿ ಬರೆದು, ಪ್ರಸಾರಗೊಳಿಸಲಿಲ್ಲವೆಂಬ ಒಂದೇ ಕಾರಣಕ್ಕಾಗಿ ಇವರು ಪ್ರಾದೇಶಿಕ ವ್ಯಕ್ತಿಗಳಾಗಿ ಉಳಿದಿದ್ದಾರೆ. ಗುಣ ಹಾಗೂ ಗಾತ್ರದ ಮಾನದಿಂದ ಆಕಾಶವಾಣಿಗೆ ಎನ್ಕೆ ಅವರ ಕಾಣಿಕೆ ಬಹಳ ಹಿರಿದು.

**(ಅನುವಾದ: ಡಾ. ಸಿ. ವಿ. ವೇಣುಗೋಪಾಲ)**

# ಆಕಾಶವಾಣಿ ಪ್ರಸಾರಕ

## ಎಸ್. ಸುಬ್ರಮಣಿ

ಎನ್. ಕೆ. ಕುಲಕರ್ಣಿಯವರನ್ನು ನಾನು ಮೊದಲು ಕಂಡದ್ದು ೧೯೬೫ ರ ಸುಮಾರಿಗೆ. ಆಗ ನಾನು ಕಿರಿಯ ಕಾರ್ಯಕ್ರಮ ನಿಯೋಜಕನಾಗಿದ್ದೆ. ಹಿರಿಯ ನಿಯೋಜಕರಾಗಿ ಅವರು ಬೆಂಗಳೂರಿನಿಂದ ಧಾರವಾಡಕ್ಕೆ ವರ್ಗವಾಗಿ ಬಂದಿದ್ದರು. ಅವರು ಬಂದ ವಾರದೊಳಗೆ "ಎನ್ಕೆ, ಧಾರವಾಡ" ಎಂದಷ್ಟೇ ವಿಳಾಸವಿದ್ದ ಪತ್ರವೊಂದನ್ನು ಅಂಚೆಪೇದೆ ಆಕಾಶವಾಣಿ ಕೇಂದ್ರಕ್ಕೆ ಬಂದು ಅವರಿಗೆ ತಲುಪಿಸಿದಾಗ ಈ ಸರಳ, ನಿರಾಡಂಬರ ವ್ಯಕ್ತಿ ಎಷ್ಟು ಸುಪ್ರಸಿದ್ಧರಾಗಿದ್ದರೆಂಬುದು ನನ್ನ ಅರಿವಿಗೆ ಬಂತು.

ಎನ್ಕೆ ಅದ್ವಿತೀಯ ಸಾಮರ್ಥ್ಯ ಹೊಂದಿದ ರೇಡಿಯೋ ಪ್ರಸಾರಕರಾಗಿದ್ದರು. ವಿವಿಧ ರೂಪಗಳಲ್ಲಿ ಆಕಾಶವಾಣಿ ಕಾರ್ಯಕ್ರಮಗಳನ್ನು ಸತ್ವಯುತವಾಗಿ, ಆದರೆ ನಂಬಲಾರದಷ್ಟು ಸುಲಭವಾಗಿ ನಿಯೋಜಿಸಿ, ಬರೆದು ಧ್ವನಿ ನೀಡಿ, ನಿರ್ಮಿಸುವಲ್ಲಿ ಅವರದು ಎತ್ತಿದ ಕೈ. ರೇಡಿಯೋ ಅವರ ಧಮನಿಗಳಲ್ಲಿತ್ತು. ಎಷ್ಟೇ ದೊಡ್ಡ ಅಥವಾ ಸಣ್ಣ, ಕುತೂಹಲಭರಿತ ಅಥವಾ ರಸಹೀನ ವಿಷಯವನ್ನಾದರೂ ರಸಭರಿತ ಮಾನವೀಯ ಮೌಲ್ಯಗಳನ್ನೊಳಗೊಳ್ಳುವಂತೆ ಆಕಾಶವಾಣಿ ಕಾರ್ಯಕ್ರಮವನ್ನಾಗಿ ಪರಿವರ್ತಿಸುತ್ತಿದ್ದರು. ಕೇಳುಗರನ್ನು ತಮ್ಮ ವಿಶ್ವಾಸಕ್ಕೆ ತೆಗೆದುಕೊಂಡು ಅವರ ಮನಪ್ರೀಲಿಸುತ್ತಿದ್ದರು. ಅವರ ಕಾರ್ಯಸಾಮರ್ಥ್ಯ ಅದ್ಭುತವಾಗಿತ್ತು. ರಾತ್ರಿ ಎಂಟರ ವರೆಗೆ ಸಾಮಾನ್ಯವಾಗಿ ಪ್ರತಿದಿನ ಕಾರ್ಯತತ್ಪರರಾಗಿರುತ್ತಿದ್ದರು. ನನಗೆ ನೆನಪಿರುವಂತೆ ಒಂದು ಕಾಲಕ್ಕೆ ಕಾರ್ಯಕ್ರಮ ನಿಯೋಜನೆಗೆ ಸಂಬಂಧಪಟ್ಟ ಆಡಳಿತಾತ್ಮಕ ಕೆಲಸವನ್ನು ನೋಡಿಕೊಳ್ಳುವುದರ ಜೊತೆಗೆ ಪ್ರತಿವಾರ ನಾಲ್ಕು ಕಾರ್ಯಕ್ರಮಗಳನ್ನು (ಕೇಳುಗರ ಓಲಿಗಳಿಗೆ ಉತ್ತರ, ಗೃಹಗೋಷ್ಠಿಯನ್ನೊಳಗೊಂಡು) ಬರೆದು ಪ್ರಸ್ತುತಪಡಿಸುತ್ತಿದ್ದರು. ಇಷ್ಟೆಲ್ಲವನ್ನೂ ಅಷ್ಟು ಚೆನ್ನಾಗಿ ಹೇಗೆ ಮಾಡುತ್ತಿದ್ದರೆಂಬುದೇ ನನಗೆ ಇಂದಿಗೂ ವಿಸ್ಮಯಕಾರೀ ಸತ್ಯವಾಗಿದೆ. ಒಬ್ಬ ಅನೌನ್ಸರನಾಗಲೀ, ಹಸ್ತಪ್ರತಿಯೊಂದಿಗೆ ಬರುತ್ತಿದ್ದ ಆಕಾಶವಾಣಿ ಕಲಾವಿದರಾಗಲೀ ಅಥವಾ ಆಡಳಿತಕ್ಕೆ ಸಂಬಂಧಪಟ್ಟ, ಚೆಕ್ಕು ಅಥವಾ ಕಾಂಟ್ರಾಕ್ಟನ್ನು ಕೈಯಲ್ಲಿ ಹಿಡಿದ ಕಾರಕೂನರಾಗಲೀ— ಎಲ್ಲರನ್ನು ಒಂದೇ ಬಗೆಯ ನಸುನಗೆಯಿಂದ ಸ್ವಾಗತಿಸಿ ಅವರ ಕೆಲಸವನ್ನು ಕೂಡಲೇ ಮಾಡಿಕೊಡುತ್ತಿದ್ದರು. ಕಾರ್ಯದ ಒತ್ತಡದಿಂದ

ಅವರೆಂದೂ ತಾಳ್ಮೆಗೆಟ್ಟುದನ್ನು ನಾನು ಕಂಡಿಲ್ಲ. ಹೆಮಿಂಗ್ವೆ ಹೇಳುವಂತೆ ಒತ್ತಡದಲ್ಲಿಯೇ ಸಾರ್ಥಕ್ಯವನ್ನು ಕಂಡುಕೊಂಡವರಾಗಿದ್ದರು. ಕಛೇರಿಯ ಸಮಸ್ಯೆಗಳಾಗಲೀ ವೈಯಕ್ತಿಕ ತೊಂದರೆಗಳಾಗಲೀ ಎಂದೂ ಅವರನ್ನು ಧೃತಿಗೆಡಿಸಲಿಲ್ಲ. ಬಡ್ತಿ ಅಥವಾ ವರ್ಗಾವಣೆಗಳ ಬಗ್ಗೆ ಎಂದೂ ಅವರು ತಲೆಕೆಡಿಸಿಕೊಳ್ಳಲಿಲ್ಲ. ತಮ್ಮ ಕಾರ್ಯದ ಕಡೆಗಷ್ಟೇ ಲಕ್ಷ ಕೊಡುತ್ತಿದ್ದ ಅವರ ಕೈಯಲ್ಲಿ ಕೆಲಸ ಉತ್ತಮಗೊಳ್ಳುತ್ತಲೇ ಹೋಯಿತು. ಕೇಳುಗರ ಓಲೆಗಳಿಗೆ ಧಾರವಾಡ ಆಕಾಶವಾಣಿಯಿಂದ ಅವರು ಉತ್ತರಿಸಲು ತೊಡಗಿದ ಕೂಡಲೇ ವಾರಕ್ಕೆ ೨೦೦ ಪತ್ರಗಳು ಬರುತ್ತಿದ್ದುದು ೫೦೦ಕ್ಕೆ ಹಾರಿತು. ಅನೇಕ ವರ್ಷಗಳನಂತರ ನಾನು ಗೋವೆಯಲ್ಲಿ ಕೆಲಸಕ್ಕಿದ್ದಾಗ ಬೆಂಗಳೂರಿನಿಂದ ಬಂದ ಸಭ್ಯರೊಬ್ಬರನ್ನು ಭೇಟಿಯಾದೆ. ಬೆಂಗಳೂರಿನಲ್ಲಿ ಎನ್ಕೆ ಅವರಿದ್ದಾಗ ಅವರ ಬಗ್ಗೆ ತಾವು ಅಪಾರ ಮೆಚ್ಚುಗೆಯನ್ನಿಟ್ಟುಕೊಂಡಿದ್ದನ್ನು ತಿಳಿಸಿದರು. ಎಷ್ಟರ ಮಟ್ಟಿಗೆಂದರೆ ತಾವು ಒಂದು ಸಿನಿಮಾ ನೋಡುತ್ತಿದ್ದರೂ ರೇಡಿಯೋ ಮೇಲೆ ಎನ್ಕೆ ಅವರ 'ಕೇಳುಗರಿಗೆ ಉತ್ತರ' ಕಾರ್ಯಕ್ರಮ ಕೇಳಲು ಥೇಟರಿನಿಂದ ಹೊರಬರುತ್ತಿದ್ದಂತೆ! ಕೇಂದ್ರ ನಿರ್ದೇಶಕರೆಲ್ಲರೂ ಅವರನ್ನು ಮೆಚ್ಚಿದ್ದರು. ಈಗ ನಾನು ಕೇಂದ್ರ ನಿರ್ದೇಶಕನಾಗಿರುವಾಗ ಆಕಾಶವಾಣಿಯಲ್ಲಿ ಅನೇಕ ಎನ್ಕೆಗಳಿರಬಾರದೇ ಎಂದು ಆಶಿಸುತ್ತೇನೆ.

ವೈಯಕ್ತಿಕ ದುರಂತಗಳೂ, ಆಡಳಿತಾತ್ಮಕ ನಿರಾಸೆಗಳೂ ಎನ್ಕೆ ಅವರಿಗೆ ಸಾಕಷ್ಟಾಗಿವೆ. ಆದರೆ ಅದರ ಫಲವಾಗಿ ನಿರಾಶೆ ಅಥವಾ ಕ್ರೋಧವನ್ನು ಅವರು ವ್ಯಕ್ತಪಡಿಸಿರುವುದನ್ನು ನಾನೆಂದೂ ಕಾಣೆ. ಅಷ್ಟೇ ಅಲ್ಲ. ಅವರ ಅನೇಕ ಸಹೋದ್ಯೋಗಿಗಳಿಗೆ ತಾವಾಗಿಯೇ ಮುಂದೆ ಬಂದು ಸಹಾಯ ಮಾಡಿರುವುದನ್ನು ನಾನು ಬಲ್ಲೆ, ಹಿರಿಯ ಸಹೋದ್ಯೋಗಿಯಷ್ಟೇ ಅಲ್ಲದೆ ಒಬ್ಬ ನಲ್ಮೆಯ ನೇಹಿಗರಾಗಿದ್ದಾರೆ ಎನ್ಕೆ ನನಗೆ.

ಕನ್ನಡ ಸಾಹಿತ್ಯಕ್ಕೆ ಎನ್ಕೆ ಅವರ ಕೊಡುಗೆಯ ಬಗ್ಗೆ ಅಭಿಪ್ರಾಯ ನೀಡಲು ನಾನು ಅನರ್ಹ. ಆದರೆ ನಾಟಕ, ಕಾವ್ಯ ಹಾಗೂ ಇತರ ಬರೆಹಗಳಲ್ಲಿ ಅವರ ಕೊಡುಗೆ ಅರ್ಥಪೂರ್ಣವಾಗಿರುವದೆಂದು ಬಲ್ಲೆ.

(ಅನುವಾದ: ಡಾ. ಸಿ. ವಿ. ವೇಣುಗೋಪಾಲ)

# ಕನ್ನಡದ ಸಿರಿನುಡಿಗೆ ಕಾಣ್ಕೆ

ಜೀವಿ

'ನಾರಾಯಣ'ರು ನಾನೀ ಅನ್ನುತ್ತಿರುವಾಗ
ಕುಲಕರ್ಣಿಗಳು 'ವತನ' ಕಳೆಕೊಂಡು,
'ಪಲಗೆ ಬಳಪವ' ಹಿಡಿಯಲು ಕಷ್ಟಪಡುವಾಗ
'ಕಂಠ' ಶೋಷಣೆಗೊಂಡಾಗ
'ಪತ್ರ' ಪತ್ರೋಳಿಯ ಸ್ಥಿತಿಗೆ ಇಳಿದಾಗ
ಆಕಾಶವಾಣಿ ಅರಚಿಕೊಂಡು,
ಕೀಸರು-ಬಾಸರು ಹಿಡಿಸಿದಾಗ
'ನಲಿದು ಬಾರೊ ಮುರಲಿ' ಎಂಬ ಮಧುರ ಹಾಡು
ಕೇಳಿತ್ತು, ಗೊಂಡಿತ್ತು ಮನಸೂರೆ
ಆಗ, ಮೂಡಿತ್ತು ಸಾಹಿತ್ಯಾಕಾಶದಲ್ಲಿ ಒಂದು ತಾರೆ
'ದತ್ತ'ರ ಎಣಿಕೆ ಸುಳ್ಳಾಗಲಿಲ್ಲ, 'ಎನ್ಕೆ'
ಕನ್ನಡದ ಸಿರಿನುಡಿಗೆ ನೀನೊಂದು ಕಾಣ್ಕೆ

ಬಾಳ ಕುಲುಮೆಯಲ್ಲಿ, ನಿಮ್ಮ ಒಲುಮೆ
ಪುಟವಿಟ್ಟ ಬಂಗಾರವಾಯ್ತು
ರೇಡಿಯೋ ದುಡಿಮೆಯಲಿ, ನಿಮ್ಮ ಸಾಹಿತ್ಯ
ನಿರ್ಮಲೋದಕದ ವಾಹಿನಿಯಾಯ್ತು
ನಿಮ್ಮ ಹರಟೆಗಳು, ರದ್ದೀ ಅಂಗಡಿಯಲ್ಲೂ
ಕಿಟೆಲ್‌ಕೋಶ ಕಂಡಿವೆ
ನಿಮ್ಮ 'ವಾರದ ವಗ್ಗರಣೆ' ಅಂಕಣ ಲೇಖನಕ್ಕೆ
ಹೊಸ ಮುಖ ಕಲ್ಪಿಸಿವೆ
ಕುಮಾರವ್ಯಾಸನ ಭಾರತ
ನಿಮ್ಮಿಂದ ಪದ್ಯ ಗದ್ಯವಾಗಿ ಜನಮನ ತಲುಪಿದೆ
ರೂಪಕ, ನಾಟಕ, ಕಾದಂಬರಿಗಳ ಮೂಲಕ
ಪ್ರತಿಭೆ ಹೊರಹೊಮ್ಮಿರಲು, ನಿಮ್ಮ ಮನ-ಲೋಲಕ.

ಬುದ್ಧಿಯ ತೃಷೆ ಕಳೆಯೆ 'ಅರವಿಂದ ದರ್ಶನ' ವಾಚನ
ಮನದ ದಾಹ ಕಳೆಯೆ ಗುರುರಾಜರ ದರುಶನ
ಭಾವದ ಅಭಾವ ಹಿಂಗಿಸೆ ಬೇಂದ್ರೆ ಕಾವ್ಯಗಂಗೆಯು ಪಾನ
ಇನ್ನೇನು ಬೇಕು ? ಆಯಿತು ಜೀವನ ಪಾವನ

ನಿಮ್ಮ ಸ್ನೇಹದ ರಸಧಾರೆಯನು ಕಂಡು
ನೀವಿತ್ತ ಪಾಥೇಯ ಜೀವನದಿ ಉಂಡು
ಹೊಸ ಜೀವ ಪಡೆದಿರುವ 'ಜೀವಿ'ಗಳು ಅಸಂಖ್ಯ
ಸ್ಫೂರ್ತಿಗೆ ಸೆಲೆ, ಸ್ನೇಹಕೆ ಕಲೆ, ಒಲುಮೆಗೆ ನೆಲೆ ಎನ್ಕೆ-ಸಖ್ಯ.

# ಆಶೀರ್ವಚನ

## ಹುಬ್ಬಳ್ಳಿಯ ಮೂರುಸಾವಿರಮಠದ ಜಗದ್ಗುರುಗಳು

ಎನ್ಕೆ ಎಂದಾಕ್ಷಣ ಧಾರವಾಡದ ಆಕಾಶವಾಣಿ ನೆನಪಾಗುತ್ತದೆ. ಅಲ್ಲಿ ಅವರು ಅನುಪಮ ಸೇವೆ ಸಲ್ಲಿಸಿ, ಹೆಸರು ಗಳಿಸಿ, ಜನಪ್ರಿಯರಾದ ವ್ಯಕ್ತಿ. ಅವರ ವ್ಯಕ್ತಿತ್ವ ಹಿರಿದು. ಸುಖ ದುಃಖಗಳನ್ನು ಅನುಭವಿಸಿ, ಬಾಳಿನಲ್ಲಿ ಬೆಳಕನ್ನು ಕಂಡವರು ಎನ್ಕೆ. ಅವರು ಏನೇ ಬರೆಯಲಿ, ಮಾತನಾಡಲಿ, ಎಲ್ಲರಿಗೂ ಬಲು ರುಚಿ ಹಾಗೂ ಶುಚಿ. ಹಾಸ್ಯದಲ್ಲಿಯೂ ಸಹ ತತ್ವವನ್ನು ತುಂಬಿಕೊಂಡವರು. ಆಕರ್ಷಕವಾದ ಸಹಜ ಶೈಲಿಯಿಂದ ಎಲ್ಲರ ಮೆಚ್ಚುಗೆ ಪಡೆದಿದ್ದಾರೆ.

ಆಳವಾದ ಅನುಭವ, ಅಧ್ಯಯನದಿಂದ ಚಿನ್ನದಂತೆ ಅವರ ಜೀವನ ಸುಶೋಭಿತ. ನಾನೀಕಾಕಾ ಎಂದು ಹೆಸರಾಗಿರುವ ಎನ್ಕೆ ತಮ್ಮ ಸುದೀರ್ಘ ಬಾಳಿನ ರಮ್ಯರಹಸ್ಯದ ಆತ್ಮಕಥೆಯನ್ನು ಈಗ ಬರೆಯುತ್ತಿರುವುದು ಕೇಳಿ ನಾಡಿನ ಪುಣ್ಯ ವಿಶೇಷವೆಂದು ಬಗೆದಿದ್ದೇವೆ. ಅವರ ಜೀವನದ ಅನುಭವದ ನುಡಿಗಳು ಮುಂದಿನ ಜನಾಂಗಕ್ಕೆ ಮಾರ್ಗದರ್ಶಕ. ಅವರಿಗೆ ಕರ್ನಾಟಕ ಸಾಹಿತ್ಯ ಅಕಾದೆಮಿಯು, ಅವರ ಸಾಹಿತ್ಯ ಪ್ರತಿಭೆಯನ್ನು ಕಂಡು ವಿಶೇಷ ಪ್ರಶಸ್ತಿಯನ್ನು ನೀಡಿದಂತೆ, ಶ್ರೀ ಮೂರುಸಾವಿರಮಠ ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳದ ಗ್ರಂಥ ಪುರಸ್ಕಾರ ಸಮಿತಿಯೂ ಸಹ ಪ್ರಶಸ್ತಿಯನ್ನು ನೀಡಿದೆ. ಸತ್ಕರಿಸಿದೆ,

ಎನ್ಕೆ ಅವರ ಹೃದಯ ವೈಶಾಲ್ಯ, ಸಹಜತೆ, ಪ್ರತಿಯೊಬ್ಬರನ್ನು ಹಚ್ಚಿಕೊಂಡು ಅವರಿಗೆ ಅನುಭವದ ರಸಪಾಕವನ್ನುಣಿಸಿ, ನಗಿಸಿ, ಬಾಳಿನ ಬುತ್ತಿಯನ್ನು ನೆತ್ತಿಗೆ ನೀಡಿ ಬೆಳಕಿನ ದಾರಿ ತೋರಿಸಿದವರು, ನೋವು ನಲಿವುಗಳಲ್ಲಿಯೂ ಸಮಾನತೆ ಕಂಡವರು. ಗುರು ಹಿರಿಯರಲ್ಲಿ ಶ್ರದ್ಧೆ ಇಟ್ಟುಕೊಂಡವರು. ವಯೋವಾರ್ಧಕ್ಯದಲ್ಲಿದ್ದರೂ ಮಕ್ಕಳಂತೆ ಮನಸ್ಸು, ತಿಳಿಯಾದ ಓಜಸ್ಸು ಸರ್ವರನ್ನು ಆಕರ್ಷಿಸಿದೆ. ಎನ್ಕೆಯವರು ಧಾರವಾಡದ ಆಕಾಶವಾಣಿಯಲ್ಲಿ ಸೇವೆ ಸಲ್ಲಿಸುತ್ತಿರುವಾಗ, ನಮ್ಮನ್ನು ಒತ್ತಾಯಿಸಿ, ರೇಡಿಯೋ ಭಾಷಣ ಮಾಡಿಸಿ, ಆನಂದಪಡುವ ಸ್ವಭಾವ ಇವರದಾಗಿತ್ತು. ಇವರ 'ನಾನಿಯ ನೆನಪು

ಗಳು' ಸಂಸ್ಮರಣೀಯ ವಸ್ತುವುಳ್ಳವುಗಳಾಗಿವೆ. "ನಾನೀ" ಪದ ವಾಕ್ಯಕ್ಕೆ ಪಾರಮಾರ್ಥದ ಪ್ರಕಾಶವನ್ನು ನೀಡಿದ್ದಾರೆ. ಏಕಾಂಕ, ಪೂರ್ಣಾವಧಿ ನಾಟಕ, ಕಾದಂಬರಿ, ಹರಟೆ, ವಿಮರ್ಶೆ, ಸಾಹಿತ್ಯಚರಿತ್ರೆ, ಮುಂತಾದ ವಿಷಯಗಳನ್ನೊಳಗೊಂಡ ಇವರ ಗ್ರಂಥಗಳು ಸಾಹಿತ್ಯ ನಭೋಮಂಡಲದಲ್ಲಿ ಬೆಳಗುತ್ತಲಿವೆ.

ಐವತ್ತಕ್ಕೂ ಮಿಕ್ಕಿ ಪುಸ್ತಕಗಳನ್ನು ಬರೆದು ನಾಡಿಗೆ ಚಿರಪರಿಚಿತರಾದ, ಹಾಸ್ಯ ಶಿರೋಮಣಿ ಎಸ್ಕೆಯವರು ಎಪ್ಪತ್ತೊಂದರಲ್ಲಿ ಕಾಲಿಡುತ್ತಿರುವದು ನಮ್ಮೆಲ್ಲರಿಗೆ ಅತೀವ ಸಂತಸವಾಗಿದೆ. ವಿವಿಧ ಕ್ಷೇತ್ರಗಳಲ್ಲಿ ಸಾಹಿತ್ಯ ಕೃಷಿ ಮಾಡಿ, ಜನಜೀವನಕ್ಕೆ ತೃಪ್ತಿ ನೀಡಿ ಆದರ್ಶ ವ್ಯಕ್ತಿಗಳಾಗಿದ್ದಾರೆ. ಇವರ ಸಾಹಿತ್ಯ ಸರೋವರದಲ್ಲಿ ಪ್ರತಿಯೊಬ್ಬರೂ ಈಸಿ, ಆನಂದ ಪಡೆಯಲಿ. ಇವರ ಕಾವ್ಯ ಸರ್ವರ ಕೈಗನ್ನಡಿಯಾಗಲಿ. ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರನು, ಇವರಿಗೆ ಶತಾಯುಷಿಗಳಾಗುವಂತೆ ಕರುಣಿಸಲಿ.

ಸತ್ಯಂ ಶಿವಂ ಸುಂದರಂ.

# ನಮ್ಮ ಮಾವನವರು

**ಕಮಲಾ ಕುಲಕರ್ಣಿ**

ನಾನು ಹೈಸ್ಕೂಲಿನಲ್ಲಿದ್ದಾಗ ಎನ್ಕೆಯವರಿಂದ ರಚಿತವಾದ 'ಶ್ರಾವಣದ ಕೋಳಿ' ಪಾಠ ಓದಿದಾಗಿನಿಂದ ಅವರ ಪರಿಚಯಕ್ಕಾಗಿ ಸಮಯ ಕಾಯುತ್ತಿದ್ದೆ. ದೈವ ಸಂಕಲ್ಪ ದಂತೆ ನಾನು ಎನ್ಕೆಯವರ ಸೊಸೆಯಾದರೂ 'ಶ್ರಾವಣದ ಕೋಳಿ' ಪಾಠದಲ್ಲಿ ಹೇಳಿದಂತೆ 'ನಮ್ಮೂರ ಮಳೆಗಾಲ ಹಟವಾರಿ ಮಗುವಿನಂತೆ' ಎಂಬ ವಾಕ್ಯದಂತೆ ಅವರ ಪರಿಚಯದ ಹಟವಾರಿ ಹಂಬಲವೇ ಮಾವ–ಸೊಸೆ ಬೆಸುಗೆಗೆ ಕಾರಣವಾಯಿತು. ಬರಿ ಮೂರು ಜನ ಗಂಡು ಮಕ್ಕಳಿದ್ದುದರಿಂದ ಹೆಣ್ಣುಮಕ್ಕಳಿಲ್ಲದ ಅವರು ಮೂರು ಜನ ಸೊಸೆ ಯಂದಿರನ್ನು ತಮ್ಮ ಹೆಣ್ಣು ಮಕ್ಕಳಂತೇ ಭಾವಿಸಿದ್ದಾರೆ.

ಮನೆಯಲ್ಲಿಯ ಎಲ್ಲ ವಿಷಯಗಳಲ್ಲಿಯೂ ಅವರ ಲಕ್ಷ್ಯ. ಎಲ್ಲರ ಸಂಗಡ ಹರಟೆ ಹೊಡೆಯುತ್ತಲೇ ಬರವಣಿಗೆ ಸಾಗುತ್ತಿರುತ್ತದೆ. ಅವರಲ್ಲಿಯೂ ನಡುವಿನ ಸೊಸೆ ವಿಮಲಳು ಹೇಳುವ ಸುದ್ದಿ ಕೇಳುತ್ತ ಒಂದು ಆರ್ಟಿಕಲ್ ಬರೆದು ಮುಗಿಸಿರು ತ್ತಾರೆ. ಕೋಣೆಯಲ್ಲಿ ಬರೆಯುತ್ತ ಕುಳಿತರೂ ಅಡುಗೆಮನೆಯಲ್ಲಿ ಬೆಣ್ಣೆ ಕಾಯಿಸ ಲಿಕ್ಕೆ ಇಟ್ಟ ತುಪ್ಪದ ವಾಸನೆ ಅವರ ಘ್ರಾಣೇಂದ್ರಿಯಕ್ಕೆ ತಲುಪಿ ಅವರು 'ಕಮಲಾ, ತುಪ್ಪದ ವಾಸನೆ ಬರ್‍ತಾ ಅದೆ. ಪಾತ್ರೆ ಇಳಿಸು' ಅಂತಾ ನನ್ನನ್ನು ಎಚ್ಚರಿಸುತ್ತಾರೆ. ನಾನು ಅಲಕ್ಷ್ಯದಿಂದ ನೌಕರಿಗೆ ಹೋಗುವ ಗಡಿಬಿಡಿಯಲ್ಲಿ ಅಕ್ಕೀ ಡಬ್ಬಿ ಮುಚ್ಚಳ ಹಾಕುವದನ್ನು ಮರೆತಿದ್ದರೆ ಅವರು ನನಗೆ ಗೊತ್ತಿಲ್ಲದಂತೆ ಸರಿಪಡಿಸುತ್ತಿದ್ದರು. ನೌಕರಿಗೆ ಹೋಗುವ ನನಗೆ ತಮ್ಮ ಸಂಗಡ ಊಟಕ್ಕೆ ಕುಳಿತುಕೊಳ್ಳಲು ಒತ್ತಾಯಿಸು ತ್ತಿದ್ದರು.

ಎನ್ಕೆಯವರನ್ನು ಭೆಟ್ಟಿಯಾಗಲು ಯಾರೇ ಬರಲಿ ಬೇಕಾದಾಗ ಬರಲಿ ಅವರನ್ನು ಕಾಣುವ ಸೌಜನ್ಯತೆ ಆತ್ಮೀಯತೆ ಅವರಿಗೆ ತೋರಿಸುವ ಆದರಾತಿಥ್ಯ ಶ್ಲಾಘನೀಯ. ಏನು ತಿಂಡಿ–ತೀರ್ಥವಿಲ್ಲದಿದ್ದರೂ ಉಬ್ಬಿದ ಜೋಳದ ರೊಟ್ಟಿ ಅಡಿಗೆ ಮುದಿಕಿ ಮಾಡಿದ ಮುದ್ದಿ ಪಲ್ಲೆ ಮಾತ್ರ ಮಾಮೂಲು ಆತಿಥ್ಯ. ಬಂದವರನ್ನು ಬರಿ ಬಾಯಿ ಮಾತಿನಿಂದ ಉಪಚರಿಸಿ ಕಳಿಸಿದರೆ ಅವರಿಗೆ ಏನೋ ಒಂದು ಥರ ಮುಜುಗರ. ಅಷ್ಟೇ ಆತ್ಮೀಯ ರಾಗಿ 'ಕಾಕಾ'ನ ಸಂಗಡ ತಮ್ಮ ಸುಖದುಃಖಗಳನ್ನು ಹೇಳಿಕೊಂಡು ಅವರಿಗೆ ಬಂದ

ಅನೇಕ ಸಮಸ್ಯೆಗಳಿಗೆ ಪರಿಹಾರ ಪಡೆಯಲೆಂದು ಬರುವವರು ಅನೇಕ. ಗೃಹಗೋಷ್ಠಿಯಿಂದ ಎಲ್ಲರಿಗೂ ಪರಿಚಯವಿದ್ದ ಪ್ರಭಾ ಸಿರೂರವರಂತೂ ನಮ್ಮ ಮಗಳು ಒಂದು ವರ್ಷದವಳಿದ್ದಾಗಿನಿಂದ ಅಕ್ಕನಂತೆ ಆತ್ಮೀಯತೆ ತೋರಿಸುತ್ತ ಬಂದಿದ್ದಾರೆ. ಅದರಂತೆ 'ಓ ನನ್ನ ದೇಶ ಬಾಂಧವರೇ' ಎಂಬ ಪದ್ಯದಿಂದ ಎಲ್ಲರಿಗೂ ಪರಿಚಯವಿದ್ದ ಅನುರಾಧಾ ಧಾರೇಶ್ವರರು ನಮ್ಮ ಮಾವನವರಿಂದ ಕವನ ರಚಿಸಿಕೊಂಡು ಹಾಡುತ್ತ ಕುಳಿತರೆಂದರೆ ನಮ್ಮ ಮನೆ ಆಕಾಶವಾಣಿ ನಿಲಯವಾಗುತ್ತದೆ. ಡಾ. ಆರ್. ಎಸ್. ಜೋಶಿ ಹಾಗೂ ಡಾ. ಪುಷ್ಪಾ ಹಾಗೂ ಅವರ ತಂಗಿ ಪದ್ಮಾ ಮತ್ತು ಅವಳ ಪತಿ ಡಾ. ಬಾಡಗಂಡಿಯವರಾಗಲಿ ಬಂದಾಗ ಕಾಕಾನೊಡನೆ ಹೊಡೆಯುವ ಆ ಹರಟೆ, ಆ ಮೋಜು ಇನ್ನೊಂದು ರೀತಿಯದು. ನಮಗೆಲ್ಲರಿಗೂ ಸ್ವಲ್ಪ ಸಮಯವಾದರೂ ಅವರೊಡನೆ ಹರಟೆ ಹೊಡೆಯಬೇಕೆಂಬ ಹಂಬಲ. ಆದ್ದರಿಂದ ಪ್ರತಿ ರವಿವಾರ ಮೂರು ಜನ ಮಕ್ಕಳು ಸೊಸೆಯಂದಿರು ಮೊಮ್ಮಕ್ಕಳು ಒಂದುಗೂಡಿ ತಿಂಡಿ ಚಹಾದ ಜೊತೆಗೆ ಅವರ ಹರಟೆಯನ್ನು ಕೇಳಲು ಕಿವಿದೆರೆದು ಕೂಡುತ್ತೇವೆ. ಆ ಮೋಜಿನ ಮಾತುಗಳು, ಹಳೆಯ ನೆನಪುಗಳು ನಮ್ಮನ್ನು ನಗೆಗಡಲಿನಲ್ಲಿ ತೇಲಿಸುತ್ತಿರುತ್ತವೆ. ನಮ್ಮ ಮಾವನವರಿಗೆ ನಾನು ಮಾಡಿದ ಉಪ್ಪಿಟ್ಟು, ಇಡ್ಲಿ, ದೋಸೆ ಅಂದರೆ ಬಹಳ ಪ್ರೀತಿ. ಸ್ವಲ್ಪೇ ತಿಂದರೂ ಬಾಯಿ ಚಪ್ಪರಿಸುವದೇ ಬಹಳ.

ಹಳೆಯ ಗೊಡ್ಡು ಸಂಪ್ರದಾಯಗಳಲ್ಲಿ ನಂಬಿಕೆ ಇಲ್ಲದ ನಮ್ಮ ಮಾವನವರಿಗೆ ನಿರ್ಮಲವಾದ ಮನಸ್ಸು ಸ್ವಚ್ಛ ಶಾಂತ ವಾತಾವರಣವೆಂದರೆ ಬಹಳ ಮೆಚ್ಚುಗೆ. ಆದ ಕಾರಣ ಹಳೆಯ ಸಂಪ್ರದಾಯದ ಗುಡಿಗುಂಡಾರಗಳಿಗಿಂತ ಮಾತಾ ಅರವಿಂದರ ಅನುಚರರಾಗಿದ್ದಾರೆ. ಅವರು ಮುಂಜಾನೆ ಮತ್ತು ಸಾಯಂಕಾಲ ಧ್ಯಾನದಲ್ಲಿಯೂ ಬಹಳಷ್ಟು ಸಮಯ ಬರಹದಲ್ಲಿಯೂ ಓದುವದರಲ್ಲಿಯೂ, ಭೆಟ್ಟಿಗಾಗಿ ಬಂದ ಸಾಹಿತಿಗಳ ಸಂಗಡ ಸಂಭಾಷಣೆಯಲ್ಲಿಯೂ ಮೊಮ್ಮಕ್ಕಳ ಮುದ್ದಾಟದಲ್ಲಿಯೂ ದೂರದಲ್ಲಿದ್ದ ತಮ್ಮ ಸಂಗಾತಿಗಳಿಗೆ ಪತ್ರ ಬರೆಯುವದರಲ್ಲಿಯೂ ಅವರಿಂದ ಬಂದ ಪತ್ರಗಳನ್ನು ಪರಿಶೀಲಿಸುವದರಲ್ಲಿಯೂ ವಾಯುಸೇವನೆಯಲ್ಲೂ ತೊಡಗಿದ್ದು ವೇಳೆ ಸವೆದುದೇ ಗೊತ್ತಾಗುವದಿಲ್ಲ ಅವರಿಗೆ.

ಸರ್ವೀಸ್‌ನಲ್ಲಿ ನಮ್ಮ ಮಾವನವರಿಗೆ ಆಕಾಶವಾಣಿಯೇ ಮನೆಯಾಗಿತ್ತು. ಅಲ್ಲಿಯ ಕೆಲಸಗಾರರೆಲ್ಲ ಇವರ ಬಂಧುಗಳು. ರಾತ್ರಿ ಹನ್ನೆರಡು ಗಂಟೆಯಾದರೂ ಎಬ್ಬಿಸಿ ರೇಡಿಯೋ ಕಾರ್ಯಕ್ರಮಕ್ಕೆ ಬೇಕಾದ ಸ್ಕ್ರಿಪ್ಟುಗಳನ್ನು ತಯಾರಿಸಿ ಕೊಡಬೇಕೆಂದು ಕೇಳಿಕೊಂಡಾಗ ಮಾವನವರು ಮುಗುಳುನಗೆಯಿಂದ ಅವರ ಕೆಲಸವನ್ನು ಹೂ-ಹಾರ ಎತ್ತಿದಷ್ಟು ಸಲೀಸಾಗಿ ಪೂರೈಸುವರು. ನೌಕರಿಯಿಂದ ನಿವೃತ್ತಿಯಾದರೂ ಆಕಾಶವಾಣಿಯಿಂದ ನಿವೃತ್ತಿ ಇಲ್ಲ ನಮ್ಮ ಮಾವನವರಿಗೆ, ಏಕೆಂದರೆ ನನಗೆ ನಿವೃತ್ತಿ ಆದರೂ ನನ್ನ ಬರವಣಿಗೆಯಿಂದ ಲೇಖನಿಗೆ ನಿವೃತ್ತಿ ಇಲ್ಲ ಎಂದು ಅವರೇ ತಮ್ಮ ನಿವೃತ್ತಿಯ ಮುನ್ನಾ ದಿನದ ಪ್ರಸಾರ ಭಾಷಣದಲ್ಲಿ ಹೇಳಿದ್ದರು.

ಎನ್ಕೆ ಅವರ ಭಾಷಣ ಕೇಳಿದವರಿಗೆ 'ಮಂಕುತಿಮ್ಮನ ಕಗ್ಗ'ದಲ್ಲಿ ಬಂದ ಒಂದು ಸಾಲು 'ನಗುವ ನಗಿಸುವ ನಗಿಸಿ ನಗುತ ಬಾಳುವ ವರವ ಮಿಗೆ ನೀನು ಬೇಡಿಕೊಳೊ ಮಂಕುತಿಮ್ಮ' ನೆನಪಾಗಲಿಕ್ಕೇ ಬೇಕು. ಯಾವದೇ ಕಾರ್ಯಕ್ರಮಕ್ಕೆ ಕರೆವರೂ ಅವರು ಕೊಟ್ಟ ವಿಷಯದ ಮೇಲೆ ಆಗಿಂದಾಗಲೇ ನಿರರ್ಗಳವಾಗಿ ಹಾಸ್ಯ ಚಟಾಕಿಯನ್ನು ಹಾರಿ ಸುತ್ತ ಲಲಿತವಾಗಿ ಮಾತನಾಡುವರು.

ಬೆಂಗಳೂರಿನ ಸಾಹಿತ್ಯ ಪರಿಷತ್ತಿನಿಂದ ಕರೆ ಬಂದಾಗ ಸದಾಕಾಲ ಸಾಹಿತ್ಯ ಚಿಂತನೆ ಯಲ್ಲೇ ಕಾಲ ಕಳೆಯುತ್ತಿದ್ದವರಿಗೆ 'ಅರಸುತಿಪ ಲತೆ ಕಾಲ ತೊಡಕಲು ಹಿಡಿದು ಬಿಸು ಟುವರುಂಟೆ ಲೋಕದಿ' ಎಂಬ ಹಾಗೆ ತಾನಾಗಿ ಬಂದ ಸದವಕಾಶವನ್ನು ಬಿಡದೆ ಕರ್ನಾಟಕ ದಲ್ಲೆಲ್ಲಾ ಸುತ್ತಾಡಿ ವಿದ್ವಾಂಸರ, ವಾಗ್ಮಿಗಳ, ಕವಿಗಳ, ಕಲಾವಿದರ, ನಾಟಕಕಾರರ, ಜಾನ ಪದ ಸಂಗೀತಜ್ಞರ ಬಯಲಾಟ ಯಕ್ಷಗಾನಗಳ ಕಾರ್ಯಕ್ರಮ ಸಂದರ್ಶನ ಮಾಡಿಕೊಂಡು ಟೇಪ್‌ರಿಕಾರ್ಡಿಂಗ್ ಮಾಡಿಕೊಳ್ಳಲು ಊರಿಂದೂರಿಗೆ ಅಡ್ಡಾಡಿದ್ದೇ ಅಡ್ಡಾಡಿದ್ದು.

'ಬೆಂದರೆ ಬೇಂದ್ರೆ' ಎನ್ನುವಂತೆ 'ನೊಂದರೆ ಎನ್ಕೆ' ಎನ್ನಬಹುದೇನೊ. ಬದುಕಿ ನಲ್ಲಿ ಇವರು ತಿಂದ ಸಾವು–ನೋವುಗಳ ಪೆಟ್ಟು ಅಷ್ಟಿಷ್ಟಲ್ಲ. ಇಬ್ಬರು ಹೆಂಡಂದಿರು ಮಗಳು ಅಣ್ಣಂದಿರು ಚಿಕ್ಕಂದಿನಲ್ಲಿ ತಂದೆ ತಾಯಿ ಇವರನ್ನೆಲ್ಲ ಅಗಲಿದ ಎನ್ಕೆಯವರು ನೊಂದು ಬರೆದ ಕಾದಂಬರಿಗಳನ್ನು ಓದಿದಾಗ ಎಂತಹ ಕಠಿಣ ಹೃದಯದವರಿಗೂ ದುಃಖವಾಗುವದು ಸಹಜ. ಜೀವನದಲ್ಲಿ ಸಾವು–ನೋವು ಬಡತನಗಳನ್ನು ಅನುಭವಿ ಸಿದರೂ ಅವರು ನಮಗೆಲ್ಲ ಹೇಳುವದು ಒಂದೇ ಮಾತು : 'ಯಾವಾಗಲೂ ನಗುನಗುತ್ತ ಇರಲು ಪ್ರಯತ್ನಿಸಿರಿ. ಸಂತೋಷದಿಂದಿರುವದು ನಮ್ಮ ಕೈಯಲ್ಲಿದೆ.'

ರಾಮಾಯಣಕಾಲದಲ್ಲಿ ರಾಮ ಲಕ್ಷ್ಮಣರ ಉದಾಹರಣೆ ಏಕೆ, ಪ್ರತ್ಯಕ್ಷವಾಗಿ ಕಂಡ ಎನ್ಕೆಯವರ ಸಹೋದರ ಪ್ರೇಮ ಅವಿಸ್ಮರಣೀಯ. ಪ್ರತಿ ರವಿವಾರ ಮೂರು ಜನ ಸೋದರರು ಒಟ್ಟುಗೂಡಿ ಒಬ್ಬರಿಗೊಬ್ಬರು ತಮ್ಮ ತಮ್ಮ ಸುಖ ದುಃಖಗಳನ್ನು ಹಂಚಿಕೊಳ್ಳುವದರಲ್ಲಿಯೆ ತ್ರಿಮೂರ್ತಿಗಳಿಗೆ ತೃಪ್ತಿ ಇರುತ್ತಿತ್ತು.

ನಮ್ಮ ಮಾವನವರು ಬೇಂದ್ರೆಯವರಿಂದ ಸಾಹಿತ್ಯದೀಕ್ಷೆ ಪಡೆದು ಸಾಹಿತಿಗಳಾಗಿ ದ್ದಾರೆ. ಮೇಲಿಂದ ಮೇಲೆ ನಮ್ಮ ಮನೆಗೆ ಬರುತ್ತಿದ್ದ ಬೇಂದ್ರೆಯವರು ಅಡುಗೆ ಮನೆಗೆ ಬಂದು ನಮ್ಮ ಯೋಗಕ್ಷೇಮ ವಿಚಾರಿಸುತ್ತಿದ್ದರು. ಹಗಲಿರುಳೂ ಅವರ ಸಾನ್ನಿಧ್ಯದಲ್ಲಿದ್ದು ನಮ್ಮ ಮಾವನವರು, ಜ್ಞಾನಜ್ಯೋತಿಯನ್ನು ಬೆಳಗಿಸಿಕೊಂಡರು. ಸಂಖ್ಯಾಶಾಸ್ತ್ರದ ಬಗ್ಗೆ, ಹೊಸ ಹೊಸ ಸಂಶೋಧನೆ ಬಗ್ಗೆ ಬೇಂದ್ರೆಯವರಿಂದ ತಿಳಿದು ಕೊಂಡಿದ್ದಾರೆ. ಅದ್ದರಿಂದ ಅವರು ತಮ್ಮ ವ್ಯಾಖ್ಯಾನದಲ್ಲಿ ಬೇಂದ್ರೆ ಎಂದರೆ ಒಂದು ವ್ಯಕ್ತಿ ಅಲ್ಲ, ಒಂದು ಶಕ್ತಿ ಎಂದು ಪದೇ ಪದೇ ಹೇಳುತ್ತಾರೆ.

ಸಾಹಿತ್ಯ ಪ್ರಪಂಚದೊಡನೆ ಸಾಂಸಾರಿಕ ಪ್ರಪಂಚವೂ ಸೇರಿ ಎನ್ಕೆಯವರಿಗೆ ಒಂದು ನಾಣ್ಯದ ಎರಡು ಮುಖಗಳಿದ್ದಂತೆನಿಸಿರಬೇಕು. ಜೀವನದಲ್ಲಿ ನೊಂದವರಿಂದ

ಮುಂದಿನ ಸುಖಜೀವನಕ್ಕಾಗಿ ಮಕ್ಕಳ ಮೊಮ್ಮಕ್ಕಳ ಏಳ್ಗೆಗಾಗಿ ಶ್ರಮಿಸುತ್ತಿದ್ದಾರೆ. ನಾನು ಎನ್ಕೆಯವರ ಸೊಸೆಯಾಗಿ ಬಂದಾಗ ಅವರ ಮನೆ ನಂದಗೋಕುಲದಂತಿತ್ತು. ಅವರ ದಾಂಪತ್ಯ ಜೀವನದ ಮೇಲೆ ದೇವರಿಗೆ ಹೊಟ್ಟೆಕಿಚ್ಚು ಬಿದ್ದಹಾಗೆ ನಗುನಗುತ್ತ ಇದ್ದ ನಮ್ಮ ಅತ್ತೆಗೆ ಮೈಲಿ ಕಾಣಿಸಿಕೊಂಡು ನಾಲ್ಕೇ ದಿನಗಳಲ್ಲಿ ಕಣ್ಣುಮುಚ್ಚಿದರು. ಆಗ ೧೨–೧೩ ವರ್ಷದ ನನ್ನ ಮೈದುನ ರವಿಗೆ, ತಾಯಿ ಇಲ್ಲದ ತಬ್ಬಲಿಗೆ, ತಾಯಿ ಸ್ಥಾನ ಕೊಟ್ಟು ತಂದೆಯ ಕರ್ತವ್ಯವನ್ನೂ ಮಾಡಿದ್ದಾರೆ. ಅವನೀಗ ಎಂ. ಎ. ದ ವರೆಗೆ ಓದಿ ಕರ್ನಾಟಕ ಬ್ಯಾಂಕ್‌ನಲ್ಲಿ ಕೆಲಸ ಮಾಡುತ್ತಿದ್ದಾನೆ. ಇನ್ನೊಬ್ಬ ಮೈದುನನಿಗೆ ಕಿರ್ಲೋಸ್ಕರ ಕಂಪನಿಯಲ್ಲಿ ಕೆಲಸ. ಹಿರಿಯ ಮಗ ಅಂದರೆ ನಮ್ಮ ಯಜಮಾನರು ಕೆ.ಇ.ಬಿ.ಯಲ್ಲಿದ್ದಾರೆ. ಮನೆತನದ ವಿಚಾರದಲ್ಲಿ ನಮ್ಮ ಮಾವನವರದು ಚೊಕ್ಕಟತನದ ಯೋಜನೆ. ಮೂರು ಮಕ್ಕಳ ಮೂರು ಮನೆಗಳು ಹೆಸರಿಗೆ ಬೇರೆಬೇರೆಯಾಗಿದ್ದರೂ ನಾವೆಲ್ಲ ಯಾವಾಗಲೂ ಒಬ್ಬ ತಂದೆಯ ರಕ್ಷಣೆಯಲ್ಲಿ ಭದ್ರವಾಗಿದ್ದೇವೆ.

ಮೊಮ್ಮಕ್ಕಳ ಹುಟ್ಟು ಹಬ್ಬಕ್ಕೆ, ದೀಪಾವಳಿಗೆ ನಮ್ಮ ಮಾವನವರಿಂದ ಕಾಣಿಕೆ ಇದ್ದೇ ಇರುತ್ತದೆ. ದೀಪಾವಳಿ ಹಬ್ಬ ಬರಲಿ, ಭಾರತಹುಣ್ಣಿವೆ ಹಬ್ಬ ಬರಲಿ, ಇನ್ನಾವುದೇ ಹಬ್ಬ ಹುಣ್ಣಿವೆ ಬರಲಿ ಎಲ್ಲರೂ ಒಂದೆಡೆಗೆ ಸೇರುತ್ತೇವೆ. ಒಬ್ಬೊಬ್ಬರ ಮನೆಯಲ್ಲಿ ಒಂದೊಂದು ರುಚಿ ರುಚಿಯಾದ ಊಟದೊಡನೆ ಮೋಜಿನಿಂದ ಹರಟೆ ಹೊಡೆಯುತ್ತ ಸಮೀಚೀನವಾಗಿ ಊಟ ಮಾಡುತ್ತೇವೆ.

ಮೂವರು ಮಕ್ಕಳು ಮೂವರು ಸೊಸೆಯಂದಿರು, ಮೂವರು ಮೊಮ್ಮಕ್ಕಳು– ಇವು ನಮ್ಮ ಮಾವನವರ ಮುಪ್ಪಿನ ಕಾಲದ ತೃಪ್ತಿ. ಅವರ ಈಗಿನ ದಿನಚರಿ ಎಂದರೆ ಸಂಜೆ ರಾತ್ರಿ ಎಮ್ಮಿಕೆರೆ ಮನೆಯ 'ಮಾತೃಶ್ರೀ'ಯಲ್ಲಿ; ಮುಂಜಾನೆ ಮಧ್ಯಾಹ್ನ ಕಲ್ಯಾಣನಗರದ 'ಪರಿಮಳ'ದಲ್ಲಿ.

ನಾನು ಶಿಕ್ಷಕಿಯಾಗಿ ನೌಕರಿ ಮಾಡುತ್ತಿರುವದರಿಂದ ಮಕ್ಕಳನ್ನು ನೋಡಿಕೊಂಡು ಶಾಲೆ ಮನೆ ಪೇಟೆ ಎಲ್ಲಾ ನೋಡಿಕೊಳ್ಳುವದು ಕಠಿಣ ಎಂದು ಒಮ್ಮೊಮ್ಮೆ ಮಾತ್ರ ನಮ್ಮ ಮನೆಗೆ ಊಟಕ್ಕಾಗಲೀ ತಿಂಡಿಗಾಗಲೀ ಬರುತ್ತಾರೆ.

ಸಿನೇಮಾ ಕಾರ್ಯಕ್ರಮಗಳಿಗೆ ಹೆಚ್ಚಾಗಿ ನಾವು ನಮ್ಮಿಬ್ಬರು ಮಕ್ಕಳ ಜೊತೆ, ನಮ್ಮ ಮಾವನವರನ್ನು ಕರೆದೊಯ್ಯುತ್ತೇವೆ. ತಮ್ಮ ಅಜ್ಜ ಜೊತೆಗೆ ಸಿನೆಮಾಕ್ಕೆ ಬರುತ್ತಾರೆಂದರೆ ಮೊಮ್ಮಕ್ಕಳಿಗೆ ಬಲು ಹಿಗ್ಗು. ಅವರಿಗೆ ಸ್ವಲ್ಪ ಹುಷಾರಿಲ್ಲದ ಹಾಗೆ ಆದರೆ ಮನೆಯಲ್ಲಿ ಎಲ್ಲರಿಗೂ ಗಾಬರಿ. ಆದರೆ ಅವರು ಮಾತ್ರ ಎಲ್ಲರಿಗೂ ಧೈರ್ಯ ಹೇಳುತ್ತಾರೆ.

# ನಮ್ಮ ಕಾಕಾ

## ಪ್ರಲ್ಹಾದ ಕುಲಕರ್ಣಿ

ನಾನು ನಾಲ್ಕು ವರುಷದ ಬಾಲಕನಿದ್ದಾಗ ನನ್ನ ತಂದೆ ತಾಯಿ ಮತ್ತು ನನ್ನ ತಂಗಿಯೊಂದಿಗೆ ಗದುಗಿನಿಂದ ಧಾರವಾಡಕ್ಕೆ ಬಂದೆ. ಧಾರವಾಡದ ಲೈನ ಬಜಾರದಲ್ಲಿ ಜಾಂಬೇಕರ ವಾಡಾದಲ್ಲಿ ಒಂದು ಅಚ್ಚುಕಟ್ಟಾದ ಚಿಕ್ಕ ಮನೆಯಲ್ಲಿ ವಾಸವಾಗಿದ್ದೆವು. ಮನೆಯ ಎದುರಿಗೆ ಹೆಣ್ಣುಮಕ್ಕಳ ಟ್ರೇನಿಂಗ ಕಾಲೇಜದ ಒಳ್ಳೆ ಕರೇಕಲ್ಲಿನ ಕಟ್ಟಡ ನೋಡಲು ಆಕರ್ಷಕವಾಗಿತ್ತು. ಕಾಲೇಜ ಕಂಪೌಂಡಿನಲ್ಲಿ ಒಳ್ಳೇ ಗಾರ್ಡನ್ ಮತ್ತು ಕಾಲೇಜ ಕಂಪೌಂಡಿಗೆ ಹತ್ತಿ ಪೋಲೀಸ ಪರೇಡ ಗ್ರೌಂಡ ಇತ್ತು. ಬೆಳಿಗ್ಗೆ ಪೋಲೀಸ ಪರೇಡ ನಡೆಯುತ್ತಿತ್ತು. ನಾನು ಅದನ್ನು ನೋಡಲು ಒಳ್ಳೇ ಉತ್ಸುಕನಾಗಿ ಹೋಗುತ್ತಿದ್ದೆ. ಸಾಯಂಕಾಲ ೫ ಗಂಟೆಗೆ ಹಾಕಿ ಆಟ ನಡೆಯುತ್ತಿತ್ತು. ನನ್ನ ಸೋದರ ಮಾವನೊಬ್ಬನು ಹಾಕಿ ಆಟದಲ್ಲಿ ಪ್ರವೀಣನಾಗಿದ್ದ. ಅವನು ಪೋಲೀಸರ ಸಂಗಡ ಹಾಕಿ ಮ್ಯಾಚು ಆಡುತ್ತಿದ್ದ, ನಾನು ಅದನ್ನು ನೋಡಲು ಉತ್ಸುಕನಾಗಿ ಹೋಗುತ್ತಿದ್ದೆ. ನನಗೂ ಆಡುವ ಕುತೂಹಲವುಂಟಾಗುತ್ತಿತು. ನಮ್ಮ ಸೋದರಮಾವ ನಮ್ಮ ಮನೆಗೆ ಆಗಾಗ್ಗೆ ಬರುವ ರೂಢಿ ಇತ್ತು. ಆತನ ಹಾಕಿ ಸ್ಟಿಕ್ ತೆಗೆದುಕೊಂಡು ನಾನು ಒಬ್ಬಂಟಿಗನಾಗಿ ಆಡುತ್ತಿದ್ದೆ. ನನಗೆ ಯಾವ ಶಾಲೆಗೆ ಹೆಸರು ಹಚ್ಚುವುದು ಎಂಬ ಸಮಸ್ಯೆ ಬಂದಿತ್ತು. ಲೈನ ಬಜಾರದಲ್ಲಿ ಶ್ರೀರಾಮದೇವರ ಗುಡಿ ಹತ್ತಿರ ಆರೂರ ಎಂಬುವರ ಬಿಲ್ಡಿಂಗಿನಲ್ಲಿ ಒಂದು ಕನ್ನಡ ಶಾಲೆ ಅದೇ ವರ್ಷ ಪ್ರಾರಂಭವಾಗಿತ್ತು. ನನ್ನ ತಂದೆ ಅವರು ನನ್ನನ್ನು ಒತ್ತಾಯದಿಂದ ಆ ಶಾಲೆಗೆ ಹೆಸರು ಹಚ್ಚಿದರು. ನನ್ನನ್ನು ಮಿನ್ನೆತ್ತಾ ಕ್ಲಾಸಿಗೆ ಕೂಡ್ರಿಸಿದರು. ಒಂದೆರಡು ತಾಸು ಆ ಶಾಲೆಯಲ್ಲಿ ಕಳೆದೆ. ನಂತರ ಮನೆಗೆ ಬಂದು ‘ಆ ಶಾಲೆ ಬೇಡಾ ಮತ್ತೆ ಗದುಗಿಗೆ ಹೋಗೋಣ’ ಎಂದು ಹಟ ಮಾಡ ತೊಡಗಿದೆ. ಕಡೆಗೆ ನಾನು ಆ ಶಾಲೆಗೆ ಹೋಗಲೇ ಇಲ್ಲ. ಜಾಂಬೇಕರವಾಡಾದಲ್ಲಿ ಕೆಲ ವರ್ಷ ಕಳೆದೆವು. ನಂತರ ಮಾಳಮಡ್ಡಿಯಲ್ಲಿ ಇನ್ನೊಂದು ಚಿಕ್ಕ ಮನೆಯಲ್ಲಿ ವಾಸವಾಗಿದ್ದೆವು. ಇಷ್ಟರಲ್ಲಿ ನನ್ನ ತಂದೆ ಅವರು ಕೆ. ಇ. ಬೋರ್ಡ್ಸ ಹಾಯಸ್ಕೂಲದಲ್ಲಿ ಶಿಕ್ಷಕರಾಗಿದ್ದರು. ಮತ್ತೆ ನನ್ನ ಶಾಲೆ ಪ್ರ್ಯಾಕ್ಟಿಸಿಂಗ್ ಸ್ಕೂಲಿನಲ್ಲಿ ಮತ್ತೆ ಮುಂದುವರೆಯಿತು. ಮೇಲಗಿರಿ ಗೋವಿಂದರಾಯರ ಮನೆಯಲ್ಲಿ ಅನೇಕ ವರ್ಷ ಕಳೆದೆವು. ಮುಂದೆ

ಮಾಳಮಡ್ಡಿಯಲ್ಲಿ ಪ್ರಭು ಚಾಳಿಗೆ ಬಂದೆವು. ಆಗ ನಾನು ಕನ್ನಡ ಎರಡನೆ ಇಯತ್ತೆಯಲ್ಲಿ ಓದುತ್ತಾ ಇದ್ದೆ.

ಮನೆಯಲ್ಲಿ ನನ್ನ ತಾಯಿ ನನಗೆ ಹಾಗೂ ನನ್ನ ತಂಗಿಗೆ ಶಿಕ್ಷಕಿಯಾಗಿದ್ದಳು. ಪ್ರತಿದಿನ ಮೂರುಸಂಜೆ ಹೊತ್ತಿನಲ್ಲಿ ಅಣ್ಣ ತಂಗಿಯರಿಗೆ ಪಾಠ ಹೇಳುತ್ತಿದ್ದಳು. ಧಾರವಾಡದ ಕಾಮನಕಟ್ಟೆಯಲ್ಲಿ ನಮ್ಮ ತಾಯಿಯ ತವರು ಮನೆ ಇತ್ತು. ಅದೊಂದು ದೊಡ್ಡ ಮಹಡಿಯ ಮನೆ. ಒಳ್ಳೇ ಭರ್ತಿ ರೋಡಿಗೆ ಮನೆಯಿತ್ತು. ನಾವು ನಮ್ಮ ಅಜ್ಜ ಮತ್ತು ಅಜ್ಜಿಯನ್ನು ಕಾಣಲು ಆಗಾಗ್ಗೆ ಹೋಗುತ್ತಿದ್ದೆವು. ನಮ್ಮ ಅಜ್ಜ ಚಹ ಅವಲಕ್ಕಿ ಪ್ರಿಯ. ಚಹಾ ಕುಡಿಯಲು ಕುಳಿತರೆ ಒಂದು ಪಾತೇಲಿ ಹಚ್ಚಿದ ಅವಲಕ್ಕಿ ಮತ್ತು ಒಗ್ಗರಣೆಯಲ್ಲಿ ತಾಳಿಸಿದ ಗಿಡ್ಡ ಮೆಣಸಿನಕಾಯಿ ಮೆಲುಕುತ್ತಾ ಒಂದು ಬುಟ್ಟಿ ಅವಲಕ್ಕಿ ಮಾಯವಾಗುತ್ತಿತ್ತು. ಕಣ್ಣಲ್ಲಿ ನೀರು ಮುಖದ ಮೇಲೆ ಬೆವರು ಸುರಿಸುತ್ತಾ ನಮ್ಮ ಅಜ್ಜ ಅವಲಕ್ಕಿ ಖಾಲಿ ಮಾಡುತ್ತಿದ್ದ. ನಾವು ಅವನ ಮುಂದೆ ನಿಂತಾಗ ನಮಗೂ ಸ್ವಲ್ಪ ಕೈಯಲ್ಲಿ ಶ್ಯಾಂಪಲ್ ಅವಲಕ್ಕಿ ಹಾಕುತ್ತಿದ್ದ. ನಾವು ಬಾಯಿಯಲ್ಲಿ ಹಾಕಿದ ತಕ್ಷಣವೇ ಕುಡಿಯಲು ನೀರು ಹುಡುಕುತ್ತಿದ್ದೆವು. ಅಷ್ಟೊಂದು ಖಾರ ನಮಗೆ ಆಗುತ್ತಿರಲಿಲ್ಲ.

ಹೀಗಿರುವಾಗ ಒಂದು ದಿನ ಗೌರಿ ಹಬ್ಬಕ್ಕೆಂದು ನನ್ನ ತಾಯಿಯ ಜೊತೆ ಹೋಗಿದ್ದೆ. ಮೈಯಲ್ಲಿ ಚಳಿ ಬಂದು ಹಾಸಿಗೆ ಹಿಡಿದೆ. ಅದು ಟಾಯಿಫಾಯ್ಡ್ ಎಂದು ಡಾಕ್ಟರರಿಂದ ಗೊತ್ತಾಯಿತು. ನನ್ನ ತಾಯಿ ಒಂದು ದಿನವೂ ನನ್ನನ್ನು ಬಿಟ್ಟು ಇರದೇ ನನಗೆ ಆರೈಕೆ ಮಾಡಿದಳು. ಆ ಟಾಯಿಫಾಯ್ಡ್ ಮತ್ತೆ ೫ ಜನರಿಗೆ ಹಬ್ಬಿತು. ನನ್ನ ತಾಯಿ, ಅಜ್ಜ, ನನ್ನ ತಂಗಿ ಹೀಗೆ ಮೂರು ಆಹುತಿ ತೆಗೆದುಕೊಂಡಿತು. ಒಟ್ಟು ೫ ಜನರು ಹಾಸಿಗೆ ಹಾಕಿದರು. ನನಗೆ ಹಾಗೂ ನನ್ನ ಕಕ್ಕನ ಮಗಳಿಗೆ ಸ್ವಲ್ಪ ಗುಣಮುಖವಾಗತೊಡಗಿತು. ಸ್ವಲ್ಪಸ್ವಲ್ಪ ಅಡ್ಡಾಡಲು ಬರುವಂತೆ ಆಯಿತು. ನಮ್ಮ ತಂದೆ ಅವರು ನನ್ನನ್ನು ಹುಬ್ಬಳ್ಳಿಯಲ್ಲಿ ನನ್ನ ಕಕ್ಕನ ಮನೆಯಲ್ಲಿ ವಿಶ್ರಾಂತಿಗಾಗಿ ಇಟ್ಟಿದ್ದರು. ಕೆಲದಿನ ಕಳೆದು ಧಾರವಾಡಕ್ಕೆ ಬಂದೆವು. ನಮ್ಮ ಅಜ್ಜನ ಮನೆಯಲ್ಲಿ ಹಾಸಿಗೆ ಖಾಲಿ ಆಗಿದ್ದವು. ನನ್ನ ತಂದೆ ಅವರಿಗೆ ನನ್ನ ತಾಯಿ ಮತ್ತು ನನ್ನ ತಂಗಿಯ ಹಾಸಿಗೆ ಎಲ್ಲಿ ಎಂದು ವಿಚಾರಿಸಿದೆ. ಅವರು ಮುಖ ಸಪ್ಪಗೆ ಮಾಡಿ ಅವರಿಬ್ಬರು ತೀರಿಕೊಂಡರು ಎಂದು ಹೇಳಿದಾಗ ನನ್ನ ಎದೆ ಒಡೆದು ನೀರಾಯಿತು. ಹೊಟ್ಟೆಯಲ್ಲಿ ಹೇಳಲಾರದಂಥ ಕಸಿವಿಸಿ. ಏನೂ ತೋಚದಂತಾಗಿ ಮುಖ ಸಪ್ಪಗೆ ಆಯಿತು. ಮುಂದೆ ಏನೂ ತೋಚದೆ ನಿರಾಶೆಗೊಂಡು ಕಾಲ ಕಳೆದೆವು.

ಇಷ್ಟರಲ್ಲಿ ನಮ್ಮ ತಂದೆ ಅವರಿಗೆ ಮುಂಬಯಿ ಆಕಾಶವಾಣಿ ಕೇಂದ್ರಕ್ಕೆ ಕರೆ ಬಂದಿತು. ಅವರು ಸಂಶೋಧನ ಸಂಸ್ಥೆಯ ನೌಕರಿಗೆ ರಾಜೀನಾಮೆ ಕೊಟ್ಟು ಕೂಡಲೇ ಮುಂಬಯಿ ಆಕಾಶವಾಣಿ ಕೇಂದ್ರಕ್ಕೆ ಹಾಜರಾದರು. ಧಾರವಾಡದಲ್ಲಿ ನಮ್ಮ ಹಿರಿಯ

ಕಕ್ಕನ ಹತ್ತಿರ ನಮ್ಮನ್ನೆಲ್ಲಾ ಬಿಟ್ಟು ತಾವು ಮುಂಬಯಿಗೆ ಹೋದರು. ನನ್ನ ಹಿರಿಯ ಕಕ್ಕ ತಮ್ಮ ಮಕ್ಕಳೊಂದಿಗೆ ನಮ್ಮ ಅಜ್ಜನ ಮನೆಯಲ್ಲಿ ಇರುತ್ತಿದ್ದರು. ನನ್ನ ಹಿರಿಯ ಕಕ್ಕನಿಗೂ ಅದು ಮಾವನ ಮನೆ ಆಗಿತ್ತು. ನನ್ನ ಹಿರಿಯ ಕಕ್ಕನ ಹೆಂಡತಿ ಮತ್ತು ನನ್ನ ತಾಯಿ ಒಡಹುಟ್ಟಿದ ಅಕ್ಕ ತಂಗಿಯರು. ಹೀಗಾಗಿ ನನ್ನ ಕಕ್ಕನ ಮಕ್ಕಳ ಸಂಗಡ ನಿಕಟ ಸಂಬಂಧವಾಗಿತ್ತು. ನನ್ನ ಕಕ್ಕನ ಮಗ, ನಾನು ೨ನೇ ನಂಬರ ಶಾಲೆಗೆ ಹೆಸರು ಹಚ್ಚಿದೆವು. ನಾನು ೪ನೇ ಇಯತ್ತೆಯಲ್ಲಿ ಓದುತ್ತಾ ಇದ್ದೆ. ನಾನು ಹಾಗು ನನ್ನ ಕಕ್ಕನ ಮಕ್ಕಳ ಸಂಗಡ ಬೆನ್ನಿಗೆ ಬಿದ್ದ ಅಣ್ಣ ತಮ್ಮ ಅಕ್ಕ ತಂಗಿಯರಂತೆ ಹಚ್ಚಿಕೊಂಡು ನಡೆದೆವು. ಅವರಿಗೂ ನನಗೂ ಅಜ್ಜಿ ಅಜ್ಜನ ಮನೆ ಒಂದೇ ಆಗಿತ್ತು. ನನಗೆ ಬೆನ್ನಿಗೆ ಬಿದ್ದ ತಮ್ಮ ಮುರಲಿ ನನ್ನ ತಾಯಿ ತೀರಿಕೊಂಡಾಗ ಹತ್ತು ತಿಂಗಳ ಮಗು ಇದ್ದ. ನನ್ನ ತಾಯಿ ನಮ್ಮ ಅಜ್ಜಿಯ ಉಡಿಯಲ್ಲಿ ಹಾಕಿ ನಮ್ಮನ್ನು ಅಗಲಿದ್ದಳು. ಚಿಕ್ಕ ಮಗುವಿನ ಪಾಲನೆ ಪೋಷಣೆ ನನ್ನ ಅಜ್ಜಿಯದೇ ಹೊಣೆ ಆಗಿತ್ತು. ಅವನು ಬಹಳೇ ಹಟಮಾರಿ ಮಗು ಆಗಿದ್ದ. ನಮ್ಮ ಅಜ್ಜಿಯನ್ನು ಬಿಟ್ಟು ಒಂದು ಕ್ಷಣವೂ ಇರುತ್ತಿರಲ್ಲ. ನಾವೆಲ್ಲ ಅವನನ್ನು ಬಗಲಲ್ಲಿ ಹೊತ್ತುಕೊಂಡು ಆಡ್ಯಾಡುತ್ತಿದ್ದೆವು.

ಮುಂದೆ ನಮ್ಮ ತಾಯಿಯ ತಂಗಿ (ಅಬಚಿಯ ಮಗಳು)ಯನ್ನು ಮದುವೆ ಆಗಿ ಕೆಲದಿನಗಳಲ್ಲಿ ನಮ್ಮ ತಂದೆ ಆಕೆಯನ್ನು ಮುಂಬಯಿಗೆ ಕರೆದುಕೊಂಡು ಹೋದರು. ಅವರು ಮುಂಬಯಿ ದಾದರದಲ್ಲಿ ಒಬ್ಬ ಸ್ನೇಹಿತರ ಮನೆಯಲ್ಲಿಯ ಕೆಲಭಾಗದಲ್ಲಿ ವಾಸಿಸುತ್ತಿದ್ದರು. ನಾವು ಬೇಸಿಗೆ ರಜೆ ಪ್ರಾರಂಭವಾದಾಗ ಮುಂಬಯಿಗೆ ಹೋಗುತ್ತಿದ್ದೆವು. ನಾನು ಬಹಳೇ ಹಟಮಾರಿ ಸ್ವಭಾವದವನು. ನಮ್ಮ ತಂದೆಯವರನ್ನು ಬಹಳೇ ಪೀಡಿಸುತ್ತಿದ್ದೆ. ನನಗೆ ವೇಳೆ ಕಳೆಯಲು ಮನೆಯಲ್ಲಿ ಬಹಳೇ ಬೇಜಾರು ಆಗುತ್ತಿತ್ತು. ನಾನು ಒಬ್ಬನೇ ಆಕಾಶವಾಣಿ ಕೇಂದ್ರಕ್ಕೆ ಹೋಗುತ್ತಿದ್ದೆ. ನನ್ನ ಜೊತೆ ನನ್ನ ಕಕ್ಕನ ಮಗ ಬರುತ್ತಿದ್ದನು. ನನ್ನ ತಂದೆಯವರು ನನ್ನ ಬೆನ್ನಿಗಾದ ಹಾಳವನ್ನು ಆಪರೇಶನ ಮಾಡಿಸಬೇಕೆಂದು ವಿಚಾರ ಮಾಡಿದರು. ಮುಂಬಯಿ ಜೆ. ಜೆ. ಹಾಸ್ಪಿಟಲ್‌ದಲ್ಲಿ ಅವರ ಕೇವಲ ಸ್ನೇಹಿತರೊಬ್ಬರು ಡಾಕ್ಟರ್ ಇದ್ದರು. ನನ್ನನ್ನು ಕೂಡಲೇ ಆಸ್ಪತ್ರೆಗೆ ಸೇರಿಸಿ ಆಪರೇಶನ್ ಮಾಡಿಸಿದರು.

ಆಸ್ಪತ್ರೆಯಿಂದ ಮರಳಿ ಬಂದ ಮೇಲೆ ಪ್ರತಿದಿನ ಒಂದೊಂದು ಸ್ಥಳಕ್ಕೆ ಮುಂಬಯಿ ಊರು ಸುತ್ತಾಡಲು ಕರೆದುಕೊಂಡು ಹೋಗುತ್ತಿದ್ದರು. ರಾಣಿಬಾಗ, ಮ್ಯುಜಿಯಂ, ಸಾಂತಾಕ್ರೂಜ ವಿಮಾನ ನಿಲ್ದಾಣ, ಜೂಹೂದಲ್ಲಿ ಸಮುದ್ರದ ಸ್ನಾನ, ಸಮುದ್ರದ ಪ್ರಕೃತಿ ಸೌಂದರ್ಯ ಬಹಳ ಹಿಡಿಸುತ್ತಿತ್ತು. ಗೇಟವೇ ಆಫ್ ಇಂಡಿಯಾ ಇವುಗಳಿಗೆಲ್ಲಾ ನನ್ನ ಎರಡನೇ ತಾಯಿ ಅವರೆಲ್ಲಾ ಕೂಡಿ ಮನೆಯಲ್ಲಿ ಚಪಾತಿ,ಪಲ್ಯ ಊಟ ತೆಗೆದುಕೊಂಡು ಹೋಗಿ ಪಿಕ್‌ನಿಕ್ ಮಾಡುತ್ತಿದ್ದೆವು. ಮತ್ತೊಮ್ಮೆ ಮಾತುಂಗಾದಲ್ಲಿ ಉಡುಪಿ ಹೊಟೆಲದಲ್ಲಿ ಇಡ್ಲಿ ದೋಸೆ ಪ್ರೋಗ್ರಾಂ ಮಾಡಿ, ಸಿನೇಮಾಕ್ಕೆ ಹೋಗಿ ಮನೆಗೆ ಬರುತ್ತಿದ್ದೆವು.

ದಾರಿಯಲ್ಲಿ ನನ್ನ ಮೆಚ್ಚಿಗೆಯ ಕೊಳಲು, ಸಾರಂಗ, ಬ್ಯಾಟು ಕಂಡರೆ ನಾನು ಬಿಡುತ್ತಿರಲಿಲ್ಲ. 'ಇದೊಮ್ಮೆ ಕೊಡಿಸು ಕಾಕಾ' 'ಇನ್ನೊಮ್ಮೆ ಕೇಳುವದಿಲ್ಲ' ಎಂದು ದುಂಬಾಲು ಬೀಳುತ್ತಿದ್ದೆ. ನನ್ನ ತಂದೆ ಮೆತ್ತಗಿನ ಸ್ವಭಾವದವರು. ನನ್ನ ಕಾಟಕ್ಕೆ ಕೊಡಿಸಿ ಮುಕ್ತನಾಗಿ ಇನ್ನು ಏನೂ ಹಟ ಮಾಡದೆ ಸಂತೋಷದಿಂದ ಧಾರವಾಡಕ್ಕೆ ಹೋಗು ಎನ್ನುತ್ತಿದ್ದರು. ನಾನು ಧಾರವಾಡಕ್ಕೆ ಬರುವಾಗ ಕಾಕಾ ಅವರನ್ನು ಕಂಡು ಅವರನ್ನು ಬಿಟ್ಟು ಬರಲು ಮನಸ್ಸೇ ಆಗುತ್ತಿರಲಿಲ್ಲ. ಅವರು ಟಾಟಾ ಮಾಡಿದ ಕೈ ಮರೆ ಆಗುವವರೆಗೆ ಅವರ ಮುಖ ಬಗ್ಗಿ ಮರೆ ಆಗುವವರೆಗೂ ನೋಡಿ ಅವರ ಹಸನ್ಮುಖ ನೆನೆದು ನನ್ನ ಕಣ್ಣಲ್ಲಿ ನೀರು ಬರುತ್ತಿತ್ತು. ಅವರನ್ನು ಬಿಟ್ಟು ಧಾರವಾಡಕ್ಕೆ ಹೇಗೆ ಹೋಗಲಿ ಎಂದು ಚಡಪಡಿಕೆ ಆಗುತ್ತಿತ್ತು.

ನಮ್ಮ ತಂದೆ ನಾಲ್ಕು ವರ್ಷ ಮುಂಬೈ ಜೀವನ ಕಳೆದು ಧಾರವಾಡ ಆಕಾಶವಾಣಿ ಕೇಂದ್ರಕ್ಕೆ ವರ್ಗವಾಗಿ ಬಂದರು. ಆಗ ನಾನು ಮಾಳಮಡ್ಡಿ ಕೆ. ಇ. ಬೋರ್ಡ್ ಹಾಯ್‌ಸ್ಕೂಲಿನಲ್ಲಿ ಓದುತ್ತಿದ್ದೆ, ಮಾಳಮಡ್ಡಿಯಲ್ಲಿ ಎನ್. ಕೆ. ದೀಕ್ಷಿತರ ಮನೆಯ ಔಟ್‌ಹೌಸಿನಲ್ಲಿ ಒಂದು ಮನೆ ಸಿಕ್ಕಿತು. ಕಾಕಾ ಧಾರವಾಡಕ್ಕೆ ವರ್ಗವಾಗಿ ಬಂದ ಕೂಡಲೆ ನನಗೆ ಹಿಡಿಸಲಾರದಷ್ಟು ಆನಂದ.

ಧಾರವಾಡದಲ್ಲಿ ಆರೇಳು ವರ್ಷ ಹಾಯಾಗಿದ್ದೆವೆನ್ನುವಾಗ ನಮ್ಮ ಕಾಕಾ ಅವರಿಗೆ ಬೆಂಗಳೂರ ಆಕಾಶವಾಣಿ ಕೇಂದ್ರಕ್ಕೆ ವರ್ಗವಾಯಿತು. ನನ್ನ ತಾಯಿಗೆ ಬಹಳೇ ಖುಷಿ ಆಯಿತು. ನಮ್ಮ ತಂದೆ ಅವರು ಶೇಷಾದ್ರಿಪುರದಲ್ಲಿ ಒಂದು ಮನೆ ಹಿಡಿದರು. ನಾನು ಧಾರವಾಡದಲ್ಲಿ ಒಬ್ಬನೆ ರೂಮು ಹಿಡಿದು ರೇಡಿಯೋ ರಿಪೇರಿ ಕೆಲಸ ಮಾಡುತ್ತಿದ್ದೆ. ವರ್ಷಕ್ಕೊಮ್ಮೆ ಅಥವಾ ಆರು ತಿಂಗಳಿಗೊಮ್ಮೆ ಬೆಂಗಳೂರಿಗೆ ಹೋಗುವ ಪರಿಪಾಠವಿತ್ತು. ನಾನು ಒಬ್ಬಂಟಿಗನಾಗಿ ಕೈಯಿಂದ ಅಡಿಗೆ ಮಾಡಿಕೊಳ್ಳುತ್ತಿದ್ದೆ. ಹೀಗಾಗಿ ನಮ್ಮ ತಂದೆ ಅವರು ಇಲ್ಲಿಯೇ ಏಕೆ ಇರಬಾರದು ನಿನಗೆ ಒಳ್ಳೇ ನೌಕರಿ ಹಚ್ಚಿ ಕೊಡುತ್ತೇನೆಂದು ಹೇಳುತ್ತಿದ್ದರು.

ಕಾಕಾ ಅವರು ನನ್ನನ್ನು ಬೆಂಗಳೂರಿನಲ್ಲೇ ಇಟ್ಟುಕೊಳ್ಳಬೇಕೆಂದು ನೌಕರಿಗಾಗಿ ವಿಶ್ವಪ್ರಯತ್ನ ನಡೆಸಿದರು. ಕೊನೆಗೆ ಬೆಂಗಳೂರ ಕಿರ್ಲೋಸ್ಕರ ಇಲೆಕ್ಟ್ರಿಕ್ ಕಂಪನಿಯಲ್ಲಿ ಟೆಂಪರರಿ ಅಪ್ರೆಂಟಿಸ್ ಎಂದು ನೇಮಕವಾಯಿತು. ಆರು ತಿಂಗಳು ನೌಕರಿ ಮಾಡಿದೆ. ಮತ್ತೆ ಧಾರವಾಡಕ್ಕೆ ಹೋಗುತ್ತೇನೆಂದು ಶುರು ಮಾಡಿದೆ. ಕಾಕಾ ಅವರು ಬೇಸತ್ತು ನಿನ್ನ ಮನಸ್ಸಿಗೆ ಹೇಗೆ ಬರುತ್ತದೆಯೋ ಹಾಗೆ ಮಾಡು ಎಂದು ನಿಟ್ಟುಸಿರು ಬಿಟ್ಟರೇ ಹೊರತು ನನಗೇನೂ ಬಿರುಸು ಮಾತುಗಳನ್ನು ಆಡಲಿಲ್ಲ. ನನ್ನ ತಮ್ಮ ಮುರಲಿ ೧೪ ವರ್ಷದವನಾಗಿದ್ದ. ಸ್ಕೂಲ ಬೇರೆ ನಡೆದಿತ್ತು. ನನ್ನ ಚಿಕ್ಕ ತಮ್ಮ ರವಿ, ಬಾಲವಾಡಿ ಶಾಲೆಗೆ ಹೋಗುತ್ತಿದ್ದನು. ನನ್ನ ಎರಡನೆ ತಾಯಿಗೆ ಅವನು ಒಬ್ಬನೇ ಅಪರೂಪದ ಪುತ್ರ. ಹೀಗಾಗಿ ಅವನನ್ನು ಅಚ್ಚೆಯಿಂದ ಬೆಳೆಸುತ್ತಿದ್ದರು. ೭ ವರ್ಷ

ಬೆಂಗಳೂರ ಜೀವನ ನಡೆಯಿತು. ನಾನು ಧಾರವಾಡದಲ್ಲಿ ಬಂದು ಒಬ್ಬಂಟಿಗನಾಗಿ ಕಾಲಹರಣ ಮಾಡುತ್ತಿದ್ದೆ. ಮುಂದೆ ನಮ್ಮ ಕಾಕಾ ಅವರಿಗೆ ಧಾರವಾಡ ಆಕಾಶವಾಣಿ ಕೇಂದ್ರಕ್ಕೆ ನಮ್ಮೆಲ್ಲರ ಸಲುವಾಗಿ ವರ್ಗವಾಗಿ ಬಂದರು. ಆದರೆ ನನ್ನ ತಾಯಿ ಅವರಿಗೆ ಧಾರವಾಡಕ್ಕೆ ಬರುವ ಮನಸ್ಸು ಇರಲಿಲ್ಲ. ಅನಿವಾರ್ಯವಾಗಿ ಕಾಕಾ ಅವರ ಜೊತೆ ಬಂದರು.

ಬೆಂಗಳೂರ ಜಯನಗರ ಮನೆ ಬಾಡಿಗೆ ಕೊಟ್ಟರು. ನಾನು ಖಾಸಗಿ ರೇಡಿಯೋ ಅಂಗಡಿಯನ್ನು ಪ್ರಾರಂಭಿಸಿದೆನು. ನನ್ನ ತಮ್ಮ ಮುರಲಿ ಕೆ. ಇ. ಬೋರ್ಡ್ ಶಾಲೆಗೆ ಹೆಸರು ಹಚ್ಚಿದನು. ನನ್ನ ತಮ್ಮ ರವಿ ಹಾಯಸ್ಕೂಲದಲ್ಲಿ ಇದ್ದಾಗ ನಮ್ಮ ತಾಯಿ ಅವರಿಗೆ ಪ್ಯಾರಲಿಸೀಸ ಕಾಣಿಸಿಕೊಂಡು ಮುಖದ ತುಂಬೆಲ್ಲ ಆದವು. ಅದರಿಂದ ಅವರು ಹಾಸಿಗೆ ಹಿಡಿದರು. ಆ ಬೇನೆಯಿಂದ ಅವರು ಬಹಳ ಸಂಕಟಪಟ್ಟರು. ಮನೆಯಲ್ಲಿ ಆರೈಕೆ ಪ್ರಾರಂಭವಾಯಿತು. ಆಗಾಗ್ಗೆ ಡಾಕ್ಟರರು ಮನೆಗೆ ಬಂದು ಹೋಗುತ್ತಿದ್ದರು. ಬೇನೆ ದಿನದಿನಕ್ಕೆ ಹೆಚ್ಚಾಗತೊಡಗಿತು. ಆ ಸಂಕಟ ತಾಳದೆ ಅವರು ನಮ್ಮನ್ನೆಲ್ಲಾ ಬಿಟ್ಟು ಅಗಲಿದರು. ನಮ್ಮ ಕಾಕಾ ಅವರಿಗೆ ಬಹಳ ದುಃಖ ಆಯಿತು. ಜೀವನದ ಉತ್ಸಾಹವೇ ಕುಗ್ಗಿ ಹೋಯಿತು. ಜಿಗುಪ್ಸೆಯಿಂದ ಅವರ ಜೀವನರಥವು ಸಾಗಿತು. ಮನೆಯಲ್ಲಿ ಅಶಾಂತಿಯೋ ಅಶಾಂತಿ.

ಕೆಲ ವರ್ಷದಲ್ಲಿ ನನ್ನ ಮದುವೆಯು ಏರ್ಪಾಡು ಮಾಡಿದರು. ಮನೆಯ ಜವಾಬ್ದಾರಿಯನ್ನು ನೋಡಿಕೊಳ್ಳಲು ಸೊಸೆಯು ಬಂದಳು. ಆಗ ಕಾಕಾ ಅವರ ಮನಸ್ಸು ಹಗುರಾಯಿತು. ನನ್ನ ತಮ್ಮ ರವಿಯ ಕಾಲೇಜು ಶಿಕ್ಷಣ ಆರಂಭವಾಗಿತ್ತು. ತಮ್ಮ ಮುರಲೀಗೆ ಹುಬ್ಬಳ್ಳಿ ಕಿರ್ಲೋಸ್ಕರ ಕಂಪನಿಯಲ್ಲಿ ನೌಕರಿ ಸಿಕ್ಕಿತು. ನನ್ನ ಮದುವೆಯಾಗಿ ಕೆಲ ವರ್ಷಗಳಲ್ಲಿ ಒಂದು ಹೆಣ್ಣು, ಒಂದು ಗಂಡು ಮಗುವು ಹುಟ್ಟಿದವು. ನಾನು ೨ ಮಕ್ಕಳ ತಂದೆ ಆದೆನು. ಮುಂದೆ ನನ್ನ ತಮ್ಮ ಮುರಲಿಯ ಮದುವೆಯೂ ನೆರವೇರಿತು. ನನಗೆ ಕರ್ನಾಟಕ ವಿದ್ಯುತ್ ಶಕ್ತಿ ಇಲಾಖೆಯಲ್ಲಿ ನೌಕರಿ ಆಗಿತ್ತು. ನನ್ನ ರೇಡಿಯೋ ಅಂಗಡಿ ಬಂದಾಗಿ ನೌಕರಿಗೆ ಸೇರಿಕೊಂಡಿದ್ದೆ. ಈಗ ಮನೆಗೆ ಇಬ್ಬರು ಸೊಸೆಯಂದಿರು ಬಂದಾಗ ನಮ್ಮ ಕಾಕಾ ಅವರಿಗೆ ಇನ್ನೂ ಹಿಗ್ಗು. ನಮ್ಮ ಕಾಕಾ ಅವರ ಯೋಗಕ್ಷೇಮವನ್ನು ನೋಡಿಕೊಳ್ಳಲು ಇಬ್ಬರು ಸೊಸೆಂದಿರ ಸೇವೆ ಪ್ರಾರಂಭವಾಯಿತು. ಆವಾಗ ಸ್ವಲ್ಪ ಉತ್ಸಾಹದ ಜೀವನ ಪ್ರಾರಂಭವಾಯಿತು. ಹಿಂದಿನದನ್ನು ಮರೆಯಲು ಇಬ್ಬರ ಸೊಸೆಂದಿರೆ ಕಾರಣ. ಆವಾಗ ನಮ್ಮ ಕಾಕಾ ಅವರ ಸಾಹಿತ್ಯ ಜೀವನಕ್ಕೆ ಪುಟ ದೊರೆಯಿತು. ನಮ್ಮ ಕಾಕಾ ಅವರು ಮೊದಲಿನದನ್ನು ಸಂಪೂರ್ಣ ಮರೆಯಲು ಪ್ರಯತ್ನಿಸಿದರು. ಮತ್ತೆ ನಮ್ಮ ಕಾಕಾ ನಮ್ಮ ಮನರಂಜನೆಗಾಗಿ ಸ್ಫೂರ್ತಿ ಕೊಡ ಹತ್ತಿದರು.

ನನ್ನ ಕಿರಿಯ ತಮ್ಮ ರವಿಯ ಕಾಲೇಜು ಶಿಕ್ಷಣ ಮುಗಿಯಿತು. ಎಂ.ಎ. ಪಾಸಾಗಿ ಗ್ರಾಜ್ಯುಯೇಟ ಆಗಿ ಸ್ವಲ್ಪ ಕಾಲ ಮನೆಯಲ್ಲಿ ನಿರುದ್ಯೋಗಿ ಆಗಿ ಕೂತನು. ನಮ್ಮ

ಕಾಕಾ ಅವರ ಪ್ರಯತ್ನದಿಂದ ಅವನಿಗೆ ಕರ್ನಾಟಕ ಬ್ಯಾಂಕದಲ್ಲಿ ನೌಕರಿ ಸಿಕ್ಕಿತು. ಕೆಲವರ್ಷ ದಲ್ಲಿ ಅವನ ಮದುವೆಯೂ ನೆರವೇರಿತು. ಒಟ್ಟು ೩ ಮಂದಿ ಸೊಸೆಂದಿರು ಕಾಲಿಟ್ಟರು. ಆವಾಗ ನಮ್ಮ ತಂದೆ ಕಾಕಾ ಅವರು ಹೇಳತೀರದ ಉತ್ಸುಕರಾದರು. ಮೊದಲಿನ ಸನ್ನಿವೇಶಗಳೆಲ್ಲ ಸಂಪೂರ್ಣ ಮಾಯವಾಗತೊಡಗಿದವು. ನಮ್ಮ ತಂದೆ ಅವರು ಸ್ವಂತ ಮನೆಯನ್ನು ಮಾಡಿದರು. ನನ್ನ ಕಿರಿಯ ತಮ್ಮನಿಗೆ ಮಾತ್ರ ಬೆಂಗಳೂರ ಮನೆ ಮಾರಿ ಬೇರೆ ಸ್ವತಂತ್ರವಾಗಿ ಹೊಸ ಮನೆಯನ್ನು ಹಾಕಿಸಿದರು. ಅದು ಧಾರವಾಡ ಕಲ್ಯಾಣ ನಗರದಲ್ಲಿ. ನನಗೆ ಹಾಗೂ ಮುರಲೀಗೆ ಹಳೆ ಮನೆಯನ್ನೆ ಖರೀದಿಸಿ ಅದನ್ನು ಹೊಸ ಮನೆಯಂತೆ ರೂಪಿಸಿಕೊಟ್ಟರು. ಧಾರವಾಡ ಮಹಿಷಿ ರೋಡಿನಲ್ಲಿ ಅಚ್ಚುಕಟ್ಟಾಗಿ ರೋಡಿಗೆ ಮನೆ ತಯಾರಾಯಿತು. ಅದಕ್ಕೆ 'ಮಾತೃಶ್ರೀ' ಎಂದು ನನ್ನ ತಾಯಿಯ ನೆನಪಿನ ಗುರುತಾಗಿ ಮಾಡಿಕೊಟ್ಟರು. ರವಿಯ ಮನೆಗೆ 'ಪರಿಮಳ' ಎಂದು ಹೆಸರು. ರವಿಯ ಮನೆ ಸ್ಟೇಶನ್ ಸೊಬಗನ್ನು ನೋಡಲು ಪತ್ತಿರವಾಗಿದೆ.

ಕಾಕಾ ಅವರು ಎರಡು ಮನೆಯಲ್ಲಿ ನಿತ್ಯ ಜೀವನ ಕಳೆಯುತ್ತಿದ್ದಾರೆ. ಮುಂಜಾನೆ ರವಿಯ ಮನೆಯಲ್ಲಿ ಕಳೆಯುತ್ತಾರೆ. ಮಧ್ಯಾಹ್ನ ನಮ್ಮ ಮನೆಗೆ ಬರುತ್ತಾರೆ. ಮರುದಿನದವರೆಗೂ ನಮ್ಮ ಹತ್ತಿರ ಕಳೆಯುತ್ತಾರೆ. ಹೀಗಾಗಿ ೩ ಮಕ್ಕಳ ಮನಸ್ಸಿನಲ್ಲಿ ಯಾವ ಭೇದ ಭಾವ ಬಾರದಂತೆ ನಿತ್ಯ ಜೀವನ ಕಳೆಯುತ್ತಿದ್ದಾರೆ. ೩ ಮಕ್ಕಳ ತಾಯಿಯ ಸ್ಥಾನದಲ್ಲಿಯೂ ಅವರೇ ನೆಲೆಯಾಗಿದ್ದಾರೆ. ಒಳ್ಳೇ ಅಂತಃಕರಣ ಪೂರಕವಾಗಿ ನಮ್ಮ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದಾರೆ. ಮಾತೃಸ್ಥಾನದಲ್ಲಿ ಯಾವ ಅಂತಃಕರಣ ಸಿಗಬೇಕೊ ಅದು ಅವರ ಹತ್ತಿರ ಸಿಗುತ್ತಿದೆ. ನನ್ನ ತಮ್ಮ ರವಿಗೂ ಒಂದು ಗಂಡು ಮಗುವು ಜನಿಸಿದೆ. ನಮ್ಮ ಕಾಕಾ ೩ ಮೊಮ್ಮಕ್ಕಳ ಅಜ್ಜ. ಯಾವ ಮೊಮ್ಮಕ್ಕಳಿಗೂ ಏನೂ ಕೊರತೆ ಆಗದಂತೆ ನಮ್ಮ ಕಾಕಾ ಅವರು ನೋಡಿಕೊಳ್ಳುತ್ತಿದ್ದಾರೆ. ಏನಾದರೂ ಕಾಯಿಲೆಯುಂಟಾದರೆ ಬಹಳ ಗಾಬರಿಗೊಳ್ಳುತ್ತಾರೆ. ಕೂಡಲೇ ಡಾಕ್ಟರರನ್ನು ಕಾಣಲು ಆಗ್ರಹಪಡಿಸುತ್ತಾರೆ. ಕಾಕಾ ಅವರದು ಬಹಳ ಪುಕ್ಕಸ್ವಭಾವ. ಯಾರಿಗಾದರೂ ಏನಾದರೂ ತೊಂದರೆಯುಂಟಾದರೆ ಮುಖಗಂಟು ಮಾಡಿ ಕುಳಿತು ಕೊಳ್ಳುತ್ತಾರೆ. ಯಾರ ಸಂಗಡವೂ ಅಷ್ಟೊಂದು ಉತ್ಸುಕತೆಯಿಂದ ಮಾತನಾಡುವದಿಲ್ಲ. ಒಂದು ನಮೂನೆಯಿಂದ ಪೆಚ್ಚು ಮೋರೆ ಮಾಡುತ್ತಾರೆ. ಎಲ್ಲರೂ ನಗುನಗುತ್ತಾ ಇದ್ದಾಗ ಅವರ ಸಂತೋಷಕ್ಕೆ ಬೆಲೆಯೇ ಇಲ್ಲ. ಇಡಿ ದಿನ ಹಸನ್ಮುಖಿಯಾಗಿ ಕಳೆಯುತ್ತಾರೆ. ಅಂದರೆ ಮೂವರು ಮಕ್ಕಳೊಂದಿಗೆ ಸರಸವಾಗಿ ಕಳೆಯುತ್ತಾರೆ. ಮೊಮ್ಮಕ್ಕಳ ಮೇಲೆ ಪಂಚಪ್ರಾಣವಾಗಿದ್ದಾರೆ. ಈಗ ಅವರ ಮೊದಲಿನ ಇಬ್ಬರೂ ಮೊಮ್ಮಕ್ಕಳು ಸಾಕಷ್ಟು ದೊಡ್ಡವರಾಗಿದ್ದಾರೆ. ಮೊಮ್ಮಗಳು 'ಇಂದು' ೧೪ ವರ್ಷದವಳು—ಈ ವರ್ಷ ಕಾಲೇಜ್ ವಿದ್ಯಾರ್ಥಿನಿ. ಮೊಮ್ಮಗ ಅರವಿಂದನಿಗೆ ಪತ್ತು ವರ್ಷ, ರವಿಯ ಮಗ ಸುಹಾಸ ೧ ವರ್ಷದವನಾಗಿದ್ದಾನೆ. ಹೀಗಾಗಿ ಮೊಮ್ಮಕ್ಕಳ ಪ್ರಪಂಚದಲ್ಲಿ ಮಗ್ನರಾಗಿ

ಕಳೆಯುತ್ತಾರೆ. ನನ್ನ ತಂದೆ ಅವರು ಅರವಿಂದರ ಭಕ್ತರು. ಮೊಮ್ಮಗನಿಗೆ ಅರವಿಂದ ಎಂದು ನಾಮಕರಣ ಮಾಡಿದ್ದಾರೆ. ನಮ್ಮ ಶ್ರೀಮತಿ ಅವರು ಸೋದೆಯ ವಾದಿರಾಜರ ಭಕ್ತಳು. ಸೋದೆಗೆ ಹೋದಾಗ 'ವಾದಿರಾಜ' ಎಂದು ಹೆಸರು ಇಡುತ್ತೇನೆಂದು ಬೇಡಿ ಕೊಂಡಿದ್ದಳು. ಅದರಂತೆ ಅವಳು ವಾದಿರಾಜ ಎಂದು ಹೆಸರು ಇಟ್ಟಿದ್ದಾಳೆ. ಈಗ ಅವನನ್ನು 'ರಾಜಾ' ಎಂದೇ ಸಂಬೋಧಿಸಲಾಗುತ್ತಿದೆ. ನನ್ನ ತಂದೆ ಅವರು ಮೊಮ್ಮಗ ಳಿಗೆ 'ಇಂದಿರಾ' ಎಂದು ನನ್ನ ಮೊದಲನೇ ತಾಯಿಯ ಹೆಸರನ್ನೇ ಅವರು ನಾಮಕರಣ ಮಾಡಿದ್ದಾರೆ.

ಈಗ ಮೊಮ್ಮಕ್ಕಳು ಸೊಸೆಂದರೂ 'ಕಾಕಾ' ಎಂದೇ ಕರೆಯುತ್ತಾರೆ. ಒಂದು ದಿನ ಕಾಕಾ ಅವರು ಎಲ್ಲಿಗಾದರೂ ಊರಿಗೆ ಹೋದರೆ, ಮನೆಯೆಲ್ಲಾ ಭಣಗುಡುತ್ತದೆ. ಕಾಕಾ ಅವರು ಊರಿನಿಂದ ಬಂದಾಗಲೇ ಮನೆಯೆಲ್ಲಾ ತುಂಬಿ ತುಳುಕುತ್ತದೆ. ತಿಂಗಳಿ ಗೊಮ್ಮೆ ಮನರಂಜನೆಗಾಗಿ ಚಲನಚಿತ್ರ ಕಾರ್ಯಕ್ರಮವನ್ನು ಇಟ್ಟುಕೊಳ್ಳುತ್ತೇವೆ. ಕಾಕಾ ಅವರು ಒಳ್ಳೇ ಚಿತ್ರಗಳಿಗೆ ಹೆಚ್ಚು ಪ್ರೋತ್ಸಾಹಿಸುತ್ತಾರೆ. ನಮ್ಮ ಕಾಕಾ ಅವ ರೊಂದಿಗೆ ಚೇಷ್ಟೆ ಹರಟೆ ಬಹಳೇ ನಡೆಯುತ್ತದೆ. ಮತ್ತು ಇದರಿಂದ ಅವರು ಸಾಹಿತ್ಯ ಬರೆವಣಿಗೆಗೆ ಒಳ್ಳೆ ಸ್ಫೂರ್ತಿ ತಂದುಕೊಳ್ಳುತ್ತಾರೆ. ಬಿಡುವಿನ ವೇಳೆಯಲ್ಲಿ ಮೊಮ್ಮಕ್ಕ ಳಿಗೆ ಶಿಕ್ಷಕರಾಗಿ ಅಭ್ಯಾಸ ಹೇಳಿ ಕೊಡುತ್ತಾರೆ.

ದೇವರು ನನಗೆ ಇಂಥ ತಂದೆಯನ್ನು ದಯಪಾಲಿಸಿದ್ದು ನನ್ನ ಪೂರ್ವಾರ್ಜಿತ ಪುಣ್ಯ ವೆಂದೇ ಹೇಳಬೇಕು. ಅದರಂತೆ ನನ್ನ ಮೊದಲನೇ ತಾಯಿಯೂ ಹಾಗೇ ಇದ್ದಳು. ನಮ್ಮ ಕಾಕಾ ಅವರು ಅವಳೊಂದಿಗೆ ಬಹಳ ಸರಸ ಜೀವನವನ್ನೇ ಕಳೆದರು. ಎರಡನೇ ಮದುವೆಯ ನಂತರ ಅಂದರೆ ನನ್ನ ಎರಡನೇ ತಾಯಿಯೊಂದಿಗೆ ಜೀವನ ವ್ಯತ್ಯಾಸವು ಬೇರೆ ಆಯಿತು. ಅವರೂ ಹಿಂದಿನ ಸಿಹಿನೆನಪುಗಳನ್ನು ಮೆಲುಕು ಹಾಕುತ್ತಾ ಇರು ತ್ತಾರೆ. ಈಗ ವೃದ್ಧಾಪ್ಯ ಜೀವನ ಸುಮಧುರವಾಗಿ ನಡೆದಿದೆ–ಮೂವರು ಮಕ್ಕಳು, ಮೂವರು ಸೊಸೆಂದಿರು, ಮೂವರು ಮೊಮ್ಮಕ್ಕಳೊಂದಿಗೆ.

# ನನ್ನ ತಂದೆ

**ರವಿ ಕುಲಕರ್ಣಿ**

ನನ್ನ ಮತ್ತು ನಮ್ಮ ತಂದೆಯವರ ಸಂಬಂಧ ೧೯೫೨ ಎಪ್ರಿಲ್ ಆರರಿಂದ, ಅಂದರೆ ನಾನು ಹುಟ್ಟಿದ ದಿನದಿಂದ. ನಾನು ಚಿಕ್ಕಂದಿನಿಂದಲೆ ನಮ್ಮ ತಂದೆಯವರ ಸಂಗಾತಿ, ಗಾಳಿಪಟಕ್ಕೆ ಬಾಲಂಗೋಸಿ ಇದ್ದಹಾಗೆ.ನಾನು ಸಣ್ಣವನಿದ್ದಾಗ ನನಗೆ ಗೆಳೆಯರು ಕಡಿಮೆ, ಆದ್ದರಿಂದ ಯಾವಾಗಲೂ ತಂದೆಯವರ ಜೊತೆಯಲ್ಲಿಯೆ ಇರುತ್ತಿದ್ದೆ.

ನಮ್ಮ ತಂದೆಯವರು ೧೯೬೨ರಲ್ಲಿ ಬೆಂಗಳೂರ ಆಕಾಶವಾಣಿಯ ಕೇಂದ್ರದಲ್ಲಿ ಅಧಿಕಾರಿಗಳೆಂದು ಕೆಲಸ ಮಾಡುತ್ತಿದ್ದರು. ಚೀನಿಯರು ಆಕ್ರಮಣ ಮಾಡಿದಾಗ ತುರ್ತುಪರಿಸ್ಥಿತಿ ಸಾರಿದ್ದರು. ಆಗ ಪ್ರತಿಯೊಬ್ಬ ಪ್ರೋಗ್ರಾಂ ಎಕ್ಸಿಕ್ಯುಟಿವ್ ಭಾನು ವಾರದ ದಿನವೂ ಒಮ್ಮೊಮ್ಮೆ ಕೆಲಸ ಮಾಡಬೇಕಾಗುತ್ತಿತ್ತು. ಹೀಗಾಗಿ ನಮ್ಮ ತಂದೆ ಯವರು ಭಾನುವಾರ ಕೆಲಸಕ್ಕೆ ಹೋಗಬೇಕಾದಾಗ ಅವರ ಜೊತೆ ನಾನು ಬಾಲಂಗೋಸಿ ಯಾಗಿ ಹೋಗುತ್ತಿದ್ದೆ. ಅಲ್ಲಿ ಸ್ಟುಡಿಯೋದಲ್ಲಿ ಎಲ್ಲವನ್ನು ಏಕಾಗ್ರತೆಯಿಂದ ನಿರೀಕ್ಷಿಸು ತ್ತಿದ್ದೆ. ಒಮ್ಮೆ ಮಕ್ಕಳ ದಿನಾಚರಣೆಗೆ ಬೆಂಗಳೂರ ಆಕಾಶವಾಣಿಯವರು ಬೆಳ್ಳಾವೆ ನರಹರಿಶಾಸ್ತ್ರಿಗಳ 'ಶ್ರೀಕೃಷ್ಣಲೀಲಾ' ನಾಟಕವನ್ನು ಮಕ್ಕಳಿಂದಲೇ ಏರ್ಪಡಿಸಿದ್ದರು. ಆಗ ಅದರ ರಿಹರ್ಸಲ್‌ಗೆ ನಮ್ಮ ತಂದೆಯವರು ಪ್ರತಿದಿನ ಬೆಳಿಗ್ಗೆ ಹೋಗುತ್ತಿದ್ದರು. ನಾನು ಸತತ ಶಾಲೆಗೆ ಚಕ್ಕರ್ ಕೊಟ್ಟು ನೋಡಲು ಹೋಗುತ್ತಿದ್ದೆ. ಪ್ರತಿದಿನವೂ ರಿಹರ್ಸಲ್ ಕೇಳಿ ಕೇಳಿ ಕೃಷ್ಣ, ಕಂಸ, ಯಶೋದೆಯರ ಸಂಭಾಷಣೆಗಳು ಬಾಯಿಪಾಠ ಆಗಿ ಹೋಗಿದ್ದವು.

ನಮ್ಮ ತಂದೆಯವರ ಜೊತೆ ಯಾವಾಗಲೂ ಇರುವುದರಿಂದ ನನಗೆ ಕನ್ನಡದ ಹಿರಿಯ ಕಿರಿಯ ಸಾಹಿತಿಗಳ ಪರಿಚಯವಾಗಿತ್ತು. ಒಮ್ಮೆ ಜಿ. ಪಿ. ರಾಜರತ್ನಂರವರ ಮನೆಗೆ ಹೋಗಿದ್ದೆವು.ಅವರಿಗೆ ಯಾರಾದರೂ 'ಮೇಷ್ಟ್ರೆ' ಅಂತ ಸಂಭೋಧಿಸಿದರೆ ಬಹಳ ಹಿಗ್ಗು.ನಾನು ಬರಬೇಕಾದರೆ ಅವರಿಗೆ 'ಮೇಷ್ಟ್ರೆ' ಅಂತ ಸಂಬೋಧಿಸಿದೆ.ಅವರು ತುಂಬು ಹಿಗ್ಗಿನಿಂದ, ತಮ್ಮ 'ಕಾಶ್ಮೀರದ ಕತೆಗಳು' ಎಂಬ ಮಕ್ಕಳ ಕಥೆ ಪುಸ್ತಕವನ್ನು ಆಶೀರ್ವಾದದೊಂದಿಗೆ ನನಗೆ ಕಾಣಿಕೆಯಾಗಿ ಕೊಟ್ಟರು. ವರಕವಿ ಬೇಂದ್ರೆಯವರು

ನಾವು ಬೆಂಗಳೂರಿನಲ್ಲಿ ಇದ್ದಾಗ ನಮ್ಮ ಮನೆಗೆ ಬರುತ್ತಿದ್ದರು. ನಾನು ಆಗ ಅವರಿಗೆ 'ಬೆಂಗಳೂರ ಗೈಡ್' ಆಗಿ ಅವರ ಜೊತೆ ತಿರುಗುತ್ತಿದ್ದೆ.

ನಾನು ಯಾವಾಗಲೂ ನಮ್ಮ ತಂದೆಯವರ ಜೊತೆಯೇ ಇರುವುದನ್ನು ನೋಡಿ ಅವರ ಹಿರಿಯ ಅಧಿಕಾರಿಗಳು ತಮಾಷೆ ಮಾಡುತ್ತಿದ್ದರು. ಕೆಲವೊಂದು ಸಲ ಅವರ ಸಿಟ್ಟಿಗೂ ಗುರಿಯಾಗಬೇಕಾಗುತ್ತಿತ್ತು. ತಮ್ಮ ತಂದೆಯವರು ಕಾಂಗರೂ ಪಕ್ಷಿಯ ಹಾಗೆ ನನ್ನನ್ನು ತಮ್ಮ ಸೈಕಲ್ ಕ್ಯಾರಿಯರ್‌ದ ಮೇಲೆ ಕೂಡಿಸಿಕೊಂಡು ತಿರುಗುತ್ತಿದ್ದರು. ನಮ್ಮ ತಂದೆಯವರ ಜೊತೆ ಒಮ್ಮೆ ನಾನು ಆಕಾಶವಾಣಿಗೆ ಹೋಗಿದ್ದೆ. ಆಗ ಭಾರತದ ಸೈನ್ಯದ ನಿವೃತ್ತ ಮಹಾದಂಡನಾಯಕ ಜನರಲ್ ಕರಿಯಪ್ಪ ನವರು ಒಂದು ಭಾಷಣವನ್ನು ಧ್ವನಿಮುದ್ರಿಸಲು ಬಂದಿದ್ದರು. ಆ ಸಮಯದಲ್ಲಿ ತಂದೆ ಯವರು ನನ್ನ ಪರಿಚಯವನ್ನು ಕರಿಯಪ್ಪನವರಿಗೆ ಮಾಡಿಕೊಟ್ಟರು. 'ನೀನು ಎನ್.ಸಿ.ಸಿ.ಯಲ್ಲಿ ಇದ್ದೀಯೇನು' ಎಂದು ಅವರು ಕೇಳಿದರು. ಆಗ ನಾನು 'ಸೆಲ್ಯೂಟ್' ಹೊಡೆದು ಉತ್ತರ ಕೊಟ್ಟೆ. ಇದರಿಂದ ಅವರು ಸಂತೋಷಗೊಂಡು, 'Best wishes to Ravi' ಎಂದು ಆಶೀರ್ವಾದದೊಂದಿಗೆ ತಮ್ಮ ಹಸ್ತಾಕ್ಷರ ನೀಡಿದರು.

ಇಂತಹದೇ ಇನ್ನೊಂದು ಸಂದರ್ಭದಲ್ಲಿ, ನಮ್ಮ ಈಗಿನ ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರು ಆಗ ಲಾಲಬಹಾದ್ದೂರ ಶಾಸ್ತ್ರೀಯವರ ಕ್ಯಾಬಿನೆಟ್‌ದಲ್ಲಿ ವಾರ್ತಾ ಮತ್ತು ಪ್ರಚಾರ ಖಾತೆಯ ಮಂತ್ರಿಯಾಗಿದ್ದರು. ಅವರು ಒಂದು ಸಲ ಆಕಾಶ ವಾಣಿಗೆ ಭೆಟ್ಟಿಕೊಡಲು ಬಂದಿದ್ದರು; ಅವರ ಗೌರವಾರ್ಥವಾಗಿ ಒಂದು ಕಾರ್ಯಕ್ರಮ ಏರ್ಪಟ್ಟಿತ್ತು. ಆಗ ಅವರನ್ನು ಅತ್ಯಂತ ಸಮೀಪ ನೋಡುವ ಸಂದರ್ಭ ನನಗೆ ಸಿಕ್ಕಿತು. ನಾನು ಅವರಿಗೆ ಗುಲಾಬಿ ಹೂ ಕೊಟ್ಟು ಅವರ ಹಸ್ತಾಕ್ಷರ ಕೇಳಿದೆ, ಸಂತೋಷದಿಂದ ತಮ್ಮ ಹಸ್ತಾಕ್ಷರವನ್ನು ಕೊಟ್ಟರು. ಮುಂದೆ ಕೆಲಸಮಯದಲ್ಲಿ ಅವರು ಭಾರತದ ಮೂರನೆಯ ಪ್ರಧಾನಿಯಾಗಿ ಆಯ್ಕೆಗೊಂಡರು. ಇದರಿಂದ 'ನನ್ನ Autograph-Book'ಗೆ ಇನ್ನೂ ಹೆಚ್ಚಿನ ಬೆಲೆ ಬಂತು, ಯಾಕೆಂದರೆ ಶ್ರೀಮತಿ ಇಂದಿರಾಗಾಂಧಿಯವರ ಹಸ್ತಾಕ್ಷರ ದೇಶದ ಪ್ರಧಾನ ಮಂತ್ರಿಯ ಹಸ್ತಾಕ್ಷರವಾಗಿತ್ತು. ಅದರ ಮೌಲ್ಯ ಹೆಚ್ಚಾಗಿತ್ತು.

೧೯೬೫ಕ್ಕೆ ತಮ್ಮ ತಂದೆಯವರಿಗೆ ಧಾರವಾಡಕ್ಕೆ ವರ್ಗವಾಯಿತು. ಇಲ್ಲಿ ಬಂದ ಮೇಲೆ ವರಕವಿ ದ. ರಾ. ಬೇಂದ್ರೆಯವರಂತಹ ಹಿರಿಯ ಕವಿಗಳ ಜೊತೆ ಇನ್ನೂ ಹತ್ತಿರ ಸಂಬಂಧ ಬೆಳೆಯಿತು. ನಮ್ಮ ಮನೆಗೆ ವಾರದಲ್ಲಿ ಎರಡು ಸಲವಂತು ಬಂದು ಹೋಗುತ್ತಿದ್ದರು. ಒಮ್ಮೊಮ್ಮೆ ಬರಲಿಲ್ಲ ಅಂದರೆ 'ವಾರದಾಗ ಎರಡುಸರತೆ ಬಂದು ಹೋಗಾವಾs ಇನ್ನು ಯಾಕ ಬರಲಿಲ್ಲ' ಅಂತ ನೆನಸಿಕೊಳ್ಳುತ್ತಿದ್ದೆವು. ನಾನು ಮ್ಯಾಟ್ರಿಕ ನಲ್ಲಿ ಓದುತ್ತಿದ್ದೆ. ಆಗ ನಮ್ಮ ತಾಯಿಯವರು ಕಣ್ಮರೆಯಾದರು. ನಾನು ಹದಿನೈದು ವರುಷದವನಿದ್ದೆ.ನಾನು ಅದೇ ವರುಷ ಎಸ್.ಎಸ್.ಎಲ್.ಸಿ.ಪರೀಕ್ಷೆಗೆ ಕಟ್ಟುವವನಿದ್ದೆ.

ಈ ಆಘಾತದಿಂದ, ಮನಸ್ಸು ವ್ಯಗ್ರಗೊಂಡು ಅಭ್ಯಾಸ ಸರಿಯಾಗದೆ ಫೇಲಾದೆ. ಒಬ್ಬಂಟಿಗನಾದ್ದರಿಂದ, ಬೇರೆಯ ಕೆಲಸವಿರಲಿಲ್ಲ, ಸಾಯಂಕಾಲವಾಯಿತೆಂದರೆ, ನಮ್ಮ ತಂದೆಯವರ ಆಫೀಸಿಗೆ ಹೋಗುತ್ತಿದ್ದೆ. ಆಕಾಶವಾಣಿ ಸ್ಟಾಫಿನವರು ಪ್ರತಿದಿವಸ ವಾಲಿಬಾಲ್ ಆಡುತ್ತಿದ್ದರು. ಬಹುಶಃ ಎಲ್ಲರಿಗೂ ಆಶ್ಚರ್ಯವಾಗಬಹುದು, ನಮ್ಮ ತಂದೆಯವರು ಐವತ್ತರ ಗಡಿ ದಾಟಿದ ಮೇಲೆ ಎಂತಹ ವಾಲಿಬಾಲ್ ಆಟ ಆಡುತ್ತಾರೆ ಅಂತ. ಆದರೆ ಅದೇ ವಯಸ್ಸಿನಲ್ಲಿಯೇ ವಾಲಿಬಾಲ್ ಆಟ ಪ್ರಾರಂಭ ಮಾಡಿ ಬೆಳ್ಳಿಕಪ್ಪನ್ನು ಸಹ ಗೆದ್ದಿದ್ದರು. ನಮ್ಮ ತಂದೆಯವರ ಪಾರ್ಟಿ ಗೆಲ್ಲಲಿ ಸೋಲಲಿ, ಆದರೆ ಧಾರವಾಡ ರೆಸ್ಟೋರೆಂಟಿನ ಚಹ, ದೋಸೆ ತಪ್ಪುವ ಹಾಗಿಲ್ಲ.

ನಮ್ಮ ತಂದೆಯವರ "ಕಿತ್ತೂರ ಕೇಸರಿ" ಗೀತರೂಪಕದ ರಿಹರ್ಸಲ್ ಪ್ರತಿದಿನ ಸಾಯಂಕಾಲ ಏಳರಿಂದ ರಾತ್ರಿ ಹನ್ನೆರಡರವರೆಗೂ ನಡೆಯುತ್ತಿತ್ತು. ಆ ರೂಪಕವಲ್ಲಿ ಭಾಗವಹಿಸಲು ಬೆಂಗಳೂರಿನಿಂದ ಪಿ. ಕಾಳಿಂಗರಾವ್‌ರಂತಹ ಪ್ರಸಿದ್ಧ ಗಾಯಕರು ಬಂದಿದ್ದರು. ನಮ್ಮ ತಂದೆಯವರ ಯಶಸ್ವಿ ರೇಡಿಯೋ ನಾಟಕ "ಪ್ರಾಣ ತುಂಬಿದ ಪಾತ್ರ"ದಲ್ಲಿ ಅಭಿನಯಿಸಲು ಕನ್ನಡದ ಖ್ಯಾತ ಚಿತ್ರನಟ ಅಶ್ವತ್ಥ ಬಂದಿದ್ದರು.ಆಗ ನಾನು ಕಾಲೇಜಿನಲ್ಲಿ ಓದುತ್ತಿದ್ದೆ. ಕಾಲೇಜಿನಲ್ಲಿ ಪಿರಿಯಡ್ ತಪ್ಪಿಸುವುದು ಶಾಲೆಗಿಂತ ತುಂಬ ಸುಲಭ, ಹೀಗಾಗಿ ಕಾಲೇಜಿನ ಪಿರಿಯಡ್‌ಗಳಿಗೆ ಅರ್ಧಚಂದ್ರ ಹಾಕಿ "ಪ್ರಾಣ ತುಂಬಿದ ಪಾತ್ರ"ದ ರಿಹರ್ಸಲ್‌ಗೆ ಹೋಗುತ್ತಿದ್ದೆ. ಅಶ್ವತ್ಥರದು ತುಂಬ ಸಹಜ ನಟನೆ, ನೀರು ಕುಡಿಯುವ ದೃಶ್ಯವಿದ್ದರೆ, ಕೈಯಲ್ಲಿ ನೀರಿನ ಗ್ಲಾಸು ಇರದಿದ್ದರೂ ನೀರು ಕುಡಿದಷ್ಟು ಸಹಜವಾಗಿ ನಟನೆ ಹೊರಹೊಮ್ಮಿ ಬರುತ್ತಿತ್ತು. ನಮ್ಮ ಜೊತೆ ಅವರು ಒಂದು ವಾರ ಇದ್ದರು, ನಾನು ಅವರ ಹಸ್ತಾಕ್ಷರ ಕೇಳಿದಾಗ ನನಗೆ 'ನನ್ನಂತೆ ದಡ್ಡನಾಗಿ ನಟನಾಗ ಬೇಡ, ನಿಮ್ಮ ತಂದೆಯವರಂತೆ ಓದಿ ದೊಡ್ಡವನಾಗು' ಅಂತ ಹೇಳಿ ತಮ್ಮ ಹಸ್ತಾಕ್ಷರ ನೀಡಿದರು.

ನಾನು ಚಿಕ್ಕವನಿದ್ದಾಗ ತುಂಬ ಹಟಮಾರಿ, ಈಗಲೂ ಹಾಗೇ ಇದ್ದೇನೆ. ನನಗೆ ಇಷ್ಟವಾದದ್ದು ಬೇಕು ಅನಿಸಿದರೆ ಅದನ್ನು ತಂದೇಕೊಡಬೇಕು, ನಡುರಾತ್ರಿಯಲ್ಲಿಯೂ ಸಹ ಆಟಿಕೆಗಳನ್ನು ಕೇಳಿದ ಪ್ರಸಂಗಗಳುಂಟು, ತಂದೆಯವರು ನನ್ನ ಇಚ್ಛೆಗಳನ್ನು ಪೂರ್ತಿ ಮಾಡಿದ್ದಾರೆ. ಯಾವುದಕ್ಕೂ ಅವರು 'ಇಲ್ಲ' ಎಂದು ಹೇಳಿಲ್ಲ. ನಾನು ಕಾಲೇಜ ಮುಗಿಸಿ, ಎಂ.ಎ. ಮುಗಿಸುವವರೆಗೆ ನನಗೊಂದು ಒಳ್ಳೆಯ ಹುರುಪು, ಪ್ರೋತ್ಸಾಹ ವನ್ನು ಕೊಡುತ್ತಿದ್ದರು. ತಾವು ಎಂ.ಎ.ದಲ್ಲಿ ಮಾಡುತ್ತಿದ್ದ ಎಂ.ಎ. ಅಭ್ಯಾಸಕ್ರಮ ವನ್ನು ನನಗೆ ಹೇಳುತ್ತಿದ್ದರು. ತಾವು ಎಂ.ಎ.ದಲ್ಲಿ ಇದ್ದಾಗ, ಎಸ್. ಆರ್. ಮಳಗಿ, ಮತ್ತೆ ಕೆಲವು ಜನರು ಕೂಡಿಕೊಂಡು ಅತ್ತಿಕೊಳ್ಳದ ಗುಡ್ಡದ ಮೇಲೆ ಕುಳಿತು ಪ್ರಿನ್ಸಿಪಾಲ ಟಿ. ರುಬೆನ ಅವರು ಮೋಲಿಯರನ ನಾಟಕಗಳನ್ನು ಓದುತ್ತಿದ್ದ ಬಗೆಯನ್ನು ಹೇಳುತ್ತಿದ್ದರು.

ಅವರಿಗೆ ಹೊರಗಡೆ ಕಾರ್ಯಕ್ರಮಗಳಿಗೆ ಅತಿಥಿಯಾಗಿ ಬರಬೇಕೆಂದು ಆಮಂತ್ರಣ ಬಂದರೆ, ಅವರ ಪಿ.ಎ. ಆಗಿ ನಾನು ಅವರ ಹಿಂದೆ ಹೋಗುತ್ತಿದ್ದೆ. ಅದ ರಿಂದ ವಿಜಾಪುರ, ಬಾಗಲಕೋಟೆ, ಹಾವೇರಿ ಮುಂತಾದ ಸ್ಥಳಗಳನ್ನು ನೋಡುವ ಸಂದರ್ಭ ಒದಗಿ ಬಂದಿತ್ತು. ನಾನು ಎಂ.ಎ. ಆದಮೇಲೆ ಬಹುಶಃ ನಾನು ಕೂಡ ಆಕಾಶವಾಣಿ ಸೇರುತ್ತೇನೆಂದುಕೊಂಡಿದ್ದರು ಬಹಳ ಜನ. ಆದರೆ ನಾನು ಬ್ಯಾಂಕಿನಲ್ಲಿ ಸೇರಿಕೊಂಡೆ. ಬ್ಯಾಂಕ ಸೇರುವ ಮುನ್ನವಾದರು ಸಹ ನನಗೆ ನಮ್ಮ ತಂದೆಯವರ ಅನುಕೂಲ ತುಂಬಾ ಆಯಿತು. ನನ್ನ ಬಾಲ್ಯ ಜೀವನದಿಂದ ಹಿಡಿದು ಕಾಲೇಜು, ಯುನಿ ವರ್ಸಿಟಿ ಮುಗಿಸಿ, ನಾನು ಗೃಹಸ್ಥಾಶ್ರಮ ಸೇರುವವರೆಗೆ, ನಮ್ಮ ತಂದೆಯವರ ಪಾತ್ರ ಹಿರಿದು. ನಮ್ಮ ತಂದೆಯವರು ಕೋಪಗೊಂಡದ್ದೆ ಕಡಿಮೆ. ಆಕಸ್ಮಾತ್ ಕೋಪ ಗೊಂಡರೆ, ಕೆಲವೊಂದು ನಿಮಿಷ ಯಾರ ಜೊತೆಗೂ ಮಾತನಾಡದೆ ಮೌನತಾಳುತ್ತಾರೆ. ಮುಂದೆ ಕೆಲವೇ ಕ್ಷಣಗಳಲ್ಲಿ ಕೋಪ ಮಾಯವಾಗುತ್ತದೆ. ನನ್ನ ಪಾಲಿಗೆ ನಮ್ಮ ತಂದೆ ಯವರು ಬೇಕನ್ ಹೇಳಿದಂತೆ ಫ್ರೆಂಡ್, ಫಿಲಾಸಫರ್ ಮತ್ತು ಗೈಡ್ ಆಗಿದ್ದಾರೆ.

# ನನ್ನ ಕಾಕಾ

## ಪದ್ಮಾ ಉಮ್ಮಡಿಕರ

ನನ್ನ ಕಾಕಾ ಎಂದ ಕೂಡಲೇ ನನ್ನ ಕಣ್ಣ ಮುಂದೆ ಬರುವ ಅವನ ಮೊದಲ ಚಿತ್ರ: ನಾನಾಗ ಇನ್ನೂ ಚಿಕ್ಕವಳು, ಹೈಸ್ಕೂಲಿನಲ್ಲಿ ಓದುತ್ತಿದ್ದೆ. ಶ್ರಾದ್ಧ-ಕರ್ಮಗಳಂತಹ ವಿಧಿಗಾಗಿ ಅವನು ಧಾರವಾಡದಿಂದ ಹುಬ್ಬಳ್ಳಿಗೆ ನಮ್ಮ ಮನೆಗೆ ಬರುತ್ತಿದ್ದ. ಮೊದಲಿನಿಂದಲೂ ದೇವರು-ಧರ್ಮಗಳ ಮೂಢ ನಂಬಿಕೆಗಳಲ್ಲಿ ವಿಶ್ವಾಸವಿಲ್ಲದಿದ್ದರೂ ಭ್ರಾತೃವತ್ಸಲನಾದ ಕಾಕಾ ಅಣ್ಣನ ಮನಸ್ಸಿಗೆ ನೋವಾಗದಿರಲೆಂದು ನಮ್ಮ ಮನೆಯಲ್ಲಿ ನಡೆಯುವ ಎಲ್ಲ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುತ್ತಲಿದ್ದ. ಅವನು ಶ್ರಾದ್ಧದ ದಿನ ನಮ್ಮ ಮನೆಗೆ ಬಂದಾಗಲೆಲ್ಲ ಅವನಿಗೆ ಸ್ನಾನಕ್ಕೆ ಹಾಕುವ ಕೆಲಸ ನನಗೇನೆ ಮೀಸಲು. ಸ್ನಾನ ಮಾಡುವಾಗ ಕೊರಳಲ್ಲಿ ಜನಿವಾರವಿಲ್ಲದುದು ನೆನಪಾದ ಕೂಡಲೇ, 'ಪದ್ದಕ್ಕ, ಇಲ್ಲಿಯೇ ಎಲ್ಲಿಯಾದರೂ ಒಂದು ಜನಿವಾರ ತಂದು ಕೊಡು' ಎಂದು ಮೆಲ್ಲಗೆ ನನ್ನ ಕಿವಿಯಲ್ಲಿ ಹೇಳಿದಾಗ ಸ್ನಾನಕ್ಕೆ ಹಾಕುವುದು ಅರ್ಧಕ್ಕೇ ಬಿಟ್ಟು ಯಾರಿಗೂ ತಿಳಿಯದಂತೆ ಜನಿವಾರ ತಂದುಕೊಡುತ್ತಿದ್ದೆ.

ನಮ್ಮ ತಂದೆ ಮತ್ತು ಕಾಕಾನ ಜೋಡಿ ಎಂದರೆ ರಾಮ ಲಕ್ಷ್ಮಣರ ಜೋಡಿಯಂತೆ. ನಾವಿರುವುದು ಹುಬ್ಬಳ್ಳಿ, ಅವನಿರುವುದು ಧಾರವಾಡ. ಎರಡೂ ಊರುಗಳ ನಡುವೆ ೧೨ ಮೈಲಿಗಳ ಅಂತರವಿದ್ದರೂ ಎರಡೂ ಮನೆಗಳಲ್ಲಿಯ ಪ್ರತಿಯೊಂದು ಸೂಕ್ಷ್ಮ ವಿಷಯವೂ ಪತ್ರ ಮುಖಾಂತರ ದಿನವೂ ಒಬ್ಬರಿಗೊಬ್ಬರಿಗೆ ತಿಳಿಯಬೇಕು. ಎಷ್ಟೋ ಸಲ ನಮ್ಮ ತಂದೆ ಪತ್ರ ಬರೆಯಲು ಕುಳಿತಾಗ–'ಇಂದು ನಮ್ಮ ಮನೆಯಲ್ಲಿ ಸರಿಯಾಗಿ ಬೇಳೆ ಬೆಂದಿಲ್ಲ ಎಂಬ ವಿಷಯ ನಿಮ್ಮ ತಮ್ಮನಿಗೆ ಬರೆದಿದ್ದೀರೊ ಇಲ್ಲವೊ?' ಎಂದು ನಮ್ಮ ತಾಯಿ ಹಾಸ್ಯ ಮಾಡುತ್ತಿದ್ದುದುಂಟು. ಇಷ್ಟೆಲ್ಲ ದಿನವೂ ಪತ್ರ-ವ್ಯವಹಾರ ನಡೆಯುತ್ತಿದ್ದಾಗ್ಯೂ ರವಿವಾರಕ್ಕೊಮ್ಮೆ ನಮ್ಮ ತಂದೆ ನಾನೀಕಾಕಾನಲ್ಲಿಗೆ ಹೋಗಬೇಕು. ಅವರಿಬ್ಬರೂ ಕೂಡಿ ನಮ್ಮ ದೊಡ್ಡ ಕಾಕಾ (ಡಾಕ್ಟರ್)ನಲ್ಲಿಗೆ ಹೋಗಿ ಮೂವರೂ ಕೂಡಿ ಎಲ್ಲಿಯೂ ಜನಸಂದಣಿಯಿಲ್ಲದ ಸ್ಥಳದಲ್ಲಿ ಕುಳಿತು ಗಂಟೆಗಟ್ಟಲೆ ಕಾಲ ಕಳೆಯುತ್ತಿದ್ದರು. ಪ್ರತಿ ರವಿವಾರವೂ ಇಷ್ಟೊಂದು ಮಾತನಾಡುವಂತಹದೇನಿರುವುದೆಂದು ನಮಗೆಲ್ಲ ಆಶ್ಚರ್ಯ.

ನಮ್ಮ ಕಾಕಾ ನಮಗೆಲ್ಲ ದೊಡ್ಡವನಾದರೂ ನಮ್ಮ ತಂದೆಯವರಿಗೆ ಮಾತ್ರ ಯಾವಾಗಲೂ ಚಿಕ್ಕವನೆ. ನಮ್ಮ ಮನೆಯಲ್ಲಿ ಒಂದು ಚಿಕ್ಕ ಹಬ್ಬವಾದರೂ ಸರಿ 'ನಾನಿ ಕಾಕಾ' ಬರಲೇಬೇಕು. ಇಷ್ಟೇ ಅಲ್ಲ ನಮ್ಮೆಲ್ಲ ಮಕ್ಕಳ ಪಂಕ್ತಿಯಲ್ಲಿ ಅವನಿಗಾಗಿ ಒಂದು ಎಲೆ ಮೀಸಲು. ಒಂದೊಂದು ಸಲ ನಮ್ಮ ತಾಯಿ ಸಿಟ್ಟಿನ ಭರದಲ್ಲಿ 'ನಿಮ್ಮ ತಮ್ಮನಿಗೆ ಇಷ್ಟೂ ತಿಳಿಯಬಾರದೆ' ಎಂದಾಗ–'ಅವನು ಇನ್ನೂ ಚಿಕ್ಕವನು, ತಿಳುವಳಿಕೆ ಸಾಲದು ಎಂದು ಅವನ ಪರ ವಹಿಸುತ್ತಿದ್ದರು.

ನನ್ನ ಮತ್ತು ಕಾಕಾನ ನಿಕಟ ಸಂಬಂಧ ಉಂಟಾದದ್ದು ಹೆಣ್ಣುಮಕ್ಕಳಿಲ್ಲದ ಅವನು ತನ್ನ ಮಗಳಾಗಿ ನನ್ನನ್ನು ಕಾಲೇಜ ಶಿಕ್ಷಣಕ್ಕಾಗಿ ಧಾರವಾಡಕ್ಕೆ ಕರೆತಂದು ತನ್ನ ಮನೆಯಲ್ಲಿಟ್ಟುಕೊಂಡಾಗ. ಹಳೆಯ ಸಂಪ್ರದಾಯದವರಾದ ನಮ್ಮ ತಂದೆಗೆ ನನ್ನನ್ನು ಕಾಲೇಜಿಗೆ ಕಳಿಸುವುದು ಅಷ್ಟಾಗಿ ಇಷ್ಟವಿಲ್ಲದಿದ್ದಾಗ ನನ್ನ ಕಾಕಾ ಮುಂದೆ ಬಂದು, ಅವಳಿಗೆ ಕಲಿಯುವ ಇಚ್ಛೆಯಿದ್ದರೆ ನನ್ನಲ್ಲಿ ಬಂದಿರಲಿ ಎಂದು ನನ್ನ ಆಸೆಗೆ ಪ್ರೋತ್ಸಾಹನ ವಿತ್ತು ಧಾರವಾಡದ ಕರ್ನಾಟಕ ಕಾಲೇಜಿಗೆ ನನ್ನನ್ನು ಸೇರಿಸಿದ. ನಾನು ಅವನಲ್ಲಿದ್ದ ಎರಡು ವರ್ಷಗಳಲ್ಲಿ ನನ್ನಲ್ಲಿ ಸುಪ್ತವಾಗಿದ್ದ ಕಲೆಯನ್ನು ಗುರುತಿಸಿ ಅದಕ್ಕೆ ಉತ್ತೇಜನ ವಿತ್ತು ನಾನು ಕಾಲೇಜಿನಲ್ಲಿ ನಡೆಯುವ ಚಟುವಟಿಕೆಗಳಲ್ಲಿ ಭಾಗವಹಿಸುವಷ್ಟು ಪರಿಣತ ಳನ್ನಾಗಿ ಮಾಡಿದ. ಅದರ ಪರಿಣಾಮವಾಗಿ ೧೯೫೭ರಲ್ಲಿ ನಡೆದ ಯುವಜನ ಮಹೋ ತ್ಸವದಲ್ಲಿ ನಾವು ಮಾಡಿದ 'ಮಹಾಸಂಗಮ' ರೇಡಿಯೋ ನಾಟಕಕ್ಕೆ ಜಿಲ್ಲಾಮಟ್ಟದ ನಾಟಕ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಸಿಕ್ಕಾಗ ನಮ್ಮ ತಂದೆಗಾದ ಆನಂದ ಅಷ್ಟಿಷ್ಟಲ್ಲ. 'ಇದಕ್ಕೆಲ್ಲ ನಮ್ಮ ನಾನೀನೇ ಕಾರಣ' ಎಂದು ಹೆಮ್ಮೆಯಿಂದ ಎಲ್ಲರೆದುರು ಹೇಳಿಕೊಳ್ಳುತ್ತಿದ್ದರು.

ನನ್ನ ಇಂಟರ ಪರೀಕ್ಷೆ ಮುಗಿಯುವ ಹೊತ್ತಿಗೆ ಕಾಕಾನಿಗೆ ಬೆಂಗಳೂರಿಗೆ ವರ್ಗ ವಾಯಿತು. ಅನಿವಾರ್ಯವಾಗಿ ಹುಬ್ಬಳ್ಳಿಯಲ್ಲಿದ್ದುಕೊಂಡೇ ನಾನು ನನ್ನ ವಿದ್ಯಾಭ್ಯಾಸ ಮುಂದುವರಿಸಬೇಕಾಯಿತು. ೧೯೬೧ರಲ್ಲಿ ನಾನು ನನ್ನ ಡಿಗ್ರಿ ಪರೀಕ್ಷೆ ಮುಗಿಸಿದೆ. ಇಲ್ಲಿಯವರೆಗೆ ಓದುವ ಕಾರಣದಿಂದಾಗಿ ಮುಂದೆ ಬಿದ್ದ ನನ್ನ ವರಾನ್ವೇಷಣೆಯ ಕಾರ್ಯ ನಮ್ಮ ತಾಯಿಯವರ ಬಲವಂತದಿಂದಾಗಿ ಭರದಿಂದ ಸಾಗಿತು. ಅಷ್ಟರಲ್ಲಿಯೇ ಮುಂಬ ಯಿಂದ ಒಂದು ಒಳ್ಳೆಯ ವರ ಸಂಬಂಧದ ಪ್ರಸ್ತಾಪ ಬಂದಾಗ ಅಷ್ಟು ದೂರ ಮುಂಬ ಯಿಗೆ ಹೇಗೆ ಕೊಡುವುದೆಂದು ನಮ್ಮ ತಂದೆ ತಾಯಿ ಹಿಂದುಮುಂದು ನೋಡುತ್ತಿದ್ದಾಗ ನನ್ನ ಕಾಕಾ ಮುಂದೆ ಬಂದು ಅವರಿಗೆ ಧೈರ್ಯ ಹೇಳಿ ನನ್ನನ್ನು ತಾನೇ ಸ್ವತಃ ಮುಂಬ ಯಿಗೆ ಕರೆತಂದು ನನ್ನ ಮದುವೆ ಮಾಡಿ ಇಂದು ನಾನು ಸುಖಮಯ ದಾಂಪತ್ಯ ಜೀವನ ನಡೆಸುವುದಕ್ಕೆ ಕಾರಣೀಭೂತನಾಗಿದ್ದಾನೆ.

ಅವನು ಯಾವಾಗ ಊರಿಗೆ ಹೋದರೂ ಅವನಿಗೆ ಸೇರುವ ಭಕ್ಕರಿ ಮುದ್ದಿ ಪಲ್ಯೆ ಮಾಡಿಸಿಕೊಂಡು ತಾವೇ ಸ್ವತಃ ಸ್ಟೇಶನ್ನಿಗೆ ಹೋಗಿ ಕೊಟ್ಟುಬಂದಾಗಲೇ ನಮ್ಮ ತಂದೆಯ

ಮನಸ್ಸಿಗೆ ಸಮಾಧಾನ. ಎಷ್ಟೋ ಸಲ ರಾತ್ರಿ ಊಟವಾದ ಮೇಲೆ ನಾವೆಲ್ಲರೂ ಹರಟೆ ಹೊಡೆಯುತ್ತ ಕುಳಿತಾಗ ಆ ವಿಷಯ ಈ ವಿಷಯ ಮುಗಿದು ಕೊನೆಗೆ ನಾನಿಯ ವಿಷಯ ಬಾರದೆ ಇರುತ್ತಿರಲಿಲ್ಲ. ತಮ್ಮನ ಗುಣಗಾನ ಮಾಡುತ್ತ ಭಾವುಕರಾಗಿ ಆನಂದಾಶ್ರುಗಳನ್ನು ಸುರಿಸಿದ್ದನ್ನು ನಾನೇ ಎಷ್ಟೋ ಸಲ ನೋಡಿದ್ದೇನೆ.

ಚಿಕ್ಕಂದಿನಲ್ಲಿಯೇ ತಂದೆ ತಾಯಿಗಳನ್ನು ಕಳೆದುಕೊಂಡ ನಮ್ಮ ತಂದೆ ಮತ್ತು ಕಾಕಾ ಇವರನ್ನು ಅವರ ಅಕ್ಕ ಪದ್ದಕ್ಕ ಸಾಕಿ ಸಲಹಿದರು. ಆದರೆ ದುರ್ದೈವದಿಂದ ತಾಯಿಯಂತಿದ್ದ ಅಕ್ಕನನ್ನು ಕಳೆದುಕೊಂಡು ತಬ್ಬಲಿಗಳಾದರು. ಮುಂದೆ ನಾನು ಹುಟ್ಟಿದ ಮೇಲೆ ಅವರ ಅಕ್ಕನ ಪ್ರತಿರೂಪವೇ ನಾನೆಂದು ತಿಳಿದು ನನಗೆ 'ಪದ್ದಕ್ಕ' ನೆಂದು ನಾಮಕರಣ ಮಾಡಿದರು. ನಮ್ಮ ಮನೆಯಲ್ಲಿ ಉಳಿದೆಲ್ಲರೂ ನನ್ನ ಹೆಸರಿನ ಅಪಭ್ರಂಶ ಮಾಡಿ ಕರೆದರೂ ನನ್ನ ಕಾಕಾನಿಗೆ ಮಾತ್ರ ನಾನಿನ್ನು ಪದ್ದಕ್ಕನಾಗಿಯೇ ಉಳಿದಿದ್ದೇನೆ.

ನಮ್ಮ ಕಾಕಾನ ನಗೆ ನಾಟಕಗಳನ್ನು ಮತ್ತು ಹಾಸ್ಯ ಬರಹಗಳನ್ನು ಓದಿದವರು ಅವನ ಜೀವನ ಲೇಖನದಂತೆಯೇ ರಸಮಯವಾಗಿದೆಯೆಂದು ತಿಳಿದಿದ್ದರೆ ಆಶ್ಚರ್ಯ ವೇನಿಲ್ಲ. ಆದರೆ ಚಿಕ್ಕಂದಿನಿಂದಲೂ ಅವನ ಸಾನ್ನಿಧ್ಯದಲ್ಲಿ ಬೆಳೆದ ನನಗೆ ಮಾತ್ರವೇ ಅವನು ಜೀವನದಲ್ಲಿ ಎಂತಹ ಸಾವು, ನೋವುಗಳನ್ನು ಅನುಭವಿಸಿದ್ದಾನೆಂಬುದು ಗೊತ್ತು. ಚಿಕ್ಕ ವಯಸ್ಸಿನಲ್ಲಿಯೇ ನಲುಮೆಯ ಹೆಂಡತಿಯನ್ನು ಕಳೆದುಕೊಂಡು ಆ ದುಃಖವನ್ನು ಮರೆಯಲೆತ್ನಿಸುತ್ತಿರುವಾಗಲೇ ಅಕ್ಕರೆಯ ಒಬ್ಬಳೇ ಒಬ್ಬ ಮಗಳೂ ಕೂಡ ಸಾವಿಗೆ ತುತ್ತಾದಳು. ಇಷ್ಟೆಲ್ಲ ದುಃಖ ಸಹಿಸಿಯೂ ಕೂಡ ಉಳಿದಿಬ್ಬರು ಮಕ್ಕಳ ರಕ್ಷಣೆಗಾಗಿ ಹಿರಿಯರ ಒತ್ತಾಯದ ಮೂಲಕ ಎರಡನೆಯ ಮದುವೆ ಮಾಡಿ ಕೊಂಡ. ವಿಧಿಗೆ ಅದೂ ಸಹನವಾಗಲಿಲ್ಲವೆಂಬಂತೆ ಅವಳೂ ಕೂಡ ಒಬ್ಬ ಮಗನನ್ನು ಹೆತ್ತು ಅವನನ್ನು ಸಾಕುವ ಭಾರವನ್ನು ಕಾಕಾನ ಮೇಲೆ ಹೊರಿಸಿ ಹೊರಟುಹೋದಳು. ಇಂಥ ಸ್ಥಿತಿಯಲ್ಲಿ ಬೇರೆ ಯಾರೇ ಆಗಿದ್ದರೂ ತತ್ತರಿಸಿ ಹೋಗಬಹುದಾಗಿತ್ತು. ಆದರೆ ಇಂದಿಗೂ ಯಾರೇ ಆಗಲಿ ಅವನೊಡನೆ ಮಾತನಾಡುವ ಪ್ರಸಂಗ ಬಂದಾಗ ಅವನ ಹಾಸ್ಯಮಯ ಸಂಭಾಷಣೆಯನ್ನು ಕೇಳಿದರೆ ಅವನು ಜೀವನದಲ್ಲಿ ಇಷ್ಟೊಂದು ಸಾವು–ನೋವುಗಳನ್ನುಂಡಿದ್ದಾನೆಂದು ನಂಬುವುದು ಕಷ್ಟ. ಎಂತಹ ಕಠಿಣ ಪರಿಸ್ಥಿತಿಯಲ್ಲಿಯೂ ಕೂಡ ಅವನು ತನ್ನ ಮನದ ಸಮತೋಲನವನ್ನು ಕಾಯ್ದುಕೊಂಡು ಬಂದಿದ್ದಾನೆ. ಇದೇ ಅವನ ಹಿರಿಮೆ, ಅವನಿಂದ ನಾವುಗಳೆಲ್ಲ ಕಲಿಯಬೇಕಾದ ಮಹತ್ವದ ಪಾಠ. ಮೊದಲಿನಿಂದಲೂ ಭಾವುಕ ಪ್ರವೃತ್ತಿಯವಳಾದ ನಾನು ಜೀವನದಲ್ಲಿ ಕಷ್ಟದ ಪ್ರಸಂಗ ಬಂದಾಗ ಅದನ್ನೆದುರಿಸುವ ಧೈರ್ಯ ಸಾಲದಂತಾಗಲು ನನ್ನ ಕಾಕಾನ ಚಿತ್ರವನ್ನು ನನ್ನ ಕಣ್ಣ ಮುಂದಿಟ್ಟುಕೊಂಡು ಪ್ರಸಂಗವನ್ನೆದುರಿಸಲು ಪ್ರಯತ್ನಿಸುತ್ತೇನೆ.

ಇಂದಿಗೂ ನಾವು ರಜೆಯಲ್ಲಿ ಧಾರವಾಡಕ್ಕೆ ಬಂದಾಗ ಕಾಕಾನ ಭೆಟ್ಟಿಯಾಗದೆ ನಮ್ಮ ಪ್ರವಾಸ ಪೂರ್ತಿಯಾಗುವುದಿಲ್ಲ. ಎಲ್ಲರಿಗೂ ಗೊತ್ತಿದ್ದಂತೆ ಕುಮಾರವ್ಯಾಸ

ಕಾಕಾನ ಅಚ್ಚುಮೆಚ್ಚಿನ ಕವಿ. ಕುಮಾರವ್ಯಾಸನ ಬಗ್ಗೆ ಅವನಂತೆ ಆಳವಾಗಿ ಅಭ್ಯಸಿಸಿದವರು ವಿರಳ. ಈಗಾಗಲೇ ಅವನು ಕುಮಾರವ್ಯಾಸನ ಬಗ್ಗೆ ಅನೇಕ ಸಣ್ಣ ದೊಡ್ಡ ಹೊತ್ತಿಗೆಗಳನ್ನು ಬರೆದಿದ್ದಾನೆ. ಆದರೆ ಇದಕ್ಕೂ ಮುಂದೆ ಹೋಗಿ ಕುಮಾರವ್ಯಾಸನ ಮೇಲೆ ಸವಿಸ್ತಾರ-ಟೀಕೆ-ಟಿಪ್ಪಣೆಗಳುಳ್ಳ ಬೃಹತ್ ಗ್ರಂಥವನ್ನು ಬರೆಯಬೇಕೆಂಬುದು ನಮ್ಮ ಬಹು ದಿನಗಳ ಆಶೆ. ಅದಕ್ಕಾಗಿ ಪ್ರತಿಸಲ ನಾವು ಧಾರವಾಡಕ್ಕೆ ಬಂದಾಗ ಅವನಿಗೆ ಈ ವಿಷಯವಾಗಿ ಒತ್ತಾಯಿಸುತ್ತಲಿರುತ್ತೇವೆ.

# ನಮ್ಮ ನಾನೀಕಾಕಾ

## ರಾಮಚಂದ್ರ ಕುಲಕರ್ಣಿ

(ನಾನೀ) ಕಾಕಾ ನನ್ನ ತಂದೆಯವರ ಸೋದರರಲ್ಲಿ ಎಲ್ಲರಿಗಿಂತ ಕಿರಿಯರು. ನಮ್ಮ ಕುಟುಂಬದ ಹಿರಿಯರಲ್ಲಿ ಅಳಿದು–ಉಳಿದವರಲ್ಲಿ ನನ್ನ ತಂದೆಯೇ ಹಿರಿಯರಾಗಿದ್ದರು. ಹೀಗಾಗಿ ನಮ್ಮ ಕಿರಿಯ ಕಾಕಾನು ತನ್ನ ಅಣ್ಣನಲ್ಲಿ ಇಟ್ಟ ಆದರ ಮತ್ತು ವಾತ್ಸಲ್ಯದಿಂದ ರಾಮ–ಲಕ್ಷ್ಮಣರ ಭ್ರಾತೃಪ್ರೇಮದ ಅರಿವಾಗುತ್ತಿತ್ತು. ಕಾಕಾನ ದಿನಚರಿಯಲ್ಲಿ ತನ್ನ ಅಣ್ಣನ ಭೇಟಿಯಾಗದ ದಿನಗಳಿಲ್ಲ. ಎಷ್ಟೇ ದೂರದ ದಾರಿಯಾಗಿದ್ದರೂ ಎಳ್ಳಷ್ಟು ಬೇಸರಗೊಳ್ಳದೆ ಅಣ್ಣನ ಭೆಟ್ಟಿಗಾಗಿ ಪ್ರತಿ ಸಾಯಂಕಾಲ ನಮ್ಮ ಮನೆಗೆ ಬಂದುಹೋಗುವ ಮತ್ತು ಒಂದು ತಾಸು ಅಣ್ಣನ ಜತೆಗೆ ಮುಕ್ತ ಮನಸ್ಸಿನಿಂದ ಹರಟೆ ಹೊಡೆದು ಹೋಗುವುದನ್ನು ರೂಢಿಸಿಕೊಂಡಿದ್ದನು.

ಹೀಗೆ ಅಣ್ಣ-ತಮ್ಮಂದಿರು ತಮ್ಮ ಜೀವನದಲ್ಲಿಯ ಸುಖ–ದುಃಖಗಳನ್ನು ಬಿಚ್ಚು ಮನಸ್ಸಿನಿಂದ ಮಾತಾಡಿ ಹಂಚಿಕೊಳ್ಳುವ ಸ್ವಭಾವ ಅವರದಾಗಿತ್ತು. ಕಾಕಾನ ಸ್ವಭಾವ ಮತ್ತು ನನ್ನ ತಂದೆಯ ಸ್ವಭಾವಗಳೆಂದರೆ ಅಜ–ಗಜಾಂತರ. ತಂದೆಯವರದು ಮುಂಗೋಪಿತನದ್ದು ಹಾಗೂ ಬಿಗುವಿನದಾಗಿದ್ದರೆ ಕಾಕಾನ ಸ್ವಭಾವ ಅಷ್ಟೇ ಬಿಚ್ಚು ಮನಸ್ಸಿನದು. ಅವರು ಯಾವಾಗಲೂ ನಗುಮುಖವನ್ನು ತಾಳಿರುತ್ತಿದ್ದರು.

ಯಾವುದೇ ಕಾರ್ಯಕ್ಕಿಳಿಯುವ ಮುನ್ನ ಅಣ್ಣನ ಅಪ್ಪಣೆಯಿಲ್ಲದೆ ಕೈಗೆತ್ತಿಕೊಳ್ಳದ ಗುಣಧರ್ಮವು ಕಾಕಾನದಾಗಿತ್ತು. ಕಾಕಾನಿಗೆ ತನ್ನ ಜೀವನದಲ್ಲಿ ನಡೆದ ಎಲ್ಲ ಘಟನೆಗಳನ್ನು ಅಣ್ಣನಿದಿರಿಗೆ ಹೇಳುವವರೆಗೆ ಸಮಾಧಾನವಿಲ್ಲ. ಎಲ್ಲ ಘಟನೆಗಳನ್ನು ಚಾಚೂತಪ್ಪದೆ ಹೇಳುವಂತಹ ಚಟ ಕಾಕಾನದಾಗಿತ್ತು. ಕಾಕಾನು ತನ್ನ ಜೀವನದಲ್ಲಿ ಬರುವಂಥ ಎಡರು–ತೊಡರುಗಳನ್ನು ಅವು ಎಷ್ಟೇ ಸಣ್ಣದಾಗಿರಲಿ ಅಣ್ಣನಿಂದ ಧೈರ್ಯ ಪಡೆದುಕೊಂಡು ಎದುರಿಸುತ್ತಿದ್ದನು.

ಕಾಕಾನ ಮನಸ್ಸಿನ ತಾಳ್ಮೆಯಂತೂ ಎಣೆಯಿಲ್ಲದಾಗಿದೆ. ಯಾವುದೇ ಪ್ರಸಂಗದಲ್ಲಿ ನನ್ನ ತಂದೆಯು ಸಿಟ್ಟಿಗೆದ್ದರೆ ಒಂದು ತುಟಿ ಎರಡು ಮಾಡದೆ ಸಮಾಧಾನ ರೀತಿಯಿಂದ ಸಹಿಸಿಕೊಂಡು ಇರುವ ಗುಣವನ್ನು ಹೊಂದಿದ್ದನು. ಇದು ಕಾಕಾನು ತನ್ನ ಅಣ್ಣನಲ್ಲಿಟ್ಟ ಭಯ ಭಕ್ತಿಯನ್ನೂ ಎತ್ತಿ ತೋರಿಸುತ್ತಿತ್ತು.

ಮನೆಗೆ ಯಾರಾದರೂ ಅಪರಿಚಿತರು ಬಂದರೆ ಅವರ ಜತೆಗೆ ಒಳ್ಳೆಯ ಆತ್ಮೀಯತೆಯಿಂದ ಮಾತಾಡಿ ಅವರ ಮನಸ್ಸನ್ನು ಗೆದ್ದುಕೊಳ್ಳುವ ಕಾಕಾನ ಸ್ವಭಾವವಂತೂ ಹೇಳತೀರದು. ಎಂಥ ಪ್ರಸಂಗಗಳಲ್ಲಿಯೂ ವಿನೋದ ರೀತಿಯಿಂದ ಮಾತಾಡುವ ಸ್ವಭಾವವನ್ನಂತೂ ಯಾರಿಗೂ ಹೋಲಿಸಲು ಸಾಧ್ಯವಿಲ್ಲ. ಎಷ್ಟೇ ಚಿಕ್ಕವರಿರಲಿ ಅಥವಾ ಮುದುಕರಿರಲಿ ಅವರ ಸ್ವಭಾವಕ್ಕನುಗುಣವಾಗಿ ಬೆರೆತು ಅವರ ಜತೆ ಹರಟೆ ಹೊಡೆಯುವ ಗುಣವನ್ನು ಹೊಂದಿದ್ದನು.

ಜೀವನದಲ್ಲಿ ಕಾಕಾನ ಜತೆಗೆ ನಡೆದ ಕೆಲವು ವಿನೋದ ಪ್ರಸಂಗಗಳು ಚಿರಸ್ಮರಣೀಯವಾಗಿವೆ. ಹಾಗೂ ಅಂಥ ಪ್ರಸಂಗಗಳನ್ನು ನೆನಸಿದಾಗಲೆಲ್ಲ ನಗು ಬರುವದು. ಕಾಕಾನ ಸರಳ ಜೀವನ ಮತ್ತು ಅವನ ಎಂಥ ಪ್ರಸಂಗಗಳಲ್ಲಿಯೂ ಹೊಂದಿಕೊಳ್ಳುವ ಸ್ವಭಾವ ನಮ್ಮ ಜೀವನಕ್ಕೆ ದಾರಿದೀಪವಾಗಿದೆ. ಹೀಗಾಗಿ ಕಾಕಾನು ಎಲ್ಲೇ ದೂರವಿದ್ದರೂ ಅವನ ನೆನಪು ಯಾವಾಗಲೂ ನನ್ನ ಮನಸ್ಸಿನಲ್ಲಿ ಹಸಿರಾಗಿಯೇ ಉಳಿಯುತ್ತದೆ.

# ತಾಯಿಯಿಂದ ಕಾಕಾನ ಮಡಿಲಿಗೆ

## ಪ್ರಮೀಲಾ ಚಳಗೇರಿ

೧೯೩೬ನೇ ಇಸ್ವಿ ನಾವು ನಮ್ಮ ತಾಯಿಯಿಂದ ಕಾಕಾನ ಮಡಿಲಿಗೆ ಬಿದ್ದೆವು. ಆಗ ನಮ್ಮ ಕಾಕಾ ತನ್ನ ಸಂಸಾರದ ಜೊತೆಗೆ ತನ್ನ ಅತ್ತಿಗೆ ಸಂಸಾರದ ಭಾರವನ್ನೂ ಹೊತ್ತು ಕೊಂಡು ತನ್ನ ವಿದ್ಯಾಭ್ಯಾಸವನ್ನು ಮುಗಿಸಿ ನೌಕರಿಯ ರಥವನ್ನು ಏರಿ ಧಾರವಾಡಕ್ಕೆ ಬಂದು ನಿಂತನು. ಅವನಿಗೆ ಕೆ. ಇ. ಬೋರ್ಡ ಹಾಯಸ್ಕೂಲಿನಲ್ಲಿ ಮಾಸ್ತರ ಕೆಲಸ ಆಯಿತು. ಲೈನ ಬಜಾರದಲ್ಲಿ ಒಂದು ಸಣ್ಣ ಮನೆ ಸಿಕ್ಕಿತು. ಮನೆ ಏನೋ ಸಣ್ಣ ದಿತ್ತು, ಆದರೆ ಕಾಕಾನ ಸಂಸಾರದ ಸಂಖ್ಯೆಗೆ ಹೆಚ್ಚು ಅವನ ಮನಸ್ಸೂ ದೊಡ್ಡದು. ನಾನೂ ಆಗ ಹೈಸ್ಕೂಲಿಗೆ ಸೇರಿಕೊಂಡೆ. ನಮ್ಮ ಕಾಕಾನಿಗೆ ಹೆಣ್ಣುಮಕ್ಕಳು ಓದಬೇಕೆಂಬ ಆಶೆ. ನಮ್ಮ ಅಬಚಿಗೂ ಅಷ್ಟೆ. (ನಮ್ಮ ಅಬಚಿಯೆ ನಮ್ಮ ಕಾಕೂನು ಹೌದು.) ಕಾರಣ ನನ್ನನ್ನು ಇಂಗ್ಲೀಷ ಶಾಲೆಗೆ ಕಳಿಸಿದರೂ ಅವನಿದ್ದ ಶಾಲೆಯೆ.

ನಮ್ಮ ಕಾಕಾನಿಗೆ ಯಾವಾಗ್ಲೂ ತಾನು ದುಡ್ಡು ಮಾಡಬೇಕು ಶ್ರೀಮಂತನಾಗ ಬೇಕು ಎಂಬ ಆಶೆ ಇಲ್ಲ. ಎಲ್ಲರನ್ನೂ ಒಂದೇ ಸಮದೃಷ್ಟಿಯಲ್ಲಿ ನೋಡುವನು. ಮನಸ್ಸಿನ ಔದಾರ್ಯವೇ ಅವನಲ್ಲಿರುವ ದೊಡ್ಡ ಗುಣ. ಆದರೆ ಅವನಿಗೆ ಪುರಾಣ, ದೇವರು, ಹಬ್ಬ ಹುಣ್ಣಿವೆ ಇವುಗಳಲ್ಲಿ ವಿಶ್ವಾಸವಿಲ್ಲ. ಅಷ್ಟೇ, ನಮ್ಮ ಅಬಚಿಗೆ ದೇವರು ಹಬ್ಬ ಹರಿದಿನಗಳಲ್ಲಿ ವಿಶ್ವಾಸ. ಹೀಗಾಗಿ ಒಮ್ಮೊಮ್ಮೆ ಮನೆಯಲ್ಲಿ ರಸಕಸಿ. ಒಮ್ಮೆ ಮನೆ ಮಾಡಿದ ಮೊದಲನೇ ಗಣೇಶ ಚೌತಿ ಹಬ್ಬ. ನಮ್ಮ ಅಬಚಿ ಕಾಕಾನಿಗೆ ಗಣಪತಿ ತರಲು ಹೇಳಿದಳು. ಅವನಿಗೆ ಇವೆಲ್ಲ ಮೊದಲೇ ಬೇಜಾರು. ಇನ್ನು ನಿರ್ವಾಹವಿಲ್ಲದೇ ಗಣ ಪತಿ ತರಲು ಪೇಟೆಗೆ ಹೋದ. ವೇಳೆಯಾಗಿತ್ತು, ಪೇಟೆಯಲ್ಲಿ ಗಣಪತಿಗಳು ಆಗ ಬಹಳಷ್ಟಿರುತ್ತಿರಲಿಲ್ಲ. ಆಗಲೇ ಮುಗಿದಿರಬೇಕು. ಒಂದು ಚಿಕ್ಕ ಗಣಪತಿಯನ್ನು ಕರವಸ್ತ್ರದಲ್ಲಿ ಕಟ್ಟಿಕೊಂಡು ಬಂದ. ನಮ್ಮ ಅಬಚಿ ಗಣಪತಿ ಎಂದು ಕದಲಾರತಿ ತಕ್ಕೊಂಡು ಬಾಗಿಲಿಗೆ ಬಂದರೆ, ಎಲ್ಲಿ ಗಣಪತಿ ಎಂದರೆ ಗಂಟು ಬಿಚ್ಚಿದ. ಎಲ್ಲರಿಗೂ ನಗು. ಹೀಗೆ ನಮ್ಮ ಕಾಕಾನಿಗೆ ಈಗ್ಲೂ ಅಷ್ಟೇ. ಹಬ್ಬ, ದೇವರು ಇವಾವೂ ನಂಬಿಕೆ ಇಲ್ಲ.

ಆ ಮೇಲೆ ಅಲ್ಲಿಯ ಮನೆ ಬಿಟ್ಟು ಮಾಳಮರಡಿಯಲ್ಲಿ ಮನೆ ಮಾಡಿದ. ಅಲ್ಲಿಯ ವಾತಾವರಣ ಚೆನ್ನಾಗಿತ್ತು. ಶಾಲೆಯೂ ಸಮೀಪವಾಗುತ್ತಿತ್ತು. ಅವನಿಗೆ ಆಗ ಪಗಾರ

ಹೆಚ್ಚಿರಲಿಲ್ಲ. ಆದರೂ ಮನೆಯಲ್ಲಿ ನಮ್ಮ ಅಬಜಿಯ ಅಚ್ಚುಕಟ್ಟುತನದ ಸಂಸಾರ ಸ್ವಚ್ಛತೆ, ಶಿಸ್ತು. ನಮ್ಮ ಕಾಕಾನಿಗೆ ಸಂಸಾರ ಬಡತನದಿಂದ ನಡೆದರೂ ಯಾವುದನ್ನೂ ಮನಸ್ಸಿಗೆ ಬೇಜಾರು ಮಾಡಿಕೊಳ್ಳದೇ ಅದರಲ್ಲಿಯೇ ಒಂದು ರಸಿಕತನವನ್ನು ನಮ್ಮ ಅಬಜಿ ಹಾಗೂ ಕಾಕಾ ರೂಢಿಸಿಕೊಂಡಿದ್ದರು. ಬಂದುವರಲ್ಲಿ ಮನೆಯ ಎಲ್ಲ ಸಾಮಾನು ಗಳನ್ನು ಓರಣವಾಗಿಟ್ಟು ಅತಿಥಿಗಳು ಬಂದಾಗ ಯಾವುದಕ್ಕೂ ಕೊರತೆಯುಂಟಾಗಲಾರ ದಂತೆ ಎಲ್ಲವನ್ನೂ ಕಾಯ್ದಿರಿಸಿಕೊಂಡಿರುತ್ತಿದ್ದಳು. ನಮ್ಮ ಕಾಕಾಗೆ ಸ್ನೇಹಿತರು, ಆತಿಥ್ಯ, ಸತ್ಕಾರವೆಂದರೆ ಬಹಳ ಹುರುಪು. ಅಂಥ ಸಂದರ್ಭದಲ್ಲಿ ನಮ್ಮ ಅಬಜಿ ಯಾವ ತರಹ ತಮ್ಮ ಸಂಸಾರ ತಾಪತ್ರಯ ಹೊರಬೀಳಲಾರದಂತೆ ನಡೆಸಿಕೊಂಡಿದ್ದಳು. ಪಯಿಲಾ ಕೊನ್ಮೆ ಮಸಾಲಿ ದೋಸೆ ಪ್ರೋಗ್ರಾಮ್. ಅಂದು ನಮ್ಮ ಅಬಜಿಗೆ ಮನೆಯಲ್ಲಿ ಉಪಾಹಾರದ ವಿಶ್ರಾಂತಿ.

ಹೀಗೆ ಎಂಥ ಕಷ್ಟವೇ ಬರಲಿ ನಮ್ಮ ಕಾಕಾ ಯಾವಾಗಲೂ ಪಸನ್ಮುಖಿಯಾಗೇ ಇರುವುದು, ಅದೇ ಅವನ ಮನಸ್ಸಿನ ನಿರ್ಮಲತೆಯನ್ನು ತೋರಿಸುವುದು. ಈ ರೀತಿ ಬಾಳಿನಲ್ಲಿ ಕಷ್ಟ ಸುಖಗಳನ್ನು ಸವಿಯುತ್ತಿರುವಾಗಲೇ ಕಾಕಾನ ಬಾಳಿನ ಸಾಗರವು ಅಲ್ಲೋಲಕಲ್ಲೋಲವಾಗತೊಡಗಿತು. ೧೯೪೫ನೇ ಇಸ್ವಿ ಮನೆಯಲ್ಲಿ ವಿಷಮಜ್ವರದಿಂದ ಸುರುವಾಯಿತು. ಅದೇ ವೇಳೆ ಕಾಕಾನಿಗೆ ೧೦ ವರ್ಷಗಟ್ಟಲೆ ಆತನಿಗೆ ಮಗಳನ್ನೂ ಕೊಟ್ಟು ಭವಿಷ್ಯದ ದಾರಿ ಮಾಡಿಕೊಟ್ಟ ಮಾವನೂ ವಿಷಮ ಜ್ವರಕ್ಕೆ ಬಲಿಯಾದ. ಆದಾದ ೮ ದಿನಕ್ಕೆ ಕಾಕಾನ ಬಾಳಿನ ಸಂಗಾತಿ ನಮ್ಮ ಅಬಜಿ ಅದೇ ಜ್ವರಕ್ಕೆ ತುತ್ತಾದಳು. ಅದಾದ ಆರನೇ ದಿನವೇ ಕಾಕಾನ ಮುದ್ದಾದ ಪುಟ್ಟಮಗಳು ವಿಧಿಯ ಕೈವಶವಾದಳು. ಹೀಗೆ ಕಾಕಾನ ಬಾಳಿನ ಒಂದು ಅಂಕು. ೯ ತಿಂಗಳ ಒಂದು ಮಗು, ೯ ವರ್ಷದ ಒಬ್ಬ ಮಗನನ್ನು ಕಾಕಾನ ಪಾಲಿಗೆ ಬಿಟ್ಟು ನಮ್ಮ ಅಬಜಿ ನಮ್ಮನ್ನೂ ಮತ್ತೊಮ್ಮೆ ಪರದೇಶಿಗಳನ್ನಾಗಿ ಮಾಡಿ ಹೋದಳು. ಇಷ್ಟಾದರೂ ನಮ್ಮ ಕಾಕಾ ತಲೆಗೆ ಕೈಹೊತ್ತು ಕೂಡದೇ ತನ್ನ ಕರ್ತವ್ಯಕ್ಕೆ ಮತ್ತೆ ಸಿದ್ಧನಾದ. ಆದರೆ ಅವನು ಧಾರವಾಡದಲ್ಲಿ ನಿಲ್ಲ ಲಾಗಲಿಲ್ಲ. ಮುಂಬೈಗೆ ತನ್ನ ಬದುಕಿನ ಬಂಡಿಯನ್ನು ಒಯ್ದ. ಅಲ್ಲಿ ಅವನ ಬಾಳಿನ ರಥ ಮತ್ತೆ ನಡೆಯಿತು. ನಾವೆಲ್ಲ ಧಾರವಾಡದಲ್ಲೆ ನೆಲೆಸಿದೆವು. ಈಗ ಕಾಕಾ ಮೂರು ಸಂಸಾರದ ನೊಗ ಹೊರಬೇಕಾಯಿತು ! ತನ್ನ ಅತ್ತೆ, ಹಾಗೂ ಭಾವ ಮೈದುನರು, ತನ್ನ ಅಣ್ಣನ ಮಕ್ಕಳು, ತನ್ನ ಮಕ್ಕಳು. ಹೀಗೆ ಆತನಿಗೆ ಮನಸ್ಸಿನ ಬೇಗುದಿ ಶಾಂತ ಮಾಡಿಕೊಳ್ಳಲು ಕೂಡಾ ಅವನಿಗೆ ಅವಕಾಶವಿಲ್ಲದಾಗಿತ್ತು, ಮುಂಬಯಿಯಲ್ಲಿದುಕೊಂಡೇ ನಮಗೆಲ್ಲ ಸಾಂತ್ವನದ ಮರುಕದ ಪತ್ರ ಬರೆಯುವನು. ಬರುವಾಗೊಮ್ಮೆ ಎಲ್ಲರಿಗೂ ಇಷ್ಟವಾದವುಗಳನ್ನೆಲ್ಲಾ ಪೂರೈಸುವನು. ಮತ್ತೊಮ್ಮೆ ಕಾಕಾನ ಬಾಳಿನಲ್ಲಿ ಬೆಳಕು ಮೂಡುವ ಯೋಗವು ಬಂದಿತು. ಆಗ ನಮಗೆಲ್ಲ ಬಹಳ ಸಂತೋಷ. ಆಗ ಕಾಕಾನ ಸಂಸಾರ ಚಕ್ರ ಮುಂಬೈಯಲ್ಲೇ ಪ್ರಾರಂಭವಾಯಿತು. ಆಕೆ ನಮ್ಮ ಕಾಕು ನಮ್ಮ

ಮತ್ತೊಬ್ಬ ಆಬಚಿಯೇ. ಹೀಗಾಗಿ ಯಾವದೂ ನಮ್ಮಲ್ಲಿ ಭಿನ್ನವೆನಿಸಲಿಲ್ಲ. ನಾವೆಲ್ಲರೂ ಕಾಕಾನ ಜೊತೆ ಮುಂಬೈ ಪ್ರಯಾಣ ಮಾಡಿದೆವು. ಆಗ ಮೊದಲನೇ ಸ್ವಾತಂತ್ರ್ಯ ದಿನಾಚರಣೆ ಇದ್ದಿತು. ಅಂದು ಅಗಸ್ಟ ೧೫ರಂದು ಕಾಕಾ ಮತ್ತು ನಮ್ಮ ಕಾಕು ಜೋಡಿಯಲ್ಲಿ ಸ್ವಾತಂತ್ರ್ಯೋತ್ಸವವನ್ನು ರಾತ್ರಿ ೩–೪ ಗಂಟೆಯುವರೆಗೆ ತಿರುಗಾಡಿ ನೋಡಿದೆವು. ಅದೆಂಥ ಸಂಭ್ರಮ ! ಮತ್ತೆ ೮ ದಿನವಿದ್ದು ನಾವೆಲ್ಲ ಧಾರವಾಡಕ್ಕೆ ಬಂದೆವು. ನಮ್ಮ ಕಾಕಾ ತಾನೂ ಹೊಸ ಹೊಸ ಆಕರ್ಷಕ ಸ್ಥಳಗಳನ್ನು ನೋಡುವದು ನಮಗೂ ತೋರಿಸುವನು. ೮ ವರ್ಷ ಮುಂಬೈಯಲ್ಲಿಯ ಬದುಕು ನಡೆಸಿ ಮತ್ತೆ ಈ ಕಡೆ ಧಾರವಾಡ ಬೆಂಗಳೂರ ಕಡೆ ಬಂದ. ಅವನ ಸಂಸಾರ ರಥವೂ ಹೀಗೆ ನಡೆದಿತ್ತು. ೧೯೬೭ನೇ ಇಸ್ವಿ ನಮ್ಮ ಕಾಕಾನ ಬದುಕಿನಲ್ಲಿ ಮತ್ತೊಮ್ಮೆ ಬರಸಿಡಿಲು. ನಮ್ಮ ಹೊಸ ಕಾಕೂ ಒಬ್ಬ ಮಗನಿಗೆ ಜನ್ಮಕೊಟ್ಟು ೧೫ ವರ್ಷದ ಮಗನನ್ನು ಕಾಕಾನಲ್ಲಿ ಬಿಟ್ಟು ಮೈಲಿಬೇನೆಗೆ ತುತ್ತಾದಳು. ಆಗಂತೂ ಅವನ ಸ್ಥಿತಿ ನೆನೆಸಿದರೇನೆ ನಮಗೆ ಮನಸ್ಸೆಲ್ಲ ಕಳವಳವಾಗುತ್ತದೆ. ಅವನು ಇಷ್ಟೆಲ್ಲ ಸಾಹಿತ್ಯದ ಜೀವನವನ್ನು ಗೆದ್ದು ಶ್ರೀಮಂತನಾಗಿ ರಾಜ್ಯಪ್ರಶಸ್ತಿಯನ್ನು ಲೋಕಪ್ರೇಮವನ್ನು ಗೆದ್ದನಾದರೂ ತನ್ನ ದಾಂಪತ್ಯ ಬಾಳನ್ನು ಗೆಲ್ಲಲಾಗಲಿಲ್ಲ. ದೇವರು ಅವನ ದೈವವ ತಕ್ಕಡಿಯಲ್ಲಿ ಸಾಹಿತ್ಯದ ತೂಕವನ್ನೇ ಹೆಚ್ಚು ಮಾಡಿದ್ದಾನೆ. ಅವನ ಮುಖದಲ್ಲಿ ಈ ಸಂತೋಷವನ್ನಾದರೂ ನಾವು ಕಾಣುತ್ತೇವಲ್ಲ ಎಂಬ ಹೆಮ್ಮೆ ಹಾಗೂ ಸಮಾಧಾನ ನಮಗೆ.

# ನನ್ನ ಕನ್ನಡಿಯಲ್ಲಿ ನಾನು

## ಎನ್ಕೆ

ನಾನೊಬ್ಬ ಉಪೇಕ್ಷಿತ ಸಾಹಿತಿ. 'ಅನಾಥ ಪ್ರಜ್ಞೆ'ಯಿಂದ ಬಳಲುತ್ತಿರುವ ಬಡ ವ್ಯಕ್ತಿ. ಬಾಲ್ಯದಿಂದಲೇ ಸಾವು ನೋವುಗಳು ನನ್ನೊಡನೆ ಕಣ್ಣುಮುಚ್ಚಾಲೆ ಮಾಡುತ್ತ, ನನ್ನ ಕಣ್ಣು ಕಟ್ಟಿ ಬದುಕಿನ ಒಂದು ಪ್ರಪಾತದ ತುದಿಗೆ ನನ್ನನ್ನು ನಿಲ್ಲಿಸಿ ಹೋಗಿವೆ. ಪ್ರೇಮ, ವಾತ್ಸಲ್ಯ, ಸ್ನೇಹ, ಕರುಣೆ,ಅನುಕಂಪ, ಸಹಾನುಭೂತಿಗಳಿಂದ ನಾನು ವಂಚಿತ. ಹೀಗೆ ನನ್ನ ಬದುಕಿನ ಒಲವಿನ ಆವರಣಗಳನ್ನೆಲ್ಲ ಸುಲಿದು ಕ್ರೂರ ಕಾಮನೆ ನನ್ನನ್ನು ಬತ್ತಲೆ ಮಾಡಿ ಕಾಡಿದೆ. ಅರವಿಂದದರ್ಶನಸಾಹಿತ್ಯ, ಭಗವದ್ಗೀತೆ, ಅಧ್ಯಾತ್ಮ ಚಿಂತನೆಗಳು ನನ್ನನ್ನು ಪತಿತನನ್ನಾಗಿ ಮಾಡಗೊಡದೆ ಕಾಪಾಡಿಕೊಂಡು ಬಂದಿವೆ. ನಾನು ಭಗವದ್ಭಕ್ತ, ಅಧ್ಯಾತ್ಮಿ ಎಂದು ಕರೆದುಕೊಳ್ಳುವುದು ನನಗೆ ಆತ್ಮವಂಚನೆ ಎನಿಸುತ್ತದೆ. ಹಾಗಾದರೆ ನಾನೇಕೆ ವೇದಾಂತ ಸಾಹಿತ್ಯ ಓದುತ್ತೇನೆ? ನನ್ನ ವ್ಯಕ್ತಿತ್ವಕ್ಕೆ, ನನ್ನ ಸಾಹಿತ್ಯ ರಚನೆಗೆ, ನನ್ನ ಚಿಂತನಪರ ಸ್ವಭಾವಕ್ಕೆ ಅರವಿಂದರ ಸಾವಿತ್ರಿ, ಯೋಗ ಸಮನ್ವಯ, ದಿವ್ಯ ಜೀವನಗಳು ಒಂದು ಭದ್ರ ಆಯಾಮವನ್ನು ಕೊಟ್ಟಿವೆ; ರಕ್ಷಾ ಕವಚವನ್ನು ಒದಗಿಸಿವೆ. ದಿವ್ಯಜೀವನ ಓದಿ, ಗೀತಾಪಠನ ಮಾಡಿ ನಾನು ಸಾಕ್ಷಾತ್ಕಾರ ಪಡೆದಿದ್ದೇನೆ ಎಂಬ ಬೆಲೆಯಿಲ್ಲದ ಬಡಾಯಿ ಕೊಚ್ಚಿಕೊಳ್ಳುವ ಸೋಗಿನ ನಾಟಕ ನನಗೆ ಸೇರುವುದಿಲ್ಲ. ಕುಮಾರವ್ಯಾಸನ ವ್ಯಾಸಂಗ, ಬೇಂದ್ರೆಕಾವ್ಯ, ಬೇಂದ್ರೆಗದ್ಯಗಳ ಅಭ್ಯಾಸ, ಬೇಂದ್ರೆ ಸಹವಾಸ ನನ್ನ ಬದುಕಿಗೆ, ಬರೆವಣಿಗೆಗೆ ಭದ್ರತೆಯ ಬುನಾದಿ ಹಾಕಿಕೊಟ್ಟಿವೆ.

'ಜಾತಿ ಹಿಡಿದು ಸೂತಕನನರಸುವಂತೆ', ಎಂದು ಮೊದಲಾಗುವ ಬಸವಣ್ಣನವರ ವಚನ ನನ್ನ ರಸನೆಗೆ ಆಪ್ಯಾಯನ ನೀಡಿದೆ. 'ಇವನಾರವ? ಇವ ಹಾರುವ' ಎಂದೆಣಿಸದೆ 'ಇವ ನಮ್ಮವ' ನೆಂದು ಮುಂದೆ ಕರೆದು ಎರಡು ಮಹಾಮಠಗಳ ವೀರಶೈವ ಜಗದ್ಗುರುಗಳು ನನ್ನನ್ನು ಆಶೀರ್ವದಿಸಿದ್ದಾರೆ. ಆದರೆ ನಾನು ಹುಟ್ಟಿದ ಮತದ ಮಠಾಧೀಶರು ಉಪೇಕ್ಷೆ ತೋರಿದ್ದಾರೆ. ಬಹಳಾದರೆ ನಾನೇ ಅವರನ್ನು ಮನೆಗೆ ಕರೆಯಿಸಿ ಪಾದಪೂಜೆ ಮಾಡಿ 'ಶುಭ್ರ'ಗಳನ್ನು ಅವರ ಪಾದಕ್ಕೆ ಎಣಿಸಬಹುದೆಂಬ ಅಪೇಕ್ಷೆ ತೋರಿದ್ದಾರೆ! ತಮ್ಮ ಸಮಾಜದವನೆಂಬ ಅರಿವು, ಗೊಡವೆ ಇಲ್ಲದ ಒಲ್ಲದ ಮಠಾಧಿಪತಿಗಳ ಗೊಡವೆ ನಮಗಾದರೂ ಏಕೆ?—ಎಂದು ನಾನೂ ನಿರ್ಲಿಪ್ತನಾಗಿದ್ದೇನೆ. ಇಂದಿನ ಜ್ಞಾನ–

ವಿಜ್ಞಾನದ ಜಗದಲ್ಲಿ, ಯುಗದಲ್ಲಿ ಕತ್ತಲೆಯನ್ನು ಕಾಣಲೆಂದು ಜ್ಯೋತಿ ಹಿಡಿದು ನೋಡುವುದು ಸಲ್ಲದು.

'ಎಲ್ಲಿಹುದು ಋಣಭಯವು ಅಲ್ಲಿಹುದು ದೇವಾಂಶ' ಎಂಬ ನಾರಣಪ್ಪನವಾಣಿ ನನಗೆ ವೇದವಾಕ್ಯ. ನನ್ನ ಬದುಕಿನಲ್ಲಿ ಈ ಋಣಭಯದಿಂದ ಬಾಳಿದ್ದೇನೆ. ಯಾರಾದರೂ ಕಡ್ಡಿಯಷ್ಟು ನನ್ನ ಮೇಲೆ ಋಣದ ಭಾರ ಹಾಕಿದರೆ ಅದು ನನಗೆ ಗುಡ್ಡದಷ್ಟು ಪರಿಣಮಿಸುತ್ತದೆ. ಸಿಟಿ ಬಸ್ಸಿನಲ್ಲಿ ನನ್ನ ಮೂವತ್ತು ಪೈಸೆಯ ಟಿಕೆಟನ್ನು ಇನ್ನೊಬ್ಬರು ತಮ್ಮ ಹಣದಿಂದ ತೆಗೆಯಿಸಿದರೆ ನನಗೆ ಮುಜುಗರವೆನಿಸುತ್ತದೆ. ಹಾಗೆಯೆ ರಕ್ತ ಸುಟ್ಟು, ಕರೆಂಟು ಸುಟ್ಟು ಗ್ರಂಥ ರಚಿಸಿದಾಗ ಪ್ರಕಾಶಕರು ನನ್ನ ಸಂಭಾವನೆಯ ಹಣಕ್ಕೆ ಸಂಚಕಾರ ಹಾಕಿದರೆ ನನಗೆ ಪ್ರಾಣಸಂಕಟವಾಗುತ್ತದೆ.

'ಅಪಮಾನವಾದರೆ ಒಳಿತು'ಎಂದು ಪುರಂದರದಾಸರು ಹಾಡಿದರು. ನನಗೆ ಅಪಮಾನದ ಪ್ರಸಂಗಗಳು ಬಂದಾಗಲೆಲ್ಲ ಈ ದಾಸವಾಣಿ ನನ್ನನ್ನು ಸಂತೈಸಿದೆ. ಯಾವುದೊ ಸಮಾರಂಭಕ್ಕೆ ನಾನು ಮುಖ್ಯ ಅತಿಥಿಯಾಗಿರುತ್ತೇನೆ. ಸ್ಥಳೀಯ ದೊಡ್ಡ ಮನುಷ್ಯರೊಬ್ಬರು ಅಧ್ಯಕ್ಷರಾಗಿರುತ್ತಾರೆ. ಆತಿಥೇಯರು ನನ್ನನ್ನು ಕಸದೊಳಗಿನ ಕರದಂತೆ ಕಡೆಗಣಿಸಿ, ಆ ದೊಡ್ಡ ಮನುಷ್ಯನೊಡನೆಯೆ ದೇಶಾವರಿ ನಡೆಸಿದಾಗ ನನಗಾದ ಅನಾದರದ ನೋವನ್ನು ಈ ದಾಸವಾಣಿಯಿಂದ ಮರೆತಿದ್ದೇನೆ. 'ನಿಮಗೆ ಸತ್ಕಾರ ಮಾಡುತ್ತೇವೆ' ಎಂದು ಯಾವುದೊ ಪ್ರಶಸ್ತಿ ದೊರೆತ ಸಂದರ್ಭದಲ್ಲಿ ಯಾವುದೋ ಸಂಸ್ಥೆಯವರು ನನಗೆ ಕಾಗದ ಬರೆದು, ಆ ಸತ್ಕಾರ ಸತ್ತಕಾರ್ಯವಾಗಿ ಕಾಗದದ ಮಟ್ಟಿಗೇ ಉಳಿದಾಗ ನನಗೆನಿಸಿದ ಕೆಡುಕನ್ನು ಪುರಂದರದಾಸರು ಕಳೆದಿದ್ದಾರೆ.

'ನನಗೆ ಮದುವೆಯ ಮನೆಗಿಂತ ಸೂತಕದ ಮನೆಗೆ ಹೋಗುವುದು ಹೆಚ್ಚು ಇಷ್ಟ' ಎಂದು ನುಡಿಯುವ ಬೈಬಲ್ ವಾಕ್ಯ ನನ್ನ ಬದುಕಿನ ರೀತಿಯಾಗಿದೆ. ನಾನು ಬೆಂಗಳೂರಿನಲ್ಲಿದ್ದಾಗ ಒಮ್ಮೆ ಒಂದು ಶುಭ ಸಮಾರಂಭಕ್ಕೆ ಹೋಗಬೇಕಿತ್ತು. ಅದು ಜಯನಗರದಲ್ಲಿ. ಆದರೆ ಅದೇ ಜಯನಗರದಲ್ಲಿ ನನ್ನ ಮಿತ್ರ ಪ್ರೊ. ಜಿ. ವೆಂಕಟಸುಬ್ಬಯ್ಯನವರು (ಆಗಿನ್ನೂ ಅವರು ಪರಿಷತ್ತಿನ ಅಧ್ಯಕ್ಷರಾಗಿರಲಿಲ್ಲ.) ಸೈಕಲ್ ಮೇಲಿಂದ ಒಂದು ಅಪಘಾತಕ್ಕೊಳಗಾಗಿ 'ರಿಬ್ಸ್'ಗಳನ್ನು ಮುರಿದುಕೊಂಡು ಆಸ್ಪತ್ರೆಯಲ್ಲಿ ಮಲಗಿದ್ದರು. ನಾನು ನನ್ನ ಶ್ರೀಮತಿ ಸಮೇತ ಆಸ್ಪತ್ರೆಗೇ ತೆರಳಿದೆ. ಸಮಾರಂಭ ರದ್ದುಪಡಿಸಿದೆ. ನನ್ನ ಮಿತ್ರನ ಮಗ್ಗುಲಲ್ಲಿ ಕುಳಿತು ನಾಲ್ಕು ಸಾಂತ್ವನಪರ ಮಾತನಾಡಿದಾಗ ಉಭಯತರಿಗೂ ಸಮಾಧಾನವೆನಿಸಿತ್ತು. 'ಈ ಪ್ರಸಂಗದಿಂದ ನಿಜವಾಗಿಯೂ ನನಗೆ ಸ್ನೇಹಿತರ ಸಂಪತ್ತು ಎಷ್ಟು ದೊಡ್ಡದಿದೆ ಎನಿಸುತ್ತದೆ' ಎಂದು ವೆಂಕಟಸುಬ್ಬಯ್ಯನವರು ನುಡಿದಿದ್ದರು. ನನಗೆ ಮೊದಲನೆಯ ಪತ್ನಿಯ ವಿಯೋಗವಾದಾಗ ಮಾಳವಾಡದಂಪತಿಗಳೂ ಎರಡನೆಯ ಪತ್ನಿ ವಿಯೋಗವಾದಾಗ ಗೀತಾಕುಲಕರ್ಣಿ ದಂಪತಿಗಳೂ ಒಡಹುಟ್ಟಿದ ಸೋದರನಂತೆ ನೋಡಿಕೊಂಡುದನ್ನೂ ನಾನು ಇದೇ ತಂಪು ಹೊತ್ತಿನಲ್ಲಿ ನೆನೆಯಬೇಕು.

ಜ್ಞಾತಿಗಳು ಹುಟ್ಟುವುದು ಜಾತಿಯಿಂದಲ್ಲ, ಪ್ರೀತಿಯಿಂದ ಎಂಬ ಮಾತನ್ನು ಬಹುಶಃ ನಾನು ನನ್ನ ತಂದೆಯಿಂದ ಆನುವಂಶಿಕವಾಗಿ ಪಡೆದ ಗುಣವೆಂದು ಕಾಣುತ್ತದೆ. ಇದನ್ನು ಸಂದೇಹಾರ್ಥದಲ್ಲಿ ಯಾಕೆ ಬರೆಯುತ್ತಿದ್ದೇನೆಂದರೆ ನನ್ನ ತಂದೆಯ ಗುಣಾವಗುಣಾವಲೋಕನ ಮಾಡುವಷ್ಟು ಪ್ರೌಢ ನಾನಾಗುವ ಮೊದಲೆ ನನ್ನ ತಂದೆ (ನನ್ನ ವಯಸ್ಸಿನ ಹತ್ತನೆಯ ವರ್ಷದಲ್ಲಿ) ತೀರಿ ಹೋಗಿದ್ದರು. ಮುಂದೆ ನನ್ನ ತಾಯಿ, ನನ್ನ ಹಿರಿಯಣ್ಣ ಅವರಿಂದ ನನ್ನ ತಂದೆಯ ಗುಣಗಳ ಬಗ್ಗೆ ಕೇಳಿದ್ದೆ. ನಮ್ಮ ತಂದೆ ಒಂದು ದಿನವೂ ದೇವರ ಗುಡಿಗೆ ಹೋಗಿ ಕಾಯಿ ಒಡೆಸಿಕೊಂಡು ಬಂದವರಲ್ಲ ಎಂದು ನನ್ನ ತಾಯಿ ಹೇಳುತ್ತಿದ್ದಳು. ಹಾಗೆಂದರೆ ಅವರಿಗೆ ದೈವೀಶ್ರದ್ಧೆ, ಹೃದಯವಂತಿಕೆ, ಭಕ್ತಿ ಭಾವನೆಗಳೆ ಇರಲಿಲ್ಲವೆಂದಲ್ಲ. ಧರ್ಮವೆಂದರೆ ಬರಿ 'ತಾಂತ್ರಿಕ ವಿಧಾನವಲ್ಲ, ಶ್ರಾದ್ಧವೆಂದರೆ ಬರಿ ಎಳ್ಳು ನೀರಲ್ಲ. ಶ್ರದ್ಧೆಯಿಂದ ಫೋಟೊ ಪೂಜೆ ಮಾಡಿದರೂ ಸಾಕು' ಎಂದು ನಂಬಿದ್ದರು. ತನಗೆ ಅನ್ನದ ಮಾರ್ಗ ಮಾಡಿಕೊಟ್ಟ ಪಿ. ಡಬ್ಲ್ಯು. ಡಿ. ಖಾತೆಯ ಬೆಳವಣಿಕೆ ಸಾಹೇಬರ ಭಾವಚಿತ್ರಕ್ಕೆ ನಿತ್ಯವೂ ಊಟಕ್ಕೆ ಮೊದಲು ಒಂದು ಹೂ ಏರಿಸುತ್ತಿದ್ದರಂತೆ ನಮ್ಮ ತಂದೆ. ಇದು ಅವರ ದೇವರ ಕಲ್ಪನೆಯಾಗಿತ್ತು. ಹಾಗೆಯೆ ನನ್ನ ತಂದೆಗೆ ಆಡಂಬರನೆಂದರೆ ಸೇರುತ್ತಿರಲಿಲ್ಲ. ಸಾದಾ ಜಿಕ್ಕಿನ ಕೋಟು ಬಿಟ್ಟು ಪಟ್ಟಿನ ಬಿಳಿಯ ಬಟ್ಟೆ ಹೊಲಿಸಲಿಲ್ಲವಂತೆ. ಆಗಿನ ಕಾಲಕ್ಕೆ ಸಬ್ ಓವರ್‌ಸೀಯರ್ ಆದ ಅವರಿಗೆ ಪರಮಾವಧಿ ೭೫ ರೂ. ಪಗಾರ ಎಂದು ಜನರ ಮುಂದೆ ಹೇಳಿದರೆ ಕಳ್ಳಸರು ಎನಿಸುತ್ತದೆಂದು ಅವರು ತಮ್ಮ ಪಗಾರ ಅರುವತ್ತು ಎಂದು ಹೇಳುತ್ತಿದ್ದರಂತೆ.

ನನಗೆ ಆಡಂಬರದ ವೇಷಭೂಷಣ ಆಗುವುದಿಲ್ಲ, ನಾಲ್ಕು ಜನರ ಕಣ್ಣಿಗೆ ಹೊಡೆಯುವಂತೆ ಜಬರಾಗಿ ಜರ್‌ಜರ್ ಬೂಟಿನ ಸಪ್ಪಳ ಮಾಡುತ್ತ ನಡೆಯುವಲ್ಲಿ ನನಗೆ ಜರಿಕೆ ಬರುತ್ತದೆ. ಅಧಿಕಾರದ ಅಂತಸ್ತು ಠೀವಿಯಿಂದ ಝಳಪಿಸಬಾರದು, ಆದರಣೆಯಿಂದ ಬೆಳಗಬೇಕು ಎಂದು ನನಗೆನಿಸುತ್ತದೆ. ದುರ್ದೈವದಿಂದ (ಏನು ಸುದೈವದಿಂದಲೊ) ನಾನು ನೌಕರಿಯಲ್ಲಿ ಮೇಲಧಿಕಾರದ ಸ್ಥಾನ ಮುಟ್ಟಲೆ ಇಲ್ಲ. ಆದುದರಿಂದ ಕೈಕೆಳಗಿನವರ ಮೇಲೆ ಹೇಗೆ 'ಶೌಟ್' ಮಾಡಬೇಕು, ಸಾರ್ವಜನಿಕರ ಮುಂದೆ ಹೇಗೆ ದರ್ಪಕ್ಕೆ ದರ್ಪಣವಾಗಿ ನಡೆಯಬೇಕು, ಬಡಬಗ್ಗರಿಗೆ ನಿಷ್ಕರುಣೆಯ ನುಡಿಗಳನ್ನು ಹೇಗೆ ಆಡಬೇಕು-ಇದಾವುದನ್ನೂ ನಾನು ಕಲಿಯಲಿಲ್ಲ. ಇಂದಿಗೂ ನಾನು ಆಲೋಚಿಸುತ್ತಿರುತ್ತೇನೆ ನನ್ನನ್ನು ಜನ ಕಂಡು ಮಾತನಾಡಿಸತ್ತಾರಲ್ಲ ಯಾಕೆ?—ಎಂದು. ನಾನು ಆಕಾಶವಾಣಿಯಲ್ಲಿ ನೌಕರಿ ಮಾಡಿದೆ ಎಂದೊ, ನಾನು ಸಾಹಿತಿ ಎಂದೊ, ಅಥವ ಒಬ್ಬ harmless ಪ್ರಾಣಿ ಎಂದೊ? ಆಕಾಶವಾಣಿಯ ನೌಕರನಾಗಿ ಯಾವ ಮಹಾ ಅಧಿಕಾರದ ಕುರ್ಚಿಯನ್ನೂ ನಾನು ಏರಲಿಲ್ಲ. ಸಾಹಿತಿಯಾಗಿ ಸುಮಾರು ಐವತ್ತು ಸಣ್ಣ-ದೊಡ್ಡ ಗ್ರಂಥಗಳ ಕರ್ತೃ ನಾನಾಗಿದ್ದರೂ ದೊಡ್ಡ ಹೆಸರು ಮಾಡಲಿಲ್ಲ.

ಧಾರವಾಡದ ಸುತ್ತು ಮುತ್ತಲಿನ ಪ್ರದೇಶ ಬಿಟ್ಟು ಬಹುಶಃ ನನ್ನನ್ನು ಬಲ್ಲವರು ಯಾರೂ ಇರಲಿಕ್ಕಿಲ್ಲ. ಸಾಮಾನ್ಯವಾಗಿ ಉತ್ತರ ಕರ್ನಾಟಕ ಭಾಗದಲ್ಲಿ ಎನ್ಕೆ ಒಬ್ಬ ನಾಟಕಕಾರ, ಒಬ್ಬ ಕಾದಂಬರಿಕಾರ, ಹರಟೆಗಾರ ಎಂದು ಬಲ್ಲರು. ಬಹಳಷ್ಟು ಜನ ಎನ್ಕೆಯ 'ಸಾವಿನ ಉಡಿಯಲ್ಲಿ'ಯ ಕೇಸರಿ ಪಾತ್ರವನ್ನು, 'ಎರಡನೆಯ ಸಂಬಂಧ'ದ ಪ್ರಣಯ ಪತ್ರಗಳನ್ನು, 'ವೈನಿ'ಯ ಬಿಂದೂ–ವತ್ಸಲಾರ ಹದಿವಯದ ಪ್ರಣಯಕಥೆ ಯನ್ನು ಮೆಚ್ಚಿಕೊಂಡಂತೆ ತೋರುತ್ತದೆ. ರೇಡಿಯೋ ಶ್ರೋತೃಗಳು ಇಂದಿಗೂ 'ಗೃಹ ಗೋಷ್ಠಿ'ಯ ರೋಚಕ ಸಂಭಾಷಣೆಗಳನ್ನೊ, 'ಗಾಂಧೀಗೀತ'ಗಳನ್ನೊ, 'ಕಸಿಹೃದಯ ಕಣ್ತೆರೆದಿತ್ತು' ರಾಷ್ಟ್ರೀಯ ನಾಟಕವನ್ನೊ ಇಲ್ಲವೆ 'ಉಭಯ ಕುಶಲೋಪರಿ'ಯ ಪ್ರಶ್ನೋತ್ತರಗಳ ಸವಿಯನ್ನೋ ನೆನೆದು ಮೆಲುಕಾಡಿಸುವುದು ನನ್ನ ಅನುಭವಕ್ಕೆ ಬಂದಿದೆ. ಆದರೆ ಏಕಾಂಕದ ಎನ್ಕೆ ಆಗಲಿ, ಕಾದಂಬರಿಕಾರ ಎನ್ಕೆ ಆಗಲಿ, ಹರಟೆಗಾರ ಎನ್ಕೆ ಆಗಲಿ, ಬಾನುಲಿಬರೆಹಗಾರ ಎನ್ಕೆ ಆಗಲಿ ಮೈಸೂರು–ಬೆಂಗಳೂರ ಭಾಗದ ಕರ್ನಾಟಕದ ಕಠೋರ, ನ್ಯಾಯ ನಿಷ್ಠುರ ವಿಮರ್ಶಕರ ಕಣ್ಣಿಗೆ ಬಿದ್ದಂತಿಲ್ಲ. ಆಕಾಶ ವಾಣಿಯ ಎನ್ಕೆ ಬೆಂಗಳೂರಿನಲ್ಲಿರುವತನಕ ಆತನ ಬಳಿ ಸುಳಿದಾಡುವ, ಮುಖ್ಯ ಅತಿಥಿ ಎಂದು ಕರೆಯುವ ಸವಿಮಾತಿನ ಮಿತ್ರ ಮುಖಂಡರಿದ್ದರು ಮಾತ್ರ. ಆ ಮಾತುಬೇರೆ. ಆದರೆ ಎನ್ಕೆ ಎಂಬ ಒಬ್ಬ ಬರೆಹಗಾರನ ಅಸ್ತಿತ್ವನೇ ಪ್ರತಿಷ್ಠಿತ ವಿಮರ್ಶಕರ ಪ್ರಜ್ಞಾ ಪಂಕ್ತಿಕೆಗೆ ನಿಲುಕಿದಂತಿಲ್ಲ. ಇಲ್ಲದಿದ್ದರೆ ವಾರ್ಷಿಕ ಸಮೀಕ್ಷೆಗಳಲ್ಲಾಗಲಿ, ಆಧುನಿಕ ಅತ್ಯಾಧುನಿಕ ಸಾಹಿತ್ಯಾವಲೋಕನ ಗ್ರಂಥಗಳಲ್ಲಾಗಲಿ ಕೆಟ್ಟ ಕಾದಂಬರಿಗಳನ್ನೂ ಬರೆ ಯುವ ಎನ್ಕೆ, ನಾಟಕದ ಗಂಧವರಿಯದ ಎನ್ಕೆ, ಹರಟೆಯೆಂದರೇನೆಂಬುದನ್ನರಿಯದ ಹಸುಳೆ ಎನ್ಕೆ ಎಂದಾದರೂ ವಿಮರ್ಶೆ ಬರೆಯಬಹುದಾಗಿತ್ತು. ಜನರ ಈ ಉಪೇಕ್ಷೆ, ಉದಾಸೀನ ಭಾವಗಳಿಗೆ ಬೇಸತ್ತ ಎನ್ಕೆ ಸತ್ತ ಎನ್ಕೆ ಎಂದೇ ತಿಳಿದು 'ನಾನಿಯ ನೆನಹು ಗಳ'ಲ್ಲಿ 'ನಾನಿ ಇನ್ನಿಲ್ಲ' ಎಂದು ಪ್ರಾರಂಭಕ್ಕೆ ಹೇಳಲಾಗಿದೆ.

ಹೌದು. 'ನಾನಿಯ ನೆನಹುಗಳ'ಲ್ಲಿ 'ಎನ್ಕೆ', 'ನಾನಿ' ಒಂದು ವ್ಯಕ್ತಿತ್ವದ ಎರಡು ಮುಖಗಳು. ನಾನಿ, ಎನ್ಕೆನಲ್ಲಿರುವ ಬರೆಹಗಾರ. ಆದರೆ ಯಾವ ಬರೆಹಗಾರನ ಬಗ್ಗೆ ಇಷ್ಟೊಂದು ಉಪೇಕ್ಷೆ, ಅಜ್ಞಾನಗಳೋ ಯಾವ ಬರೆಹಗಾರನ ಕಾದಂಬರಿಗಳು ಪುನ ರ್ಮುದ್ರಣ ಕಾಣದೆ ತಮ್ಮ ಜೀವಂತತನವನ್ನೂ ಕಳೆದುಕೊಂಡು ಬಿಟ್ಟಿವೆಯೊ ಆ ಬರೆಹಗಾರ ಇನ್ನಿಲ್ಲ ಎಂದು ಹೇಳಲಿಕ್ಕೆ ಯಾವ ಅಡ್ಡಿಯಿದೆ? ಇರಲಿ. ಪುನರ್ಮುದ್ರ ಣಕ್ಕೆ ಮುಖ್ಯವಾಗಿ ಪ್ರಕಾಶಕರು ಮುಂದೆ ಬರಬೇಕು. ಬರುತ್ತಿಲ್ಲವೆಂದಮೇಲೆ ಎನ್ಕೆ ಕಾದಂಬರಿಕಾರನಲ್ಲವೆಂದೇ ಎನ್ಕೆನೂ ತಲೆಹಾಕಬೇಕಾಗಿದೆ. ಸರಕಾರದ ಮಟ್ಟದಲ್ಲಿ ಹಮ್ಮಿಕೊಳ್ಳಲಾದ 'ವಿಶ್ವಮೇಳ'ದ ಸಂದರ್ಭದಲ್ಲಿ ಎಷ್ಟೆಷ್ಟೊ ಸಾಹಿತಿಗಳ ಗ್ರಂಥಗಳನ್ನು ಪುನರ್ಮುದ್ರಣ ಮಾಡಿ ಸಂಭಾವಿಸಲಾಯಿತು. ಸೂತ್ರಚಾಲನೆ, ಲಾಂಗೂಲಚಾಲನೆಗಳ ರಾಜಕೀಯವನ್ನರಿಯದ ಎನ್ಕೆ ಈ ಪುನರ್ಮುದ್ರಣದ ಯಾದಿಯಲ್ಲಿ ಸೇರಿಕೊಳ್ಳಲಿಲ್ಲ.

ಅದಕ್ಕೆ ಫಿರ್ಯಾದಿಯೂ ಇಲ್ಲವೆಂದು ಸತ್ತಂತೆ ಸ್ವಸ್ಥನಾಗಿಬಿಟ್ಟೆ. ಉಪೇಕ್ಷೆ, ಅಲಕ್ಷ್ಯಗಳು ಸಾಹಿತಿ ಎನ್ಕನ ಶ್ರಾದ್ಧ ಮಾಡಿವೆ.

ಹೀಗೆ ಉಪೇಕ್ಷೆ, ಅಪಮಾನ, ನಿರಾಶೆ, ಸೋಲು, ಅಪ್ರಸಿದ್ಧಿಗಳ ಮಾಲೆಯನ್ನು ಧರಿಸಿದ ಎನ್ಕೆ ಬದುಕು ಒಂದು ರೀತಿ ದಯನೀಯ. ಆದರೆ ಹೀಗೆ ಸ್ವ-ಕರುಣೆಯನ್ನು ಪ್ರದರ್ಶಿಸುವಲ್ಲಿ ಪುರುಷಾರ್ಥವೇನಿದೆ? ಪುರುಷಾರ್ಥವಿಲ್ಲ. ಆದರೆ ನನ್ನ ವಾಚಕ ಲೋಕ ಎನ್ಕೆ ಬದುಕಿನ ನಗೆ-ಕಣ್ಣೀರುಗಳ ಕ್ಷೇತ್ರಗಳನ್ನು ತಿಳಿದಿರಬೇಡವೆ ?

ಬಾಲ್ಯದಿಂದಲೂ ತಬ್ಬಲಿತನವೆ ಎನ್ಕೆ ಬಾಳಿನ ಹೆಗ್ಗುರುತಾಗಿದೆ. ಹತ್ತು ವರುಷಕ್ಕೆ ತಂದೆಯನ್ನು ಕಳೆದುಕೊಂಡ. ಹನ್ನೆರಡು ವರ್ಷಕ್ಕೆ ತಾಯಿ, ಹದಿನಾಲ್ಕಕ್ಕೆ ಅಕ್ಕ, ಮುಂದೆ ಅತ್ತಿಗೆ! ಈ ಜೀವಗಳ ಕಣ್ಮರೆ. ಆಮೇಲೆ ಪತ್ನಿ-ಮಗಳು-ಮಾವ ಮೂರು ಜೀವಗಳು ಎರಡು ವಾರಗಳಲ್ಲಿ ಕಾಲನಿಗೆ ಒಂದೇ ಆಪೋಶನ. ಎನ್ಕೆ ತತ್ತರಿಸಿ, ನಡುಗುಟ್ಟಿಹೋದ. ಇವಲ್ಲದೆ ಅಣ್ಣನ ಮೂರು ಏಳು ಮಕ್ಕಳು ಬಾಲಗ್ರಹಕ್ಕೆ ತುತ್ತಾದಾಗ ಸ್ವತಃ ತಾನೇ ಮುದ್ದು ಮಾಡಿದ ಮಕ್ಕಳನ್ನು ಮಸಣಕ್ಕೆ ಕೊಂಡೊಯ್ದ ಪ್ರಸಂಗ. ಇತ್ತ ಅಕ್ಕನ ಗಂಡ, ಅಕ್ಕನ ಮಗಳು ಕಣ್ಮರೆಯಾಗಿ ಹೋಗಿದ್ದರು.

ಅರ್ಧಾಂಗಿಯನ್ನಗಲಿದ ನನಗೆ ಭಾರವಾದ ಬದುಕು ನಿರ್ಜೀವವಾಗಿತ್ತು. ಬದುಕಿ ಉಳಿದ ಇಬ್ಬರು ಗಂಡು ಮಕ್ಕಳನ್ನು ಅವರ ಅಜ್ಜಿಯ ಉಡಿಯಲ್ಲಿ ಹಾಕಿ ಮುಂಬೈ ಸಮುದ್ರ ತೀರಕ್ಕೆ ನಡೆಸಿದೆ ಒಡೆದ ಸಂಸಾರ ನೌಕೆಯನ್ನು. ಶರಚ್ಚಂದ್ರರ ದೇವದಾಸನಂತೆ ಕುಡಿತ, ವ್ಯಭಿಚಾರ, ದುರ್ವ್ಯಸನಗಳ ದವಡೆಗೆ ಸಿಕ್ಕು, ದೇವದಾಸನಂತೆ ಕೊನೆಗೆ ಜೀವಶವವಾಗಿ ಬಿದ್ದು ಹೋಗುವುದು-ಎಂಬ ದುರಂತ ವಿಚಾರಗಳ ಬಿರುಗಾಳಿಗೆ ಸಿಕ್ಕು ಒದ್ದಾಡುತ್ತಿರುವಾಗ ಅಣ್ಣ, ಈ ತಮ್ಮ 'ನಾನಿ'ಗೆ ಎರಡನೆಯ ಸಂಬಂಧದ ನಂಟು ಜೋಡಿಸಿದ. ಆಯಿತು ಮತ್ತೆ ಗಾಣಕ್ಕೆ ಹೂಡಿದ ಎತ್ತು.

ಸಂಸಾರ ನೌಕೆ ನಡೆಯಲು ನೌಕರಿಯ ಹುಟ್ಟು ಬೇಕೇ ಬೇಕಲ್ಲ. ನಾನು ಸಂಸಾರಕ್ಕೆ ತೊಡಗಿದ್ದು ನನ್ನ ಹತ್ತೊಂಬತ್ತನೆಯ ವಯಸ್ಸಿಗೆ. ಆದರೆ ಆಗ ನಾನಿನ್ನೂ ಕಾಲೇಜ್ ವಿದ್ಯಾರ್ಥಿ. ಸಂಸಾರ ನೌಕೆಗೆ ಮೊದಲು ನನ್ನ ಕಾಲೇಜ್ ನೌಕೆ ನಡೆಯಬೇಕಲ್ಲ? ಅದಕ್ಕೆ ಹುಟ್ಟು? ನನ್ನ ಮದುವೆ! ಮದುವೆ ಹಡಗವಾಗುವ ಬದಲು ಅದೇ ಹುಟ್ಟಾಗಿ ನನ್ನ ಕಾಲೇಜ್ ನೌಕೆಯನ್ನು ನಡೆಸಿತು. ನನ್ನ ಸಂಸಾರ ನೌಕೆಯನ್ನೂ ನಡೆಸಿತು. 'ನಾನಿಯ ನೆನಪುಗಳು' ಎಂಬ ನನ್ನ ಆತ್ಮವೃತ್ತದಲ್ಲಿ ನನ್ನ ಮದುವೆಯ ಪುರಾಣವನ್ನು ಪೂರ್ವಾಪರಗಳೊಂದಿಗೆ ವಿಸ್ತೃತವಾಗಿ ವಿವರಿಸಿದ್ದೇನೆ. ನನ್ನನ್ನು ಮನೆಯ ಅಳಿಯನನ್ನಾಗಿ ಮಾಡಿಕೊಂಡು (ಮೊದಲು ನಮ್ಮ ಅಣ್ಣನ ಮಾವನಾಗಿದ್ದ) ನಮ್ಮ ಮಾವ ಮಗನನ್ನೂ ಅಳಿಯನನ್ನೂ ಮನೆಯಲ್ಲಿಟ್ಟುಕೊಂಡು ಹೊಟ್ಟೆಗೆ ಹಾಕಿದ್ದಲ್ಲದೆ ಶಿಕ್ಷಣದ ವೆಚ್ಚವನ್ನೂ ವಹಿಸಿಕೊಂಡರು. ಅವರಿಗೂ ಉದ್ದರೀ ವರದಕ್ಷಿಣೆಯಲ್ಲಿ ಅಳಿಯನ ಖರೀದಿ ಆಯಿತು. ಅಳಿಯನಿಗೂ ಹಣದ ಅಡಚಣೆ ನೀಗಿ ವಿದ್ಯಾಮಾರ್ಗ ನಿರ್ವಿಘ್ನವಾಯಿತು.

ಮದುವೆ, ಮಧುಚಂದ್ರ, ಮೊದಲ ಗಂಡುಮಗು ಹೀಗೆ ಸಂಸಾರ ವೃಕ್ಷ ಚಿಗುರಿ ಚಿಗಿಯತೊಡಗಿತು. ಬಿ.ಎ. ಆಯಿತು. ಕನ್ನಡ ಆನರ್ಸನಲ್ಲಿ ಪ್ರಥಮ ಶ್ರೇಣಿಯ ಶ್ರೇಯಸ್ಸು. ನೌಕರಿಗಾಗಿ ಪರದಾಟ. ಶಿಕ್ಷಣಾಧಿಕಾರಿ ಸಯ್ಯದ್ ನೂರುಲ್ಲಾ ಸಾಹೇಬರು ಸ್ಪಷ್ಟ ಹೇಳಿದರು–'ನೀನು ಬ್ರಾಹ್ಮಣ. ನಿನಗೆ ನೌಕರಿ ಕೊಡಲಾರೆ.' ಗದಗ ಮುನಿಸಿಪಲ್ ಹೈಸ್ಕೂಲ್ ವಿದ್ಯಾರ್ಥಿಯಾಗಿ, ಕನ್ನಡ ಕನ್ನಡ ಎಂದು ಹಂಬಲಿಸಿ ಕನ್ನಡ ಆನರ್ಸ್ ಗ್ರ್ಯಾಜುಯೇಟ್ ಆಗಿ ಮುನಸಿಪಾಲ್ಟಿಯ ರಾಜಕಾರಣದ ರಣರಂಗದಲ್ಲಿ ನೌಕರಿಯ ಜಯಶ್ರೀ ದೊರಕಲಿಲ್ಲ. ಅಲೆಮಾರಿಯಂತೆ, ಯಜ್ಞಾಶ್ವದಂತೆ ನೌಕರಿಗಾಗಿ ಅಲೆದಾಟ, ಗತ್ಯಂತರವಿಲ್ಲದೆ ಎಂ. ಎ. ಅಭ್ಯಾಸಕ್ಕೆ ತೊಡಗಿದೆ. ಎಂ.ಎ. ಮಾಡಿಕೊಂಡು 'ಪ್ರೊಫೆಸರ್' ಎನಿಸಿಕೊಳ್ಳಬೇಕೆಂಬ ಹೌಸು. ಈ ಹೌಸು ನನಗಿಂತ ನನ್ನ ಹೌಸ್ ವಾಯಿಫ್‌ಗೆ ಅಧಿಕವಾಗಿತ್ತು. ಆದರೆ ನನ್ನ ದುರ್ದೈವಕ್ಕೆ ಎಂ.ಎ.ದಲ್ಲಿ ಹೆಚ್ಚಿನ ವರ್ಗ ಲಭಿಸಲಿಲ್ಲ, ಪ್ರೊಫೆಸರ್‌ಶಿಪ್ ಕನಸು ಕನ್ನಡಿಯಂತೆ ಒಡೆದು ಹೋಗಿತ್ತು. ಕನ್ನಡ ಎಂ.ಎ. ಮಾಡಿಕೊಂಡು ಮೂವತ್ತು ರೂಪಾಯಿ ಪಗಾರದ ಮಾಸ್ತರಕೀ ದೊರಕಿತ್ತು. ಈ ಒಂದು ವರುಷದ ಶಿಕ್ಷಕ ವೃತ್ತಿ ಬಿ.ಟಿ. ಮಾಡಿಕೊಳ್ಳಲು ಅರ್ಹತೆಯನ್ನು ದೊರಕಿಸಿಕೊಟ್ಟಿತ್ತು.

ಶಿಕ್ಷಕನಾಗಿಯೂ ಶಿಷ್ಯತ್ವ ತಳೆದ ಒಂದು ವರುಷದ ಬಿ.ಟಿ. ತರಬೇತಿ ಮೋಜಿನ ಅನುಭವವಾಗಿತ್ತು. ಒಂದು ವರ್ಷ ಕಾಲ ಕಾಳಿದಾಸನ ಶಾಪಗ್ರಸ್ತ ಯಕ್ಷನಂತೆ ನಚ್ಚಿನ ಮಡದಿಯನ್ನಗಲಿದ ವಿರಹವು ಮಾತ್ರ ನೋವಿನ ಅನುಭವವಾಗಿತ್ತು. ಆದರೆ ಈ ಒಂದು ವರುಷ ಪರ್ಯಂತ ನನ್ನಾಕೆಯೊಡನೆ ನಡೆಸಿದ ಪ್ರಣಯಪತ್ರವ್ಯವಹಾರಲೀಲೆ, ನೋವಿನಿಂದಲೆ ಅರಳಿ ನಿಂತ ಹೂವಾಗಿ ನನ್ನ 'ಎರಡನೆಯ ಸಂಬಂಧ' ಕಾದಂಬರಿಯ ಪತ್ರ ಪ್ರಕರಣದ ಪೂರ್ವಭಾಗಕ್ಕೆ ಕಂಪು, ಕಂಪನಗಳ ಭೂಮಿಯಾಗಿತ್ತು. ಈ ಕಾದಂಬರಿ ನನ್ನ ಹೆಂಡತಿಯ ಪೂರ್ಣ ಅಗಲಿಕೆಯ ನಂತರ ಹುಟ್ಟಿ ಬಂದ ನನ್ನ ಎರಡನೆಯ (ಸಂಬಂಧದ) ಕಾದಂಬರಿ. ನನ್ನ ಮೊದಲ ಕಾದಂಬರಿ 'ಸಾವಿನ ಉಡಿಯಲ್ಲಿ.' ಹೆಸರೇ ಸೂಚಿಸುವಂತೆ ಕಂಬನಿಯ ಕಥೆ. ತಬ್ಬಲಿ ಮಗಳು ರತ್ನಾ ಮಲತಾಯಿಯ ಪ್ರೇಮ, ಮರುತಾಯಿ (ರತ್ನಾನ ತಂದೆಯ ಉಪಪತ್ನಿ–ಕೇಸರಿ!)ಯ ವಾತ್ಸಲ್ಯ, ಸೋದರಮಾವ ಮಾಮಿ ಇವರ ಕಕ್ಕುಲಿತೆಗಳ ಉಯ್ಯಾಲೆಯಲ್ಲಿ ಓಲಾಡುತ್ತ ಸಾವು–ನೋವಿನ ಕೈಕೂಸಾಗಿ ಪಟ್ಟ ಪಾಡಿನ ಬದುಕು ಅದು. ನನ್ನ 'ಎರಡನೆಯ ಸಂಬಂಧ'ವಲ್ಲಿ ಹನ್ನೆರಡು ವರುಷಗಳ ತಾಪವನ್ನು ಅನ್ಯೋನ್ಯ ಪ್ರೀತಿಯೆಂಬ ಯೋಗಮಾಯೆಯಿಂದ ತಪವಾಗಿಸಿ, ದಾಂಪತ್ಯ ಸೂತ್ರವನ್ನು ಹಠಾತ್ತನೆ ಕಳಚಿಕೊಂಡು ಕಣ್ಮರೆಯಾದ ನನ್ನ ಮೊದಲ ಮಡದಿಯ ನೋವೆ ಹೂವಾದ ಕಥೆಯಿದೆ. ಮತ್ತೆ ನನ್ನ 'ವೈನಿ' ಕಾದಂಬರಿ ಕೂಡ ಭಾಗಶಃ ಆತ್ಮವೃತ್ತ, ಭಾಗಶಃ ಕಲ್ಪನಾ ಚಿತ್ರವಾಗಿ ನನ್ನ ವ್ಯಥೆಯ ಕಥೆಯನ್ನೆ ಅತ್ತಿಗೆ–ಮೈದುನರ ಸಂಬಂಧದ ಮೂಲಕ ಮೂಡಿಸಿದ್ದೇನೆ. ಈ ಮೂರೂ ಕಾದಂಬರಿಗಳು ಒಂದು ರೀತಿಯಲ್ಲಿ ನನ್ನ ಪ್ರಥಮ ವೈವಾಹಿಕ, ಸಾಂಸಾರಿಕ, ಕೌಟುಂಬಿಕದ ಹಿತಾಹಿತಗಳನ್ನು ಸಾಹಿತ್ಯ ಮಾಡಿ ತೋರಿಸುತ್ತವೆ. ಈ ಮೂರೂ ಕಾದಂಬರಿಗಳೆಂದರೆ

ನಾನು ಬಿ.ಟಿ ಮುಗಿಸಿ ಬಂದು ಶಿಕ್ಷಕ ವೃತ್ತಿಯನ್ನವಲಂಬಿಸಿ ನನ್ನ ಗೃಹಸ್ಥ ಜೀವನವನ್ನು ನಡೆಸಿದ ದಾಂಪತ್ಯ ನಾಟಕದ ಮೊದಲನೆಯ ಅಂಕವೆನ್ನಬಹುದು.

ನನ್ನ ದಾಂಪತ್ಯ ನಾಟಕದ ಎರಡನೆಯ ಅಂಕದ ದೃಶ್ಯಗಾಳಿಯಲ್ಲಿ. ಗಾಳಿಗೊಡ್ಡಿದ ಸೊಡರಿನಂತೆ ನನ್ನ AIR ಬದುಕು ಎರಡನೆಯ ಗೃಹಿಣಿಯ ಪಾಣಿಗ್ರಹಣದೊಂದಿಗೆ ಮೊದಲಾಯಿತು. ಮುಂಬಯಿ ಜನ, ಮುಂಬಯಿ ಜೀವನ ಮುಂಬಯಿ ಅರಿವು–ಇರವು ಒಂದು ಅರಬೀ ಸಮುದ್ರ. ಈ ಸಮುದ್ರದಲ್ಲಿ ತೇಲಿಬಿಟ್ಟ ಬೆಂಡಿನ ತುಂಡುಗಳಂತೆ ನಾನು ನನ್ನಾಕೆ! ಆದರೆ 'ಯಥಾಕಾಷ್ಠಂ ಚ ಕಾಷ್ಠಂ ಚ ಸಮೇಯಾತಾಂ ಮಹೋದಧೇ ಎಂಬಂತೆ ಎಷ್ಟೆಷ್ಟೋ ತೇಲುವ ತುಂಡುಗಳೂ ಸಂಪರ್ಕ, ಸಂಬಂಧ, ಅನುಬಂಧ ನೀಡಿದವು. ಗೆಳೆಯರ ಬಳಗ, ಕಲಾವಿದರ ಕುಲ, ಅನುಭವ ಕ್ಷಿತಿಜವನ್ನು ವಿಸ್ತರಿಸಿದ್ದವು. ಆಲ್ ಇಂಡಿಯಾ ರೇಡಿಯೋದ ರಸ–ವಿರಸ ಜೀವನ, ಸ್ತ್ರೀ ಎಂಬ ಮಾಯೆಯಿಂದ ದೊರೆತ ಭ್ರಾಮಕ ಸಮಾಧಾನ, H.M.V. ಗ್ರಾಮೋಫೋನ್ ಗೀತ ಚಕ್ರಗಳಿಗೆ ನಾನು ಒದಗಿಸಿದ ಸಾಲುಗಳ ಹಾಡುಗಬ್ಬದ ಗ್ರೂಪ್‌ಗಳು–ಹಣವನ್ನು ಹೆಸರನ್ನು ತಂದವು. 'ಪಂಪಾ ಪಿಕ್ಚರ್ಸ' ಎಂಬ ಚಿತ್ರ ಸಂಸ್ಥೆ ಮಿತ್ರ ಶಾಂತೇಶ ಪಾಟೀಲರ ಸಾಹಸದಿಂದ ಹಣವಂತರ ಕೊಡುಗೈಗಳಿಂದ ಸ್ಥಾಪಿತವಾಗಿ ಅವರ ಪ್ರಥಮ ನಿರ್ಮಿತಿ 'ಚಂದ್ರಹಾಸ'ಕ್ಕೆ ಲಕ್ಷ್ಮೀಶನ ಕಥೆಯ ಚೌಕಟ್ಟಿನಲ್ಲಿ, ಆತನದೆ ಭಾಷೆಯಲ್ಲಿ ಸಂಭಾಷಣೆಗಳನ್ನು ಒದಗಿಸಿದ ಸಂಭಾವನೆ ನನಗೆ ಸಂದಿತ್ತು. ಮುಂಬಯಿ ಅನುಭವದ ಗಂಟು ಹೊತ್ತುಕೊಂಡು ಗಾಳಿ ಬೀಸಿದತ್ತ ದೆಸೆಗೆಟ್ಟು ಹಾರಾಡುವ ರೌದಿಯಂತೆ ಧಾರವಾಡ–ಬೆಂಗಳೂರು–ಧಾರವಾಡ ಹೀಗೆ ಆಕಾಶವಾಣಿಯ ನವಿಲು ಗರಿಯಾಗಿ ಅಲೆದಾಡಿದೆ. ನಿಲಯ ಕಲಾವಿದನಾಗಿ, ಪ್ರಸಾರ ಸಹಾಯಕನಾಗಿ, ಕಾರ್ಯಕ್ರಮ ನಿಷ್ಪಾದಕನಾಗಿ ಬರೆದೆ, ಚಿತ್ತರಿಸಿದೆ, ಆಡಿದೆ, ಹಾಡಿದೆ, ಕುರ್ಚಿಯ ತೂಕವಿಲ್ಲದೆ ಹಾರಾಡಿದೆ. ಗೀತ, ರೂಪಕ, ಗೀತ–ರೂಪಕ, ಸಾಕ್ಷಿ, ಶಬ್ದಚಿತ್ರ, ನಾಟಕ, ಭಾಷಣ, ಸಂಭಾಷಣ, ಸಂದರ್ಶನಗಳೆಂದು ಇಪ್ಪತ್ತೈದು ವರ್ಷಗಳ ಸೇವಾವೃತ್ತಿಯಲ್ಲಿ ರಚಿಸಿದ ಈ ಗಾಳಿ ಬರೆವಣಿಗೆ ಪ್ರಕಟಿತ ಅಷ್ಟ ಪತ್ರದ ಇಪ್ಪತ್ತು ಸಾವಿರ ಪುಟಗಳ ಗ್ರಂಥರಾಶಿಯಾಗಬಹುದಿತ್ತು. ಗಾಳಿಯ ಬರೆವಣಿಗೆಯೆಂದು ಅವಕ್ಕೆ ಸಾಹಿತ್ಯದ ಸ್ಥಾಯಿತ್ವ ಬರಲಿಲ್ಲ. ಇಪ್ಪತ್ತೈದು ವರ್ಷಗಳ ಈ ಕೃತಿ ಒಂದು ಬಗೆಯ ಸಾಹಿತ್ಯ ವ್ಯಭಿಚಾರಣೆ ಆಯಿತೆಂಬ ವ್ಯಥೆ ನನ್ನದಾಗಿದೆ. ಇಷ್ಟು ಸಾಹಿತ್ಯ ಸೃಷ್ಟಿಸಿ ಆಕಾಶವಾಣಿಯ ಯಾವ ಹೆಚ್ಚಿನ ಹುದ್ದೆಯೂ ಪ್ರತಿಫಲವಾಗಿ ದೊರಕಲಿಲ್ಲ. ನಿಜ. ಕರ್ಮಣ್ಯೇವಾಧಿಕಾರಸ್ತೇ ಎಂಬ ಮಂತ್ರ ನೌಕರನದಾಗಿರಬೇಕು. ಆದರೂ ಅಪೂರ್ಣಮಾನವನಾದ ನಾನು ಮಾನವ ದೌರ್ಬಲ್ಯದಿಂದಲೇ ಈ ಪ್ರತಿಫಲದ ಮಾತನಾಡುತ್ತಿದ್ದೇನೆಂಬ ಪ್ರಜ್ಞೆ ನನಗಿದೆ. ಶಿಕ್ಷಕ ವೃತ್ತಿಯಿಂದ ಸಂಶೋಧನ ವ್ಯಾಸಂಗವೇತನ ಪಡೆದು ಕವಿ ಕುಮಾರವ್ಯಾಸನ ಬಗ್ಗೆ ಪಿಎಚ್.ಡಿ. ಮಾಡಿ ಶಿಕ್ಷಣ ವೃತ್ತಿಯಲ್ಲಿ ಬಿಟ್ಟ ಪ್ರಾಧ್ಯಾಪಕನ ಸಂತೃಪ್ತಿಯ ಬದುಕಿನಲ್ಲಿ ಬೆಳೆಬಾಳುವ ಸಾಹಿತ್ಯ–ನಿರ್ಮಿತಿ ಮಾಡ

ಬಹುವಿತ್ತೇನೋ. ನನ್ನ ದಾಂಪತ್ಯ ಜೀವನದ ಮೊದಲ ಅಂಕದ ದುರಂತ ನನ್ನನ್ನು ಮುಂಬಯಿಗೆ ಬೀಸಿ ಒಗೆಯಿತು. ಅಲ್ಲಿ ಜೀವನ ನಾಟಕದ ಹೊಸ ನಾಯಿಕೆಯೊಡನೆ ದೈವವು ಮತ್ತೊಂದು ಆಟವಾಡಲು ಹಚ್ಚಿತು. ತಬ್ಬಲಿಯಾದ ಇಬ್ಬರು ಮಕ್ಕಳನ್ನು ಅವರ ಅಜ್ಜಿಯ ಉಡಿಯಲ್ಲಿ ಹಾಕಿ, ಅಣ್ಣನ ಮೇಲ್ವಿಚಾರಣೆಯಲ್ಲಿ ವಿಧುರನಾಗ ಆತನ ಮಕ್ಕಳ ಆರೈಕೆಯನ್ನೂ ಅಜ್ಜಿಯ ಮನೆಯಲ್ಲೆ ನಡೆಸಬೇಕಾಯಿತು.

ಮುಂಬಯಿಯಿಂದ ಧಾರವಾಡಕ್ಕೆ ವಿನಂತಿ ವರ್ಗಾವಣೆಯ ಮೇಲೆ ಬಂದೆ. ನಿಲಯ ಕಲಾವಿದರಿಗೆ ಯಾವುದೇ ರೀತಿ ಪ್ರವಾಸದ ಭತ್ತೆ ದಿನದ ಭತ್ತೆ ದೊರಕುತ್ತಿರಲಿಲ್ಲ. ನನ್ನ ವೆಚ್ಚದ ಮೇಲೆ ನಾನು ಧಾರವಾಡಕ್ಕೆ ಸ್ಥಾನಾಂತರ ಪಡೆದುದೇ ಒಂದು ಭಾಗ್ಯ ಎನ್ನುವಂತಾಗಿತ್ತು. ನನ್ನ ಮಕ್ಕಳು ನನ್ನ ಬಳಗದ ಮಧ್ಯದಲ್ಲಿ ಸೇರಿಕೊಂಡೆನಲ್ಲ ಎಂಬುದೆ ನನ್ನ ದೊಡ್ಡ ಸಮಾಧಾನವಾಗಿತ್ತು. ಮನೆಗಾಗಿಯೂ ಬಹಳಷ್ಟು ಪರದಾಡಬೇಕಿರಲಿಲ್ಲ. ಎನ್. ಕೆ. ದೀಕ್ಷಿತ–ಧಾರ ವಾಡದ ಪುಢಾರಿ ವಕೀಲರೂ ಧಾರವಾಡದ ಸಾಂಸ್ಕೃತಿಕ ಜೀವನದ ಪ್ರಮುಖ ಶಿಲ್ಪಿಗಳೂ–ಅವರು ತಮ್ಮ ವಠಾರದ ಒಂದು ಮನಯನ್ನೆ ನನಗಾಗಿ ಮುಕ್ತಮಾಡಿಕೊಟ್ಟರು. ಈ ಮೂಲಕ ನನ್ನ ವೈಚಾರಿಕತೆಯ ಆಸಕ್ತಿಗೆ ಹೆಚ್ಚಿನ ಪ್ರೇರಣೆ ಸಿಕ್ಕಿತು. ಮುಂದೆ ಪ್ರೊ. ವಿ. ಕೃ. ಗೋಕಾಕರು ಕರ್ನಾಟಕ ಕಾಲೇಜಿನ ಪ್ರಾಚಾರ್ಯರಾಗಿ ಬಂದ ಮೇಲೆ ಶ್ರೀ ಅರವಿಂದರ 'ಸಾವಿತ್ರಿ' ಯನ್ನು ಓದಿ ಹೇಳುತ್ತಿರುವಾಗ ಶ್ರೀ ಅರವಿಂದಾಶ್ರಮ ಮತ್ತು ಪಾಂಡಿಚೇರಿಯ ಮಾತಾಜಿಯವರಲ್ಲಿ ಶ್ರದ್ಧೆ ಬೆಳೆಯುವಂತಹ ಸನ್ನಿವೇಶಗಳು ಒದಗಿ ಬಂದವು.

ಧಾರವಾಡದಲ್ಲಿ ನನ್ನ ಸಾಹಿತ್ಯರಚನೆ, ಬಾನುಲಿ ಬರೆವಣಿಗೆ ಎರಡೂ ಸಮಾಂತರದಲ್ಲಿ ಬೆಳೆಯತೊಡಗಿದವು. ನಾನು ನಿಲಯ ಕಲಾವಿದನೆಂಬ ಸ್ಥಾನದಿಂದ ಪ್ರಸಾರ ಸಹಾಯಕನೆಂಬ ಸ್ಥಿರರೂಪದ ಬದಲಾವಣೆ ಹೊಂದಿದ ಮೇಲೆ ಪ್ರಸಾರ ನಿರ್ವಹಣೆಯ ಡ್ಯೂಟಿ ಟೇಬಲ್ ಮೇಲೆಯೇ 'ವೈನಿ' ಕಾದಂಬರಿ ಜೀವತುಂಬಿ ರೂಪಗೊಂಡು ನಿರೂಪಿಸಲ್ಪಟ್ಟಿತ್ತು. ಅದೇ ಟೇಬಲ್ ಮೇಲೆ 'ವೈನಿ' ತರುವಾಯ ನನ್ನ 'ಕಲೋಪಜೀವಿ' ಎಂಬ ಕಾದಂಬರಿಯೂ ರಕ್ತ ಮಾಂಸ ತುಂಬಿಕೊಂಡ ಪಾತ್ರಗಳೊಂದಿಗೆ ಮೈ ತಳೆದು ಎದ್ದಿತು. ಎಷ್ಟೋ ಪ್ರಸಾರ ನಾಟಕಗಳಲ್ಲಿ ಕೆಲವನ್ನು ಆಯ್ದು 'ಬುಶ್‌ಕೋಟು' 'ಕಾವ್ಯದ ಕಾರಖಾನೆ' ಎಂಬ ಏಕಾಂಕ ಸಂಗ್ರಹಗಳು ಬೆಳಕಿಗೆ ಬಂದವು. 'ಮಂದಿರ ಪ್ರವೇಶ' ಎಂಬ ನಾಟಕಕ್ಕೆ ಕೇಂದ್ರ ಮತ್ತು ಮುಂಬಯಿ ರಾಜ್ಯ ಸರ್ಕಾರಗಳ ನಗದು ಪುರಸ್ಕಾರ ದೊರಕಿತು; ಈ ಮೊದಲು ಮುಂಬಯಿ ಮುಟ್ಟಿದ್ದಾಗಲೆ ಧಾರವಾಡದಿಂದಲೆ 'ಎನ್ಕೆ ಏಕಾಂಕಗಳು' ಎಂಬ ದೊಡ್ಡ ಗಾತ್ರದ ಸಂಗ್ರಹವೂ ಪ್ರಕಟಗೊಂಡಿತ್ತು.

ಸಾಹಿತಿಯಾಗಬೇಕು, ಕನ್ನಡ ಪ್ರಾಧ್ಯಾಪಕನಾಗಬೇಕು, ಡಾಕ್ಟರೇಟ್ ಪದವೀಧರನಾಗಬೇಕು ಎಂದು ಕನವರಿಸಿ, ಕನಸು ಕಾಣುತ್ತಿದ್ದ ನಾನು ಸಾಹಿತಿ ಏನೋ ಆದೆ, ಉಳಿದವೆರಡೂ ನನ್ನ ಕೈಗೆ ಎಟುಕದ ಬಿಸಿಲ್ಗುದುರೆಗಳಾದವು. ನಾನು ಕರ್ನಾಟಕ ಕಾಲೇಜ್ ಕಟ್ಟೆ ಹತ್ತಿ, ಅವರ ಅಟ್ಟವೇರಿ ಆ ಎತ್ತರದಿಂದ ಕಾಲೇಜ್ ಜೀವನದ

ಕೃಗದದ ದೊಡ್ಡಸ್ತಿಕೆ, ಜವಾಬ್ದಾರಿಯನ್ನರಿಯದ ಪಾಲಿಶ ನಡತೆ ಇವುಗಳನ್ನು ನೋಡುತ್ತಿದ್ದ ನನ್ನ ಮನಸ್ಸಿನ ಮೇಲಾದ ಉದ್ವೇಗದ ಕುದಿಯಿಂದ 'ಇಲೆಕ್ಷನ್' ಎಂಬ ನಾಟಕ ಹೊರಹೊಮ್ಮಿತು. ನನ್ನ ಗುರುಗಳಾಗಿದ್ದ ಪ್ರೊ. ಅ. ತು. ನಾಸನೂರ, ಶ್ರೀರಂಗರು ಅದನ್ನು ಮೆಚ್ಚಿಕೊಂಡರು. ಶ್ರೀರಂಗರು ಹೆಚ್ಚಿನ ಆಸಕ್ತಿ ವಹಿಸಿ ನನ್ನ ಈ ಚೊಚ್ಚಿಲು ನಾಟಕವನ್ನು ಕಾಲೇಜ್ ಗ್ಯಾದರಿಂಗ್‌ನಲ್ಲಿ ಆಡಿಸಿದರು. ಮುಂದೆ ಶ್ರೀರಂಗರ ಮುನ್ನುಡಿಯೊಂದಿಗೆ ನಾನೇ ಅದನ್ನು ಪ್ರಕಟಿಸಿದೆ. ಪ್ರತಿಗಳು ಮಾರಾಟವಾದವು. ಇದರಿಂದ ನನಗೆ ಸ್ಫೂರ್ತಿ, ಪ್ರೋತ್ಸಾಹಗಳು ದೊರೆತು 'ಬೇಕು', 'ಬಾರ್‌ರೂಂ' ಎಂಬ ನಾಟಕಗಳನ್ನು ಒಂದರ ಹಿಂದೊಂದು ಮರುವರುಷದ ಕಾಲೇಜ್ ಗ್ಯಾದರಿಂಗ್‌ಗಾಗಿ ಮೂಡಿಬಂದವು. ೧೯೩೭ರಲ್ಲಿ ನನ್ನ ಆತ್ಮೀಯ ಮಿತ್ರರಾಗಿದ್ದ ಶ್ರೀನಿವಾಸ ಕುಲಕರ್ಣಿ (ಮುಂದೆ ನಾಟ್ಯಾಚಾರ್ಯರೆಂದು ಪ್ರಸಿದ್ಧರಾದವರು) ಅವರು ತಮ್ಮ 'ಪ್ರೇಮ' ಗ್ರಂಥ ಮಾಲೆಯಲ್ಲಿ 'ನಮ್ಮಮನೆಯಲ್ಲಿ' ಎಂಬ ಹೆಸರಿನಲ್ಲಿ ಏಳು ಏಕಾಂಕಗಳ ಸಂಗ್ರಹವನ್ನು ಪ್ರಕಟಿಸಿದರು. ಇತ್ತ ಹರಟೆಗಳನ್ನೂ ಬರೆಯಲು ಆರಂಭಿಸಿದೆ. 'ಗ್ರೀನ್ ರೂಮು' ಎಂಬ ನನ್ನ ಮೊದಲ ಹರಟೆ ಬೆಂಗಳೂರಿನ 'ಕತೆಗಾರ'ದಲ್ಲಿ ಪ್ರಕಟವಾಯಿತು. ಖ್ಯಾತ ಸುಬೋಧ ರಾಮರಾಯರ ಪ್ರೋತ್ಸಾಹದಿಂದ ಬಿ. ಎ. ವಿದ್ಯಾರ್ಥಿಯಾಗಿದ್ದಾಗಲೆ ಹರಟೆಯ ದಾರಿಯಲ್ಲಿ ಮೊದಲ ಹೆಜ್ಜೆಯನ್ನಿಟ್ಟ 'ಮುಂಗಾಲ್ ಪುಟಿಗೆ', 'ತ್ರಿಶೂಲಿಗಳು', 'ಎನ್ಕೆ ಬರೆದಗಳು', 'ಮೋಡಕಾ ಬಾಜಾರ' ಎಂಬ ಸಂಗ್ರಹಗಳನ್ನು ತುಂಬಿ ದೊರಚೆಲ್ಲಿ ಸಂಗ್ರಹರೂಪದಲ್ಲಿ ಅಚಕವಾಗಬೇಕಾದ ಇನ್ನೂ ಹಲವು ಹರಟೆಗಳಿವೆ.

ಹರಟೆ ನನ್ನ ಕಿರುಕುಳ ಕಷ್ಟಗಳನ್ನು ಮರೆಯುವ ಒಂದು ಟ್ರ್ಯಾಂಕ್ವಿಲಾಯಿಜರ್ ಆಗಿದೆ. ನನಗಿನ್ನೂ ನೆನಪಿದೆ. ನಾಲ್ವತ್ತೈದು ವರ್ಷಗಳ ಹಿಂದಿನ ಮಾತು. ನನ್ನ ಕಾಲೊಳಗಿನ ಜೋಡು ಸವೆದದ್ದರಿಂದ ಒಳ್ಳೇ ಅಟ್ಟೆ ಹಾಕಿಸಿ ಓಡಾಡಿದರೆ ಕಿರ್ ಬರುವಂತೆ ಸುಂದರವಾಗಿ ರಿಪೇರಿ ಮಾಡಿಸಿ ಪಾಲಿಶ್ ಹಾಕಿಸಿದ್ದೆ. ನನ್ನ ದುರ್ದೈವ! ರಿಪೇರಿ ಮಾಡಿಸಿದ ಒಂದು ತಾಸಿನೊಳಗಾಗಿಯೇ ಒಂದು ಅರಿವೆ ಅಂಗಡಿಯಲ್ಲಿ ಹೊರಗೆ ಬಿಟ್ಟು ಒಳಗೆ ಪ್ರವೇಶಿಸಬೇಕಾದ ಪ್ರಸಂಗ. ಆಮೇಲೆ ಹೊರಗೆ ಬಂದು ನೋಡುತ್ತೇನೆ ಕಾಲ್ಮರಿಗಳು ಕಣ್ಮರೆ! ನನಗೆಷ್ಟು ವ್ಯಥೆ! ಸೀತೆಯನ್ನು ಕಳೆದುಕೊಂಡ ಶ್ರೀರಾಮನಾದರೂ ಇಷ್ಟು ಮಿಡುಕಿದ್ದನೋ ಇಲ್ಲವೊ! ಸರಿ. ಈ ವ್ಯಥೆಯನ್ನು ಮರೆಯಲು ಕಣ್ಮರೆಯಾಗಿ ಕಥೆಯಾದ ನನ್ನ ಕಾಲ್ಮರಿಗಳನ್ನು ಕುರಿತು ಒಂದು ನಗೆಯ ಹರಟೆಯನ್ನು ಬರೆಯುವುದೊಂದೆ ರಾಮಬಾಣ ಔಷಧ ಎಂದುಕೊಂಡೆ, ಹರಟೆ ಬರೆದೆ. 'ಜಯಂತಿ'ಯ ಬೆಟಗೇರಿ ಅವರು ಅದನ್ನು ಮೆಚ್ಚಿ ಪ್ರಕಟಿಸಿದರು. ಓದುಗರು ಆನಂದ ಪಟ್ಟರು. ನನ್ನ ಕಿರುಕುಳದ ಕಹಿ ರಸಾನ ಕವಳವಾಗಿತ್ತು. ಬಹಳಷ್ಟು ನನ್ನ ಹರಟೆಗಳು ಇದೇ ಧರ್ತಿಯವು.

ಪರಟಿ–ನಾಟಕಗಳ ಎನ್ಕೆ ಹಾಸ್ಯಗಾರನಾಗಿ ನಗಿಸುತ್ತಾನೆ. ಆದರೆ ಕಾದಂಬರಿಕಾರ ಎನ್ಕೆ ಕರುಣೆಯ ಸ್ಪರ್ಶದಿಂದ ಓದುಗರ ಮನ ಕರಗಿ ಕಂಬನಿ ಮಿಡಿಯುವಂತೆ ಮಾಡುತ್ತಾನೆ. ಹೌದು ನಿಜ. ಅಂತೆಯೇ ಎನ್ಕೆನ ವಾಚಕರು ಆತನನ್ನು ಅಷ್ಟೊಂದು ವಿಶ್ವಾಸದಿಂದ ಕಾಣುತ್ತಾರೆ. ತನ್ನ ದುಃಖವನ್ನು ಕರುಣಾರಸದ ಮೂಲಕ ವಾಚಕರೊಡನೆ ಹಂಚಿಕೊಳ್ಳುತ್ತಾನೆ. ತನ್ನ ಕಿರುಕುಳಗಳನ್ನು ನಗೆಯ ಪಾತ್ರಗಳ ರೂಪದಲ್ಲಿ ಓದುಗರ ಮುಂದೆ ತನ್ನ ಹುಚ್ಚುತನ ಪೆಚ್ಚುತನಗಳ ಅನಾವರಣ ಮಾಡಿ ತಾನೂ ಆನಂದಿಸುತ್ತಾನೆ. ನಿಜವಾಗಿಯೂ ನನ್ನ ಸಹೃದಯ ಬಂಧುಗಳು ನನ್ನ ವಾಚಕರು, ಸಾಮಾನ್ಯ ವಾಚಕ ಸ್ತ್ರೀ–ಪುರುಷರು. ಇಂತಹ ಬಂಧುಪ್ರೇಮವೆ ಎನ್ಕೆ ಎಂಬ ಬರೆಹಗಾರನನ್ನು ಎಪ್ಪತ್ತು ವರುಷ ಬದುಕಿಸಿದೆ. ಇದು ಎನ್ಕೆ ಬರೆಹಗಾರನ ಬದುಕು.

ನಾನು ಆಕಾಶವಾಣಿಯಿಂದ ನಿವೃತ್ತಿ ಹೊಂದಿದ ಮೇಲೆ– 'ಹೇಗೆ ವೇಳೆ ಕಳೆಯುತ್ತಿದ್ದೀರಿ?' ಎಂದು ಯಾರಾದರೂ ಪ್ರಶ್ನಿಸಿದಾಗ ನನಗೆ ಅಪಮಾನವಾದಂತಾಗುವುದು. ಎಲಾ ! ನೌಕರಿಯ ಹೊರತಾಗಿ ಮನುಷ್ಯ ಪ್ರಾಣಿಗೆ ಬೇರೆ ವ್ಯವಸಾಯವೆ ಇಲ್ಲವೆ ? ಇದು ನನ್ನ ಪ್ರತಿಕ್ರಿಯೆ. ನಿಜವಾಗಿಯೂ ೨೫ ವರ್ಷ ಪೋಷಿಸಿದ ನನ್ನ ಸಂಸ್ಥೆಗೆ, ನನ್ನ (ಅಲ್ಲಲ್ಲ ಆಕಾಶವಾಣಿಯ) ಮೈಕ್ರೋಫೋನ್‌ಗೆ, ಕುರ್ಚಿಗೆ, ಸ್ಟುಡಿಯೋಕ್ಕೆ, ಕೆಂಪು ದೀಪಕ್ಕೆ ವಿದಾಯ ಹೇಳಿ ಹೊರಬಂದ ಮೇಲೆ–ನೂರಾರು ವೇದಿಕೆಗಳ ಮೇಲಿಂದ ಸಾವಿರಾರು ನನ್ನ ಪ್ರೇಕ್ಷಕ ಬಳಗದವರ ಹೃದಯಗಳ ಸಂಪತ್ತನ್ನು ಗಳಿಸಿಕೊಂಡಿದ್ದೇನೆ; ಆಕಾಶವಾಣಿಯಲ್ಲಿ ನನ್ನ ಶ್ರೋತೃಗಳು ಮಾತ್ರ ಆಗಿದ್ದವರು ನನ್ನ ಪ್ರೇಕ್ಷಕ ಬಳಗದವರೂ ಆಗಿದ್ದಾರೆ. ಹಲವಾರು ಪತ್ರಿಕೆಗಳ ಮೂಲಕ ಹಲವಾರು ಬಗೆಯ ಬರೆವಣಿಗೆ ಮಾಡಿದ್ದೇನೆ, ಅಂಕಣಗಳನ್ನು ನಿರ್ಮಿಸಿದ್ದೇನೆ; ಓದುಗರ ಅಭಿರುಚಿಗಳಿಗೆ ಒಗ್ಗರಣೆ ಕೊಟ್ಟಿದ್ದೇನೆ, ಓದುಗರ ತಮಾಷೆಯ ಪ್ರಶ್ನೆಗಳಿಗೆ ತಮಾಷೆ ಮಾಡಿ ಉತ್ತರ ನೀಡಿದ್ದೇನೆ; ಹತ್ತಿಪ್ಪತ್ತು ಗ್ರಂಥಸ್ಥ ಸಾಹಿತ್ಯ ನಿರ್ಮಿಸಿದ್ದೇನೆ. ನಟರ ನಟಿಯರ, ಗಾಯಕ, ಗಾಯಿಕೆಯರ, ದೇಶಸೇವಕರ, ನ್ಯಾಯಮೂರ್ತಿಗಳ ಜೀವನಚರಿತ್ರೆಗಳನ್ನು ಚಿತ್ರಿಸಿದ್ದೇನೆ. ಇವುಗಳಲ್ಲಿ ಕೆಲವನ್ನು IBH ನವರು, 'ರಾಷ್ಟ್ರೋತ್ಥಾನ' ದವರು, ರಾಜ್ಯ ಅಕಾಡೆಮಿಯವರು ಪ್ರಕಟಪಡಿಸಿದ್ದಾರೆ. ನಗೆಗಾರ ಎನ್ಕೆನ ಬರೆವಣಿಗೆಗೆ ಬಣ್ಣ ಬಂದುದು ಮುಖ್ಯವಾಗಿ ಸರಸ ದಾಂಪತ್ಯದ ಶೃಂಗಾರದಿಂದಾಗಿ. ಆದರೆ ಪ್ರಥಮ ಸಲ ವಿಧುರನಾದ ಎನ್ಕೆ ಬರೆವಣಿಗೆಯಲ್ಲಿ ವಿರಹದ ಬೇನೆ ನಗೆಯನ್ನು ಬತ್ತಿಸಿತ್ತು. ಮುಂದೆ ಮತ್ತೆ ಚತುರ್ಭುಜನಾದ ಎನ್ಕೆ ಚೇತರಿಸಿಕೊಳ್ಳುತ್ತ ಸರಸ ಶೃಂಗಾರದ ಹಾಸ್ಯಕ್ಕೆ ಅಣಿಯಾದಾಗ ದೈವ ಮತ್ತೆ ವಂಚಿಸಿತ್ತು. ಮತ್ತೊಮ್ಮೆ ಒಂಟಿತನದ ಪ್ರಾಪ್ತಿ. ನನ್ನ ದ್ವಿತೀಯ ಪತ್ನಿಯ ಪ್ರಾಣ ಕೈಯೊಳಗಿನ ಸಾಬೂನು ನೊರೆಯಿಂದ ನುಣುಚಿಕೊಳ್ಳುವಂತೆ ಕಳಚಿಕೊಂಡು ಹೋಗಿತ್ತು.

ನಾವು ಮೂವರು ಅಣ್ಣ ತಮ್ಮಂದಿರಿದ್ದೆವು; ದಾಯಾದಿಗಳಾಗಿರಲಿಲ್ಲ. ಅಣ್ಣಂದಿರನ್ನೂ, ಅಣ್ಣಂದಿರ ಮಕ್ಕಳನ್ನೂ ತನುಮನಧನಗಳಿಂದ ನೋಡಿಕೊಂಡಿದ್ದೇನೆಂಬ

ನೆಮ್ಮದಿ ನನ್ನದಾಗಿರುವಾಗಲೆ ಏಳು ವರ್ಷಗಳ ಹಿಂದೆ ನಡುವಿನ ಅಣ್ಣ–ಅತ್ತಿಗೆ ಕಣ್ಮರೆಯಾದರು. ಎರಡು ವರ್ಷಗಳಿಂದ ದೀರ್ಘಾವಧಿ ಕಾಲ ವಿಧುರನಾಗಿದ್ದ ಹಿರಿಯಣ್ಣ ದೀರ್ಘ ಅಗಲಿಕೆಯನ್ನು ನೀಡಿ ಹೋದ. ನನ್ನ ಇಬ್ಬರೂ ಅಣ್ಣಂದಿರೊಡನೆ ಸಾವು ಕಣ್ಣು ಮುಚ್ಚಾಲೆ ಆಡಿತ್ತು. ಒಂಟಿ ಪ್ರಜ್ಞೆ ನನ್ನನ್ನು ಬೆನ್ನಟ್ಟಿದ್ದರೂ ನನ್ನ ಮೂವರು ಮಕ್ಕಳು, ಮೂವರು ಸೊಸೆಂದಿರು, ಮೂವರು ಮೊಮ್ಮಕ್ಕಳು ನನಗೆ ನೆಮ್ಮದಿ ನೀಡಿ ಬದುಕಿನಲ್ಲಿ ಲವಲವಿಕೆಯನ್ನು ಹೆಚ್ಚಿಸುತ್ತಿದ್ದಾರೆ. ಅಣ್ಣಂದಿರ ಮಕ್ಕಳು–ಮೊಮ್ಮಕ್ಕಳು ನನ್ನ ಅಂತಃಕರಣವನ್ನು ತುಂಬಿದ್ದಾರೆ. ನನ್ನ ದೈವ ನನಗೆ ದೊರಕಿಸಿಕೊಟ್ಟ ಹೊರಗಿನ ಹತ್ತಿರದವರು ನನ್ನ ಕರುಳಿನ ಕುಡಿಗಳನ್ನು ಚಿಗುರಿಸಿದ್ದಾರೆ.

# ನುಡಿದರೆ ಮುತ್ತಿನ ಹಾರದಂತಿರಬೇಕು

## ಗದುಗಿನ ತೋಂಟದಾರ್ಯಮಠದ ಜಗದ್ಗುರುಗಳು

Tailormade gentleman ಮತ್ತು Barbermade gentleman ಗಳೇ ಬಹಳವಾಗಿರುವ ಇಂದಿನ ದಿನಮಾನದಲ್ಲಿ ತಮ್ಮ ಬದುಕಿನಲ್ಲಿ ಉತ್ತಮ ಮೌಲ್ಯಗಳನ್ನು ರೂಢಿಸಿಕೊಂಡು ಬಂದ ಎನ್ಕೆಯವರು ಸಹೃದಯರು. ಅವರ ಸೌಮ್ಯ-ಪ್ರಕೃತಿ, ಸೌಜನ್ಯದ ಮಾತು ಎಂಥವರನ್ನೂ ಆತ್ಮೀಯಗೊಳಿಸುತ್ತವೆ. ಆಕಾಶವಾಣಿಯ ಅವರ ವಿಚಾರ ದೀಪಿಕೆಗಳನ್ನು ಕೇಳುವಾಗಲೆಲ್ಲ ಬಸವಣ್ಣನವರ 'ನುಡಿದರೆ ಮುತ್ತಿನ ಹಾರದಂತಿರಬೇಕು' ಎಂಬ ವಚನದ್ದೇ ನೆನಪು. ಎಂಥ ಜಟಿಲ ವಿಷಯಗಳ ಬಗೆಗೆಯೇ ಆಗಲಿ, ಅವರು ವಿವರಿಸುವ ರೀತಿ ಸರಳ, ಸಂಕ್ಷಿಪ್ತ. ಬಂಗಾರ ತೂಗಿದಂತೆ. ಅವರ ಮಾತು ಬಳ್ಳಿಯಲ್ಲಿ ಹೂ ಅರಳಿದಂತೆ, ತಂಗಾಳಿ ತೀಡಿದಂತೆ, ಬೆಳದಿಂಗಳು ಸುರಿದಂತೆ ತುಂಬ ಶುಚಿ, ರುಚಿ.

ಎನ್ಕೆಯವರ ಲೇಖನಗಳನ್ನು ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ, ಕರ್ಮವೀರ ಸಾಪ್ತಾಹಿಕದಲ್ಲಿ, ಕಸ್ತೂರಿ ಮಾಸಿಕದಲ್ಲಿ ಓದಿದ ನೆನಪು. ಅರ್ಥಯುಕ್ತ, ಪ್ರಾಸಬದ್ಧ, ಭಾವಪೂರ್ಣ ತಲೆಬರಹ, ಆಕರ್ಷಕ ನಿರೂಪಣೆ ಸದಾ ನೆನಪಿನಲ್ಲಿ ಉಳಿಯುವಂತಹವು. ಎನ್ಕೆ ಅವರು ಬದುಕಿನಲ್ಲಿ ತುಂಬಾ ನೊಂದ-ಬೆಂದ ಬೇಂದ್ರೆ ಜಾಯಮಾನದವರು. ಬೇಂದ್ರೆಯವರು ಒಂದು ಕಡೆ ಬರೆದ "ಒಂದು ಬಟ್ಟೆಯಲ್ಲಿ ಎಳೆಗಳನ್ನು ಎಣಿಸಿ ಹೇಳಬಹುದು, ನನ್ನ ಬದುಕಿನಲ್ಲಿ ಬಂದ ಕಷ್ಟಗಳನ್ನು ಹೇಳಲಿಕ್ಕಾಗದು" ಎಂಬ ಮಾತು ಎನ್ಕೆಯವರಿಗೂ ಅಕ್ಷರಶಃ ಅನ್ವಯ. 'ನನ್ನ ಪಾಡೆ ನನಗಿರಲಿ, ಆದರ ಸವಿಯುಷ್ಟೆ ಉಣಿಸುವೆನು ರಸಿಕ ನಿನಗೆ' ಎನ್ನುವ ಕವಿವಾಣಿಯಂತೆ ಅಳುನುಂಗಿ ನಗುತ್ತ ಕನ್ನಡವನ್ನು ಬೆಳೆಸುವಲ್ಲಿ, ಬೆಳಗಿಸುವಲ್ಲಿ ಶ್ರಮಿಸಿದ ಎನ್ಕೆಯವರಿಗೆ ಎಪ್ಪತ್ತು ಸಂವತ್ಸರ ತುಂಬಿದವು ಎಂಬುದು ನಂಬಲಿಕ್ಕೇ ಆಗದು. ಅವರು ಇನ್ನೂ ದೀರ್ಘಾಯುಗಳಾಗಲಿ.

# ಎನ್ನ ಬದುಕು

---

೨೯-೬-೧೯೧೩—ಗದುಗಿನಲ್ಲಿ ಜನನ—ಅಲ್ಲಿಯೆ ಪ್ರಾಥಮಿಕ ಶಾಲೆ— ಮಾಧ್ಯಮಿಕ ಶಿಕ್ಷಣ.

ಜೂನ್ ೧೯೨೪—ತಂದೆ ಕೃಷ್ಣರಾಯರ ಅಗಲಿಕೆ.

ಏಪ್ರಿಲ್ ೧೯೨೬—ತಾಯಿ ಸೋನುಬಾಯಿಯ ಮರಣ.

ಸಪ್ಟೆಂಬರ್ ೧೯೨೮—ಅಕ್ಕ ಪದ್ದಕ್ಕನ ಕಣ್ಮರೆ.

ಮೇ ೧೯೩೨—ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಉತ್ತೀರ್ಣ.

ಫೆಬ್ರುವರಿ ೧೯೩೩—ಸೌ. ಇಂದಿರಾ ಜೊತೆಗೆ ವಿವಾಹ.

ಅಕ್ಟೋಬರ್ ೧೯೩೫—'ಇಲೆಕ್ಶನ್' ಎಂಬ ಪ್ರಥಮ ನಾಟಕ ರಚನೆ, ರಂಗಪ್ರಯೋಗ ಪ್ರಕಟನೆಗಳೊಂದಿಗೆ ಸಾಹಿತ್ಯಕ್ಷೇತ್ರ ಪ್ರವೇಶ.

ಜೂನ್ ೧೯೩೬—ಬಿ.ಎ. ಆನರ್ಸ ಪದವೀಧರನಾದೆನು. ಕನ್ನಡ ಆನರ್ಸ ಪೇಪರುಗಳಲ್ಲಿ ಮುಂಬಯಿ ವಿಶ್ವವಿದ್ಯಾಲಯಕ್ಕೆ ಪ್ರಥಮ ವಿದ್ಯಾರಣ್ಯ ಪಾರಿತೋಷಕ.

೧೯೩೭—'ನಡುಮನೆಯಲ್ಲಿ' ಏಕಾಂಕ ಸಂಗ್ರಹ ಪ್ರಕಟನೆ. (ಏಳು—ನಗೆ ನಾಟಕಗಳು).

ಜೂನ್ ೧೯೩೮—ಕನ್ನಡ ಮತ್ತು ಸಂಸ್ಕೃತ ವಿಷಯಗಳಲ್ಲಿ ಎಂ.ಎ. ಪದವಿ.

೧೯೩೮—ಗದಗ ಸಮಿತಿ ಹಾಯಸ್ಕೂಲಿನಲ್ಲಿ ಶಿಕ್ಷಕನಾಗಿ ನೇಮಕ.

೧೯೪೦—ಹಿರಿಯ ಅತ್ತಿಗೆಯ ಮರಣ.

೧೯೪೦—'ವಸಂತ' ಮಾಸಪತ್ರಿಕೆಯ ಸಂಪಾದಕತ್ವ.

೧೯೪೦—ಕನ್ನಡ, ಇಂಗ್ಲೀಷ ವಿಷಯಗಳಲ್ಲಿ ಬಿ.ಟಿ. ಪದವಿ.

೧೯೪೦—'ಕನ್ನಡ ಸಾಹಿತ್ಯವಾಹಿನಿ' ಸಾಹಿತ್ಯ ಚರಿತ್ರೆಯ ಗ್ರಂಥ—ಪ್ರಥಮ ಮುದ್ರಣ.

ಜೂನ್ ೧೯೪೦—ಧಾರವಾಡ ಕೆ. ಇ. ಬೋರ್ಡ್ ಹೈಸ್ಕೂಲಿನಲ್ಲಿ ಶಿಕ್ಷಕವೃತ್ತಿ ಆರಂಭ.

೧೯೪೦—'ಬೆಳ್ಳಿಯ ಹಬ್ಬ' ಏಕಾಂಕ ಸಂಗ್ರಹ.(ಎಂಟು ನಗೆ ನಾಟಕಗಳು)

ಫೆಬ್ರುವರಿ ೧೯೪೩—ಕನ್ನಡ ಸಂಶೋಧನ ಸಂಸ್ಥೆಯಲ್ಲಿ ಸಹಾಯಕ ಸಂಶೋಧಕನೆಂದು ಕವಿ ಕುಮಾರವ್ಯಾಸನನ್ನು ಕುರಿತು ಮಹಾಪ್ರಬಂಧ ರಚನೆಗಾಗಿ ಅಭ್ಯಾಸ. ವಿದ್ಯಾರತ್ನ ಆರ್. ಎಸ್. ಪಂಚಮುಖಿ ಅವರ ಮಾರ್ಗದರ್ಶನ.

೧೯೪೪—'ಸಾವಿನ ಉಡಿಯಲ್ಲಿ' ಪ್ರಥಮ ಕಾದಂಬರಿ.

ಅಕ್ಟೋಬರ್ ೧೯೪೫—ಹೆಂಡತಿಯು ವಿಷಮಜ್ವರದಿಂದ ಕಣ್ಮರೆಯಾದುದು. ಅದೇ ಪಕ್ಷದಲ್ಲಿ ಅದೇ ಕಾಯಿಲೆಯಿಂದ ಮಾವಂದಿರ, ಚಿಕ್ಕಮಗಳ ಮರಣ.

೧೯೪೫—'ಮುಂಗಾಲ್ ಪುಟಿಗೆ' ಪ್ರಥಮ (ಹದಿನೆಂಟು) ಹರಟೆಗಳ ಸಂಗ್ರಹ.

ಮಾರ್ಚ್ ೧೯೪೬—ಮುಂಬಯಿ ಸರಕಾರದ 'ಲೋಕರಾಜ್ಯ' ಎಂಬ ವಾರ್ತಾ ಪತ್ರಿಕೆಯ ಕನ್ನಡ ಸಹಾಯಕ ಸಂಪಾದಕನಾಗಿ ನೇಮಕ. (ವಿಧುರನಾಗಿ ಮುಂಬಯಿಯಲ್ಲಿ ಜೀವನಯಾತ್ರೆ ಮೊದಲಾದುದು.)

ಜೂನ್ ೧೯೪೬—ದ್ವಿತೀಯ ವಿವಾಹ ಸೌ. ನಾಗವೇಣಿಯೊಂದಿಗೆ.

ಅಗಸ್ಟ್ ೧೯೪೬—ಮುಂಬಯಿ ಆಲ್ ಇಂಡಿಯಾ ರೇಡಿಯೋದಲ್ಲಿ ಸ್ಟಾಫ್ ಆರ್ಟಿಸ್ಟ್ ಎಂದು ಹೊಸ ನೌಕರಿಗೆ ಆರಂಭ.

೧೯೪೭—'ಎನ್ನೆ ಏಕಾಂಕಗಳು' (ಹದಿನಾರು ಏಕಾಂಕಗಳ ಸಂಗ್ರಹ)

೧೯೪೮—'ಲೋಕೂರ ನಾರಾಯಣರಾಯರು'– ಜೀವನಚರಿತ್ರ.

೧೯೪೮—'ಅಧಃಪಾತ'– ರೇಡಿಯೊ ರೂಪಕ.

೧೯೫೦—ಧಾರವಾಡ ಆಕಾಶವಾಣಿ ಕೇಂದ್ರಕ್ಕೆ ವರ್ಗಾವಣೆ. ಅಲ್ಲಿ 'ಪ್ರಸಾರ ಸಹಾಯಕ'ನೆಂದು ರೆಗ್ಯೂಲರ್ ಸರಕಾರೀ ಸೇವೆ ಆರಂಭ.

೧೯೫೧—'ಎರಡನೆಯ ಸಂಬಂಧ'– ಕಾದಂಬರಿ.

೧೯೫೨—'ತ್ರಿಶೂಲಿಗಳು' (ಹರಟೆಗಳ ಸಂಗ್ರಹ– ಇತರರೊಡನೆ)

೧೯೫೩—'ಕಾವ್ಯದ ಕಾರಖಾನೆ'– ಏಕಾಂಕಸಂಗ್ರಹ.

೧೯೫೫—'ಬುಶ್‌ಕೋಟು'– ಏಕಾಂಕಸಂಗ್ರಹ.

೧೯೫೫—'ಮಂದಿರ ಪ್ರವೇಶ'– (ಕೇಂದ್ರ ಮತ್ತು ರಾಜ್ಯ ಸರಕಾರಗಳಿಂದ ಪುರಸ್ಕೃತ ದೊಡ್ಡ ನಾಟಕ).

೧೯೫೬—'ವಿದ್ಯಾ' (ದೊಡ್ಡ ನಾಟಕ).

೧೯೫೭—ಬೆಂಗಳೂರು ಆಕಾಶವಾಣಿಗೆ ವರ್ಗಾವಣೆ. ಅಲ್ಲಿ ಪ್ರೋಗ್ರಾಂ ಎಗ್ಝಿಕ್ಯೂಟಿವ್ ಎಂದು ರೇಡಿಯೊವೃತ್ತಿಯ ಏಕೈಕ ಪದೋನ್ನತಿ.

೧೯೫೭—'ವೈನಿ' ಕಾದಂಬರಿ.

೧೯೫೮—'ಕಲೋಪಜೀವಿ' ಕಾದಂಬರಿ.

೧೯೬೧—'ಗೌರಿಶಂಕರ' ಕಾದಂಬರಿ.

ಆಗಸ್ಟ್ ೧೯೬೫—ಆಕಾಶವಾಣಿ ಬೆಂಗಳೂರಿನಿಂದ ಧಾರವಾಡಕ್ಕೆ ವರ್ಗಾವಣೆ.

೧೯೬೬—'ಠಕ್ಕ ಠಕ್ಕಿ'- ಏಕಾಂಕ ಸಂಗ್ರಹ.

೧೯೬೬—'ಹಸ್ತಾಂತರ' ದೊಡ್ಡ ನಾಟಕ.

೧೯೬೬—'ಕುಮಾರ ವ್ಯಾಸ' ಮತ್ತು 'ಕೃಷ್ಣ ಕಥೆ' ಪ್ರವಾಸ ನಿರೂಪಣೆಯ ಮೂಲಕ ಕವಿ-ಕಾವ್ಯ ಪರಿಚಯ. ಬೆಂಗಳೂರು ಸಹಕಾರೀ ಪ್ರಕಟನೆ.

ಜೂನ್ ೧೯೬೬—ಹಿರಿಯ ಮಗ ಪ್ರಹ್ಲಾದನ ವಿವಾಹ- ಹಿರಿಯ ಸೊಸೆ ಕಮಲಾನ ಆಗಮನ.

೧೯೬೬—'ಎನ್ಕೆ ಬರೆಹಗಳು' ಹರಟೆಗಳ ಸಂಗ್ರಹ.

೧೯೬೬—'ಗರೂಡ ಸದಾಶಿವರಾಯರು'- ಜೀವನ ಪರಿಚಯ- ರಾಜ್ಯ ಅಕಾದೆಮಿ ಪ್ರಕಟನೆ.

ಮಾರ್ಚ್ ೨೦, ೧೯೬೭—ಎರಡನೆಯ ಹೆಂಡತಿ ಸೌ. ನಾಗವೇಣಿಯ ನಿಧನ.

೧೯೬೮—'ಕವಿಹೃದಯ ಕಣ್ತೆರೆದಿತ್ತು' ಎಂಬ ರೇಡಿಯೊ ನಾಟಕ ರಾಷ್ಟ್ರೀಯ ನಾಟಕವಾಗಿ ಭಾರತೀಯ ಎಲ್ಲ ಭಾಷೆಗಳಲ್ಲೂ ಪ್ರಸಾರಿತ.

೧೯೬೮—'ವಾಮನರಾವ್ ಮಾಸ್ತರ್' ಬಣ್ಣದ ಬದುಕಿನ ಧಾರಾವಾಹಿ ನಿರೂಪಣೆ (ಸುಧಾ)

೧೯೬೯—'ಎನ್ಕೆ ಏಕಾಂಕ ಮಾಲಿಕೆ' (ಆಯ್ಕೆಯ ಪ್ರಾತಿನಿಧಿಕ ೨೫ ಏಕಾಂಕಗಳ ಸಂಗ್ರಹ.)

೧೯೭೦—ಕುಮಾರವ್ಯಾಸ ಭಾರತ- ಗದ್ಯಸಾರ; ಮತ್ತು ಕುಮಾರ ವ್ಯಾಸಕೋಶ.

೧೯೭೦—ಕನ್ನಡ ಸಾಹಿತ್ಯ ಪರಿಷತ್‌ನಿಂದ ಹಾಸ್ಯಸಾಹಿತಿ ಎಂದು ಪುರಸ್ಕಾರ.

೧೯೭೧—ಆಕಾಶವಾಣಿಯಿಂದ ನಿವೃತ್ತಿ.

೧೯೭೧—'ಕರ್ಮವೀರ' ವಾರಪತ್ರಿಕೆಗೆ ಸಲಹಾಕಾರ ಮತ್ತು ಅಂಕಣ ಲೇಖಕ ಎಂದು ಕಾರ್ಯಾರಂಭ.

೧೯೭೧—'ಮೂರು ತಲೆಮಾರು' (ಆಕಾಶವಾಣಿಯಲ್ಲಿ ಧಾರಾವಾಹಿಯಾಗಿ ಪ್ರಸಾರಿತವಾಗಿ, 'ಕರ್ಮವೀರ'ದಲ್ಲಿ ಧಾರಾವಾಹಿ ಪ್ರಕಟನೆ.)

೧೯೭೨—'ಬಂಕಿಮಚಂದ್ರ' (ಜೀವನ ಚಿತ್ರ) ರಾಷ್ಟ್ರೋತ್ಥಾನ ಪ್ರಕಟನೆ.

ಡಿಸೆಂಬರ ೧೯೭೩—ಜಿ. ಮುರಲಿ ವಿವಾಹ- ಸೌ. ವಿಮಲಾನೊಂದಿಗೆ.

೧೯೭೩—'ಬಂಕಿಮಚಂದ್ರ' (ಇಂಗ್ಲೀಷ ಅನುವಾದ– ರಾಷ್ಟ್ರೋತ್ಥಾನ ಪ್ರಕಟನೆ.)

೧೯೭೪—'ಬಾನುಲಿ ಬರೆವಣಿಗೆ'– ಕ. ವಿ. ವಿ. ಪ್ರಸಾರಾಂಗ ಭಾಷಣ— ಪ್ರಕಟನೆ.

೧೯೭೪—ಎರಡನೆಯ ಅತ್ತಿಗೆಯ ಅಗಲಿಕೆ.

೧೯೭೫—'ಕಾಲಾಯ ತಸ್ಮೈನಮಃ'– ಎರಡು ಏಕಾಂಕಗಳು.

೧೯೩೫—'ಗಾನರತ್ನ ಗುಳೇದಗುಡ್ಡ ಗಂಗೂಬಾಯಿ' ರಂಗಕಲಾವಿದೆಯ ಜೀವನ ಪರಿಚಯ.

೧೯೭೫—'ಭಾಷಣಕಲೆ'.

೧೯೭೬—'ಖಾನ್‌ಸಾಹೇಬ್ ಅಬ್ದುಲ್‌ಕರೀಮ್‌ಖಾನ್' (ಸಂಗೀತ ಕಲಾ ವಿದರ ಪರಿಚಯ)

೧೯೭೬—'ನಾ. ದ. ಸಂವಾದ' (ಬೇಂದ್ರೆ ಜೊತೆಗೆ).

ಮಾರ್ಚ ೧೯೭೬—'ದಲಿತ ದುಂದುಭಿ' ಎಂಬ ರೂಪಕಕ್ಕೆ ಅಖಿಲ ಭಾರತ ಪ್ರಶಸ್ತಿ. ಆಕಾಶವಾಣಿಯಲ್ಲಿ ರಾಷ್ಟ್ರೀಯ ರೂಪಕವಾಗಿ ಪ್ರಸಾರಿತ.

ಮಾರ್ಚ ೧೯೭೬—ಅಣ್ಣ, ಗುಂಡಣ್ಣನ ಕಣ್ಮರೆ.

೧೯೭೬—'ಪಲ್ಲವಿ' ರಾಷ್ಟ್ರೀಯ ಬಾನುಲಿ ನಾಟಕ ಎಲ್ಲ ಭಾಷೆಗಳಲ್ಲಿ ಪ್ರಸಾರಿತ.

೧೯೭೬—'ಮೋಡಕಾ ಬಾಜಾರ' (ಹರಟೆಗಳ ಸಂಗ್ರಹ)

೧೯೭೭—ಚಿ. ರವಿ ಮತ್ತು ಸೌ. ಮಾಯಾ ಅವರ ವಿವಾಹ.

೧೯೭೮—'ಪ್ರಾಣ ತುಂಬಿದ ಪಾತ್ರ' (ಮೂರು ರೇಡಿಯೊ ಏಕಾಂಕಗಳು)

೧೯೭೮—'ಗದುಗಿನ ಗಂಡು ಕವಿ– ಕುಮಾರವ್ಯಾಸ' (ವಿಮರ್ಶಾ ಗ್ರಂಥ).

೧೯೭೮—'ಲಲಿತಾ' ಕಾದಂಬರಿ.

೧೯೭೮ – 'ಕೃಷ್ಣಾನದಿ'.

೧೯೭೯—ಹುಬ್ಬಳ್ಳಿಯ ಕುಮಾರವ್ಯಾಸ ಸೇವಾ ಸಂಘದಿಂದ ಸತ್ಕಾರ.

೧೯೮೦—'ಎನ್ನೆ ಏಕಪಾತ್ರ ದ್ವಿಪಾತ್ರಾಭಿನಯಗಳು.'

೧೩ ೧೯೮೧ ಸಪ್ಟೆಂಬರ್—ಹಿರಿಯ ಅಣ್ಣ (ಅಜಣ್ಣ)ನ ಕಣ್ಮರೆ.

೧೯೮೧—'ಭಾರತೀಯ ಧರ್ಮಪರಂಪರೆ ಮತ್ತು ಭಗವಾನ್ ಶ್ರೀ ಅರವಿಂದರ' ದರ್ಶನ.

೧೯೮೨—'ಕನ್ನಡ ವ್ಯಾಸ ಭಾರತ'.

೧೯೮೨—ರಾಜ್ಯ ಅಕಾದೆಮಿ ಪ್ರಶಸ್ತಿ.

೧೯೮೨—'ಸಾವಿರದವರಕವಿ ಬೇಂದ್ರೆ'.

೧೯೮೩—'ನಾನಿಯ ನೆನಹುಗಳು' ಸಂಯುಕ್ತ ಕರ್ನಾಟಕ ಸಾಪ್ತಾಹಿಕ ಸೌರಭದಲ್ಲಿ ಧಾರಾವಾಹಿ ಪ್ರಕಟಿತ. ಹಾಗೂ ಪುಸ್ತಕ ರೂಪದಲ್ಲಿ.

# ಪ್ರಕಟಿತ ಎನ್ನ ಬರೆಹ

೧. **ಕಾದಂಬರಿಗಳು**

೧. ಸಾವಿನ ಉಡಿಯಲ್ಲಿ (೧೯೪೪)
೨. ಎರಡನೆಯ ಸಂಬಂಧ (೧೯೫೧)
೩. ವೈನಿ (೧೯೫೮)
೪. ಕಲೋಪಜೀವಿ (೧೯೫೮)
೫. ಗೌರೀಶಂಕರ (೧೯೬೪)
೬. ಮೂರು ತಲೆಮಾರು ('ಕರ್ಮವೀರ'ದಲ್ಲಿ ಧಾರವಾಹಿಯಾಗಿ ಪ್ರಕಟನೆ) ೧೯೭೨.
೭. ಲಲಿತಾ (೧೯೭೮)

೨. **ಏಕಾಂಕ ಸಂಗ್ರಹಗಳು**

೧. ಇಲೆಕ್ಶನ್ (೧೯೩೫)
೨. ನಡುಮನೆಯಲ್ಲಿ (೧೯೩೭)
೩. ಬೆಳ್ಳಿಯ ಹಬ್ಬ (೧೯೪೦)
೪. ಎನ್ನ ಏಕಾಂಕಗಳು (೧೯೪೭)
೫. ಅಧಃಪಾತ (೧೯೪೯)
೬. ಕಾವ್ಯದ ಕಾರಖಾನೆ (೧೯೫೩)
೭. ಬುಶ್‌ಕೋಟು (೧೯೫೫)
೮. ತಕ್ಕತಕ್ಕಿ ಮತ್ತು ಇತರ ನಗೆನಾಟಕಗಳು (೧೯೬೬)
೯. ಏಕಾಂಕ ಮಾಲಿಕೆ (೧೯೬೯)
೧೦. ಕಾಲಾಯ ತಸ್ಮೈ ನಮಃ ಮತ್ತು ಹಿಪ್ಪಿ ನಾಟಿಜಂ (೧೯೭೩)
೧೧. ಪ್ರಾಣ ತುಂಬಿದ ಪಾತ್ರ (೧೯೭೮)
೧೨. ಎನ್ನ ಏಕಪಾತ್ರ ದ್ವಿಪಾತ್ರಾಭಿನಯಗಳು (೧೯೮೧)

೩. **ದೊಡ್ಡ ನಾಟಕಗಳು**

೧. ಮಂದಿರ ಪ್ರವೇಶ (ಕೇಂದ್ರ ಮತ್ತು ರಾಜ್ಯ ಸರಕಾರಗಳಿಂದ ಪುರಸ್ಕೃತ) (೧೯೫೫).
೨. ವಿದ್ಯಾ (೧೯೫೬)
೩. ಪಸ್ತಾಂತರ ಇಲ್ಲವೆ 'ನಾಳೆ ನಿನ್ನದು' (೧೯೬೯)

೪. **ಹರಟೆ ಸಂಗ್ರಹಗಳು**

೧. ಮುಂಗಾಲ್‌ಪುಟಿಗೆ (೧೯೪೪)

೨. ತ್ರಿಶೂಲಿಗಳು (ಅನ್ಯರೊಡನೆ) ೧೯೫೨

೩. ಎನ್ಕೆ ಬರೆಹಗಳು (೧೯೬೬)

೪. ಮೋಡಕಾ ಬಾಜಾರ (೧೯೭೩)




೫. **ಸಾಹಿತ್ಯ–ಕಾವ್ಯ ವಿಮರ್ಶೆ**

೧. ಕನ್ನಡ ಸಾಹಿತ್ಯವಾಹಿನಿ (೧೯೪೦)

೨. ಕುಮಾರವ್ಯಾಸ ಮತ್ತು ಕೃಷ್ಣಕಥೆ (೧೯೬೮)

೩. ಕುಮಾರವ್ಯಾಸ ಭಾರತ (ಗದ್ಯಸಾರ) ೧೯೭೦

೪. ಕುಮಾರವ್ಯಾಸ ನಿಘಂಟು (೧೯೭೧)

೫. ಗದುಗಿನ ಗಂಡುಕವಿ ಕುಮಾರವ್ಯಾಸ (೧೯೭೮)

೬. ಕನ್ನಡ ವ್ಯಾಸಭಾರತ (ಕುಮಾರವ್ಯಾಸ ಮತ್ತು ತಿಮ್ಮಣ್ಣರ ಗದ್ಯಸಾರ) (೧೯೮೨).

೬. **ಆತ್ಮಕಥೆ, ಜೀವನ ಪರಿಚಯು ಮತ್ತು ಇತರ**

೧. ಲೋಕೂರ ನಾರಾಯಣರಾಯರು (೧೯೪೮)

೨. ಗರೂಡ ಸದಾಶಿವರಾಯರು (೧೯೬೬)

೩. ವಾಮನರಾವ್ ಮಾಸ್ತರ್ ('ಸುಧಾ'ದಲ್ಲಿ ಧಾರಾವಾಹಿ) (೧೯೬೮)

೪. ಬಂಕಿಮಚಂದ್ರ (೧೯೭೩)

೫. ಗಾನರತ್ನ ಗುಳೇದಗುಡ್ಡ ಗಂಗೂಬಾಯಿ (೧೯೭೫)

೬. ಸಂಗೀತರತ್ನ ಖಾನ್‌ಸಾಹೇಬ್ ಅಬ್ದುಲ್ ಕರೀಮ್‌ಖಾನ್ (೧೯೭೫)

೭. ಸಂಗೀತಪುಂಗವ ಸವಾಯಿ ಗಂಧರ್ವ (೧೯೭೬)

೮. ರಾಮರಾವ್ ಹುಕ್ಕೇರಿಕರ ಮಾಸ್ತರ್ (೧೯೭೯)

೯. ಬಾನುಲಿ ಬರೆವಣಿಗೆ (೧೯೭೪)

೧೦. ಕನ್ನಡ ಭಾಷಣಕಲೆ (೧೯೭೬)

೧೧. ಬೇಂದ್ರೆ ನಾ. ದ. ಸಂವಾದ (೧೯೭೬)

೧೨. ಕೃಷ್ಣಾನದಿ (೧೯೮೨)

೧೩. ಭಾರತೀಯ ಧರ್ಮಪರಂಪರೆ ಮತ್ತು ಭಗವಾನ್ ಶ್ರೀ ಅರವಿಂದರ ದರ್ಶನ (೧೯೮೧).

೧೪. ಸಾವಿರದವರಕವಿ ಬೇಂದ್ರೆ (೧೯೮೨)

೧೫. ನಾನಿಯು ನೆನಹುಗಳು (೧೯೮೩)

೭. **ಇಂಗ್ಲಿಷಿನಲ್ಲಿ**

೧. ಬಂಕಿಮಚಂದ್ರ (೧೯೭೫)

# ಸಾವಿನ ಉಡಿಯಲ್ಲಿ

**ಮಾಧವ ನಾ. ಮಹಿಷಿ**

೧೯೪೪ರಲ್ಲಿ ಮೊದಲ ಬಾರಿ ಪ್ರಕಟವಾದ ಎನ್ಕೆಯವರ 'ಸಾವಿನ ಉಡಿಯಲ್ಲಿ' ಅವರ ಚೊಚ್ಚಿಲು ಕಾದಂಬರಿಯೂ ಹೌದು. ಅನಂತರದ ೩-೪ ವರ್ಷಗಳಲ್ಲೇ ನಾನಿನ್ನೂ ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗಲೇ ಇದನ್ನೋದಿ ಸವಿದಾಗ ಎನ್ಕೆ ವ್ಯಕ್ತಿತ್ವದ ಮಹತ್ತರ ಮುಖವೊಂದರ ಪರಿಚಯ ನನಗಾಯಿತು. ಅಲ್ಲಿವರೆಗೆ ನಾನು ತಿಳಿದಿದ್ದ ಎನ್ಕೆ ಏಕಾಂಕ ನಾಟಕಕಾರ ಮತ್ತು 'ಆ ಧರ್ಮಸಾಲೆ'ಯಂತಹ ಲಘುಬರಹಗಳನ್ನು ನೀಡಬಲ್ಲ ಹರಟೆಯ ಮಲ್ಲ ಎಂದು ಮಾತ್ರ. ಧಾರವಾಡದ ಮಾಳಮಡ್ಡಿಯಲ್ಲಿ ಸ್ಟೇಶನ ರೋಡಿನಲ್ಲಿದ್ದ ಆ ಧರ್ಮಸಾಲೆ ನಾವು ನಿತ್ಯವೂ ಹತ್ತು ಸಲ ನೋಡುತ್ತಿದ್ದ ತಾಣ. ಆದರೆ ನಮಗೆಲ್ಲ ತೀರ ಕ್ಷುಲ್ಲಕವೆನಿಸುತ್ತಿದ್ದ ಆ ಧರ್ಮಸಾಲೆಯಲ್ಲೂ ಎನ್ಕೆ ಏನೆಲ್ಲವನ್ನೂ ಕಂಡರೆಂದು ಆಶ್ಚರ್ಯಪಡುತ್ತಿದ್ದಂತೆಯೇ ನಮ್ಮ ಗುರುಗಳು 'ರವಿ ಕಾಣದ್ದನ್ನು ಕವಿ ಕಂಡ' ಎಂಬುದಕ್ಕೆ ಇದನ್ನೇ ಉದಾಹರಣೆಯೆಂದು ಹೇಳಿದರು; ಹೌದೆಂದು ತಲೆದೂಗಿದೆವು. ('ಆ ಧರ್ಮಸಾಲೆ' ನಮ್ಮ ಮ್ಯಾಟ್ರಿಕ್ ಕನ್ನಡ ಪಠ್ಯದಲ್ಲಿ ಒಂದು ಪಾಠವಾಗಿತ್ತು.) ಆದರೆ 'ಸಾವಿನ ಉಡಿಯಲ್ಲಿ' ಎನ್ಕೆ ಬಗೆಗಿನ ನನ್ನ ಕಲ್ಪನೆಯನ್ನು ಒಮ್ಮೆಲೆ ಬದಲಾಯಿಸಿ ಬಿಟ್ಟಿತು. ಈಗ ಎನ್ಕೆ ಜೀವನವನ್ನು ಲಘುವಾಗಿ ಕಾಣುವ ಹಾಸ್ಯ ಲೇಖಕ ಮಾತ್ರವಾಗಿ ಉಳಿಯಲಿಲ್ಲ. ಜೀವನದ ಗಂಭೀರ ಸಮಸ್ಯೆಗಳನ್ನು ಗಂಭೀರವಾಗಿ ನೋಡಬಲ್ಲವರಾಗಿ ನನ್ನ ಲೆಕ್ಕದಲ್ಲಿ ಅವರ ತೂಕ ಒಮ್ಮೆಲೆ ಏರಿತು. ಆ ಕಾಲದಲ್ಲಿ ನಾನು ಓದಿದ್ದ ಹತ್ತಾರು ಕನ್ನಡ ಕಾದಂಬರಿಗಳಲ್ಲಿ ನನಗೆ ಬಹುವಾಗಿ ಹಿಡಿಸಿದ್ದು 'ಸಾವಿನ ಉಡಿಯಲ್ಲಿ'.

ಅಲ್ಲಿಂದೀಚೆಗೆ ಕನ್ನಡ ಕಾದಂಬರೀ ಕ್ಷೇತ್ರ ಹುಲುಸಾದ ಬೆಳೆಯನ್ನು ಕಂಡಿದೆ. ಎನ್ಕೆ ಕೂಡ ಅದಕ್ಕೆ ತಮ್ಮ ಪಾಲಿನ ಕಾಣಿಕೆಯನ್ನು ಸಲ್ಲಿಸಿದ್ದಾರೆ. ೩೫ ವರ್ಷಗಳ ನಂತರ ಇಂದು 'ಸಾವಿನ ಉಡಿಯಲ್ಲಿ'ಯನ್ನು ಮತ್ತೆ ಓದಿದಾಗ ಅಂದಿನ ಅನುಭವ ಪೂರ್ತಿ ಮರುಕಳಿಸಲಿಲ್ಲವೆನ್ನುವದು ತೀರ ಸ್ವಾಭಾವಿಕ. ಆದರೆ ಅಂದಿನಂತೆಯೇ ಇಂದು ಕೂಡ ಅದನ್ನು ಕೈಗೆತ್ತಿಕೊಂಡನಂತರ ಪೂರ್ತಿ ಓದಿಯೇ ಕೆಳಗಿಟ್ಟೆ. ಅಂದು ಗೋಚರಿಸಿರದಿದ್ದ ಕೆಲವು ಅಂಶಗಳು ಇಂದು ತಟ್ಟನೆ ವೇದ್ಯವಾಗುತ್ತವೆ. ತಮ್ಮ ಪ್ರಪ್ರಥಮ ಕಾದಂಬರಿಯಾದ ಇದರಲ್ಲಿ ಎನ್ಕೆ ಕಥೆಯ ಕಾಲ, ಪರಿಸರ, ಪಾತ್ರ ಇವುಗಳನ್ನೆಲ್ಲ ತುಂಬ ಅಚ್ಚುಕಟ್ಟಾಗಿ ಗುರುತಿಸಿಕೊಳ್ಳುತ್ತಾರೆ; ಅದೆಲ್ಲಕ್ಕಿಂತ ಹೆಚ್ಚಾಗಿ

ತಮ್ಮ ಅನುಭವದ ಎಲ್ಲೆಯನ್ನು ಎಲ್ಲಿಯೂ ಮೀರುವದಿಲ್ಲ. ಆದರಿಂದಾಗಿ, ಓದುಗನಿಗೆ ಕಥೆಯ ಪರಿಮಿತಿಯನ್ನು ಗುರುತಿಸಿಕೊಂಡು ತನ್ನ ನಿರೀಕ್ಷೆಯ ಮಟ್ಟವನ್ನು ಹಿಡಿತದಲ್ಲಿಟ್ಟುಕೊಳ್ಳಲು ಸಾಧ್ಯವಾಗುತ್ತದೆ. ಅಲ್ಲದೆ ಕಾದಂಬರಿಕಾರ ಎಲ್ಲೂ ಆದರ್ಶದ ಗಾಳಿಗುದುರೆಯನ್ನು ಏರುವದಿಲ್ಲವಾದ್ದರಿಂದ ಅವನ ಕೆಲಸ ಇನ್ನೂ ಹಗುರಾಗುತ್ತದೆ.

'ಸಾವಿನ ಉಡಿಯಲ್ಲಿ' ಈ ಶತಮಾನದ ಎರಡನೆಯ ದಶಕದ ಕೊನೆಕೊನೆಯಲ್ಲಿ ಪ್ರಾರಂಭವಾಗಿ ಮುಂದಿನ ಹತ್ತಾರು ವರ್ಷಗಳಲ್ಲಿ ಮುಗಿದು ಬಿಡುತ್ತದೆ. ಅಂದಿನ ಮುಂಬಯಿ ಕರ್ನಾಟಕದ, ವಿಶೇಷತಃ ಧಾರವಾಡ-ಹುಬ್ಬಳ್ಳಿ-ಗದಗುಗಳ ಪರಿಸರದಲ್ಲೇ ಕಥೆ ನಡೆಯುತ್ತದೆ. ಇಂದಿನ ವ್ಯಾಪಕ ಅರ್ಥದಲ್ಲಿ ಇದು ಸಾಮಾಜಿಕ ಕಾದಂಬರಿಯೆನಿಸಲಾರದಾದರೂ ಇದು ಯಶಸ್ವಿ ಕೌಟುಂಬಿಕ ಕಾದಂಬರಿಯೆನ್ನುವುದು ನಿಃಸಂದೇಹ. ಅಂದಿನ ಸಾಮಾನ್ಯ ಮಧ್ಯಮ ವರ್ಗದ ಬ್ರಾಹ್ಮಣರಲ್ಲಿ ನಡೆದು ಹೋಗಿರಬಹುದಾದ ಕಥೆಯಿದು.

ಕಥಾನಾಯಕ ವೆಂಕಣ್ಣ ಕೋರ್ಟಿನಲ್ಲಿ ಕಾರಕೂನ. ಪುರುಷ ಸೌಂದರ್ಯವೇ ಮೈದಳೆದಂತಿದ್ದ ಆತ ರಸಿಕ. ಪದ್ದಕ್ಕ ಅವನಿಗೆ ಹೇಳಿಮಾಡಿಸಿದಂತಹ ಹೆಣ್ಣು. ಚೆಲುವಿನಲ್ಲಿ ಅವನನ್ನು ಸರಿಗಟ್ಟುವಂತಿಲ್ಲದಿದ್ದರೂ ಗೃಹಿಣಿಯಾಗಿ ಅಪರೂಪ ಶಬ್ದಕ್ಕೆ ಅನ್ವರ್ಥಕವಾಗಿದ್ದಳೆಂಥಾಕೆ; ಉತ್ಸಾಹವೇ ಹೆಪ್ಪುಗಟ್ಟಿ ಮೈದಳೆದಳೋ ಎನಿಸುವಂತಹ ಜೀವಂತ ಬುಗ್ಗೆ. ಈ ದಂಪತಿಯ ಒಂದು ತಪದ ತಪಶ್ಚರ್ಯದ ಫಲವೆಂಬಂತಿದ್ದ ಮಗು ರತ್ನಾ. ಅವಳ ಮೊದಲ ವರ್ಷದ ಹುಟ್ಟುಹಬ್ಬದೊಂದಿಗೆ ಈ ನಾಟಕದ ಅಂಕ ಪರದೆ ಎತ್ತುತ್ತದೆ. ಆದರೆ ಕಾದಂಬರಿಯ ಹೆಸರೇ ಸೂಚಿಸುವ ಕೇಂದ್ರ ಪ್ರಜ್ಞೆ 'ಸಾವು' ಪ್ರಾರಂಭದ ಪುಟಗಳಲ್ಲೇ ಹಿನ್ನೆಲೆ ಸಂಗೀತ ಬಾರಿಸುತ್ತದೆ. ಮಗಳ ಹುಟ್ಟುಹಬ್ಬದ ಸಂಭ್ರಮದಲ್ಲೇ ಪದ್ದಕ್ಕನ ಕಣ್ಣುಗಳು ಹನಿಗೂಡಿ 'ಅವ್ವ ನೋಡಿದ್ದರೆ!' ಎಂಬ ಭಾವನೆ ಬಲವತ್ತರವಾಗಿಬಿಡುತ್ತದೆ. ಅವಳ ತಾಯಿ ತಂದೆ ಇಬ್ಬರೂ ಮಗಳ ಸಂಸಾರದ ಬಳ್ಳಿ ಹೂಬಿಡಬೇಕೆಂಬ ಆಸೆಯನ್ನು ಕಟ್ಟಿಕೊಂಡೇ ಕಣ್ಣುಮುಚ್ಚುತ್ತಾರೆ. ಮಲತಾಯಿಯ ಕಿರುಕಳ ತಾಳಲಾರದೆ ವೆಂಕಣ್ಣ ಬೇರೆ ಮನೆ ಮಾಡಿದ್ದು ಪದ್ದಕ್ಕನ ಅವ ಪ್ರಜ್ಞೆಯಲ್ಲಿ ಅಡಗಿದ್ದು ಅನಿರೀಕ್ಷಿತ ಸಂದರ್ಭದಲ್ಲಿ ವಿಚಿತ್ರ ರೀತಿಯಲ್ಲಿ ಪುಟಿದೇಳುತ್ತದೆ. ಗಂಡನ ತೆಕ್ಕೆಯಲ್ಲಿ ಶೃಂಗಾರದ ಉತ್ತುಂಗ ಶಿಖರದಲ್ಲಿದ್ದಾಗ ತನ್ನ ಮುದ್ದು ಮಗಳಿಗೆ ಮಲತಾಯಿ ಬಂದ ಕನಸು ಕಂಡು ನಡುಗುತ್ತಾಳೆ. ಮುಂದೆ ತಮ್ಮ ಶಾಮನ ಮದುವೆ ಮಾಡಿ ಅವನ ತುಂಬು ಸಂಸಾರವನ್ನು ಕಣ್ತುಂಬ ನೋಡಿ ತಣಿಯಬೇಕೆಂಬ ಆಸೆಯಿಂದಿರುವಂತೆಯೆ ಅಂದು ಭಯಾನಕವೆನಿಸಿದ್ದ ವಿಷಮಜ್ವರ ಪದ್ದಕ್ಕನ ಬಲಿ ತೆಗೆದು

ಕೊಂಡುಬಿಡುತ್ತದೆ. ಇಲ್ಲಿ ಪದ್ದಕ್ಕನ ಜೀವನದ ಗಡಿಯಾರದ ಮುಳ್ಳು ಗಿರ್ರನೆ ತಿರುಗಿ ಒಂದು ವರ್ತುಲವನ್ನು ಪೂರ್ಣಗೊಳಿಸುತ್ತದೆ. ರತ್ನಾ ಅನಾಥೆಯಾಗು ತ್ತಾಳೆ; ವೆಂಕಣ್ಣನಿಗೆ ಸಂಸಾರದಲ್ಲಿ ವಿರಕ್ತಿಯುಂಟಾಗಿಬಿಡುತ್ತದೆ. ಆದರೆ ವಯಸ್ಸು ವೈರಾಗ್ಯದ ಮುಸುಕು ತೆಳುಪೊರೆ ಮಾತ್ರವೆಂಬುದಾಗಿ ಸಾಬೀತು ಪಡಿಸುವಂತೆ ಹೆಡೆಯೆತ್ತಿ ಕುಣಿಯುತ್ತದೆ. ಪದ್ದಕ್ಕನ ನಿಸ್ಸೀಮ ಪ್ರೇಮ ವೆಂಕಣ್ಣನ ದೈಹಿಕ ಅಗತ್ಯವನ್ನು ತಡೆಯಲು ಸಮರ್ಥವಾಗುವದಿಲ್ಲ. ಅವನ ಜೀವನದಲ್ಲಿ ಆಕಸ್ಮಿಕ ವೆಂಬಂತೆ ತೂರಿಕೊಂಡುಬಂದ ಕೇಸರಿ ವೆಂಕಣ್ಣನ ಪ್ರೇಮಜೀವನಕ್ಕೆ ಹೊಸ ಆಯಾಮವನ್ನೇ ಸೇರಿಸುತ್ತಾಳೆ. ವೇಶ್ಯೆಯ ಮಗಳಾಗಿ ಹುಟ್ಟಿದ ಕೇಸರಿ ವೆಂಕಣ್ಣನ ಬಾಳನ್ನು ಪ್ರವೇಶಿಸಿ, ಅವನಿಗೆ ಆನಂದದ ಸ್ತರಗಳನ್ನು ಎಷ್ಟೆಷ್ಟು ಎತ್ತರಕ್ಕೆ ಕೊಂಡೊಯ್ಯಬಹುದೆಂದು ತೆರೆತೆರೆದು ತೋರುತ್ತಾಳೆ. ಸ್ನೇಹಿತನ ಋಣಭಾರದ ಒತ್ತಡಕ್ಕೆ ಮಣಿದು ವೆಂಕಣ್ಣ ಮರುಮದುವೆಯಾಗಬೇಕಾಗಿ ಬಂದಾಗ ಕೇಸರಿ ತುಂಬು ಮನಸ್ಸಿನಿಂದ ಅದನ್ನು ಒಪ್ಪುತ್ತಾಳೆ. ವೆಂಕಣ್ಣನ ಹೊಸ ಸಂಸಾರ ಅವನ ಅಕ್ಕರೆಯ ಮಗಳಾದ ರತ್ನಾಳಿಗೆ ಮಾತ್ರ ಮುಳ್ಳಿನ ಹಾಸಿಗೆಯಾಗಿ ಪರಿಣಮಿ ಸುತ್ತದೆ. ತಾಯಿ ಅಂತಃಕರಣವನ್ನು ಎಂದೋ ಕಳೆದುಕೊಂಡಿದ್ದ ಆಕೆ ಸೋದರ ಮಾವ ಶಾಮ ಮತ್ತು ಮಾಮಿ ಕುಸುಮೆಯರ ಕರುಳಬಳ್ಳಿಯಂತೆಯೇ ಬೆಳೆಯು ತ್ತಿದ್ದುದು ಹೊಸ ತಾಯಿ ರುಕ್ಮಿಣಿಗೆ ಹಿಡಿಸದಾಗುತ್ತದೆ. ವೆಂಕಣ್ಣನ ನಿಷ್ಠೆ ಈಗ ಮೂರು ಟಿಸಿಲುಗಳಾಗಿ ಒಡೆದು ತತ್ತರಿಸುತ್ತದೆ. ಅವನಿಗೆ ಕೇಸರಿಯ ನಿಸ್ಸೀಮ ಪ್ರೇಮವೂ ಬೇಕು, ಕರುಳ ಬಳ್ಳಿಯಾದ ರತ್ನೆಯೂ ಬೇಕು, ಹೊಸ ಹರೆಯದ ಹೆಂಡತಿ ಕುಲದೀಪಕನನ್ನು ನೀಡಬಲ್ಲಳಾದರೆ ಆಕೆಯೂ ಬೇಕು. ಈ ಒಳಗುದಿ ಯಲ್ಲಿ ಆತ ಬೇಯುತ್ತಿದ್ದಾಗಲೇ ಶಾಮ ಬೇರೆ ಮನೆ ಮಾಡಬೇಕಾಗುತ್ತದೆ. ತಾಯಿ ಯಿಲ್ಲದ ತಬ್ಬಲಿ ರತ್ನಾ ಕೇಸರಿಯಲ್ಲಿ 'ಆಯಿ'ಯನ್ನು ಪಡೆಯುತ್ತಾಳೆ. ಮುಂದೆ ವೆಂಕಣ್ಣನಿಗೆ ಪುತ್ರೋತ್ಸವವೂ ಆಗುತ್ತದೆ. ಹುಬ್ಬಳ್ಳಿಯಿಂದ ಗದಗಿಗೆ ಬದಲಿಯೂ ಆಗುತ್ತದೆ. ಈ ಮಧ್ಯೆ ಮುಂಬೈ ಮಹಾನಗರಿಯ ದರ್ಶನವೂ ಆಗುತ್ತದೆ. ನಡು ವೆಯೆ 'ಸಾವು' ಮತ್ತೆ ಮುಂದಾಗಲಿರುವುದಕ್ಕೆ ಕಣಿ ನುಡಿಯುವಂತೆ ಕಥೆಯಲ್ಲಿ ಚಂಚುಪ್ರವೇಶ ಮಾಡುತ್ತದೆ. ರುಕ್ಮಿಣಿಯನ್ನು ಎರಡನೆಯ ಸಂಬಂಧಕ್ಕೆ ಕೊಡು ವುದೆಂದು ನಿರ್ಧಾರವಾದಾಗಲೇ ಆಕೆಯ ಸೋದರತ್ತೆ – ವಿಧವೆ – ಕಡ್ಡಿ ಮುರಿ ದಂತೆಯೇ ಆಡಿಬಿಟ್ಟಿದ್ದಳು.ತನ್ನ ಹಣೆಯ ಬರಹವನ್ನೇ ಸೋದರಸೊಸೆಯ ಹಣೆಯಲ್ಲಿ ಬರೆದಿರಲಿಕ್ಕಿಲ್ಲವೇ ? ಎಂದು. ಮುಂದೆ ವೆಂಕಣ್ಣನಲ್ಲಿ ಅಸ್ವಾಸ್ಥ್ಯ ಕಾಣಿಸಿಕೊಂಡು ಅದು ಕ್ಯಾನ್ಸರ್ ಎಂದು ದೃಢಪಡುತ್ತದೆ. ಸಾವು ಮತ್ತೆ ತನ್ನ ಕೈಯನ್ನು ಉದ್ದಕ್ಕೆ ಚಾಚಿ ತನ್ನ ತೆಕ್ಕೆಯಲ್ಲಿ ವೆಂಕಣ್ಣನನ್ನು ಅವುಚಿಕೊಳ್ಳುವುದರೊಂದಿಗೆ ಅಂಕ ಪರದೆ ಕೊನೆಯದಾಗಿ ಇಳಿಯುತ್ತದೆ.

ನಾಸಿಕಾಕಾ : ಎನ್ಕೆ ಬರೆಹ/೩೦೯

ಈ ಕಾದಂಬರಿಗೆ ಮುನ್ನುಡಿಯ ಕವಚ ತೊಡಿಸಿದ ಪ್ರೊ. ಮಾಳವಾಡರೇ ಹೇಳುವಂತೆ ಕಣ್ಣೀರಿನ ಮಿಡಿತವೇ ಇದರ ಸೂತ್ರವಾಗಿದೆ. ಪ್ರಾಯಶಃ ಕಣ್ಣೀರು ಬರಿ ಈ ಕಾದಂಬರಿಯ ಸೂತ್ರವೆಂಬುದಕ್ಕಿಂತ ಅಂತಃಕರಣವನ್ನು ಬೆಸೆಯುವ ಸೂತ್ರವೆಂದರೆ ಸರಿಯೆನ್ನಿಸೀತು. ಆದರೆ ಸಾವು ಈ ಕಾದಂಬರಿಯಲ್ಲಿ ಕಂಡುಬರುವದು ಅನಿವಾರ್ಯ ಆಕಸ್ಮಿಕದಂತೆ ಮಾತ್ರ. ಪ್ರಾಯಶಃ ಇದು ಎನ್ಕೆಯವರ ಮೊದಲ ಕಾದಂಬರಿಯಾದ್ದರಿಂದ ಅವರಿಗಿಲ್ಲಿ ಕಥಾಭಾಗವೇ ಪ್ರಾಮುಖ್ಯವೆನಿಸಿರಬೇಕು. ಸಾವು ಬರಿ ಒಂದು ಘಟನೆಯಾಗುವದಕ್ಕಿಂತ ಅದು ಜೀವನಕ್ಕೆ ಶಿಖರಪ್ರಾಯವಾದ ಉತ್ತುಂಗಾವಸ್ಥೆಯೂ ಆಗಬಹುದಲ್ಲ.

ಇಲ್ಲಿ ದೊರೆಯುವದು ಒಂದು ಮೌಲ್ಯವಿಹೀನ ಸಾಂಪ್ರದಾಯಿಕ ಸಮಾಜವೊಂದರ ಚಿತ್ರಣ. ನೆಂಕಣ್ಣನಿಗಾಗಲಿ ಅವನ ಮಿತ್ರರಿಗಾಗಲಿ ಅವರ ಕೆಲಸದ ಕಚೇರಿ, ಮನೆ, ಹೆಚ್ಚೆಂದರೆ ಆಗೀಗ ಬರುತ್ತಿದ್ದ ನಾಟಕ ಕಂಪನಿಗಳದೇ ಜಗತ್ತು. ಅವುಗಳನ್ನು ಮೀರಿದ ಜಗತ್ತೇ ಅವರಿಗಿರುವಂತೆ ತೋರುವುದಿಲ್ಲ. ಅಂದು ದೇಶವನ್ನೇ ವ್ಯಾಪಿಸಿದ್ದ ಸ್ವಾತಂತ್ರ್ಯಾಂದೋಲನದ ಉಲ್ಲೇಖ ಕೂಡ ಪರ್ಯಾಯವಾಗಿ ಮಾತ್ರ ಬರುತ್ತದೆ. ತೀರ ಸುಲಭದಲ್ಲೇ ಸಿಗುತ್ತಿದ್ದಂತೆ ತೋರುವ ಲಂಚ ತಮ್ಮ ಹಕ್ಕಿನ ಬಾಬು ಎಂಬಂಥ ಭಾವನೆಯನ್ನೇ ಇಲ್ಲಿಯ ಪುರುಷ ಪಾತ್ರಗಳು ವ್ಯಕ್ತಗೊಳಿಸುತ್ತವೆ. ಮೈನೆರೆಯುವ ಮುನ್ನವೇ ಹೆಣ್ಣುಗಳ ಮದುವೆಯಾಗಿ ಪ್ರಾಯಕ್ಕೆ ಮುಂಚೆಯೇ ಗಂಡನನ್ನು ಕೂಡಿಕೊಳ್ಳಬೇಕಾಗುತ್ತಿದ್ದಂಥ ಕಾಲವದು. ಇಂಥ ಸಮಾಜವ್ಯವಸ್ಥೆಯಲ್ಲಿ 'ಸಾವಿನ ಉಡಿಯಲ್ಲಿ' ರೂಪುಗೊಳ್ಳುತ್ತದೆ. ಎನ್ಕೆ ತಮ್ಮ ಈ ಮೊದಲ ಕಾದಂಬರಿಗೆ ಆಯ್ದುಕೊಂಡುದು ಇಂಥ ಸಮಾಜದ ಒಂದು ಸೀಮಿತ ವರ್ಗವನ್ನು ಮಾತ್ರವಾದುದರಿಂದ ಅದರ ಯಶಾಪಯಶಗಳನ್ನು ಈ ಚೌಕಟ್ಟಿನೊಳಗಷ್ಟೇ ನೋಡಬೇಕು. ಅಲ್ಲದೆ ಸಾರ್ವಕಾಲಿಕ ಮೌಲ್ಯಗಳನ್ನು ಕಣ್ಣೆದುರು ಇರಿಸಿಕೊಂಡು ಈ ಕಾದಂಬರಿಯ ಬೆಲೆ ಕಟ್ಟಲು ನೋಡುವದು ಸರ್ವಥಾ ಸಲ್ಲದು.

'ಸಾವಿನ ಉಡಿಯಲ್ಲಿ' ಕಾದಂಬರಿಯಲ್ಲಿ ಎನ್ಕೆ ಉತ್ತರ ಕರ್ನಾಟಕದ ಮಧ್ಯಮ ವರ್ಗೀಯ ಬ್ರಾಹ್ಮಣರ ಆಡುಮಾತನ್ನು ಬಹು ಸಮರ್ಥವಾಗಿ ದುಡಿಸಿಕೊಂಡಿದ್ದಾರೆ ಕನ್ನಡ ಕಾವ್ಯಗಳ ಅಭ್ಯಾಸಬಲದಿಂದ ಬಂದ ಎನ್ಕೆ ಭಾಷಾಸರಣಿಯನ್ನು ಪ್ರೊ. ಮಾಳವಾಡರು ಇಲ್ಲಿ ಗುರುತಿಸಿದ್ದಾರೆ. ಈ ಭಾಷಾಸಾಮರ್ಥ್ಯವೇ ಎನ್ಕೆಯವರ ಮುಂದಿನ ದುಡಿಮೆಗೆಲ್ಲ ಸಾರಸಾಮಗ್ರಿ.

'ಸಾವಿನ ಉಡಿಯಲ್ಲಿ' ಸುಸ್ಪಷ್ಟವಾಗಿ ವ್ಯಕ್ತವಾಗುವ ಇನ್ನೊಂದು ಅಂಶವೆಂದರೆ ಬದುಕನ್ನು ಎಷ್ಟೊಂದು ಲವಲವಿಕೆಯಿಂದ ನೋಡಬಲ್ಲರೋ ಅಷ್ಟೇ ಸ್ಥಿರ

ಚಿತ್ತದಿಂದಲೇ ಎನ್ಕೆ ಸಾವನ್ನೂ ಸ್ವೀಕರಿಸಬಲ್ಲರು ಎಂಬುದು. ಈ ಕಾದಂಬರಿಯ ಕೇಂದ್ರಪುರುಷ ವೆಂಕಣ್ಣ ಸಾವಿನ ಹೊಸ್ತಿಲಲ್ಲಿದ್ದಾಗ ಅದನ್ನು ಅವನ ಸುತ್ತಲಿನವರೆಲ್ಲ ಹೇಗೆ ಕಾಣುತ್ತಾರೆಂಬುದೇ ಕಥೆಗೆ ಅರ್ಥಪೂರ್ಣ ಮಂಗಳವನ್ನು ಹಾಡುತ್ತದೆ. ಸಾವು ಸನ್ನಿಹಿತವೆಂದು ಮನದಟ್ಟಾದಾಗ ವೆಂಕಣ್ಣ ಶಾಮುನನ್ನು ತನ್ನಬಳಿ ಕರೆದು ರತ್ನಾಳನ್ನು ಅವನ ಮಡಿಲಿಗೆ ಹಾಕುತ್ತಾನೆ. ಸಿಡಿಲು ಬಡಿದವನಂತೆ ಶಾಮು ದಿಙ್ಮೂಢನಾಗುತ್ತಾನೆ. ಏನೂ ತಿಳಿಯದೆ ರತ್ನಾ ಕಕ್ಕಾ-ವಿಕ್ಕಿಯಾಗುತ್ತಾಳೆ. ಹೆಂಡತಿ ರುಕ್ಮಿಣಿ ಎರಡನೆಯ ಬಸುರಿ. ಅಂಥ ಹೊತ್ತಿನಲ್ಲಿ ಗಂಡ ಹೋಗಿಬಿಟ್ಟರೆ ತನ್ನ ಕರ್ಮಠ ತಂದೆ ತಲೆಭಾರ ಇಳಿಸಿಬಿಡುತ್ತಾನೆಂಬ ಶಂಕೆ ಅವಳನ್ನು ಬೆಂಬತ್ತಿದೆ. ಒಂದೊಂದು ಸಾಮಾಜಿಕ ಸಮಸ್ಯೆಯೂ ಒಂದೊಂದು ಶೂಲವಾಗಿ ಅವಳನ್ನು ಇರಿಯತೊಡಗಿ ಆಕೆ ಒದ್ದಾಡಿ ಹೋಗುತ್ತಾಳೆ. ತಮ್ಮ ಅಳಿಯನ ಹೊರಚಾಳಿಯೇ ಈ ಎಲ್ಲ ಅನರ್ಥಕ್ಕೆ ಕಾರಣವೆಂದು ದೃಢವಾಗಿ ನಂಬಿದ್ದ ವೆಂಕಟರಾಯರಿಗೆ ಈಗ ವೆಂಕಣ್ಣ ಆಸ್ತಿಯನ್ನೆಲ್ಲ ಮಾರಿಬಿಟ್ಟಿರುವನೋ ಎಂಬ ಚಿಂತೆ. ಅರಳುಮಲ್ಲಿಗೆಯಂಥ ಕೇಸರಿಯ ಮುಖದಲ್ಲಿ ಸ್ಮಶಾನಕಳೆ ತುಂಬಿಕೊಳ್ಳುತ್ತದೆ. ಸಾವು ತನ್ನ ಉಡಿಯನ್ನು ಇನ್ನಷ್ಟು ಹರವಾಗಿ ಒಡ್ಡುತ್ತದೆ.

'ಸಾವಿನ ಉಡಿಯಲ್ಲಿ' ಎನ್ಕೆ ಅವರ ಪ್ರಪ್ರಥಮ ಕಾದಂಬರಿಯಾದರೂ ಜನ್ಮತಃ ಅದಕ್ಕೆ ಹಲವು ಪರಿಮಿತಿಗಳಿದ್ದರೂ ಅದು ೧೯೪೦ರ ದಶಕದ ಕನ್ನಡ ಕಾದಂಬರೀ ಕ್ಷೇತ್ರದಲ್ಲಿ ಉತ್ತಮ ಕೃತಿಗಳಲ್ಲೊಂದಾಗಿ ಉಳಿಯುತ್ತದೆ.

# ಎರಡನೆಯ ಸಂಬಂಧ

## ಶ್ಯಾಮಸುಂದರ ಬಿದರಕುಂದಿ

ಎನ್ಕೆಯವರ 'ಎರಡನೆಯ ಸಂಬಂಧ' ಕಾದಂಬರಿ (೧೯೫೧) ವಸ್ತುವಿನ್ಯಾಸ, ಸ್ವಾನುಭವದ ನಿರ್ದಿಷ್ಟತೆ, ನೈತಿಕ ಕಲ್ಪನೆ ಮತ್ತು ಇವೆಲ್ಲದರ ವಿಶಿಷ್ಟ ಅನಾವರಣಗಳಿಂದಾಗಿ ತನ್ನ ಕಾಲದ ಗಣನೀಯ ಕಾದಂಬರಿಗಳಲ್ಲೊಂದಾಗಿ ಎಣಿಸಲ್ಪಡುತ್ತದೆ. ನಲವತ್ತರ ದಶಕದ ಉತ್ತರಾರ್ಧದಲ್ಲಿ ಕಾದಂಬರಿ ಪ್ರಕಾರವನ್ನು ಆವರಿಸಿದ ಪ್ರಗತಿಶೀಲ ಚಳುವಳಿಯ ಮುಖ್ಯ ಲಕ್ಷಣವಾಗಿದ್ದ ವಾಸ್ತವಪೂರ್ಣ ದೃಷ್ಟಿ, ಕಂದಾಚಾರಗಳ ನಿಷ್ಠುರ ವಿಮರ್ಶೆ, ಕತೆಗಾರನ ಸಾಮಾಜಿಕ ಕಳಕಳಿ ಇವು ಸೃಜನಶೀಲ ಸಾಹಿತಿ ತನ್ನ ಕೃತಿಯಲ್ಲಿ ನಿರ್ವಹಿಸಬೇಕಿದ್ದ ಸಾಮಾನ್ಯ ಆಶಯವಾಗಿದ್ದವು. ಕೇವಲ ಕಲಾತ್ಮಕವಾಗಿ ಅಥವಾ ಘೋಷಣಾಪ್ರಧಾನ ಧಾಟಿಯಲ್ಲಿ ಆಕರ್ಷಕವಾಗಿ ಈ ಆಶಯಗಳನ್ನು ಪ್ರಕಟಿಸುವುದು ಮುಖ್ಯವಾಗಿರಲಿಲ್ಲ. ಲೇಖಕ ತಾನೆತ್ತಿಕೊಂಡ ಸಮಸ್ಯೆಯನ್ನು ಪ್ರಗತಿಶೀಲ ನಿಲುವಿನಿಂದ ನೋಡಿಯೂ ಒಂದು ನೈತಿಕ ನೆಲೆಯನ್ನು ಅದಕ್ಕೆ ಒದಗಿಸುವುದೂ ಕತೆ, ಕಾದಂಬರಿಕಾರನ ಹೊಣೆಯಾಗಿತ್ತು. ಇದನ್ನು ಗ್ರಹಿಸಿದ್ದ ಲೇಖಕರು ನಮ್ಮಲ್ಲಿ ಕಡಿಮೆ. ಆದ್ದರಿಂದಲೇ ಪ್ರಗತಿಶೀಲತೆ ಆ ಒಂದು ಕಾಲಾವಧಿಯಲ್ಲಿ ಅಬ್ಬರದಿಂದ ಕಾಣಿಸಿಕೊಂಡು ಬಹುಬೇಗ ಮಾಯವಾಯಿತು. ಒಂದು ಗಟ್ಟಿಯಾದ, ಬಹುಕಾಲ ಪರಿಣಾಮ ಬೀರಬಲ್ಲ ಪರಂಪರೆಯ ತಳಹದಿಯನ್ನು ಅದು ಹಾಕಲಾಗಲಿಲ್ಲ. ನಿರಂಜನ, ತ. ರಾ. ಸು, ಕಟ್ಟೀಮನಿ, ಶ್ರೀರಂಗ–ಇಂಥ ಕೆಲವೇ ಲೇಖಕರು ವೈಯಕ್ತಿಕ ಸಾಮರ್ಥ್ಯದಿಂದ ಪ್ರಗತಿಶೀಲತೆಯನ್ನು ಕೆಲಮಟ್ಟಿಗೆ ಎತ್ತಿಹಿಡಿದರಷ್ಟೆ.

ಒಟ್ಟಾರೆಯಾಗಿ ಪ್ರಗತಿಶೀಲತೆಯ ಪರಿಣಾಮ–ನಮ್ಮ ಸಾಹಿತ್ಯದ ಮೇಲೆ ನಿರ್ದಿಷ್ಟ ರೀತಿಯಲ್ಲಿ–ಏನೇ ಇದ್ದರೂ ವಾಸ್ತವ (ಸ್ವಾನುಭವ)ತೆಯನ್ನು ಆಧುನಿಕ, ಸಮಕಾಲೀನ, ಬದಲಾಗುತ್ತಿರುವ ಜೀವನ ಸಾಧ್ಯತೆಗಳ ಬೆಳಕಿನಲ್ಲಿ ನೋಡಲು, ವಿಶ್ಲೇಷಿಸಲು ಲೇಖಕರಿಗೆ ಒಂದು ದೃಷ್ಟಿಕೋನವನ್ನಂತೂ ಈ ಚಳುವಳಿ ಸ್ಥೂಲವಾಗಿ ಕೊಟ್ಟದ್ದಂತೂ ಸ್ಪಷ್ಟ. ಆ ಹಿಂದಿನ ನವೋದಯ ಪರಂಪರೆಯ

ಆದರ್ಶಮಯ. ಭಾವುಕತೆಯ ದೃಷ್ಟಿಕೋನಕ್ಕಿಂತ ಭಿನ್ನವಾದ ಮಾರ್ಗವನ್ನು ಕಾದಂಬರಿಕಾರ ತುಳಿಯಲು ಅಗತ್ಯವಿದ್ದ ಸಲಕರಣೆಗಳನ್ನು ಲೇಖಕ ರೂಪಿಸಿ ಕೊಳ್ಳಲು ಅದು ಪ್ರೇರೇಪಿಸಿತು. ಪರಿಣಾಮವಾಗಿ ಬೇರೆ ಬೇರೆ ಅನುಭವ ವಲಯ ಗಳಿಂದ ಬಂದ ಹಲವು ಬಗೆಯ ಸತ್ತ್ವಶೀಲ ಲೇಖಕರು ತಮತಮಗೆ ವಿಶಿಷ್ಟವಾದ ಅನುಭವಗಳನ್ನು ಕಾದಂಬರಿಯ ಪ್ರಕಾರದಲ್ಲಿ ನಿರೂಪಿಸುವದರೊಂದಿಗೆ, ಈ ಸಾಹಿತ್ಯ ಮತ್ತೊಂದು ಮಜಲಿನಲ್ಲಿ ಬೆಳೆಯಲು ಕಾರಣರಾದರು.

ಎಸ್ಕೆಯವರು 'ಎರಡನೆಯ ಸಂಬಂಧ' ಬರೆದಾಗ ಪ್ರಗತಿಶೀಲತೆ ನಡು ಮಧ್ಯಾಹ್ನದಲ್ಲಿತ್ತು. ಈ ಕಾದಂಬರಿಯಲ್ಲಿಯ ಕತೆಯ ಸನ್ನಿವೇಶಗಳು ಸ್ವಾತಂತ್ರ್ಯ ಪೂರ್ವ ದಿನಗಳಿಗೆ ಸೇರಿದ್ದರೂ ಎಸ್ಕೆಯವರು ಆದರ್ಶ-ಭಾವುಕತೆಯ ಕಲ್ಪನೆಯಿಂದ ಪ್ರಭಾವಿತರಾಗದೆ ಪ್ರಗತಿಶೀಲ, ಮನೋಧರ್ಮಕ್ಕೆ ಹತ್ತಿರದವರಾಗಿ ಸ್ಪಂದಿಸುತ್ತಾರೆ. ಪ್ರೀತಿ, ಪ್ರಣಯ, ಕಾಮ, ವಾತ್ಸಲ್ಯ ಈ ನವಿರಾದ ಸಂಗತಿಗಳ ನಿರ್ವಹಣೆ ಈ ಕಾದಂಬರಿಯಲ್ಲಿ ಪ್ರಧಾನ ಪಾತ್ರವಹಿಸಿದರೂ ಆ ಹೊತ್ತಿಗೆ ಸ್ಪಷ್ಟವಾಗುತ್ತಿದ್ದ ಗಂಡು ಹೆಣ್ಣಿನ ಕೌಟುಂಬಿಕ ಹಾಗೂ ಸಾಮಾಜಿಕ ನೆಲೆಗಳಲ್ಲಿನ ಸಂಬಂಧದ ತೊಡಕನ್ನು ಅವರು ವಸ್ತುನಿಷ್ಠೆಯಿಂದ ಗುರುತಿಸಿದ್ದಾರೆ. ಬದಲಾದ ಜೀವನದಲ್ಲಿ ಗಂಡು-ಹೆಣ್ಣಿಗೆ ಒದಗುವ ಗೊಂದಲ, ಎದುರಿಸುವ ಜಟಿಲ ನೈತಿಕ ಪೇಚು, ಇವುಗಳಿಂದ ಮುಕ್ತವಾಗುವಲ್ಲಿ ಸಹಾಯಕ್ಕೆ ಬರುವ ಮಾನವೀಯ ಅಂಶ-ಇವುಗಳನ್ನವರು ಮನವರಿಕೆಯಾಗುವಂತೆ ಪ್ರಸ್ತಾಪಿಸುತ್ತಾರೆ. ಒಂದು ನಿರ್ದಿಷ್ಟ (ಪೂರ್ವ ಕಲ್ಪಿತ)ನೈತಿಕ ಕಾಳಜಿಯ ಬಿಂದುವಿನಿಂದಲೇ ಹೊರಟರೂ ವಾಸ್ತವತೆಯ ನಿಷ್ಠುರಗಳನ್ನವರು ಸರಳಗೊಳಿಸದೇ ಪರಿಸ್ಥಿತಿಗೆ ಪ್ರಾಮಾಣಿಕವಾಗುವಂತಹ ರೀತಿಯಲ್ಲಿ ಸಮಸ್ಯೆಯ ಮಗ್ಗಲುಗಳನ್ನು ಬಿಡಿಸುತ್ತ ಸಾಗುತ್ತಾರೆ. ಇಲ್ಲಿಯ ಪಾತ್ರಗಳು ತಮಗೆ ತಾವೇ ಸೃಷ್ಟಿಸಿಕೊಂಡ ಸಮಸ್ಯೆಯ ಸುಳಿಗಳಲ್ಲಿ ಸುತ್ತಿ, ಅನುಭವದಲ್ಲಿ ಬೆಂದು ಕೊನೆಗೆ ಆ ಸುಳಿಯಿಂದ ಹೊರಬರುವ ಮಾರ್ಗ (ರೀತಿ) ವನ್ನು ತಾವೇ ಕಂಡುಕೊಳ್ಳುತ್ತವೆ. ಪ್ರೀತಿ ಸಂಬಂಧದಲ್ಲಿಯ ಮುಗ್ಧತೆ, ಸ್ನಿಗ್ಧತೆಯ ಪರಿಯನ್ನು ಎಸ್ಕೆಯವರು ಎಂತಹ ರಸಿಕ ಮನೋಧರ್ಮದಿಂದ ರೇಖಿಸಬಲ್ಲರೋ ಅಷ್ಟೇ ಸಮರ್ಥವಾಗಿ ಹದಗೆಟ್ಟ ದಾಂಪತ್ಯದ ಜಟಿಲತೆಯನ್ನು ಅದರ ಬೇರೆಬೇರೆ ಮುಖಗಳನ್ನೂ ಸಹಿತ ತೋರಿಸಬಲ್ಲರು. ಆದರ್ಶದ ಸರಳತೆಯನ್ನು (ಕಾದಂಬರಿಯ ಮೊದಲ ಭಾಗದಲ್ಲಿ) ಸರಸವಾಗಿ ವರ್ಣಿಸಬಲ್ಲಷ್ಟೇ ವಾಸ್ತವತೆಯ ನಿಷ್ಠುರವನ್ನವರು (ಮುಂದಿನ ಭಾಗದಲ್ಲಿ) ಹೊಣೆಗಾರಿಕೆಯಿಂದ ಮೂಡಿಸಬಲ್ಲವರಾಗಿದ್ದಾರೆ. ಈ ನಡುವೆ, ಸುಳಿಯುವ ಭಾವುಕತೆಯ ಲಹರಿಗಳನ್ನೂ, ಅವೆರಡೂ ತುದಿಗಳಿಗೆ ಬಾಧೆ ಬರದಂತೆ ಪ್ರಸ್ತುತಪಡಿಸಿ, ತಮ್ಮ ಕಾದಂಬರಿ ಜಗತ್ತನ್ನು ಹೆಚ್ಚು ನಂಬಲರ್ಹ ಕೃತಿಯನ್ನಾಗಿ ಎಸ್ಕೆ ಅವರು ನಮ್ಮ ಮುಂದಿಡುತ್ತಾರೆ.

ನಾನಿಕಾಕಾ : ಎಸ್ಕೆ ಬರೆಹ/೩೧೩

'ಎರಡನೆಯ ಸಂಬಂಧ'ದ ಕತೆ ಹೀಗಿದೆ: ರಾಮನಾಥ, ಕೆಳ ಮಧ್ಯಮ ವರ್ಗದ ಬುದ್ಧಿವಂತ, ಜೀವನೋತ್ಸಾಹಿ ತರುಣ. ಸ್ವಾತಂತ್ರ್ಯ ಪೂರ್ವಕಾಲದ (ಸು.೧೯೪೦,೪೩), ಬ್ರಾಹ್ಮಣ ಕುಟುಂಬದ ಈತ, ಕಾಲೇಜು ವಿದ್ಯಾರ್ಥಿಯಾಗಿರುವಾಗಲೇ ಜಾನಕಿಯ ಕೈ ಹಿಡಿದು ಗೃಹಸ್ಥಾಶ್ರಮಿಯಾಗಿದ್ದಾನೆ. ಕಾಲೇಜಿನ ಓದು-ಅಭ್ಯಾಸ ಪರೀಕ್ಷೆಗಳ ನಡುವೆಯೇ ದಾಂಪತ್ಯದ ಸವಿ-ಅನುಭವಿಸಲೆತ್ನಿಸುವ ರಾಮನಾಥನ ಕಾತರ-ಲವಲವಿಕೆ-ಕಳವಳಗಳು ಬೇರೆ ಊರಿನಿಂದ ಹೆಂಡತಿಗೆ ಬರೆಯುವ ಆತನ ಪತ್ರಗಳಲ್ಲಿ ತುಂಬಿಕೊಂಡಿವೆ.

ಜಾನಕಿ ಓದಿದವಳಲ್ಲ. ಸಂಕೋಚದ, ಸಂಪ್ರದಾಯದಲ್ಲಿ ಮುಳುಗೆದ್ದ ಸ್ವಭಾವ ಆಕೆಯದು. ಮನೆಯಲ್ಲಿ ಹಿರಿಯರ ಅಂಕೆಯಲ್ಲಿ ಬೆಳೆದವಳಾದ್ದರಿಂದ ಗಂಡನಿಗೂ ಅಂಜುವ, ಮುಟ್ಟಿದರೆ ಮುಟ್ಟಿಬೀಳುವಂಥ ಸಂಕೋಚ ಅವಳದು. ಆದರೆ ಅವಳ ಮುಗ್ಧ, ಸ್ನಿಗ್ಧ ಪ್ರೇಮ ಮತ್ತು ಅವ್ಯಕ್ತವಾದರೂ ಅಗಾಧವಾದ ತಿಳುವಳಿಕೆಯಲ್ಲಿ ರಾಮನಾಥ ಧನ್ಯತೆಯನ್ನೇ ಅನುಭವಿಸಿದ್ದಾನೆ. ಕಲಿಯುವ ಕರ್ಮ ಮುಗಿದ ಕೂಡಲೇ ತನ್ನ ಸ್ವತಂತ್ರ ಮನೆ, ಸಂಸಾರ ಹೊಂದಿಸುವ ಕನಸು ಕಾಣುತ್ತಿದ್ದಾನೆ. ಜಾನಕಿಗಿರುವ ಕೆಲವು ಕಂದಾಚಾರದ ನಂಬಿಕೆಗಳನ್ನು ತಿದ್ದಿ, ಹೊಸ ಜೀವನದ ಕಲ್ಪನೆಗಳಿಗೆ ಆಕೆ ಒಗ್ಗುವಂತೆ ಬದಲಾಯಿಸುವ ಪ್ರಯತ್ನ ಮಾಡಿದ್ದಾನೆ ರಾಮನಾಥ. ಆಕೆ ತನ್ನ ಇಚ್ಛೆಯ ಆದರ್ಶ ಹೆಂಡತಿಯಾಗಿ ಹೊಂದಬೇಕೆಂಬುದು ಅವನ ಆಸೆ. ಭಾವೀ ಸಂಸಾರದ ಈ ಹೊಂಗನಸನ್ನು ಆ ಎಳೆಯ ದಂಪತಿಗಳು ಹೆಣೆಯುತ್ತಿರುವಾಗಲೇ ಮೋಹನನಿಗೆ ಜೀವವಿತ್ತ ಜಾನಕಿ, ಕೆಲವೇ ದಿನಗಳಲ್ಲಿ ಆಕಸ್ಮಿಕವಾಗಿ ಕಾಣಿಸಿಕೊಂಡು ಚಿಕಿತ್ಸೆಗೂ ನಿಲುಕದೇ ಹೋದ ಜಡ್ಡಿನಿಂದ ಸಾವಿಗೀಡಾಗುತ್ತಾಳೆ. ಅನಿರೀಕ್ಷಿತ ಪೆಟ್ಟಿನಿಂದ ಭಗ್ನಮನೋರಥನಾದ ರಾಮನಾಥ, ಕೈಗೂಸು ಮೋಹನನನ್ನು ಜಾನಕಿಯ ತಾಯ್ತಂದೆಯರ ಬಳಿ (ಧಾರವಾಡದಲ್ಲಿ) ಪೋಷಣೆಗೆ ಬಿಟ್ಟು ಮುಂಬೈ ಸೇರಿ, ಹೊಸ ನೌಕರಿ, ಹೊಸ ಜೀವನ ಪರಿಸ್ಥಿತಿಯ ನಡುವೆ ದುಃಖ ನುಂಗಲು ಯತ್ನಿಸುತ್ತಾನೆ.

ಕಾದಂಬರಿಯ ಮೊದಲ ಭಾಗದಲ್ಲಿಯ ಈ ಕಥನವು ನಿರೂಪಿತವಾಗಿರುವುದು ರಾಮನಾಥ-ಜಾನಕಿಯರ ಪತ್ರ, ಉತ್ತರಗಳ ವಿಧಾನದಲ್ಲಿ. ಅವರಿಬ್ಬರ ಪ್ರತ್ಯೇಕ ಹಾಗೂ ಪರಸ್ಪರ ಆಶೆ-ಆಕಾಂಕ್ಷೆ, ಅಭಿರುಚಿಗಳ ಚಿತ್ರ ಇಲ್ಲಿ ವ್ಯಕ್ತವಾಗಿರುವ ಬಗೆ, ಹೊಸತು. ರಾಮನಾಥನ ಪಾಲಿಗೆ ದಾಂಪತ್ಯ ಜೀವನದ ಈ ಹಂತವು ಹಣ್ಣಾಗುವ ಮೊದಲೇ ತಿಂದು ಅನುಭವಿಸಿದ ಕಸಕುಕಾಯಿ. ಅನುಭವದ ಎಚ್ಚರ ಬಂದು ತನ್ನ ಕಲ್ಪನೆಗೆ ಅನುಗುಣವಾಗಿ ಆ ಬಾಳನ್ನು ರೂಪಿಸಿಕೊಳ್ಳುವ ಹೊಂಚಿನಲ್ಲಿರುವಾಗಲೇ ಅದು ಅವನ ಕೈಜಾರಿ ಬೀಳುತ್ತದೆ. ಜಾನಕಿಯ ಸಾಧ್ವಿತನದ ಒಲವು,

ಮುಗ್ಧ ಸಿಂಗಾರ, ಸಮರ್ಪಣ ಮನೋಭಾವ ಇವೆಲ್ಲದರ ಹ್ರಸ್ವ ಸುಖಾನುಭವ ರಾಮನಾಥನ ಮುಂದಿನ ಜೀವನದಲ್ಲಿ ಕೇವಲ ಸ್ಮೃತಿಯಾಗಿ ಉಳಿಯುವ ಅಂಶ.

ಕಾದಂಬರಿಯ ಸಮಸ್ಯೆಯ ಮೂಲವು ಜಾನಕಿ ಮತ್ತು ಅವಳೊಂದಿಗಿನ ರಾಮನಾಥನ ದಾಂಪತ್ಯ ಜೀವನದ ಪರಿಯಲ್ಲಿಲ್ಲ. ಆದ್ದರಿಂದ ಮೊದಲ ಭಾಗದ ಈ ಕಥನಾಂಶ, ಒಂದು ಆಗಿಹೋದ ಘಟನೆಯ ಕೇವಲ ಸ್ಮೃತಿರೂಪವಾಗಿ–ಪತ್ರೋತ್ತರಗಳ ದಾಖಲೆಯಾಗಿ – ಕಾಣಿಸಿಕೊಳ್ಳುವುದು ಕಾದಂಬರಿಯ ಮುಖ್ಯ ವಸ್ತುವಿನ ನಿರ್ವಹಣೆಗೆ ಒಂದು ಪೂರಕವೂ ಔಚಿತ್ಯಪೂರ್ಣವೂ ಆದ ಅಂಶವಾಗಿ ಪರಿಣಮಿಸುತ್ತದೆ.

ಮುಂಬೈ ಸೇರಿದ ಕೆಲವಾರು ತಿಂಗಳ ಮೇಲೆ, ಒಬ್ಬಂಟಿ ರಾಮನಾಥ ಇಬ್ಬರ. ವಿಭಿನ್ನ ಮನೋವೃತ್ತಿಯ ತರುಣಿಯರ ನಿಕಟ ಸಂಪರ್ಕ ಗಳಿಸುತ್ತಾನೆ. ಒಬ್ಬಳು, ಆತ ವಾಸಮಾಡುವ ಗೃಹ ಸಂಕೀರ್ಣದಲ್ಲಿ, ಮಗ್ಗುಲಲ್ಲೇ ಇರುವ ಮರಾಠೀ ಹುಡುಗಿ ಛಬೆ. ಇನ್ನೊಬ್ಬಳು, ಟ್ರಾಂನ ಪ್ರಯಾಣದಲ್ಲಿ ಇವನ ಸಹಾಯ-ಸೌಜನ್ಯ ಯಾಚಿಸಿ 'ಕೈ ನೀಡಿದ' ಚೆಲುವೆ, ಉದ್ಯೋಗಸ್ಥ, ಕನ್ನಡ ಕನ್ಯೆ ವಿದ್ಯಾವತಿ.

ಛಬೆ, ಇನ್ನೂ ಕಾಲೇಜು ಕಲಿಯುತ್ತಿರುವ, ಮನೆಯಲ್ಲಿ ತಾಯ್ತಂದೆಯರ ಕಾಳಜಿಮಾಡುವ ಸ್ವಭಾವದಲ್ಲಿ ನಿಃಸಂಕೋಚ ಮತ್ತು ದಿಟ್ಟೆಯಾಗಿರುವ ವಾಚಾಳಿ ಹುಡುಗಿ. ಅವಳ ಆತ್ಮೀಯ ನಡೆ-ನ-ಡಿ ರಾಮನಾಥನನ್ನು ತೀವ್ರ ಸೆಳೆದಿವ್ಯೆ ಗದ್ದಲದ ಪ್ರಸಂಗವೊಂದರಲ್ಲಿ ವಿಧುರನಾದ ರಾಮನಾಥ, ಅವಳ ಸಾನ್ನಿಧ್ಯದಲ್ಲಿ ಕಾಮುಕ ಭಾವದ ಎಳೆಯೊಂದರ ಸೆಳೆತಕ್ಕೆ ಒಳಗಾದರೂ ಸಂಯಮ ತೋರ್ರುತ್ತಾನೆ. ಛಬೆಯ ನಿಷ್ಕಲಂಕ, ಕ್ಷಮಾಶೀಲ ಬುದ್ಧಿಯಿಂದ ಪ್ರಭಾವಿತನಾಗಿ ಅವಳನ್ನು ತಂಗಿಯಾಗಿ ಆದರಿಸುತ್ತಾನೆ. ಛಬೆ ಅವನಿಗೆ ಕಾಮ, ಪ್ರೇಮದ ನಿರ್ದಿಷ್ಟ ಅಂತರವನ್ನು ಅಪ್ರಯತ್ನವಾಗಿ ತೋರಿಸುತ್ತಾಳೆ. ಇವಳ ಪಾತ್ರ ನಿರ್ಮಾಣವು ವಿದ್ಯಾವತಿಯ ಸ್ವಚ್ಛಂದ, ಗರ್ವಿಷ್ಠ ಮನೋಧರ್ಮಕ್ಕೆ ವೈದೃಶ್ಯವಾಗಿ ಕಾದಂಬರಿಯಲ್ಲಿ ಕಾಣಿಸಿದೆ

ಮುಂಬೈಯಲ್ಲಿ ನೌಕರಿ ಮಾಡುತ್ತ, ಸ್ವೇಚ್ಛೆಯಿಂದಿರುವ ವಿದ್ಯಾವತಿ, ರಾಮನಾಥನಿಂದ ಆಕರ್ಷಿತಳಾಗುತ್ತಾಳೆ. ಆಕೆಯದು ಅತ್ಯಂತ ಅವಸರದ ಪ್ರೇಮಾನುಬಂಧ. ರಾಮನಾಥನಿಗೂ ಹೆಣ್ಣಿನ ಸಾನ್ನಿಧ್ಯದ ಆತುರ. ಒಬ್ಬರನ್ನೊಬ್ಬರು ಪೂರ್ಣ ತಿಳಿದುಕೊಳ್ಳುವ ಮೊದಲೇ ರಿಜಿಸ್ಟರ್ ವಿವಾಹಕ್ಕೆ ಬದ್ಧರಾಗಿ ಕಿರುಕೋಣೆಯಲ್ಲಿ ಸಂಸಾರ ಹೂಡುತ್ತಾರೆ. ರಾಮನಾಥ, ತನ್ನ ಮೊದಲ ಹೆಂಡತಿ ಹಾಗೂ ಧಾರವಾಡದಲ್ಲೇ ಉಳಿದ ಕರುಳಕುಡಿ ಮೋಹನನ ಬಗ್ಗೆ ಮೌನವನ್ನೇ ತಾಳಿ ಬಿಡುತ್ತಾನೆ. ಆತ್ಮವಂಚನೆಯಂತಿರುವ ಈ ತಪ್ಪಿಗೆ ಆತ ತೆತ್ತುವ ಬೆಲೆಯೇನೂ ಸಣ್ಣದಲ್ಲ.

ದಿನಗಳೆದಂತೆ ವಿದ್ಯಾವತಿಯ ಮಹತ್ವಾಕಾಂಕ್ಷೆ ಹತ್ತುಕಡೆ ಹರಿದು ಅವಳ ಸ್ವಚ್ಛಂದತೆ, ಚಂಚಲ ಪ್ರವೃತ್ತಿಗಳಿಂದ ರಾಮನಾಥ ಕ್ರಮೇಣ ಕಂಗೆಡುತ್ತಾನೆ. ಆದರೆ ಅದು ನುಂಗಲಾರದ, ಉಗುಳಲಾರದ ಬಿಸಿ ತುಪ್ಪ ಅವನಿಗೆ. ಒಮ್ಮೆ ವಾರಗಟ್ಟಲೆ 'ತಮ್ಮ'ನ ಮನೆಗೆಂದು ಪುಣೆಗೆ ಹೋಗಿದ್ದ ವಿದ್ಯಾ ಅಲ್ಲೊಬ್ಬ ಗೆಳೆಯನ ಜತೆಗೆ ಕಾಲ ಕಳೆದ ಸಂಗತಿ ಮತ್ತು ಸಿನಿಮಾ, ರೇಡಿಯೋ ಜಾಹಿರಾತುಗಳ ಪ್ರಚಾರ ಜಗತ್ತಿನಲ್ಲಿ ತನ್ನ ಪ್ರತಿಭೆ, ಸೌಂದರ್ಯಗಳನ್ನು ಬಂಡವಾಳವಾಗಿ ತೊಡಗಿಸುವ ವಿದ್ಯಾವತಿಯ ಹಪಾಹಪಿತನ ರಾಮನಾಥನನ್ನು ದೂರ ಎಸೆಯತೊಡಗುತ್ತವೆ. ದಂಪತಿಗಳ ಮನಸ್ಸು ಮುರಿದು ರಾಮನಾಥ ಪಶ್ಚಾತ್ತಾಪದ ಉರಿಯಲ್ಲಿ ಬೇಯುವಂತಾಗುತ್ತದೆ. ಆದರೆ ಅವನೂ ಆಕೆಯ ವಿಷಯದಲ್ಲಿ ತಪ್ಪಿತಸ್ಥನೇ. ಭಾವೋದ್ವಿಗ್ನದ ಕ್ಷಣದಲ್ಲಿ ರಾಮನಾಥ ಜಾನಕಿಯನ್ನು ನೆನಪಿಸುವುದೇ ತಡ, ವಿದ್ಯಾವತಿ ಜಿದ್ದಿಗೆ ಬಿದ್ದವಳಂತೆ ರಾಮನಾಥನನ್ನು ಭರ್ತ್ಸನೆಗೀಡುಮಾಡಿ ಸ್ವೇಚ್ಛಾಚಾರದ ಅನುಭವ ಶೋಧನೆಯಲ್ಲಿ ಮನೆಯನ್ನು ತೊರೆದು ಹೋಗುತ್ತಾಳೆ.

ರಾಮನಾಥನೊಂದಿಗೆ ವಿರಸ ಬೆಳೆಸಿಕೊಂಡಿದ್ದಕ್ಕೆ ಪ್ರತಿಯಾಗಿ ವಿದ್ಯಾ, ಮನು ಎಂಬ ವಿಲಾಸೀ ಪ್ರವೃತ್ತಿಯ ಯುವಕನೊಂದಿಗೆ ಸಲುಗೆ, ಸ್ನೇಹದಿಂದ ಪುಣೆ, ಮುಂಬೈಗಳಲ್ಲಿ ಅಲೆದಾಡುತ್ತಾಳೆ. ಜಾಹಿರಾತು ಕಂಪನಿಯಲ್ಲಿ 'ಮಾಡೆಲ್' ಆಗಿ ಹಣ, ಪ್ರಚಾರ ಗಿಟ್ಟಿಸಬೇಕೆಂಬ ಅವಳ ಆಸೆಗೆ ಮನು ಉತ್ತೇಜಿಸುತ್ತಾನೆ. ರಾಮನಾಥನನ್ನು ಪೂರ್ಣ ಕಡೆಗಣಿಸಿ ವಿದ್ಯಾ ರೇಡಿಯೋ ನಾಟಕದಲ್ಲಿ ಪಾಲುಗೊಳ್ಳುತ್ತಾಳೆ. ರಾಮನಾಥ ತನ್ನ ವಿಷಯದಲ್ಲಿ ತೋರಿದ ವಂಚನೆ ಅಕ್ಷಮ್ಯವೆಂದೇ ಭಾವಿಸಿರುವ ಆಕೆ, ತನ್ನ ವ್ಯಕ್ತಿತ್ವವನ್ನು ತೀರಾ ಸ್ವತಂತ್ರವಾಗಿ ಬೆಳೆಸುವ ಕಡೆ ಮಗ್ನಳಾಗುತ್ತಾಳೆ.

'ಎರಡನೆಯ ಸಂಬಂಧ'ದ ಈ ವಿಷಮಾವಸ್ಥೆಯಲ್ಲಿ ಕಂಗೆಟ್ಟ ರಾಮನಾಥನಿಗೆ ಸಾಂತ್ವನ ನೀಡಿದವಳು ನಿಷ್ಕಳಂಕ ಪ್ರವೃತ್ತಿಯ, ಬಿಚ್ಚುಮಾತಿನ ಛಬಿ. ಗಂಡು-ಹೆಣ್ಣಿನ ಸಂಬಂಧದ ಬಗ್ಗೆ ಛಬಿ ತಾಳಿರುವ ಸ್ಪಷ್ಟ ಪರಿಶುದ್ಧ ತಿಳುವಳಿಕೆ ರಾಮನಾಥನನ್ನು ಅಚ್ಚರಿಗೊಳಿಸುತ್ತದೆ. ಕಂಗೆಟ್ಟಿದ್ದವನಿಗೆ ಧೈರ್ಯ ನೀಡುತ್ತದೆ. ಛಬಿಯ ಸೋದರಿವಾತ್ಸಲ್ಯದಿಂದಾಗಿ ರಾಮನಾಥ ವಿದ್ಯಾಳೊಂದಿಗೆ ಸಹನೆಯ ಮನೋಭಾವ ತಾಳುತ್ತಾನೆ. ಆದರೆ ವಿದ್ಯಾ ಇವನ ಮೂಲಭೂತ ತಪ್ಪನ್ನೇ ಒಂದು ಅಸ್ತ್ರವನ್ನಾಗಿ ಮಾಡಿಕೊಂಡು ತನ್ನ ವಿಚಿತ್ರ, ಸ್ವೇಚ್ಛೆಯ ನಡವಳಿಕೆಗಳನ್ನು ಸಮರ್ಥಿಸಿಕೊಳ್ಳುತ್ತಲೇ ನಡೆಯುತ್ತಾಳೆ.

ಧಾರವಾಡಕ್ಕೊಮ್ಮೆ ಹೋಗಿ, ಮಗು ಮೋಹನನನ್ನು ಕರೆತರುವ ಮನಸು ಮಾಡುತ್ತಾನೆ. ಆಗಲೇ ಅವನ ಅತ್ತೆ-ಮಾವಂದಿರು ತಮ್ಮ ಎರಡನೆಯ ಮಗಳು (ಜಾನಕಿಯ ತಂಗಿ) ಶಾರದೆಯನ್ನು ಮದುವೆಯಾಗುವಂತೆ ಒಲಿಸುತ್ತಾರೆ. ವಸ್ತು

ಸ್ಥಿತಿ ಹೇಳಲಿಕ್ಕಾಗದ ರಾಮನಾಥ ಆ ಹೊಸ ಸಂಬಂಧವನ್ನು ನಿರಾಕರಿಸಿ, ಎಳೆಯ ಹುಡುಗನನ್ನು ಹೆಂಡತಿಯಿಲ್ಲದ ಮುಂಬೈನ ಮನೆಗೆ ಕರೆತರುತ್ತಾನೆ. ಛಬಿ ಹುಡುಗನ ಕಾಳಜಿ ವಹಿಸುತ್ತಾಳೆ. ಆದರೆ ಮೋಹನ ಚಿಕಿತ್ಸೆಗೂ ಗುಣವಾಗದ ಕರಳುಬೇನೆ ಗೀಡಾಗಿ ಕಣ್ಣುಮುಚ್ಚುತ್ತಾನೆ. ರಾಮನಾಥ ಮತ್ತೊಮ್ಮೆ ಬಯಲಲ್ಲಿ ನಿಂತಂತಾಗುತ್ತದೆ.

ಸಿನಿಮಾ ಸೇರುವ ಮಹತ್ವಾಕಾಂಕ್ಷೆಯಲ್ಲಿ ಆ ಜಗತ್ತಿನ ಪ್ರತ್ಯಕ್ಷ ದರ್ಶನಕ್ಕೆ ಹೋದ ವಿದ್ಯಾ, ರಾಜನ್‌ನಂತಹ ಕಾಮುಕರ ಬಲೆಗೆ ಬೀಳುವ ಮೊದಲೇ ಅಪಾಯದ ಸುಳಿವು ತಿಳಿದು ಸುರಕ್ಷಿತ ಉಳಿಯುತ್ತಾಳೆ. ರಾಮನಾಥ ತನ್ನಮೇಲೆ ಅಕ್ಷಮ್ಯ ಅಪರಾಧ ಮಾಡಿರುವದರಿಂದ, ಅವನಿಂದ ವಿಚ್ಛೇದನೆ ಪಡೆಯಬೇಕೆಂದು ವಕೀಲರ ನೆರವು ಕೇಳುತ್ತಾಳೆ ವಿದ್ಯಾ. ವಕೀಲರು ಮುರುಗಡೆಯನ್ನು ನಿರುತ್ತೇಜಿಸಿ ಗಂಡನನ್ನು ತಿಳಿದು, ಅನುಸರಿಸಿ ಬದುಕಬೇಕೆಂದು ಸಮಾಧಾನ ಹೇಳುತ್ತಾರೆ. ಮನು ಕೂಡ ಅವಳನ್ನು ಅನಿಶ್ಚಿತ ಪರಿಸ್ಥಿತಿಯಲ್ಲಿ ಇಡುತ್ತಾನೆ. ರಾಮನಾಥನೊಂದಿಗೆ ಹೊಸ ತಿಳುವಳಿಕೆ ಏರ್ಪಡಿಸಿಕೊಳ್ಳಬೇಕೆಂದು ಹಿಂದಿರುಗಿ ಮನೆಯ ಬಾಗಿಲು ತಟ್ಟುತ್ತಾಳೆ. ಹೆಂಡತಿಯ ಹೊಣೆಗೇಡಿತನ, ಮೋಹನನ ಅಗಲುವಿಕೆ, ರಾಮನಾಥನನ್ನು ನಿರ್ವಿಣ್ಣಗೊಳಿಸಿವೆ. ಆದರೂ ಛಬಿಯ ದೊಡ್ಡಮನಸ್ಸಿನ ಮಧ್ಯಸ್ತಿಕೆಯಲ್ಲಿ ರಾಮನಾಥ, ವಿದ್ಯಾವತಿಯನ್ನು ಒಳಗೆ ಕರೆಯುತ್ತಾನೆ. ಈ ವರೆಗಿನ ಅನುಭವಗಳ ವಾಸ್ತವ ಬೆಳಕಿನಲ್ಲಿ ಅವರಿಬ್ಬರ ನಡುವಿನ 'ಎರಡನೆಯ ಸಂಬಂಧ' ಕುದುರುತ್ತದೆ. ಛಬಿಯ ಸೌಹಾರ್ದಪೂರ್ಣ ಮಧ್ಯಸ್ತಿಕೆ ಸಾರ್ಥಕವಾಗುತ್ತದೆ.

೨

ಗಂಡು-ಹೆಣ್ಣಿನ ಸಂಬಂಧದ ಸೂಕ್ಷ್ಮ ಮುಖಗಳನ್ನು ಬಿಡಿಸಿ ನೋಡುವುದೇ ಕಾದಂಬರಿಯ ಉದ್ದೇಶ. ದಾಂಪತ್ಯದ ಚೌಕಟ್ಟಿನ ಒಳಗಿನ ಸಂಬಂಧದ ಮೌಲಿಕತೆ ಮತ್ತು ಅದರ ಹೊರಗಿನ ಸಂಬಂಧದ ನೈತಿಕತೆ ಇವೆರಡನ್ನು ಅಳೆಯುವ ಪ್ರಯತ್ನ ಕಾದಂಬರಿಯ ನಿಲುವಾಗಿದೆ. ಅದಕ್ಕಾಗಿ ಎನ್ಕೆಯವರು ಕಥಾವಸ್ತುವನ್ನು ಐದು ಬೇರೆ ಬೇರೆ ಪದರುಗಳಲ್ಲಿ ನಿರ್ವಹಿಸಿದ್ದಾರೆ :

೧. ಜಾನಕಿಯ ಜೊತೆಗಿನ ರಾಮನಾಥನ ಮುಗ್ಧ-ಸ್ನಿಗ್ಧ ದಾಂಪತ್ಯ.
೨. ವಿದ್ಯಾವತಿಯ ಜತೆಗಿನ ಸರಸ/ವಿರಸದ ದಾಂಪತ್ಯ.
೩. ಛಬಿಯ ಜತೆಗಿನ ನಿಷ್ಕಾಮ ಸ್ನೇಹ–ವಾತ್ಸಲ್ಯದ ಸಂಬಂಧ.
೪. ಲಘುಮನೋಲಹರಿಯಿಂದ ಪ್ರೇರಿತಳಾಗಿ ರಾಮನಾಥನೊಂದಿಗೆ ವಿದ್ಯಾವತಿ ಪಡೆಯುವ ತಾತ್ಕಾಲಿಕ ಸುಖ; ಬೆಳೆಸುತ್ತ ಹೋಗುವ ವಿಷಮಸ್ಥಿತಿ.

೫. ಮನು ಹಾಗೂ ಇನ್ನಿತರ ಪರಪುರುಷರೊಂದಿಗಿನ ಒಡನಾಟದಲ್ಲಿ ಆಕೆ ಹುಡುಕುವ ಸುಖದ ಭ್ರಮೆ.

ಮೊದಲಿನ ಮೂರು ಬಗೆಯ ಸಂಬಂಧಗಳಲ್ಲಿ ರಾಮನಾಥ ಕೇಂದ್ರವಾಗಿದ್ದರೆ, ನಂತರದ ಎರಡು ರೀತಿಯ ಸಂಬಂಧಗಳು ವಿದ್ಯಾವತಿಯನ್ನು ಕೇಂದ್ರವಾಗಿಸಿವೆ.

ವಿವಾಹಸುಖದ ಇತಿಮಿತಿಗಳನ್ನು ವ್ಯಾಖ್ಯಾನಿಸುವ ಕತೆ, ಒಂದು ನಿಶ್ಚಿತ (ಸಂತೃಪ್ತ) ನೆಲೆಯಿಂದ ಆರಂಭವಾಗಿ, ನಾಯಕನನ್ನು ನೈತಿಕ ನೆಲೆಯಲ್ಲಿ ಬಿಕ್ಕಟ್ಟಿಗೂ ಇಕ್ಕಟ್ಟಿಗೂ ಒಳಗಾಗುವಂತೆ ಮಾಡಿ, ಅನುಭವದ ಪರೀಕ್ಷೆಯಲ್ಲಿ ಗಂಡು-ಹೆಣ್ಣು ಬೆಂದಾಗಲೇ ಹೊಸ ಅರಿವೊಂದು ಮೂಡಬಲ್ಲದೆಂಬ ಮನವರಿಕೆಯೊಂದಿಗೆ ಕೊನೆಗಾಣುತ್ತದೆ. ಸಾಂಪ್ರದಾಯಿಕ ಅರ್ಥದಲ್ಲಿ ಕಾದಂಬರಿಗೆ ಸುಖಾಂತ್ಯವಿದೆ. ಆದರೆ ಈ ಸುಖಾಂತ್ಯ, ಅದನ್ನು ದೊರಕಿಸಿಕೊಂಡವರು ಅನಿವಾರ್ಯವಾಗಿ ಸ್ವೀಕರಿಸಬೇಕಾದ–ತಮ್ಮ ತಮ್ಮ ಕೃತಿಗಳಿಂದ ಪಡೆದ-ಅನುಭವಗಳ ಫಲವಾಗಿದೆ. ಇದು ಅವರ ಹಾಗೂ ಸಮಾಜ ಸ್ಥಿತಿಯ ನೈತಿಕ ಸ್ಥಿತಿಯ ಅರಿವು ಅವರಿಗೆ ಕಲಿಸಿಕೊಟ್ಟ ಪಾಠವೇ ಆಗಿದೆ. ಈ ದೃಷ್ಟಿಯಿಂದ, ಕಾದಂಬರಿಯ ತಂತ್ರ ಮುಖ್ಯ ಹಾಗೂ ಒಟ್ಟು ಚರ್ಚೆಯು ಅಲ್ಲಿ ಪ್ರಸ್ತಾಪವಾಗುವ ನೈತಿಕ ನಿಲವುಗಳ ಸುತ್ತವೇ ನಡೆಯುತ್ತದೆ.

ಜಾನಕಿಯೊಂದಿಗಿನ ರಾಮನಾಥನ ದಾಂಪತ್ಯದಲ್ಲಿ ನಮಗೆ ಕಾಣುವುದು ಅವನ ಪರಿಶುದ್ಧ ಪ್ರೇಮದ ಹುಚ್ಚು ಅಭಿವ್ಯಕ್ತಿ. ಇದು ತಾರುಣ್ಯದ ಸಹಜ ವರ್ತನೆ. ಸಾಹಿತ್ಯದ ಓದಿನಿಂದ ರಾಮನಾಥ ಬೆಳೆಸಿಕೊಂಡ ರಸಿಕತೆ, ವಿವೇಕ, ಸೊಗಸಾದ ಜೀವನದ ಕಲ್ಪನೆಗಳು–ಈ ದಾಂಪತ್ಯದ ರುಚಿಯನ್ನೂ ಸೊಗಸನ್ನೂ ಹೆಚ್ಚಿಸಿವೆ. ವಿವಾಹಬಾಹಿರ ಸಂಬಂಧದ ಕಡೆಗೆ ನಿಜವಾದ ಪ್ರೇಮವುಳ್ಳ ದಂಪತಿಗಳಿಗೆ ಒಲವು ಇರಬೇಕಾದುದೇ ಇಲ್ಲ. ರಾಮನಾಥನ ಒಲವು ಅಂಥಿಂಥ ಕಡೆಗೆ ಹರಿಯಲಾರದಂತೆ ಜಾನಕಿ ಅವನನ್ನು ತನ್ನ ಸಹಜ ಪ್ರೀತಿಯಲ್ಲಿ ಬಂಧಿಸಿದ್ದಾಳೆ. ಈ ಒಲವಿನ ಬಿಗಿತದಲ್ಲಿ ಆತ ಸುಖಿಯಾಗಿ ಸುರಕ್ಷಿತವಾಗಿದ್ದಾನೆ. ಪ್ರೀತಿಯ ಜತೆಗೆ ಹೆಂಡತಿಯಿಂದ ಗಂಡ ಅಪೇಕ್ಷಿಸುವುದು ವಿಶ್ವಾಸಾರ್ಹತೆಯನ್ನು. ಜಾನಕಿ ಇದನ್ನು ಕೊಟ್ಟಿರುವ ಬಗೆಯಲ್ಲಿ ಜಾಣ್ಮೆಯಾಗಲಿ, ಪ್ರಯತ್ನಶೀಲತೆಯಾಗಲಿ ಇಲ್ಲ. ಆಕೆ ಅಷ್ಟಾಗಿ ಕಲಿತಿರದ, ಸಂಪ್ರದಾಯಶೀಲ ಹೆಣ್ಣು. ರಾಮನಾಥನಿಗೆ ಅವಳು ಮೌಲಿಕವಾಗಿರುವುದು ಅವಳಲ್ಲಿರುವ ಏಕೋಭಾವದ ತಿಳುವಳಿಕೆಯಿಂದ. ಜಾನಕಿಯ ಈ ನಿಷ್ಕಲ್ಮಶ ಏಕೋಭಾವವು ರಾಮನಾಥನೊಬ್ಬನಿಗೇ ಅಲ್ಲ, ಈ ಕಾದಂಬರಿ ಪ್ರತಿಪಾದಿಸುವ ಜೀವನದ ಮೌಲಿಕ ಅಂಶವಾಗಿ, ಮುಂದಾಗುವ ಕತೆಯ ನೆಲೆಗಟ್ಟಾಗಿಯೂ ಸ್ಥಾನ ಭದ್ರಪಡಿಸಿಕೊಳ್ಳುತ್ತದೆ.

ಜಾನಕಿಯ ಅಕಾಲಿಕ ಸಾವು ರಾಮನಾಥನನ್ನು ಕೆಲಕಾಲ ಜೀವನೋತ್ಸಾಹ ದಿಂದ ತಡೆಹಿಡಿದರೂ ಕ್ರಮೇಣ ಅವನ ತಾರುಣ್ಯದ ಪ್ರವೃತ್ತಿ ಇನ್ನೊಂದು ಸಂಬಂಧ (ದೈಹಿಕ ಸಾಂಗತ್ಯ)ಕ್ಕೆ ಹಾತೊರೆದುದು ಸ್ವಾಭಾವಿಕ. ಮೋಡಿಮಾಡ ಬಲ್ಲ ಅವನ ಮಾತುಗಾರಿಕೆ, ಆಸಕ್ತಿ ಕೆರಳಿಸಬಲ್ಲ ಬುದ್ಧಿವಂತಿಕೆ, ಹರಯದ ಸೊಗ ಸುಗಾರಿಕೆ-ವಿದ್ಯಾವತಿಯನ್ನು ಅವನೆಡೆ ಸೆಳೆದುದು ಸಹಜ. ಆಕೆಯ ಅಂದಗಾರಿಕೆ, ತನ್ನೊಂದಿಗೆ ಸುಲಭವಾಗಿ ಬೆಳೆಸಿದ ಸಲಿಗೆ, ಇವಿಷ್ಟೇ ರಾಮನಾಥನಿಗೆ ಸಾಕಾಗು ತ್ತವೆ. ಇಬ್ಬರೂ ಮುಂಬೈಯ ಪ್ರಚೋದನಕಾರಿ ವಾತಾವರಣದ ನಡುವೆ ಆರ್ಥಿಕ, ಸಾಮಾಜಿಕ ಸ್ವಾತಂತ್ರ್ಯದ ಉದ್ದೀಪನೆಯಲ್ಲಿ ರಿಜಿಸ್ಟರ್ಡ್ ದಂಪತಿಗಳಾ ಗುತ್ತಾರೆ. ಒಬ್ಬರನ್ನೊಬ್ಬರು ಅರಿಯುವ, ಅರಿತು ತಪ್ಪು-ಒಪ್ಪುಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವ ಅವಕಾಶವಿದ್ದರೂ ಇಬ್ಬರ ಗಮನಕ್ಕೂ ಅದು ತಾಕುವುದೇ ಇಲ್ಲ. ಸಂಪ್ರದಾಯದ ಗಾಢನಂಬಿಕೆ-ವಿಶ್ವಾಸಾರ್ಹತೆಯಾಗಲಿ, ಸ್ವಾತಂತ್ರ್ಯದ ಪೂರ್ವ ಅರಿವಿನ ಬೆಂಬಲವಾಗಲಿ ಇಲ್ಲದ ಈ ಸಂಬಂಧ, ಅವರನ್ನೇ ಮೂರ್ಖರನ್ನಾಗಿಸುವಷ್ಟು ಪೊಳ್ಳಾಗಿದೆ. ಈ ಸತ್ಯಾಂಶ ಗಮನಕ್ಕೆ ಬಂದಾಗ ಇಬ್ಬರೂ ಜೀವನದ ಹಾದಿಯಲ್ಲಿ ಸ್ವಲ್ಪಾದರೂ ಕ್ರಮಿಸಿರುತ್ತಾರೆ. ಬೇರೊಂದು ಬಗೆಯ (ತಮ್ಮ ಮನೋ-ಬುದ್ಧಿಗೆ ತಕ್ಕಂತಹ) ಜೀವನ ಮಾದರಿಗೆ ಬದಲಾಯಿಸ ಲಾರದಷ್ಟು ಬಲಿತಿರುತ್ತಾರೆ.

ರಾಮನಾಥನಿಗೆ ಈ ಮೊದಲೆ ಛಬಿಯ ಸ್ನೇಹವಾದದ್ದು, ಹೆಣ್ಣಿನ ಸಹವಾಸದ ಕಡೆ ಅವನ ಮನಸ್ಸು ತೀವ್ರವಾಗಿ ತುಡಿಯತೊಡಗಿದಾಗ. ಛಬಿಯ ಮೋಹಕ ಮರಾಠೀ ಮಾತುಗಾರಿಕೆ, ಮುಚ್ಚುಮರೆಯಿಲ್ಲದ ಲವಲವಿಕೆಯ ವರ್ತನೆಗಳಿಂದ ರಾಮನಾಥ ಪ್ರಚೋದಿತನಾಗಿದ್ದಾನೆ. ತನ್ನ ಆಸೆ ತೋಡಿಕೊಳ್ಳುವ ತವಕದಲ್ಲಿರು ವಾಗಲೇ, ಛಬಿಯಿಂದ ಬಂದ ಪ್ರತಿಕ್ರಿಯೆ ಅವನನ್ನು ಮಾರ್ಪಡಿಸುತ್ತದೆ. ಛಬಿಗೆ ರಾಮನಾಥನ ಬಗ್ಗೆ ಆಸೆಯ ದೃಷ್ಟಿ ಇಲ್ಲ. ಅವನು ತನ್ನೊಬ್ಬ ಹತ್ತಿರದ ಬಂಧು ಎಂದೇ ನಂಬಿದ್ದಾಳೆ. ರಾಮನಾಥನಿಗೆ ತನ್ನ ಮೇಲಿರುವ ಆಸೆಯನ್ನವಳು ವಿಷಾದಕ್ಕೆಡೆ ಇಲ್ಲದಂತೆ ನಿವಾರಿಸುತ್ತಲೇ ಅವನನ್ನು ಗೆಲ್ಲುತ್ತಾಳೆ. "ತಪ್ಪು ಮಾಡಿ ದರೂ ಅದನ್ನು ಒಪ್ಪಿಕೊಂಡ ಮೇಲೆಯೇ ಅಲ್ಲವೆ, ಸಾಮಾನ್ಯರೂ ಮಹಾತ್ಮರಾಗು ವುದು!" ಅವಳಲ್ಲಿರುವ ಈ ಅಗಾಧ ತಿಳುವಳಿಕೆಯು ರಾಮನಾಥನಲ್ಲಿ ಬೆರಗು ಹುಟ್ಟಿಸುವುದರೊಂದಿಗೆ ಗಂಡು-ಹೆಣ್ಣಿನ ನಡುವೆ ಇರಬಲ್ಲ ಶುದ್ಧಸಂಬಂಧದ ಕಲ್ಪನೆಯನ್ನೂ ಕೊಡುತ್ತದೆ.

'ಎರಡನೆಯ ಸಂಬಂಧ'ದ ಅರ್ಥವನ್ನು ಸ್ವಲ್ಪ ಹಿಗ್ಗಿಸಿ ನೋಡುವ ಒಂದು ಅವಕಾಶವೂ ನಮಗಿಲ್ಲಿ ಸಿಗುತ್ತದೆ. ರಾಮನಾಥನು ಛಬಿಯೊಂದಿಗೆ ಬೆಳೆಸುವ

ಸೋದರಿ ಸಹಜ ವಾತ್ಸಲ್ಯದ ಈ ಸಂಬಂಧದಲ್ಲಿ ಗಂಡಿನ ಏಕಾಕಿತನ, ಹತಾಶ ಸ್ಥಿತಿಗಳಿಗೆ,ಹೆಣ್ಣು ಕೊಡುವ ಸಾಂತ್ವನ, ಧೈರ್ಯ ಎಷ್ಟು ಮೌಲಿಕವಾದುದೆಂಬ ಅರಿವು ಎದ್ದು ಕಾಣುತ್ತದೆ. ವಿದ್ಯಾವತಿ, ಮುಂಬಯಿ ನಾಗರಿಕ ಹೆಣ್ಣಿನ ಒಂದು ನಿಷ್ಠುರ ಮುಖ ತೋರಿಸಿದರೆ, ಭಜೆಯು ಆ ಬೃಹತ್ ನಗರದಲ್ಲಿ ಮಾನವೀಯತೆಯೆ ಮಾಯವಾಗುತ್ತಿರುವುದರ ಗಭೀರ ಹಿನ್ನೆಲೆಯಲ್ಲಿ ತೋರುವ ಕಳಕಳಿ, ಕಾಳಜಿ ಹೆಣ್ಣಿನ ಇನ್ನೊಂದು ನಿಜವಾದ ಮುಖವನ್ನು ತೋರಿಸುತ್ತಾಳೆ. ಜಾನಕಿಯಲ್ಲಿ ರಾಮನಾಥ ಕಂಡುಕೊಂಡಿದ್ದ ವಿವೇಕ ಭಜೆಯಲ್ಲಿ ಮರುಕಳಿಸಿದೆ. ವಿದ್ಯಾವತಿ ಯಲ್ಲಿ ವಿಪರೀತದ ಮಟ್ಟಕ್ಕೆ ಹೋಗಿರುವ ಸ್ವಾತಂತ್ರ್ಯ-ಸ್ವೇಚ್ಛೆಯ ಹಂಬಲ ಭಜೆಯಲ್ಲಿ ಕಾಣುವದೇ ಇಲ್ಲ. ಗಂಡಿನೊಂದಿಗೆ ಅವಳು ಬೆಳೆಸುವ ಸಲಿಗೆ ಆ ಗಂಡಿನ ಬೆಳವಣಿಗೆಗೆ ಪೋಷಕವಾಗುವಷ್ಟು ಹಿತ-ಮಿತವಾದ ರೀತಿಯಲ್ಲಿದೆ. ಭಜೆಯ ಬಗ್ಗೆ ಈ ಮುಂಚೆ, ಒಬ್ಬ ಸಾಮಾನ್ಯ ಗಂಡಿನಂತೆ ವಾಸನೆಯನ್ನು ಅವ್ಯಕ್ತ ಅನುಭವಿಸಿದ್ದ ರಾಮನಾಥ, ಕ್ರಮೇಣ ಆಕೆಯನ್ನು ಒಬ್ಬ ಸೋದರಿಯಾಗಿ ಸ್ವೀಕರಿಸುತ್ತಾನೆ. ವಿದ್ಯಾವತಿಯ ವಿರಸ ಸಂಬಂಧದಿಂದಾಗಿ ಸ್ತಿಮಿತ ತಪ್ಪುತ್ತಿದ್ದ ಅವನ ಮನಸ್ಥಿತಿಗೆ ಹದ ತಂದು ಕೊಡುವ ಭಜೆ ಸ್ನೇಹದ ನೈಜ ಮೌಲ್ಯವನ್ನು ಪ್ರತಿಪಾದಿಸುತ್ತಾಳೆ.

ವಿದ್ಯಾವತಿಯ ಜೊತೆ ರಾಮನಾಥನ ಮೊದಲ ಭೆಟ್ಟಿ, ಪರಿಚಯದ ಪ್ರಸಂಗ; ಅವರಿಬ್ಬರ ಸಲಿಗೆ ಅವಸರವಸರವಾಗಿ ಬೆಳೆದು ಪ್ರೇಮಬಂಧನದಲ್ಲಿ ಬಿಗಿದು ಕೊಳ್ಳುವ ಸನ್ನಿವೇಶಗಳು ಕಾದಂಬರಿಯಲ್ಲಿ ರಸಪೂರ್ಣ ವಾತಾವರಣ ಸೃಷ್ಟಿಸಿವೆ. ಮುಂಬೈಯ ಯಾಂತ್ರಿಕ ಜೀವನದ ಅನಿವಾರ್ಯ ಪರಿಣಾಮವಾಗಿ ಈ ಸಂಬಂಧ ಧಿಡೀರನೆ ಕುದುರುತ್ತದೆ. ಜಾನಕಿಯ ಪರಿಶುದ್ಧ ಪ್ರೇಮದ ಸಂಸ್ಕಾರವಿದ್ದರೂ, ಆರಾಮವಾಗಿ ಲಭ್ಯವಾದ ವಿದ್ಯಾವತಿಯ ಎರಡನೆಯ ಸಂಬಂಧದಲ್ಲಿ ರಾಮನಾಥ ಯಾವ ಸಂಕೋಚಕ್ಕೂ ಒಳಗಾಗುವದಿಲ್ಲ. ಅವನ ವಯೋಧರ್ಮ ಪ್ರೇಮ, ದಾಂಪತ್ಯದ ಮೌಲ್ಯಗಳ ಬಗ್ಗೆ ಯೋಚನೆಗೇ ಅವಕಾಶ ನೀಡುವದಿಲ್ಲ. ವಿವಾಹಕ್ಕೆ ಮೊದಲಿನ ಆ ಸ್ವಲ್ಪೇ ದಿನಗಳ ಒಡನಾಟದಲ್ಲಿ ವಿದ್ಯಾವತಿಯ ಸ್ವತಂತ್ರ, ನಿರ್ಭೀತ, ಜಾಣತನದ ರಸಿಕ ಮಾತುಗಳಿಂದ ಆಕರ್ಷಿತನಾಗಿದ್ದ ರಾಮನಾಥ, ಮದುವೆಯ ನಂತರ 'ಹೆಂಡತಿ'ಯಾಗಿ ಅವಳು ತನ್ನ ಬಳಿಯೇ ಬಂದಾಗ ಆಕರ್ಷಣೆ ಕಳೆದುಕೊಂಡು ಬಿಡುತ್ತಾನೆ. ಇದಕ್ಕೆ ಕಾರಣ: ಅವನಲ್ಲಿಯ ಅಪರಿಪಕ್ವತೆ, ಸ್ವಾರ್ಥಪ್ರೇರಿತ ಗಂಡಸಿನ ಬುದ್ಧಿ. ನಂಬಿ ಬಂದ ವಿದ್ಯಾವತಿಗೆ, ತನ್ನದಿದು ಎರಡನೆಯ ಸಂಬಂಧವೆಂದು ಹೇಳುವಷ್ಟು ಧೈರ್ಯ, ಪ್ರಾಮಾಣಿಕತೆ ಇಲ್ಲದ ರಾಮನಾಥ ಅವಳಿಂದ ಪ್ರತಿಯಾಗಿ ಶುದ್ಧಪ್ರೇಮ, ವಿಶ್ವಾಸಾರ್ಹ ದಾಂಪತ್ಯಸುಖ ಅಪೇಕ್ಷಿಸುತ್ತಾನೆ. ಅವಳಿಗಿರುವ ಆರ್ಥಿಕ ಸ್ವಾತಂತ್ರ್ಯ

ವನ್ನು ಅಲಕ್ಷಿಸಿ, ತಾನು ಗಂಡನೆಂಬ ಒಂದೇ ಹಕ್ಕಿನಿಂದ ಆಕೆಯನ್ನು ಪೂರ್ಣ ಹಿಡಿತದಲ್ಲಿಟ್ಟುಕೊಳ್ಳುವ ರಾಮನಾಥನ ಪ್ರಯತ್ನವೇ ದುರ್ಬಲವಾಗಿದೆ. ಇದನ್ನು ಬಹುಬೇಗ ಅರ್ಥಮಾಡಿಕೊಂಡ ವಿದ್ಯಾ,ಮದುವೆಯನ್ನು ಒಂದು ಪವಿತ್ರ ಸಂಬಂಧ ಎಂದು ಅರ್ಥವಿಸದೆ ಅದೊಂದು ಸಾಮಾನ್ಯ ದೈಹಿಕ ಸುಖಾಭಿಲಾಷೆಯ ಒಪ್ಪಂದ ಎಂದೇ ಸಾಧಿಸುತ್ತಾಳೆ. ಹೆಂಡತಿಯಾದವಳ ಈ ಹಗುರ ನಿಲುವು ಸಹಿಸುವ ಶಕ್ತಿ ರಾಮನಾಥನಿಗಿಲ್ಲ. ಅವನ ಮುಖ್ಯ ದೌರ್ಬಲ್ಯವಿರುವುದು ಆತ ರೂಪಿಸಿಕೊಂಡಿರುವ ಭಾವುಕತೆಯಲ್ಲಿ. ಅದು ಭ್ರಮನಿರಸನಕ್ಕೆ ಒಯ್ದಂತೆ ರಾಮನಾಥ ಹತಾಶನಾಗುತ್ತಾನೆ; ಅಸಹಾಯಕನಾಗಿ ಉಳಿಯುತ್ತಾನೆ.

ವಿದ್ಯಾವತಿ ದೂರದ ಮುಂಬೈಗೆ ಬಂದು ನೌಕರಿ ಮಾಡುತ್ತಲೇ ತನ್ನದೇ ಒಂದು ಪ್ರತ್ಯೇಕ ವ್ಯಕ್ತಿತ್ವ ರೂಪಿಸಿಕೊಂಡ ಕನ್ನಡ ಹುಡುಗಿ ತನ್ನ ಸೌಂದರ್ಯ, ಪ್ರತಿಭೆ, ಆಕಾಂಕ್ಷೆಯ ಬಗ್ಗೆ ಅವಳಿಗೆ ನಿಚ್ಚಳ ಅರಿವಿದೆ. ವ್ಯಕ್ತಿತ್ವವನ್ನು ಹಿಗ್ಗಿಸಿಕೊಳ್ಳಬೇಕೆಂಬ ಮನೋಭಾವ ಅವಳಲ್ಲಿ ಬೆಳೆದದ್ದು ರಾಮನಾಥನ ಸಂಬಂಧ ಬರುವ ಮೊದಲೇ. ತನ್ನ ಸ್ವಾತಂತ್ರ್ಯದ ಹಂಬಲಕ್ಕೆ ರಾಮನಾಥ ಅಡ್ಡಿಯೆಂದೇ ಅವಳು ಈಗ ತಿಳಿದುಕೊಂಡಿದ್ದಾಳೆ. ಜೊತೆಗೆ ತನ್ನ ಒಡನಾಟದಲ್ಲಿ ಬೇಸರಗೊಂಡ ರಾಮನಾಥ ಮಗ್ಗುಲ ಮನೆಯ 'ಚೆಲ್ಲು' ಹುಡುಗಿ ಛಬಿಯೊಂದಿಗೆ ಸ್ನೇಹ ಬೆಳೆಸಿರುವುದು; ತನ್ನ ಸುಖ-ದುಃಖಗಳನ್ನು ಅವಳೊಂದಿಗೆ ಹಂಚಿಕೊಳ್ಳುವುದು ವಿದ್ಯೆಗೆ ಅಪರಾಧವಾಗಿ ಕಾಣಿಸುತ್ತದೆ. ಅವಳು ತನ್ನ ಸ್ವೇಚ್ಛಾಚಾರಕ್ಕೆ ಗಂಡನ ಈ ದೌರ್ಬಲ್ಯಗಳನ್ನು ನೆಪವಾಗಿ ಒಡ್ಡುತ್ತಾಳೆ. ರಾಮನಾಥನನ್ನು ಹಿಂಸಿಸುವ ಬುದ್ಧಿಪೂರ್ವಕ ಪ್ರಯತ್ನ ಆಕೆಯಲ್ಲಿ ಈ ತನಕ ಇದ್ದಿಲ್ಲ. ಆದರೆ ರಾಮನಾಥ ಒಂದು ದುರ್ಬಲ ಕ್ಷಣದಲ್ಲಿ ಮೊದಲನೆಯ ಸಂಬಂಧವನ್ನು ನೆನಪಿಸಿದಾಗ ಅವಳಲ್ಲಿ ಅವನ ಬಗ್ಗೆ ಸ್ಪಷ್ಟವಾದ ವಿರೋಧ ಹುಟ್ಟುತ್ತದೆ. ಗಂಡ-ಹೆಂಡಿರ ನಡುವಿನ ಸಂಬಂಧ ಸಾಪೇಕ್ಷವಾದುದೆಂಬ ತೀರ್ಮಾನಕ್ಕೆ ಅವಳು ಬಂದದ್ದು ಸಹಜವೂ ಆಗಿ ತೋರುತ್ತದೆ ಈಗ. ವಿದ್ಯೆಯ ಈ ಮಾರ್ಪಾಡನ್ನು ಸಹಿಸಿಕೊಳ್ಳುವ ಶಕ್ತಿಯಾಗಲಿ, ಆಕೆಯನ್ನು ಅದರಿಂದ ಪರಾವೃತ್ತಗೊಳಿಸುವ ನೈತಿಕ, ಬೌದ್ಧಿಕ ಶಕ್ತಿಯಾಗಲಿ ರಾಮನಾಥನಲ್ಲಿ ಉಳಿಯುವದಿಲ್ಲ. ತಾನೇ ತನ್ನ ಕೈಯಾರೆ ಏರ್ಪಡಿಸಿಕೊಂಡಿರುವ ಈ ವಿಷಮ ಸಂಬಂಧದಲ್ಲಿ ಆತನೀಗ ತೊಳಲಾಡಬೇಕು; ಆತ್ಮಮರುಕಕ್ಕೆ ಈಡಾಗಬೇಕು. ಇದು ರಾಮನಾಥನ ದುರವಸ್ಥೆ. ಛಬಿ, ಈ ಹೊತ್ತಿನಲ್ಲಿ ಅವನಿಗೆ ಜೀವನದ ಬಗ್ಗೆ ಕಹಿಭಾವನೆ ಮೂಡದಂತೆ, ಒಂದು ಹದಕ್ಕೆ ತರುತ್ತಾಳೆ. ಕೈಹಿಡಿದ ಹೆಣ್ಣಿನಿಂದ ತನಗೊದಗಿದ ವಿಷಮ ಪರಿಸ್ಥಿತಿಯ ಸಂಕಟದಿಂದ ಪಾರಾಗಲು, ರಾಮನಾಥ ಛಬಿಯಂಥ ಗೆಳತಿಯ ತಿಳುವಳಿಕೆಯ ಬೆಳಕನ್ನು ಆಶ್ರಯಿಸುತ್ತಾನೆ. ಈ ದೃಷ್ಟಿ

ಯಿಂದಲೂ ಭಜಿಯೊಂದಿಗಿನ ಅವನ ಒಡನಾಟ 'ಎರಡನೆಯ ಸಂಬಂಧ'ಕ್ಕಿರುವ ಧ್ವನ್ಯರ್ಥವನ್ನು ವಿಸ್ತರಿಸುವಂತಿದೆ.

ಗಂಡು-ಹೆಣ್ಣಿನ ಸಂಬಂಧದ ಸೂಕ್ಷ್ಮಗಳ ಬಗ್ಗೆ ವಿದ್ಯಾವತಿಗೆ ಸ್ಪಷ್ಟ ತಿಳುವಳಿಕೆಯೂ ಇಲ್ಲ; ಅನುಭವದ ಬೆಂಬಲವೂ ಇಲ್ಲ. ಆಕಾಶವಾಣಿಯ ನಾಟಕದ ತಾಲೀಮಿನಲ್ಲಿ ಪರಿಚಿತರಾದ ರಾವ್ ದಂಪತಿಗಳ ಅನ್ಯೋನ್ಯ ಸಂಬಂಧ ನೋಡಿದಾಗ ಅವಳಿಗೆ ದಾಂಪತ್ಯದ ಒಂದು ಆದರ್ಶ ಮಾದರಿಯ ಕಲ್ಪನೆ ಅರಿವಿಗೆ ಬರುತ್ತದೆ. ಗಂಡನ ಲೋಪ-ದೋಷಗಳನ್ನು ಹೆಂಡತಿಯಾದವಳು ಹೇಗೆ ತಿದ್ದಬಹುದು; ಅವನೊಂದಿಗೆ ಸಹಕರಿಸಿ, ಪ್ರೀತಿಯನ್ನು ಹೆಚ್ಚಿಸಬಹುದು ಎಂಬುದಕ್ಕೆ ಒಳ್ಳೆಯ ಸೂಚನೆಗಳು ಈ ಪ್ರಸಂಗದಲ್ಲಿ ಸಿಗುತ್ತವೆ. ಆದರೂ ವಿದ್ಯಾ, ರಾಮನಾಥನನ್ನು ಗೌಣವಾಗಿ ಪರಿಗಣಿಸುತ್ತಾಳೆ. ಆತ ತನ್ನ ವಿಷಯದಲ್ಲಿ ಬಗೆದುದು ವಿಶ್ವಾಸದ್ರೋಹ; ಅದ್ದರಿಂದ ಕ್ಷಮಾರ್ಹವಲ್ಲವೆಂದೇ ಆಕೆ ತೀರ್ಮಾನಿಸಿದ್ದಾಳೆ. ರಾಮನಾಥನ ತಪ್ಪನ್ನು ಭೂತಗನ್ನಡಿಯಲ್ಲಿ ನೋಡುತ್ತ ತನ್ನ ತಪ್ಪು ಹಾದಿಯನ್ನಾಕೆ ಸಮರ್ಥಿಸಿಕೊಳ್ಳುತ್ತಿರುವುದನ್ನು ಮುಂದುವರಿಸುತ್ತಾಳೆ. ಹೀಗಿದ್ದರೂ ವಿದ್ಯಾ ಮನುವಿನೊಂದಿಗಾಗಲಿ, ತನ್ನನ್ನು ಆಶಿಸಿ ಬಂದ ರಾಜನ್‌ನೊಂದಿಗಾಗಲಿ, ವಿವಾಹಬಾಹಿರ ಸಂಬಂಧ ಬೆಳೆಸಿಲ್ಲವೆಂಬುದು ಕಾದಂಬರಿಯಲ್ಲಿ ಮೂಡಿರುವ ಬೆರಗಿನ ಬೆಳವಣಿಗೆ. ಗಂಡಿನಂತೆ ಹೆಣ್ಣು ಕೆಡುವುದು ಸುಲಭವಲ್ಲ ಎಂಬ 'ಶುದ್ಧದೃಷ್ಟಿ' ಕಾದಂಬರಿಕಾರರಿಗಿರುವಂತಿದೆ. ತಾನು ಕೆಟ್ಟಿಲ್ಲವಾದ್ದರಿಂದಲೇ ವಿದ್ಯೆಗೆ ರಾಮನಾಥ ಎಸಗಿದ ಕೆಡುಕು ಅಗಾಧವಾಗಿ ಕಾಣುತ್ತದೆ. ರಾಮನಾಥ ಅವಳನ್ನು ಸಂತೈಸುವಲ್ಲಿ ಸೋಲುತ್ತಾನೆ. ಯಾವ ಬುದ್ಧಿವಂತಿಕೆಯನ್ನೂ ಆತ ತೋರದೇ ಉಳಿಯುತ್ತಾನೆ. ದುರಂತ ನಾಯಕನಂತೆ ಅವನದು ತೊಳಲಾಟದ ಸ್ಥಿತಿಯಾಗುತ್ತದೆ. ರಾಮನಾಥ, ಗಂಡಾಗಿ ಎಸಗುವ ತಪ್ಪಿಗೆ ಪ್ರತಿಯಾಗಿ ತಾನೂ ತನ್ನ ಸಾಮರ್ಥ್ಯ ತೋರಿಸದೆ ಉಳಿಯಬಾರದೆನ್ನುವ ಹಟ ವಿದ್ಯೆಯಲ್ಲಿ ಬೆಳೆಯುತ್ತಿದೆ. ಹೆಣ್ಣಿನ ಸ್ವಾತಂತ್ರ್ಯದ ಇತಿ-ಮಿತಿಯನ್ನು ಪರೀಕ್ಷಿಸಿ ನೋಡುವ ಎದೆಗಾರಿಕೆ ಆಕೆಯಲ್ಲಿ ಕಾಣುತ್ತದೆ. ಮುಂಬಯಿಯ ವಿಶಾಲ ಅವಕಾಶಗಳು ಅವಳ ಎದೆಗಾರಿಕೆಗೆ ಆಹ್ವಾನ ಒಡ್ಡುತ್ತವೆ.

ರಾಮನಾಥನಿಂದ ವ್ಯಗ್ರಗೊಂಡು ಹೊರ ಹೋರಗೇ ಅಲೆದಾಡುವ ವಿದ್ಯಾವತಿ, ಸ್ನಾನದ ಸಾಬೂನಿನ ಜಾಹಿರಾತಿಗೆ 'ರೂಪದರ್ಶಿ'ಯಾಗಿ ಹಣ, ಹೆಮ್ಮೆ ಗಳಿಸುತ್ತಾಳೆ. ಸಿನಿಮಾ ನಟಿಯೂ ಆಗಬೇಕೆಂಬ ತವಕದಿಂದ ಶೂಟಿಂಗ್ ನಡೆಯುವ ಸ್ಟುಡಿಯೋ ಸಂದರ್ಶಿಸುತ್ತಾಳೆ. 'ಆಕಾಶವಾಣಿ'ಯ ಒಂದು ನಾಟಕದಲ್ಲಿ ವೇಶ್ಯೆಯ ಪಾತ್ರಕ್ಕೆ ಧ್ವನಿ ಒದಗಿಸುತ್ತಾಳೆ. ಪ್ರತಿಷ್ಠೆಯ ಮರೆತದಲ್ಲಿ ಅವಳಿಗೆ ರಾಮನಾಥನ ಇರವು ಮತ್ತೂ ಗೌಣವಾಗಿ ಕಾಣುತ್ತದೆ. ರಾಜನ್ ಎಂಬ ಸಿನಿಮಾ ಮನುಷ್ಯನ

ಜೆನ್ನುಹತ್ತಿ ಸಿನಿಮಾದಲ್ಲಿ ಪಾತ್ರ ಗಿಟ್ಟಿಸಲೇಬೇಕೆಂದು ಮುಂಬಯಿಯ ಬೀದಿಬೀದಿಯಲ್ಲಿ ಅಲೆದಾಡುವಾಗ ವಿದ್ಯೆಗೆ ಭ್ರಮಾಲೋಕದಲ್ಲಿ ವಿಹರಿಸುತ್ತಿರುವ ಸುಖ. ಆಕೆಯ ಮಹತ್ವಾಕಾಂಕ್ಷೆಯ ಭ್ರಮೆ ಮತ್ತು ಅಸಹಾಯಕತೆ, ಒಬ್ಬಂಟಿತನಗಳನ್ನು ರಾಜನ್‌ನಂತಹನು ಯಾಕೆ ಉತ್ತೇಜಿಸುತ್ತಿದ್ದಾನೆಂಬ ಅರಿವು ಆಕೆಗೆ ಬಹುಬೇಗ ಆಗಿಬಿಡುತ್ತದೆ ಬೆಂಕಿಯಲ್ಲಿ ಸುಟ್ಟುಕೊಳ್ಳುವ ಮೊದಲೆ ವಿದ್ಯಾ ಅದರಿಂದ ಪಾರಾಗಿರುತ್ತಾಳೆ. ಮನೆ, ಗಂಡ-ಇವರೇ ಭ್ರಮನಿರಸನಗೊಂಡ ತನಗೆ ಆಧಾರವೆಂದು ಆಕೆ ಹಿಂದಿರುಗಿದಾಗ ಮನೆಯಲ್ಲಿ ಅಪೇಕ್ಷಿಸಿದ್ದು–ರಾಮನಾಥನ ಆತ್ಮೀಯ, ರಸಿಕತೆಯ ಪ್ರತಿಕ್ರಿಯೆಯನ್ನು. ಆದರೆ ತನ್ನ ಮಂಚದ ಮೇಲೆ ರಾಮನಾಥನ ಮಗ ಮೋಹನ ಮಲಗಿದ್ದುದು; ತಾನಿಲ್ಲದಾಗ ಛಬೆ, ಆ ಮಗುವನ್ನು ಓಲೈಸುತ್ತಿರುವುದು ವಿದ್ಯಾವತಿಯ ವ್ಯಗ್ರತೆಯನ್ನು ಹೆಚ್ಚಿಸುತ್ತದೆ. ರಾಮನಾಥನ ವಿಶ್ವಾಸದ್ರೋಹ, ಅರಸಿಕತೆ – ಎಲ್ಲವನ್ನೂ ಭರ್ತ್ಸನೆಯ ಮಾತುಗಳಿಂದ ತಿವಿಯುತ್ತಾಳೆ. ಅಪಮಾನ, ಆಪಾದನೆಗಳಿಂದ ಕೆರಳಿದ ರಾಮನಾಥ ಆಕೆಗೆ ಹೊಡೆದುದೇ ಒಂದು ದೊಡ್ಡ ನೆಪ; ವಿದ್ಯಾವತಿ, ಗಂಡ, ಮನೆ, ತನ್ನ ಕೌಟುಂಬಿಕ ಹೊಣೆ ಎಲ್ಲ ಧಿಕ್ಕರಿಸಿ ಪುಣೆಗೆ ಓಡುತ್ತಾಳೆ.

ರಾಮನಾಥ – ವಿದ್ಯಾವತಿಯರು ತಮ್ಮ ತಮ್ಮ ಆಸೆ, ಆಕಾಂಕ್ಷೆ, ಮನಸ್ಥಿತಿಗಳ ಇತಿ, ಮಿತಿಯನ್ನು ಪರಸ್ಪರ ಅರ್ಥಮಾಡಿಕೊಳ್ಳುವ ಯಾವ ಪ್ರಯತ್ನವನ್ನೂ ಮಾಡುವುದಿಲ್ಲ. ಬಿರುಕು ಹೆಚ್ಚಿಸುವ ಪ್ರವೃತ್ತಿಗಳನ್ನೇ ತೋರಿಸುತ್ತಾರೆ. ಕಾದಂಬರಿಯಲ್ಲಿ ರಾಮನಾಥನ ಒಳಕುದಿತ, ದೌರ್ಬಲ್ಯ, ಅದನ್ನು ಗೆಲ್ಲುವ ಅವನ ಸಹನೆ – ವಿಶ್ಲೇಷಣೆಗೊಂಡ ರೀತಿ ಆಕರ್ಷಕವಾಗಿದೆ. ಅವನಿಗೆ ಸಿಕ್ಕಿರುವಷ್ಟು ಈ ವಿಶ್ಲೇಷಣೆಯ ಅವಕಾಶ, ವಿದ್ಯಾವತಿಯ ಮನಸ್ಸಿನ ಇಂಗಿತಗಳಿಗೆ ದೊರಕಿಲ್ಲದಿರುವುದೇ ಕಾದಂಬರಿಯ ಮುಖ್ಯ ಮಿತಿ. ಅನುಭವದ ಸೋಲು, ನೋವು ರಾಮನಾಥನನ್ನು ಕ್ರಮೇಣ ದೌರ್ಬಲ್ಯದಿಂದ ಗಟ್ಟಿತನಕ್ಕೆ ಒಯ್ಯುತ್ತದೆ. 'ಎರಡನೆಯ ಸಂಬಂಧ'ದಲ್ಲಿಯ ಮಾನವೀಯ, ವ್ಯಾವಹಾರಿಕ ತೊಡಕುಗಳಿಂದ ಪಾಠ ಕಲಿತಿರುವ ಆತ, ಶಾರದೆಯನ್ನು ಮದುವೆಯಾಗುವ ಅವಕಾಶವನ್ನು ತಪ್ಪಿಸಿಕೊಂಡು ಬಿಡುವದರಲ್ಲಿ ತೋರಿಸುವ ವಿವೇಕ; ಮೋಹನನನ್ನು ಧಾರವಾಡದಿಂದ ಮುಂಬೈಗೆ ಕರೆತರುವಲ್ಲಿಯ ಹೊಣೆಗಾರಿಕೆ ಅವನ ಪ್ರಬುದ್ಧ ನಡವಳಿಕೆಗಳು. ಈ ತರದ ವ್ಯಕ್ತಿತ್ವ ರೂಪುಗೊಳ್ಳಲು ಛಬೆಯೇ ಮುಖ್ಯ ಕಾರಣ. ಜಾನಕಿಯ ಹಾಗೆ ವಿದ್ಯಾವತಿಯೂ ತನ್ನನ್ನು ಭಾವುಕ ದೃಷ್ಟಿಯಿಂದಲೇ ಪರಿಭಾವಿಸಬೇಕೆಂದು ರಾಮನಾಥ ಅಪೇಕ್ಷಿಸುತ್ತಾನೆ. ತನ್ನ ಈ ಅಪೇಕ್ಷೆಗೆ ಪ್ರತಿಯಾಗಿ ತಾನು ವಿದ್ಯೆಯನ್ನು ಪ್ರಭಾವಿಸಿದ್ದ ರೀತಿಯಾದರೂ ಎಂತಹದೆಂಬುದನ್ನಾತ ಯೋಚಿಸುವುದಿಲ್ಲ. ಸಂಪೂರ್ಣ ಬದಲಿಗೊಂಡ ಈ ದಾಂಪತ್ಯ ವ್ಯವಹಾರದಲ್ಲಿ ಪ್ರೀತಿ – ವಿಶ್ವಾಸ

ಗಳ ಜತೆಗೆ, ಪರಸ್ಪರ ಸ್ವಾತಂತ್ರ್ಯ - ಗೌರವಗಳೂ ತೊಡಗಿಕೊಂಡಿರುವುದರ ಅರಿವನ್ನು ಆತ ಭಬೆಯಿಂದ ಪಡೆಯುತ್ತಾನೆ. ಕೊನೆಗೂ ಈ ವಿಚಿತ್ರ ಗಂಡ ಹೆಂಡಿರ ಅವಿವೇಕತನವನ್ನು ಕೊನೆಗಾಣಿಸಿ ಅವರಿಬ್ಬರೂ ಮಾನಸಿಕವಾಗಿ ಸೋತ ಕ್ಷಣ ಗಳಲ್ಲಿ ಒಂದುಗೂಡಿಸಿ ಸಫಲಳಾಗುತ್ತಾಳೆ ಭಬೆ.

೪

ಎನ್ಕೆಯವರ ಸಾಹಿತ್ಯ ಕೃತಿಯ ಆರಂಭದ ದಶಕದಲ್ಲಿ ಬಂದ 'ಎರಡನೆಯ ಸಂಬಂಧ', ಅವರೊಬ್ಬ ಸಮರ್ಥ ಕಾದಂಬರಿಕಾರರಾಗಬಲ್ಲರೆಂಬುದಕ್ಕೆ ಉತ್ತಮ ಪುರಾವೆ ಒದಗಿಸುವಂತಿದೆ. ಕನ್ನಡ ಕಾದಂಬರಿಯು ಅನಕೃ, ಕಾರಂತ, ತ.ರಾ.ಸು. ನಿರಂಜನ, ಇನಾಂದಾರರಂಥ ಬರಹಗಾರರಿಂದ ವೈವಿಧ್ಯಮಯ ಬದುಕಿನ ಅನುಭವ ಗಳ ಕಡೆಗೆ ಚಾಚುತ್ತಿದ್ದ ಐವತ್ತನೆಯ ಆ ದಶಕದಲ್ಲಿ ಎನ್ಕೆಯವರು ಕೌಟುಂಬಿಕ ವೆನ್ನಬಹುದಾದ ಈ ಕಾದಂಬರಿಯಲ್ಲಿ ಸಾಮಾಜಿಕ ಹಾಗೂ ನಗರ ಪ್ರಜ್ಞೆಯ ವಿಶಿಷ್ಟ ಅನುಭವಗಳನ್ನು ಪ್ರಸ್ತಾಪಿಸಿದ್ದು ಗಮನಾರ್ಹ. ಕಾದಂಬರಿಯ ಬದುಕು ಸಂಕೀರ್ಣವಾಗಲು ಇಲ್ಲಿಯ ಅನುಭವ-ವಲಯಗಳು ವೈವಿಧ್ಯಮಯವಾಗಿರುವುದೇ ಕಾರಣ. ಸ್ವಾತಂತ್ರ್ಯೋತ್ತರದಲ್ಲಿ ಬದಲುಗೊಂಡ (ಕತೆಯ ಸನ್ನಿವೇಶಗಳು ಸ್ವಾತಂತ್ರ್ಯದ ಪೂರ್ವದ್ದಾಗಿದ್ದರೂ) ಸಾರ್ವಜನಿಕ ಜೀವನದಲ್ಲಿ ಗಂಡು-ಹೆಣ್ಣಿನ ಪರಿಸ್ಥಿತಿಗಳನ್ನು ಎನ್ಕೆ ತೆರೆದ ಕಣ್ಣಿನಿಂದ ನೋಡಿ ಚಿತ್ರಿಸಿದ್ದಾರೆ. ಧಾರವಾಡ, ಮುಂಬೈ ಇವೆರಡೂ ಕಡೆಗಳಲ್ಲಿ ಓಡಾಡುವ ಕಥೆಯ ಸನ್ನಿವೇಶಗಳು ಕಣ್ಣಿಗೆ ಕಟ್ಟು ವಷ್ಟು ವಾಸ್ತವವಾಗಿವೆ: ಮೋಹಕವಾಗಿವೆ. ಭಬೆಯ ಪಾತ್ರ ಒಂದು ಆದರ್ಶವಾಗಿ ಅನುಭವಕ್ಕೆ ಬಂದರೂ, ಅವಳ ಅಸ್ತಿತ್ವಕ್ಕೆ ವಾಸ್ತವತೆ ಮತ್ತು ಸಹಜತೆಯನ್ನು ಒದಗಿಸಲು ಎನ್ಕೆಯವರು ಆಕೆ ಬರುವ ಸನ್ನಿವೇಶಗಳಲ್ಲಿ ಮರಾಠೀ ಆಡುಮಾತನ್ನು ಬಳಸಿರುವ ತಂತ್ರ ಕಾದಂಬರಿಯನ್ನು ಹೆಚ್ಚು ಅಥೆಂಟಿಕ್ ಗೊಳಿಸಿದೆ. ಎನ್ಕೆಯವರು ನಮ್ಮ ಒಳ್ಳೆಯ ನಾಟಕಕಾರರಲ್ಲಿ ಒಬ್ಬರು. ಅವರ ನಾಟಕೀಯ ಶೈಲಿಯ ಸೊಗಸು ಈ ಕಾದಂಬರಿಯ ಹಲವು ಸನ್ನಿವೇಶಗಳಲ್ಲಿ ವ್ಯಕ್ತವಾಗಿದೆ.

ವಿರಹಿ ರಾಮನಾಥನ ಮನಸ್ಸು ಮುಂಬೈಯ ವಿಲಾಸೀ ಜೀವನಕ್ಕೆ ಪಕ್ಕಾಗು ವುದಕ್ಕೆ ಪ್ರಚೋದನೆ ನೀಡುವ ಸನ್ನಿವೇಶಗಳ ಮಾದಕತೆಯನ್ನು; ವಿದ್ಯಾವತಿ ಬೆರಗಿನಿಂದ ದಿಟ್ಟಿಸುವ ಸಿನಿಮಾ ಪ್ರಪಂಚದ ದೃಶ್ಯಗಳನ್ನು, ಆಕಾಶವಾಣಿ ಕಾರ್ಯ ಕ್ರಮದ ಸರಸ ಸನ್ನಿವೇಶಗಳನ್ನು ಚಿತ್ರಿಸುವಲ್ಲಿ ಎನ್ಕೆಯವರ ಬರವಣಿಗೆ, ಒಬ್ಬ ಪಳಗಿದ ಕಾದಂಬರಿಕಾರನ ಶಕ್ತಿ-ಯುಕ್ತಿಯನ್ನು ನಿದರ್ಶಿಸುತ್ತದೆ. ಕಾದಂಬರಿಗೆ ರುಚಿ ಬರುವುದು ಬರಿ ಅದರ ಕುತೂಹಲ ಬೆಳೆಸುವ ಗುಣದಿಂದಲ್ಲ; ಕಾದಂಬರಿಕಾರ ತನ್ನ ವಸ್ತುವಿನ ಅರ್ಥವಿಶ್ಲೇಷಣೆ ಎಂಥೆಂಥ ಸಜೀವ, ಸಹಜ ಸನ್ನಿವೇಶಗಳನ್ನು ಅದರಲ್ಲಿ ಮೂಡಿಸುತ್ತಾನೆಂಬುದರಿಂದ. ಮುಂಬೈ ನಗರದ ಸ್ವಾನುಭವಗಳನ್ನು

ಎನ್ಕೆಯವರು ಸಾರ್ಥಕವಾಗಿ ಬಳಸಿಕೊಂಡಿರುವದರಿಂದ 'ಎರಡನೆಯ ಸಂಬಂಧದ' ವಸ್ತುವಿನ ಬಂಧಕ್ಕೆ ನಿಜವಾಗಿಯೂ ಬಲ ಬಂದಿದೆ. ವಿಶ್ವಾಸಾರ್ಹತೆ ಹೆಚ್ಚಿದೆ.

ಕಾದಂಬರಿಯ ಕೊನೆಕೊನೆಯಲ್ಲಿ ಬರವಣಿಗೆಯು ಅವಸರದ ಜಾಡನ್ನು ಅನುಸರಿಸಿದಂತೆ ತೋರುತ್ತದೆ. ತನ್ನ ಹೆಣ್ತನದ ಮಿತಿಯು ಅರಿವಾಗುವಂತಹ ಯಾವ ನಿಷ್ಠುರ ಅನುಭವವೂ ವಿದ್ಯಾವತಿಗೆ ಬರುವುದೇ ಇಲ್ಲ. ಕೇವಲ ವಿಚಾರ ಮಂಥನ, ನೋಟ, ವಕೀಲರ ಹಿತವಚನ ಇಷ್ಟರಿಂದಲೇ ವಿದ್ಯಾ ತಾನು ಅನುಸಂಸಿದ್ದ ಸ್ವೇಚ್ಛೆಯ ಹಾದಿಯಿಂದ ಪರಾವೃತ್ತಳಾಗುತ್ತಾಳೆ. ಮೋಹನನ ಸಾವಿನ ಪ್ರಸಂಗ ಕಾದಂಬರಿಯ ಕಥೆಯನ್ನು ಎಷ್ಟು ತೀವ್ರಗೊಳಿಸಬೇಕಿತ್ತೋ ಅಷ್ಟು ತೀವ್ರಗೊಳಿಸುವುದಿಲ್ಲ. ಅಗಲಿದ ದಂಪತಿಗಳನ್ನು ಒಂದುಗೂಡಿಸುವುದಕ್ಕೆ ಸುಲಭವಾಗಿ ಕಂಡುಕೊಂಡ ಭಾವುಕ ಪರಿಹಾರ-ಸೂತ್ರವಾಗಿ ಅದು ಬರುತ್ತದೆ. ಹೀಗಾಗಿ, ಕಾದಂಬರಿಯ ಒಟ್ಟು ಧ್ವನಿಯು ವೈಚಾರಿಕ ವಿಶ್ಲೇಷಣೆಯ ಫಲವಾಗಿ ಹೊಮ್ಮದೇ ಭಾವುಕತೆಯನ್ನೇ ಆಶ್ರಯಿಸಿ ನಿಲ್ಲುತ್ತದೆ.

# 'ವೈನಿ'

ಡಿ. ಕೆ. ಜೋಶಿ

ಎನ್ಕೆ ಅವರು ಬರೆದಿರುವ ನೂರು ಮಹತ್ವದ ಕೌಟುಂಬಿಕ ಕಾದಂಬರಿಗಳಲ್ಲಿ 'ವೈನಿ'ಯೂ ಒಂದು. ಇದು ಪಾತ್ರಗಳ ಮಾನಸಿಕ ಸಂಘರ್ಷವನ್ನು ಚಿತ್ರಿಸುವ ವೈಶಿಷ್ಟ್ಯಪೂರ್ಣ ಕೃತಿ. ಅದರಲ್ಲಿಯೂ 'ವೈನಿ' (ಶಾಂತಾಬಾಯಿ), ಅತ್ತಿಗೆ-ಮೈದುನರ ಮಧುರ ಸ್ಮೃತಿಚಿತ್ರ. ಹಾಗೂ ಪತಿ-ಪತಿಗಳಾಗಬೇಕೆಂದು ಸವಿ ಕನಸು ಕಾಣುತ್ತಿದ್ದ ವತ್ಸಲೆ-ಬಿಂದಣ್ಣರು ಅತ್ತಿಗೆ-ಮೈದುನರಾಗಿ ಬಾಳಬೇಕಾದಾಗ ಅವರು ಅನುಭವಿಸುವ ಆಂತರಿಕ ಜೀವನದ ತೀವ್ರ ಉದ್ವೇಗದ ಉರಿ, ಹೊಯ್ದಾಟ, ತುಮುಲ ಯಾರ ಹೃದಯವನ್ನೂ ಮಿಡುಕಿ ಮುತ್ತಿ ಕರಗಿಸುತ್ತವೆ. ಇದೇ ಲೇಖಕರ 'ಎರಡನೆಯ ಸಂಬಂಧ' ಎಂಬ ಕಾದಂಬರಿಯ ಶೈಲಿಯಂತೆ, 'ವೈನಿ' ಕಾದಂಬರಿಯ ಶೈಲಿಯೂ ಸರಸವಾದದ್ದು. ಇದರ ವಾತಾವರಣ ನಿರ್ಮಿತಿಯ ಕಲೆ ಕುಶಲವಾದುದು. ವರ್ಣನೆ, ಸಂಭಾಷಣೆ, ಸನ್ನಿವೇಶಗಳಲ್ಲಿ ಈ ಕಾದಂಬರಿಕಾರರು ತೋರುವ ಸಂಯಮ ಯಾವಾಗಲೂ ಮೆಚ್ಚುವಂಥದಾಗಿದೆ.

'ವೈನಿ' ಕಾದಂಬರಿ ಭಾವಪೂರ್ಣವಾದ ಕೌಟುಂಬಿಕ ಕಾದಂಬರಿ. ಅದು ಮಧ್ಯಮವರ್ಗದ, ಅದರಲ್ಲಿಯೂ ಬ್ರಾಹ್ಮಣ ಕುಟುಂಬದ, ನಡೆ-ನುಡಿ- ಸಂಸ್ಕೃತಿಯನ್ನು ಸುಮಾರು ೩೦ ವರ್ಷಗಳ ಹಿಂದಿನ ಆಚಾರ-ವಿಚಾರಗಳನ್ನು ಸೊಗಸಾಗಿ ಪ್ರತಿಬಿಂಬಿಸುತ್ತದೆ. ಕಾದಂಬರಿಯ ಕಥಾವಸ್ತು ಚಿಕ್ಕದಾದರೂ ಮನಮೋಹಕವಾದ ವಿವರಣೆಗಳಿಂದ, ಕಾದಂಬರಿಯ ಸುಂದರ ಲಲಿತವಾದ ಘಟನಾರೂಪಿ ಬಳಿಗಳಿಂದ ಹರವಾಗಿ ಹಬ್ಬಿನಿಂತಿದೆ. ನಾಲ್ಕುನೂರೈವತ್ತು ಪುಟದ ಈ ಕಾದಂಬರಿಯಲ್ಲಿ ಅನೇಕ ಘಟನೆಗಳು, ಅನೇಕ ಆಕಸ್ಮಿಕಗಳು, ಪಾತ್ರಗಳು ಸಾರ್ಥಕವಾಗಿ ಬಂದಿವೆ.

ಈ ಕಾದಂಬರಿಯ ತಂತ್ರವು ವೈಶಿಷ್ಟ್ಯಪೂರ್ಣವಾಗಿದೆ. ಕಥಾನಾಯಕ ಮತ್ತು ನಾಯಕಿಯರ ಭಾವನೆಗಳು, ಕಾದಂಬರಿಯ ಘಟನೆಗಳ ವಿವರಣೆ, ಅವುಗಳ ವಿಶ್ಲೇಷಣೆ, ಪ್ರಭಾವಗಳನ್ನು ಇಬ್ಬರ - ಬಿಂದಣ್ಣ-ವತ್ಸಲೆಯರ, ದಿನಚರಿ ಅಥವಾ ಡೈರಿ ಮುಖಾಂತರ ವಿವರಿಸಲಾಗಿದೆ. ಈ ನೂತನ ತಂತ್ರ ಹೆಚ್ಚು ಪರಿಣಾಮಕಾರಿಯಾಗಿ ಓದುಗರ ಮನಸ್ಸನ್ನು ಬಲವಾಗಿ ಸೆಳೆಯುತ್ತದೆ.

'ವೈನಿ' ಕಾದಂಬರಿಯ ಇನ್ನೊಂದು ವೈಶಿಷ್ಟ್ಯವೆಂದರೆ ಅದರ ನಾಯಕ ಇನ್ನೂ ಬಾಲಕನೂ ಅಲ್ಲದ ಪ್ರೌಢನೂ ಅಲ್ಲದ ಹದಿಮೂರು ಹದಿನಾಲ್ಕು ವರ್ಷದ ಎಳೆಯ. ಅತನ ಸಾಮಿಪ್ಯದಲ್ಲಿ ಬಂದ ಬಾಲಕಿ, ಅವಳು ಕೇವಲ ಹತ್ತು ವರ್ಷದ ಮುಗ್ಧೆ. ಜೀವನದ ಉಷಃಕಾಲದಲ್ಲಿ ಹೆಜ್ಜೆ ಇಡುತ್ತಿರುವವರು, ಅರಳುತ್ತಿರುವ ಮೊಗ್ಗುಗಳನ್ನು, ಹಾರಾಡುವ ದುಂಬಿಗಳನ್ನು, ರಂಗು-ರಂಗಿನ ಮಂಜಿನ ಹನಿಗಳನ್ನು ಕೌತುಕದಿಂದ ಕಾಣುವ ವಯಸ್ಸು. ಅಷ್ಟೇ ಕೌತುಕದಿಂದ ಅರಿಯಲಾಗದ ಮಧು ರಾಂತಃಕರುಣದಿಂದ, ಒಬ್ಬರನ್ನೊಬ್ಬರು ಕಾಣುವರು. ಪ್ರೇಮ-ಕಾಮ ಎಂಬ ವಿಚಾರಗಳನ್ನು ಅರಿಯದ ಮುಗ್ಧ ಕೋಮಲ ಜೀವಿಗಳು ಮೋಹಪಾಶಕ್ಕೆ ಸಿಲುಕಿ ಬಳಲಿದ ರೀತಿ ಎಂಥವರ ಕರುಳನ್ನೂ ಇರಿಯುವಂಥದ್ದು.

ಸುಸಂಸ್ಕೃತ ಸ್ವಭಾವದ ಮೃದು ಮನಸ್ಸಿನ ಎನ್ಕೆಯವರು ಈ ಕಾದಂಬರಿಯಲ್ಲಿ ಬಿಂದಣ್ಣನ ಪಾತ್ರದಲ್ಲಿ ತಮ್ಮ ಬಾಲ್ಯದ ಅನುಭವಗಳನ್ನೆಲ್ಲ ಆತ್ಮೀಯವಾಗಿ ಎರಕ ಹೊಯ್ದಿದ್ದಾರೆ ಏನೋ ಎನಿಸುವಷ್ಟು ಆ ಪಾತ್ರ ಜೀವಂತವಾಗಿದೆ. ಗದಗು-ಧಾರವಾಡದ ಸುತ್ತಲಿನ ಪರಿಸರ ಸ್ವಲ್ಪಮಟ್ಟಿಗೆ ಮುಂಬೈಯ ಜೀವನ ಅಂದಿನ ಮಧ್ಯಮ ವರ್ಗದ ಜೀವನಕ್ರಮವನ್ನು ಈ ಕಾದಂಬರಿ ಸಾದರವತ್ತಾಗಿ ಚಿತ್ರಿಸುತ್ತದೆ.

'ಎರಡನೆಯ ಸಂಬಂಧ'ದ ರಾಮನಾಥ – ಜಾನಕಿಯರ ಸವಿ ನೆನಪುಗಳಂತೆ ಬಿಂದಣ್ಣ–ವತ್ಸಲೆಯರ ನೆನಪುಗಳ ಚಿತ್ರ ಕಟುಮಧುರ, ಶೇಷಣ್ಣ ಹಾಗೂ ಅವನ ಪತ್ನಿ ಶಾಂತಾ ಅಸ್ವಸ್ಥ ಬಿಂದೂಮಾಧವನನ್ನು ಮರಳಿ ಗದುಗಿಗೆ ಕರೆದೊಯ್ಯಲು ಮುಂಬಯಿಯಿಂದ ರೈಲಿನ ಮೂರನೆಯ ವರ್ಗದ ಡಬ್ಬಿಯಲ್ಲಿ ಪ್ರಯಾಣ ಕೈಕೊಳ್ಳು ತ್ತಾರೆ. ಬಳಲಿದ ಶೇಷಣ್ಣ ಫಳಿಯ ಮೇಲೆ ಅಡ್ಡಾದರೆ, ವತ್ಸಲೆ ಹಾಗೂ ಬಿಂದೂ ಎದುರು ಬದುರು ಎರಡು ಕಿಟಕಿಯ ಮಗ್ಗುಲಿಗೆ ಕುಳಿತುಕೊಳ್ಳುತ್ತಾರೆ. ಅವರ ಮನಃಪಟಲಗಳ ಮೇಲೆ ಹಿಂದಿನ ಜೀವನ ಸ್ಮೃತಿಚಿತ್ರ ಸಿನೇಮಾ ಸುರುಳಿಯಂತೆ ಬಿಚ್ಚತೊಡಗುತ್ತದೆ ಅವರು ಒಬ್ಬರಿಗೊಬ್ಬರು ತಮ್ಮ ದಿನಚರಿಗಳನ್ನು ವಿನಿಮಯ ಮಾಡಿಕೊಂಡು, ಪ್ರಯಾಣದಗುಂಟ ಓದುತ್ತಾರೆ. ದಿನಚರಿಗಳ ಮೂಲಕ ೧೦ ವರ್ಷಗಳ ತಮ್ಮ ಸಿಹಿ–ಕಹಿ ಅನುಭವಗಳ ಕಥೆಗಳನ್ನು ನಿರೂಪಿಸುವ ಈ ತಂತ್ರ ಅತ್ಯಂತ ಸ್ವಾರಸ್ಯಕರವಾದುದು.

ಚಳಿಗಾಲದ ಒಂದು ರಾತ್ರಿ ಧಾರವಾಡದ ದತ್ತಾತ್ರೇಯ ಗುಡಿಯಲ್ಲಿ ನಡೆದ ಶಾಂತಕ್ಕನ ವಿವಾಹದ ಸಮಾರಂಭದ ವರ್ಣನೆಯಿಂದಲೇ ಕಾದಂಬರಿ ಹಾಗೂ ವತ್ಸಲೆಯ ದಿನಚರಿ ಪ್ರಾರಂಭವಾಗುತ್ತವೆ. ಕುತೂಹಲಕರ ಸನ್ನಿವೇಶ. ಹಳ್ಳಿಯ ಹುಡುಗನೊಬ್ಬ ಮೊದಲ ಸಲ ಪ್ಯಾಟೆಯ ಊರಿಗೆ ಬಂದಂತೆ ಅವನ ಮುಖಮುದ್ರೆ

ಗಳಿಗೆಗೊಮ್ಮೆ ತನ್ನ ಜರದ ಟೊಪ್ಪಿಗೆ ತೆಗೆಯುತ್ತ ಕೈಯಿಂದಲೇ ಕ್ರಾಪಿನ ಕೂದಲನ್ನು ಓರೆಗೆ ಸರಿಸಿಕೊಳ್ಳುತ್ತಿದ್ದ. ಬಹುಶಃ ಇದೇ ಮೊದಲ ಸಲ ಅವನು ಕ್ರಾಪು ಬಿಟ್ಟಿರಬೇಕು. ಇಲ್ಲಿಯ ವರ್ಣನೆಗಳು ತುಂಬ ವಾಸ್ತವಿಕ.

ಹದಿನಾಲ್ಕು ವರ್ಷದ ಬಿಂದಣ್ಣನಿಗೆ ಭರ್ಜರಿ ಮೂರು ದಿನಗಳ ಅಣ್ಣನ ಮದುವೆಯಲ್ಲಿ ವತ್ಸಲೆಯ ಸಹೋದರ ಜಯಣ್ಣನ ಪರಿಚಯ ಲಾಭವಾಗುತ್ತದೆ. ಅಲ್ಲಿ ಏನಾದರೂ ನೆಪ ಮಾಡಿಕೊಂಡು ಬೀಗರ ಮನೆಗೆ ಬಂದಾಗ, ವತ್ಸಲೆ ಕಣ್ಣಿಗೆ ಬೀಳುತ್ತಿರುತ್ತಾಳೆ. ಒಂದು ಕೋಲ್ಮಿಂಚಿನ ನೋಟ ಬೀರಿ ಮಾಯವಾಗು ತ್ತಿರುತ್ತಾಳೆ. ಅಂತೂ ಮದುವೆಯ ಸಂದರ್ಭದಿಂದ ಇಬ್ಬರಲ್ಲಿ ಆಕರ್ಷಣೆಯ ಮುಗುಳು ಬಿಡುತ್ತದೆ. ಬಾಲ್ಯಸಹಜವಾದ ಭಾವನೆಗಳು ಇಲ್ಲಿ ಅತ್ಯಂತ ವಾಸ್ತವಿಕ ವಾಗಿ ಮೂಡಿಬಂದಿದೆ.

ಈ ಮದುವೆಯ ಸನ್ನಿವೇಶದ ವರ್ಣನೆ ಅತ್ಯಂತ ಹೃದಯಂಗಮ. ಆ ಕಾಲದ (೧೯೫೩) ಬ್ರಾಹ್ಮಣರ ವಿವಾಹದ ಸಂಪ್ರದಾಯದ ವರ್ಣನೆ, ಗಂ. ಭಾ. ಕಮಲಕ್ಕ (ಬಿಂದಣ್ಣನ ತಾಯಿ) ಹಾಗೂ ರಿಂದಕ್ಕ (ವತ್ಸಲೆಯ ತಾಯಿ) ಬೀಗಿತ್ತಿಯರು, ಗಂ. ಭಾ. ಸುಂದರಕ್ಕ, ಸೌ. ಗೋದಕ್ಕ (ಶೀನಣ್ಣನ ಹೆಂಡತಿ) ಮೊದಲಾದ ಹಿರಿಯ ಬಂಧುಗಳು ಪರಸ್ಪರ ಸುಖದುಃಖ ಹಂಚಿಕೊಂಡು (ಕಾದಂಬರಿಯ ಉದ್ದಕ್ಕೂ) ಸಹಕರಿಸುವ ಮಾನವೀಯತೆಯ ಚಿತ್ರ ಅತ್ಯಂತ ಮನೋಜ್ಞ.

ಇಬ್ಬರ ನಡುವಿನ ಪ್ರೀತಿಯ ಮುಗುಳು ಚಿಗುರೊಡೆಯಲು ಬಹಳ ದಿನ ಬೇಕಾಗುವದಿಲ್ಲ. ಮುಂದೆ ಸ್ವಲ್ಪೇ ದಿನಗಳಲ್ಲಿ ಬಿಂದಣ್ಣ ಇನ್ನು ಧಾರವಾಡಕ್ಕೆ ಬರುತ್ತಾನೆ. ಆಗ ಅವರು ಇನ್ನೂ ಹತ್ತಿರವಾಗುತ್ತಾರೆ. ಮುಂದೆ ಬರಬರುತ್ತ ಬಿಂದಣ್ಣ ತನ್ನ ಹೃದಯದಲ್ಲಿ ತೆರವಾದ ಅವ್ವನ ಸ್ಥಾನವನ್ನು ಅತ್ತಿಗೆಗೆ ಸಂಪೂರ್ಣ ವಾಗಿ ಕೊಟ್ಟುಬಿಡುತ್ತಾನೆ. ಅಂದಿನಿಂದ ಬಿಂದನಿಗೆ ವೈನಿ ಅಂದರೆ ಕೇವಲ ಅತ್ತಿಗೆ ಯಾಗಿ ಮಾತ್ರ ಉಳಿಯುವದಿಲ್ಲ, ಅವನ ಸರ್ವಸ್ವವೂ ಆಗುತ್ತಾಳೆ.

ಕಾದಂಬರಿಯ ಪೂರ್ವಭಾಗದಲ್ಲಿ ಅತ್ತಿಗೆ-ಮೈದುನರ ಸಂಬಂಧ, ಮಾತೃ-ಪ್ರೇಮ, ಮುಂಜಿವೆ ಕಾಲದಲ್ಲಿ ಮಾತೃಭೋಜನ ಸಂದರ್ಭದಲ್ಲಿ ಬಿಂದಣ್ಣನಿಗೆ ವೈನಿ ಅಕ್ಕರತೆಯಿಂದ ಉಣ್ಣಿಸುವ ಕೋಮಲಾಂತಃಕರಣದ ಸಹಜ ವರ್ಣನೆಯ ದೃಶ್ಯ ಗಳು ಮಾದರಿಯ ಚಿತ್ರಗಳಾಗಿವೆ. ಕುಮಾರವ್ಯಾಸನ ಪ್ರಭಾವದಲ್ಲಿ ಬೆಳೆದಿರುವ ಕಾದಂಬರಿಕಾರ ಎನ್ಕೆಯವರದು ಹೆಂಗರುಳು. ತಿಳಿ ಹಾಸ್ಯದ ವಿಸ್ತೃತ ವರ್ಣನೆಗಳ ಅನೇಕ ಭಾಗಗಳು ಕಾದಂಬರಿಯುದ್ದಕ್ಕೂ ತುಂಬಿವೆ.

ಅತ್ತಿಗೆಗೆ ಕ್ರಮೇಣ ಪರದೇಶಿಯಾದ ಬುದ್ಧಿವಂತನಾದ ಮೈದುನನಲ್ಲಿ ಅತಿ ಯಾದ ಮಮತೆ ಬೆಳೆಯುತ್ತದೆ. ತನ್ನ ತಮ್ಮ ಜಯಣ್ಣನಂತೆ ಬಿಂದಣ್ಣನನ್ನೂ

ಅಂತಃಕರಣಪೂರ್ವಕ ಪೋಷಿಸುತ್ತಾಳೆ. ಸಲಿಗೆಯಿಂದ ತನ್ನ 'ಮುಂಗಡಿ ಕೂಸು' ಎಂದೇ ಸಂಬೋಧಿಸುತ್ತಾಳೆ. ತಿಳಿಯದಂತೆ ಈಡೇರಿಸುತ್ತಾಳೆ. ಇಂಥ ಸಲಿಗೆ, ತಿರುಕ ಅಚ್ಚೆ ಕಂಡು ಶಾಂತಳ ಪತಿ ಶೇಷಣ್ಣನು ಸ್ವಂತ ತಮ್ಮನ ವಿಷಯದಲ್ಲಿ ಅಸೂಯೆ ಪಡುತ್ತಾನೆ. ಮೊದಲೇ ಗಂಭೀರ ಸ್ವಭಾವದ ಶೇಷಣ್ಣನಿಗೆ ಅತ್ತಿಗೆ ಮೈದುನರ ಹುಡುಗಾಟಿಕೆ, ಸಲಿಗೆ ಸೇರುವದಿಲ್ಲ. ಹೀಗಾಗಿ ಅವನು ಹೆಂಡತಿಯೊಡನೆ ಸರಸ ದಿಂದ ಮಾತನಾಡುವದಿಲ್ಲ. ಪತಿಯ ಸಲ್ಮೆಯ ನುಡಿಗಳಿಂದ ಅವಳು ವಂಚಿತಳಾಗು ತ್ತಾಳೆ. ಅಷ್ಟೊಂದು ಅನುಕೂಲತೆಯಿಲ್ಲದ ಬಡ ಶೇಷಣ್ಣ ಮಾಸ್ತರ ಪಾಲಿಸಬಯು ಸುವ ಮಿತವ್ಯಯ, ಜೀನತನ, ಸ್ವನಿಯಂತ್ರಣ, ಸಿರಿವಂತ ಕುಟುಂಬದ ಉತ್ಸಾಹೀ ನವವಧು ಶಾಂತಳಿಗೆ ಅರ್ಥವಾಗುವದಿಲ್ಲವೇನೋ. ವಯಸ್ಸು, ಶಿಕ್ಷಣಗಳ ದೃಷ್ಟಿ ಯಿಂದ ಹಿರಿಯನಾದ ಸ್ವಾಭಿಮಾನಿ ಶೇಷಣ್ಣ ಪತ್ನಿಯೊಡನೆ ಬಿಗುವು-ದರ್ಪ ಗಳಿಂದಲೇ ವರ್ತಿಸುತ್ತಾನೆ. ಹೀಗೆ ಸತಿ-ಪತಿಗಳ ನಡುವಿನ ವಿರಸದ ಕಂದಕ ದಿನೇ-ದಿನೇ ಆಳವಾಗುತ್ತದೆ.

ಅಕ್ಕನ ಸಹಾಯಕ್ಕಾಗಿ ಮೇಲಿಂದಮೇಲೆ ಬರುತ್ತಿದ್ದ ವತ್ಸಲೆಯ ಪರಿಚಯ ಬಿಂದಣ್ಣನಿಗೆ ಹೆಚ್ಚುತ್ತಲೇ ಹೋಗುತ್ತದೆ. ಆದರೂ ಸಲುಗೆ ಹೆಚ್ಚು ಬೆಳೆಯುವದಿಲ್ಲ. ಏಕೆಂದರೆ ವತ್ಸಲೆ ದಿಟ್ಟ ಹುಡುಗಿ ಎನಿಸಿದರೂ ಗಂಭೀರೆ. ತನ್ನ ಮನೋಗತವನ್ನು ಎಲ್ಲಿಯೂ ಸುಲಭವಾಗಿ ಪ್ರಕಟಪಡಿಸುತ್ತಿರಲಿಲ್ಲ. ಹನ್ನೆರಡರ ಬಾಲಿಕೆಯಾದ ಅವಳಿಗೆ ಆ ವಯಸ್ಸಿಗೂ ಮೀರಿದ ತಿಳುವಳಿಕೆ ಕುಲೀನ ಮನೆತನದ ಸಂಪ್ರದಾಯ ವಾತಾವರಣದಲ್ಲಿ ಬೆಳೆದ ಅವಳು, ಅಕ್ಕನ ಮೈದುನ ಎಂಬ ಸಲುಗೆಯಿಂದ ಕೆಲವು ಸಲ ಗಳಿಬಿಳಿಯಿಂದ ವರ್ತಿಸಿದರೂ, ಕೆಲವು ಸಲ ಆ ವಯಸ್ಸಿನ ಸಹಜ ಗುಣವಾದ ನಾಚಿಕೆ ಹಿರಿಯ ಬಿಂದಣ್ಣನೊಡನೆ ವರ್ತಿಸಲು ಆತಂಕವೆನಿಸುತ್ತದೆ.

ಕಾಲೇಜ ಶಿಕ್ಷಣಕ್ಕೆಂದು ಧಾರವಾಡಕ್ಕೆ ಬಂದ ಬಿಂದಣ್ಣನು ತನ್ನ ಆರ್ಥಿಕ ಪರಿಸ್ಥಿತಿಯಿಂದಾಗಿ ಪಡುತ್ತಿರುವ ಬವಣೆಗಾಗಿ ವತ್ಸಲೆ ಮಮ್ಮಲ ಮರಗುತ್ತಾಳೆ. ಅವಳು ಅವ್ವನ ಸಹಾಯದಿಂದ, ಅಣ್ಣನ ಮಧ್ಯಸ್ಥಿಕೆಯಿಂದ ನಾನಾ ಪರಿಯಾಗಿ ಅವನಿಗೆ ಸಹಾಯ ಸಲ್ಲಿಸಿ ಉತ್ತೇಜನ ನೀಡುತ್ತಾಳೆ. ತನ್ನ ತಂದೆ,ಜಯಣ್ಣ,ಗಣೇಶನ ಹಬ್ಬದ ನಿಮಿತ್ತ ಕೋಟಿನ ಅರಿವೆ, ಶರ್ಟಿನ ಅರಿವೆ ಹೊಲಿಸಿದೊಡನೆ. ವತ್ಸಲೆ ಉಪಾಯದಿಂದ ಹಣ ಒದಗಿಸಿ ಜಯಣ್ಣನ ಸಹಕಾರದಿಂದ, ಪಾಪ ಬಿಂದಣ್ಣನಿಗೂ ಒಂದು ಶರ್ಟು ಹೊಲಿಸಿಕೊಡುತ್ತಾಳೆ.

ಬಿಂದಣ್ಣನಿಗೆ ಕಾಲೇಜಿನಲ್ಲಿ ಹೆಡ್ ಕ್ಲಾರ್ಕರಿಂದ ತಂತಿಯ ಸಂದೇಶ ದೊರೆಯು ತ್ತದೆ. ವೈನಿಯ ಸ್ಥಿತಿ ಸೀರಿಯಸ್ ಎಂದು ಅಣ್ಣ ಕಳಿಸಿದ ಸುದ್ದಿ ತಿಳಿದು, ಅವನು

ಕಳವಳದಿಂದ ಗಾಬರಿಯಾಗುತ್ತಾನೆ. ಅವನಿಗೆ ವೈನಿಯ ಗತಿ, ಅಣ್ಣನ ಗತಿ, ತನ್ನ ಕಾಲೇಜ ಗತಿ ಮೊದಲಾದ ವಿಚಾರ ವಿಪ್ಲವದ ತಿರುಗಣೆಯಲ್ಲಿ ಸಿಕ್ಕು ದಿಕ್ಕು ತೋಚದಂತಾಗುತ್ತದೆ. ಗದುಗಿನ ಬಳಿ ಸ್ಮಶಾನದಲ್ಲಿ ಉರಿಯುತ್ತಿರುವ ಹೆಣದ ದೃಶ್ಯ ನೋಡಿ ಭಯವಾಗುತ್ತದೆ. ಹೇಗೋ ರೈಲಿನಿಂದ ಇಳಿದು ಟಾಂಗಾದಲ್ಲಿ ಕುಳಿತು ತ್ರಿಕೂಟೇಶ್ವರ ಗುಡಿಯ ಹತ್ತಿರದ ಮನೆ ಮುಟ್ಟುತ್ತಾನೆ. ಮರಣದ ವಾರ್ತೆಯಿಂದ ಬಿಂದಣ್ಣನಿಗೆ ಆಘಾತವಾಗುತ್ತದೆ. ಪರಸ್ಪರ ಅಣ್ಣ-ತಮ್ಮಂದಿರ ನಡುವಿನ ಅಂತರ, ಕಟ್ಟು ಎಲ್ಲಾ ಕಳಚಿಕೊಂಡು ಎರಡೂ ಹೃದಯದ ತುಂಡುಗಳು ಒಂದು ಶೋಕಸಾಗರದಲ್ಲಿ ತೇಲಾಡುತ್ತವೆ.

ನಾಲ್ಕನೆಯ ದಿನ ರುದ್ರಭೂಮಿಯಲ್ಲಿ ವೈನಿಯ ಅಸ್ಥಿ ಆರಿಸುವಾಗ ಬಿಂದಣ್ಣನಿಗೆ ಛಳಿ ಒತ್ತರಿಸಿ ಬರುತ್ತದೆ. ಸೀತಿಮನೆಗೆ ಹೋಗಿ ಮರುದಿನ ಧಾರವಾಡಕ್ಕೆ ಬಂದರೂ ಜ್ವರ ಬಿಂದಣ್ಣನನ್ನು ಬಿಡುವದಿಲ್ಲ. ಚೀಟು, ಗುಳಿಗೆ ಹಾಕಿದರೂ, 'ವೈನಿ ಎಲ್ಲಿದ್ದಾಳೆ', 'ವೈನಿನ್ನ ನೋಡಲಿಲ್ಲಾ' ಎಂದು ಬಿಂದಣ್ಣ ರಾತ್ರಿಯೆಲ್ಲ ಬಡಬಡಿಸುತ್ತಾನೆ. "ಈಗ ಖರೇ ಪರದೇಶಿ ಆದ ನಮ್ಮ ಬಿಂದೂ. ಖರೇ ತಾಯಿನ್ನ ಕಳಕೊಂಡ. ಅತ್ತಿಗೆ-ಮೈದುನಾ ಅಂದರ ಖರೆ ತಾಯಿ-ಮಗಾ ಇದ್ದಾಂಗ ಇದ್ದರು" ಎಂದು ಶೇಷಣ್ಣ ಪರಿಪರಿಯಾಗಿ ದುಃಖಿಸುತ್ತಾನೆ. ಆದರೂ ಮಾವ 'ಹುಡುಗರ ಮಾರಿ ನೋಡಿ ಕಾಲಾ ಹಾಕಬೇಕು' ಎಂದು ಸಮಾಧಾನ ಮಾಡುವನು.

ನಿಜವಾಗಿಯೂ ತಬ್ಬಲಿಯಾದ ಬಿಂದಣ್ಣ ತಾಯಿ ತೀರಿಕೊಂಡಾಗಿನಕ್ಕಿಂತಲೂ ಹೆಚ್ಚು ಮನೋವ್ಯಥೆಯಿಂದ ಕೊರಗುತ್ತಾನೆ. ಆದರೆ ಆಗ ಅವನ ಮನಸ್ಸಿಗೆ ಸಹಾನುಭೂತಿ ತೋರಿಸುವ ವತ್ಸಲೆಯ ಸಾಮೀಪ್ಯ ಸ್ವಲ್ಪ ಸಮಾಧಾನ ನೀಡುತ್ತದೆ. ಶೇಷಣ್ಣ ಫೀ ಭರ್ತಿಮಾಡಲು ವೈನಿಯ ಕೈಯೊಳಗಿನ ಬಿಲ್ವಾರ ಒತ್ತಿ ಇಟ್ಟು, ತಮ್ಮನ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುತ್ತಾನೆ. ಬಿ. ಎ. ಕೊನೆಯ ವರ್ಷದ ವಿದ್ಯಾರ್ಥಿ ಬಿಂದಣ್ಣ ಈ ಸಲ ಬೀಗರ ಮನೆಯಲ್ಲಿಯೇ ಉಳಿಯುತ್ತಾನೆ. ಅಲ್ಲಿ ಪ್ರೀತಿಯ ವೈನಿಯ ಹಾಗೂ ಅಣ್ಣನ ಮಕ್ಕಳ ಸೇವೆಯನ್ನು ಮುಂದುವರಿಸುತ್ತಾನೆ. ಬಿಂದಣ್ಣ ಹಾಗೂ ವತ್ಸಲೆ ಮಕ್ಕಳನ್ನು ಅಕ್ಕರತೆಯಿಂದ ರಮಿಸುತ್ತಾರೆ. ಆ ಮಕ್ಕಳೂ ಅವರಿಬ್ಬರನ್ನು ಹಚ್ಚಿಕೊಳ್ಳುತ್ತವೆ. ಹೀಗಾಗಿ ಅವರಿಬ್ಬರೂ ಮಕ್ಕಳಿಂದಾಗಿ ಇನ್ನಷ್ಟು ಹತ್ತಿರವಾಗುತ್ತಾರೆ.

ಶೇಷಣ್ಣ ಮಾವ ಗೋಪಾಳರಾಯರೊಡನೆ ತನ್ನ ಸುಖ-ದುಃಖಗಳನ್ನು ಆಗಾಗ ಹಂಚಿಕೊಳ್ಳುತ್ತಾನೆ. ವತ್ಸಲೆಯನ್ನು ೪-೫ ಕಡೆಗೆ ತೋರಿಸಿದರೂ, ವರಾನ್ವೇಷಣೆಯಲ್ಲಿ ಯಾವ ಪ್ರಗತಿಯೂ ಕಂಡುಬರುವದಿಲ್ಲ. ಅಕ್ಕನಂತೆ ದುಂಡು-ದುಂಡಾದ ಸ್ಥೂಲ ಕಾಯದ ವತ್ಸಲೆ ವರಗಳಿಗೆ ಶೀಘ್ರ ಪಾಸುಬೀಳುವದಿಲ್ಲ. ವರ-

ದಕ್ಷಿಣೆಯ ಹಾವಳಿಯೂ ವಿಪರೀತ. ಇಂಥ ಅಸಹಾಯಕ ಸ್ಥಿತಿಯಲ್ಲಿ ಗೋಪಾಳರಾಯರು ಸ್ವಂತ ಪುತ್ರಿ ಶಾಂತಾಳ ಪರದೇಶಿ ಮಕ್ಕಳ ಹಿತರಕ್ಷಣೆಗಾಗಿಯೋ, ವಿಧಿಯ ವಿಲಾಸವೋ, ಎನ್ನುವಂತೆ ವತ್ಸಲೆಯನ್ನು ಶೇಷಣ್ಣ ಮಾಸ್ತರರಿಗೆ ಕೊಡಲು ನಿರ್ಧರಿಸುತ್ತಾರೆ. ಆದರೆ ವತ್ಸಲೆ ಹಾಗೂ ಬಿಂದಣ್ಣ ಪರಸ್ಪರ ಗಾಢವಾಗಿ ಪ್ರೀತಿಸಿ, ಮದುವೆ ಮಾಡಿಕೊಳ್ಳಲು ನಿರ್ಧರಿಸಿದ ವಿಷಯ ತಿಳಿಯದ ಶೇಷಣ್ಣನೂ ಮಾವನಿಗೆ ಒಪ್ಪಿಗೆ ನೀಡಿ, ತಮ್ಮನ ಬಳಿ ಬಂದು ಅವನನ್ನು ಪ್ರೀತಿಯಿಂದ ಹೊಟೆಲಿಗೆ ಕರೆದುಕೊಂಡು ಹೋಗಿ, ಉಪಹಾರ ಮುಗಿಸಿದ ನಂತರ ಎಡ್ವರ್ಡ್ ಪಾರ್ಕಿನಲ್ಲಿ ಕುಳಿತು ಮುಖ್ಯವಾಗಿ ಮಕ್ಕಳ ಹಾಗೂ ಅವನ (ತಮ್ಮನ) ಹಿತಕ್ಕಾಗಿ ಗೋಪಾಳರಾಯರ ಒತ್ತಾಯಕ್ಕಾಗಿ ಚಿರಪರಿಚಿತಳಾದ ವತ್ಸಲೆಯನ್ನು ತಾನು ವಿವಾಹ ಮಾಡಿಕೊಳ್ಳಬೇಕಾಗಿದೆ ಎಂದು ತಿಳಿಹೇಳುತ್ತಾನೆ. ಮತ್ತು ಜೇಷ್ಠಮಾಸದಲ್ಲಿ ವತ್ಸಲೆಯನ್ನು ವಿವಾಹ ಮಾಡಿಕೊಳ್ಳುತ್ತಾನೆ. ಯಾವ ವತ್ಸಲೆಯ ಸ್ಪರ್ಶದಲ್ಲಿ ಸಂಜೀವಿನಿ ಶಕ್ತಿಯಂಥ ಸ್ಫೂರ್ತಿ ಪಡೆದಿದ್ದನೋ, ಆ ಚಿಂತಾಮಣಿ ಕೈಯಿಂದ ಜಾರಿದುದರಿಂದ ಬಿಂದಣ್ಣನಿಗೆ ತೀವ್ರ ಆಘಾತವಾಗುತ್ತದೆ. ಈ ಅನಿರೀಕ್ಷಿತ ತಿರುವು ಕಾದಂಬರಿಯ ಕಥೆಯ ದುರಂತಕ್ಕೆ ಕೇಂದ್ರವಾಗಿದೆ.

ತನ್ನನ್ನು ಸಾಕಿ-ಸಲಹಿ ಸುಶಿಕ್ಷಿತನನ್ನಾಗಿ ಮಾಡಿದ ಅಣ್ಣನ ಮನಸ್ಸಿಗೆ ನೋವನ್ನು ಉಂಟುಮಾಡಲು ಬಿಂದಣ್ಣನಿಗೂ ಶಕ್ಯವಾಗುವದಿಲ್ಲ. ಕುಲೀನ ಮನೆತನದ ಸಂಪ್ರದಾಯಕ್ಕೆ ಅನುಗುಣವಾಗಿ ಹಾಗೂ ತಾನು ಬಿಂದಣ್ಣನೊಡನೆ ವಿವಾಹವಾಗುವೆನೆಂದು ಹೇಳಿದರೆ, ತಾನು ಮೊದಲೇ ಪ್ರೀತಿಸಿದ ಮೊದಲೇ ನಿರ್ಧರಿಸಿಕೊಂಡು ತಮ್ಮ ಆಜ್ಞೆ ಮೀರಿದ ಉದ್ಧಟೆ ಎಂದು ತಾಯಿ-ತಂದೆ ಎಲ್ಲಿ ತಪ್ಪು ತಿಳಿಯುವರೋ ಎಂಬ ಭಯ, ಭಕ್ತಿಗಳಿಂದ ಹಾಗೂ ಅಕ್ಕನ ಋಣ ತೀರಿಸಬೇಕೆಂದೋ ತ್ಯಾಗದಲ್ಲಿ ಸುಖವಿದೆ ಎಂಬ ಮೌಲ್ಯಕ್ಕಾಗಿಯೋ ವತ್ಸಲೆ ಆ ವಿವಾಹಕ್ಕೆ ತಲೆ ಬಾಗುತ್ತಾಳೆ. ಕಾದಂಬರಿಯ ಕಥೆಗೆ ಇಲ್ಲಿಂದ ಹೊಸ ತಿರುವು ಕೊಟ್ಟ ಈ ಘೋರ ದುರಂತ ಯಾರಿಗೂ ಮುಂದೆ ಸುಖ-ಶಾಂತಿಯನ್ನು ನೀಡುವದಿಲ್ಲ. ಇಂಥ ದುರಂತದಿಂದ ಎದ್ದ ಭೀಕರ ಕೋಲಾಹಲದ ಬಿರುಗಾಳಿಗೆ ಮಧುರ ಪ್ರೇಮಿಗಳಾದ ಬಿಂದಣ್ಣ ಹಾಗೂ ವತ್ಸಲೆಯರ ಮನಸ್ಸು ಘಾಸಿಯಾಗಿ, ಸೋಲುತ್ತವೆ.

ಆದರೂ ಸಂಪ್ರದಾಯನಿಷ್ಠಳಾದ ವತ್ಸಲೆ ಹೇಗೋ ಪತಿ ಶೇಷಣ್ಣನೊಡನೆ ಹೊಂದಿಕೊಳ್ಳುತ್ತಾಳೆ. ಮತ್ತು ಮೈದುನನಿಗೆ ತಮ್ಮ ಪ್ರೀತಿಯ ನಾಟಕ ಮುಗಿದ ಘಟನೆ, ಅದನ್ನು ಮರೆತು ಬಿಡೋಣ ಎಂದು ಬಿಂದಣ್ಣನಿಗೆ ಸರಿಯಾಗಿಯೇ ತಿಳಿಸಿ, ಎಚ್ಚರಿಸಿ, ಅವನ ಪ್ರಣಯಪತ್ರ ಹಿಂತಿರುಗಿಸಿ, ಪತಿಯೊಡನೆ ನಿಷ್ಠೆಯಿಂದ ಪವಿತ್ರಳಾಗಿ ನಡೆಯಲು ನಿರ್ಧರಿಸುತ್ತಾಳೆ.

ನಾನಿಕಾಕಾ : ಎನ್ಕೆಬರೆಹ/೩೩೧

ಮೊದಲನೆಯ ಹೆಂಡತಿಯ ದುರಂತದಿಂದ ಪಾಠ ಕಲಿತ ಶೇಷಣ್ಣ ವತ್ಸಲೆಯೊಡನೆ ಸ್ವಲ್ಪ ಮೃದುವಾಗಿ ಹೊಂದಿಕೊಳ್ಳಲು ಪ್ರಯತ್ನಿಸುತ್ತಾನೆ. ಒಂದು ಸಲ ವತ್ಸಲೆಗೆ ಬರೆದ ತಮ್ಮನ ಪ್ರಣಯ ಈ ಪತ್ರ ಅಣ್ಣನಿಗೆ ಸಿಕ್ಕು, ಅವನ ಕಣ್ಣನ್ನು ತೆರೆಯಿಸುತ್ತದೆ. ಅವನಿಗೆ ಈ ವಿಷಯ ತಿಳಿದು ಪಶ್ಚಾತ್ತಾಪವಾಗುತ್ತದೆ. ಅಂದೇ ರಾತ್ರಿ '(ಕುಂಕು) ಮುದುಕನ ಹೆಂಡತಿ' ಸಿನಿಮಾ ನೋಡಿ ಬಂದೊಡನೆ, ಅದರ ಪ್ರಭಾವದಿಂದಲೋ ಕಿರಿಯ ವಯಸ್ಸಿನ ಮುಗ್ಧ ವತ್ಸಲೆಗೆ ತನ್ನಿಂದ ಅನ್ಯಾಯವಾಯಿತಲ್ಲಾ ಎಂದು ಪರಿತಪಿಸಿ, ಅವಳಲ್ಲಿ ಕ್ಷಮೆ ಕೋರುತ್ತಾನೆ.

'ನೀವು ನನ್ನ ಚಿಕ್ಕ ವೈನಿ, ಚಿಕ್ಕ ಅತ್ತಿಗೆ, ಭಾಪೀ ತಾಯಿ, ನಾನು ನಿಮ್ಮ ಮುದಿ ಭಾವಜಿ' ಎಂದು ವತ್ಸಲೆಗೆ ಬಿಂದಣ್ಣ ಪತ್ರ ಬರೆದರೂ; ಅವನ ಚಂಚಲ ಮನಸ್ಸು ಹೊಯ್ದಾಡುತ್ತದೆ. ತಮ್ಮೀರ್ವರ ಪೂರ್ವಪ್ರಣಯದ ಉತ್ಕಟ ರಸ ಪ್ರಸಂಗಗಳನ್ನು ಮರೆಯಲು ಶಕ್ಯವಾಗುವದಿಲ್ಲ. ಕೊನೆಗೆ ಆ ಗುಂಗಿನಲ್ಲಿ ತನ್ನನ್ನು ಮರೆತು ಉದಾಸೀನನಾಗಿ ಸ್ವಲ್ಪ ಕಾಲ ವಿರಕ್ತಿ ತಾಳುತ್ತಾನೆ. ಏಕಾಂಗಿಯಾಗುತ್ತಾನೆ; ಯಾವಾಗಲೂ ಅಂತರ್ಮುಖಿಯಾಗಿ ವಿವೇಕಾನಂದರ ಆಧ್ಯಾತ್ಮಿಕ ಪುಸ್ತಕಗಳ ಲೋಕದಲ್ಲಿ ವಿಹರಿಸುತ್ತಾನೆ. ಆದರೂ ಮನಸ್ಸು ವತ್ಸಲೆಯ ವ್ಯಾಮೋಹಗಲ್ಲಿ ಸ್ವಾಧೀನ ತಪ್ಪಿ, ಅಣ್ಣ-ಅತ್ತಿಗೆಗೆ ದ್ರೋಹ ಮಾಡಬಾರದಲ್ಲಾ ಎಂದು ಕೊರಗಿ, ಎಂ. ಎ. ಶಿಕ್ಷಣ ಮುಂದುವರೆಸಬೇಕೆಂದು, ಅಣ್ಣ ಅತ್ತಿಗೆ ಬೇಡವೆಂದರೂ ನಿರಾಶೆಯಿಂದ ದೂರ ಮುಂಬೈಗೆ ಹೊರಟು ಹೋಗುತ್ತಾನೆ. ಅಲ್ಲಿ ಸಾಂಬನೊಡನೆ, ಅವಳ ಮಾಂಸಿಯ ಮನೆಯಲ್ಲಿ ನೆಲೆಸುತ್ತಾನೆ.

ಶೇಷಣ್ಣ ವತ್ಸಲೆಯನ್ನು ಲಗ್ನವಾದ ನಂತರ ಮೂವರ ಸ್ಥಿತಿಯೂ ಶೋಚನೀಯವಾಗುತ್ತದೆ. ಅಲ್ಲಿ ನಡೆಯುವ ದೃಶ್ಯಗಳು ಮನ ಮಿಡಿಯುತ್ತವೆ. ಪ್ರೇಮದ ದಾರಿ ಎಂದಿಗೂ ಸಮನಾಗಿರುವದಿಲ್ಲ. ನೋವು, ನಿರಾಶೆಗಳು ನಿರ್ಮಲ ಪ್ರೇಮಿಗಳನ್ನು ಪರೀಕ್ಷಿಸುತ್ತವೆಯೇನೋ, ಪ್ರೇಮದ ದಾರಿ ಎಷ್ಟು ದುರ್ಗಮ ಎಂಬುದು ಈ ಕಥೆಯಲ್ಲಿ ನಿರೂಪಿತವಾಗಿದೆ.

ವತ್ಸಲೆಯನ್ನು ಮರೆಯಬೇಕೆಂದು ಬಿಂದಣ್ಣ ಮುಂಬಯಿಗೆ ಬಂದರೂ, ಅಲ್ಲಿಯೂ ಅವನು ಇಬ್ಬರು ವತ್ಸಲೆಯರಿಗೆ ಮರುಳಾಗುತ್ತಾನೆ! ವತ್ಸಲೆ ಎಂಬ ಹೆಸರೇ ಈ ಭಗ್ನ ಹೃದಯದ ತರುಣನನ್ನು ಇಂದ್ರಜಾಲ ಬೀಸಿ ಮತ್ತೆ ಮತ್ತೆ ಮುಗಗೊಳಿಸುತ್ತದೆ. ಮೋಹದ ಬಿರುಗಾಳಿಗೆ ಬಲಿಯಾದಾಗಲೆಲ್ಲ. ಅವನ ದುರ್ಬಲ ಮನಸ್ಸು ಪ್ರಾಚೀನ ಪುರಾಣ – ಮಹಾಭಾರತ ವಿಕ್ಷಿಪ್ತ ದೃಷ್ಟಾಂತಗಳಿಂದ ತನಗೆ ಅನುಕೂಲವಾಗುವಂತೆ ಸಮರ್ಥನೆ ಮಾಡಿಕೊಳ್ಳುತ್ತದೆ.

ಅವನು ಸಂಸ್ಕೃತ ವಿಷಯದಲ್ಲಿ ಪ್ರವೇಶ ಪಡೆದು ಎಂ. ಎ. ಶಿಕ್ಷಣ ಮುಂದುವರಿಸುತ್ತಾನೆ.ಅಲ್ಲಿ ಅವನಿಗೆ ಗ್ರಂಥಾಲಯದಲ್ಲಿ ತನ್ನ ಸಹಪಾಠಿನಿ ಸಂಸ್ಕೃತ ಸ್ಕಾಲರ ಮಿಸ್ ವ್ಹಿ. ಎಸ್. ದೇಸಾಯಿಯ ಪರಿಚಯವಾಗುತ್ತದೆ. ಪರಸ್ಪರ ಪುಸ್ತಕ, ನೋಟ್ಸ್ ವಿನಿಮಯ ಮಾಡಿಕೊಳ್ಳುತ್ತ ಇಬ್ಬರೂ ಆತ್ಮೀಯರಾಗುವರು. 'ವತ್ಸಲೆ' ಯದು ಸುಸಂಸ್ಕೃತ ಮನೆತನ; ಅವಳ ತಂದೆ ಆಯ್. ಪಿ. ಎಸ್. ಆಫೀಸರ, ತಾಯಿಯೂ ಸಹೃದಯಿ. ಗಾಂವದೇವಿಯ ಅವರ ಮನೆಗೆ ಹೋದಾಗಲೆಲ್ಲ ಅವರು ಅವನನ್ನು ಆತ್ಮೀಯವಾಗಿ ಸ್ವಾಗತಿಸಿ ಉಪಹಾರ ಕೊಡುತ್ತಾರೆ. ವತ್ಸಲೆಯ ತಂದೆಯ ನೆರವಿನಿಂದ, ಕಷ್ಟಪಡುತ್ತಿದ್ದ ಬಿಂದಣ್ಣನಿಗೆ ರಾತ್ರಿಯ ಒಂದು ಶಾಲೆಯಲ್ಲಿ ೫೦ ರೂ. ಸಂಬಳದ ಶಿಕ್ಷನ ಕೆಲಸ ದೊರೆಯುತ್ತದೆ. ಕ್ರಮವಾಗಿ ಸರಳ ಹಾಗು ದಿಟ್ಟ ಸ್ವಭಾವದ ವತ್ಸಲೆಯೊಡನೆ ಅವನಿಗೆ ಸಲುಗೆ ಬೆಳೆಯುತ್ತದೆ. ಒಮ್ಮೆ ಎಲಿಫಂಟಾ ಕೇವ್ಸ್ ನೋಡಲಿಕ್ಕೆ ಅವಳ ಪರಿವಾರದೊಡನೆ ನೌಕೆಯಲ್ಲಿ ವಿಹರಿಸುತ್ತಾನೆ. ಬೋಟು ಹೊಯ್ದಾಡಿದಾಗ ವತ್ಸಲೆಯ ಭುಜ ಅವನ ಭುಜಕ್ಕೆ ತಾಗುತ್ತದೆ. ಆಗಾಗ ಮುಂಬಯಿಯ ಬೀಚಿನ ಮೇಲೆ ವಿಹರಿಸುತ್ತ, ಇಬ್ಬರೂ ಸಂಸ್ಕೃತ ಕವಿ ಕೃತಿಗಳ ರಸ ಪ್ರಸಂಗ ಕುರಿತು ಸ್ವಾರಸ್ಯಕರವಾಗಿ ಚರ್ಚಿಸಿ, ವಿಚಾರ ವಿನಿಮಯ ಮಾಡಿಕೊಳ್ಳುತ್ತಾರೆ.

ಬೆಡಗಿನ ವಾತ್ಸಲ್ಯಮಯಿ ವತ್ಸಲೆಯ ಇಂಥ ಸಲುಗೆಯನ್ನು ಬಿಂದಣ್ಣ ತಪ್ಪು ತಿಳಿದುಕೊಳ್ಳುತ್ತಾನೆ. ಹಾಗೂ ಆ ತಪ್ಪಿಗೆ ತಕ್ಕ ಬೆಲೆಯನ್ನೂ ತೆತ್ತುವನು. ಒಂದು ದಿನ ಅವಳ ವ್ಯಾಮೋಹದಿಂದ ಉನ್ಮತ್ತನಾಗುತ್ತಾನೆ. ಹಾಗೆಯೇ ಅವಳ ಪ್ರೇಮೋನ್ಮಾದವಲ್ಲಿ ತನ್ನ ಪ್ರೀತಿ ತಿಳಿಸಿ, ವಿವಾಹವಾಗಬಯಸಿ ಅವಳ ಬಂಗ್ಲೆಗೆ ಬರುತ್ತಾನೆ. ಆಗ ಸುಂದರ ವತ್ಸಲೆ ಪಲ್ಲಂಗದ ಮೇಲೆ ಪುಸ್ತಕ ಓದುತ್ತಾ ನಿದ್ರೆ ಹೋಗಿರುತ್ತಾಳೆ....... ಸೆರಗು ಸರಿದಿರುತ್ತದೆ. ಮೈಯ ಮೇಲ್ಭಾಗವೆಲ್ಲ ಹರವಾಗಿ ಕಾಣುತ್ತಿರುತ್ತದೆ. ಶುಭ್ರವಾಗಿ ಶೋಭಿಸುವ ಪಾದಗಳು, ಕಾಲಿನ ಮೇಲ್ಭಾಗ ಸ್ಫುಟವಾಗಿ ಕಾಣುತ್ತಿದೆ. ನೀಳವಾದ ಹೆಳಲು ಕೆಳಗೆ ಜೋಲು ಬಿದ್ದಿರುತ್ತದೆ. ಹತ್ತಿರವೇ ನಿಂತು ಆ ನೀಳವಾದ ಜಡೆಯನ್ನು ಮನಸೋತ ಬಿಂದಣ್ಣನ ಬೆರಳು ಸ್ಪರ್ಶಿಸುತ್ತವೆ. ಅವನ ಕಳ್ಳ ಮನಸ್ಸು ಏನೇನೊ ಧ್ಯೇನಿಸುತ್ತದೆ. ಮೈ ಬೆವೆಯುತ್ತದೆ; ಹುಚ್ಚ ಮನಸ್ಸು ಪ್ರೇಮಪಾರಜದಿಂದ ಉದ್ರಿಕ್ತವಾಗುತ್ತದೆ. ಅವನ ಹೃದಯ ವಿಹ್ವಲವಾಗುತ್ತದೆ. ಅವಳನ್ನು ಎಬ್ಬಿಸಿ, ವಿವಾಹವಾಗುವೆಯಾ ಎಂದು ಕೇಳಲು ಅವಳ ಸಮೀಪಕ್ಕೆ ತನ್ನ ಮುಖ ತರುತ್ತಾನೆ. ಅಷ್ಟರಲ್ಲಿ ಗಾಬರಿಯಾದ ವತ್ಸಲೆ 'ಆಯೀಗs' ಎಂದು ಚೀರುತ್ತಾಳೆ. ಆಗ ಓಡಿ ಬಂದ ತಾಯಿಯಿಂದ ಅವಳ ಎಂಗೇಜಮೆಂಟ್ (ವಿವಾಹ ನಿಶ್ಚಯ) ಆಗಿರುವ ವಿಷಯ ತಿಳಿದು ಬಿಂದಣ್ಣನು ಹತಾಶನಾಗುತ್ತಾನೆ. ರೊಚ್ಚಿಗೆದ್ದ ಅವಳ ತಂದೆ,

ರಾಸ್ಕಲ್, ದುಷ್ಟ, ಪಾಪಿ, ಎಂದು ಹೀಯಾಳಿಸುತ್ತ ಬಿಂದಣ್ಣನನ್ನು ಸೇವಕರಿಂದ ಹೊರಗೆ ದಬ್ಬಿಸುತ್ತಾರೆ.

ಇಂಥ ಆಘಾತ-ಅವಮಾನಗಳಿಂದ ಬಿಂದಣ್ಣ ಪ್ರಜ್ಞೆ ಕಳೆದುಕೊಳ್ಳುತ್ತಾನೆ. ಕೋಮಾ ಕಂಡಿಶನದಿಂದ ಅವನನ್ನು ಪಾರು ಮಾಡಲು ಡಾಕ್ಟರರು ಹೆಣಗುತ್ತಾರೆ.

‘Bindu admitted hospital cerebral meningitis serious start’ ಎಂಬ ಸಾಂಬನ ಪತಾತ್ ತಂತಿ ನೋಡಿ, ಶೇಷಣ್ಣ ಹಾಗೂ ಕಿರಿಯ ವೈನಿ (ವತ್ಸಲೆ) ಮುಂಬಯಿಯ ಆಸ್ಪತ್ರೆಗೆ ಧಾವಿಸುತ್ತಾರೆ. ಅಲ್ಲಿ ವೈನಿ ಬಡಬಡಿಸುತ್ತಿದ್ದ ಬಿಂದಣ್ಣನ ಮಗ್ಗುಲಿಗೆ ಕುಳಿತು, ಬೆಳೆತನಕ ಹಣೆಗೆ ಪಟ್ಟಿ ಹಾಕುತ್ತ ಆತ್ಮೀಯವಾಗಿ ಉಪಚರಿಸುವರು. ಆಗ ‘ಅವ್ವಾ’ ಎನ್ನುತ್ತ ಬಿಂದಣ್ಣ ಚೇತರಿಸಿಕೊಳುತ್ತಾನೆ. ನಿರಾಶನಾದ ಅವನು ಅಣ್ಣ-ವೈನಿಯರ ಆಶ್ರಯ ಪಡೆದು ಗದುಗಿಗೆ ಮರಳುವಲ್ಲಿ ಕಾದಂಬರಿಯ ಕಥೆ ಮುಕ್ತಾಯವಾಗುತ್ತದೆ.

ಆದರೆ ಹೀಗೆ ಕಥೆ ಒಮ್ಮೆಲೆ ಮುಗಿಯುವದರಿಂದ ಬಿಂದಣ್ಣನ ಪಾತ್ರದ ಬೆಳವಣಿಗೆ ಏಕೋ ಅಪೂರ್ಣವೆನಿಸುತ್ತದೆ. ವತ್ಸಲೆಯನ್ನು ಮರೆಯಲು ಮುಂಬೈಗೆ ಹೋದ ಅವನ ಉದ್ದೇಶವು ಸಫಲವಾಗುವದಿಲ್ಲ. ಇನ್ನು ಅವನಿಗೆ ದೂರ ಮುಂಬಯಿಯಲ್ಲಿದ್ದರೂ ಆ ವತ್ಸಲೆಯ ಮೋಹ ಮರೆಯಲಿಲ್ಲವೆಂದ ಮೇಲೆ ಪುನಃ ಗದುಗಿಗೆ ಅವಳ ಮನೆಗೆ ಬಂದ ಮೇಲೆ ಆ ವ್ಯಾಮೋಹ ತಪ್ಪಿಸಿಕೊಳ್ಳುವದು ಸುಲಭವೇ ? ಈ ಸೋಲು, ದುರಂತ ಅನಿವಾರ್ಯವೆಂಬುದೂ ವಿಚಾರಾರ್ಹವೇ. ಮುಂಬಯಿಯ ಸಹಪಾಠಿನಿ ವತ್ಸಲೆಯನ್ನು ತಾನು ವಿವಾಹ ಮಾಡಿಕೊಳ್ಳುವ ವಿಷಯವನ್ನು ಬೀಚ್ ಮೇಲೆ ವಿವರಿಸುವಾಗ ಕೇಳುವದನ್ನು ಬಿಟ್ಟು, ಅವಳು ಮನೆಯಲ್ಲಿ ಮಲಗಿದ ಕೋಣೆಯಲ್ಲಿ ಅನಿರೀಕ್ಷಿತವಾಗಿ ಪ್ರವೇಶಿಸಿ, ಕೇಳುವ ಪ್ರೇಮೋನ್ಮಾದ ಸ್ವಲ್ಪ ವಿಸ್ಮಯಕರವೆನಿಸುತ್ತದೆ. ಇಂಥ ವಿಪರೀತ ಪ್ರೇಮಸಮಾಧಿ ಅವನ ದುರ್ಬಲತೆಗೆ ಸಾಕ್ಷಿಯೇನೊ ! ಅಥವಾ ‘love is blind’ ಪ್ರೇಮಿಗಳು ಕುರುಡಾಗಿ ವರ್ತಿಸುತ್ತಾರೆ ಎಂಬುದು ಸತ್ಯವೇನೊ. ಅಥವಾ ‘ಮನಸಿಜನ ಮಾಂ ಮಾಯೆ ವಿಧಿವಿಳಸನದ ನೆರಂಬಡೆಯೆ ಕೊಂದು ಕೂಗದ ನರರಂ’ ಎಂಬ ಕವಿ ಜನ್ನನ ಉಕ್ತಿಯಂತೆ ಪ್ರೇಮ ರಹಸ್ಯ ವಿಧಿಯ ವಿಲಕ್ಷಣ ವಿಲಾಸವೇನೊ.

ಒಂದು ವೇಳೆ ಬಿಂದಣ್ಣನು ವತ್ಸಲೆಯನ್ನು ವಿವಾಹವಾಗಬೇಕೆಂದು ಬೀಚ್ ಮೇಲೆ ಕೇಳಿದ್ದರೆ ಅವನಿಗೆ ಅವಳು ನಿರಾಕರಿಸಿದ್ದರೂ ಇಷ್ಟು ತೀವ್ರ ಆಘಾತವಾಗುತ್ತಿರಲಿಲ್ಲವೇನೋ ! ಅಥವಾ ತಾನು ಕಲಿಸುತ್ತಿದ್ದ ರಾತ್ರಿಯ ಶಾಲೆಯ ಓರ್ವ ಶಿಕ್ಷಕಿಯ ಪ್ರೇಮಪಾಶದಿಂದ ವತ್ಸಲೆಯನ್ನು ಮರೆತಿದ್ದರೆ, ಈ ಕಥೆ ಸುಖಾಂತ

ವಾಗಲೂ ಸಾಧ್ಯವಾಗುತ್ತಿತ್ತೇನೋ. ಅಥವಾ ಹಿಂದಿನ ವತ್ಸಲೆಯ ಭಗ್ನ ಪ್ರಣಯದ ಸೋಲಿನಿಂದ ಹತಾಶನಾದ ಅವನು ಮುಂಬಯಿಗೆ ಬಂದ ಮೇಲೆ ಆ ಕಟು ಮಧುರ ನೆನಪುಗಳನ್ನು ಹುಗಿದು ಭಾವನಾವಶತೆಯಿಂದ ಚೇತರಿಸಿಕೊಂಡು, ತನ್ನ ಬಡತನ, ಸಮಸ್ಯೆ, ಭವಿಷ್ಯ ಕುರಿತು ಯೋಚಿಸಿ, ಯೋಚಿಸಿ, ವಿಚಾರಶೀಲನಾಗಿ, ಬದುಕಿನ ಆವ್ಹಾನ ಸ್ವೀಕರಿಸಿ, ಎಂ. ಎ ಓದಿ, ಸಮತೋಲದಿಂದ ಹೋರಾಡಿ, ಶ್ರೀಮಂತ ವ್ಯಕ್ತಿತ್ವ-ದರ್ಶನ ರೂಪಿಸಿಕೊಂಡು, ಸ್ವಾವಲಂಬಿಯಾಗಿ, ಶಿಕ್ಷಣಕ್ಕೆ ಸಹಾಯ ಮಾಡಿದ ಮಾವನ ಸಾಲ ತೀರಿಸುವ ವಚನ ಪಾಲಿಸಿ, ಶಿಕ್ಷಣ, ಸಾಹಿತ್ಯ ಅಥವಾ ಅಧ್ಯಾತ್ಮ ಕ್ಷೇತ್ರಗಳಲ್ಲಿ ಕ್ರಾಂತಿಕಾರಕ ಸಾಧನೆ ಮಾಡಿ ತೋರಿಸಿದ್ದರೆ, 'ದೊಡ್ಡ ನಾಯಕ'ನೆಂಬ ಗೌರವಕ್ಕೆ ಪಾತ್ರನಾಗುತ್ತಿದ್ದನೇನೊ.

ಒಟ್ಟಿನಲ್ಲಿ ಬಿಂದಣ್ಣನು ಸುಶಿಕ್ಷಿತನಾದರೂ ಮುಖ್ಯವಾಗಿ ಭಾವಜೀವಿ. ಅವನು ವಿಚಾರಕ್ಕಿಂತ ಸಂವೇದನಾಶೀಲ. ಅವನದು ಭಾವನಾಶೀಲ ವ್ಯಕ್ತಿತ್ವ. ಏನೇ ಆಗಲಿ ಈ ಕೃತಿಯ ತುಂಬ ವಿನೋದ, ಕರುಣಗಳ ಎಳೆಗಳು ಸುಂದರವಾಗಿ ಹಾಸು-ಹೊಕ್ಕಾಗಿವೆ. ಈ ಕಾದಂಬರಿಯ ಶೈಲಿ ಆಕರ್ಷಕವಾಗಿದೆ. ಖ್ಯಾತ ಲೇಖಕ ಎನ್ಕೆಯವರ ಜೀವನ ಹಾಗೂ ಸಾಹಿತ್ಯದ ಅನುಭವಗಳ ನಿಷ್ಠೆ, ಪ್ರಾಮಾಣಿಕತೆಗಳಿಂದಾಗಿ, ಅವರ ಅಭಿವ್ಯಕ್ತಿಯಲ್ಲಿ ಸಹಜ ಸೌಂದರ್ಯ ಅರಳಿದೆ. ಹಾಗೂ ಅವರು "ನಮ್ಮ ಮಧ್ಯಮ ವರ್ಗದ ಸಮಾಜದ ಭಾರತಮಾಪಕ ಯಂತ್ರವಾಗಿದ್ದಾರೆ" ಎಂಬ ಕೆ. ಡಿ. ಕುರ್ತಕೋಟಿಯವರ ಅಭಿಪ್ರಾಯ ತುಂಬ ಮನನೀಯವೆನಿಸುತ್ತದೆ.

# ‘ಕಲೋಪಜೀವಿ’

## ಚಿ. ಸೋಮಶೇಖರ

ಎನ್ಕೆಯವರ ‘ಕಲೋಪಜೀವಿ’ ಕಾದಂಬರಿ ಕಲೋಪಾಸಕನೊಬ್ಬನ ಬದುಕನ್ನು ಸುಂದರವಾಗಿ ಚಿತ್ರಿಸಿರುವ ಒಂದು ಜೀವಂತ ಕಾದಂಬರಿ. ಮುನ್ನುಡಿಯಲ್ಲಿ ಕಾದಂಬರಿಕಾರರೇ ತಿಳಿಸಿರುವಂತೆ ಈ ಕಾದಂಬರಿ ಮನೆತನದ ಚಿತ್ರದೊಂದಿಗೆ ಪ್ರಾರಂಭವಾಗಿ ಕಲಾಜೀವನಕ್ಕೆ ಕೈಚಾಚುತ್ತದೆ. ಕಾದಂಬರಿಯಲ್ಲಿನ ನಾಯಕ ಗುರುರಾಜ, ಒಬ್ಬ ಆದರ್ಶ ಕಲೋಪಾಸಕ. ಕಲೋಪಾಸನೆಯೇ ಅವನ ಬದುಕಿನ ಉಸಿರು. ಅದಕ್ಕಾಗಿ ಯಾವ ತ್ಯಾಗವನ್ನೂ ಮಾಡಲು ಸಿದ್ಧನಿದ್ದ. ಸಂಪ್ರದಾಯಸ್ಥ ಕುಟುಂಬದಲ್ಲಿ ಹುಟ್ಟಿದ ಗುರುರಾಜನಿಗೆ ಆತನ ಕಲೋಪಾಸನೆಯ ಹಾದಿಯಲ್ಲಿ ಒದಗಿ ಬಂದ ಅಡ್ಡಿ ಆತಂಕಗಳು ಅದೆಷ್ಟೋ. ಆದರೂ ಈ ಎಲ್ಲ ಅಡ್ಡಿ ಆತಂಕಗಳನ್ನು ಎದುರಿಸಿ ನಿಜವಾದ ಕಲೋಪಾಸನೆಯ ಸಾಕ್ಷಾತ್ಕಾರ ಮಾಡಿಕೊಂಡ ಗುರುರಾಜನ ಪಾತ್ರ ಈ ಕಾದಂಬರಿಯಲ್ಲಿ ನೈಜವಾಗಿ ಮೂಡಿ ಬಂದಿರುವದು ಕಾದಂಬರಿಯ ಮೆರುಗನ್ನು ಹೆಚ್ಚಿಸಿದೆ.

ಗುರುರಾಜ-ಅಂಬಕ್ಕ ಒಬ್ಬರನ್ನೊಬ್ಬರು ತುಂಬಾ ಪ್ರೀತಿಸುವ ದಂಪತಿಗಳು. ಕಾದಂಬರಿಯಲ್ಲಿ ಪ್ರಾರಂಭದಲ್ಲಿಯೇ ಬರುವ ಅಂಬಕ್ಕನ ದೈಹಿಕ ಸೌಂದರ್ಯದ ವರ್ಣನೆ ಓದುಗರ ಕಣ್ಣಿಗೆ ಕಟ್ಟುವಂತಿದೆ. ಹೆಂಡತಿಗೆ ಒಂದು ಪ್ರೀತಿಯ ಕಾಣಿಕೆಯನ್ನು ಕೊಂಡು ತಂದ ಗುರುರಾಜ ಸಂಭ್ರಮದಿಂದ ಬಾಗಿಲು ಬಡಿಯುತ್ತಾನೆ. ಅಂಬಕ್ಕ ಬಾಗಿಲು ತೆಗೆಯುತ್ತಾಳೆ. ಆಗ ಗುರುರಾಜನಿಗೆ ಅಂಬಕ್ಕನ ಹೃದಯದ ಬಾಗಿಲೇ ತೆರೆದಂತಾಗುತ್ತದೆ ಎನ್ನುವ ಕಾದಂಬರಿಕಾರರ ಮಾತು ಹಾಗು ಅತ್ಯಂತ ಸಂಭ್ರಮದಿಂದ ಪ್ರೀತಿಯಿಂದ ತಂದ ಸೀರೆಯನ್ನು ಅಂಬಕ್ಕನಿಗೆ ನೀಡಿದಾಗ ಅಂಬಕ್ಕನಿಂದ ಬರುವ ಪ್ರತಿಕ್ರಿಯೆ, ಗುರುರಾಜ-ಅಂಬಕ್ಕನ ನಡುವೆ ನಡೆಯುವ ಸರಸ ಸಲ್ಲಾಪ ಒಬ್ಬರ ಬಗ್ಗೆ ಮತ್ತೊಬ್ಬರು ಆಡುವ ಒಲುವಿನ ಮಾತುಗಳು “ಈ ಪತಿದೇವರು ಪ್ರಸನ್ನನಾಗಿ ಎದುರು ನಿಂತಾಗ ಇನ್ನಾವ ಮೂಕ ದೇವರಿಗೆ

ಕಾಣಿಕೆ"ಎನ್ನುವ ಅಂಬಕ್ಕನ ಮನದೊಳಗಿನ ಭಾವನೆ, ಇವುಗಳ ದಂಪತಿಗಳ ನಡು ವಣ ನೈಜವಾದ ಸಂಬಂಧವನ್ನು ತುಂಬಾ ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ.

ಶಾನುಭೋಗ ತಿಮ್ಮಣ್ಣನವರು ತುಂಬಾ ಸೂಕ್ಷ್ಮಮತಿಗಳು ಸ್ವಾಭಿಮಾನಿ ಹಾಗು ಹಠದ ಸ್ವಭಾವದವರು. ಅವರಿಗೆ ಸುಬ್ಬಣ್ಣ,ಗುರುರಾಜ ಇಬ್ಬರು ಪುತ್ರರು. ಜೀವನವೆಲ್ಲ ಕೋರ್ಟು ಕಚೇರಿಗೆ ಅಲೆದಾಡಿ ಮುಪ್ಪನ್ನು ಅಪ್ಪಿಕೊಂಡ ತಿಮ್ಮಣ್ಣ ನವರಿಗೆ ತಮ್ಮ ಮೊದಲ ಮಗ ಸುಬ್ಬಣ್ಣ ವಕೀಲನಾಗಬೇಕೆಂಬ ಮಹದಾಕಾಂಕ್ಷೆ. ಸುಬ್ಬಣ್ಣನ ದಂಡಯಾತ್ರೆಗಳನ್ನೊಳಗೊಂಡ ವಿದ್ಯಾಭ್ಯಾಸಕ್ಕೆ ಹೆಚ್ಚು ವೆಚ್ಚ ತಿಮ್ಮಣ್ಣನವರಿಗೆ ಗುರುರಾಜನ ಶಿಕ್ಷಣದ ಮೇಲೆ ಹೆಚ್ಚು ಕೇಂದ್ರಿಕರಿಸಲು ಸಾಧ್ಯ ವಾಗದೆ ಗುರುರಾಜನಿಗೆ ಬೇಗ ಮದುವೆ ಮಾಡಬೇಕೆಂಬ ಹಠ ತೊಟ್ಟರು. ಮನಸ್ಸಿ ಲ್ಲದೆ ಇದ್ದರೂ ತಂದೆಯ ಹಠಕ್ಕೆ ಮಣಿಯಲೇಬೇಕಾದ ಗುರುರಾಜನಿಗೆ ತನ್ನ ಸೋದರತ್ತೆ ಜೀವಕ್ಕನ ಮಗಳು ಅಂಬಕ್ಕ ಬದುಕಿನ ಸಂಗಾತಿಯಾದಳು. ಮದುವೆ ನಂತರ ತಂದೆಯ ಮೇಲಿನ ಸಿಟ್ಟಿನಿಂದ ಹೆಂಡತಿಯೊಂದಿಗೆ ಮನೆಯನ್ನು ಬಿಟ್ಟು ಹೊರಡಲು ಹೆಂಡತಿಗೆ ಗುರುರಾಜ ಆದೇಶ ನೀಡಿದ. ಗುರುರಾಜನ ಮಾತಿಗೆ ಪ್ರತಿ ಹೇಳುವ ಧೈರ್ಯ ಹೆಂಡತಿಗೇ ಏಕೆ ಸ್ವತಃ ಅತ್ತೆ ಜೀವಕ್ಕನಿಗೂ ಇರಲಿಲ್ಲ. ಒಂದು ಕಡೆ ಅಣ್ಣ, ಮತ್ತೊಂದು ಕಡೆ ಮಗಳು ಅಳಿಯ, ಕಾದಂಬರಿಕಾರರ ಮಾತಿನಲ್ಲೇ ಹೇಳುವುದಾದರೆ, "ಮಗಳ ಮೇಲಿನ ಕರುಳು, ಅಣ್ಣನ ನೆರಳು".

ಮನೆ ಬಿಟ್ಟುಹೋದ ಗುರುರಾಜನ ವಿದ್ಯಾಭ್ಯಾಸ ಅನೇಕ ಕಷ್ಟ ಸಂದಿಗ್ಧತೆ ಗಳ ನಡುವೆ ಕುಂಟುತ್ತ ಸಾಗಿತು. ಈ ಮಧ್ಯೆ ಟಿ. ಪಿ. ಕೈಲಾಸಂರವರ ನಾಟಕಗಳ ಹುಚ್ಚು ಗುರುರಾಜನಿಗೆ ಹತ್ತಿ 'ನಾನು ಏಕೆ ಕಲಾಕಾರನಾಗಬಾರದು' ಎಂಬ ಭಾವನೆ ಅವನಲ್ಲಿ ಉಂಟಾಯಿತು. ಇಲ್ಲಿಂದ ಪ್ರಾರಂಭವಾಯಿತು ಗುರುರಾಜನ ಕಲೋಪಾಸನೆಯ ಮಹತ್ತರ ಪ್ರಯತ್ನ. ಊರಿಂದ ಊರಿಗೆ ಅಲೆದು ತನ್ನ ನಾಟಕದ ಮೂಲಕ ತನ್ನ ಒಡಲಿನ ಪ್ರಶ್ನೆಗೆ ಉತ್ತರ ಹುಡುಕಲು ಹೊರಟ ಗುರುರಾಜನಿಗೆ ಒದಗಿ ಬಂದ ಆತಂಕಗಳು, ಅವನಿಗಾದ ಅನುಭವಗಳು ಅದೆಷ್ಟೋ ಕೆಲವು ರಂಜ ನೀಯ ಅನುಭವಗಳಾದರೆ ಮತ್ತೆ ಕೆಲವು ಅವನ ಆತ್ಮವಿಶ್ವಾಸವನ್ನು ಕಡಿಮೆ ಮಾಡುವಂತಹವು.

ಹುಬ್ಬಳ್ಳಿಯ ಅನಾಥ ಸೇವಾಸದನದ ಸಂಪರ್ಕ ಮತ್ತು ಈ ಸಂಸ್ಥೆಯ ಚಾಲಕರಾದ ಸದಾನಂದರಾಯರ ಪರಿಚಯದ ನಂತರ ಗುರುರಾಜನ ಜೀವನದಲ್ಲಿ ಮತ್ತೊಂದು ತಿರುವು ಬಂದಿತು. ಈ ಅನಾಥ ಸದನದಲ್ಲಿನ ಗಿರಿಜೆಯ ಪರಿಚಯ, ಒಡನಾಟದ ನಂತರ ಗುರುರಾಜನ ಬದುಕು ಕ್ಲಿಷ್ಟ ಮತ್ತು ಸಂದಿಗ್ಧತೆಗೆ ಒಳಗಾ

ಯಿತು. ಕೇರಳ ನೃತ್ಯಸಂಸ್ಥೆಗೆ ಗುರುರಾಜನನ್ನು ನೃತ್ಯಾಭ್ಯಾಸಕ್ಕೆ ಕಳಿಸಬೇಕೆಂದು ಸದಾನಂದರಾಯರು ತೀರ್ಮಾನಿಸಿದರು. ಸ್ತ್ರೀ ಸದನದಲ್ಲಿ ಗಿರಿಜೆಯ ಸಖ್ಯದ ರಸ ನಿಮಿಷಗಳನ್ನು ಸವಿಯುತ್ತಿದ್ದ ಗುರುರಾಜ ಇದರಿಂದ ತನ್ನ ಬದುಕಿನ ಭಾಗ್ಯೋದಯದ ಬಾಗಿಲು ತೆರೆಯಿತು ಎಂದು ಭಾವಿಸಿದ. ಆದರೆ ಗುರುರಾಜನೊಂದಿಗೆ ತಾನೂ ಬರುತ್ತೇನೆಂದು ತನ್ನ ಅಭೀಪ್ಸೆಯನ್ನು ವ್ಯಕ್ತಪಡಿಸಿದ ಗಿರಿಜೆಯ ಆಸೆ ಗುರುರಾಜನಿಗೆ ಒಂದು ದೊಡ್ಡ ಪ್ರಶ್ನೆಯಾಯಿತು. ವಿಧಿಯಿಲ್ಲದೆ ಸದಾನಂದರಾಯರ ಮನಸ್ಸಿಗೆ ವಿರುದ್ಧವಾಗಿ, 'ಬಿದ್ದರೆ ಎಂಜಿನ್ ಬಾಯಲ್ಲಿ, ಇದ್ದರೆ ಗುರುರಾಜನ ಬಳಿಯಲ್ಲಿ' ಎಂದು ಹಠದಿಂದ ಬಂದ ಗಿರಿಜೆಯನ್ನು ತನ್ನ ಜೊತೆಯಲ್ಲಿ ಕರೆದುಕೊಂಡು ಹೋಗಲೇಬೇಕಾದ ಗುರುರಾಜ ಮತ್ತಷ್ಟು ಸಮಸ್ಯೆಗಳನ್ನು ಆಹ್ವಾನಿಸಿದ. ಇಬ್ಬರಿಗೂ ಕೇರಳ ನೃತ್ಯಸಂಸ್ಥೆಯಲ್ಲಿ ಪ್ರವೇಶ ದೊರೆಯಿತು. ಗಿರಿಜೆ ಕಲಿಯಾದಳು. ಗಿರಿಜೆ ಕಲೋಪಾಸಕ ಗುರುರಾಜನ ಕಲಿಯಾದಳು. ಈ ಸಂಸ್ಥೆಗೆ ನಂಬೂದಿರಿಯವರು ಗುರುರಾಜನ ಕಲೆಯ ಗುರುಗಳಾದರು. ಈ ಸಂಸೆಯಲ್ಲಿ ತ್ರಿವೇಂದ್ರಂನಿಂದ ಬಂದಿದ್ದ ಆನಂದ ಕುರೂಪರೂ, ಮದ್ರಾಸಿನ ಕುಂಜುಮಣಿಗಳೂ ಆನಂದ ಕುರೂಪರ ತಂಗಿ ಪದ್ಮಕುರೂಪರು ಗುರುರಾಜನ ಸಹೃದಯರಾದರು. ಇವರೇ ಗುರುರಾಜನ ಕಲೋಪಾಸನೆಯ ದಿಸೆಯಲ್ಲಿನ ಸಂಕಷ್ಟಗಳ ನಿವಾರಣೆಯಲ್ಲಿ ಸಕ್ರಿಯ ಪಾಲುದಾರರಾದರು.

ಗುರುರಾಜ ಕಲಿ ಇವರ ನೃತ್ಯಾಭ್ಯಾಸ ತರಬೇತಿ ಮುಗಿದ ಕೊನೆಯ ದಿನದಂದು ಕವಿವರಾಗ್ರೇಸರಾದ ಶ್ರೀ ವಲತ್ತೋಳರಿಂದ ಪದವೀದಾನ ಸಮಾರಂಭದ ಭಾಷಣವಾಯಿತು. "ಕಲೆ ಒಂದು ಉಪಾಸ್ಯ ದೇವತೆ, ಉಪಜೀವನದ ಸಾಧನವಲ್ಲ, ಕಲೆಯಿಂದ ಉಪಜೀವನ ಮಾಡುತ್ತೇವೆನ್ನುವುದು ಒಂದು ವ್ಯಭಿಚಾರ. ಕಲೆ ಒಂದು ತಪಶ್ಚರ್ಯೆ ಆಗಬೇಕು'' ಎನ್ನುವ ಈ ಮಾತುಗಳು ಗುರುರಾಜನ ಬದುಕಿನ ಆದರ್ಶ ಗುರುಗಳಾದವು. ಇವು ಆಗಾಗ್ಗೆ ಗುರುರಾಜನನ್ನು ಎಚ್ಚರಿಸುತ್ತಿತ್ತು.

ನೃತ್ಯಾಭ್ಯಾಸದ ತರಬೇತಿಯ ನಂತರ ಗುರುರಾಜ– ಕಲಿ ಕೊಯಿಮುತ್ತೂರಿನ ಮೈಸೂರ ಮಹೇಶ್ವರಿ ನಾಟಕ ಕಂಪನಿಗೆ ಸೇರಿದರು. ಇಲ್ಲಿ ಕಲಿಗೆ ಅನೇಕ ವೈವಿಧ್ಯಮಯ ಅನುಭವಗಳಾದವು. ಫೋಟೋ ಸ್ಟುಡಿಯೋದಲ್ಲಿ ಮೇಕಪ್ ಮಾಡಿಕೊಂಡು ನೃತ್ಯದ ಭಂಗಿ ನೀಡುವಾಗ ಆಕೆಗೆ ನೀಡಿದ ಸೂಚನೆಗಳು ಆಕೆಯಲ್ಲಿ ಒಂದು ರೀತಿಯ ಜಿಗುಪ್ಸೆ ಉಂಟುಮಾಡಿ "ಎಂಥ ಮಾಲಿಕರು ಕಲಾವಿದನ ಮೈಕೈಗಳ ಮೇಲೂ ಇರುತ್ತದೇನೊ ಇವರ ಮಾಲ್ಕಿ" ಎಂದು ಕಲಿ ಮ್ಯಾನೇಜರ್‌ಗೆ ಪ್ರಶ್ನೆ ಹಾಕುವದು ಕಾದಂಬರಿಕಾರರ ಜಾಣ್ಮೆಯ ನಿರೂಪಣೆಯನ್ನು ತೋರಿಸುತ್ತದೆ. ನಾಟಕ ಕಂಪನಿಯ ಮಾಲೀಕರ ವರ್ತನೆಯಿಂದ ಸ್ತ್ರೀ ಕಲಾವಿದರು ನಾಟಕ

ಕಂಪನಿಯ ಮಾಲಿನಿಂದ ಭೋಗವಸ್ತುಗಳೇ ಎಂಬ ಪ್ರಶ್ನೆ ಕಲಿಯಲ್ಲಿ ಉದ್ಭವ ವಾಗುತ್ತದೆ.

ಗುರುರಾಜ ಅಭಿನಯಿಸಲು ಆಯ್ಕೆಮಾಡಿಕೊಂಡ ಬುದ್ಧನ ಕಥೆ, ಕಾದಂಬರಿ ಕಾರರು ಮಾಡಿಕೊಂಡಿರುವ ಅತ್ಯುತ್ತಮ ಆಯ್ಕೆಯಾಗಿ ಕಾಣುತ್ತದೆ. ಏಕೆಂದರೆ ಗುರುರಾಜ ತನ್ನ ಅತ್ಯಂತ ಪ್ರೀತಿಯ ಪತ್ನಿ, ಮುದ್ದುಮಗು ಸಾಕಷ್ಟು ಜಮೀನು ಇವುಗಳನ್ನು ಬಿಟ್ಟು ಕಲೋಪಾಸನೆಯ ಮಹತ್ತರ ಗುರಿಯನ್ನು ಈಡೇರಿಸಲು ಮನೆಯಿಂದ ನಿರ್ಗಮಿಸುವಾಗ ಈತನು ಸಹ ಒಬ್ಬ ಬುದ್ಧನಂತೆ ನಮಗೆ ಕಾಣುತ್ತಾನೆ.

ಅರುಣಗಿರಿಯ ಕಥಾನಕದ ಚಿತ್ರದಲ್ಲಿ ಪ್ರೇಕ್ಷಕರ ಮೆಚ್ಚುಗೆ ಗಳಿಸುವ ಒಂದೇ ಉದ್ದೇಶದಿಂದ ಪಾಶ್ಚಾತ್ಯ ರೀತಿಯ ಪದ್ಧತಿಯ ಆಧಾರದ ಮೇಲೆ ರೂಪಿಸಿದ ನರ್ತನವನ್ನು ಕಲಿ, ಮಾಡಿದಾಗ ಪ್ರೇಕ್ಷಕರಿಗೇನೋ ರಸದೌತಣವಾಗುತ್ತದೆ. ಆದರೆ ಈ ಚಿತ್ರವನ್ನು ನೋಡಲು ಹಾಗೂ ಇದೇ ಸಂದರ್ಭದಲ್ಲಿ ಗುರು ಎಂಬ ಭಾವದಿಂದ ಸನ್ಮಾನಿಸಲು ಆಹ್ವಾನಿಸಿದ್ದ ನಂಬೂದ್ರಿಯವರಿಗೆ ಇದರಿಂದ ತುಂಬಾ ನೋವಾಗಿ ತಮ್ಮ ಕೆನ್ನೆಗಳಿಗೆ ತಾವೇ ಬಲವಾಗಿ ಏಟು ಕೊಟ್ಟುಕೊಳ್ಳುತ್ತಾರೆ. ಇದು ನಿಜವಾಗಲು ಕಾದಂಬರಿಕಾರರ ಕೈಚಳಕದಿಂದ ಮೂಡಿಬಂದ ಜೀವಂತ ದೃಶ್ಯ. ಏಕೆಂದರೆ ನಂಬೂದ್ರಿಯವರ ದೃಷ್ಟಿಯಲ್ಲಿ ವಲತ್ತೋಳರು ಹೇಳಿದಂತೆ "ಕಲೆ ಉಪಾಸನೆಗೆ ಮಾತ್ರ, ಉಪಜೀವನಕ್ಕಲ್ಲ." ನಾಟ್ಯಪುತ್ರಿಯನ್ನು ಕಾಮುಕರ ಮುಂದೆ ವ್ಯಭಿಚಾರ ಮಾಡಲು ಉಪಯೋಗಿಸಿಕೊಂಡುದು ಅವರಿಗೆ ತೀವ್ರವಾದ ನೋವುಂಟುಮಾಡುತ್ತದೆ. ಇದು ನಿಜವಾಗಲು ಗುರುರಾಜನಿಗೆ ಒಂದು ದೊಡ್ಡ ಆಘಾತ ಉಂಟಾಗುತ್ತದೆ.

ಗುರುರಾಜನ ಜೊತೆಯಲ್ಲಿ ತನ್ನ ಬದುಕಿನ ಏನೇನೋ ಕನಸು ಕಂಡ ಕಲಾ ಒಂದು ರೀತಿಯ ಸೇಡಿನ ಮನೋಭಾವದಿಂದ ಮೇಜರ್ ರಾವ್ ಅವರ ಪ್ರಣಯದ ಆಟಕ್ಕೆ ವಸ್ತು ಆಗುತ್ತಾಳೆ. ಕೊನೆಗೆ ಅವನಿಂದಲೂ ವಂಚಿತಳಾಗುತ್ತಾಳೆ. ಅಲ್ಲದೆ ಹಿಂದಿನ ಪರಿಚಯದ ಕುಮಾರನ ಆಸೆಆಮಿಷಕ್ಕೆ ಬಲಿಯಾಗಿ ಅವನಿಂದ ಮೋಸ ಹೋಗುತ್ತಾಳೆ. ಕೊನೆಗೆ ಮತ್ತೆ ಗುರುರಾಜನೇ ತನಗೆ ಗತಿ ಎಂದು ತೀರ್ಮಾನಿಸುತ್ತಾಳೆ. ಜೋಡಿಯಲ್ಲಿ ನೃತ್ಯ ನಿರ್ದೇಶಕನಾದ ಗುರುರಾಜನ ಕಥಾನಕ ಒಂದರಲ್ಲಿ ಹರಿಜನ ಕನ್ಯೆಯಾಗಿ ಗೆಜ್ಜೆ ಕಟ್ಟುತ್ತಾಳೆ, ಕುಣಿಯುತ್ತಾಳೆ.

ತನ್ನ ಗಂಡನಿಂದ ಕಲೆ ದೂರವಾದಳು ಎಂದು ನಿಶ್ಚಿಂತೆಯಿಂದಿದ್ದ ಅಂಬಕ್ಕನಿಗೆ ಕಲೆ ಮತ್ತೆ ನನ್ನ ಗಂಡನಿಗೆ ಗಂಟುಬಿದ್ದದ್ದನ್ನು ಕಂಡು ಹೌಹಾರುತ್ತಾಳೆ. ಕಲಿ

ತನ್ನಿಂದ ಆದ ತಪ್ಪುಗಳಿಗಾಗಿ ಗುರುರಾಜನಲ್ಲಿ ಕ್ಷಮೆ ಯಾಚಿಸುತ್ತಾಳೆ. ಆಗ ಗುರುರಾಜ ಹೇಳುವ ಒಂದು ಮಾತು ಬಹಳ ಮಾರ್ಮಿಕವಾಗಿದೆ. "ಕಲಾ ನೀನು ರಂಗಭೂಮಿಯ ಜೊತೆಗಾತಿಯಾದರೆ ಅಬ್ಬಾ ನನ್ನ ಜೀವನದ ಜೊತೆಗಾತಿ."

ಗುರುರಾಜ ಕಲಾರಾಣಿ ಸ್ವಂತ ಕಲಾನಿಕೇತನ ಎಂಬ ಸಂಸ್ಥೆ ಪ್ರಾರಂಭಿಸುತ್ತಾರೆ. ಈ ಸಂಸ್ಥೆಯಲ್ಲಿ ರಿಹರ್ಸಲ್‌ಗಳನ್ನು ನೋಡಿಕೊಳ್ಳಲು ವಿಜಾಪುರದ ಚಂದ್ರಶೇಖರ್ ಎನ್ನುವವ ಈ ಸಂಸ್ಥೆಗೆ ಸೇರಿಕೊಳ್ಳುತ್ತಾನೆ. ಸಮಯಕ್ಕೆ ತಕ್ಕ ಹಾಗೆ ಮಾತನಾಡುತ್ತ ಎಲ್ಲರಿಂದಲೂ ತನ್ನ ಅಗತ್ಯತೆಗಳನ್ನು ತೀರಿಸಿಕೊಳ್ಳುತ್ತಿದ್ದ ಚಂದ್ರಶೇಖರ ವಿನೋದಪ್ರಿಯ. ಈತ ತನ್ನ ವಿನೋದದಿಂದ ಕಲಾರಾಣಿಯ ವಿಶೇಷ ವಿಶ್ವಾಸ ಸಂಪಾದಿಸಿಕೊಳ್ಳುತ್ತಾನೆ.

ಕಲಾರಾಣಿ ಅಂಬಕ್ಕನ ಮುಂದೆಯೇ ಗುರುರಾಜನ ಜೊತೆಯಲ್ಲಿ ಒಡನಾಟ ಮಾಡುತ್ತಿದ್ದಷ್ಟು ಅಂಬಕ್ಕನಲ್ಲಿ ಸಹಜವಾದ ಹೆಣ್ಣಿನ ಮಾತ್ಸರ್ಯವನ್ನು ಉಂಟು ಮಾಡುತ್ತಿತ್ತು. ಒಮ್ಮೆ ಊಟಕ್ಕೆ ಕುಳಿತಿದ್ದಾಗ ಗುರುರಾಜನ ಎಲೆಯಲ್ಲಿ ಉಳಿದಿಷ್ಟ ತಿಂಡಿಗೆ ಕಲಾರಾಣಿ ಕೈಹಾಕಿ ತನ್ನ ಎಲೆಗೆ ಬಡಿಸಿಕೊಳ್ಳಲು ಕೈ ಹಾಕಿದಾಗ ಅಂಬಕ್ಕ "ನನ್ನ ಪಾಲಿನ ಪ್ರಸಾದಕ್ಕ, ನೀ ಕೈ ಹಾಕತೀಯ" ಎಂದು ಕಲಾರಾಣಿಯನ್ನು ಕುರಿತು ಹೇಳಿ ಗಂಡನ ಎಲೆಗೆ ತನ್ನ ಅಡ್ಡಗೈ ಹಾಕಿದಾಗ ಕಲಾರಾಣಿ ಬೆದರುತ್ತಾಳೆ. ಈ ದೃಶ್ಯ ಹೆಣ್ಣು ಹೇಗೆ ತನ್ನ ಗಂಡನ ಸಾಮೀಪ್ಯದ ಸುಖವನ್ನು ಬೇರೊಬ್ಬಳು ಹಂಚಿಕೊಳ್ಳಲು ಪ್ರಯತ್ನಿಸಿದಾಗ ರೋಷ, ದ್ವೇಷದಿಂದ ಮತ್ತೊಬ್ಬ ಹೆಣ್ಣನ್ನು ಎಷ್ಟು ಕೀಳು ಮಟ್ಟದಲ್ಲಿ ಕಾಣುತ್ತಾಳೆ ಎಂಬುದಕ್ಕೆ ಅಂಬಕ್ಕನ ಪಾತ್ರ ಒಂದು ಜೀವಂತ ನಿದರ್ಶನ.

ಕಲಾರಾಣಿಯೂ ಹೆಣ್ಣೇ. ಆಕೆಗೂ ಹೆಣ್ಣಿಗೆ ಸಹಜವಾದ ಬಯಕೆಗಳು ಇದ್ದುವು. ಆದುದರಿಂದ ಗುರುರಾಜನ ಮೇಲೆ ಅಂಬಕ್ಕನಂತೆ ತನ್ನ ಸ್ವಾಮ್ಯವನ್ನು ಸ್ಥಾಪಿಸಲು ಪ್ರಯತ್ನಿಸಿ ಪ್ರತಿಯೊಂದು ಹಂತದಲ್ಲೂ ಸೋಲನ್ನು ಅನುಭವಿಸುತ್ತಿದ್ದ ಕಲೆ ಒಂದು ಬಾರಿ ಗುರುರಾಜನ ಬಳಿ "ನಿಮಗೆ ಸಂಸಾರವಿದೆ. ಕೈ ಹಿಡಿದ ಹೆಂಡತಿ, ಅಚ್ಚುಮೆಚ್ಚಿನ ಮಗು. ನೀವು ತಂದೆ, ನೀವು ಗಂಡ, ನೀವು ಸಂಸಾರಿಗಳು. ನಾನು? ನನಗೆ ಬೇಕಾದ್ದು ನಿಮ್ಮ ದುಡ್ಡಿನ ಪಾಲಲ್ಲ. ನಿಮ್ಮ ಕೀರ್ತಿಯ ಪಾಲಲ್ಲ. ನನಗೆ ಬೇಕಾದದ್ದು ದೊಡ್ಡ ಹೃದಯದ ಒಂದು ಪಾಲು," ಎಂದು ಅಂಗಲಾಚಿ ಬೇಡುತ್ತಾಳೆ.

ಕಲೆ ಗುರುರಾಜನಿಗೆ ಹತ್ತಿರವಾಗಲು ಪ್ರಯತ್ನಿಸುತ್ತಿರುವದನ್ನು ಕಾಣುತ್ತಾ ಅಂಬಕ್ಕ ಆತ್ಮಹತ್ಯೆಗೆ ಯತ್ನಿಸಿ ವಿಫಲಳಾಗುತ್ತಾಳೆ. ಕಲೆಯ ಸೇವೆಗೆಂದು ಹೊರಟ

ಗುರುರಾಜ ಕಲೆಯಿಂದ ಶೋಷಣೆಗೆ ಒಳಗಾಗಿ ಕಲೆಯಲ್ಲಿ ದೇವತೆಯ ಸ್ವರೂಪದ ಬದಲು ಪೈಶಾಚಿಕ ಶಕ್ತಿಯನ್ನು ಕಾಣುತ್ತಾನೆ. ಮತ್ತೊಮ್ಮೆ ಗರ್ಭಿಣಿಯಾದ ಅಂಬಕ್ಕನ ಬಗ್ಗೆ ಅಸೂಯೆ ಹೊಂದಿದ ಕಲಿ ಗುರುರಾಜ ತನ್ನ ದಾರಿಗೆ ಬರಲಿಲ್ಲ ಎಂದು ಒಂದು ರೀತಿಯ ಜಿಗುಪ್ಸೆಯಿಂದ ಗುರುರಾಜನ ಮಗ ಉದಯನನ್ನು ಬಚ್ಚಿಟ್ಟು ಗುರುರಾಜನ ಆಕ್ರೋಶಕ್ಕೆ ಗುರಿಯಾಗುತ್ತಾಳೆ. ತನ್ನನ್ನು ಗುರುರಾಜನ ಯಜಮಾನಿ ಎಂದು ಸ್ವೀಕರಿಸಿದಲ್ಲಿ ಉದಯನನ್ನು ಒಪ್ಪಿಸುವದಾಗಿ ಸವಾಲೊಡ್ಡಿ ಅತೃಪ್ತ ಹೆಣ್ಣಿನ ಸ್ವಾರ್ಥದ ಚರಮ ಸೀಮೆಯನ್ನು ಮುಟ್ಟುತ್ತಾಳೆ. ಅನಂತರ ಗುರುರಾಜ ಇನ್ನು ತನಗೆ ದಕ್ಕಲಾರನೆಂಬ ವಿಷಯ ಸ್ಪಷ್ಟವಾದ ಮೇಲೆ ಚಂದ್ರಶೇಖರನನ್ನು ಕೂಡಿ ಪರಾರಿಯಾಗುತ್ತಾಳೆ. ಇದರಿಂದ ಗುರುರಾಜನಿಗೆ ದೊಡ್ಡ ಆಘಾತವಾಗುತ್ತದೆ.

ಮುಂಬಯಿಗೆ ಬಂದಿಳಿದ ಗುರುರಾಜ ಮುಂಬಯಿಯಲ್ಲಿ ತನ್ನ ಕಾರ್ಯಕ್ರಮ ಗಳನ್ನು ಪ್ರದರ್ಶಿಸಲು ಯೋಚಿಸಿದ. ತನ್ನ ಹಳೆಯ ಮಿತ್ರ ದೇಸಾಯಿಯ ಸಹಕಾರ ದೊಂದಿಗೆ ಪ್ರದರ್ಶನದ ಯೋಜನೆಗಳನ್ನು ಗುರುರಾಜ ಸಿದ್ಧಪಡಿಸತೊಡಗಿದ. ಆದರೆ ಗುರುರಾಜ ವ್ಯವಸ್ಥೆಗೊಳಿಸಿಟ್ಟ ಪ್ರಥಮ ನಾಟ್ಯ ಪ್ರದರ್ಶನಕ್ಕೆ ಅನಿರೀಕ್ಷಿತ ವಾಹನ ಸಂಚಕಾರರಿಂದ ಒಂದು ನರಪಿಳ್ಳೆಯೂ ಬರದೆ ಮುಂಬಯಿಯಲ್ಲಿನ ಗುರುರಾಜನ ಪ್ರಥಮ ಪ್ರಯತ್ನಕ್ಕೆ ದೊಡ್ಡ ಪೆಟ್ಟಾಯಿತು. ಈ ನೃತ್ಯದ ಎರಡನೇ ಪ್ರದರ್ಶನ ದಲ್ಲಿ ಗುರುರಾಜನಿಗೆ ಕುರೂಪ್‌ನ ಭೇಟಿಯಾಗಿ ಏನೋ ಒಂದು ರೀತಿಯ ಸಮಾ ಧಾನ ಆನಂದವಾಗುತ್ತದೆ. ಪ್ರದರ್ಶನಕ್ಕೆ ಪ್ರೇಕ್ಷಕರಿಲ್ಲದ್ದು ಗುರುರಾಜನಿಗೆ ಒಂದು ಸಂಕಟವಾದರೆ ತನ್ನೊಂದಿಗೆ ಬಂದ ನಟನಟಿಯರಿಗೆ ದುಡ್ಡನ್ನು ಸಕಾಲಕ್ಕೆ ಎಣಿಸಿ ನೀಡಬೇಕಾದ ಸಂಕಟ ಮತ್ತೊಂದು ಕಡೆ.

ಕೆಲದಿನದ ನಂತರ ಮತ್ತೊಂದು ಪ್ರದರ್ಶನ ನಿಶ್ಚಯವಾಗುತ್ತದೆ. ಕುರೂಪರ ಪ್ರಯತ್ನದಿಂದ ಪ್ರದರ್ಶನಕ್ಕೆ ಸೂಕ್ತ ಸ್ಥಳ ಸಿಗುತ್ತದೆ. "ಜೀವನ ಪ್ರಭಾತ" ಎಂಬ ಒಂದು ಹೊಸ ಕಾರ್ಯಕ್ರಮವನ್ನು ರೂಪಿಸಿ ಪ್ರದರ್ಶಿಸಲು ಯೋಚಿಸಿದ್ದ ಈ ಕಾರ್ಯಕ್ರಮಕ್ಕೆ ಗುರುರಾಜ ಮಂತ್ರಿಗಳನ್ನು ಆಹ್ವಾನಿಸಿದ್ದ. ಆದರೆ ಗುರುರಾಜನ ಬಾಳಿನಲ್ಲಿ ಒಂದು ಹೊಸ ಅಧ್ಯಾಯವನ್ನೇ ತೆರೆಯಬಹುದಾ ಗಿದ್ದ ಈ ಪ್ರದರ್ಶನ ರಾಷ್ಟ್ರಪಿತ ಗಾಂಧೀಜಿಯವರ ನಿಧನದಿಂದ ಇಡೀ ದೇಶಕ್ಕೆ ಆದ ಒಂದು ದೊಡ್ಡ ಆಘಾತದಿಂದ ತತ್ತರಿಸುತ್ತದೆ. ಇದರಿಂದಾಗಿ'ಜೀವನ ಪ್ರಭಾತ' ಪ್ರದರ್ಶನ ಸ್ಥಗಿತಗೊಳ್ಳುತ್ತದೆ. ಇಲ್ಲಿ ಗಾಂಧೀಜಿಯವರ ದೇಹಾಂತ್ಯದ ಬಗ್ಗೆ ಕಾದಂಬರಿಕಾರರು ಕಾದಂಬರಿಗೆ ಸ್ವಲ್ಪ ಅನವಶ್ಯಕ ಎನ್ನುವ ಮಟ್ಟಿಗೆ ದೀರ್ಘವಾದ ಚಿತ್ರಣ ನೀಡಿದ್ದಾರೆ.

ಗುರುರಾಜ ತನಗಾದ ಸೋಲಿನಿಂದ ತತ್ತರಿಸಿ ತನ್ನ ಊರ ದಾರಿ ಹಿಡಿಯುತ್ತಾನೆ. ತಾನು ಇದುವರೆಗು ನಡೆಸಿದ್ದು "ಕಲೆಯ ಉಪಾಸನೆಯಲ್ಲ ಅದರ ವ್ಯಭಿಚಾರ" ಎಂಬ ಆತನ ಕೊರಗು ಆತನಲ್ಲಿ ಒಂದು ರೀತಿಯ ತ್ಯಾಗದ ವಿರಕ್ತ ಭಾವನೆ ಮೂಡಿಸುತ್ತದೆ.

ಕೊನೆಗೆ ಗುರುರಾಜನಿಗೆ ಮಹಾತ್ಮಾ ಗಾಂಧೀಜಿಯವರ ಜೀವನ ಚಿತ್ರ ಸಂದೇಶಗಳನ್ನು ನೃತ್ಯ ರೂಪಕದ ಮೂಲಕ ಮಾಡಿಸುವ ಬಲವಾದ ಆಸೆ ಮೂಡುತ್ತದೆ. ಆದರೆ ಈ ಯೋಜನೆ ಹಣ ಗಳಿಕೆಗಾಗಿ ಅಲ್ಲ. ತ್ಯಾಗ, ಬಲಿದಾನ, ತಪಶ್ಚರ್ಯೆಗಳಿಂದ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟು ದೀನ ದರಿದ್ರರ ಸೇವೆಗಾಗಿ ತಮ್ಮ ಪ್ರಾಣವನ್ನೇ ಮುಡಿಪಾಗಿಟ್ಟ ಗಾಂಧೀಜಿಯವರ ಪುಣ್ಯ ಸ್ಮರಣೆಗಾಗಿ ಮಾತ್ರ. ಹಳ್ಳಿ ಹಳ್ಳಿಗಳಲ್ಲಿ ಈ ಚಿತ್ರದ ಉಚಿತ ಪ್ರದರ್ಶನ ನೀಡುವ ಆಸೆ ಅವನಲ್ಲಿ ಬಲವಾದ ಹೆಬ್ಬಯಕೆಯಾಗಿ ಮೂಡುತ್ತದೆ. ಆದರೆ ಇದಕ್ಕೆ ಹಣ ಎಲ್ಲಿಂದ ಬಂದೀತು? ಆದರೂ ಗುರುರಾಜನಿಗೆ ಇದು ಸಾಧ್ಯವಾಗುತ್ತದೆ ಎಂಬ ಆತ್ಮವಿಶ್ವಾಸ.

ಒಂದು ಉಚಿತ ಆಶ್ರಮ ಸ್ಥಾಪಿಸಿ ಅಲ್ಲಿ ದುಡಿಯುವವರೆಲ್ಲರಿಗೂ ಉಚಿತ ಆಹಾರ ವಸ್ತ್ರ ನೀಡಬೇಕೆಂಬ ಹಾಗೂ ಅದರೊಂದಿಗೆ ಕಲೆಯ ಉಪಾಸನೆಯೂ ಆಗಬೇಕೆಂಬ ಹೆಬ್ಬಯಕೆ ಗುರುರಾಜನಲ್ಲಿ ಮೂಡಿತು. ಕೊನೆಗೆ ಇದು ಗುರುರಾಜನ ಆತ್ಮವಿಶ್ವಾಸದ ಪ್ರಯತ್ನದಿಂದ "ನಟರಾಜಾಶ್ರಮ"ವಾಗಿ ಕಲ್ಪನೆಯ ಕನಸು ನನಸಾಯಿತು. ಈ ಆಶ್ರಮಕ್ಕೆ ಅನೇಕ ಕಡೆಯಿಂದ ದೇಣಿಗೆ ಬಂದಿತು. ಕೊನೆಯದಾಗಿ ಬಂದ ದೇಣಿಗೆ ಒಂದು ಸಾವಿರ ರೂಪಾಯಿ. ಇದು ಯಾರದು ಎಂದು ಎಲ್ಲರಿಗೂ ಅಚ್ಚರಿ. ಕೊನೆಗೆ ಇದು ಕಲಾರಾಣಿ ನೀಡಿದ ದೇಣಿಗೆಯೆಂದು ತಿಳಿದಾಗ ಗುರುರಾಜ ದಿಗ್ಭ್ರಮಿತನಾಗುತ್ತಾನೆ.

ನಟರಾಜಾಶ್ರಮದ ಸ್ಥಾಪನೆಯ ಮೂಲಕ ಎಲ್ಲರ ಪ್ರಶಂಸೆಗೆ ಒಳಗಾದ ಗುರುರಾಜನ ಕಲಾಪ್ರೌಢಿಮೆ ಕೊನೆಗೂ ತನ್ನ ಸಾರ್ಥಕತೆ ಪಡೆಯುತ್ತದೆ.

ಈ ಕಾದಂಬರಿ ಪ್ರಧಾನವಾಗಿ ಕಲೋಪಾಸಕನ ಬದುಕನ್ನು ಚಿತ್ರಿಸುವ ಒಂದು ಸಾರ್ಥಕ ಪ್ರಯತ್ನವಾದರೂ ಕಲೋಪಾಸಕನ ವೈಯುಕ್ತಿಕ ಬದುಕನ್ನು ಆವರಿಸಿ ಮಾನವೀಯ ಸಂಬಂಧಗಳ ಸೂಕ್ಷ್ಮ ಚಿತ್ರವನ್ನು ನೀಡುವುದರಲ್ಲಿಯೂ ಕಾದಂಬರಿ ಸಫಲವಾಗಿದೆ. ಈ ಕಾದಂಬರಿಯಲ್ಲಿ ಕಂಡು ಬರುವ ಕೆಲವು ಪಾತ್ರವಂತೂ ವಾಸ್ತವಿಕ ಬದುಕಿಗೆ ತೀರಾ ಸನಿಹದಲ್ಲಿವೆ. ಸುಬ್ಬಣ್ಣ ಮೊದಮೊದಲು ಸ್ವಾರ್ಥದ, ಕಾಮುದ ಪಿಶಾಚಿಯಾಗಿ ಕಂಡು ಕೊನೆಗೆ ವೈರಾಗ್ಯದ ಮೊರೆ ಹೊಕ್ಕುತ್ತಾನೆ. ಸುಬ್ಬಣ್ಣನ ಹೆಂಡತಿ ವರದಾಬಾಯಿ ಉತ್ತಮ ಸಂಸ್ಕಾರವುಳ್ಳ ಹೆಣ್ಣಾದರೂ ಪರಿಸರದ ಕ್ರೌರ್ಯಕ್ಕೆ ಬಲಿಯಾಗುತ್ತಾಳೆ. ಮಕ್ಕಳಿಲ್ಲದೆ ತಾಯ್ತನದ

ಸುಖದಿಂದ ವಂಚಿತಳಾದ ಆಕೆ ಹೆಣ್ಣಿನ ಸಹಜ ದ್ವೇಷಾಸೂಯೆಗಳಿಂದ ದೂರವಾಗಿ ಅಂಬಕ್ಕನೊಂದಿಗೆ ವಾತ್ಸಲ್ಯದಿಂದ, ಅಂಬಕ್ಕನ ಮಗನೊಂದಿಗೆ ಮಮತೆಯಿಂದ ವರ್ತಿಸುವುದನ್ನು ಕಂಡಾಗ ಆಕೆಯ ಕರುಣಾಹೃದಯದ ಪರಿಚಯವಾಗುತ್ತದೆ. ಇದೇ ವರದಾಬಾಯಿ ತನ್ನ ಗಂಡನನ್ನು ತನ್ನ ಬಲೆಗೆ ಹಾಕಿಕೊಂಡು ಆಟವಾಡಿ ಸುತ್ತಿದ್ದ ತನ್ನ ಬಾಲ್ಯದ ಗೆಳತಿ ವಿಠಕ್ಕನನ್ನು ಕಂಡು ಹೌಹಾರುತ್ತಾಳೆ.

ರೈಲಿನಲ್ಲಿ ಹೋಗುವಾಗ ಭಿಕ್ಷುಕಿಯೊಬ್ಬಳು ತನ್ನ ಕೂಸನ್ನು ಹೊತ್ತುಕೊಂಡಿದ್ದಾಗ ಆಕೆಯನ್ನು ಕಂಡ ವರದಾಬಾಯಿಗೆ "ಸಾಕಲು ಶಕ್ತಿ ಇಲ್ಲದವರಿಗೆ ಮಗುವನ್ನು ಕೊಟ್ಟು ದೇವರು ತನಗೆ ಒಂದು ಮಗುವನ್ನು ದಯಪಾಲಿಸಲಿಲ್ಲವಲ್ಲ" ಎಂಬ ಕೊರಗು ಉಂಟಾಗುತ್ತದೆ. ಆಗ ಆಕೆ ಭಿಕ್ಷುಕಿಯತ್ತ ವಿಠಕ್ಕನೊಂದಿಗೆ ನಡೆದುಕೊಂಡ ರೀತಿ ತಾಯ್ತನದಿಂದ ವಂಚಿತಳಾದ ಅತೃಪ್ತ ಹೆಣ್ಣೊಂದು ಹೇಗೆ ತನ್ನ ಹೃದಯದಲ್ಲಿ ಅಡಗಿರುವ ಅತೃಪ್ತ ಬಯಕೆಗಳಿಗೆ ಭಯಾನಕ ರೂಪ ನೀಡಿ ವರ್ತಿಸುವಳು ಎಂಬುದನ್ನು ಚಿತ್ರಿಸುತ್ತದೆ. ಇದು ತಾಯ್ತನದಿಂದ ವಂಚಿತಳಾದ ಹೆಣ್ಣಿನ ಒಂದು ಮುಖವಾದರೆ ಜೀವನದಲ್ಲಿ ಸಂಗಾತಿಯೇ ಇಲ್ಲದೆ ಸಾಮಾಜಿಕ ಭದ್ರತೆಯಿಂದ ದೂರವಾಗಿ ಗುರುರಾಜನನ್ನು ಸಂಗಾತಿಯನ್ನಾಗಿ ಪಡೆಯುವಲ್ಲಿ ವಿಫಲಳಾಗಿ ಕೊನೆಗೆ ತನ್ನ ಬಾಳಿನಲ್ಲಿ ಅನಿಶ್ಚಿತತೆಯಲ್ಲಿಯೇ ಉಳಿದ ಕಲಾರಾಣಿಯ ಬದುಕು ಹೆಣ್ಣಿನ ಮತ್ತೊಂದು ಮುಖವಾಗುತ್ತದೆ. ಗಂಡನ ಒಲುಮೆಯೇ ತನ್ನ ಜೀವನದ ಉಸಿರು ಎಂದು ಭಾವಿಸಿದ ಅಂಬಕ್ಕ ಕೆಲವೊಂದು ಸಂದರ್ಭವನ್ನು ಬಿಟ್ಟರೆ ಒಬ್ಬ ಉತ್ತಮ ಪತ್ನಿಯಾಗಿ ಗೃಹಿಣಿಯಾಗಿ ಕಾಣುತ್ತಾಳೆ. ಸಾಂಪ್ರದಾಯಿಕ ಮನೆತನದ ಗೌರವಕ್ಕಾಗಿ ಹಠದ ಸ್ವಭಾವದಿಂದ ಗುರುರಾಜನನ್ನು ದೂರಮಾಡಿಕೊಂಡ ತಿಮ್ಮಣ್ಣನವರು ತಮ್ಮ ಅಸಹಾಯಕತೆಯಿಂದ ಒಳಗೆ ನೊಂದು ಕ್ಷುದ್ರರಾಗುತ್ತಾರೆ.

ಗುರುರಾಜನಿಗೆ ಸ್ನೇಹಿತರಾಗಿ ನೃತ್ಯಶಾಲೆಯಲ್ಲಿ ಪರಿಚಿತವಾದ ಪರ್ಲ್ ಮತ್ತು ಆನಂದ ಕುರೂಪ್ ಅವರು ಆದರ್ಶ ಸ್ನೇಹಿತರ ಪ್ರತೀಕವಾಗಿದ್ದಾರೆ. ಕಲೆ ಉಪಾಸನೆಗಲ್ಲದೆ ಉಪಜೀವನಕ್ಕಲ್ಲ ಎಂಬ ಸಂದೇಶದ ನಾಟ್ಯ ಗುರು ನಂಬೂದ್ರಿಯವರು ನಿಜವಾದ ಅಚಲ ಕಲಾರಾಧಕರಾಗಿ ಓದುಗರ ಭಕ್ತಿ ಗೌರವ ಗಳಿಸುತ್ತಾರೆ.

ಕಾದಂಬರಿಕಾರರು ವಾಸ್ತವಿಕತೆಗೆ ತುಂಬಾ ಹತ್ತಿರವಾದ ಸಾಮ್ಯಗಳನ್ನು ಸನ್ನಿವೇಶಗಳನ್ನು ಸೃಷ್ಟಿಸಿ ಓದುಗರು ನಿಜವಾಗಿಯೂ ಆ ಪಾತ್ರಗಳೊಂದಿಗೆ ಬೆರೆತು ಸೃಷ್ಟಿಸಿರುವ ಸನ್ನಿವೇಶಗಳಲ್ಲಿ ಮೈಮರೆತಿದ್ದಾರೇನೋ ಎನ್ನುವಷ್ಟು ಮಟ್ಟಿಗೆ ಓದುಗರು ತನ್ಮಯರಾಗುತ್ತಾರೆ. ಅಲ್ಲದೆ ಇಲ್ಲಿ ಬಳಸಿರುವ ಭಾಷೆಯಂತೂ ತುಂಬಾ ಮೋಹಕವಾಗಿದೆ, ಸರಳವಾಗಿದೆ.

ಕಲೋಪಜೀವಿ ಕಾದಂಬರಿ ಮೊದಮೊದಲು ತುಂಬಾ ಆಸಕ್ತಿ ಕೆರಳಿಸಿ ಮಧ್ಯೆ ಮಧ್ಯೆ ಅಸಂಗತ ಘಟನೆಗಳ ಸೃಷ್ಟಿಯಿಂದ ಕೆಲವೊಮ್ಮೆ ಓದುಗರಲ್ಲಿ ಅಸಹನೆ ಉಂಟುಮಾಡುತ್ತದೆ. ಕೆಲವೊಂದು ಕಲ್ಪನೆಗಳಂತೂ ತುಂಬಾ ಅನಗತ್ಯವೇನೋ ಎಂದೆನಿಸುತ್ತದೆ. ಪರಸ್ಪರ ವ್ಯಕ್ತಿಗಳ ನಡುವಣ ಸಂಬಂಧದ ಕಲ್ಪನೆ ಕೆಲವೊಮ್ಮೆ ಅಸ್ಪಷ್ಟವಾಗಿ ಉಳಿಯುತ್ತದೆ. ಕಲೋಪಾಸನೆಯೇ ಪರಮೋಚ್ಚ ಗುರಿಯಾಗಿ ಹೊಂದಿದ್ದ ಗುರುರಾಜ ಕೆಲವೊಮ್ಮೆ ಭ್ರಮನಿರಸನನಾಗಿ ನಟರಾಜಾಶ್ರಮದ ಸ್ಥಾಪನೆಯಲ್ಲಿಯೇ ತನ್ನ ಗುರಿಯ ಸಾಧನೆಯನ್ನು ಕಂಡುಕೊಳ್ಳಬೇಕಾಗುತ್ತದೆ.

ಒಟ್ಟಿನಲ್ಲಿ 'ಕಲೋಪಜೀವಿ' ಕಾದಂಬರಿ ಕಲೆಯ ಉಪಾಸನೆಯ ಮಹತ್ತರ ಗುರಿಯನ್ನು ಸಾಧಿಸಲು ಹೊರಟ ಒಬ್ಬ ಕಲೋಪಾಸಕನ ಆದರ್ಶ ಬದುಕನ್ನು ಸಹಜವಾಗಿ ಚಿತ್ರಿಸಿರುವ ಒಂದು ಉತ್ತಮ ಕಾದಂಬರಿ, ಕನ್ನಡ ಕಾದಂಬರಿ ಪ್ರಪಂಚಕ್ಕೆ ಎನ್ಕೆಯವರು ನೀಡಿರುವ ಉತ್ತಮ ಕಾಣಿಕೆ.

# ‘ಗೌರೀಶಂಕರ’

ಡಾ. ಜಿ. ಎಂ. ಹೆಗಡೆ

ಹೊಸಗನ್ನಡ ಸಾಹಿತ್ಯದ ಪ್ರಸಿದ್ಧ ಲೇಖಕರಾದ ಎನ್ಕೆಯವರ‘ಗೌರೀಶಂಕರ’ ಕಾದಂಬರಿಯು ೧೯೪೨ ಮತ್ತು ೧೯೬೨ ರ ನಡುವಿನ ಕಾಲಘಟ್ಟದ ಭಾರತೀಯ ಸಾಮಾಜಿಕ, ರಾಜಕೀಯ ಘಟನೆಗಳ ಹಿನ್ನೆಲೆಯಲ್ಲಿ ರೂಪುಗೊಂಡ ಕೃತಿಯಾಗಿದೆ. ಇಬ್ಬರು ಯುವಕರು ಆದರ್ಶ ಜೀವನಕ್ಕಾಗಿ ಹಂಬಲಿಸಿ ನಡೆಸಿದ ಹೋರಾಟದ ಕಥೆ ಕಾದಂಬರಿಯಲ್ಲಿ ವ್ಯಾಪ್ತವಾಗಿದೆ.

‘ಗೌರೀಶಂಕರ’ ಕಾದಂಬರಿಯ ಮಂಜುನಾಥನಿಗೆ ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿ ಆದರ್ಶವಾಗಿದ್ದಾರೆ. ೧೯೪೨ರಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ಗಾಂಧೀಜಿ ಕೊಟ್ಟ ಕರೆಗೆ ಓಗೊಟ್ಟು ವಿದ್ಯಾರ್ಥಿ ಜೀವನವನ್ನು ತ್ಯಜಿಸಿ ಚಳುವಳಿಯಲ್ಲಿ ಧುಮುಕಿ ಭೂಗತನಾಗಿ ಕೊನೆಗೆ ಜೈಲು ಸೇರುತ್ತಾನೆ ಮಂಜುನಾಥ. ಅವನಿಗೆ ಮಂಗಳೂರಿನಲ್ಲಿರುವ ತಂಗಿ ಗೌರಿ, ತಾಯಿ-ತಂದೆಗಳಿಗಿಂತ ದೇಶಸೇವೆ ಮತ್ತು ಸ್ವಾತಂತ್ರ್ಯ ಪವಿತ್ರವಾದ ಕಾರ್ಯ. ಅವನ ಆತ್ಮೀಯ ಮಿತ್ರ ಶಂಕರನು ಶಿಕ್ಷಕ ನಾಗಿ ಜೀವನದಲ್ಲಿ ಆದರ್ಶವನ್ನು ಸಾಧಿಸಬೇಕೆಂಬ ಆಶೆಯುಳ್ಳವ. ಈ ಇಬ್ಬರು ಯುವಕರು ತಾವು ಕಂಡುಕೊಂಡ ಪಥದಲ್ಲಿ ಸಾಗುವ ಚಿತ್ರದೊಂದಿಗೆ ಕಾದಂಬರಿ ಪ್ರಾರಂಭವಾಗುತ್ತದೆ.

ಮಂಜುನಾಥನ ತಂಗಿ ಗೌರಿ ಮತ್ತು ಶಂಕರ ಇವರಿಬ್ಬರ ನಡುವೆ ಪತ್ರ ವ್ಯವಹಾರ ನಡೆಯುತ್ತದೆ. ಅದು ಒಲಿದ ಯುವಕ ಯುವತಿಯರ ನಡುವಿನ ಒಲವಿನ ಓಲೆಯಾಗಿರದೆ ಸೋದರ ಸಂಬಂಧದ ಸ್ವರೂಪದ್ದಾಗಿದೆ. ಹೃದ್ಗತವಾದ ಭಾವನೆಗಳಿಂದ ಓತಪ್ರೋತವಾದ ಪರಸ್ಪರ ಆದರ್ಶ ವಿಚಾರ, ಆಲೋಚನೆಗಳ ಸೆಳೆತದಿಂದ ಕೂಡಿದ ಅವರ ಪತ್ರಗಳು ಕಾದಂಬರಿಯುದ್ದಕ್ಕೂ ಕಾಣುತ್ತವೆ. ಅವು ಅವರ ಅಂತರಂಗದ ಬದುಕಿನ ಬೆಳವಣಿಗೆಯ ವಿವಿಧ ಘಟ್ಟಗಳನ್ನು ಪರಿಚಯಿಸುತ್ತವೆ.

ದೇಶಕ್ಕೆ ಸ್ವಾತಂತ್ರ್ಯ ಪ್ರಾಪ್ತವಾದಾಗ ಮಂಜುನಾಥನು ಪುನಃ ಮಂಗಳೂರಿಗೆ ಬಂದು ಗಾಂಧೀಜಿಯವರ ಆದರ್ಶಗಳಾದ ಖಾದಿ ಪ್ರಚಾರ, ಹರಿಜನ ಸೇವೆಗಳಲ್ಲಿ

ತೊಡಗುತ್ತಾನೆ. ಹರಿಜನಕನ್ಯೆ ಸುಗುಣಾಳನ್ನು ಮದುವೆಯಾಗುತ್ತಾನೆ. ಕೆಲ ಕಾಲದ ಬಳಿಕ ಆಫ್ರಿಕಾ ದೇಶಕ್ಕೆಹೋಗಿ ಅಲ್ಲಿಯೂ ಸೇವೆ ಸಲ್ಲಿಸುತ್ತಾನೆ. ೧೯೬೨ರ ಚೀನಾ ಯುದ್ಧದಲ್ಲಿ ಪುನಃ ಭಾರತಕ್ಕೆ ಮರಳಿ ಬಂದು ದೇಶ ರಕ್ಷಣೆಗಾಗಿ ಹಿಮಾಲಯದ ಗಡಿ ಸೇರುತ್ತಾನೆ. ಅವನ ಆದರ್ಶ ಬದುಕು ಗಾಂಧೀಜಿಯವರ ಆದರ್ಶತತ್ತ್ವಗಳ ಹಿನ್ನೆಲೆಯಲ್ಲಿ ಸಾಗುತ್ತದೆ.

ಈ ಕಾದಂಬರಿಯ ಮಂಜುನಾಥನ ಪಾತ್ರಕ್ಕಿಂತ ಸಂವೇದನೆಯ ಬೆಳವಣಿಗೆಯ ದೃಷ್ಟಿಯಿಂದ ಶಂಕರನ ಪಾತ್ರ ಅತ್ಯಂತ ಮಹತ್ವದ್ದಾಗಿದೆ. ಶಂಕರನು ಸಾತ್ವಿಕ ಮನೋವೃತ್ತಿಯುಳ್ಳವನಾದರೂ ಸಂಸಾರದ ತಾಪತ್ರಯಗಳಲ್ಲಿ ಸಿಲುಕಿಕೊಂಡು ಮನಃಕ್ಲೇಶಗಳನ್ನು ಎದುರಿಸಿದವನು. ಗಿರಿಜೆ ವಿಧವೆಯಾಗಿ ಅಣ್ಣನನ್ನು ಸೇರಿಕೊಳ್ಳುವುದು, ತಾನು ಹೆಂಡತಿಯನ್ನು ಕಳೆದುಕೊಳ್ಳುವುದು ಮತ್ತು ಆರ್ಥಿಕ ಮಾನಸಿಕ ಕ್ಲೇಶಗಳಿಗೆ ಗುರಿಯಾಗುವ ರೀತಿಯಲ್ಲಿ ಶಂಕರ ಜೀವನವನ್ನು ಕಂಡು ಉಂಡು ಬೆಂದಾದವ. ಇದರಿಂದ ಅವನು ಅಧ್ಯಾತ್ಮವೇ ನಿಶ್ಚಿತ ಪ್ರಯೋಜನವೆಂದು ತೀರ್ಮಾನಕ್ಕೆ ಬರುತ್ತಾನೆ. ಅವನು ಪಾಂಡಿಚೇರಿಗೆ ಹೋಗಿ ಅರವಿಂದರ, ಮಾತೆಯವರ ವಿಚಾರ ತತ್ತ್ವಗಳಿಗೆ ಬದ್ಧನಾಗುತ್ತಾನೆ. ಪೂರ್ಣ ಯೋಗದೈವೀ ಜೀವನದ ಆದರ್ಶವನ್ನು ಮುಂದಿಟ್ಟುಕೊಂಡು ಸಾಧನೆಗೆ ತೊಡಗುತ್ತಾನೆ. ಈ ಮಧ್ಯೆ ಗೌರಿಯನ್ನು ಬಾಳಸಂಗಾತಿಯನ್ನಾಗಿ ಪಡೆಯುವ ವಿಚಾರವನ್ನು ಒಪ್ಪಿಕೊಳ್ಳದೆ ಶುದ್ಧಾಂತಃಕರಣಗಳಿಂದ ತನ್ನ ಸಹೋದರಿಯೆಂದು ಭಾವಿಸಿ ಅವಳಿಗೆ ತಾನು ಕಂಡುಕೊಂಡ ಅಧ್ಯಾತ್ಮ ಸಾಧನೆ, ಆದರ್ಶ ಜೀವನ ಧ್ಯೇಯಗಳನ್ನು ತಿಳಿಸಿದ ಸನ್ನಿವೇಶ ಕಾದಂಬರಿಯಲ್ಲಿ ಮಹತ್ವಪೂರ್ಣವಾದದ್ದಾಗಿದೆ. ಸ್ತ್ರೀಯನ್ನು ದೈವಭಾವವೆಂದು ಕಾಣಬೇಕೆಂಬ ಅರವಿಂದರ ವಿಚಾರಕ್ಕೆ ಒಂದು ವಾಸ್ತವ ಹಿನ್ನೆಲೆ ದೊರಕಿರುವುದು ಇಲ್ಲಿಯ ಶಂಕರ ಮತ್ತು ಗೌರಿಯ ಸಂಬಂಧವನ್ನು ನಿಖರಪಡಿಸುವ ಸನ್ನಿವೇಶದಲ್ಲಿ ಒಟ್ಟಿನಲ್ಲಿ ಗೌರಿಯ ಶಂಕರ ಮತ್ತು ಮಂಜುನಾಥ ಇಬ್ಬರು ಸಹೋದರರ ಆದರ್ಶವನ್ನು ಕಾಣುವ ಸ್ವಾರಸ್ಯಕರ ಸನ್ನಿವೇಶದ ಮೂಲಕ ಕಾದಂಬರಿ ಮುಕ್ತಾಯವಾಗುತ್ತದೆ. ಪರ್ಯಾಯವಾಗಿ ಗಾಂಧೀಜಿಯವರ ವಿಚಾರಧಾರೆ ಮತ್ತು ಅರವಿಂದರ ಆಧ್ಯಾತ್ಮಿಕ ಸತ್ತ್ವದಿಂದ ಸಮಕಾಲೀನ ಭಾರತೀಯ ಬದುಕು ಬೆಳೆಯಬೇಕೆಂಬ ಲೇಖಕರ ಆಶಯವು ಈ ಕಾದಂಬರಿಯಲ್ಲಿ ಮೂಡಿ ಬಂದಿದೆ.

ಈ ಕಾದಂಬರಿಯ ಭಾಷೆ, ಶೈಲಿ, ನಿರೂಪಣಾ ವಿಧಾನಗಳ ಕುರಿತು ಕೆಲವು ಮಾತುಗಳನ್ನು ಹೇಳುವ ಅಗತ್ಯವಿದೆ. ಕಾದಂಬರಿಯುದ್ದಕ್ಕೂ ಪಾತ್ರಗಳ ವ್ಯಕ್ತಿತ್ವ ವಿಕಾಸಕ್ಕೆ ಪೋಷಕವಾಗುವಂತೆ ಭಗವದ್ಗೀತೆ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ಅರವಿಂದ ಮತ್ತು ಇನ್ನಿತರ ಕವಿ ಸಾಹಿತಿಗಳ ವಾಣಿ ಅಲ್ಲಲ್ಲಿ ಚೆಲ್ಲು

ಮಾದಿವೆ. ಲೇಖಕರ ಲೋಕಾನುಭವದ ನುಡಿಗಳು ಮನಸೆಳೆಯುತ್ತವೆ. ಉದಾಹರಣೆಗಾಗಿ ಇಲ್ಲಿ ಕೆಲವನ್ನು ಕೊಡಬಹುದು. "ಮನೆ ಸುಡುತ್ತಿರುವಾಗ ಏನು ಉಜ್ವಲ ಪ್ರಕಾಶ ಎಂದು ಉದ್ಗಾರ ತೆಗೆಯುವ ಮೂರ್ಖರಿರಬಹುದೇ?" (ಪು. ೧.); "ಮಧುಕರನಿಗೆ ಮಧುವನ್ನು ಎತ್ತಿ ನೀಡುತ್ತದೆಯೇ ಎಳ್ದಾವರೆ" (ಪು. ೧೦); 'ರಾಮಕೃಷ್ಣರು, ವಿವೇಕಾನಂದರು. ಅರವಿಂದರ ಚರಿತ್ರೆಗಳೇ ನಮಗೆ ಬೆಳಕಿನ ಕಿಂಡಿಗಳಾಗಿವೆ.' (ಪು. ೧೧೨); "ಸ್ವಾತಂತ್ರ್ಯ ಎಂಬ ಶಬ್ದ ಬಹಳ ಬೆಲೆಯುಳ್ಳದ್ದು. ವ್ಯಕ್ತಿಗೆ ಆಗಲಿ ನಾಡಿಗೆ ಆಗಲಿ ನಸ್ತ್ರೀ ಸ್ವಾತಂತ್ರ್ಯಮರ್ಹತಿ ಎಂಬ ಮಾತು ಇಂದಿನ ನಾಳಿನ ಸಮಾಜಕ್ಕೆ ಅನ್ವಯಿಸಲಾಗದು.' (ಪು. ೧೩೫); 'ಜಗತ್ತಿನಲ್ಲಿ ಒಂದು ಕಾಣದ ಕೈ ನಮ್ಮನ್ನೆಲ್ಲಾ ನಡೆಸಿಕೊಂಡು ಹೋಗುತ್ತದೆ. (ಪು. ೧೬೯); 'ಪೃಥ್ವಿ ವಿಪುಲವಾಗಿದೆ. ಜೀವನ ವಿಶಾಲವಾಗಿದೆ. ಮಾನವನ ಆಕಾರ ಆಯುಷ್ಯ ಮಾತ್ರ ಅಲ್ಪ'. (ಪು. ೧೮೬) 'ಭಾರತವು ವಿಶ್ವಮೈತ್ರಿಯನ್ನು ಅರಸುತ್ತಿರುವಾಗ ವಿಶಾಲ ಭಾವನೆ ಎಲ್ಲರಲ್ಲಿ ಮೊಳೆಯಬೇಕು.' (ಪು. ೧೮೭); 'ಜಗದೊಳಗೆ ಸಜ್ಜನಿಕೆ ಸತ್ತಿಲ್ಲ. ಇಂತಹ ಸಜ್ಜನಿಕೆಯ ಬೀಜದಿಂದಲೇ ಮೂಡಿಬರುತ್ತದೆ ದೈವಿಕತೆ' (ಪು. ೨೧೫) ಇತ್ಯಾದಿ.

ಸನ್ನಿವೇಶದ ನಿರೂಪಣೆಯಲ್ಲಿ ಜಾನಪದ ಜೀವನದ ಚಿತ್ರಗಳೂ ಕಾಣಿಸುವದುಂಟು. ಧಾರವಾಡದಲ್ಲಿ ನಾಡಹಬ್ಬದ ಸಂದರ್ಭದಲ್ಲಿ ಲಕ್ಷ್ಮೀನಾರಾಯಣ ಗುಡಿಯ ಉತ್ಸವದ ಚಿತ್ರ ಕಾದಂಬರಿಯಲ್ಲಿ ಬಂದಿದೆ. ಹೀಗೆಯೆ ಅನೇಕ ಕವಿ ಸಾಹಿತಿಗಳ ಉಲ್ಲೇಖಗಳು ಕನ್ನಡ ನೆಲದ ಸಾಂಸ್ಕೃತಿಕ ಬದುಕನ್ನು ಆತ್ಮೀಯವಾಗಿ ಪರಿಚಯಿಸುತ್ತವೆ.

ಹೀಗಿದ್ದರೂ ಈ ಕಾದಂಬರಿಯಲ್ಲಿ ಲೇಖಕರು ಬಳಸಿರುವ ಇಂಗ್ಲೀಷ್ ಶಬ್ದಗಳು, ವಾಕ್ಯಗಳು ಅತಿಯಾಗಿವೆಯೆಂದು ನಮಗೆ ತೋರುತ್ತದೆ. ಕೆಲವು ಶಬ್ದಗಳನ್ನು ಕನ್ನಡದಲ್ಲಿಯೂ ಇನ್ನು ಕೆಲವು ವಾಕ್ಯಗಳನ್ನು (ಅರವಿಂದರು ಮೊದಲಾದ ಮಹಾನುಭಾವರ) ಕನ್ನಡಕ್ಕೆ ಅನುವಾದಿಸಿ ನಿರೂಪಿಸುವದರಿಂದ ಕಾದಂಬರಿಗೆ ಹೆಚ್ಚಿನ ಬೆಲೆ ಬರುತ್ತಿತ್ತೆಂದು ಹೇಳಬಹುದಾಗಿದೆ. ಕಾದಂಬರಿಯ ಶೈಲಿಯ ದೃಷ್ಟಿಯಿಂದ ಅಚ್ಚಗನ್ನಡದ ನಿರೂಪಣೆ ಇಂದಿನ ಸಂದರ್ಭದಲ್ಲಿ ಅತ್ಯಂತ ಮಹತ್ವದ್ದಾಗಿದೆ.

ಒಟ್ಟಿನಲ್ಲಿ ಸಮಕಾಲೀನ ಭಾರತೀಯ ಜನತೆಗೆ ಆದರ್ಶವನ್ನು ಕೊಟ್ಟು ಗಾಂಧಿ, ಅರವಿಂದರ ವಿಚಾರ ತತ್ತ್ವಗಳ ಹಿನ್ನೆಲೆಯಲ್ಲಿ ರೂಪಿತವಾದ 'ಗೌರೀಶಂಕರ' ಕಾದಂಬರಿ ಆದರ್ಶ ಬದುಕಿನ ಕಥೆಯಾಗಿದೆ.

ನಾನಿಕಾಕಾ : ಎನ್ಮೆಬರೆಹ/೩೪೭

# ‘ಮೂರು ತಲೆಮಾರು’

ಎಚ್. ವ್ಹಿ. ನಾಗೇಶ

ಇತ್ತೀಚೆಗೆ ಎನ್ಕೆಯವರು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ‘ನಾಸಿಯ ನೆನಹುಗಳು’ ಎಂಬ ಆತ್ಮವೃತ್ತವನ್ನು ಕೊಟ್ಟಿದ್ದಾರೆ ಆ ನೆನಪಿನ ಸುರುಳಿಗಳು ನಾಸಿಯ ಸುತ್ತಣ ಪರಿಸರವನ್ನು ಒಳ್ಳೇ ರೋಚಕವಾಗಿ ಪುನರ್‌ಸೃಷ್ಟಿಸುತ್ತವೆ. ಇಂಥದೇ ಬಗೆಯ ನೆನಪುಗಳ ಸುರುಳಿಯನ್ನು ಎನ್ಕೆಯವರು ಈಗ ಹನ್ನೊಂದು ವರ್ಷಗಳ ಹಿಂದೆ (ಜೂನ್-ಆಕ್ಟೋಬರ, ೧೯೭೩) ‘ಮೂರು ತಲೆಮಾರು’ ಎಂಬ ಧಾರಾವಾಹಿ ಕಾದಂಬರಿಯ ಮೂಲಕ ‘ಕರ್ಮವೀರ’ ವಾರಪತ್ರಿಕೆಯ ಓದುಗರಿಗೆ ಕೊಟ್ಟಿದ್ದರು. ಆದರೆ ಅದು ಒಬ್ಬ ವ್ಯಕ್ತಿಯ ಆತ್ಮವೃತ್ತವಾಗಿರಲಿಲ್ಲ; ಅದು ಒಂದು ಕಾಲಖಂಡದ ಆತ್ಮವೃತ್ತವಾಗಿತ್ತು. ತುಳಸಿ, ಜೋಧಣ್ಣ, ಬಂಡಾಚಾರ್ಯ, ವಿಷ್ಣುಪಂತ, ಕೃಷ್ಣಕ್ಕ ಮುಂತಾದ ರಕ್ತಮಾಂಸದ ವ್ಯಕ್ತಿಗಳ ಹೆಸರುಗಳಿದ್ದರೂ ಅದು ಮುಖ್ಯವಾಗಿ ಸಮುದಾಯ ಜೀವನದಲ್ಲಿ ಕಂಡೂಕಾಣದಂತೆ ನಡೆಯುತ್ತಿದ್ದ ಪರಿವರ್ತನೆಗಳ ಕಥೆ.

‘ಮೂರು ತಲೆಮಾರು’ ಕಾದಂಬರಿ ಪ್ರಾರಂಭವಾಗುವುದು ನರಗುಂದದ ‘ಬಾಬಾಸಾಹೇಬ’ನ ಪತನದ ಕಾಲದಿಂದ; ಅದು ಮುಗಿಯುವುದು ‘ಭಾಭಾ’ ಅಣುಶಕ್ತಿಕೇಂದ್ರದ ಉಚ್ಛ್ರಾಯದೊಂದಿಗೆ. ಬಾಬಾಸಾಹೇಬನ ಖಾಸಗಿ ಕಾರಭಾರಿ ವಿಠ್ಠಪ್ಪ, ಅವರ ಮಗ ಸುಬ್ಬರಾಯ, ಸುಬ್ಬರಾಯರ ಮಗ ಜೋಧಣ್ಣ, ಅವರ ಮಕ್ಕಳು ಸ್ವಾಮಿ ಮತ್ತು ಶ್ಯಾಮ, ಶ್ಯಾಮನ ಮಗ ಜೋಧ(ಣ್ಣ) ರಾಯ ಹೀಗೆ ಐದು ತಲೆಮಾರುಗಳಿದ್ದರೂ ಮೊದಲ ಮತ್ತು ಕೊನೆಯ ತಲೆಮಾರುಗಳ ಚಿತ್ರ ಮುಸಕಾಗಿ ಬಂದಿದ್ದು ನಡುವಿನ ಮೂರು ತಲೆಮಾರುಗಳನ್ನು ಶುಭ್ರವಾದ ಕುಂಚಗಳಿಂದ ಎಳೆಯಲಾಗಿದೆ. ವಿವರಗಳು ಎಳೆಎಳೆಯಾಗಿ ಸ್ಪಷ್ಟವಾಗಿ ಬಂದಿವೆ.

ಐದು ತಲೆಮಾರುಗಳ ಸಮುದಾಯ ಜೀವನವನ್ನು ಪ್ರತಿನಿಧಿಸುವ ಒಂದು ಕುಟುಂಬ ಅಷ್ಟು ಕಾಲ ಈ ಕಾದಂಬರಿಯ ಕೇಂದ್ರದಲ್ಲಿದೆ. ಇದರ ಕಥೆಯನ್ನು ಕೇಲವೇ ಕೆಲವು ವಾಕ್ಯಗಳಲ್ಲಿ ಹೀಗೆ ಸಂಕ್ಷೇಪಿಸಿ ಹೇಳಬಹುದು: ಬಾಬಾಸಾಹೇಬರ

ಖಾಸಗಿ ಕಾರಭಾರಿ ವಿಠ್ಠಪ್ಪನವರ ಮಗ ಸುಬ್ಬರಾಯರು ಸಂಸ್ಥಾನದ ಪತನ ದೊಂದಿಗೆ ಅಂತಸ್ತು ವರಮಾನಗಳನ್ನು ಕಳೆದುಕೊಂಡರೂ ಸಂಸ್ಥಾನೀ ಅಭಿಮಾನ ಕಳೆದುಕೊಂಡಿರಲಿಲ್ಲ. ಅವರ ಮಗ ಬೋಧಣ್ಣನಿಗೆ ಮಂತ್ರ-ವೈದ್ಯ ಪ್ರವೀಣ ಬಂಡಾಚಾರ್ಯರ ಮಗಳು ತುಳಸಕ್ಕನೊಡನೆ ವಿವಾಹವಾಯಿತು. ಬಂಡಾ ಚಾರ್ಯರು ಸಾಕಷ್ಟು ಗಳಿಸಿದ್ದರೂ ಹೆಂಡತಿ ತೀರಿಕೊಂಡಮೇಲೆ ನೆಮ್ಮದಿ ಕಳೆದು ಕೊಂಡಿದ್ದರು. ಆಸ್ತಿಯಲ್ಲಿ ತಮ್ಮಿಬ್ಬರು ಹೆಣ್ಣುಮಕ್ಕಳಿಗೆ ಸಮಪಾಲು ಹಂಚಿ ಕುರುಡು ಮಗ ಶೇಷಣ್ಣನನ್ನು ತುಳಸಕ್ಕನ ಸುಪರ್ದಿಗೆ ಒಪ್ಪಿಸಿ ಕಣ್ಣುಮುಚ್ಚಿದರು. ಮೈಸೂರು ಅರಮನೆಯ ಚಿತ್ರಕಾರನಾಗಬೇಕಾಗಿದ್ದ ಬೋಧಣ್ಣ ಆಗ ಅನಿವಾರ್ಯ ವಾಗಿ ಗದುಗಿಗೆ ಬಂದು ಮಾವನ ಮನೆಯ ಒಂದು ಭಾಗದಲ್ಲಿರುತ್ತಾನೆ. ತುಳ ಸಕ್ಕನ ಅಕ್ಕ ತಂಗೆವ್ವನ ಗಂಡ ವ್ಯಾಸರಾಯ ಇದ್ದ ನೌಕರಿ ಬಿಟ್ಟು ಆ ಮನೆಯ ಇನ್ನೊಂದು ಭಾಗದಲ್ಲಿ ಬಂದು ನಿಂತು ಎಲ್ಲರ ಶಾಂತಿಯನ್ನು ಕೆಡಿಸುತ್ತಾನೆ. ಅವನ ಮಗ ತಿಮ್ಮಣ್ಣ ಬೆಳೆದು ಮದುವೆಯಾದರೂ ವಿವೇಕಿಯಾಗಲಿಲ್ಲ. ಸಾಲ ಮಾಡಿ ಊರು ಬಿಟ್ಟು ಓಡಿ ಹೋದ. ಬೋಧಣ್ಣ ಈ ನಡುವೆ ಹತ್ತಾರು ಕಡೆ ವರ್ಗವಾಗಿ ಹೋಗಿ ಮತ್ತೆ ಗದುಗಿಗೆ ಮರಳಿ ಬಂದ. ಮಗ ಸ್ವಾಮಿ ಮ್ಯಾಟ್ರಿಕ್ ಆಗಲಿಲ್ಲ. ತಂಗಿ ರಿಂದಕ್ಕ ವಿಧವೆಯಾಗಿ ಬಂದು ಆಶ್ರಯ ಪಡೆಯುತ್ತಾಳೆ. ಉದ್ದಕ್ಕೂ ಬೋಧಣ್ಣ ತನ್ನ ಬಂಧು-ಬಳಗಕ್ಕೆ ಕೈಲಾದ ಸಹಾಯ ಮಾಡುತ್ತಲೇ ಹೋದ. ಆರೋಗ್ಯ ಕೆಡುತ್ತಿತ್ತು. ರಿಂದಕ್ಕನ ಮಗಳು ಸುಬ್ಬಿಗೂ ತಿಮ್ಮನ ಮಗ ಕಿಟ್ಟಿಗೂ ಮದುವೆ ನಡೆಯುತ್ತಿದ್ದಾಗಲೇ ಬೋಧಣ್ಣ ಕೊನೆಯುಸಿರು ಎಳೆದ.

ತಂದೆಯ ಮರಣಾನಂತರ ಸ್ವಾಮಿಗೆ ಶ್ರೀಮಂತರ ಮನೆಯಿಂದ ಹೆಣ್ಣು ತಂದರು. ಆ ಸೊಸೆ ಲಕ್ಷ್ಮಿ ಶ್ರೀಮಂತಿಕೆಯನ್ನು ಮೆರೆಯುತ್ತ ತುಳಸಕ್ಕ ಮತ್ತು ಮನೆಯ ಶಾಂತಿಯನ್ನು ಕೆಡಿಸಿದಳು. ಬೋಧಣ್ಣನ ಶ್ರಾದ್ಧದ ದಿನ ರಾದ್ಧಾಂತ ವಾಗಿ ಲಕ್ಷ್ಮಿ ಸ್ವಾಮಿಯನ್ನು ಮನೆಬಿಡಿಸಿ ತನ್ನ ತವರಿಗೆ ಒಯ್ದಳು. ಅಲ್ಲಿ ಅವನು ಸುಧಾರಿಸದೇ ಮತ್ತೆ ಗದುಗಿಗೆ ಬಂದು ಮಾವನ ಹಣದಿಂದ ಅಂಗಡಿ ತೆರೆದಾಗ ಮನೆಮುರುಕ ತಿಮ್ಮಣ್ಣನೂ ಅಲ್ಲಿಗೆ ಬಂದು ಸೇರಿ ಅಂಗಡಿ ದಿವಾಳಿ ಎಬ್ಬಿಸಿದ. ಆದರೆ ಸ್ವಾಮಿಯ ತಮ್ಮ ಶ್ಯಾಮ ವಿವೇಕಿ. ಇಂಜಿನೀಯರಿಂಗ್ ಪದವಿ ಗಳಿಸಿ ಮುಂಬ ಯಿಯಲ್ಲಿ ಒಳ್ಳೆ ನೌಕರಿ ಹಿಡಿದು, ಮದುವೆಯಾಗಿ ಅಣ್ಣ ಸ್ವಾಮಿಯ ಸಹಾಯಕ್ಕೆ ಬಂದ. ಶ್ಯಾಮನ ಮಗ ಬೋಧರಾಯ ತಾನೂ ಇಂಜಿನಿಯರ್ ಆಗಿ ಯೋಜನೆ ಗಳ ಬಗ್ಗೆ ಸಂಶೋಧನೆ ನಡೆಸಲು ವಿದೇಶಕ್ಕೆ ಹೋಗಿ ವಿದೇಶಿ ವಧುವೊಂದನ್ನು ಕೈಹಿಡಿದು ತಂದು ಮೂರು ತಲೆಮಾರುಗಳ ಉದ್ದಕ್ಕೂ ಏರುಪೇರುಗಳನ್ನು ಕಂಡ ತನ್ನ ಕುಟುಂಬ ಮತ್ತು ಹೊರಜಗತ್ತಿಗೆ ತುಳಸಕ್ಕ ಸಾಕ್ಷಿಯಾಗಿ ನಿಂತಳು.

ಕಥೆಯ ರೂಪ-ರೇಷೆಗಳಿಂದ ಇದೊಂದು ಕುಟುಂಬದ ಕಥೆಯೆಂಬುದು ಸ್ಪಷ್ಟ. ಅವನತಿ ಹೊಂದಿದ ಸಂಸ್ಥಾನಿ ಅಧಿಕಾರಿಗಳ ಮನೆತನದ ಕಥೆ ಇಲ್ಲಿದೆ. ಆಳುವ

ಅರಸರಿಗೆ ವಿಧೇಯರಾಗಿರುವುದು, ತಲೆಮಾರುಗಳಿಂದ ಬಂದ ಸಂಪ್ರದಾಯಗಳನ್ನು ಗೊಣಗದೇ ಪಾಲಿಸುವುದು, ಗುರು-ಹಿರಿಯರ ಮಾತಿಗೆ ತಲೆಬಾಗುವುದು, ಆ ಮನೆತನದ ಜಾಯಮಾನ. ಆದರೂ ಪ್ರತಿ ತಲೆಮಾರಿಗೂ ಒಂದಿಷ್ಟು ಬದಲಾವಣೆ ತಪ್ಪಲಿಲ್ಲ. ಹುಟ್ಟಾ ಕಲಾವಿದನೂ, ಕರುಣಾಮಯಿಯೂ ಆದ ಬೋಧಣ್ಣ ತನ್ನ ತಂಗಿ ವಿಧವೆಯಾದಾಗ ಅವಳ ತಲೆಕೂದಲು ತೆಗೆಸಲು ಅವಸರಿಸಿದ ಕರ್ಮಠರನ್ನು ಕಂಡು ಶಾಪ ಹಾಕುತ್ತಾನೆ. ಆದರೆ ಅವನು ಎಲ್ಲರನ್ನೂ ಧಿಕ್ಕರಿಸಬಲ್ಲ ಕ್ರಾಂತಿಕಾರ ನಲ್ಲ. ಪಾದಪೂಜೆಗೆ ಬರುವ ಮಠಾಧಿಪತಿಗಳಿಗೆ ಹೆದರಿ ತಂಗಿಯನ್ನು ತಿರುಪತಿಗೆ ಕರೆದುಕೊಂಡು ಹೋಗುತ್ತಾನೆ. ಬೋಧಣ್ಣನ ಪತ್ನಿ ತುಳಸಕ್ಕನೂ ಹಾಗೆಯೇ. ಸಂಪ್ರದಾಯಸ್ಥಳಾದರೂ ಮಕ್ಕಳು, ಮೊಮ್ಮಕ್ಕಳೂ ತರುವ ಬದಲಾವಣೆಗಳಿಗೆ ಹೊಂದಿಕೊಂಡು ಬಿಡುತ್ತಾಳೆ. ಚಪ್ಪಲಿ ಹಾಕಿಕೊಳ್ಳದ ದಿನವೊಂದಿತ್ತು; ವಿದೇಶಿ ವಧುವಿನೊಡನೆ ಸಹಬಾಳ್ವೆ ಮಾಡುವ ದಿನವೊಂದು ಮುಂದೆ ಬಂದಿತ್ತು. ಸುಬ್ಬರಾಯರ ಕಾಲದ ಪೇಶ್ವಾಯಿ ಪಾಗೋಟಿ, ಅಲ್ಪಾಕಿನ ಕೋಟು, ಜರದ ಶಲ್ಲೆ, ಕರವತ ಕಾಠಿಯ ಅಂಚಿನ ಧೋತರ, ಕಿವಿಗೆ ಹಾಕಿಕೊಳ್ಳುವ ಹೊಳೆಯುವ ಮುತ್ತಿನ ಬಾವಲಿ ಇವೆಲ್ಲ ವಸ್ತುಸಂಗ್ರಹಾಲಯಕ್ಕೆ ಸೇರಿ ಮೊಮ್ಮಗ ಬೋಧ ರಾಯನ ಹಿಪ್ಪಿಕಟ್, ಕೋರೆಕಲ್ಲಿನಂಥ ಕಪ್ಪು ಮೀಸೆ. ಅವನ ಹೆಂಡತಿಯ ಲುಂಗೀ-ಶರ್ಟುಗಳು ಮನೆಗೆ ಬಂದಿದ್ದವು. ಮಂತ್ರ-ಪಾಠ-ವೈದ್ಯ ವೃತ್ತಿಯ ಮನೆತನದಲ್ಲಿ ಟ್ರಾಂಬೆಯ ಅಣುಶಕ್ತಿ ಕೇಂದ್ರದ ವಿಜ್ಞಾನಿಗಳು ಹುಟ್ಟಿದ್ದರು. ವಿಧಿವತ್ತಾಗಿ ಗೋಮಯ ತೆಗೆಯುತ್ತಿದ್ದ ಮನೆಯಲ್ಲಿ ಟೇಬಲ್ಲಿನ ಸುತ್ತ ಊಟಕ್ಕೆ ಕೂಡುವ ನಿಯಮ ಬಂದಿತ್ತು. ರೈಲು ಹಳಿಗಳನ್ನು ನೋಡದ ನರಗುಂದದ ಹಳ್ಳಿಯ ವಾಡೆಗಳಿಂದ ಹೊರಬಂದ ಜನರು ಮುಂಬಯಿಯ ಇಮಾರತುಗಳನ್ನು ನೋಡಿದರು. ಒಂದೇ ಎರಡೇ, ಇಂಥ ನೂರಾರು ಬದಲಾವಣೆಗಳು.

ಕಥೆಯ ಕೇಂದ್ರದಲ್ಲಿ ಒಂದು ಕುಟುಂಬದ ಏರುಪೇರುಗಳಿದ್ದರೂ ಹಿನ್ನೆಲೆ ಯಲ್ಲಿ ವಿಶಾಲ ಸಮುದಾಯವಿದೆ. ಗದುಗು-ನರಗುಂದ ಗಮನದಲ್ಲಿದ್ದರೂ ಇದು ಬದಲಾಗುತ್ತಿದ್ದ ಭಾರತದ ಸಾಕ್ಷ್ಯ ಚಿತ್ರ. ಈ ಭಾಗಕ್ಕೆ ರೈಲು ಬಂದದ್ದು, ನರ ಗುಂದದ ವಾಡೆಗೆ ಚಿಮಣಿ ಎಣ್ಣೆ ದೀಪ ಬಂದದ್ದು, ಧಾರವಾಡ ಕಾಲೇಜು ಶಿಕ್ಷಣದ ಕೇಂದ್ರವಾದದ್ದು, ಗಾಂಧೀ ಚಳುವಳಿ ಪ್ರಾರಂಭ, ನೂಲುವ ತಕಲಿ, ಪ್ರಭಾತ ಫೇರಿ, ಲಿಪ್ಟನ್ ಟೀ, ಟೆಂಟ್ ಸಿನೇಮಾ, ಹ್ಯಾಂಡಬಿಲ್ಲು, ಅಲೋಪೆಥಿ ಡಾಕ್ಟರರು, ಇಂಜಕ್ಷನ್ನು, ಕಾಡ್‌ಲಿವರ್ ಎಣ್ಣೆ, ಪಿ. ಡಬ್ಲೂ. ಡಿ. ಖಾತೆ, ಹೆಣ್ಣುಮಕ್ಕಳ ಚಪ್ಪಲಿ, ಫ್ಯಾನ್ಸಿ ಸರಕುಗಳು, ಬಿಳಿಯ ಪತ್ತಲ, ಮಹಾಯುದ್ಧ, ಕಂಟ್ರೋಲ್, ಲೆವಿ, ರೇಶನ್, ಲವ್‌ಮ್ಯಾರೇಜ್, ಅಣುಬಾಂಬು, ಸ್ವಾತಂತ್ರ್ಯ ದಿನಾಚರಣೆ, ಶರಾವತಿ, ಲಾಟರಿ, ಪಂಚವಾರ್ಷಿಕ ಯೋಜನೆ-ಹೀಗೆ ಒಂದೊಂದಾಗಿ ಈ ಸಾಕ್ಷ್ಯ

ಚಿತ್ರದಲ್ಲಿ ಕಾಣಿಸಿಕೊಳ್ಳುತ್ತವೆ. ಹಳೆಯ ನಾಗರಿಕತೆಯಿಂದ ಹೊಸ ದಿನಗಳತ್ತ ನಡೆಯುವ ಹಾದಿಯಲ್ಲಿ ಇವು ಅನಿವಾರ್ಯವೋ ಅನವಶ್ಯಕವೋ ಯಾರಿಗೂ ಗೊತ್ತಿಲ್ಲ. ತುಳಸಕ್ಕನಾಗಲೀ, ಇಂಜಿನೀಯರಿಂಗ್ ಕಲಿತ ಅವಳ ಮಗ ಶ್ಯಾಮನಾಗಲೀ ನಿಶ್ಚಿತವಾಗಿ ಹೇಳಲಾರರು. ಪ್ರಾಯಶಃ ಈ ಪಾತ್ರಗಳನ್ನು ಸೃಷ್ಟಿಸಿದ ಕಾದಂಬರಿಕಾರರಿಗೇ ಇದು ಒಗಟಾಗಿರಬೇಕು. ಏನೇ ಇರಲಿ, 'ಮೂರು ತಲೆಮಾರು' ಮೂರಕ್ಕಿಂತ ಹೆಚ್ಚು ತಲೆಮಾರುಗಳ ಕಥೆ; ಮುಗಿಯದ ಕಥೆ; ಮುಂದುವರೆಯುತ್ತಿರುವ ಕಥೆ. ಈ ಕಾದಂಬರಿ ಕೆಲವು ವಿವರಗಳಲ್ಲಿ ಗ್ಯಾಲ್ಸವರ್ದಿಯ 'Forsythe Saga' ವನ್ನೂ ಮತ್ತೆ ಕೆಲವು ರೀತಿಗಳಲ್ಲಿ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯನ್ನು ಹೋಲುತ್ತದೆ. ಆ ಕಾದಂಬರಿಗಳ ತೀಕ್ಷ್ಣತೆಯನ್ನು ಆಳ-ವಿಸ್ತಾರಗಳನ್ನು ಪಡೆಯಲಾಗದೆ ಹೋದರೂ ಆ ದಿಸೆಯಲ್ಲಿ ನಡೆದ ಪ್ರಯತ್ನವಾಗಿದೆ.

ಇಲ್ಲಿಯ ಪಾತ್ರಸೃಷ್ಟಿಯ ಬಗೆಗೆ ಒಂದೆರಡು ಮಾತು. ತುಳಸಕ್ಕ ಅಷ್ಟಿಷ್ಟು ಸ್ವಾರ್ಥಿ ಇದ್ದರೂ ಉದಾರಳು. ಎಲ್ಲ ತಲೆಮಾರುಗಳಲ್ಲೂ ಹೊಂದಾಣಿಕೆಯಿಂದ ಇರಬಲ್ಲಳು. ಕಾದಂಬರಿಯ ಮೊದಲಿನಿಂದ ಕೊನೆಯವರೆಗೆ ಹಬ್ಬಿಕೊಂಡಿದ್ದಾಳೆ. ಆದರೂ ಓದುಗರ ಮನಸ್ಸನ್ನು ಗಟ್ಟಿಯಾಗಿ ಹಿಡಿದುಕೊಳ್ಳುವ ಪಾತ್ರ ಬೋಧಣ್ಣ. ಹಳೆಯ ಕಾಲದ ದೊಡ್ಡ ಮನೆತನದ ಯಜಮಾನರಿಗೆ ಇರಬೇಕಾದ ಔದಾರ್ಯ, ಸಹನೆ ಅವನಲ್ಲಿದೆ. ಅವನು ಲೌಕಿಕದಲ್ಲಿ ಮುಳುಗಿಹೋದ ಕಲಾವಿದ. ಆಳರಸರಿಗೆ ವಿಧೇಯಕನಾದ ನೌಕರ. ತನಗೆ ಸಹಾಯಮಾಡಿದ ವಿಷ್ಣುಪಂತರನ್ನು ಸದಾ ಸ್ಮರಿಸುವ ಸಜ್ಜನ. ದ್ರೋಹ ಬಗೆದ ಬಂಧುಗಳಿಗೂ ಕಷ್ಟಕಾಲದಲ್ಲಿ ಸಹಾಯ ಮಾಡುವ ಉದಾರಿ. ದೇಹಾಲಸ್ಯದಲ್ಲೂ ಸರಕಾರ ಕಳುಹಿಸಿದ ಊರಿಗೆ ಹೋಗಿ ದುಡಿಯುವ ಪ್ರಾಮಾಣಿಕ. ಬೇರೆ ಒಂದೆರಡು ಪಾತ್ರಗಳೂ ಗಮನಾರ್ಹವಾಗಿವೆ. ಇವುಗಳಲ್ಲಿ ಹೆಂಡತಿ ತೀರಿಕೊಂಡ ಮೇಲೆ ಯಾರ ಮೇಲೆಯೂ ಅವಲಂಬಿಸದೆ ಒಬ್ಬಂಟಿಯಾಗಿ ಜೀವನ ಹೋರಾಟ ನಡೆಸುವ ಬಂಡಾಚಾರ್ಯರು, ಊರಿಂದೂರಿಗೆ ತಿರುಗುತ್ತ ತನ್ನ ಬಂಧು-ಬಳಗದವರ ಮದುವೆ-ಮುಂಜಿವೆ, ಬಸಿರು-ಬಾಣಂತಿತನ ಆರೈಕೆಗಳಿಗಾಗಿ ತನ್ನನ್ನೇ ತೇದಿಕೊಳ್ಳುವ ವಿಧವೆ ಕೃಷ್ಣಕ್ಕ, ತನ್ನ ಸಹಪಾಠಿ ಬೋಧಣ್ಣನಿಗೆ ಸದಾಕಾಲ ಹಿತವನ್ನು ಬಯಸುವ ವಿಷ್ಣುಪಂತ, ಹಟಮಾರಿಯಾಗಿ ಹಾಳಾಗಿಹೋಗುವದಲ್ಲದೇ ಉಳಿದವರನ್ನು ಕೆಡಿಸುವ ತಿಮ್ಮಣ್ಣ-ಇವರು ಎದ್ದು ಕಾಣಿಸುವಂಥವರು.

ಎನ್ಕೆಯವರ ಬರವಣಿಗೆ ಇಲ್ಲಿ ಎಂದಿನಂತೆ ಸುಲಲಿತ. ಅವರ ಪಾತ್ರಗಳು ಈ ಭಾಗದ ಬ್ರಾಹ್ಮಣರ ಮನೆಗಳಲ್ಲಿ ಬಳಕೆಯಲ್ಲಿರುವ ಭಾಷೆಯನ್ನೇ ಆಡುತ್ತವೆ.

ಸಾನಿಕಾಕಾ : ಎನ್ಕೆಬರೆಹ/೩೫೧

ಉಳಿದ ಕಡೆಯಲ್ಲೂ ಅತಿ ಸರಳವಾದ ಸಹಜವಾದ ದೇಸಿಯನ್ನೇ ಹೆಚ್ಚಾಗಿ ಬಳಸಲಾಗಿದೆ. ಧಾರಾವಾಹಿಯಾಗಿ ಬಂದ ಈ ಕಥೆ ಕಂತಿನಿಂದ ಕಂತಿಗೆ ಚುರುಕಾಗಿ ಓಡುತ್ತದೆ. ಇದು ಶೀಘ್ರ ಚಲನೆಯ ಸಾಕ್ಷ್ಯಚಿತ್ರ. ಇದರಿಂದಾಗಿ ಒಂದೆರಡು ಕಡೆ ಕಥೆಯ ಎಳೆಗಳು ತಪ್ಪಿದಂತೆ ಕಾಣುತ್ತವೆ. 'ಬೋಧಣ್ಣ ತನ್ನ ಪರೀಕ್ಷೆಗಳನ್ನು ಮುಗಿಸಿದ್ದರಿಂದ ಹೋಳಿಗೆ ಎಬ್ಬಿಸಲಿಕ್ಕೆ ಯಾವ ಪ್ರತ್ಯವಾಯವೂ ಇರಲಿಲ್ಲ' ಎಂದು ಒಂದೆಡೆ ಹೇಳಿದ್ದರೆ ಇನ್ನೊಂದೆಡೆಗೆ ಬೋಧಣ್ಣ ಪರೀಕ್ಷೆಗೆಂದು ಪ್ರಥಮಬಾರಿ ರೈಲಿನಲ್ಲಿ ಹೊರಟಾಗ ಅವನ ಹೆಂಡತಿ ಅವನನ್ನು ಕಳಿಸಲು ನಿಲ್ದಾಣಕ್ಕೆ ಬಂದಿದ್ದಳು ಎಂದಿದೆ. ಮೈಸೂರು ಅರಮನೆಯಲ್ಲಿ ಬೋಧಣ್ಣನಿಗೆ ಸಿಗುತ್ತಿದ್ದ ಪಗಾರದ ಬಗ್ಗೆಯೂ ಗೊಂದಲವಿದೆ. ವ್ಯಾಸರಾಯನ ವೃತ್ತಾಂತ ಅರ್ಧಕ್ಕೇ ನಿಂತಿದೆ. ಆದರೆ ಈ ಕೆಲವು ವಿವರಗಳನ್ನು ಬಿಟ್ಟರೆ ಕಥೆ ಒಳ್ಳೇ ಲವಲವಿಕೆಯಿಂದ ಮುಂದೆ ಓಡುತ್ತ, ವಾತಾವರಣವನ್ನು ಸೃಷ್ಟಿಸುತ್ತ, ಎಲ್ಲಿಯೂ ಬೇಸರ ತಾರದೇ ಮುಂದುವರಿಯುತ್ತದೆ. ಎನ್ಕೆಯವರ ಎಲ್ಲ ಬರೆಹಗಳ ಒಂದು ಸಾಮಾನ್ಯ ಲಕ್ಷಣವೆಂದರೆ ಅವುಗಳ ಲವಲವಿಕೆ, ಓದಿಸಿಕೊಂಡು ಹೋಗುವ ಶಕ್ತಿ. ಇಲ್ಲಿಯೂ ಅದು ಬೇಕಾದಷ್ಟಿದೆ.

# ‘ ಲಲಿತಾ ’

## ಡಾ. ವರದರಾಜ ಹುಯಿಲಗೋಳ

ಎನ್ಕೆಯವರು ಬರೆದ ಏಳು ಕಾದಂಬರಿಗಳಲ್ಲಿ ‘ಲಲಿತಾ’ ಏಳನೆಯದು, ಇತ್ತೀಚೆಗೆ, ೧೯೭೪ ರಲ್ಲಿ ಪ್ರಕಟವಾದುದು.

ಇದೊಂದು ಮಾತಿನಲ್ಲಿ ಎರಡು ವಿಚಾರಗಳನ್ನು ನಾವು ಮನಗಾಣಬಹುದು; ಒಂದನೆಯದಾಗಿ ಎನ್ಕೆಯವರು ಜನತೆಗೆ ಗೊತ್ತಿರುವಂತೆ, ಜನಪ್ರಿಯರಾಗಿರುವಂತೆ ಬರಿ ತಿಳಿಹಾಸ್ಯದ ನಾಟಕಕಾರರಾಗಿರದೆ, ಹರಟೆಗಾರರಾಗಿರದೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ತಮ್ಮ ಕೃತಿಗಳನ್ನು ರಚಿಸಿ, ಕಾದಂಬರಿಕಾರರೂ ಇರುವರೆಂಬುದು. ಎರಡನೆಯದಾಗಿ ಎನ್ಕೆ ಅವರು ಬರೆದ ಕಾದಂಬರಿಗಳಲ್ಲಿ ‘ಲಲಿತಾ’ ಆರನೆಯದು ಎಂದ ಮೇಲೆ, ಅವರ ಆಳವಾದ ಅನುಭವದ ಪರಿಪಕ್ವತೆ ಈ ಕೃತಿಯಲ್ಲಿ ಫಲಿತವಾಗಿ ರಬೇಕು ಎಂಬುದು.

ಎನ್ಕೆ ಅವರ ಕಾದಂಬರಿಗಳು ಸಾಮಾನ್ಯವಾಗಿ ಆಧುನಿಕ ಸಮಾಜದ ಸಮಸ್ಯೆಗಳನ್ನು ಕುರಿತಾದವುಗಳು. ಪ್ರತಿನಿತ್ಯ ಜೀವನದ ತಮ್ಮ ಅನುಭವಗಳನ್ನು ಸುಲಲಿತವಾಗಿ ಕಲಾತ್ಮಕವಾಗಿ ಕಥಾ ನಿರೂಪಣೆಯಲ್ಲಿ ತರುವುದು ಕಾದಂಬರಿಕಾರ ಎನ್ಕೆ ಅವರ ವೈಶಿಷ್ಟ್ಯ. ವಾಸ್ತವಿಕತೆಗೆ ಸನಿಹವಾಗಿರುವ ಅವರ ಅನುಭವಗಳ ವಿವರಣೆ, ಪ್ರತಿಯೊಬ್ಬ ಓದುಗನು ಅವರ ಕಾದಂಬರಿಗಳಲ್ಲಿ ತನ್ಮಯತೆ ಪಡೆಯು ವಂತೆ ಮಾಡುತ್ತವೆ. ‘ಸಾವಿನ ಉಡಿಯಲ್ಲಿ’, ‘ಎರಡನೆಯ ಸಂಬಂಧ’ ಈ ಮೊದಲಾದ ಅವರ ಪ್ರಾರಂಭಿಕ ಕಾದಂಬರಿಗಳಲ್ಲಿಯೂ ನಾವಿದನ್ನು ಮನಗಾಣ ಬಹುದು.

‘ಆಕಾಶವಾಣಿ’ಯಲ್ಲಿ ಅನೇಕ ವರುಷ ಸೇವೆ ಸಲ್ಲಿಸಿರುವ ಹಾಗೂ ಸಾಕಷ್ಟು ರಂಗಭೂಮಿಯ ನಾಟಕಗಳನ್ನು, ಬಾನುಲಿ ನಾಟಕಗಳನ್ನು ಬರೆದ ಎನ್ಕೆ ಅಸಂಖ್ಯಾತ ಹಿರಿಯ ಹಾಗೂ ಕಿರಿಯ ಕಲಾವಿದರ ಸಹವಾಸವನ್ನು ಪಡೆದಿದ್ದು, ಅವರವರ ಜೀವನವನ್ನು ತೀರ ಹತ್ತಿರದಿಂದ ನಿರೀಕ್ಷಿಸಿರುವರು. ಇದಲ್ಲದೆ ಎನ್ಕೆ ಸ್ವತಃ ಉನ್ನತ ಕಲಾಭಿಮಾನಿಗಳು ! ಶ್ರೇಷ್ಠ ಕಲೆ ಹೇಗಿರಬೇಕು? ಆದರ್ಶ ಕಲಾವಿದನ ಬಾಳು

ಎಂಥವು? ಕಲಾವಿದನ ಬದುಕಿನಲ್ಲಿ ಕಂಡುಬರುವ ಅಡಚಣೆಗಳು ಏನು? ಕಲಾವಿದ ತನ್ನ ಸಾಧನೆಯಲ್ಲಿ ಹೇಗೆ ಯಶಸ್ವಿಯಾಗಬಹುದು? ಈ ಸರ್ವ ಸಮಸ್ಯೆಗಳು ಎನ್ಕೆ ಅವರಿಗೆ 'ಲಲಿತಾ' ಕಾದಂಬರಿಯನ್ನು ಬರೆಯುವಂತೆ ಒತ್ತಾಯಿಸಿವೆ.

ಸಂಗೀತ ಕಲೆಯ ಸಾಧನೆಗಾಗಿ ತನ್ನ ಜೀವನವನ್ನೇ ಮುಡಿಪಾಗಿಟ್ಟ ಲಲಿತಾ, ದೈವಾನುಕೂಲವಿಲ್ಲದೆಯೆ ಹೇಗೆ ಹೋರಾಡಿದಳು ಎಂಬುದನ್ನು ಚಿತ್ರಿಸುವುದೇ 'ಲಲಿತಾ' ಕಾದಂಬರಿಯ ಪ್ರಮುಖ ಉದ್ದೇಶ. ಎನ್ಕೆ ಅವರೇ ಹೇಳುವಂತೆ "ಕಲೋಪಾಸಕಳೊಬ್ಬಳ ಬಾಳ ಹೋರಾಟ ಈ 'ಲಲಿತಾ'" ಕಾದಂಬರಿ ಆರಂಭದಲ್ಲಿಯೇ ಬರುವ—

"ನಿನ್ನ ಹೆಸರು ಲಲಿತಾ ಅಂತ ಇರದೆ ಲತಾ ಅಂತ ಇರಬೇಕಿತ್ತು ನೋಡು."

"ಆದರ ನನ್ನ ಅಡ್ಡ ಹೆಸರು ಮಂಗೇಶಕರ ಅಲ್ಲವಲ್ಲಾ?"

ಹುಡುಗಿ ಹೀಗೆ ಮಾತನಾಡಿದ್ದನ್ನು ಕೇಳಿ ಮುಖ್ಯ ಅತಿಥಿಗಳಿಗೆ ಆನಂದ, ಆಶ್ಚರ್ಯ!

ಈ ಸಂವಾದ ನಿಜವಾಗಿಯೂ ಅರ್ಥಪೂರ್ಣವಾಗಿದೆ. ಲಲಿತಾ ಹೀಗೆ ಶಾಲೆಯ ವಾರ್ಷಿಕೋತ್ಸವದಲ್ಲಿ ಅತಿಥಿಗಳಿಗೆ ಉತ್ತರಿಸಿದಾಗ ಅವಳಿಗೆ ಕೇವಲ ಹದಿನಾಲ್ಕು ವರುಷ. ತನ್ನ ಕೋಗಿಲೆಯ ಇಂಚರದಿಂದ ಹಾಡು ಕೇಳಿ ಕೇಳುಗರನ್ನು ಮುಗ್ಧಗೊಳಿಸಿದ ಈ ಬಾಲಿಕೆಗೆ ಈ ಸಮಾಜದಲ್ಲಿ ಅದೆಂಥ ಭವಿಷ್ಯ!! ಸಂಗೀತ ಸಾಧನೆಯಲ್ಲಿ ಬೆಳೆಯಬೇಕೆಂಬ ಈ ಪುಟ್ಟ ಕಲಾವಿದೆಗೆ, ಮಂಗೇಶ-ಅಂದರೆ ದೇವರು-ಅಂದರೆ ಸುದೈವ ಇವರ ಬೆಂಬಲವೇ ಇಲ್ಲ. ಈ ಕಲೋಪಾಸಕಳ ಜೀವನದಲ್ಲಿಯ ಆಗು-ಹೋಗುಗಳನ್ನು ನೆನೆದಾಗ ಆನಂದವೂ ಆಗುತ್ತದೆ, ದುರ್ವಿಧಿಯ ರೀತಿಯನ್ನು ಕಂಡು ಆಶ್ಚರ್ಯವೂ ಆಗುತ್ತದೆ.

ಸೋನಾರ ಗಂಗಾಪ್ರಸಾದ ಹಾಗೂ ದುರ್ಗಾಬಾಯಿ ದಂಪತಿಗಳಿಗೆ ಲಲಿತಾ ಒಬ್ಬಳೇ ಮಗಳು; 'ಮಗನೂ' ಸಹ ಎಂದರೂ ಸರಿಯೇ. ಏಕೆಂದರೆ ಇದ್ದೊಬ್ಬ ಅಣ್ಣ ಸತೀಶ ಪೋಲಿಯೋ ಬೇನೆಯಿಂದಲೇ ಎರಡೂ ಕಾಲು ಕಳೆದುಕೊಂಡು ಹೆಳವನಂತಾಗಿದ್ದ. ಆದ್ದರಿಂದ ಆವರ ಮನೆತನದಲ್ಲಿ ಲಲಿತಾ ಒಬ್ಬಳೇ ಭವಿಷ್ಯದ ಆಶಾಕೇಂದ್ರವಾಗಿದ್ದಳು.

ಈ ಸೋನಾರ ಮನೆತನದ ಸಂಸಾರ ಬಂಗಾರದ ಬಾಳು ಆಗಿರಲಿಲ್ಲ. ಮಕ್ಕಳ ಶಿಕ್ಷಣಕ್ಕಾಗಿಯೇ ಯಲ್ಲಾಪೂರದಿಂದ ಬಂದು ಹುಬ್ಬಳ್ಳಿಯಲ್ಲಿ ವಾಸವಾದರೆ, ಗಂಗಾಪ್ರಸಾದ ಬಹು ಬೇಗ ಅಸುನೀಗಿದ, ಸತೀಶ ಚಟುವಟಿಕೆ ಇಲ್ಲದಂತವನಾದ.

ಬಡತನವೆಂಬುದು ಇವರ ಜೆನ್ನೆಲಿಬು! ಇಂಥದರಲ್ಲಿ ಲಲಿತಾ ಹೇಗೆ ಪದವೀಧರೆ ಯಾಗಬೇಕು? ಹೇಗೆ ತನ್ನ ಸಂಗೀತ ಸಾಧನೆಯನ್ನು ಮಾಡಿಕೊಳ್ಳಬೇಕು? ಮನೆಯಲ್ಲಿ ನೋಡಿಕೊಳ್ಳುವವರು ಪುರುಷರೆಂಬವರು ಯಾರೂ ಇರಲಿಲ್ಲ.

ಲಲಿತಾ ಮಂಗೇಶಕರ ಅಲ್ಲದಿದ್ದರೂ, ಮಂಗೇಶ ಎಂಬ ತಮ್ಮನೊಬ್ಬ ಇವಳ ಜೊತೆ ಇರುತ್ತಿದ್ದ. ಮಂಗೇಶ ಇವರ ಮನೆಯಲ್ಲಿಯೇ ಉಳಿಯುವ ಪ್ರಸಂಗವೂ ತಾನಾಗಿಯೇ ಉಂಟಾಯಿತು. ಮಂಗೇಶ ದುರ್ಗಾಬಾಯಿಯ ತಂಗಿಯ ಒಬ್ಬನೇ ಮಗ. ವಿಧವೆಯಾದ ಅವಳು ಹುಬ್ಬಳ್ಳಿಯಲ್ಲಿ ಮರಣಶಯ್ಯೆಯಲ್ಲಿ ಇರುವಾಗ, ಮಂಗೇಶನನ್ನು ತನ್ನ ಅಕ್ಕನ ಉಡಿಯಲ್ಲಿ ಹಾಕಿ ಪ್ರಾಣಬಿಟ್ಟಳು. ಯಲ್ಲಾಪೂರ ದಲ್ಲಿರುವ ಸ್ವಲ್ಪ ಆಸ್ತಿ ದುರ್ಗಾಬಾಯಿಯ ಪಾಲಿಗೆ ಬಂದಿತು.

ಹುಬ್ಬಳ್ಳಿಯಲ್ಲಿ ಇಂಟೆಲಿಜನ್ಸ್ ವಿಭಾಗದ ಪೋಲೀಸ ಖಾತೆಯಲ್ಲಿ ನೌಕರಿ ಮಾಡುತ್ತಿದ್ದ, ಉತ್ತರ ಕನ್ನಡ ಜಿಲ್ಲೆಯವನೇ ಆದ ಮುಕುಂದರಾಯ ಲಲಿತಾಳ ಮನೆಯಲ್ಲಿ ಮೊದಲು ಪಿ. ಜಿ. (ಪೇಯಿಂಗ ಗೆಸ್ಟ) ಆಗಿ ಪ್ರವೇಶಿಸಿ, ಆನಂತರ ಅವಳಿಗೆ ಅನುಕಂಪ ತೋರಿಸುವ 'ಮಾಮಾ' ಆದ.

ಮಂಗೇಶ ಕಿರಿಯ, ಮುಕುಂದರಾಯ ಹಿರಿಯ. ಈ ಹಿರಿ-ಕಿರಿಯರಿಬ್ಬರೂ ದುರ್ಗಾಬಾಯಿಯ ಜೊತೆಗೆ ಇರುವ ಲಲಿತಾಳ ವ್ಯಕ್ತಿತ್ವದ ಸತ್ವಪರೀಕ್ಷೆಗೆ ಕಾರಣ ರಾಗಿದ್ದಾರೆ. ಲಲಿತಾಳ ಕಾಲೇಜ ಶಿಕ್ಷಣ, ಸಂಗೀತಾಭ್ಯಾಸ ಇವೆರಡೂ ಹೇಗಾಗ ಬೇಕು? ಆರ್ಥಿಕ ನೆರವಿನ ನೆಲೆಯಿಲ್ಲದೆಯೆ ಲಲಿತಾಳ ಆದರ್ಶ ಸಾಧನೆಗೆ ಬಲ ವಾದರೂ ಹೇಗೆ ಪ್ರಾಪ್ತವಾಗಬೇಕು.

ಕಿರಿಯನಾದ ಮಂಗೇಶ ಬಹಳ ಕಿರಿಕಿರಿಯವ. ಸುಶಿಕ್ಷಿತ ವಾತಾವರಣ ಅವನಿಗೆ ಮೊದಲಿನಿಂದಲೂ ಇರಲಿಲ್ಲ. ಕೆಟ್ಟ ಜನರ ಸಹವಾಸ, ಕಳವು ಮಾಡುವದು ಇಸ್ಪೀಟ ಆಡುವದು, ಇಂಥದರಲ್ಲಿಯೇ ಹೊತ್ತುಗಳೆದು ತನ್ನ ಕಲಿಯುವಿಕೆಯನ್ನು ಗಾಳಿಗೆ ತೂರಿಬಿಟ್ಟಿದ್ದ. ಇವನ ದುಶ್ಚಟಗಳನ್ನು ಪತ್ತೆಹಚ್ಚಿ ಇವನನ್ನು ದಾರಿಗೆ ತರುವದು ಮುಕುಂದರಾಯನ ಹೊಣೆಗಾರಿಕೆಯೇ ಆಗಿದ್ದಿತು!

ಮನೆಯಲ್ಲಿ ಮಂಗೇಶ ಹಾಗೂ ಮುಕುಂದರಾಯ ಇಬ್ಬರು ಪುರುಷರು. ಅವರ ಜೊತೆ 'ಬೆಳೆದ' ಲಲಿತಾ. ಮಂಗೇಶ ಇನ್ನೂ ಸಣ್ಣವನಿರುವಾಗಲೇ ಕಾಮುಕ ನಾದ. ಲಲಿತಾ ಅವನಿಂದ ದೂರ ಸರಿದಳು! ವಿವಿಧ ರೀತಿಯಿಂದ ನೆರವಾದ 'ಮಾಮಾ' ಲಲಿತಾಳ ಕೈಹಿಡಿಯುವಂತೆಯೇ ಇದ್ದಿತು. ಧಾರವಾಡಕ್ಕೆ ವರ್ಗವಾಗಿ ಬಂದ ಮುಕುಂದಮಾಮಾ ಹೆಡ್‌ಕ್ವಾರ್ಟರ್ಸದಲ್ಲಿ ತನಗೆ ದೊರೆತ ನಿವಾಸದಲ್ಲಿಯೇ

ದುರ್ಗಾಬಾಯಿಯ ಮನೆತನದವರನ್ನು ಕರೆದುಕೊಂಡು ಬಂದಿದ್ದ. ಕಾಲೇಜ ಶಿಕ್ಷಣ ನಡೆದಾಗ ಲಲಿತಾಳಿಗೆ ಅದೇನೋ ಮಾಮಾನನ್ನೇ ಮದುವೆಯಾಗಬೇಕೆಂಬ ಅಂತರಂಗದ ಆಶೆ. ಆದರೆ ಮುಕುಂದಮಾಮಾ ಲಗ್ನವಾದುದು ಅವರ ಊರ ಹತ್ತಿರವೇ ಇದ್ದ ರತ್ನಾ ಎಂಬವಳನ್ನು. ರತ್ನಾ ಧಾರವಾಡಕ್ಕೆ ಬಂದ ಮೇಲೆ, ಈ ಚಿಕ್ಕ ಮನೆಯಲ್ಲಿ ಬಹು ದೊಡ್ಡ ಸಮಸ್ಯೆಗಳು ಭೂತಾಕಾರವಾಗಿ ಉದ್ಭವಿಸಿದವು. ಯಾರೂ ತಮ್ಮ ಹೃದಯಾಂತರಾಳದ ಇಂಗಿತವನ್ನು ಸ್ಪಷ್ಟವಾಗಿ ವ್ಯಕ್ತಪಡಿಸದೇ ಇರುವಾಗ ಒಬ್ಬರೊಬ್ಬರ ಬಗ್ಗೆ ತಪ್ಪು ಕಲ್ಪನೆಗಳು ಮೂಡಿಬಂದವು. ಎಲ್ಲ ಮುಖಗಳೂ ವಿಮುಖಗಳಾದವು; ಬಾಳು ಮೂರಾಬಟ್ಟೆಯಾದಂತಾಯಿತು.

ಇಂಥದರಲ್ಲಿಯೂ ಲಲಿತಾಳಿಗೆ ಸಂಗೀತದ ಹುಚ್ಚು. ರುದ್ರಯ್ಯಸ್ವಾಮಿಗಳು ಇವಳಿಗೆ ಶಾಸ್ತ್ರೀಯ ಸಂಗೀತವನ್ನು ಹೇಳಿಕೊಡುತ್ತಿದ್ದರು. ಆ ಸಂಗೀತವನ್ನು ಕಲಿಯುತ್ತಿರುವಾಗ, ಲಲಿತಾ ಈ ಜಗತ್ತಿನ ದುಃಖವನ್ನೆಲ್ಲಾ ಮರೆತುಬಿಡುತ್ತಿದ್ದಳು. ಸುದೈವದಿಂದ ತಾನು ಕಲಿತ ಶಾಲೆಯಲ್ಲಿಯೇ ಮುಖ್ಯಾಧ್ಯಾಪಕರು ಲಲಿತಾಳಿಗೆ ಅಲ್ಪಾವಧಿಯ ಗಾಯನ ಶಿಕ್ಷಕಿಯೆಂದು ನೌಕರಿಯನ್ನು ದಯಪಾಲಿಸಿದ್ದರು. ಅವಳಿನ್ನೂ ಆಗ ಪದವೀಧರೆಯಾಗಿರಲಿಲ್ಲ.

‘ಬಾಳಿನ ಗುಟ್ಟನು ಬಲ್ಲವರಾರು ತಂಗೀ?’ ಎಂದು ವಿನಾಯಕ ಕವಿ ಕೇಳಿದ್ದಾರೆ. ಲಲಿತಾಳಿಗೂ ಇದನ್ನು ಅನ್ವಯಿಸಬೇಕು. ಏನೋ ಸುಖವೆಂಬ ಸುಳಿಗಾಳಿ ಸ್ವಲ್ಪ ಬೀಸುತ್ತಿರುವಾಗ, ಲಲಿತಾಳಿಗೆ ಬೇಗುದಿಯ ಬಿರುಗಾಳಿಯೂ ಅವತರಿಸಿತು. ಅವಳ ತಾಯಿಗೆ ಬ್ಲಡ್ ಪ್ರೆಶರ್, ದವಾಖಾನೆಯ ಪ್ರವೇಶ! ರತ್ನಾ ತನ್ನ ತವರುಮನೆಯವರನ್ನೆಲ್ಲ ಕರೆದುಕೊಂಡು ಬಂದು, ಧಾರವಾಡದಲ್ಲಿ ಬಿಡಾರ ಹೂಡಿದುದು, ಲಲಿತಾ ಬೇರೆ ಮನೆ ಮಾಡಿದುದು, ಮುಂಬಯಿಯ ವೀರೇಶನ ಪರಿಚಯ ಮಂಗೇಶನಿಂದ ಸಂಭವಿಸಿ ಧಾರವಾಡದಲ್ಲಿ ಅವನ ಜೊತೆ ತಿರುಗಾಡಿದುದು, ಅನ್ಯಜಾತಿಯ ವೀರೇಶನನ್ನು ಮದುವೆಯಾಗಬೇಕೆಂಬ ಇಚ್ಛೆ ಉಂಟಾದುದು, ಮುಕುಂದರಾಯನಿಂದ ದೊರೆತ ನೌಕರಿಯನ್ನು ಬಿಟ್ಟು ವೀರೇಶನ ಸಲಹೆಯಂತೆ ಮಂಗೇಶ ಮುಂಬೈಗೆ ಓಡಿಹೋದುದು ಇವೆಲ್ಲವೂ ಆಗ ತಾನೇ ಸಾವಧಾನವಾಗಿ ಸಂಗೀತ ಸಾಧನೆಯಲ್ಲಿ ಬೆಳೆಯುತ್ತಿರುವ ಯುವ ವಯದ ಲಲಿತಾಳ ಮನಸ್ಸಿನಲ್ಲಿ ತುಮುಲ ಯುದ್ಧವನ್ನೇ ಹೂಡಿದವು. ಹಲವಾರು ವರುಷ ಲಲಿತಾಳ ಬದುಕಿಗೆ ನೆರಳಾಗಿ ನಿಂತ ಮುಕುಂದಮಾಮಾ, ಲಲಿತಾಳ ಮನೋಘೋರಣೆಗೆ ಸಹಾನುಭೂತಿಯನ್ನು ಪ್ರಕಟಿಸದೇ ಇರುವಾಗ, ಲಲಿತಾ ಕೆಲವು ಕಠೋರ ನಿರ್ಣಯಗಳನ್ನು ತಾನೇ ಕೈಕೊಂಡಳು.

ಹುಬ್ಬಳ್ಳಿಯಿಂದ ಧಾರವಾಡದ ಪರಿಸರಕ್ಕೆ ಹೊಂದಿಕೊಂಡ ಲಲಿತಾ, ಇದೀಗ ಮುಂಬೈಯು ವಾತಾವರಣದತ್ತ ಹೊರಳಲೇಬೇಕಾಯಿತು. ಮಂಗೇಶ ಮತ್ತು ವೀರೇಶ ಇವರ ವಾಸ ಸಾಗರದ ದಂಡೆಗಿರುವ ಜನಸಾಗರದ ಮುಂಬೈಯಲ್ಲಿ. ಅವರು ಬ್ಬರೂ ಸತೀಶನಿಗೆ ತಜ್ಞ ವೈದ್ಯರಿಂದ ಔಷಧೋಪಚಾರ ಮಾಡಿಸಿ, ಅವನೊಬ್ಬ ಮನುಷ್ಯನಾಗಿ ಜೀವಿಸುವ ಭಾವನೆಯನ್ನು ಲಲಿತಾಳಿಗೆ ಬಿಂಬಿಸಿ, ಲಲಿತಾ ದುರ್ಗಾ ಬಾಯಿ ಸಹಿತ ಮುಂಬೈಗೆ ಬರುವಂತೆ ಮಾಡುವಲ್ಲಿ ಯಶಸ್ವಿಯಾದರು. ತನ್ನ ಅಣ್ಣ ಹೇಗಾದರೂ ಕಾಲು ಪಡೆದು, ಕಾಲೂರಿ ನಿಲ್ಲಲಿ, ಎಂಬ ಸದಿಚ್ಛೆಯಿಂದ ಮುಂಬೈ ಪ್ರಯಾಣವನ್ನು ಲಲಿತಾ ಕೈಕೊಂಡಳು, ಆದರೆ .... ? ಒಂದು ಕಡೆ ಔಷಧೋಪ ಚಾರ ನಡೆದರೆ, ಇನ್ನೊಂದು ಕಡೆಗೆ ವೀರೇಶ ಲಲಿತಾಳ ಮನಸ್ಸನ್ನು ವಶ ಮಾಡಿ ಕೊಳ್ಳುವ ಉಪಾಯ ಏರ್ಪಡಿಸಿದ, ಲಲಿತಾ ತನ್ನ ನೌಕರಿಯ ಭದ್ರತೆಗಾಗಿ ತಾಯಿಯ ಜೊತೆಗೆ ಧಾರವಾಡಕ್ಕೆ ಬರುವುದು, ಮುಂಬೈಯಿಂದ ತಂತಿ ಬಂದ ಕೂಡಲೆ ಮತ್ತೆ ಓಡಿಹೋಗುವುದು ಹೀಗೆಯೇ ಒದ್ದಾಡಿತು ಲಲಿತಾಳ ಜೀವ. ಕೈಹಿಡಿದು ಬಯಸಿದ ಸತೀಶ ಲಲಿತಾಳನ್ನು ಹಿನ್ನೆಲೆಯ ಗಾಯಕಿಯಾಗಿ ಮಾಡಿ ಅವಳ ಕಲಾಕೌಶಲ್ಯದಿಂದ ಹಣ ಸಪಾದಿಸಲು ಬಯಸಿದ. ನಿರ್ದೇಶಕ ಲಾಲಜಿಯ ಕಾಮುಕತನದ ಸನ್ನಿವೇಶವನ್ನು ಲಲಿತಾ ಎದುರಿಸಬೇಕಾಯಿತು. ಕೊನೆಗೆ ಇದೆಲ್ಲದರ ಫಲಿತಾಂಶವಾದರೂ ಏನು ?

ದುರ್ಗಾಬಾಯಿ ಹೃದಯಾಘಾತದಿಂದ ಕೆ. ಎಂ. ಸಿ. ಯಲ್ಲಿ ಅನಾಥ ಶವ ವಾದಳು ! ವೀರೇಶ ಲಲಿತಾಳ ಕೂಡಿಟ್ಟ ಹಣವನ್ನೆಲ್ಲ ಬ್ಯಾಂಕದಿಂದ ದೋಚಿಕೊಂಡು ಮಾಯವಾದ ! ಸತೀಶನಿಗೆ ಕಾಲುಗಳು ಬರಲೇ ಇಲ್ಲ. ಇವೆಲ್ಲವುಗಳಿಂದ ಲಲಿತಾಳ ಹೃದಯ ಶೂನ್ಯವಾಯಿತು ! ಲಲಿತಾಳ ಭವಿಷ್ಯ ಮುಚ್ಚಿದ ಬಾಗಿಲು. ಅವಳು ಗಂಡನಿಗೆ ಎರವಾದಳು; ಮಂಗೇಶಿಗೆ ಎರವಾದಳು ! ಯಾವುದೋ ಋಣಾನು ಬಂಧವಿದ್ದ ಮುಕುಂದಪೂಮಾ ಬದುಕಿ ಇದ್ದರೂ ಅವನಿಂದ ದೂರವಾದಳು. ಕಾದಂಬರಿಯ ಕೊನೆಯಲ್ಲಿ ಹೇಳಿದಂತೆ —

“ಲಲಿತೆಗೆ ಇರುವ ಸಂಬಂಧ ನಾಲ್ಕು – ಸತೀಶ, ಸಂಗೀತ ಮಾಸ್ತರ್, ತನ್ನ ಟ್ರಾನ್ಸಿಸ್ಟರ್, ಆ ತಂಬೂರಿ ! ... ... ”

ಹೋರಾಟವೇ ಅವಳ ಜೀವನದ ಸ್ವಾರಸ್ಯವಾಯಿತು.

ಸಂಗೀತ ಸಾಧನೆಯ ಕಥಾವಸ್ತುವನ್ನೇ ಕುರಿತಾದ ಶ್ರೀನಿವಾಸರ ‘ಸುಬ್ಬಣ್ಣ’, ಅ. ನ. ಕೃ. ಅವರ ‘ಉದಯರಾಗ’ ಹಾಗೂ ’ಸಂಧ್ಯಾರಾಗ’, ತ. ರಾ. ಸು. ಅವರ ‘ಹಂಸಗೀತೆ’ ಈ ಮೊದಲಾದ ಕೃತಿಗಳು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಿಶೇಷ ಸ್ಥಾನ ಪಡೆದಿವೆ. ಆದರೆ ‘ಲಲಿತಾ’ ಳಿಗೆ ಅಂಥ ಸ್ಥಾನ ದೊರಕದೇ ಇರುವುದು ಆಶ್ಚರ್ಯಕರ ! ಕಾದಂಬರಿಯಲ್ಲಿಯೇ ಬರುವ — ‘ ಕಲಾಕಾರರ ಹೃದಯ

ಕೋಮಲ... ಕಲಾ ಅಂಗರ ಹೆಣ್ಣು.... ಸಂಗೀತ - ಸರಸ್ವತಿ....' ಎಂಬ ಮಾತುಗಳು, ಲಲಿತಾ ಹೇಳುವ 'ಸಾ ಎಂದು ಸ್ವರ ಹಚ್ಚಿದರೆ ಮನಸ್ಸಿಗೆ ನೆಮ್ಮದಿ ತಂದುಕೊಳ್ಳಬಹುದಲ್ಲವೇ?' ಎಂಬ ಮಾತು ಸಂಗೀತದ ಸಾಧನೆಯ ನಿರೂಪಣೆಯಲ್ಲಿ ಮಹತ್ವದವು. ಕೊನೆಗೆ ಲಲಿತಾಳ ಹತ್ತಿರ ತೀರ ಸನಿಹದಲ್ಲಿ ನಿಂತುದು ಆ ತಂಬೂರಿಯೊಂದೇ, ಸಂಗೀತ ಗುರುಗಳ ಆಶೀರ್ವಚನವೊಂದೇ! 'ಲಲಿತಾ' ಕಾದಂಬರಿಯಲ್ಲಿ ಲಲಿತಾಳ ಸಂಗೀತ ಸಾಧನೆಗೆ ಇನ್ನು ಹೆಚ್ಚು ಗಮನವಿತ್ತು, ಅದರ ವಿವರಗಳನ್ನೇ ಹೆಚ್ಚಾಗಿ ಕೊಡಬೇಕಾಗಿತ್ತೇನೋ ಎಂದು ಎನಿಸದೆ ಇರಲಾರದು. ಲಲಿತಾಳ ಕಷ್ಟ-ನಷ್ಟಗಳಿಗೆ ಪ್ರಾಧಾನ್ಯತೆ ಬಹಳಾಗಿ, ಸಂಗೀತ ಸಾಧನೆಯ ಅಂಶ ಕಡಿಮೆ ಆದಂತೆ ತೋರುತ್ತದೆ. ಮೇಲಾಗಿ ಭಾವಗೀತೆ, ಸಿನಿಮಾ ಹಾಡು ಇವುಗಳಿಗೇನೆ ಲಲಿತಾಳ ಜೀವನದಲ್ಲಿ ಪ್ರಾಮುಖ್ಯತೆ ಬಂದಿದೆ. ಕಾದಂಬರಿಯ ಕೊನೆಯಲ್ಲಿ ಅವಳ ಶಾಸ್ತ್ರೀಯ ಸಂಗೀತಕ್ಕೆ ಸ್ಥಾನ ದೊರಕಿದೆ.

ಈ ಕಾದಂಬರಿಯಲ್ಲಿ ಕಾದಂಬರಿಯ ಹೆಸರೇ ಸೂಚಿಸುವಂತೆ ಲಲಿತಾ ಪ್ರಮುಖ ಪಾತ್ರವಾಗಿದ್ದಾಳೆ. ಕಥೆಯಲ್ಲಿ ಬರುವ ಎಲ್ಲರಿಗೂ ಮಾತೃಸ್ಥಾನದಲ್ಲಿರುವ ದುರ್ಗಾಬಾಯಿ, ಪೋಲೀಸ ಖಾತೆಯಲ್ಲಿದ್ದರೂ ಕರುಣಾಮಯಿಯಾದ ಮುಕುಂದ ಮಾಮಾ ಲಲಿತಾಳ ವ್ಯಕ್ತಿ ದರ್ಶನಕ್ಕೆ ಪೋಷಕ ಪಾತ್ರವಾಗಿ ಇದ್ದಾರೆ. ಒಂದು ದೃಷ್ಟಿಯಿಂದ ಮಂಗೇಶನಿಗೆ ಲಲಿತಾಳ ಪಾತ್ರದಷ್ಟೇ ಮಹತ್ವವು ಇರುತ್ತದೆ. ಲಲಿತಾಳ ಜೀವನದಲ್ಲಿಯ ಏರು-ಪೇರುಗಳೆಲ್ಲ ಮೊದಲಿನಿಂದಲೂ ಮಂಗೇಶನಿಂದಲೇ ಸಂಭವಿಸಿವೆ. ಲಲಿತಾ ವೀರೇಶನನ್ನು ಮುಂಬೈಯಲ್ಲಿ ಮದುವೆಯಾದುದು ವೀರೇಶನಿಂದಲೇ ಅಲ್ಲವೆ? ಲಲಿತಾಳ ಹೋರಾಟದ ಬದುಕಿಗೆ ಮುಖ್ಯ ಕಾರಣ ಮಂಗೇಶನೇ, ಆನಂತರ ಉಳಿದವರು. ಮಂಗೇಶ ಇರದಿದ್ದರೆ, ಲಲಿತಾಳ ಬಾಳು ಬಹಳ ಸಪ್ಪೆ! ಮುಕುಂದ ಮಾಮಾನ ತ್ಯಾಗದ ಶಕ್ತಿ ಅಪೂರ್ವವಾದುದು, ತಾಯಿಯ ಹೃದಯಕಿಂತಲೂ ಹೆಚ್ಚಿನದು. ಸಂಗೀತದ ಗುರುಗಳು, ಮುಖ್ಯಾಧ್ಯಾಪಕರು ಒಳ್ಳೆಯವರಾದರೂ ಮಾಮೂಲಿಯಾಗಿರುವ ಪಾತ್ರಗಳು.

'ಲಲಿತಾ' ಕಾದಂಬರಿಯಲ್ಲಿಯ ಬಹುಪಾಲು ವ್ಯಕ್ತಿಗಳು ಉತ್ತರ ಕನ್ನಡ ಜಿಲ್ಲೆಯವರು. ಯಲ್ಲಾಪೂರದಿಂದ ಬಂದು ಹುಬ್ಬಳ್ಳಿಯಲ್ಲಿ ನೆಲಸಿದವರು. ಇವರಾಡುವ ಮಾತಿನ ರೀತಿಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಭಾಷೆ ಬಂದಿದ್ದರೆ, ಅಥವಾ ಅವರ ಹಲವು ಪದಪ್ರಯೋಗಗಳಾದರೂ ಬಂದಿದ್ದರೆ, ಆ ಪಾತ್ರಗಳಲ್ಲಿ ಇನ್ನಷ್ಟು ಸಜೀವತೆ, ಸಹಜತೆ, ಕಂಡುಬರುತ್ತಿತ್ತು. ಲಲಿತಾ, ದುರ್ಗಾಬಾಯಿ, ಮುಕುಂದ, ಮಂಗೇಶ, ಎಲ್ಲರೂ 'ಕಾರವಾರಿ'ಗಳೇ ಆದುದರಿಂದ, ಹುಟ್ಟಿನಿಂದಲೂ ಮೈಗೂಡಿಕೊಂಡ ಶೈಲಿ ಸುಟ್ಟರೂ ಹೋಗಲಿಕ್ಕಿಲ್ಲ! ಆದರೆ ಇವರೆಲ್ಲರೂ ಧಾರವಾಡ ಕಡೆಯ ಕನ್ನಡವನ್ನೇ ಬಳಸಿದ್ದಾರೆ.

ಮುಂಬೈಯಲ್ಲಿ ಅನೇಕ ವರ್ಷ ಕಳೆದ ಎನ್ಕೆ ಅವರಿಗೆ ಅವರ ಶೈಲಿಯಲ್ಲಿ ಮರಾಠಿಯ ಪ್ರಭಾವ ಸಾಕಷ್ಟಿದೆ. ಅತ್ಯಂತ ಸರಳವಾದ, ಸಹಜವಾದ, ಯಾವ ಕ್ಲಿಷ್ಟತೆಯೂ ಕಾಣದ ಕನ್ನಡ ಶೈಲಿಯಲ್ಲಿ ಕಾದಂಬರಿಯ ಕಥೆಯನ್ನೇ ನಿರೂಪಿಸುತ್ತಿರುವಾಗ, ಮರಾಠಿಯ ಪದಗಳು ಅವರ ಶೈಲಿಯಲ್ಲಿ ತಾವಾಗಿಯೇ ತೂರಿಕೊಂಡು ಬಂದಿವೆ. ಭಾನಗಡಿ, ಪತ್ರೋಡಿ, ಮಾಂಸಿ, ಪಳೆಂಕ, ಭಿಡೇದ ಹುಡುಗಿ, ಹಾಲ-ಚಾಲ, ಹವಾಲ್ದಿ, ಮೋಘಂ, ಗರಜು, ಅಡಾಣಿ ಇಂಥ ಶಬ್ದ ಪ್ರಯೋಗಗಳನ್ನು ಬಳಸಿದ್ದಾರೆ. ಮುಂಬೈ ವಾತಾವರಣವನ್ನೇ ಚಿತ್ರಿಸಿ ಬರೆಯುವಾಗ ಪದಪ್ರಯೋಗಗಳು ಹೆಚ್ಚು ಪ್ರಯೋಜನಕಾರಿ !

ಎನ್ಕೆ ಹುಟ್ಟಾ ನಗೆ ಬರೆಹಗಾರರು. ಲಲಿತಾಳ ಬದುಕೋ ಗಂಭೀರ ಸಮಸ್ಯೆಗಳದು. ಅವಳ ಜೀವನವೆಲ್ಲಾ ಒಂದು 'ಹರ್ಡಲ್ ರೇಸ್' ! ಹೀಗಿದ್ದರೂ ಎನ್ಕೆ ಅವರ ನಿರೂಪಣೆ ಸುಲಿದ ಬಾಳಿನ ಹಣ್ಣಿನಂತಹದು. ತಿಳಿಹಾಸ್ಯದ ಶೈಲಿಯನ್ನು ಅವಕಾಶವಿದ್ದಾಗಲೆಲ್ಲ ಸದುಪಯೋಗ ಮಾಡಿಕೊಂಡಿರುವರು. ಶಬ್ದಗಳ ಪ್ರಾಸದಲ್ಲಿ ಇಂಥ ಹಾಸ್ಯ ಅಡಗಿರುವದನ್ನು ಅನೇಕ ಕಡೆ ಮನಗಾಣಬಹುದು.

"ನಿನ್ನ ಪ್ರಾಣ ತಗೋಳ್ಳಿಕ್ಕೆ ಬಂದಾನ ಈ ಪ್ರಾಣನಾಥ."
"ಟ್ರಾನ್ಸಿಸ್ಟರೇ ನನಗೊಬ್ಬ ಸಿಸ್ಟರ್."
"ಕಷ್ಟಪಟ್ಟು ಗಳಿಸಿದ ಹಣದಲ್ಲಿ ವಜಾ, ಪ್ರವಾಸದ ಸಜಾ .... "

— ಇಂಥ ಉದಾಹರಣೆಗಳು ಕಾದಂಬರಿಯಲ್ಲಿ ಹೇರಳವಾಗಿವೆ.

ಉತ್ತಮ ನಾಟಕಕಾರರೂ ಆದ ಎನ್ಕೆ ಕುತೂಹಲ ಕೆರಳಿಸುವ ನಾಟಕೀಯ ಸನ್ನಿವೇಶಗಳನ್ನು ಚಿತ್ರಿಸುವಲ್ಲಿ ಎತ್ತಿದ ಕೈ. ಲಲಿತಾಳಿಗೆ ಮುಂಬೈ ಸಂಬಂಧ ಬಂದ ನಂತರ, ನಿರೂಪಣೆಯಾಗಿರುವ ಸನ್ನಿವೇಶಗಳಂತೂ ರೋಮಾಂಚಕಾರಿ ! ಅದರಲ್ಲಿಯೂ ಧಾರವಾಡಕ್ಕೆ ಬಂದು, ತನ್ನ ತಾಯಿಯ ಎದುರಿಗೆ ವೀರೇಶನ ಸಂಬಂಧದ ಬಗ್ಗೆ ವಿವರಿಸುವ ಸನ್ನಿವೇಶವೂ ಮೈ ನವಿರೇಳಿಸುವಂತಹದು. ದುರ್ಗಾಬಾಯಿ ತನ್ನ ದುರ್ಗಾವತಾರದ ಆವೇಶದಿಂದ ಲಲಿತಾಳ ಕೆನ್ನೆಗೆ ಬಿಗಿದಾಗ, ಉಟ್ಟ ಸೀರೆಯ ಮೇಲೆ ಲಲಿತಾ ಮನೆಬಿಟ್ಟು ಹೊರಹೊರಟಾಗ - ಅದೊಂದು ರುದ್ರ ದೃಶ್ಯ. ಎಲ್ಲಿಗೆ ಹೊರಟೆಂದು ತಾಯಿ ಪ್ರಶ್ನಿಸಿದಾಗ, ಲಲಿತಾ ಕೊಟ್ಟ ಉತ್ತರ :

"ನಾನೀಗ ಎಲ್ಲಿ ಹೋಗಲಿಕ್ಕೂ ಸ್ವತಂತ್ರಳಿದ್ದೀನಿ. ನನ್ನ ಮದುವೆಯೂ ಆಗಿದೆ. ಮುಂಬಯಿಯಲ್ಲಿ ರಜಿಸ್ಟರ್ ಮ್ಯಾರೇಜ್ ! ಅವರು ಶೂದ್ರರಲ್ಲ. ಅವರು ಶೂದ್ರರು ಅಂತ ಯಾರು ನಿನಗೆ ಹೇಳಿದರೊ ಅವರು ನನ್ನ ಬಾಳಿನ ಹಾಲಿನಲ್ಲಿ ಹುಳಿ ಹಿಂಡಬೇಕು ಅಂತ ಹಾಗೆ ಹೇಳಿದ್ದಾರೆ..."

ನಾ ನಿಕಾಕಾ : ಎನ್ಕೆ ಬರೆಹ/೩೫೫

ಅತ್ಯಂತ ಧಿಟ್ಟತನದ್ದಾಗಿದೆ; ಸ್ವತಂತ್ರ ಆಧುನಿಕ ಮಹಿಳೆಯ ಪ್ರತೀಕವೂ ಆಗಿದೆ.

ಖಡ್ಗದ ಧಾರೆಯ ಮೇಲೆ ಧಾರವಾಡದ ನಾಳಿನ ಧಾರಾಮಹಾಲು ಕಟ್ಟಲು ಹೇಗೆ ಸಾಧ್ಯ? ಲಲಿತಾಳ ಜೀವನ ಎಂದರೆ ಬರಿ ಕಣ್ಣೀರು. ಹಲವು ಬಾರಿ ದಿಟ್ಟತನದಿಂದ ಉತ್ತರಿಸುವ ಸಾಮರ್ಥ್ಯವನ್ನು ಲಲಿತಾ ಪಡೆದಿದ್ದರೂ, ಅವಳು ಸ್ವಭಾವತಃ ಹೆಣ್ಣೇ ಅಲ್ಲವೇ ? ಸಮಸ್ಯೆಯೊಡನೆ ಹೋರಾಡುವುದೇ ಅವಳ ಜೀವನದ ಸ್ವಾರಸ್ಯ, ಅದು ಅವಳಿಗೆ ಸಮಾಧಾನ

ಇದಕ್ಕಿಂತಲೂ ಹೆಚ್ಚಿನ ಸಮಾಧಾನ ಸಂಗೀತ ! ಲಲಿತಾಳ ಸಂಗೀತದ ಗುರು ರುದ್ರಯ್ಯಸ್ವಾಮಿ ಹೇಳಿದ – "ಸಂಗೀತದ ಕಂಠ ಅಂದರ ವಿಷನುಂಗಿ ಅಮೃತ ನೀಡುವ ಶಿವಕಂಠ ಇದ್ದಹಾಂಗ. ನಂಜುಂಡ ಶಿವಾನೂ ನಟರಾಜನಾದ." ಈ ಮಾತು ಲಲಿತಾಳಿಗೆ ಆದರ್ಶಪ್ರಾಯ. ರುದ್ರಯ್ಯಸ್ವಾಮಿ ತಮ್ಮ ಸಂಗೀತ ಸಾಧನೆಯನ್ನು ಲಲಿತಾ ಒಬ್ಬಳಿಗಾಗಿ ಧಾರೆಯೆರೆದು ಬಿಡುವ ಮುನ್ನ, ಲಲಿತಾ ಗುರುಗಳಿಗೆ ಕೇಳಿಕೊಂಡದ್ದಾದರೂ ಏನು ?....

"ಮಾಸ್ತರ್, ನನ್ನ ಜೀವನದೊಳಗ ಸಂಗೀತ ಒಂದೇ ನನ್ನ ಸರ್ವಸ್ವ. ಅದೇ ನನ್ನ ತಾಯಿ, ನನ್ನ ಬಂಧು-ಬಳಗ ! ನನ್ನ ಜೀವನ ಸಂಗಾತಿ ಅಂದರೆ ಸಂಗೀತವೇ."

ಸಂಗೀತದ ಇಂಥ ಆಸರೆಯನ್ನು ಹೊತ್ತು, ಸತೀಶನ ಪ್ರೋಷಣೆಯ ಹೊಣೆ ಹೊತ್ತು, ಒಂಟಿಯಾಗಿದ್ದರೂ ಕ್ಲಿಷ್ಟವಾದ ಆಧುನಿಕ ಸಮಾಜದ ಸಂಕೀರ್ಣ ಸಮಸ್ಯೆಗಳನ್ನು ಎದುರಿಸುತ್ತ ಧೀರತನದ ಬಾಳನ್ನು ನಡೆಸುವ ಈ ಕಲೋಪಾಸಕ ಲಲಿತಾಳ ಬಗ್ಗೆ ಅನುಕಂಪವು ಉಂಟಾಗದೆ ಇರಲಾರದು. ಇಂಥದೊಂದು ಉದಾತ್ತ ಆದರ್ಶ ಗುರಿಯ ಸಾಧನೆಯ ಚಿತ್ರವೇ ಈ ಕಾದಂಬರಿ 'ಲಲಿತಾ'.

# ಎನ್ಕೆಯವರ ಎರಡು ಕೌಟುಂಬಿಕ ಕಾದಂಬರಿಗಳು

ಕೀರ್ತಿನಾಥ ಕುರ್ತಕೋಟಿ

ಎನ್ಕೆಯವರು ಕಾದಂಬರಿಗಳನ್ನು ಬರೆದದ್ದು ಇತ್ತೀಚಿಗೆ. * ಮೇಲಾಗಿ ಅವರು ಎರಡು ಕಾದಂಬರಿಗಳನ್ನು ಮಾತ್ರ ಬರೆದಿದ್ದಾರೆ. ಆದರೆ ಕಾದಂಬರಿಯನ್ನು ಅಸಂಬದ್ಧ ಸಾಮಾಜಿಕತೆಯ ಬಂಧನದಿಂದ ಬಿಡಿಸಿದ ಶ್ರೇಯಸ್ಸು ಅವರಿಗೆ ಸಲ್ಲಬೇಕು. ಇವರ 'ಸಾವಿನ ಉಡಿಯಲ್ಲಿ' ಹಾಗೂ 'ಎರಡನೆಯ ಸಂಬಂಧ' ಗಳು ಸಂಪೂರ್ಣವಾಗಿ ಕೌಟುಂಬಿಕವಾಗಿವೆ. ಎನ್ಕೆಯವರ ಬರವಣಿಗೆಯಲ್ಲಿ ಅಸಾಮಾನ್ಯವಾದದ್ದು ಏನೂ ಇಲ್ಲ. ಅವರ ಅನುಭವ ಘನವಾದದ್ದಲ್ಲ. ಶ್ರೀರಂಗರ ವಿಚಾರಸರಣಿಯಾಗಲಿ ಮಾಸ್ತಿಯವರ ಅಂತಃಕರಣದ ಪ್ರಜ್ಞೆಯಾಗಲಿ, ಕುವೆಂಪುರವರ ಕಾವ್ಯಮಯತೆಯಾಗಲಿ, ವಿನಾಯಕರ ಆದರ್ಶವಾದದ ಘನತೆಯಾಗಲಿ ಎನ್ಕೆಯವರಲ್ಲಿಲ್ಲ. ಆದರೆ ಈ ಸಾಮಾನ್ಯತೆಯೆ ಅವರ ಬಹಳ ದೊಡ್ಡ ಗುಣವಾಗಿದೆ. ಅವರ ಶೈಲಿ ಅವರು ಚಿತ್ರಿಸುವ ಸಾಮಾನ್ಯ ಸುಖ-ದುಃಖಗಳಿಗೆ ಹೇಗೋ ಹೊಂದಿಕೆಯಾಗಿಬಿಟ್ಟಿದೆ. ಅದರ ಪಾರದರ್ಶಕತೆ ಅನುಭವದ ಪ್ರಾಮಾಣಿಕತೆಗೆ ಸಹಜವಾದ ಅಭಿವ್ಯಕ್ತಿಯನ್ನು ತಂದುಕೊಡುತ್ತದೆ. ತಮಗೆ ಸಂಬಂಧ ಬಂದ ಜಗತ್ತಿನೊಂದಿಗೆ ಎನ್ಕೆಯವರು ಸಂಪೂರ್ಣವಾಗಿ ಸಮರಸ ಹೊಂದಿದ್ದಾರೆ. ಶಾಸ್ತ್ರೀಯ ಪರಿಭಾಷೆಯಲ್ಲಿ ಹೇಳುವವಾದರೆ ಎನ್ಕೆಯವರು ನಮ್ಮ ಮಧ್ಯಮವರ್ಗದ ಭಾರಮಾಪಕ ಯಂತ್ರವಾಗಿದ್ದಾರೆ.

'ಸಾವಿನ ಉಡಿ'ಯಲ್ಲಿಯ ಕರುಣ ಕೆಲವರಿಗೆ ಅತಿಯಾಗಿ ತೋರಬಹುದು. ಆದರೆ ಅದು ಉತ್ಕಟವಾಗಿದೆಯೇ ಹೊರತು ವಿಕಾರವಾಗಿಲ್ಲ. ಕಾದಂಬರಿಯ ಲೋಕದಲ್ಲಿ ಆ ರೀತಿಯ ಕರುಣ ತೀರ ಸಹಜವಾಗಿದೆ. ರತ್ನಾಳ ಹುಟ್ಟಿದ ಹಬ್ಬಕ್ಕೆ ನೆರೆದ ವೆಂಕಣ್ಣನ ಗೆಳೆಯರು ಮಧ್ಯಮವರ್ಗದ ಸಮಾಜದ ನೈಜ ಪ್ರತಿನಿಧಿಗಳಾಗಿದ್ದಾರೆ. ಅವರ ಸುಖದುಃಖಗಳ ಕ್ಷೇತ್ರ ಮರ್ಯಾದಿತವಾದರೂ ಉತ್ಕಟತೆಗೇನೂ ಕೊರತೆಯಿಲ್ಲ. ವೆಂಕಣ್ಣನ ಸಂಸಾರ ಸುಖದ ಉಕ್ಕಿನಲ್ಲಿರುವಾಗ ಅವನ ಜೀಗನಾದ ಶ್ಯಾಮನ ಸಂಸಾರ ಕವಲೊಡೆಯುತ್ತದೆ. ಸುಖಕ್ಕೆ ಕೊನೆಯೇ ಇಲ್ಲ

* " ನಡೆದು ಬಂದ ದಾರಿ (೧೯೬೦) " ಯಿಂದ

ವೆಂದು ತನ್ಮಯರಾಗಿರುವಾಗ ಸಾವು ಈ ಗೊಂಬೆಯಾಟವನ್ನು ಕೆಡಿಸಲೆಂದು ಎರಗುತ್ತದೆ. ಮೊದಲಿನ ಅನುರಕ್ತಿಗೆ ಹೊಡೆತ ಬೀಳುತ್ತದೆ. ಬಯಕೆ, ಬಸಿರು, ಬೇನೆ ಎನ್ನುತ್ತಿರುವಾಗಲೇ ಪದ್ದಕ್ಕ ಸಾವಿಗೀಡಾಗುತ್ತಾಳೆ. ದುಃಖ ಮಡುವುಗಟ್ಟುತ್ತದೆ. ಈ ದುಃಖವನ್ನು ಸಂಸ್ಕಾರಗೊಳಿಸಿ ಹೃದಯದ ಆಹಾರವನ್ನಾಗಿ ಮಾಡಿಕೊಂಡು ಜೀವಿಸಲು ವೆಂಕಣ್ಣನೇನು ಹರಿಶ್ಚಂದ್ರನಲ್ಲ! ಇನ್ನೊಂದು ಆಟವನ್ನು ಮನಸ್ಸಿಲ್ಲದಿದ್ದರೂ ಹೂಡಬೇಕಾಗಿದೆ. ಈ ಅವಧಿಯಲ್ಲಿ ವೇಶ್ಯೆಯಾದ ಕೇಸರಿಯೊಡನೆ ಸಂಬಂಧ, ಮುಂದೆ ಬರಲಿರುವ ಜೀವನದ ವಿಕೃತಿಗೆ ಪೀಠಿಕೆಯಾಗಿವೆ. ಕಾದಂಬರಿಯ ದುರಂತಕ್ಕೆ ಕೇಂದ್ರವಾಗಿದೆ. ಸಂಸಾರ ಒಡೆದ ಹಾಲಿನಂತಾದರೂ ಅದನ್ನು ರುಚಿಗೊಳಿಸುವ ವ್ಯರ್ಥ ಪ್ರಯತ್ನಗಳಲ್ಲಿ ವೆಂಕಣ್ಣ ತೊಡಗಿದ್ದಾನೆ. ಸುಖದ ರುಚಿಯಿಲ್ಲದೆ ಆತನು ಬದುಕಲಾರ, ಆದ್ದರಿಂದ ಕೇಸರಿ-ರುಕ್ಮಿಣಿಯರಲ್ಲಿ ಅದನ್ನು ಹುಡುಕುತ್ತಾನೆ. ಆದರೆ ದೊರೆತ ಪ್ರತಿಯೊಂದು ಸುಖಾನುಭವ ನಂಜಿನಿಂದ ಕೂಡಿದ್ದು. ಆರೋಗ್ಯವೆಲ್ಲ ಹಾಳಾಗುತ್ತದೆ. ತಾಯಿಯಿದ್ದೂ ಮಗಳು ರತ್ನಾ ಅನಾಥಳಾಗಿದ್ದಾಳೆ. ಶ್ಯಾಮ ಹೆಂಡತಿಯೊಂದಿಗೆ ಮನೆಬಿಟ್ಟು ಹೋಗುತ್ತಾನೆ. ಕ್ಷಣ ಕ್ಷಣಕ್ಕೂ ಉಲ್ಬಣಗೊಳ್ಳುವ ಬೇನೆಯಂತೆ ದುಃಖ ಅನೇಕ ವಿಕಾರಗಳನ್ನು ತಳೆದಿದೆ. ಆರ್ಥಿಕ ತಾಪತ್ರಯ, ಗೆಳೆತನದಲ್ಲಿಯ ವಿರಸ, ಸೂಳೆಯೊಡನೆ ಸಂಬಂಧ ಬೆಳೆಯಿಸಿದ ಅಪವಾದ, ಕೊನೆಗೆ ಒಡೆಯುವ ಕ್ಯಾನ್ಸರಿನ ಹುಣ್ಣು ಕಾದಂಬರಿಯ ಕೊನೆಯನ್ನು ದುರಂತವನ್ನಾಗಿ ಮಾಡಿವೆ. ಸಾವು ಕೂಡ ಬಿಡುಗಡೆ ಎನ್ನುವಷ್ಟು ಆ ಜೀವನ ದುರಂತವಾಗಿದೆ.

ಈ ಕಾದಂಬರಿಯ ಸಹಜತೆಯೇ ಒಂದು ದೊಡ್ಡ ಗುಣವಾಗಿದೆ. ಪ್ರಗತಿಯನ್ನು ಹೊಂದುವ ರಭಸದಲ್ಲಿ ಒಮ್ಮೊಮ್ಮೆ ಸಾಹಿತ್ಯಪ್ರಕಾರಗಳು ತಮ್ಮ ಸಹಜತೆಯನ್ನು ಕಳೆದುಕೊಂಡು ಬಿಡುವುದುಂಟು. ಕನ್ನಡ ಕಾದಂಬರಿಗಳಲ್ಲಿ ಕೆಲವುಗಳ ಮಟ್ಟಿಗಂತೂ ಈ ಮಾತು ನಿಜವಾಗಿದೆ. ಎನ್ಕೆಯವರು 'ಸಾವಿನ ಉಡಿಯಲ್ಲಿ' ಬರೆದ ಕಾದಂಬರಿಯನ್ನು ತನ್ನ ಸಹಜ ಸ್ಥಿತಿಗೆ ತಂದು ಮುಟ್ಟಿಸಿದ್ದಾರೆ. ಈ ಕೃತಿಯ ವಿನೋದ-ಕರುಣಗಳು ರಕ್ತದಲ್ಲಿಯ ಬಿಳಿ-ಕೆಂಪು ಗೋಲಕಗಳಂತೆ ಕತೆಯ ಸಜೀವತೆಯನ್ನೂ, ಆರೋಗ್ಯವನ್ನೂ ಕಾಪಾಡಿಕೊಂಡು ಬಂದಿವೆ. ವಾತಾವರಣ ನೆರೆಮನೆಯಲ್ಲಿಯೆ ನಡೆದ ಜೀವನಕ್ರಮದಷ್ಟು ವಾಸ್ತವವಾಗಿದೆ, ಮತ್ತು ಲೇಖಕರ ಸಾಮಾನ್ಯತೆಯ ದೃಷ್ಟಿ ಭಾವನೆಗಳು ಹದ ಮೀರದಂತೆ ನೋಡಿಕೊಂಡಿದೆ.

ಎನ್ಕೆಯವರ 'ಎರಡನೆಯ ಸಂಬಂಧ' ಇನ್ನೂ ಹೆಚ್ಚು ಸಾಧಿಸಬೇಕೆನ್ನುವ ಕೃತಿ. 'ಸಾವಿನ ಉಡಿಯಲ್ಲಿ'ಯ ದಾಂಪತ್ಯದ ಸರಸವಿರಸಗಳು ಕತೆಯ ಸುಖ

ದುಃಖದ ಎಳೆಗಳಾಗಿ ಬಂದಿವೆ. ಈ ಕಾದಂಬರಿಯಲ್ಲಿ ಅದು ಸಮಸ್ಯೆಯ ಸ್ವರೂಪವನ್ನು ತಳೆದಿದೆ. ಇಲ್ಲಿಯೂ ಅಂಥದೇ ಪಾತ್ರವರ್ಗವಿದೆ. ಹೆಚ್ಚು ಸುಶಿಕ್ಷಿತವಾಗಿದ್ದರೂ ರಾಮನಾಥ ವೆಂಕಣನಿಗಿಂತ ಮನೋವೃತ್ತಿಯಲ್ಲಿ ಯಾವ ವಿಧದಲ್ಲಿಯೂ ಹೆಚ್ಚಾಗಿಲ್ಲ. ಅಲ್ಲಿ ಪದ್ದಕ್ಕ ಜೀವಂತ ವ್ಯಕ್ತಿಯಾಗಿದ್ದು ಸಾಯುತ್ತಾಳೆ; ಇಲ್ಲಿ ಜಾನಕಿ ಸತ್ತು ಕೇವಲ ನೆನಪಾಗಿದ್ದಾಳೆ, ಪತ್ರಗಳ ಮೂಲಕ ಮಾತಾಡುತ್ತಾಳೆ. ವಿದ್ಯಾ, ಛಬೆ ಮೊದಲಾದವು ಮಾತ್ರ ಆಧುನಿಕತೆಯನ್ನು ಸೂಚಿಸುವ ಹೊಸ ಪಾತ್ರಗಳಾಗಿವೆ. ಇಂಥ ವ್ಯಕ್ತಿಗಳ ನಡುವೆ ದಾಂಪತ್ಯ ಜೀವನದ ಸಮಸ್ಯೆಯೊಂದು ಭಗ್ಗನೆ ಉರಿದೇಳುತ್ತದೆ. ಆದರೆ ಎನ್ಕೆಯವರು ವಾತಾವರಣ ನಿರ್ಮಿತಿ ಹಾಗೂ ರಸಸೃಷ್ಟಿಯ ನೆವದಲ್ಲಿ ಸಮಸ್ಯೆಯನ್ನು ಹುದುಗಿಸಿಬಿಡುತ್ತಾರೆ, ಇದಕ್ಕೆ ಕಾರಣವಿಲ್ಲದೆ ಇಲ್ಲ. ಎನ್ಕೆ ವಿಚಾರವಾದಿಗಳನ್ನು ಸೃಷ್ಟಿಸಲಾರರು ವಿಚಾರವಾದಿತ್ವ ಎಂದೂ ಅವರ ಬರವಣಿಗೆಯ ತಿರುಳಾಗಿ ಬಂದಿಲ್ಲ. ಅವರ ವ್ಯಕ್ತಿಗಳು ಯಾವ ಸನ್ನಿವೇಶಗಳಲ್ಲಿಯೂ ಅವುಗಳ ಸುಖದುಃಖಗಳಲ್ಲಿ ಮಾತ್ರ ಪಾಲುಗಾರರಾಗುತ್ತವೆಯೇ ಹೊರತು, ಯೋಚಿಸುವದಿಲ್ಲ. ರಾಮನಾಥ ಹಾಗೂ ವಿದ್ಯಾ ಹೆಸರಿಗೆ ಮಾತ್ರ ಸುಶಿಕ್ಷಿತರಾಗಿದ್ದಾರೆ. ಅವರು ಮುಖ್ಯವಾಗಿ ಭಾವಜೀವಿಗಳು. ರಾಮನಾಥ ಜಾನಕಿಯ ಪತ್ರಗಳಲ್ಲಿ ವರ್ತಮಾನದ ದುಃಖವನ್ನು ಮುಳುಗಿಸಿಬಿಡುತ್ತಾನೆ; ಇಲ್ಲದಿದ್ದರೆ ಛಬೆಯ ನಿರ್ವ್ಯಾಜ ಸ್ನೇಹದಲ್ಲಿ ಜಗತ್ತನ್ನು ಮರೆಯುತ್ತಾನೆ. ವಿದ್ಯಾ ರಾಮನಾಥನೊಡನೆ ಸರಸ, ಜಗಳ ಯಾವುದಕ್ಕೂ ಸಿದ್ಧಳಾಗಿದ್ದಾಳೆ. ಹಿಂದು ಮುಂದಿನ ವಿಚಾರಗಳು ಅವಳನ್ನು ಬಾಧಿಸುವದಿಲ್ಲ, ಆದ್ದರಿಂದ ಕಾದಂಬರಿಯ ಕೊನೆ ಅನಿರೀಕ್ಷಿತವಾಗಿ ಸಮನ್ವಯದಲ್ಲಿ ಪರಿಣಾಮಗೊಳ್ಳುತ್ತದೆ. ಸಮಸ್ಯೆಯ ಉರಿತಾಕದಂತೆ ವ್ಯಕ್ತಿಗಳೆಲ್ಲ ಪಾರಾಗಿಬಿಡುತ್ತಾರೆ.

ಈ ಕಾದಂಬರಿಯ ಸೌಂದರ್ಯವೆಲ್ಲ ಅದರ ಸ್ಮೃತಿ ಚಿತ್ರದಲ್ಲಿದೆ. ರಾಮನಾಥನ ವ್ಯಕ್ತಿತ್ವ ನಮಗೆ ಪ್ರಿಯವೆನಿಸದಿದ್ದರೂ ಅವನ ನೆನಪುಗಳು ಪ್ರಿಯವಾಗುತ್ತವೆ. ಜಾನಕಿ-ರಾಮನಾಥರ ಪತ್ರವ್ಯವಹಾರ ಮುದ್ದಣ-ಮನೋರಮೆಯರ ಸರಸ ಸಂಭಾಷಣೆಯನ್ನು ನೆನಪಿಗೆ ತರುವಂತಿದೆ. ಜಾನಕಿಯ ಪತ್ರಗಳಲ್ಲಿಯ ಭಾಷಾ ಶೈಲಿಯ ಕ್ರಮಬದ್ಧವಾದ ಬೆಳವಣಿಗೆ ಎನ್ಕೆಯವರ ಲೇಖನಸಾಮರ್ಥ್ಯದ ಕುರುಹಾಗಿ ಬಂದಿದೆ. ಅಲ್ಲಲ್ಲಿ ಕಾಣುವ ಭಾವನಾವಶತೆ, ಹಾಗೂ ವಿದ್ಯಾ ರಾಮನಾಥರ ಜಗಳಗಳ ಕೃತ್ರಿಮತೆಯನ್ನು ಬಿಟ್ಟರೆ ಕಾದಂಬರಿಯ ಶೈಲಿ ಪರಿಪೂರ್ಣವಾಗಿದೆಯೆನ್ನಬಹುದು.

ನಾನಿಕಾಕಾ : ಎನ್ಕೆಬರೆಹ/೩೬೩

# ಎನ್ಕೆ ಕೃತಿಗಳಲ್ಲಿ ಜೀವನ ದೃಷ್ಟಿ

ಕೃಷ್ಣ ಕುಲಕರ್ಣಿ

ಎನ್ಕೆ ಸಾಹಿತ್ಯ ಕೃತಿಗಳಲ್ಲಿಯ ಜೀವನದೃಷ್ಟಿ ವಿಶಾಲವಾದುದು. 'ಜೀವನದ ಪ್ರತಿಮೆಯು ನಿತ್ಯ ಸತ್ಯದಲ್ಲಿ ಅಭಿವ್ಯಕ್ತಿ ಪಡೆದಾಗ ಕಾವ್ಯವಾಗುತ್ತದೆ' ಎಂಬ ಶೆಲ್ಲಿಯ ಮಾತು ಇಲ್ಲಿ ಸತ್ಯವಾಗಿದೆ. ಜೀವನದಲ್ಲಿ ಕೆಳಮಟ್ಟದ ಅಭಿರುಚಿಯ ಮಾರ್ಗವೊಂದು ಗುಪ್ತವಾಗಿ ಸಾಗುತ್ತಲೇ ಇರುತ್ತದೆ. ಅದನ್ನು ತಪ್ಪಿಸುವದು ಸಾಹಿತಿಯ ಜವಾಬ್ದಾರಿಯ ಕೆಲಸವಾಗಿದೆ ತನ್ನ ಶ್ರೇಷ್ಠ ಸಾಹಿತ್ಯ ಕೃತಿಗಳಿಂದ ತನ್ನ ರಸಿಕರಲ್ಲಿ ಉತ್ತಮ ಸಂಸ್ಕೃತಿಯನ್ನು ನಿರ್ಮಾಣ ಮಾಡುವ, ಅವರ ಜೀವನವನ್ನು ಉದಾತ್ತಗೊಳಿಸುವ ಹದಗಾರಿಕೆ ಸಾಹಿತಿಯ ಸಾಮರ್ಥ್ಯದಲ್ಲಿ ಅಡಗಿದೆ. ಶ್ರೇಷ್ಠ ಕೃತಿಗಳು ಯಾವಾಗಲೂ ಜನ-ಮನದಲ್ಲಿ ವೈಚಾರಿಕತೆಯ ಮೊತ್ತವನ್ನು ಹೆಚ್ಚಿಸುತ್ತಲೇ ಇರುತ್ತವೆ. ಇದಕ್ಕೆ ಎನ್ಕೆ ಹೊರತಾಗಿಲ್ಲ. ಅವರ ಕೃತಿಗಳನ್ನು ವಿವೇಚಿಸಿದಾಗ ಈ ಮಾತಿನ ಯಥಾರ್ಥತೆಯು ಅರಿವಾಗುತ್ತದೆ.

ಅವರ ಕಾದಂಬರಿಗಳಲ್ಲಿ ಸಾಮಾನ್ಯ ಜೀವಿಯ ಸುಖ-ದುಃಖಗಳು ಪ್ರಾಮಾಣಿಕವಾಗಿ ಸಹಜವಾಗಿ ಅಭಿವ್ಯಕ್ತವಾಗಿವೆ. ಮಧ್ಯಮ ವರ್ಗದ ಸಮಾಜದ ವಾಸ್ತವಿಕವಾದ ಜೀವನ ಚಿತ್ರಣ ಎನ್ಕೆಯವರ ಕಾದಂಬರಿಯ ಮುಖ್ಯ ಸೂತ್ರವಾಗಿದೆ. ತಾವು ಕಥಾವಸ್ತುವಿನಿಂದ ಹೊರಗಿದ್ದುಕೊಂಡು ಕೃತಿ ರಚನೆ ಮಾಡಿಲ್ಲ. ಅದರೊಡನೆ ಸಮರಸವಾಗಿ ಬಿಡುವ ಗುಣ ಅವರಲ್ಲಿ ಕಾಣುತ್ತವೆ. ಎನ್ಕೆ ಅವರ ಮೊದಲ ಕಾದಂಬರಿ 'ಸಾವಿನ ಬುಡಿಯಲ್ಲಿ' ಪದ್ದಕ್ಕ ವೆಂಕಣ್ಣರ ದಾಂಪತ್ಯ ಜೀವನದ ಸುಖ-ಸಂತೋಷಗಳಿಂದ ಪ್ರಾರಂಭವಾಗಿ ವೆಂಕಣ್ಣನ ಜೀವನ ನೌಕೆ ದುಃಖದ ಮಡುವಿನಲ್ಲಿ ವಿವಿಧ ದಂಡೆಗಳಿಗೆ ಅಪ್ಪಳಿಸಿ, ಕೊನೆಗೆ ಏಡಿಹುಣ್ಣಿನ ಬೇನೆಯಿಂದ ದುರಂತ ವ್ಯಕ್ತಿಯಾಗಿ ಸಾಯುವದರೊಂದಿಗೆ ಮುಕ್ತಾಯವಾಗುತ್ತದೆ. ಸುಖದ ಆಗರದಲ್ಲಿದ್ದ ವೆಂಕಣ್ಣ ತನ್ನ ಹೆಂಡತಿ ಪದ್ದಕ್ಕನ ಸಾವಿನಿಂದಾಗಿ ದುಃಖವನ್ನು ಅನುಭವಿಸುತ್ತಾನೆ. ಈ ದುಃಖವನ್ನು ಮರೆಯಲೋ ಎಂಬಂತೆ ಆತನು ಬೆಳೆಸುವ ವೇಶ್ಯಾಸಂಗದೊಡನೆ ಆತನ ಬಾಳಿನ ವಾಮಮಾರ್ಗ ಪ್ರಾರಂಭವಾಗುತ್ತದೆ. ವೇಶ್ಯೆಯರಾದ ಕೇಸರಿ, ರುಕ್ಮಿಣಿಯರ ಸಹವಾಸದಲ್ಲಿ ತನ್ನ ಆರೋಗ್ಯವನ್ನು ಹಾಳುಮಾಡಿಕೊಂಡು ಜೀವನ

ದಲ್ಲಿ ಅನೇಕ ತೊಂದರೆಗಳನ್ನು ಅನುಭವಿಸಿ ದುರಂತ ವ್ಯಕ್ತಿಯಾಗಿ ಈ ಜೀವನದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಇಲ್ಲಿ ವೆಂಕಣ್ಣನು ಪರಿಸ್ಥಿತಿಯ ಕೂಸಾಗಿ ತನ್ನ ಜೀವನವನ್ನು ದುರಂತಕ್ಕೆ ಈಡುಮಾಡಿಕೊಂಡನೆಂಬ ಅನುಕಂಪಕ್ಕೆ ಪಾತ್ರನಾಗಿ ದ್ದಾನೆಯೇ ಹೊರತು, ತಿರಸ್ಕಾರಕ್ಕೆ ಪಾತ್ರನಾಗಿಲ್ಲ. ಅವನ ವಿಕೃತಿಗಳಿಗೆ ಜೀವನ ದಲ್ಲಿ ಅವನಿಗೊದಗಿದ ದುಃಖಗಳೇ ಕಾರಣ ಎನ್ನುವ ಭಾವನೆ ಅಲ್ಲಿ ತಲೆ ಎತ್ತುತ್ತದೆ.

ಅವರ ಇನ್ನೊಂದು ಕಾದಂಬರಿ 'ಗೌರೀಶಂಕರ.' ಇದು ೧೯೪೨ರ ಚಳವಳಿ ಮತ್ತು ೧೯೬೨ರ ಚೀಣಾದಾಳಿ ಈ ಎರಡು ಮಹಾಘಟನೆಗಳ ನಡುವಿನ ಎರಡು ದಶಕಗಳ ರಾಜಕೀಯ ಸಾಮಾಜಿಕ ಹಿನ್ನೆಲೆಯಲ್ಲಿ ಮೂಡಿಬಂದ ಇಬ್ಬರು ಆದರ್ಶ ಜೀವಿಗಳ ಚಿತ್ರಣವಾಗಿದೆ. ಮಹಾತ್ಮಾಜಿ ಮತ್ತು ಅರವಿಂದರ ಆದರ್ಶಗಳನ್ನು ಕಣ್ಣುಮುಂದೆ ಇರಿಸಿಕೊಂಡು, ಬಂದ ತೊಂದರೆಗಳನ್ನು ಎದುರಿಸಿದ ನಲ್ಮೆಯ ಮಿತ್ರರಿಬ್ಬರ ಜೀವ ನದ ಹೋರಾಟ ಇಲ್ಲಿ ಚಿತ್ರಿತವಾಗಿದೆ. ಈ ಕಾದಂಬರಿಯಲ್ಲಿ ಬರುವ ಆದರ್ಶ ತತ್ವ ವಿಚಾರಗಳು ಜೀವನದ ಸಮಸ್ಯೆಗಳಿಗೆಲ್ಲ ಉತ್ತರ ಕೊಡುತ್ತವೆ. ಜೀವನ ದರ್ಶನವನ್ನು ಬದುಕಿನ ಗುರಿಯನ್ನು ಎತ್ತಿ ತೋರಿಸುತ್ತವೆ. ಗೌರಿಯ ಗಂಡ ದಯಾನಂದನಂತಹ ಸಮರಸ ಪಾತ್ರದಲ್ಲಿಯೂ ಮಾನವ ಸ್ವಭಾವದ ಆದರ್ಶ ಚಿತ್ರಣವನ್ನು ಕಾಣುತ್ತೇವೆ. ಭಗವದ್ಗೀತೆ, ಅರವಿಂದರ ತತ್ತ್ವೋಪದೇಶಗಳು ಆಗಾಗ ಕಾದಂಬರಿಯಲ್ಲಿ ಬಂದು ಓದುಗನಿಗೆ ಜೀವನದೃಷ್ಟಿಯನ್ನು ಕೊಡುತ್ತವೆ.

ಕಾದಂಬರಿಕಾರ ಎಸ್ಕೆ ಚಿತ್ರಿಸುವ ಕೌಟುಂಬಿಕ ಚಿತ್ರಣ ಭಾವನೆಗಳನ್ನು ಬಡಿದೆಬ್ಬಿಸಿದರೆ ಅವರ ಈಚಿನ ಕೆಲವು ನಾಟಕಗಳಂತೂ ವೈಚಾರಿಕತೆಯ ವೈಖ ರಿಗೆ ನಿದರ್ಶನವಾಗಿವೆ. 'ಕವಿ ಚಿರಂಜೀವಿ' ಏಕಾಂಕ ನಾಟಕವು ಜನತಾ ಮಹಾ ಕವಿ ಕುಮಾರವ್ಯಾಸನನ್ನು ಕುರಿತು ಬರೆದದ್ದು. ಎಸ್ಕೆಯವರು ಈ ಮಹಾಕವಿಯ ಸಂಶೋಧನಾತ್ಮಕ ಅಭ್ಯಾಸವನ್ನು ನಡೆಯಿಸಿದುದರ ಫಲವಾಗಿ ಈ ನಾಟಕವು ರೂಪಿತವಾಗಿದೆ. ಮಹಾಕವಿಯ ಜೀವನವೆಲ್ಲ ರಸವತ್ತಾಗಿ ಚಿತ್ರಿತವಾಗಿದೆ. ಇಲ್ಲಿ ಬರುವ ಲಕ್ಷ್ಮೀ-ನಾರಣಪ್ಪರ ಸರಸ ಸಂವಾದ ಮುದ್ದಣ ಮನೋರಮೆಯರನ್ನು ನೆನಪಿಗೆ ತರುತ್ತದೆ.

ಎಸ್ಕೆ ಅವರ ಇನ್ನೊಂದು ನಾಟಕ 'ನಿಧಿ'. ನಿಧಿಗಾಗಿ ಹಂಬಲಿಸಿ ಜೀವಕ್ಕೆ ಎರವಾದ ಒಂದು ಕುಟುಂಬದ ಕತೆ. ಲಕ್ಷ್ಮಿಯು ದೊರಕುವಳೆಂಬ ಭ್ರಾಂತಿಯಿಂದ ಮಾನವೀಯ ದೌರ್ಬಲ್ಯಕ್ಕೆ ಒಳಗಾಗಿ ಜೀವನದಲ್ಲಿ ಸುಖ-ಸಮಾಧಾನಗಳನ್ನು ಕಾಣದೆ ಕೊನೆಗೂ ಸಾವಿನಲ್ಲಿಯೇ ಸುಖವನ್ನು ಕಾಣುವ ದೃಷ್ಟಿ ಇಲ್ಲಿದೆ.

ಎನ್ಕೆ ವಿರಚಿತ ರಾಷ್ಟ್ರೀಯ ಏಕಾಂಕ ನಾಟಕ 'ಕಸಿ-ಹೃದಯ ಕಣ್ತೆರೆದಿತ್ತು' ವಿದೇಶದಲ್ಲಿ ಹೃದಯವನ್ನು ಕಸಿ ಮಾಡುವ ಶಸ್ತ್ರಕ್ರಿಯೆಯ ಪ್ರಯೋಗವೊಂದನ್ನು ಕಥಾವಸ್ತುವನ್ನಾಗಿ ಬಳಸಿಕೊಂಡು ಅದರ ಮೇಲೆ ಒಂದು ಪ್ರಣಯ ಕತೆಯನ್ನು ನಿರೂಪಿಸಲಾಗಿದೆ. ಇಲ್ಲಿ ಬರುವ ಸಂಭಾಷಣೆಗಳು ಸತ್ಯ ಜೀವನದ ಪ್ರತಿಬಿಂಬಗಳಾಗಿವೆ. 'ಯಾವ ಶಕ್ತಿಯಿಂದ ಈ ಕಣ್ಣುಗಳು ನೋಡುತ್ತವೆಯೋ ಯಾವ ಶಕ್ತಿಯಿಂದ ಈ ಮೂಗು ಮೂಸುತ್ತದೆಯೋ, ಈ ನಾಲಿಗೆ ರುಚಿಸುತ್ತದೆಯೋ, ಈ ತ್ವಚೆ ಸ್ಪರ್ಶಿಸುತ್ತದೆಯೋ ಆ ಶಕ್ತಿಯೇ ದೇವರು', 'ಶ್ರೇಷ್ಠವಾದ ಸೈನ್ಸ್ ಯಾವದು ಅಂದ್ರೆ ಬದುಕೋ ಶಾಸ್ತ್ರವನ್ನು ಕಲಿಸುವಂಥಾದ್ದು ಶ್ರೇಷ್ಠವಾದ ಕಲೆ ಯಾವದು ಅಂದ್ರೆ ಬದುಕೋ ಕಲೆಯನ್ನು ಕಲಿಸುವಂಥಾದ್ದು' — 'ಕಾವ್ಯ ಎಂದರೆ ಬಾಳ ಬಟ್ಟೆಯ ಪರಮಾಗಮ. ಕಾವ್ಯ ಕ್ಷಣಿಕ ಅಂತ್ಲೆ ಕೋಗು ಕ್ಷುಲ್ಲಕರು.' ಇಲ್ಲಿರುವ ಇಂತಹ ಅನೇಕ ನುಡಿಮುತ್ತುಗಳು ನಮ್ಮ ಬಾಳಿಗೆ ಬೆಳಕನ್ನು ಕೊಡಬಲ್ಲವು.

ಎನ್ಕೆ ಸಾಹಿತ್ಯ ಕೃಷಿಯಲ್ಲಿ ಭಾವಗೀತೆಗಳೂ ಸಾಕಷ್ಟು ಮೂಡಿ ಬಂದಿವೆ. ಸಾಹಿತ್ಯ ಜೀವನದ ಪ್ರತಿಬಿಂಬವೆನ್ನುವರು. ಅವರ ಭಾವಗೀತೆಗಳನ್ನು ಅವಲೋಕಿಸಿದಾಗ ಜೀವನಕ್ಕೆ ಅವಶ್ಯವಾದ ಒಲುಮೆ, ವಿಶ್ವಾಸ, ಅನುಕಂಪ, ದೈವಭಕ್ತಿ ಮೊದಲಾದ ಉದಾತ್ತವಾದ ಅಂಶಗಳನ್ನು ಕಾಣುತ್ತೇವೆ. 'ನಡಿ ಜಾಣಾ ಜಾತ್ರಿ ಕಡಿ ನಾನು ನೀನು ಜೋಡಿ, ಜಾತ್ರಿಗ್ಹೋಗಿ ಪ್ರೀತಿವಸ್ತಾ ತರೂಣಂತ ನಡಿ' ಜೀವನವೆಂಬ ಜಾತ್ರೆಯಲ್ಲಿ ಪ್ರೀತಿಯನ್ನು ತರುವದಕ್ಕಾಗಿ ಹೋರಟ ನಲ್ಲೆಯು ತನ್ನ ನಲ್ಲನಿಗೆ ಎಚ್ಚರಿಸುತ್ತಾಳೆ. "ಭಂಗಾರದ್ಹಾಂಗ ಬೆಳಗೂವೆಲ್ಲಾ ಭಂಗಾರಲ್ಲೊ ಜಾಣಾ" ಪ್ರೀತಿ ಎಂಬೋ ವಸ್ತಾ ಬೇಕು ಚೊಕ್ಕ ಚಿನ್ನದ್ಹಾಂಗ." ಇಂತಹ ಚೊಕ್ಕ ಚಿನ್ನದಂತಹ ಪ್ರೀತಿಯಿಂದ ಪ್ಯಾಟಿಯೆಲ್ಲಾ ಒಪ್ಯಾಡೂಣೆಂದು ಹೇಳುತ್ತಾಳೆ. ಮೋಸ ವಂಚನೆಗಳು ಮನೆ ಮಾಡಿದ ಈ ಪ್ರಪಂಚದಲ್ಲಿ ಬಹಳ ಜಾಣತನದಿಂದಿರಬೇಕೆನ್ನುತ್ತಾಳೆ. "ಹುಸಿ ಮೋಸಾ ಹೋಗದ್ಹಂಗ ಹುಷಾರಿರೋ ಜಾಣಾ, ಮಾಯಾ ಎಂಬೋ ಬಜಾರದಾಗ ವ್ಯಾಪಾರ ಮಾಡೋತನಾ" ಈ ಮಾಯಾ ಪ್ರಪಂಚದಲ್ಲಿ "ಸತ್ಯದಿಂದ ಶಿವನ ಅಂದ್ರ ಮುಕ್ತಿಗೆಲ್ಲಿ ಊನಾ?" ನಶ್ವರವಾದ ಈ ಪ್ರಪಂಚದಲ್ಲಿ ಶಿವನನ್ನು ನಂಬಿ "ಮೂರು ದಿನದ ಜಾತ್ರಿ ಮಾಡಿ" ನಗುನಗುತ್ತ ಬಾಳುವೆಯನ್ನು ಮುಗಿಸೋಣವೆಂದು ಹೇಳುತ್ತಾಳೆ. ಪರಿಶುದ್ಧವಾದ ಮುಗ್ಧೆಯ ಅಂತರಂಗ ನಮಗೆ ಬಾಳಿನ ದಾರಿಯನ್ನು ತೋರಿಸುವದಲ್ಲವೆ? ಜಾನಪದ ಧಾಟಿ, ಜಾನಪದ ಭಾಷೆ, ಜಾನಪದ ಛಂದ ಇದಕ್ಕೊಂದು ಹೆಚ್ಚಿನ ಅಂದವನ್ನು ನೀಡಿದೆ.

ಹದಿವಯಸ್ಸಿನ ಹೆಣ್ಣು ಮಗಳ ಭಾವನೆಗಳು, ಆಕಾಂಕ್ಷೆಗಳು ನಲ್ಲನ ಬರವನ್ನೇ ನಿರೀಕ್ಷಿಸುತ್ತಿರುವ ಆ ಬಾಲೆಯ ಬೆಡಗು ಬಿನ್ನಾಣಗಳು ಕವಿಗೆ ಕಂಡ

ರೀತಿಯನ್ನು ನೋಡೋಣ. "ಕಂಗಳ ಮಂಗಳ ಆರತಿ ಬೆಳಗುತ ಕರೆಯುವಳಾ ರತಿಯು। ಕರಪಲ್ಲವದಿಂ ಕವನ ಪಲ್ಲವಿಯ ಬರೆಯುವಳಾ ಸತಿಯು॥ ಚೆಂದುಟಿಯಲಿ ಚೆಲುಸಂಜೆಯ ಮೀರಿ ಹೃದಯುವ ಬೆಳಗುವಳು। ಕಣ್ಣಿನ ಅಂಚಿಗೆ ಮಿಂಚನು ತೂರಿ ಮನವನು ಸೆಳೆಯುವಳು॥ ಇನಿಯಳು ಮನಸಿನ ಭಾವನೆಯುದಿಸಿದೆ ನಯನದ ಭಾಷೆಯಲಿ। ಚೆಲುವೆಯ ಶೃಂಗಾರವ ಕನ್ನಡಿಸಿದೆ ನಲುಮೆಯ ಆಶೆಯಲಿ॥ ಮೊಗ ಮೊಗ ನೋಡಿ ಕಂಗಳು ಕೂಡಿ ಮೂಡಿದರಾಗದು ಶೃಂಗಾರ। ಹಾಲೊಳು ಸಕ್ಕರೆ ಬೆರೆಯುವ ತೆರದೆ ಮನಗಳು ಬೆರೆಯಲು ಭಂಗಾರಾ॥

ವಸಂತ ಮಾಸದ ಪ್ರಸನ್ನ ವಾತಾವರಣದ ನಿಸರ್ಗ ವೈಭವದ ಸಾಲುಗಳಿವು 'ತರು ತೂಗಿತು ಕೋಗಿಲೆ ನರಕೆ ಲತೆ ಬಾಗಿತು ಹೂಗಳ ಭಾರಕೆ......ತಾಳಿತು ಸೃಷ್ಟಿಯು ಹೊಸಭಾವಾ ಜಡ ಪಡೆಯಿತು ನವಸುಖ ಜೀವಾ."

ಈ ಗೀತೆಯನ್ನು ನೋಡೋಣ! ತಾಯಿ ಭಾರತಿಯನ್ನು ಕಂಡು "ನಿನ್ನ ಅಡಿ ಯಿರುವಲ್ಲಿ ನನ್ನ ಗುಡಿಯಿಹುದು, ನಿನ್ನ ಪಾದದ ಹುಡಿಯು ನನ್ನ ಮುಡಿಗಿಹುದು— ನಮ್ಮ ಧರ್ಮವು ಒಂದೆ ದಯುವ ತೋರುವದು। ನಮ್ಮ ಕರ್ಮವು ಒಂದೇ ಕಾಮ ತ್ಯಜಿಸುವದು ನಮ್ಮ ದೇವತೆಯೊಂದೆ ಪ್ರೇಮ ಮೂರುತಿಯು। ನನಗೆ ಜನ್ಮವನಿತ್ತ ಜನನಿ ಭಾರತಿಯು."

ಕೃಷ್ಣನ ಕೊಳಲಿನ ನಾದ, ಮೋಹ ತಾಳಿ ನೀಲಿಯೊಳಗೆ ತೇಲುತಿರುವ ಮೇಘ ಮಾಲಿಗಳು ಮನಕೆ ತಂಪನ್ನೆರೆಯುವವು, ಬೆಳಗಾಯಿತು ನೋಡ ಈ ಗೀತೆಯಲ್ಲಿಯ ಸಾಲುಗಳ ಸೌಂದರ್ಯ ರಸಿಕರಿಗೆ ರಸದೌತಣವನ್ನು ನೀಡುವವು.

"ರವಿರಥಯು ತೋರಿತ ಅತ್ತ। ಕೆಂಪು ಸುತಮುತ್ತ ರವಿ ಉಷಾರಾಣಿಯರ ಜೋಡ॥

" ಮೂಡಣದ ಸತಿಯು ಮುನಿಸ್ಯಾಳ। ಸವತಿ ಎನಿಸ್ಯಾಳ ಕಮಲಿನಿಕೂಡ। ಕೈಚಾಚಿ ಕುರುಳ ಬಾಚ್ಯಾನ ರವಿಯು ರಮಿಸ್ಯಾನ। ನಗು ಕಮಲಿನಿ ಮುನಿಸು ಬ್ಯಾಡ॥

ಭಾರತೀಯ ರಂಗಭೂಮಿಯ ಯುಗ ಪ್ರವರ್ತಕ ಬಾಲಗಂಧರ್ವ, ಸಂಗೀತ ಕ್ಷೇತ್ರದಲ್ಲಿ ಉಜ್ವಲ ನಕ್ಷತ್ರದಂತೆ ಪ್ರಕಾಶಿಸಿದ ಉಸ್ತಾದ ಖಾನಸಾಹೇಬ ಅಬ್ದುಲ್ ಕರೀಮ್‌ಖಾನ; ಒಂದು ಕಾಲಕ್ಕೆ ರಂಗಭೂಮಿಯ ರಾಣಿಯಾಗಿ ಮೆರೆದ ಗಾನರತ್ನ ಗುಳೇದಗುಡ್ಡ ಗಂಗುಬಾಯಿ, ಸಂಗೀತಪುಂಗವ ಸವಾಯಿ ಗಂಧರ್ವ ಕನ್ನಡ ರಂಗಭೂಮಿಯ ಕೀರ್ತಿ ಕಲಶಗಳಾದ ಗರುಡ ಸದಾಶಿವರಾಯರು ಹಾಗೂ

ವಾಮನರಾವ ಮಾಸ್ತರರು, ಅಖಿಲ ಭಾರತ ಖ್ಯಾತಿಯ ಸಂಗೀತ ಕಲಾವಿದ ಬಸವರಾಜ ರಾಜಗುರು ಇವರೆಲ್ಲರ ಜೀವನ ಚರಿತ್ರೆಯನ್ನು ಬರೆದ ಎನ್ಕೆಯವರಿಗೆ ರಂಗಭೂಮಿಯ ಕಲಾವಿದರ, ಸಂಗೀತಗಾರರ ಮೇಲಿನ ಗೌರವ, ಪ್ರೀತಿ-ಅಭಿಮಾನಗಳು ಅಸದಳವಾದವುಗಳು. ಅವರು ಸಮಗ್ರ ರಂಗಭೂಮಿಯ ಇತಿಹಾಸವನ್ನು ಬಲ್ಲರು. ಕಲಾವಿದನ ಅಂತಃಕರಣವನ್ನು ಒಳಹೊಕ್ಕು ಅವನ ಅಂತರ್ಯವನ್ನು ಕಂಡು ಹಿಡಿದವರು. ಅವರ ಸುಖವನ್ನು ಕಂಡು ಹಿಗ್ಗಿದವರು. ಅವರ ದುಃಖವನ್ನು ನೋಡಿ ತಾವೂ ದುಃಖಪಟ್ಟವರು.

ಅವರ ವಿನೋದಪೂರ್ಣವಾದ ಸೋದಕಾಬಾಜಾರ, ಧರ್ಮಶಾಲೆ, ಮನವೆಂಬ ಮರ್ಕಟ, ಕಣ್ಮರೆಯಾದ ಕಾಲ್ಮರಿ, ಚಟಗಳು ಮುಂತಾದ ರಸಲಹರಿಗಳಲ್ಲಿ ಜನಜೀವನದ ವಿವಿಧ ಮುಖಗಳನ್ನು ಕಾಣುತ್ತೇವೆ. 'ಚಟಗಳು' ಎಂಬ ಪ್ರಬಂಧದಲ್ಲಿ, ಅವರ ಹಾಸ್ಯಲಹರಿಯನ್ನು ನೋಡಿ "ಚಟವೆಂದರೆ, ಸಲಿಗೆಯ ನಾಯಿ ಇದ್ದಂತೆ. ಅತಿಯಾಯಿತೆಂದರೆ ಯಾವದಾದರೂ ಅಸಹ್ಯವೆ. ಯಾವದಾದರೂ ಚಟವನ್ನು ಅತಿಗೆಳೆದು ಅದರ ದಾಸರಾಗಿ ಬಿಡುತ್ತೇವೆ............ಚಹ ಕುಡಿಯದೇ ಇದ್ದಾಗ ಮಲರೋಗ ಬರುವ ಜನಕ್ಕಂತೂ ಮಿತಿಯೇ ಇಲ್ಲ. ಬತ್ತಿ ಸೇದುವ ಚಟವುಳ್ಳ ಒಬ್ಬ ರೋಗಿ ಆಳಿದಳಿದು ಸತ್ತಾಗ ಬತ್ತಿ ಸೇದಿ ಬದುಕಿದನಂತೆ! ತಂಬಾಕದ ಚಟವುಳ್ಳ ಒಬ್ಬ ಗೆಳೆಯನಿಗೆ ನಾನು ತಂಬಾಕ ಹಾಕಿದರೆ ಏನು ಬರುತ್ತದೆ-ಎಂದು ಕೇಳಿದಾಗ "ತುಂಬ ಬರತೈತೋ ತಮ್ಮಾ ತುಂಬ ಬರತೈತೋ" ಎಂದು ಉತ್ತರ ಕೊಟ್ಟ.

ಚಪ್ಪಲಿ ಕಳೆದುಕೊಂಡಾಗ ಅವುಗಳನ್ನು ಹುಡುಕುವದಕ್ಕಾಗಿ ವಿಶ್ವಪ್ರಯತ್ನ ಮಾಡಿ, ಬೀದಿಯ ಗುಂಟ ಭಿಕ್ಷುಕರನ್ನು ಮೊದಲ್ಗೊಂಡು ಎಲ್ಲ ಹಾದಿಹೋಕರ ಕಾಲನ್ನು ಹಿಡಿದು ನೋಡಿ ಕಂಡವರಿಗೆ ಕಂಡಷ್ಟನ್ನೆಲ್ಲ ಕೇಳಿ 'ತಳಿರೇ ತಾವರೆಯೇ ಮುದಾಳಿಕುಲವೇ, ಕನ್ನೈದಿಲೇ ಮತ್ತು ಕೋಕಿಳವೇ' ಎಂದು ಹಂಬಲಿಸುವದನ್ನು ನೋಡಿ ನಮಗೂ ಅಂತಹ ಪ್ರಸಂಗಗಳು ನೆನಪಿಗೆ ಬಂದು ಖುಷಿಪಡುತ್ತೇವೆ.

ಹೀಗೆ ಸೊಳ್ಳೆಯಿಂದ ಹಿಡಿದು ಸಚ್ಚಿದಾನಂದದ ವರೆಗೆ ಎನ್ಕೆ ಸಾಹಿತ್ಯವು ರೂಪುಗೊಂಡಿದೆ.

# ‘ಮಂದಿರ ಪ್ರವೇಶ’

## ಗೋಪಾಲ ವಾಜಪೇಯಿ

‘ಮಂದಿರ ಪ್ರವೇಶ’ ಸುಮಾರು ೮೦ ನಿಮಿಷಗಳ ಅವಧಿಯದು. ನನಗಿನ್ನೂ ಮೂರುವರೆ ವಯಸ್ಸಿನೋ ಇದು ಪ್ರಕಟವಾದಾಗ (೧೯೫೫). ಕ್ರೌನ್ ೧/೮ ಆಕಾರದ ೫೨ ಪುಟಗಳ ಈ ನಾಟಕ ಪುಸ್ತಕದ ಬೆಲೆ ಆಗ ಕೇವಲ ನಾಲ್ಕಾಣೆ.

‘ಮಂದಿರ ಪ್ರವೇಶ’ ಹೆಸರೇ ಹೇಳುವ ಹಾಗೆ ಗುಡಿ-ಗುಂಡಾರಗಳಲ್ಲಿ ಪ್ರವೇಶದಹಕ್ಕು ಸ್ಥಾಪಿಸುವದಕ್ಕಾಗಿ ಅಂತ್ಯಜರು ನಡೆಸುವ ಹೋರಾಟದ ಪ್ರಸಂಗ. ಇಲ್ಲಿ ಅಜ್ಜ ನೆಟ್ಟ ಆಲದ ಮರಕ್ಕೆ ಅಂಟಿಕೊಂಡ ಕರ್ಮಠರಿದ್ದಾರೆ; ಎರಡೂ ದಂಡೆಯಮೇಲೆ ಕೈಯಿಡಲೆತ್ನಿಸುವ ಪುಢಾರಿಗಳಿದ್ದಾರೆ; ಸುಧಾರಣಾವಾದಿ ಯುವಕರಿದ್ದಾರೆ; ಪ್ರಜ್ಞಾವಂತ ಮಠಾಧಿಕಾರಿಗಳಿದ್ದಾರೆ. ಜತೆಗೆ ಮಾತೃಹೃದಯದ ಹೆಂಗಳೆ ಇದ್ದಾರೆ. ಅಲ್ಲದೆ ಕಣ್ಣೆದುರು ಬರದೇ ಮರೆಯಲ್ಲಿಯೇ ಮೆರೆದು ಕಥೆಗೆ ತಿರುವು ಕೊಡುವ ವ್ಯಭಿಚಾರಿಗಳೂ ಇದ್ದಾರೆ. ಸನಾತನ ಹಾಗೂ ಸುಧಾರಣಾವಾದಿಗಳ ನಡುವಿನ ಸಂಘರ್ಷದ ಒಂದು ತುಣುಕು ಇದು. ಬೆಳೆಸಿ ಬರೆದರೆ ಇದು ಎರಡುವರೆ ಗಂಟೆಗಳ ಪೂರ್ಣಾವಧಿ ನಾಟಕವಾಗಬಲ್ಲ ಎಲ್ಲ ಸಾಧ್ಯತೆಗಳನ್ನೂ ಹೊಂದಿದೆ- (ಈಗಿನ ದಿಲ್ಲಿಯಿಂದಿಲ್ಲಿಗೆ ಬಂದಿರುವ ನಿರ್ದೇಶಕರುಗಳ ಕೈಗೆ ಸಿಕ್ಕರಂತೂ ಇದರ ಬಣ್ಣವೇ ಬದಲಾಗಬಹುದು.) ಒಂದು ರೀತಿಯಲ್ಲಿದು ಈಗ ಪ್ರಚಾರ ನಾಟಕ ಎನಿಸಲೂಬಹುದು. ಆದರೆ ಇದು ೨೮ ವರ್ಷಗಳ ಹಿಂದೆ ಬರೆಯಲ್ಪಟ್ಟದೆಂಬುದನ್ನು ನೆನಪಿನಲ್ಲಿಡಬೇಕಾದ್ದು ಮುಖ್ಯ. ಆಗ ಈ ನಾಟಕಕ್ಕೆ ಮುಂಬೈ ಸರಕಾರದ ಸಮಾಜ ಕಲ್ಯಾಣ ನಿರ್ದೇಶನಾಲಯು ಏರ್ಪಡಿಸಿದ್ದ ಅಸ್ಪೃಶ್ಯತಾ ನಿವಾರಣೆಯ ಉದ್ದೇಶ ವಿವರಿಸುವ ನಾಟಕಗಳ ಸ್ಪರ್ಧೆಯಲ್ಲಿ ಉತ್ತಮ ನಾಟಕ ಎಂಬು ೫೦೦ ರೂಪಾಯಿಗಳ ಬಹುಮಾನವೂ ಬಂದಿದೆ. ಆಮೇಲೆ ಕೇಂದ್ರ-ಸರಕಾರದಿಂದಲೂ ೫೦೦ ರೂಪಾಯಿ ಸಿಕ್ಕಿವೆ.

ಎನ್ಕೆ ನಮ್ಮ ನಿತ್ಯಜೀವನದ ಪ್ರಸಂಗಗಳನ್ನು, ಮಾತುಗಳನ್ನು ಸಹಜವಾಗಿ ಬಳಸುವುದರಲ್ಲಿ ಸಿದ್ಧಹಸ್ತರು. ಮಾತಿನಲ್ಲೇ ನಮ್ಮನ್ನು ಎಲ್ಲೆಲ್ಲಿಗೋ ಕರೆದೊಯ್ದು ಮತ್ತೆ ವಾಸ್ತವಕ್ಕೆ ತಂದುಬಿಡುವ ನೋಡಿಗ ಅವರು. ಶಬ್ದಗಳೊಂದಿಗೆ ಸರಸ

ಮಾಡುತ್ತ ಹೇಳಬೇಕಾದ್ದನ್ನು ಮನಂಬುಗುವಂತೆ ಹೇಳುವ ಅವರದು ಅದ್ಭುತ ಪದ ಸಾಮರ್ಥ್ಯ. ಪ್ರಸಕ್ತ ನಾಟಕದಲ್ಲಿ ಕೂಡ ಅಂಥ ಸಾಮರ್ಥ್ಯವನ್ನು, ಚಾಕಚಕ್ಯವನ್ನು ಮೆರೆದಿದ್ದಾರೆ ಎನ್ಕೆ.

ಹೊಳೆಯೂರಿನ ಜಹಗೀರದಾರ ಜನಾರ್ದನರಾಯರು ಹಾಗೂ ಅವರ ಮಗ ಗೋವರ್ಧನರಾಯರೊಂದಿಗೆ ಪ್ರಾರಂಭವಾಗುತ್ತದೆ ನಾಟಕ. ರಾಯರ ಕೈಯಲ್ಲಿ ಭಗವದ್ಗೀತೆ, ಮಗನ ಕೈಯಲ್ಲಿ ಬ್ಲೇಡ್-ಬ್ರಶ್. ಸಾಂಕೇತಿಕವಾಗಿ ಆರಂಭಗೊಳ್ಳುವ ಪ್ರಸಂಗದಲ್ಲಿ ಸನಾತನತೆಯ ಸಾಕಾರ ಎಂದುಕೊಂಡು ಮೆರೆಯುವ ಬಡಾಯಿ ಬಂಡಾಚಾರ್ಯರ ಪ್ರವೇಶ. ಸಹಜವಾಗಿಯೇ ಸಮಾಜದ ಪರಿಸ್ಥಿತಿ ಏನೆಂಬುದನ್ನು ಈ ಮೂವರ ಮಾತುಗಳಿಂದ ವ್ಯಕ್ತಪಡಿಸುತ್ತಾರೆ ಎನ್ಕೆ. ವಿಲಾಯಿತಿಗೆ ಹೊರಟಿರುವ ಮಗ ಗೋವರ್ಧನರಾಯ ಹರಿಜನಕೇರಿಯಲ್ಲಿ ಭಾಷಣ ಮಾಡುವುದೂ ಬೇಕು ಜನಾರ್ದನರಾಯರಿಗೆ-ಮುಂಬರುವ ಚುನಾವಣೆಯಲ್ಲಿ 'ಆ ಶೂದ್ರ ರಂಡೇಮಕ್ಕಳ ಓಟೂ ಬೇಕಲ್ಲ.' ಇತ್ತ ಮಠ ಮಾನ್ಯದ ಮನ್ನಣೆಯೂ ಬೇಕು ಪ್ರತಿಷ್ಠೆಗೆ. ತಮ್ಮ ಸ್ವಾರ್ಥಕ್ಕಾಗಿ ಮಗನನ್ನು ಬಳಸಿಕೊಳ್ಳುವ ಅವರ ಪುಢಾರಿ ಬುದ್ಧಿಗೆ ವಿರುದ್ಧ ಅವರ ಪತ್ನಿ ರಾಧಾಬಾಯಿ. ಹರಿಜನ ಸಾತಪ್ಪನ ಮೇಲೆ ಬಂಡಾಚಾರ್ಯರು ಒಂದು ಹಂತದಲ್ಲಿ ನಡೆಸಲೆಳಸುವ ಹಲ್ಲೆಯನ್ನವರು ಹತ್ತಿಕ್ಕುತ್ತಾರೆ ಅನುಕಂಪದ ಮೂರ್ತಿಯಾಗಿ. ಆದರೆ ಈ ಹಲ್ಲೆಯನ್ನು ಜನಾರ್ಧನರಾಯರು ಅಲ್ಲಗಳೆಯುವ ರೀತಿಯೇ ಬೇರೆ. ಇದರಿಂದ ಗುಲ್ಲೆದ್ದು ಸದ್ಯೋಭವಿಷ್ಯದಲ್ಲಿ ನಡೆಯುವ ಹಣಮಂತ ದೇವರ ಗುಡಿಯ ಜೀರ್ಣೋದ್ಧಾರ ಕಾರ್ಯದಲ್ಲಿ ಗದ್ದಲವೆದ್ದು ತಮ್ಮ ಚುನಾವಣೆಯ ಮೇಲೆ ದುಷ್ಪರಿಣಾಮವಾದರೆ ಎಂದವರ ಮುತ್ಸದ್ದಿ ಬುದ್ಧಿ ಯೋಚಿಸುತ್ತದೆ. ಅವರು ಹೇಳುವ ಮಾತು ನೋಡಿ.–

"......... ಇಬ್ಬರನೂ ಬಿಡೋ ಹಾಂಗಿಲ್ಲ ನಾವು. ಸರಕಾರದೊಳಗ ನಮ್ಮ ಹೆಸರೂ ಆಗಬೇಕು ಅಂದರ ಹ್ಯಾರ ದ್ಯಾಮಣ್ಣಾನೂ ಬೇಕು, ಸ್ವಾಮಿಗೋಳು ಸನಾತನಿಗಳೊಳಗ ನಮ್ಮ ಘರಾಣೇದ ಹೆಸರೂ ಉಳೀಬೇಕು ಅಂದರ ಬಂಡಾಚಾರೂ ಬೇಕು......"

ಈ ಪ್ರಸಂಗ ಮುಂದುವರಿದು ಎರಡನೆ ದೃಶ್ಯದಲ್ಲಿ ಬೆಳೆಯುತ್ತದೆ. ಇಲ್ಲಿ ಹರಿಜನ ಕೇರಿಯಲ್ಲಿ ಜಾನಪದ ಸಂಗೀತ ಸ್ಪರ್ಧೆ. ಎನ್ಕೆ ಇಲ್ಲಿ ಬಳಸಿರುವ ಹಾಡುಗಳೆಲ್ಲ ದಾಸರು-ಸಂತರು-ವಚನಕಾರರ ನುಡಿಗಳು. ತನ್ಮೂಲಕ ಹರಿಜನರ ಮನದಲ್ಲಾದ ಕ್ರಾಂತಿಕಾರಿ ಬದಲಾವಣೆಯನ್ನವರು ಸೂಚಿಸುತ್ತಾರೆ. ಗೋವರ್ಧನ

ಇಲ್ಲಿ ಆಡುವ ಮಾತು ನಮ್ಮ ಈಗಿನ 'ಕ್ರಾಂತಿಕಾರಿ' (?) ನಾಟಕಗಳಲ್ಲಿ ಬರುವಂಥವೇ. (ಆದರೂ ಹರಿಜನರನ್ನು ದೈವದ ಅಂಕೆಯಲ್ಲಿಡುವ ಪ್ರಯತ್ನ ಕಂಡು ಬರುತ್ತದೆ. ಅವರ ಪಾಲಿಗೆ ಒಳ್ಳೆಯ ಬಾಳು-ಸಮಾನತೆ ಎಂದರೆ ಕೇವಲ ಮಂದಿರ ಪ್ರವೇಶನೇ ಎಂಬ ಸಂಶಯವೂ ಏಳುತ್ತದೆ. ಇರಲಿ.) ಗೋವರ್ಧನನ ಭಾಷಣ ಮುಂದುವರಿದಿರುವಂತೆಯೇ ರಾಯರು-ಆಚಾರ್ಯರು ಅದನ್ನು ಕೇಳಿಸಿ ಕೊಳ್ಳುವುದು ಮತ್ತು ಒಂದು ಹಂತದಲ್ಲಿ ಆಚಾರ್ಯರು ಅಲ್ಲಿಂದ ಮರೆಯಾದ ಮೇಲೆ ಹರಿಜನ ಕೇರಿಯ ಮೇಲೆ ಕಲ್ಲಿನ ಸುರಿಮಳೆಯಾಗುವುದು ಮುಂತಾದ ಪ್ರಸಂಗಗಳು ನಮ್ಮನ್ನು ರೊಚ್ಚಿಗೆಬ್ಬಿಸುತ್ತವೆ. ಇಲ್ಲಿ ಕೂಡ ಜನಾರ್ದನರಾಯರಿಗೆ ಓಟನದೇ ಚಿಂತೆ. ಆಚಾರ್ಯರಿಗೊಂದು ಬರಸಿಡಿಲು - ಅವರ ಮಗ ಹರಿಜನರ ಚಂದ್ರಾಳೊಂದಿಗೆ ಓಡಿಹೋಗಿದ್ದಾನೆಂಬ ಸುದ್ದಿ.

ಮೂರನೆ ಹಾಗೂ ಕೊನೆ ದೃಶ್ಯದಲ್ಲಿ ಮಠಾಧಿಕಾರಿಗಳೆದುರು ಹರಿಜನರೊಂದಿಗೆ ಬರುವ ಗೋವರ್ಧನನ ವಿಚಾರಮಂಡನೆ. ಇಲ್ಲಿ ಬಂಡಾಚಾರ್ಯರು ತಮ್ಮ ಎಲೆಯಲ್ಲಿ ಸತ್ತುಬಿದ್ದ ಕತ್ತೆಯನ್ನು ಮರೆತು, ಮತ್ತೊಬ್ಬರ ಎಲೆಯ ನೊಣ ಜಾಡಿಸಹೊರಡುತ್ತಾರೆ. ಜನಾರ್ದನರಾಯರು ಮಗ ಹರಿಜನರೊಂದಿಗೆ ಒಂದಾದದ್ದು ಅವನ ವ್ಯಕ್ತಿಸ್ವಾತಂತ್ರ್ಯದ ಪ್ರಶ್ನೆ ಎಂದು ತಮ್ಮ ಬೇಳೆ ಬೇಯಿಸಿಕೊಳ್ಳಲೆತ್ನಿಸುತ್ತಾರೆ. ಮಠಾಧಿಕಾರಿಗಳು ಕೂಡ ತಮ್ಮ ನಿರೀಕ್ಷೆಯನ್ನು ಸುಳ್ಳು ಮಾಡಿ ಸುಧಾರಣಾವಾದಿ ಎಂದು ತೋರಿಸಿಕೊಳ್ಳುತ್ತಾರೆ. ತನ್ನೊಂದಿಗೆ ಚರ್ಚೆ ಮಾಡ ಬರುವ ಹರಿಜನರನ್ನೆಲ್ಲ ಕಂಡು "ಸರ್ವರಿಗೂ ನಮಸ್ಕಾರ" ಎಂದು ಹೇಳಿ ಅವರನ್ನು ದಂಗುಬಡಿಸಿಬಿಡುತ್ತಾರೆ. ಅಲ್ಲದೆ ಗೋವರ್ಧನ ಕೇಳುವ ಪ್ರತಿ ಪ್ರಶ್ನೆಗೂ ಅವನ ವಿಚಾರಗಳೇ ಸರಿ ಎಂಬ ರೀತಿಯಲ್ಲಿ ಅವರು ಕೊಡುವ ಉತ್ತರಗಳು ಅಂತ್ಯಜರ ದೃಷ್ಟಿಯಲ್ಲಿ ಅವರನ್ನು ಇನ್ನಷ್ಟು ಎತ್ತರದ ಸ್ಥಾನಕ್ಕೇರಿಸುತ್ತವೆ. ಕೊನೆಗೆ 'ಮಂದಿರ ಪ್ರವೇಶ'ದ ಪ್ರಶ್ನೆ ಬಂದಾಗ "ದೇವರು ಗುಡಿಯೊಳಗs ಇದ್ದಾನೇನು ?" ಎಂದು ಕೇಳಿ, "ನಮ್ಮ ಗುಡಿಗೆ ನಾವು ಹೋಗತೇವಿ, ನಿಮ್ಮ ಗುಡಿಗೆ ನೀವು ಹೋಗ್ರಿ" ಎಂಬ ಅವರ ಉತ್ತರ ಮತ್ತೆ ಅವರನ್ನು ನಾವು ಸಂಶಯದಿಂದ ನೋಡುವ ಹಾಗೆ ಮಾಡುತ್ತದೆ. ಅಂತೂ ಕೊನೆಗೆ ಮಂದಿರ ಪ್ರವೇಶಕ್ಕೆ,ಜೀರ್ಣೋದ್ಧಾರ ಕಾರ್ಯಕ್ಕೆ ಅವರೆಲ್ಲರ ಸಹಾಯದ ಅಗತ್ಯವನ್ನು ಮನಗಂಡು ಮತ್ತು ಸರಕಾರ ಮಾಡಿದ ಮಂದಿರ ಪ್ರವೇಶ ಕಾಯಿದೆಗೆ ವಿರುದ್ಧ ನಿಲ್ಲಲಾರದೆ, ಒಪ್ಪಿಗೆ ನೀಡುತ್ತಾರೆ.

ಎನ್ಕೆ ಇಷ್ಟಕ್ಕೇ ಬಿಡುವದಿಲ್ಲ. ಕೊನೆಗೆ ಕಥೆಗೊಂದು ಹೊಸ ತಿರುವು ಕೊಡುತ್ತಾರೆ. ಮಂದಿರ ಪ್ರವೇಶ ನಡೆಯುತ್ತಿರುವಂತೆಯೇ ರಾಯರ ಪತ್ನಿ ರಾಧಾಬಾಯಿ "ಹರಿಜನಕೇರಿ ಹತ್ತರ ಘಟಾರದ ದಂಡೀಮ್ಯಾಲೆ ಬೇಲಿಯೊಳಗ ಮುಚ್ಚಿಟ್ಟು ಹೋಗಿದ್ದ" ಒಂದು ನವಜಾತ ಕೂಸನ್ನೆತ್ತಿಕೊಂಡು ಬರುತ್ತಾರೆ. ಅದು ಯಾರದು,

ಅಲ್ಲಿ ಯಾಕೆ ಬಿದ್ದಿತ್ತು ಇತ್ಯಾದಿ ಪ್ರಶ್ನೆಗಳು, ಪಂಚನಾಮೆಯ ಮಾತುಗಳು ನಡೆದಿರುವಂತೆಯೆ ರಾಧಾಬಾಯಿ ಆ ಕೂಸನ್ನು ತಾನೇ ಜೋಪಾನ ಮಾಡುವದಾಗಿ ಹೇಳುತ್ತಾರೆ. "ಅಂತೂ ಇದು ಮಂದಿರ ಪ್ರವೇಶ - ಅಂದರೆ ಹೃದಯ ಮಂದಿರ ಪ್ರವೇಶ" ಎಂಬ ಗೋವರ್ಧನನ, ಮಠಾಧಿಕಾರಿಗಳ ಮಾತಿನೊಂದಿಗೆ ನಾಟಕ ಸಾಂಕೇತಿಕ ಅಂತ್ಯ ಕಾಣುತ್ತದೆ.

ಇಲ್ಲಿ ಇಂಥ ಕೆಲ ವ್ಯಕ್ತಿಗಳು ಸಮಾಜದಲ್ಲಿರಲು ಸಾಧ್ಯವೇ ಎಂಬ ಪ್ರಶ್ನೆ ಏಳುತ್ತದಾದರೂ ಎನ್ಕೆ ಮುನ್ನುಡಿಯಲ್ಲಿ ಹೇಳಿದ ಹಾಗೆ 'ಇರಬಹುದೇ' ಎಂಬ ಅನಿಸಿಕೆಯನ್ನು ಮೂಡಿಸುವಂತಹವು ಈ ಪಾತ್ರಗಳು.

"ಒಬ್ಬ ನಾಟಕಕಾರ ಮುಖ್ಯವಾಗಿ ನಟನಾಗಿರಬೇಕು, ನಿರ್ದೇಶಕನ ಗುಣಗಳೂ ಅವನಲ್ಲಿರಬೇಕು-ಜತೆಗೆ ಪ್ರೇಕ್ಷಕನಾಗಿಯೂ ತನ್ನ ನಾಟಕವನ್ನಾತ ನೋಡಬೇಕು. ಇವೆಲ್ಲದರ ಜತೆಗೆ ಆತನಿಗೆ ಸಮಕಾಲೀನ ಸಾಮಾಜಿಕ ಪ್ರಜ್ಞೆ, ಕಳಕಳಿಗಳು ಇರಬೇಕು. ಅಂದರೆ ಮಾತ್ರ ಆತ ಯಶಸ್ವಿ ನಾಟಕಕಾರನಾಗಿ ನಿಲ್ಲುತ್ತಾನೆ, ಗೆಲ್ಲುತ್ತಾನೆ" ಎಂಬ ಮಾತನ್ನು ಎನ್ಕೆ ನಿಜವಾಗಿಸಿದ್ದಾರೆ.

# ‘ಹಸ್ತಾಂತರ’

## ಹೂಲಿ ಶೇಖರ್

ಕನ್ನಡದಲ್ಲೀಗ ನಾಟಕ ಸಾಹಿತ್ಯ, ಒಂದು ಸಮಾನಾಂತರ ನೆಲೆ ಕಂಡು ಕೊಳ್ಳುತ್ತಿರುವ ಘಟ್ಟ. ಇದರ ವಿಶಿಷ್ಟ ಸ್ಥಾನಕ್ಕೆ ಮೌಲ್ಯದ ಮಾಪು ಹಾಕುವ ಕೆಲಸ ಈಗ ಅಲ್ಲಲ್ಲಿ ನಡೆಯುತ್ತಿದೆ. ಎಪ್ಪತ್ತರ ದಶಕದ ಹಿಂದೆ ರಂಗಭೂಮಿ ಕೇವಲ ನಿಂತ ನೀರಾಗಿ, ಹೊಸ ದಿಕ್ಕುಗಳನ್ನು ಕಂಡುಕೊಳ್ಳದೆ, ಇದ್ದಲ್ಲೇ ಕರಗಿ ಹೋಗುವ ಅಪಾಯವೂ ಇತ್ತು. ಹೊಸ ರೀತಿಯ ನಾಟಕಗಳು ಹುಟ್ಟದೆ ಮತ್ತು ಇರುವ ನಾಟಕಗಳು ಹೊಸ ಹಾದಿ ತುಳಿಯದೆ ಕೇವಲ ರಂಗಕ್ಕಷ್ಟೇ ಉಳಿದು, ಅದರಾಚೆ ಏನನ್ನೂ ಹೇಳದೆ ಮೌನವಾಗಿಬಿಡುತ್ತಿದ್ದವು. ಅಭಿನಯಿಸುವ ತಂಡಗಳೇನೋ ಆಗಾಗ ಅಲ್ಲಲ್ಲಿ ಹುಟ್ಟಿಕೊಂಡವು. ಆದರೆ ಅವುಗಳನ್ನು ಜೀವಂತವಾಗಿಡುವ ನಾಟಕಗಳು ಮಾತ್ರ ಹುಟ್ಟಿಕೊಳ್ಳಲಿಲ್ಲ. ಒಂದು ರೀತಿಯಲ್ಲಿ ಅರವತ್ತರ ದಶಕದ ನಾಟಕಗಳೆಂದರೆ ಕೇವಲ ಮನರಂಜನೆಗಾಗಿ ಕಾಲ ಕಳೆಯುವ ಸಾಧನಗಳಾಗಿದ್ದವು. ಅಂಥ ಸಿದ್ಧ ಮಾನಸಿಕ ವ್ಯವಸ್ಥೆಯಲ್ಲೂ ಎನ್ಕೆ ‘ಹಸ್ತಾಂತರ’ ದ ಮೂಲಕ ಹೊಸ ಜಾಡು ಹಿಡಿದಿರುವುದು ಸ್ಪಷ್ಟವಾಗುತ್ತದೆ.

ನಿರ್ದಿಷ್ಟ ಚೌಕಟ್ಟಿನಲ್ಲಿ ವಿಶಿಷ್ಟ ವಸ್ತುವೊಂದನ್ನು ಹರವಿಕೊಂಡಿರುವ ‘ಹಸ್ತಾಂತರ’ ದೇಶಾಭಿಮಾನದ ಕೆಚ್ಚನ್ನು ಪಡಿಯಚ್ಚಿಸುವ ಸಮರ್ಥ ನಾಟಕ. ಅರವತ್ತರ ದಶಕದ ಮಧ್ಯಭಾಗದಲ್ಲಿ ಇಂಥ ದೇಶಾಭಿಮಾನಿ ನಾಟಕಗಳು ಹುಟ್ಟಲು ಕಾರಣವೂ ಇಲ್ಲದಿರಲಿಲ್ಲ. ಚೀನಾದೊಡನೆ ಆದ ಯುದ್ಧ ಇಡೀ ಭಾರತವನ್ನೇ ಬಡಿದೆಬ್ಬಿಸಿತು. ಆನಂತರದ ಪಾಕಿಸ್ತಾನೀ ಯುದ್ಧ, ಭಾರತೀಯರಲ್ಲಿ ರಾಷ್ಟ್ರೀಯ ಪ್ರಜ್ಞೆ ಚಿಮ್ಮುವುದಕ್ಕೆ ನೆಪವಾಯಿತು. ಈ ಪರಿಸರದ ಹಿನ್ನೆಲೆಗಳು ಎನ್ಕೆಯವರ ಮಾನಸಿಕ ಸ್ಥಿತಿಯನ್ನು ಅದುಮಿರಲೂ ಸಾಕು. ಅದೂ ಅಲ್ಲದೆ ಎನ್ಕೆ ಸ್ವಾತಂತ್ರ್ಯ ಹೋರಾಟದ ಚಿತ್ರಣವನ್ನು ಕಣ್ಣಲ್ಲಿ ಕಂಡವರು. ಕಾರಣ ಸಮಗ್ರ ರಾಷ್ಟ್ರೀಯ ಪ್ರಜ್ಞೆ ಎನ್ಕೆ ಬರಹದಲ್ಲಿ ಬಂದಿದೆ ಎಂದು ಅಚ್ಚರಿಪಡುವದಕ್ಕಿಂತ ಅದು ಹೇಗೆ? ಯಾವ ರೀತಿ? ಯಾವ ಮಟ್ಟದಲ್ಲಿ ಬಂದಿದೆ ಎಂದು ನೋಡುವುದು ಮುಖ್ಯವಾಗುತ್ತದೆ. ನಾನು ‘ಹಸ್ತಾಂತರ’ ವನ್ನು ಮೂರು ಘಟ್ಟದಲ್ಲಿ ಗುರುತಿಸಿದ್ದೇನೆ.

ಒಂದು : ಕೃತಿ ನಿರ್ಮಾಣವಾದ ಕಾಲವು, ವಸ್ತುವನ್ನು ದುಡಿಸಿಕೊಂಡ ರೀತಿ. ಎರಡು : ದೇಶಾಭಿಮಾನ ಹಾಗೂ ಆದರ್ಶವಾದವನ್ನು ಘೋಷಣಾ ಮಟ್ಟದಲ್ಲಿ ಹೇಳದೆ, ಶ್ರೀಸಾಮಾನ್ಯನ ಬದುಕಿಗೆ ಹತ್ತಿರ ನಿಂತು ಹೇಳುವುದು. ಮೂರು : ಆದರ್ಶವು ಕೃತಿಯ ಕಾಲವನ್ನು ಮೆಟ್ಟಿನಿಂತು ಎಲ್ಲ ಕಾಲಕ್ಕೂ ನಿಲ್ಲಬಲ್ಲದೆಂಬ ಆಶಯವನ್ನು ಕೃತಿ ಹೊಂದಿರುವುದು.

'ಹಸ್ತಾಂತರ' ಅಂದರೆ ಅಧಿಕಾರದ ವರ್ಗಾವಣೆಯಲ್ಲ. ಚರಾಸ್ತಿಗಳ ಚಲನೆಯೂ ಅಲ್ಲ. ಇದು ಕಾಲದ ಹಸ್ತಾಂತರ. ಇಂದು ಇರುವುದು ನಮಗಾಗಿ, ನಾಳೆ ಇರುವುದು ನಮ್ಮ ಪೀಳಿಗೆಗಾಗಿ, ಇಂದು ಮತ್ತು ನಾಳೆಗಳ ನಡುವೆ ಇರುವ ಕೊಡುಕೊಳ್ಳುವಿಕೆಯೇ ಹಸ್ತಾಂತರ.

ಇಲ್ಲಿ ಎನ್ಕೆ ಕಾಲದ ಸಂಕೇತವಾಗಿ ಗಡಿಯಾರವನ್ನು ಬಳಸಿಕೊಂಡಿದ್ದಾರೆ. ನಾಳೆಗಳ ಸಂಕೇತ ಎಷ್ಟೊಂದು ಅರ್ಥಪೂರ್ಣ. ಅಪ್ಪ ಭೂತಕಾಲದ ಸಂಕೇತ. ಮಗ ಭವಿಷ್ಯದ ಸಂಕೇತ. ಗಡಿಯಾರ ಕಾಲವನ್ನು ಗುರುತಿಸುತ್ತ ಅಪ್ಪನ ಕೈಯಲ್ಲಿದ್ದಾಗ ಭೂತ ಮತ್ತು ವರ್ತಮಾನವನ್ನು ದಾಟಿ ಬರುತ್ತದೆ. ನಾಳೆಗಾಗಿ ಇರುವ, ಚಿಗುರುವ ಬದುಕಿನ ಭವಿಷ್ಯವಾಗಿರುವ ಮಗನ ಕೈಗೆ ಕಾಲವನ್ನು ಹಾಕುವ ಕ್ರಿಯೆಯೇ ಹಸ್ತಾಂತರ. ಗಡಿಯಾರವನ್ನು ಸಂಕೇತವಾಗಿಸಿಕೊಂಡ ನಾಟಕಕಾರರು ಕೊನೆಗೆ ಅಪ್ಪನಿಂದ ಮಗನ ಕೈಗೆ ವರ್ಗಾಯಿಸುವ ಮೂಲಕ ಇಡೀ ನಾಟಕದ ಆಶಯವನ್ನು ಅರ್ಥಪೂರ್ಣಗೊಳಿಸುತ್ತಾರೆ.

ಕಿಟ್ಟಣ್ಣ ಇಂದೋ ನಾಳೆಯೋ ನಿವೃತ್ತಿಯಾಗಲಿರುವ ಸರಕಾರೀ ಕಾರಕೂನ. ನಮ್ಮ ಪ್ರಥಮ ಪ್ರಧಾನಿ ಜವಾಹರಲಾಲರ ಅಪ್ರತಿಮ ಭಕ್ತ. ಅವರ ಪಂಚಶೀಲ ತತ್ತ್ವಗಳ ಅನುಷ್ಠಾನಕ. ಆ ತತ್ತ್ವಗಳು ಸಾಮಾನ್ಯನ ಬದುಕಿನಲ್ಲಿ ಹಾಸು ಹೊಕ್ಕಾಗಬೇಕೆಂಬ ಸದಿಚ್ಛೆ ಅವನದು. ಸ್ವತಃ ಪಾಲನೆಯೂ ಕೂಡ. ಭ್ರಷ್ಟಾಚಾರ ಗಳಿಗಿಂತ ಬಡತನ ಬಲು ಮೇಲು ಎಂದು ನಂಬಿದವ, ಶಾಂತಾ ಅವನ ಪಳೆಯುಳಿಕೆ. ತಂದೆಯದ್ದೇ ಆದರ್ಶ. ನೆಹರೂರ ಮೇಲೆ ಆಕೆಯದೂ ಅತಿಭಕ್ತಿ. ಆಕೆಯ ಪಾತ್ರಸೃಷ್ಟಿ ನಾಳೆಗಳು ಹೀಗೆ ಇರಬೇಕೆಂಬ ಆಸೆಗೆ ನಾಟಕಕಾರರು ಬಹಳಷ್ಟು ಒತ್ತುಕೊಟ್ಟಿದ್ದಾರೆ. ಅದಕ್ಕೆ ಪೂರಕವಾಗಿ ನೆಹರೂರ ಗುಲಾಬಿಗಳ ಸಂಕೇತವಾಗಿ ಇಬ್ಬರು ಮಕ್ಕಳು ರಂಗಕ್ಕೆ ಬರುತ್ತಾರೆ. ಶಾಂತಾಳ ಹತ್ತಿರ ಪಾಠ ಕಲಿಯುವ ಅವರಿಗೆ ನೆಹರೂ ಬಗ್ಗೆ ಅಗಾಧ ಪ್ರೇಮ ಉಂಟಾದದ್ದು ವಸ್ತುನಿಷ್ಠರಿಗೆ ಹಿಡಿಸಲಿಕ್ಕಿಲ್ಲ. ಒಂದೆರಡು ಬಾರಿ ಆ ಮಕ್ಕಳು ನೆಹರೂರ ಬಗ್ಗೆ, ಅವರ ತತ್ತ್ವದ ಬಗ್ಗೆ 'ಭಾಷಣ' ಕೊಟ್ಟಾಗ ಅಸಹಜ ಎನಿಸುತ್ತದೆ. ಆದರೆ ಇವೆಲ್ಲದರ ಹಿಂದೆ ನಾಟಕಕಾರರ ಸದಿಚ್ಛೆಯೊಂದು ಕಾರಣವಾಗಿದೆ ಎಂಬುದನ್ನು ಮರೆಯಬಾರದು.

ನಾಟಕದಲ್ಲಿ ಬರುವ ಪತ್ರಕರ್ತ ವರದಣ್ಣ ಸ್ವಭಾವದಲ್ಲಿ ಎಡಬಿಡಂಗಿ, ಆತನಿಗೆ ತತ್ತ್ವಗಳೂ ಬೇಕು. ಪುಢಾರಿ ಪಾಂಡಪ್ಪನಂಥ ಭ್ರಷ್ಟರಾಜಕಾರಣಿಗಳ ಹಣವೂ ಬೇಕು. ಕಪ್ಪು ಹಣದೊಡೆಯ ಹನುಮಂತಪ್ಪನ ಸ್ನೇಹವೂ ಬೇಕು. ಕಿಟ್ಟಪ್ಪನ ಆದರ್ಶದ ಕೋಟೆ ಒಡೆಯಲು ಈ ಮೂವರೂ ವ್ಯೂಹ ರಚಿಸುತ್ತಾರೆ. ಆ ತಂತ್ರಕ್ಕೆ ಸ್ವತಃ ಕಿಟ್ಟಪ್ಪನ ಮಗ ರಂಗನನ್ನು ಬಳಸಿಕೊಳ್ಳುತ್ತಾರೆ. ರಂಗ ಇಂದಿನ ಯುವ ಶಕ್ತಿಯನ್ನು ಪ್ರತಿನಿಧಿಸುತ್ತಾನೆ. ಇಂದು ನಮ್ಮ ಯುವಶಕ್ತಿ ಹೇಗೆ ದಿಕ್ಕು ತಪ್ಪುತ್ತಿದೆ, ರಾಜಕಾರಣಿಗಳು, ಸಮಾಜಘಾತುಕರು ಅದನ್ನು ಹೇಗೆ ದುರುಪಯೋಗಪಡಿಸಿಕೊಳ್ಳುತ್ತಾರೆ ಎಂಬುದನ್ನು ಎನ್ಕೆಯವರು ಇಲ್ಲಿ ಚೆನ್ನಾಗಿ ನಿರೂಪಿಸಿದ್ದಾರೆ. ವರದಣ್ಣ, ಪಾಂಡಪ್ಪ, ಹನುಮಂತಪ್ಪ, ಕೊನೆಗೆ ರಂಗ ಈ ನಾಲ್ಕೂಜನ ಕಿಟ್ಟಪ್ಪನ ಆದರ್ಶವಾದದ ವಿರುದ್ಧ ಸಂಚು ನಡೆಸುವ ದುಷ್ಟಚತುಷ್ಟಯರಾಗುತ್ತಾರೆ. ಕೊನೆಗೆ ಗೆಲುವು ಸತ್ಯಕ್ಕೆ, ನಾಟಕದ ಕೊನೆಯಲ್ಲಿ ಕಿಟ್ಟಪ್ಪ ತನ್ನ ಆತ್ಮಶುದ್ಧಿಗಾಗಿ ತನ್ನ ಮನೆಯಲ್ಲೇ ಉಪವಾಸ ಕೂಡುವದು ತುಂಬ ಭಾವನಾಪ್ರಧಾನವಾಗಿದೆ. ಹಾಗೇ ನೆಹರೂ ಸಾವನ್ನು ನಾಟಕದಲ್ಲಿ ತಂದು ಅದಕ್ಕೊಂದು ರಂಗಸಾಧ್ಯತೆಯ ರೂಪ ಕೊಟ್ಟದ್ದೂ ಕೂಡ ಮೆಚ್ಚಬೇಕಾದದ್ದು.

ಸಂಭಾಷಣೆಗಳು ಗ್ರಾಂಥಿಕವಾದದ್ದರಿಂದ ಶಬ್ದಗಳೆಲ್ಲ ನಾಟಕಕ್ಕಾಗಿಯೇ ಬರೆದಂಥವುಗಳಾಗಿವೆ. ಭಾವನಾಪೂರ್ಣವಾಗಿ ಅಭಿನಯಿಸಿದಲ್ಲಿ ಮಾತ್ರ ನಾಟಕ ಯಶಸ್ಸು ಕಾಣುತ್ತದೆ. ಇಡೀ ನಾಟಕವನ್ನು ಓದಿದಾಗ ಎನ್ಕೆ ವೃತ್ತಿನಾಟಕದ ಪ್ರಭಾವಕ್ಕೆ ಒಳಗಾಗಿದ್ದಾರೆಂಬುದು ಸ್ಪಷ್ಟವಾಗುತ್ತದೆ. ಆದರೂ ಹಳೆಯ ಹಣತೆಯಲ್ಲಿ ಹೊಸ ಎಣ್ಣೆಹಾಕಿ ಆದರ್ಶ-ತತ್ತ್ವಗಳ ಬತ್ತಿ ಹೊಸೆದು ದೇಶಾಭಿಮಾನದ ದೀಪ ಹಚ್ಚಿರುವ ಎನ್ಕೆ ಅಭಿನಂದನಾರ್ಹರು. ಇಂದಿನ ಸಂದರ್ಭದಲ್ಲಿ ಈ ದೇಶದ ಕೆಲವರ ಕಣ್ಣಿನಲ್ಲಾದರೂ ಈ ದೀಪ ಮಿಂಚಿದರೆ ಎಲ್ಲವೂ ಸಾರ್ಥಕ.

# ರಂಗದ ಮೇಲೆ ರಂಜಿಸಬಲ್ಲ ಎನ್ಕೆ ಏಕಾಂಕಗಳು

ಜಿ. ಎಚ್. ರಾಘವೇಂದ್ರ

ಮೂಲತಃ ನಾಟಕಕಾರರೇ ಆಗಿರುವ ಎನ್ಕೆ ನಾಟಕ ಬರೆಯುತ್ತಾರೆ. ಈ ನಾಟಕದ ಮೂಲಕ ತಮ್ಮ ಕಾಲದ ಪರಿಸರವನ್ನು, ಅಲ್ಲಿರುವ ದೋಷಗಳನ್ನು ಪಾತ್ರಗಳ ಮೂಲಕ ಪರಿಣಾಮಕಾರಿಯಾಗಿ ಮೂಡಿಸುತ್ತಾರೆ. ಧ್ವನಿ ಪ್ರಾಧಾನ್ಯವಾದ ಎನ್ಕೆ ನಾಟಕಗಳು ಚುರುಕು ಸಂಭಾಷಣೆಯ ಮೂಲಕ, ಅರ್ಥವತ್ತಾದ ಪದಪ್ರಯೋಗದ ಮೂಲಕ ಓದುಗನಿಗೆ ಖುಷಿ ಕೊಟ್ಟಂತೆ, ರಂಗ ಹತ್ತಿದರೆ ಪ್ರೇಕ್ಷಕನಿಗೂ ಮುಟ್ಟುತ್ತವೆ. ೧೯೫೦ ರ ದಶಕದಲ್ಲಿ ಬರೆದಿಟ್ಟ ಎನ್ಕೆಯವರ ಪ್ರಾತಿನಿಧಿಕ ಸಂಗ್ರಹದ ೨೫ ನಾಟಕಗಳು ತಮ್ಮ ಧ್ವನಿಯನ್ನುಳಿಸಿಕೊಂಡಿವೆ. ವರದಕ್ಷಿಣೆ, ಮಹಿಳಾಶೋಷಣೆ ಮುಂತಾದ ಸಾಮಾಜಿಕ ಪಿಡುಗುಗಳು ಮನುಷ್ಯನ ಬಾಳಿನುದ್ದಕ್ಕೂ ಬದುಕಿಕೊಂಡು ಹೋಗುತ್ತಿರುವುದರಿಂದ ಎನ್ಕೆಯವರ ನಾಟಕಗಳು ಸಾರ್ವಕಾಲಿಕವೇ ಆಗಿ ಉಳಿಯುತ್ತವೆ.

ಎನ್ಕೆ ಸಾಹಿತ್ಯ ವಿವಿಧ ಪ್ರಾಕಾರಗಳಲ್ಲಿ ಹರಿದಿದೆ. ಕಾದಂಬರಿಯ ಮೂಲಕ, ಲೇಖನಗಳ ಮುಖಾಂತರ ತಮ್ಮ ಸಿಹಿ-ಕಹಿಗಳನ್ನು ಸಲೀಸಾಗಿ ಹಂಚಿಕೊಂಡ ಎನ್ಕೆ ನಾಟಕವನ್ನು ವಿಡಂಬನೆಯ ಮಾಧ್ಯಮವನ್ನಾಗಿ ಆಯ್ದುಕೊಂಡಿದ್ದಾರೆ. ಮೊದಮೊದಲು ಸಂಸಾರದ ಚೌಕಟ್ಟಿನಲ್ಲಿ ನಾಟಕಗಳನ್ನು ಕೂಡಿಸಿದ ಎನ್ಕೆ ಬರಬರುತ್ತ ಅದರ ಪರಿಧಿಯನ್ನು ಹರಿದು ಸಾಮಾಜಿಕ ಜವಾಬ್ದಾರಿಯನ್ನು ಪ್ರೇಕ್ಷಕನಿಗೆ ನೆನಪು ಮಾಡಿಕೊಡುತ್ತಾರೆ.

ಸಾರ್ವಕಾಲಿಕವೆಂದು ಬರೆಯಲ್ಪಟ್ಟ ಎನ್ಕೆ-ನಾಟಕಗಳು ಇಂದಿಗೂ ರಂಗದ ಮೇಲೆ ಬಿಚ್ಚಿಕೊಳ್ಳಬಹುದು. ೬೦ ರ ದಶಕದಲ್ಲಿ ಹುಟ್ಟಿದ ಈಗಿನ ತರುಣ ಕೂಡ, ಇಂದು ಎನ್ಕೆಯವರ ನಾಟಕದಲ್ಲಿ ತನ್ನ ಸಮಸ್ಯೆಯನ್ನು ಕಂಡುಕೊಳ್ಳಬಹುದು.

ಎನ್ಕೆಯವರು ಆಕಾಶವಾಣಿಗೆ ಸೇರಿ ತಮ್ಮ ಶಬ್ದಸಂಪತ್ತು, ಚಾಣಾಕ್ಷ ಸಂಭಾಷಣೆಗಳನ್ನೆಲ್ಲ ಗಾಳಿಯಲ್ಲಿ ಬಿಡದಿದ್ದರೆ, ಇವತ್ತು ಎನ್ಕೆ ನಾಟಕಗಳು ಕನ್ನಡ ಸಾಹಿತ್ಯಕ್ಕೆ ಬಹು ದೊಡ್ಡ ಕೊಡುಗೆಯಾಗಿರುತ್ತಿದ್ದವು.

ನನಗನಿಸಿದ ಮಟ್ಟಿಗೆ, ಎನ್ಕೆಯವರ ನಾಟಕಗಳು ೫೦ ರ ದಶಕದಲ್ಲಿ ಹೆಚ್ಚಾಗಿ ಹೊರಬೀದಿವೆ. ಆಗ ಕಂಪನಿ ನಾಟಕಗಳು ಒಂದು ಕಡೆ ಅದೇ ಆರಂಭವಾಗಿದ್ದ ಸಿನೇಮಾ ಇನ್ನೊಂದು ಕಡೆ. ಈ ಶ್ರೀಮಂತಿಕೆಯ ಪ್ರವಾಹದಲ್ಲಿ ಸುಶಿಕ್ಷಿತರ ರಂಗಭೂಮಿಯ ಆವಶ್ಯಕತೆ ಇತ್ತು. ಇಂಥ ಹೊತ್ತಿನಲ್ಲಿ ನಾಟಕಕಾರ ಎನ್ಕೆಯವರು ಲೇಖಕನಿಗೆ ಇರಲೇಬೇಕಾದ ಸಾಂದರ್ಭಿಕ ಪ್ರಜ್ಞೆ ತೋರಿ ಹಲವಾರು ನಾಟಕ ಬರೆದರು. ಶಾಲೆ ಕಾಲೇಜಿನ ವಾರ್ಷಿಕೋತ್ಸವಗಳಿಗೆ, ಸಂಘ ಸಂಸ್ಥೆಗಳ ಸಮಾರಂಭಕ್ಕೆ ಒಂದು ಪುಟ್ಟ ರಂಗಮಂಚ ಒದಗಿಸಿದರು. ಎನ್ಕೆಯವರಂಥ ಅನೇಕ ನಾಟಕಕಾರರು ಆಗ ಆರಂಭಿಸಿದ ನಾಟಕ ಚಟುವಟಿಕೆ ಇಂದು ಮಗ್ಗುಲು ಬದಲಾಯಿಸುತ್ತ ಸ್ಪಾಟ್‌ಲೈಟಿನವರೆಗೆ ಮುಂದುವರೆದಿದೆ. ಹುಬ್ಬಳ್ಳಿಯ ಒಂದು ಸಮಾರಂಭದಲ್ಲಿ ಎನ್ಕೆಯವರೇ ಹೇಳಿದಂತೆ ವೃತ್ತಿ ರಂಗಭೂಮಿ ಇವತ್ತು ಸುಂದರ ಕಾಶ್ಮೀರವಾಗಿದ್ದರೆ, ಹವ್ಯಾಸಿ ರಂಗಭೂಮಿ ಕಾಶ್ಮೀರದ ಸುಂದರ ಕಣಿವೆಗಳಾಗಿವೆ.

ಇಂದು ಬೆಳಕು ಬಂದಿರಬಹುದು; ರಂಗಸಜ್ಜಿಕೆಯಲ್ಲಿ ಸರಳೀಕರಣವಾಗಿರ ಬಹುದು. ಈ ಎಲ್ಲದಕ್ಕೂ ಹೊಂದಿಕೊಳ್ಳುವ ಗುಣಗಳನ್ನು ಎನ್ಕೆಯವರ ನಾಟಕ ಗಳು ಪಡೆದಿವೆ. ಅವರ ಒಂದು ಸುಂದರ ಏಕಾಂಕ, 'ಬಾರ್‌ರೂಮ್' ಇದರಲ್ಲಿ ಮೂರೂ ಪಾತ್ರಗಳು ವಕೀಲರ ಜೀವನವನ್ನು ವಿಡಂಬಿಸುತ್ತವೆ. ಸರಳ ರಂಗಮಂಚಕ್ಕೆ ಒಗ್ಗಬಹುದಾದ ಈ ನಾಟಕಕ್ಕೆ ಅದ್ದೂರಿ ಖರ್ಚಿಲ್ಲ. ಮಾತಿನಲ್ಲಿ ರುವ ಚಕಮಕಿಯಿಂದಾಗಿ ನಗೆಯುಕ್ಕಿಸುತ್ತದೆ. ಬರೀ ಪಕ್ಷಗಾರನಿಗಾಗಿ ಕಾಯುವ ಲಾಯರರ ಬದುಕು ಪ್ರೇಕ್ಷಕನಿಗೆ ರಂಜನೀಯವಾಗಿ ಕಾಣುತ್ತದೆ. ನ್ಯಾಯ ವಾದವೇ ಒಂದು ರೀತಿಯ ಅಪಹಾಸ್ಯಕ್ಕೊಳಗಾದಾಗ, ಅಲ್ಲಿನ ಬದುಕಿನಲ್ಲಿ ಒಂದು ಅರ್ಥ ಹುಡುಕುವದು ತಪ್ಪು. ನಲವತ್ತು ನಿಮಿಷಗಳ ಈ ನಾಟಕ ರಂಜನೀಯ ವಾಗಿರುವದರಿಂದ ಪ್ರೇಕ್ಷಕರನ್ನು ಹಿಡಿದಿಡುತ್ತದೆ. ಅಜೇ ೧೧ತಿ 'ಬೆಳಕು' ನಾಟಕ ಕೂಡ ನಾವು ಕಲ್ಪಿಸಿಕೊಂಡ ವಿವಿಧ ಲೋಕಗಳಲ್ಲಿ ರಂಜನೀಯವಾಗಿರುವ 'ಯಮಲೋಕ'ವೂ ಒಂದು. ಯಮನ ಆಸ್ಥಾನಕ್ಕೆ ಬಂದಿರುವ ಪಾತ್ರಗಳು ಬದುಕ ಬೇಕೆಂಬ ಆಸೆಯನ್ನು ಪರಿಪರಿಯಿಂದ ಹೇಳಿದರೂ ಪ್ರೇಕ್ಷಕನಿಗೆ ಅವು ರಂಜನೀಯ ವಾಗಿಯೇ ಕಾಣುತ್ತವೆ. ಈ ನಾಟಕದಲ್ಲಿ ಯಮಲೋಕಕ್ಕೆ ಬಂದಿರುವ 'ಆಚಾರಿ' ಕೂಡ, ಭೂತಲದ ಬೂಟಾಟಿಕೆ ಬ್ರಾಹ್ಮಣ್ಯವನ್ನು ಪ್ರತಿನಿಧಿಸುತ್ತಾನೆ. ಹುಟ್ಟಿ ನೊಂದಿಗೇ ತನ್ನನ್ನು ಉಚ್ಚನೆಂದು ಭ್ರಮಿಸಿಕೊಂಡ ಬ್ರಾಹ್ಮಣ, ಉಪದೇಶವನ್ನು ಧಾರಾಳವಾಗಿ ಕೊಟ್ಟು ತಾನು ಮಾತ್ರ ಸರ್ವ ಕಾರ್ಪಣ್ಯಗಳನ್ನು ಹೇಗೆ ರೂಢಿಸಿ ಕೊಳುತ್ತಾನೆಂಬುದನ್ನು ಎನ್ಕೆ ಸಂಭಾಷಣೆಯ ಮೂಲಕ ಲೇವಡಿ ಮಾಡಿದ್ದಾರೆ.

ರಂಜನೆಯನ್ನೇ ಪ್ರಧಾನವಾಗಿಟ್ಟುಕೊಂಡು ಆರಂಭಗೊಳ್ಳುವ ಅವರ ನಾಟಕ ಗಳು, ಕೊನೆಯಲ್ಲಿ ಹೊಸ ತಿರುವನ್ನು ಪಡೆಯುತ್ತವೆ. ಲೇಖಕನಲ್ಲಿಯ ಜವಾ

ಬ್ದಾರಿ ಎಚ್ಚರಗೊಳ್ಳುತ್ತದೆ. ಈ ಜವಾಬ್ದಾರಿಯನ್ನು ಪ್ರತಿ ನಾಟಕದಲ್ಲೂ ಕಾಣಬಹುದು. ನಾಟಕಕಾರ ನಾಟಕಾ ಒರದಾನ ಎಂದು ಪಾತ್ರಗಳೇ ಒಮ್ಮೊಮ್ಮೆ ಮೂದಲಿಸಿ, ಇನ್ನೊಮ್ಮೆ ಮೆಚ್ಚುಕೆ ವ್ಯಕ್ತಪಡಿಸುತ್ತವೆ. ‘ಬೆಳಕು’ ನಾಟಕದಲ್ಲಿನ ನಾಟಕಕಾರ ಕೊನೆಯಲ್ಲಿ ಸಮಾಜಸುಧಾರಕನಾಗಿ ಹೇಳುವ ಸಂಭಾಷಣೆಗಳು ಪ್ರೇಕ್ಷಕರನ್ನು ಗಂಭೀರವಾಗಿ ಚಿಂತನೆಗೆ ತೊಡಗಿಸುತ್ತವೆ. ‘ಸತಿವ್ರತಾ ಶಿರೋಮಣಿ’ ನಾಟಕದಲ್ಲಿ ಹೆಣ್ಣಿಗೆ ಸಮಾನ ಸ್ಥಾನ ಕಲ್ಪಿಸುವ ವಾದ, ಆರಂಭದಲ್ಲಿ ಅಪಹಾಸ್ಯದ ಧಾಟಿಯಲ್ಲಿ ಸಾಗಿದರೂ ಕೊನೆಯಲ್ಲಿ ಕೆ. ಪರಮೇಶ್ವರನ್ ಎಂಬ ಮಾನಸಿಕ ತಜ್ಞನ ಪಾತ್ರ ನಾಟಕವನ್ನು ಗಂಭೀರವನ್ನಾಗಿ ಮಾಡಿದೆ.

ನಾಟಕಗಳನ್ನು ಆಡಿ-ಆಡಿಸಿ ಎನ್ಕೆಯವರು ರಂಗಮಂಚದ ಸಾಧ್ಯಾ-ಸಾಧ್ಯತೆಯನ್ನು ಬಲ್ಲವರು. ಲೇಖನಿಯಲ್ಲಿ ಸಂಭಾಷಣೆಯ ಚಾಕಚಕ್ಯತೆ ಇರುವುದರಿಂದ ಅವರು ಪ್ರೇಕ್ಷಕನ ಪ್ರತಿಕ್ರಿಯೆಯನ್ನು ಉಕ್ಕಿಸುವವರು. ಅಂತೆಯೇ ಪಾತ್ರಗಳ ಆಗಮನ ನಿರ್ಗಮನ, ದೃಶ್ಯಗಳ ಬದಲಾವಣೆ ಮುಂತಾದವು ಸರಳವಾಗಿರುವುದರಿಂದ ಅವರ ಎಲ್ಲ ನಾಟಕಗಳೂ ರಂಗ ಹತ್ತಬಲ್ಲವು. ದೀಪಾವಳಿ ದಶಮಗ್ರಹ, ಬಿ. ಟಿ. ಬುದ್ಧಿವಂತ, ಕಿವಿಮಾತು, ಬುಡಮೇಲಾದ ಬಜೆಟ್ಟು ಮುಂತಾದ ನಾಟಕಗಳು, ಮಧ್ಯಮ ವರ್ಗದ ಕುಟುಂಬದ ಅಡಚಣೆಗಳನ್ನೇ ಪ್ರಾಧಾನ್ಯವಾಗಿರಿಸಿಕೊಂಡಿರುವುದರಿಂದ ಇಂದಿಗೂ ಹೊಸ ನಾಟಕಗಳ ಹಾಗೆಯೇ ಕಾಣುತ್ತವೆ. ನಾರೀ ಪ್ರಚಾರ, ಜಂಗೀ ಕುಸ್ತಿ ಅಹಲ್ಯಾಕಲ್ಯಾಣ ಮುಂತಾದ ನಾಟಕಗಳಲ್ಲಿ ಸ್ತ್ರೀ ಪಾತ್ರಗಳನ್ನೇ ಇಟ್ಟುಕೊಂಡು ಹಾಗೂ ಬೆಳಕು, ಬಾರ್ ರೂಮ್ ಮುಂತಾದ ನಾಟಕಗಳಲ್ಲಿ ಪುರುಷ ಪಾತ್ರಗಳನ್ನೇ ಸೃಷ್ಟಿಸಿ-ರಂಗಮಂಚ ಹತ್ತಿಸಲು ಅನುಕೂಲ ಮಾಡಿಕೊಟ್ಟಿದ್ದಾರೆ.

ಎಪ್ರಿಲ್ ಫೂಲ್ ಮತ್ತು ಅತ್ತೆಯ ಮರೆಯಲ್ಲಿಯಂತಹ ಏಕಪಾತ್ರಾಭಿನಯಗಳನ್ನೂ ಎನ್ಕೆ ನೀಡಿರುವುದರಿಂದ ಸಭೆ ಸಮಾರಂಭಗಳಲ್ಲಿ ಲಘು ಮನೋರಂಜನೆಯ ಸಾಧನಗಳಾಗಿವೆ. ೧೯೫೦ ರ ದಶಕದ ಕಂಪನಿನಾಟಕಗಳ ಬಗ್ಗೆ ಗಂಭೀರ ಅಧ್ಯಯನ ಮಾಡಿರುವ ಎನ್ಕೆಯವರು ಹವ್ಯಾಸಿ ರಂಗಭೂಮಿಯ ಅಡಚಣೆಗಳನ್ನು ತಿಳಿದವರು. ಸಾಕಷ್ಟು ರಂಗಮಂದಿರಗಳಿಲ್ಲದ ಆ ಕಾಲದಲ್ಲಿ ಸಂಘ ಸಂಸ್ಥೆಗಳ ಸಮಾರಂಭಗಳಿಗಷ್ಟೇ ನಾಟಕ ಬರೆಯಬೇಕಾಯಿತು. ಆಕಾಶವಾಣಿಗಾಗಿ ಬರೆದ ಅವರ ಅನೇಕ ರೂಪಕಗಳು ನಾಟಕಗಳು ಇವತ್ತು ರಂಗರೂಪ ಪಡೆಯಬೇಕಾಗಿದೆ. ಅವರ ‘ಮೂರು ತಲೆಮಾರು’ ಗಳಂತಹ ಕಾದಂಬರಿಗಳು ನಾಟಕಗಳಾಗಿ ಪರಿವರ್ತನೆಯಾದರೆ, ಇಂದು ಹೊಸ ನಾಟಕಗಳ ಕೊರತೆ ನೀಗಬಹುದು.

# ಎನ್ಕೆಯವರ ಏಕಾಂಕ ನಾಟಕಗಳು

ಎಸ್. ಆರ್. ಮಳಗಿ

ಎನ್ಕೆ ಪ್ರಾಮುಖ್ಯವಾಗಿ ನಾಟಕಕಾರರು – ಅದರಲ್ಲೂ ವಿಶೇಷವಾಗಿ ಏಕಾಂಕಕಾರರು. ಎನ್ಕೆ ಎಂಬುದು ಏಕಾಂಕಕ್ಕೆ ಇನ್ನೊಂದು ಹೆಸರೆಂಬಷ್ಟು ಖ್ಯಾತ ಕಾವ್ಯನಾಮ. ಎನ್ಕೆಯವರ ಪ್ರಕಟಿತ ಏಕಾಂಕಗಳ ಸಂಖ್ಯೆ ಎಪ್ಪತ್ತೈದರ ಗಡಿ ದಾಟಿದೆ. ಕನ್ನಡದಲ್ಲಿ ಈ ಗಾತ್ರದ, ಈ ಗುಣದ ಏಕಾಂಕ ಸೃಷ್ಟಿ ವಿರಳ; ಇದು ಸಣ್ಣ ಸಾಧನೆಯಲ್ಲ. ಅಲ್ಲದೆ, ವಿಷಯ, ರೀತಿ, ರೂಪ, ತಂತ್ರಗಳಲ್ಲೂ ವೈವಿಧ್ಯವಿದೆ. ಹಾಸ್ಯ ರಸವು ಎನ್ಕೆ ಏಕಾಂಕಗಳ ಪ್ರಾಣ. ಅವರ ನಗೆಯ ಪ್ರಕಾರಗಳೂ ವಿಧ ವಿಧ. ಇವರ ವಿಡಂಬನೆಯ ಪರಿಯೆ ವಿಲಕ್ಷಣ ರೀತಿಯದು. ಯಾರಿಗೂ ಅದರಿಂದ ನೋವುಂಟಾಗದು. ನಕ್ಕು ನಗಿಸುವ ಬಗೆ ಇವರದು. ಟೀಕೆಗೊಳಪಟ್ಟವರೂ (ಇದರಲ್ಲಿ ನಾಟಕಕಾರರೂ ಸೇರ್ಪಡೆಯಾಗುತ್ತಾರೆ.) ನಕ್ಕುನಲಿದಾಡುವಂತಿರುವ ವಿನೋದದ ವೋಡಿ ಇವರದೇ ಎಂಬಷ್ಟು ವಿಶಿಷ್ಟವಾಗಿದೆ. ಕಕ್ಕುಲತೆಯಿಂದ ಮಕ್ಕಳೊಂದಿಗೆ ಕಚಕುಳಿಯಿಡುವ ರೀತಿಯ ವಿಡಂಬನೆ ಇವರದು. ಇವರ ಹುಟ್ಟುಗುಣವಾದ ನಾಟ್ಯಚೇತನವೇ ಈ ನಗೆಯ ವೈವಿಧ್ಯ-ವೈಶಿಷ್ಟ್ಯಗಳಿಗೆ ಮೂಲ. ಶ್ರೀರಂಗರನ್ನುಳಿದು ಇವರ ವಿನೋದಶೀಲ ನಾಟ್ಯಚೇತನಕ್ಕೆ ಪೋಷಣೆಯಿತ್ತ ಇನ್ನೊಬ್ಬ ನಾಟಕಕಾರರೆಂದರೆ ಟಿ. ಪಿ. ಕೈಲಾಸಂ. ಶ್ರೀರಂಗರಿಗಿಂತ ಮೊದಲೆ ಇವರು ಕನ್ನಡ ನಾಟಕ ಪ್ರಪಂಚದಲ್ಲಿ ನೂತನ ಪ್ರಸ್ಥಾನದ ಪ್ರವರ್ತಕರಾಗಿದ್ದರು. ಆಧುನಿಕ ನಾಟಕ ಕಲೆಯ 'ಪ್ರಪಿತಾಮಹ'ರೆನಿಸಿದ್ದರು. ಕೈಲಾಸಂ ಒಮ್ಮೆ ಧಾರವಾಡಕ್ಕೆ ಬಂದಿದ್ದರು. ಕರ್ನಾಟಕ ಕಾಲೇಜಿಗೂ ಬಂದು ಪೂರ್ವಸಿದ್ಧತೆಯಿಲ್ಲದೆ ಸಮಯಸ್ಫೂರ್ತಿಯಿಂದ (ಅದು ಅವರ ಪದ್ಧತಿ) ತಮ್ಮ ಕೆಲವು ನಾಟಕ ದೃಶ್ಯಗಳ ಏಕಪಾತ್ರಾಭಿನಯವನ್ನು ಪ್ರದರ್ಶಿಸಿ, ಕಿಕ್ಕಿರಿದು ತುಂಬಿದ್ದ ಗ್ಯಾಲರಿಯನ್ನು ನಗೆಗಡಲಲ್ಲಿ ತೇಲಾಡಿಸಿಬಿಟ್ಟಿದ್ದರು. ಪ್ಯಾಂಟು, ಬನಿಯನ್ ಮಾತ್ರ ಧರಿಸಿದ್ದ ಕೈಲಾಸಂ ವಿಲಕ್ಷಣ ಹಾಸ್ಯಮಯ ವೈಖರಿಯಿಂದ ನೋಟಕರನ್ನು ಅಪ್ರತಿಭಗೊಳಿಸಿದ್ದರು. ನಗೆಯೂಟದಲ್ಲಿಯೇ ಜೀವನದ ಗಂಭೀರ-ಸಮಸ್ಯೆಗಳನ್ನು ಹೊಳೆಯಿಸುವಲ್ಲಿ ಅವರು ನಿಸ್ಸೀಮರು. ಅವರ 'ಹೋಂರೂಲು' ಮೊದ

ಲಾದ ನಾಟಕಗಳು ಅದೇ ಉತ್ತರ ಕರ್ನಾಟಕದಲ್ಲಿ ಪ್ರಚಾರಗೊಂಡು ಜನಮನಗಳನ್ನು ಸೆರೆ ಹಿಡಿದಿದ್ದವು. ಅವರ ಪ್ರಭಾವದಿಂದ ತಪ್ಪಿಸಿಕೊಳ್ಳುವುದು ಎಂಥವರಿಗೂ ದುಸ್ತರವೇ. ಎನ್ಕೆಯವರೂ ಇದಕ್ಕೆ ಅಪವಾದವಲ್ಲ. ಆದರೆ ಆರಂಭದೆಸೆಯಲ್ಲಿ ಶ್ರೀರಂಗ-ಕೈಲಾಸಂ ಅವರ ಪ್ರಭಾವಕ್ಕೆ ಒಳಪಟ್ಟ ಎನ್ಕೆ ಬರಬರುತ್ತ ತಮ್ಮನ್ನೇ ತಾವು ಕಂಡುಕೊಂಡರು. ಶ್ರೀರಂಗರು ಆರಂಭಿಸಿದ್ದ ಏಕದೃಶ್ಯ-ಏಕಾಂಕ ತಂತ್ರದಲ್ಲೂ ಹಿಡಿತವನ್ನು ಸಾಧಿಸಿಕೊಂಡರು. 'ಬೆಳಕು', 'ಬಾರ್ ರೂಮು', 'ನಡುಮನೆಯಲ್ಲಿ', 'ವಸುಂಧರಾಖ್ಯಾನ', 'ದೀಪಾವಳಿಯ ದಶಮಗ್ರಹ', 'ಅಹಲ್ಯಾ ಕಲ್ಯಾಣ' ಮುಂತಾದವು ಈ ತಂತ್ರದ ಯಶಸ್ಸಿಗೆ ಸಾಕ್ಷಿ. ಏಕಪಾತ್ರದೃಶ್ಯದಂಥ ನಾಟ್ಯಘಟಿಗಳ ತಂತ್ರದಲ್ಲೂ ಸಿದ್ಧಿಯನ್ನು ಸಾಧಿಸಿದರು. 'ಅತ್ತೆಯ ಮನೆಯಲ್ಲಿ' ಮತ್ತು 'ವ್ಯಾಖ್ಯಾನ ವೇದನೆ' ಇವು ಇದಕ್ಕೆ ಉತ್ತಮ ಮಾದರಿಗಳು. ಆದರೆ ಏಕಪಾತ್ರದೃಶ್ಯದ ಈ ತಂತ್ರವು ನೋಟಕರ ಆಕಳಿಕೆಗೆ ಕಾರಣವಾಯಿತೇನೋ, ಎನ್ಕೆ ಕೆಲವೇ ಇಂಥ ನಾಟ್ಯಘಟಿಗಳನ್ನು ರಚಿಸಿ ಮುಂದೆ ಕೈಬಿಟ್ಟಂತೆ ಕಾಣುತ್ತದೆ. ಇದೇನಿದ್ದರೂ ಸಮಾಜದಲ್ಲಿ ಮತ್ತು ಮನೆಯೊಳಗಿನ ಕೌಟುಂಬಿಕ ಜೀವನದಲ್ಲಿ ನಿತ್ಯ ಕಾಣುತ್ತಿದ್ದ ಏರು-ಪೇರುಗಳನ್ನು ಟೊಳ್ಳು-ಗಟ್ಟಿಗಳನ್ನೂ ಏಕಾಂಕಮಾಧ್ಯಮದ ಮೂಲಕ ತಕ್ಷಣ ಸೃಷ್ಟಿಸುವ ಅವರ ಕಲೋತ್ಸಾಹ ಬೆರಗು ಹುಟ್ಟಿಸುವಂಥದು.

ತಾವು ಹುಟ್ಟಿ ಬೆಳೆದಿರುವ ಮಧ್ಯಮ ವರ್ಗದ ಬ್ರಾಹ್ಮಣ ಸಮಾಜದ ಜೀವನ ಚಿತ್ರಗಳನ್ನು ಇವರ ಏಕಾಂಕಗಳು, ಇತರ ದೃಶ್ಯಗಳು ವಿಶೇಷವಾಗಿ ಪುನಃ ಸೃಷ್ಟಿ ಮಾಡುತ್ತವೆ. ಜೀವನವು ಸಂಕೀರ್ಣವೂ ಸಮಸ್ಯಾತ್ಮಕವೂ ಆಗಿರುವುದರಿಂದ ಈ ಸಂಕೀರ್ಣತೆ ಮತ್ತು ಸಮಸ್ಯೆಗಳು ಇಲ್ಲಿ ಪಡಿಮೂಡುವುದು ಸ್ವಾಭಾವಿಕ. ಆದರೆ ಎನ್ಕೆ ಜೀವನದ ಈ ಸಂಕೀರ್ಣತೆ ಸಮಸ್ಯೆಗಳ ಕಡೆಗೆ ನೋಡುವುದು ವಿನೋದಶೀಲ ನಾಟಕೀಯ ದೃಷ್ಟಿಯಿಂದ ಮಾತ್ರ. ಇವುಗಳನ್ನು ತಮ್ಮ ಏಕಾಂಕಗಳಲ್ಲಿ ವಸ್ತುವಾಗಿ ಹೇಗೆ ಬಳಸಿಕೊಳ್ಳಬೇಕೆಂಬುದರಲ್ಲಿ ಅವರ ಆಸ್ಥೆ. ಜೀವನದ ತೊಡಕುಗಳನ್ನು ಬಿಡಿಸುವಲ್ಲಾಗಲಿ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವಾಗಲಿ ಅವರಿಗೆ ತವಕವಿಲ್ಲ. ಕಲಾವಿದನಿಗೆ ಈ ತವಕವಿರಲೇಬೇಕೆಂದೇನೂ ಇಲ್ಲ. ದೇವನ ಸೃಷ್ಟಿಯಲ್ಲಿ ತಾನು ಕಂಡ ಜೀವನ ಸೌಂದರ್ಯವನ್ನು ಸರಿಯಾಗಿ ಗ್ರಹಿಸಿ, ಅಂದವಾಗಿ ನಿರೂಪಿಸಿ ಆಹ್ಲಾದವುಂಟುಮಾಡುವುದೇ ಆತನ ಗುರಿ. ಎನ್ಕೆ ಸೃಷ್ಟಿಯೂ ಇಂಥದೇ. ಈ ಬಗ್ಗೆ ಅವರ ಅಭಿಪ್ರಾಯ ಮಾರ್ಮಿಕವಾದುದು. "ಇಲ್ಲಿಯ ದೃಶ್ಯಗಳೆಲ್ಲವು ಸಮಾಜದ ಬೇರೆ ಬೇರೆ ವರ್ಗಗಳಲ್ಲಿ ಕಂಡುಬರುವ ಜೀವನದ ಬೇರೆ ಬೇರೆ ಸ್ವರೂಪಗಳನ್ನು ನಗೆಯ ರೂಪವಾಗಿ ನಿರೂಪಿಸುವ ಹುಡುಗಾಟಗಳು, ಸಮಾಜದಲ್ಲಿಯ ಎಂತೆಂತಹ ಸಮಸ್ಯೆಗಳೂ ಒಮ್ಮೊಮ್ಮೆ ಹುಡುಗಾಟದಿಂದಲೆ ಬಗೆಹರಿದುಬಿಡುತ್ತವೆ.

ಹೀಗೆಂದ ಕೂಡಲೆ ಸಮಾಜದ ಸಮಸ್ಯೆಗಳನ್ನು ಬಿಡಿಸುವುದೇ ಇಲ್ಲಿ ಮುಖ್ಯ ಉದ್ದೇಶವೆಂದು ತಿಳಿಯಬಾರದು. ಸಮಾಜದ ಚಿತ್ರವನ್ನು ಸುಂದರವಾಗಿ ಪ್ರತಿಬಿಂಬಿಸಿ, ಕ್ಷಣ ಹೊತ್ತು ನಕ್ಕುನಗಿಸಿ, ಆನಂದಪಟ್ಟು ಸಮಾಜದಲ್ಲಿ ಅತಿಯಾದುದನ್ನು ಮಿತಿಗೆ ತರಲು ಹವಣಿಸುವುದೇ ಈ ಆಟಗಳ ಉದ್ದೇಶ. (ಬೆಳ್ಳಿಹಬ್ಬದ ಮುಮ್ಮಾತು-೧೯೪೦). ಇದೇ ಅಭಿಪ್ರಾಯವನ್ನು ಬೇರೊಂದು ಬಗೆಯಲ್ಲಿ ಇನ್ನೂ ಸ್ಪಷ್ಟವಾಗಿ ವಿವರಿಸಿದ್ದಾರೆ. "ಜೀವನದ ಉಜ್ವಲ ಸಮಸ್ಯೆಗಳನ್ನು ತೀಕ್ಷ್ಣತೆಯಿಂದ, ಗಂಭೀರತೆಯಿಂದ ಬಿಡಿಸುವ ಯತ್ನ ಇಲ್ಲಿ ಕಂಡುಬರಲಿಕ್ಕಿಲ್ಲ. ಹಾಸ್ಯವೇ ಇಲ್ಲಿಯ ಏಕಾಂಕಗಳ ಜೀವಾಳ. ಒಂದೊಂದು ಏಕಾಂಕ ಒಂದೊಂದು ರಸದ ಲಹರಿ ಮಾತ್ರ. ಸ್ವಲ್ಪ ಹುಡುಗಾಟ ಮಾಡಿ ನಗಿಸಿ, ನಲಿಸಿ ಮೋಜು ಮಾಡಿ—ಆ ಮೇಲೆ ಸಹಜವಾಗಿ ನಾವು ಏಕೆ ನಕ್ಕೆವು ಎಂದು ಸಭಿಕರು ನಾಟ್ಯಮಂದಿರದಿಂದ ಹೊರಬೀಳುವಾಗ ತಮಗೇ ತಾವು ಪ್ರಶ್ನೆ ಮಾಡಿಕೊಂಡರೆ ಸಾಕು. ಇವು ಎಷ್ಟೆಂದರೂ ಹುಡುಗಾಟಗಳು, ಆನಂದಲಹರಿಗಳು." (ಎನ್ಕೆ ಏಕಾಂಕಗಳು-೧೯೪೭) 'ಕಾವ್ಯದ ಕಾರಖಾನೆ' (೧೯೫೨) ಮತ್ತು 'ಬುಶ್ ಕೋಟು' (೧೯೫೫) ಈ ಸಂಗ್ರಹದಲ್ಲಿರುವ ರೇಡಿಯೋ ದೃಶ್ಯಗಳು made to order ತರಹದವು. ಇವುಗಳಲ್ಲಿ ಕೆಲವು ದಿನನಿತ್ಯದ ಸಂಸಾರಚಿತ್ರಗಳು, ಕೆಲವು ಪ್ರಾಸಂಗಿಕ ವಿಷಯಗಳನ್ನು ಕುರಿತು ಮೋಜಿಗಾಗಿ, ವಿನೋದಕ್ಕಾಗಿ ಬರೆದುವು. ಇನ್ನು ಕೆಲವು ಸಾಂಸಾರಿಕ ವಾಸ್ತವಿಕತೆಯೊಂದಿಗೆ ವಿಚಾರಣೀಯ ಪ್ರಶ್ನೆಗಳನ್ನು ಎತ್ತಿಹಿಡಿದಂಥವು. ಇಲ್ಲಿ ಅಂಥ ಗಂಭೀರ ಉದ್ದೇಶ, ಆದರ್ಶಗಳು ಇಲ್ಲವೆಂದಿದ್ದಾರೆ. 'ಸಂಗೀತ ಜಂಗೀಕುಸ್ತಿ', 'ಕುರುಕ್ಷೇತ್ರ' 'ಬುಡಮೇಲಾದ ಬಜೆಟ್ಟು','ಸೀತಾರಾಮರಾಜ್ಯ','ಸ್ವಯಂವರ'ಗಳಂಥ ಹುಡುಗಾಟಗಳು ಶಾಶ್ವತ ಸಾಹಿತ್ಯದ ಒರೆಗೆ ನಿಲ್ಲುವುದೇ? ಎಂದು ಕೇಳುವವರಿಗೆ ಏನು ಹೇಳಬೇಕೋ ತಿಳಿಯದು ಎಂಬಂಥ ಪ್ರತಿಕ್ರಿಯೆ ಎನ್ಕೆಯವರದು. ಇವರ ಈ ಅಭಿಪ್ರಾಯ ಈ ಪ್ರತಿಕ್ರಿಯೆ ಅರ್ಥಪೂರ್ಣ. ಅವರ ಏಕಾಂಕಗಳು 'ಹುಡುಗಾಟ' ಗಳು ಎಂದು ಹೇಳಿದ್ದರೂ ಅವು ಬರಿ ಹುಡುಗಾಟಗಳಲ್ಲ, ಆನಂದಲಹರಿ, ರಸಲಹರಿಗಳೇ ನಿಜ. ಮೇಲುನೋಟಕ್ಕೆ ಹುಡುಗಾಟಗಳಂತೆ ಕಂಡರೂ ಇವು 'ಹ್ಲಾದೈಕಮಯಿ' ಯಾದ ಸಾಹಿತ್ಯ ಕ್ರೀಡೆಗಳು. ಆನಂದವೇ ಗುರಿಯಾಗಿರುವ ಇವು ನೋಟಕರನ್ನು ನಲಿಸುವಲ್ಲಿ ಯಶಸ್ವಿಯಾಗಿರುವಾಗ ಉಳಿದ ಪ್ರಶ್ನೆಗಳು ಅಪ್ರಸ್ತುತ. ಇವು ಶಾಶ್ವತ ಸಾಹಿತ್ಯದ ಒರೆಗೆ ನಿಲ್ಲುವವೆ ಎಂದರೆ, ನಗೆ, ಮೋಜು, ಆನಂದ ಈ ಜೀವನ ಮೌಲ್ಯಗಳನ್ನು ಜನ ಕಳೆದುಕೊಂಡಾಗ ಇವುಗಳ ಶಾಶ್ವತತೆಗೂ ಭಂಗ ಬಂದೀತು. ಅಂಥ ಭಯವಿಲ್ಲ. ಪ್ರಾಸಂಗಿಕ, ತಾತ್ಕಾಲಿಕವೆಂಬಂಥ ಜೀವನ ಪರಿಸರವು ಕಾರಣಾಂತರಗಳಿಂದ ಬದಲಾದರೆ ಇಲ್ಲಿಯ ಕೆಲವು ದೃಶ್ಯಗಳು ಆಗ ಅರ್ಥವಾಗಲಿಕ್ಕಿಲ್ಲ. ಅಂಥ ನಗೆಯಾಗಲಿ ಮೋಜಾಗಲಿ ಹೊಮ್ಮಲಿಕ್ಕಿಲ್ಲ. ಕಲಾವಿದ ಇದಕ್ಕಾಗಿ

ತಲೆಕೆಡಿಸಿಕೊಳ್ಳುವುದಿಲ್ಲ. ಆನಂದಸೃಷ್ಟಿಯೇ ಆತನ ಗುರಿ-ಅದು ತಾತ್ಕಾಲಿಕ ವಿರಲಿ, ಶಾಶ್ವತವಿರಲಿ. ಸಮಸ್ಯೆಗಳ ಗಂಭೀರ ಚರ್ಚೆ-ವಿಶ್ಲೇಷಣೆಗಳು ಭಾರ ಹೊತ್ತ ನಾಟಕಗಳು ತಲೆಚಿಟ್ಟು ಹಿಡಿಸಿಯಾವು, ರಸಾನಂದವೀಯಲಾರವು. ಎಸ್ಕೆಯವರು ತಮ್ಮ ಏಕಾಂಕಗಳಲ್ಲಿ ಮತ್ತು ಇತರ ಸೃಜನಾತ್ಮಕ ಕೃತಿಗಳಲ್ಲಿ ಇರಿಸಿಕೊಂಡಿರುವ ಗುರಿ-ಉದ್ದೇಶಗಳು ಸಾಹಿತ್ಯಜ್ಞರಿಗೆ ಸಮ್ಮತ ಎಂದು ನನ್ನ ನಂಬುಗೆ. ಅಂದವಾದು ದೆಲ್ಲವೂ ಎಂದೆಂದಿಗೂ ಆನಂದಮಯ (A thing of beauty is a joy for ever). ಇಂಥದು ಸಾಹಿತ್ಯ, ಇಂಥದು ಕಲೆ 'ಅರ್ಥವಿಲ್ಲ, ಸ್ವಾರ್ಥವಿಲ್ಲ ಬರಿಯ ಭಾವಗೀತೆ' ಎಂಬಂಥ ಬೇಂದ್ರೆ ದೃಷ್ಟಿ ಎಸ್ಕೆಯವರದು.

ಎಸ್ಕೆ ಸಾಹಿತ್ಯದೃಷ್ಟಿ ಅವರ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವಂಥದು. ಸಹೃದಯತೆ, ಸೌಜನ್ಯ, ಅಂತಃಕರಣದ ಕಳಕಳಿ, ನಿರ್ಮಲ ವಿನೋದಶೀಲತೆ ಇವು ಅವರ ವ್ಯಕ್ತಿತ್ವದ ಸ್ವಭಾವ ಗುಣಧರ್ಮಗಳು. ಇವು ಅವರ ಸಾಹಿತ್ಯದೃಷ್ಟಿ ಯನ್ನು ಬೆಳಗಿಸುತ್ತವೆ. ವಿರಸವನ್ನು ತೊಲಗಿಸಿ ಸಮರಸದ ಬಾಳನ್ನು ರೂಪಿಸಿಕೊಳ್ಳು ವುದು ಹೇಗೆಂಬುದನ್ನು ಸಾಹಿತ್ಯದಲ್ಲಿ ನಾಟಕೀಯ ಕಲಾತಂತ್ರದಿಂದ ನಿರೂಪಿಸಿಕೊ ಳ್ಳುವುದೇ ಅವರ ಗುರಿ. ಜೀವನವನ್ನು ನೇರನೋಟದಿಂದ, ಓರೆನೋಟದಿಂದ ಸೂಕ್ಷ್ಮ ವಾಗಿ ದಿಟ್ಟಿಸಿ ಅಲ್ಲಿ ಹುದುಗಿರುವ ವಿಕೃತಿಗಳನ್ನು ಹಾಸ್ಯದ ರಾವುಗನ್ನಡಿಯಲ್ಲಿ ಪ್ರತಿ ಫಲಿಸುವಂತೆ ಮಾಡಿ ತೋರಿಸುವುದು ಇವರ ಕಲಾಚಾತುರ್ಯ. ಸಮಸ್ಯೆಗಳನ್ನು ಗಂಭೀರವಾಗಿ ತಲೆಗೆ ಹಚ್ಚಿಕೊಳ್ಳುವ ಪ್ರವೃತ್ತಿ ಇವರದಲ್ಲ. ಇವು ಬಾಳಿನ ಸಮ ಸ್ಯೆಗಳು, ಇವು ಅವುಗಳ ಪರಿಹಾರಗಳು ಎಂದು ಇತರರು ಬೆರಳಿಟ್ಟು ತೋರಿಸು ವಂಥವುಗಳ ಬೇರೆ ಬೇರೆ ಮಗ್ಗಲುಗಳನ್ನು ಉದಾತ್ತ ರೀತಿಯ ವಿಕಟಾನುಕರಣ (Mock heroic) ತಂತ್ರದಿಂದ ಎತ್ತಿ ತೋರಿಸುತ್ತ ಆ ಸಮಸ್ಯೆಗಳನ್ನೂ ಅವು ಗಳ ಪರಿಹಾರಗಳನ್ನೂ ಬುಡಮೇಲು ಮಾಡಿ ನಗೆಗೀಡು ಮಾಡುವ ಚಮತ್ಕಾರ ಇವರ ಏಕಾಂಕಗಳಲ್ಲಿ ಹೆಜ್ಜೆ ಹೆಜ್ಜೆಗೆ ಗೋಚರಿಸಿ, ನಗೆಯ ಬುಗ್ಗೆಯನ್ನೇ ಚಿಮ್ಮಿಸು ತ್ತದೆ. ಎಸ್ಕೆ ಅಭಿಜಾತ ಕವಿಹೃದಯವುಳ್ಳ ಕನಸುಣಿಗಳು-ಬೇಂದ್ರೆಯವರ ಸಾನ್ನಿಧ್ಯ ವನ್ನು ಯಥೇಷ್ಟವಾಗಿ ಪಡೆದಿದ್ದ ಅವರು ಈ ಕನಸುಣಿತನವನ್ನು ಅಧಿಕವಾಗಿ ಪೋಷಿಸಿಕೊಂಡು ಬಂದಿದ್ದಾರೆ. ಅದಕ್ಕೆ ತಮ್ಮ ನಾಟ್ಯಕಲೆಯ ಹೊಸ ಹೊಸ ತಂತ್ರಗಳನ್ನು ಸಂಯೋಜಿಸಿಕೊಂಡಿದ್ದಾರೆ. ಚಿತ್ರ ವಿಚಿತ್ರವಾದ ಕಲ್ಪನಾ ವಿಲಾಸ ಗಳು ಅವರು ನಿರ್ಮಿಸುವ ಸನ್ನಿವೇಶಗಳಲ್ಲಿ, ಪಾತ್ರಗಳಲ್ಲಿ, ಸಂವಾದ ಶೈಲಿಯಲ್ಲಿ ಕಾಣಿಸಿಕೊಂಡು ಭ್ರಾಂತಿ ಮೂಲವಾದ ವಿಲಕ್ಷಣ ಮನಶ್ಚಿತ್ರ (Fantasy)ಗಳುಳ್ಳ ದೃಶ್ಯಗಳು ಸಹಜಸ್ಫೂರ್ತಿಯಿಂದ ಹುಟ್ಟಿಕೊಳ್ಳುತ್ತವೆ. ಮನೋರಂಜನೆಯೊಂದಿಗೆ ಮನೋವಿಕಾಸವೂ ಅವುಗಳ ಉದ್ದೇಶ. ಬೆಳಕು, ಬೆಳ್ಳಿಹಬ್ಬ, ವಸುಂಧರಾಖ್ಯಾನ ಸತೀಪ್ರತಾಪಶಿರೋಮಣಿ, ಟೆಲಿಫೋನ್ ಟಾಕೀಜ್, ನಿಧಿ, ಲೀನ-ಉದಾಶೀನ, ತಿಗಣೆ

ಯಜ್ಞ, ಅಷ್ಟಗೋಷ್ಠಿ, ನವ್ಯ ಸ್ವಯಂವರ, ಠಕ್ಕ-ಠಕ್ಕಿ - ಇವೇ ಮುಂತಾನುವು ಸಂದರ್ಭೋಚಿತವಾಗಿ ಒಂದೊಂದು ವಿಧದ ಕಲ್ಪನಾಚಮತ್ಕಾರ-ಭ್ರಾಂತಿ ವಿಲಾಸ ಗಳ ಒಪ್ಪ ಪಡೆದಿವೆ. ಇದರಿಂದ ಈ ನಾಟ್ಯ ದೃಶ್ಯಗಳ ನಾಟಕೀಯತೆ ವಿಪುಲವಾಗಿ ಹೆಚ್ಚಿದೆ. 'ಪ್ರಾಣತುಂಬಿದ ಪಾತ್ರ', 'ಕಸಿ ಹೃದಯ ಕಣ್ತೆರೆದಿತ್ತು', 'ಕವಿ ಚಿರಂಜೀವಿ' – ಈ ಮೂರು ಇತ್ತೀಚಿನ ಏಕಾಂಕಗಳಲ್ಲಿ ಎನ್ಕೆ ಪಳಗಿದ ಕಲಾ ತಂತ್ರಕ್ಕೆ ಸಮಕಾಲೀನ ವೈಚಾರಿಕ, ವೈಜ್ಞಾನಿಕ, ಕಾಲ್ಪನಿಕ ವಸ್ತುಗಳನ್ನು ಬಳಸಿ ಕೊಂಡು ತಮ್ಮ ಅದೇ ಉಚ್ಚ ಶ್ರೇಣಿಯ ಪ್ರತಿಭಾ ವಿಲಾಸವನ್ನು ಪ್ರದರ್ಶಿಸಿದ್ದಾರೆ. ಮೊದಲನೆಯದರಲ್ಲಿ ಶ್ರೀ ಅರವಿಂದರ ವಿಚಾರಸೂತ್ರದನ್ವಯ ವೇದ-ಮಂತ್ರಗಳ ಹಾಗೆ ಕವಿಯ ಪಾತ್ರಗಳೂ ಚೇತನಾತ್ಮಕ ಸೃಷ್ಟಿ ಎಂಬ ಕಲ್ಪನೆಯನ್ನು ಮೂಡಿ ಸಲು ಯತ್ನಿಸಿ ಈ ಏಕಾಂಕವನ್ನು ತೇಜೋಮಯವಾಗಿಸಿದ್ದಾರೆ. ಇದರ ರಚ ನೆಗೆ ಇಟಾಲಿಯನ್ ನಾಟಕಕಾರ ಲೂಗಿ ಪಿರಾಂಡೆಲೊ (೧೮೬೭-೧೯೩೬) ಅವರ 'Six Characters in search of an Author' ಎಂಬ ನಾಟಕವೂ ಶ್ರೀರಂಗರ 'ಕೇಳು ಜನಮೇಜಯ' ನಾಟಕವೂ ಪ್ರೇರಕವಾದುವೆಂದು ಅವರು ಹೇಳಿದ್ದರೂ ವಾಸ್ತುಶಿಲ್ಪದ ವಿವರಗಳಲ್ಲಿ ಎನ್ಕೆ ಅಪೂರ್ವ ಸ್ವೋಪಜ್ಞತೆಯನ್ನು ಮೆರೆದಿದ್ದಾರೆ. ಎರಡನೆಯದಕ್ಕೆ ಜಗದ್ವಿಖ್ಯಾತ ವೈದ್ಯವಿಜ್ಞಾನಿ ಡಾ. ಕ್ರಿಶ್ಚನ್ ಬರ್ನಾರ್ಡ್ ಅವರು ನಡೆಸಿದ ಹೃದಯದ ಕಸಿಪ್ರಯೋಗ ಶಸ್ತ್ರಚಿಕಿತ್ಸೆ ಸ್ಫೂರ್ತಿ ಯಿತ್ತುದಾಗಿ ಅವರು ಹೇಳಿದ್ದಾರೆ. ಹೃದಯದ ಕಸಿ ಪ್ರಯೋಗದ ಗಂಭೀರ ವೈಜ್ಞಾ ನಿಕ ಪ್ರಯೋಗವನ್ನು ಕವಿ ಹೃದಯದ ನಾಟಕಕಾರ ಎನ್ಕೆ ಅರ್ಥ ಮಾಡಿಕೊಂಡು ಅದನ್ನಿಲ್ಲಿ ಬಳಸಿಕೊಂಡಿರುವ ರೀತಿಯೇ ಅದ್ಭುತರಮ್ಯ, ಮೌಲಿಕ. ಮೂರನೆಯ ದಕ್ಕೆ ಮಹಾಕವಿ ಕುಮಾರವ್ಯಾಸ ಯೋಗೀಂದ್ರನ ಬಗ್ಗೆ ಪ್ರಚಲಿತವಿರುವ ದಂತ ಕಥೆಗಳು ಪ್ರಚೋದನೆ ನೀಡಿದ್ದರೂ ಈ ಕಟ್ಟುಕಥೆಗಳಿಗೆ ಇಲ್ಲಿ ಹೆಚ್ಚಿನ ಸತ್ವವೊದ ಗಿದೆ. ಭಾವಿಕ ಹೃದಯಿಗಳ ನಂಬುಗೆಗೆ ಈ ನಾಟಕದಿಂದ ಶಾಶ್ವತ ನೆಲೆ ದೊರೆ ತಂತಾಗಿದೆ. ಇದೇನಿದ್ದರೂ ಕುಮಾರವ್ಯಾಸ ಭಾರತದ ಆಳವಾದ ವ್ಯಾಸಂಗದ ಫಲವಾಗಿ ಈ ಮಹಾಕವಿಯನ್ನು ಕುರಿತು ಪ್ರಪ್ರಥಮವಾದ ಪ್ರಭಾವಶಾಲೀ ನಾಟಕವೊಂದನ್ನು ಎನ್ಕೆ ಒದಗಿಸಿದ್ದಾರೆ. ಕನ್ನಡಕ್ಕೆ ಇದೊಂದು ಉತ್ಕೃಷ್ಟ ಕೊಡುಗೆ.

ಈ ಮೂರು ಏಕಾಂಕಗಳಲ್ಲಿ ಎನ್ಕೆ ಬಳಸಿರುವ ಹಿನ್ನೋಟ ದರ್ಶನ (Flash-back) ಮತ್ತು ಕನಸು ಹಳನಂಡಗಳಂಥ ಭ್ರಾಂತಿಚಮತ್ಕಾರ ದೃಶ್ಯಗಳು ಮೈಮರೆಸುವಂತಿವೆ. ನಾಟ್ಯಶಾಸ್ತ್ರ, ಕಸಿಹೃದಯ ಪ್ರಯೋಗ ಮತ್ತು ಕುಮಾರ ವ್ಯಾಸನ ಜೀವನ ಕಥೆ-ಇವುಗಳ ಬಗ್ಗೆ ಈ ಮೂರು ಏಕಾಂಕಗಳು ಹೊಸ ಜಿಜ್ಞಾಸೆ ಯನ್ನು ಕೆರಳಿಸುವಂತಿವೆ.

ನಾನಿಕಾಕಾ : ಎನ್ಕೆಬರೆಹ/೩೮೩

ಒಳ್ಳೆಯ ಬರಹಗಾರನಿಗೆ ಅವನದೇ ಆಗಿರುವ ಒಂದು ವಿಶಿಷ್ಟ ಶೈಲಿ ಇರುತ್ತದೆಯಷ್ಟೆ? ಹಾಗೆ ಎನ್ಕೆಯವರದೂ ಒಂದಿದೆ. ಅದು ಅವರ ಹುಟ್ಟುಗುಣವಾದ ವಿನೋದಶೀಲ ನಾಟ್ಯ ಚೇತನದ ಶೈಲಿ. ಇದು ಅವರ ಬಹುಮಟ್ಟಿನ ಸಾಹಿತ್ಯ ಸೃಷ್ಟಿಯ ಮೇಲೆ ತನ್ನ ಮುದ್ರೆಯೊತ್ತಿದೆ; ಇದು ಹೆಚ್ಚು ಸ್ಫುಟವಾಗಿ ಗೋಚರಿಸುವುದು ಅವರ ಏಕಾಂಕ ಸೃಷ್ಟಿಯಲ್ಲಿ. ಅನಂತರ ತುಸು ಕಡಮೆ ಪ್ರಮಾಣದಲ್ಲಿ ಅವರ ಹರಟೆ-ಲಲಿತಪ್ರಬಂಧ-ವ್ಯಕ್ತಿಚಿತ್ರ ಮುಂತಾದ ಸೃಜನಾತ್ಮಕ ಅಭಿವ್ಯಕ್ತಿಯಲ್ಲಿ. ಎನ್ಕೆ ದೃಷ್ಟಿಗೆ–'ನಮ್ಮ ಜೀವನಾನ ಒಂದು ನಾಟಕ, ನಮ್ಮ ಮನಿ ಪಡಸಾಲೀನ ಒಂದು ರಂಗಭೂಮಿ' (ಉಷಃ ಪಾರಾಯಣ), 'ನಿಮ್ಮ ಹರಟೆಯೇ ನಮ್ಮ ನಾಟಕಕ್ಕೆ ವಸ್ತು' (ಮುಸುಕು) – ಈ ಮಾತುಗಳಲ್ಲಿ ಎನ್ಕೆ ಶೈಲಿಯ ವೈಶಿಷ್ಟ್ಯ– 'ಎನ್ಕೆತನ'ದ ರಹಸ್ಯವಡಗಿದೆ. ಇದನ್ನು ಗುರುತಿಸಲು ಕಷ್ಟಪಡಬೇಕಿಲ್ಲ. ಅವರ ಏಕಾಂಕಗಳಲ್ಲಿ ಹರಟೆಗಳಲ್ಲಿ ಹುಲುಸಾಗಿ ಹಲವು ಪರಿಗಳಲ್ಲಿ ದೊರೆಯುತ್ತಿದೆ! ಲಟ್ಟಿಚಾರ್ಜ್ (–ಲಾಠೀಚಾರ್ಜ್‌ಗೆ ಸಂವಾದಿ), 'ಸಾಹಿತ್ಯದ ಸ್ವಾಹಾಪತಿಗಳು' (ಗೆದ್ದಲಿಗಳು), 'ದಿವಾಳಿಯ ದಶಮುಗ್ರಹ'(–ಅಳಿಯದೇವರು–ಏಕಾಂಕ),'ಸತಿವ್ರತ ಶಿರೋಮಣಿ'(ಏಕಾಂಕ),'ನೆಲ ಸಮತಾವಾದ' (ಏಕಾಂಕ)ಗಳಂಥ ಶೀರ್ಷಿಕೆಗಳದ್ದೇ ಒಂದು ಮಾದರಿ. ಇವುಗಳಲ್ಲಿ ಮೊದಲಿನೆರಡು ಹರಟೆಗಳು. 'ಬಾರ್ ರೂಮು' ಏಕಾಂಕದ ಸಂಡೇಪ್ಲೀಡರರ ಪಾತ್ರನಿರೂಪಣೆ ಮತ್ತು ಅಲ್ಲಿ ಸೃಷ್ಟಿಗೊಂಡ ಸನ್ನಿವೇಶ ಚಮತ್ಕೃತಿಗಳದ್ದೇ ಇನ್ನೊಂದು ಬಗೆ. 'ಬಿ–ಟಿ ಬುದ್ಧಿವಂತ' ಏಕಾಂಕದ ಎಚ್. ಎಂ. (half mad) ಮಾಸ್ತರ್, ಕಾಮಾಪೂರ್ತಿ (ಯಾರೋ ಕೊಟ್ಟ ಹೆಸರು)– ಈ ಅಧ್ಯಾಪಕರ ಹೆಸರುಗಳಲ್ಲೂ ಅವರ ಹಾಸ್ಯಮಯ ಸಂವಾದಗಳಲ್ಲೂ 'ಎನ್ಕೆತನ'ವು ಒಡೆದು ಕಾಣುತ್ತಿರುವುದು ಬೇರೊಂದು ಬಗೆ. ಉದಾ : Teacher's profession is the noblest profession' ಅಂತ ಪ್ರೊಫೆಸರ್ ಸಿ. ಎಸ್. ಅಣೆಯವರ ಮಾತನ್ನು **ಎಚ್. ಎಮ್.** ಮಾಸ್ತರ್ ನೆನಪಿಸಿಕೊಟ್ಟಾಗ, **ಕಾಮಾಪೂರ್ತಿ** — 'ನಾ ಅಂತೀನಿ, ಅವರು ಸಿ. ಎಸ್. ಅಣೆ, ಯವರು ಆಗಿರಲಿಲ್ಲ. ಸಿ. ಎಸ್. ಉಣಿಸುವರಾಗಿರಬೇಕು, ಅಂತ.' ಅಲ್ಲದೆ, ಎಚ್. ಎಂ. ಮಾಸ್ತರ್ ಶಿಕ್ಷಕ ಕಲೆಯನ್ನು ವಿವರಿಸುತ್ತ, ವಿದ್ಯಾರ್ಥಿಗಳನ್ನು ಲೀಲಾಮಾತ್ರವಾಗಿ ಹೀಗೆ **ಜ್ಞಾನದಿಂದ** ಅಜ್ಞಾನಕ್ಕೆ(ಬಿಚ್ಚಿ)ಅಂದರೆ from known to the unknown ಎಂಬುದಕ್ಕೆ ಒಯ್ಯಬೇಕು' ಎಂದು ಮುಂತಾಗಿ ಆವೇಶಭರಿತ ರೀತಿಯಲ್ಲಿ ವಿವರಿಸುತ್ತ 'ಶಾಲೆಯು ಸಮಾಜದ ಮಾದರಿಯಾಗಬೇಕು' ಎಂದು ಹೇಳುವಷ್ಟರಲ್ಲಿ ನಡುವೇ **ಕಾಮಾಪೂರ್ತಿ** — 'ನಿಮ್ಮಂಥ ಬುದ್ಧಿವಂತರ ಗೋರಿಯಾಗಬೇಕು' — ಎಂದು ಗರ್ಜಿಸಿ ಎಚ್. ಎಂ. ಮಾಸ್ತರರ ಬಾಯಿ ಮುಚ್ಚಿಸುತ್ತಾನೆ. **'ನೆಲ ಸಮತಾವಾದ'**ದ **ಕುಬೇರಪ್ಪ** — 'ಹ–ಹ–ಹ– ಅಗ್ನಿಷ್ಟಿಗಿ ಅಗ್ನಿಹೋತ್ರಿ(ನೀವು) ಬಂಗಾರ' ಎಂದು ನಗೆಯಾಡಿದಾಗ ಅಗ್ನಿಹೋತ್ರಿ– 'ಹೂಂ, ಅಗ್ನಿಷ್ಟಿಗಿ ಇಟ್ರೆ ಇಟ್ರೂ ಇನ್ನಮ್ಯಾಲಿ

ಅಗ್ನಿಹೋತ್ರಿ ಅಲ್ಲಾ, ಹೊಲಾಹೋತ್ರಿ, ಮುನಿ ಹೋತ್ರಿ ಎಲ್ಲಾನೂ ತೊಳಕೊಂಡು ಹೋತ್ರಿ ಆಗತೀವಿ'-ಎನ್ನುತ್ತಾನೆ! 'ಬೆಳಕು' ಏಕಾಂಕದಲ್ಲಿ ಯಮುನ ಮುಂದೆ ಬಂದ ಡಾಕ್ಟರನು-'ಗೀತಾದ ಆಥರು ಮಿಸ್ಟರ್ ಕೃಷ್ಣರಾವ್ ಅವರದಷ್ಟು ಭೆಟ್ಟಿ ಮಾಡ್ಸಿ ನಮ್ಮನ್ನ ಇಂಟ್ರೊಡ್ಯೂಸ್ ಮಾಡ್ರೆಲ್ಲಾ' ಎಂದು ಕೇಳುವುದು, ಆಚಾರ್ರು-(ಭಕ್ತಿರಸ ಉಕ್ಕಿಬರುತ್ತದೆಯೇನೋ ಎಂಬಂತೆ)' ಕಟ್ಲೆ ತುಂಬಿದ ಮೇಲೆ ಕ್ಷಣ ಮಾತ್ರವಿರಲಿಲ್ಲ' ಎಂಬ ದಾಸರ ಪದ ಹಾಡುವುದು, ಯಮುನ ಪ್ರಶ್ನೆಗಳಿಗೆ ಸಂಸ್ಕೃತದಲ್ಲಿ ತಪ್ಪುತಪ್ಪಾಗಿ ಉತ್ತರಿಸುವುದು, ಯಮುನನ್ನು ನಸ್ಯ ಕೇಳುವುದು, ಯಮುನು-'ಹೊಲೆಯನಲ್ಲಿದ್ದಷ್ಟು ಭಕ್ತಿ ನಿನ್ನಲ್ಲಿದೆಯೇ?' ಎಂದು ಕೇಳಿದಾಗ, ಆಚಾರ್ರು-'ಅದಕ್ಕೂ ಹೆಚ್ಚಿದೆ ದೇವಾ'ಎಂದು ನುಡಿಯುವುದು; ಕೊನೆಯಲ್ಲಿ ನಾಟಕಕಾರ—'ಹಲೋ, ಮಿಸ್ಟರ್ ಎಮ್. ರಾವ್ (ಸ್ವಗತ) ಸರಿ, ಎಮ್ ರಾವ್ ಎಂದರೆ ಇವರ ಹೆಸರು 'ಮುನಿಮದನರಾಯರೆ'ಂದು ತೋರುತ್ತದೆ' ಎನ್ನುವುದು. ಇವು 'ಎನ್ಕೆತನ'ದ ಕೆಲ ಮಾದರಿಗಳು. ಪಾತ್ರ, ಸನ್ನಿವೇಶ, ಸಂವಾದ ಮತ್ತು ಈ ಮೊದಲು ವಿವರಿಸಿದ ಕಲಾತಂತ್ರ ಇತ್ಯಾದಿಗಳಲ್ಲೆಲ್ಲ 'ಎನ್ಕೆತನ'ವು ಸಮಯ ಸ್ಫೂರ್ತಿಯಿಂದ ನಿರಾಯಾಸವಾಗಿ ನಿರರ್ಗಳವಾಗಿ ಹಾಸ್ಯಲಹರಿಗಳನ್ನು ಚಿಮ್ಮಿಸುತ್ತವೆ ಇರುವುದು. 'ಎನ್ಕೆತನ'ವು ಬರಿ ನಗೆಯೂಟವಷ್ಟೇ ಅಲ್ಲ, ಅದು ತನ್ನೊಡಲಲ್ಲಿ ಗಾಂಭೀರ್ಯವನ್ನೂ ಕಾಯ್ದಿರಿಸಿಕೊಂಡಿರುವುದೆಂಬುದನ್ನು ಕೆಲವರು ಮರೆಯುವಂತೆ ಕಾಣುತ್ತದೆ. ಸಂದರ್ಭೋಚಿತವಾಗಿ ಈ ಗಾಂಭೀರ್ಯವೂ ತಂತಾನೆ ಅದೇ ಸಮಯಸ್ಫೂರ್ತಿಯಿಂದಲೇ ಹೊರಹೊಮ್ಮಿ, ತಕ್ಕ ಅಭಿವ್ಯಕ್ತಿಯನ್ನು ಪಡೆಯುತ್ತದೆ. ಉದಾ: 'ಭಕ್ತಿರಸವು ಹುಟ್ಟುವುದು ಹೊರಗಿನ ಮೆರುಗಿನಿಂದಲ್ಲ, ಹೃದಯದ ಕೊರಗಿನಿಂದ, ('ಬೆಳಕು'); 'ಅಣ್ಣಾ ತಮ್ಮಾ ಅಂದರ ಹೋದಿದ ಕಾಳಿನ್ಹಾಂಗ, ಬ್ಯಾಳಿಯಾಗಿ ಹೋಳಾಗುವವರಲ್ಲ' ('ಕಿವಿಮಾತು'); ಸಮರ ಜೀವನ ಅಂಬೋದು ಸಮರಸ ಜೀವನ ಆಗಬೇಕು,-ಇದೇ ನಾಟಕದ ಉದ್ದೇಶ, 'ನನ್ನ ನಾಟಕದಲ್ಲಿ ಒಂದೊಂದು ಪಾತ್ರ ಪ್ರಾಣ ತುಂಬಿದ ಪಾತ್ರ; ನಟನಿಗೆ ಪರಕಾಯ ಪ್ರವೇಶದ ಪರಾಸಾಧನೆ ಬೇಕು'; ಹೆಣ್ಣು ಗಂಡನ್ನು ಪ್ರೀತಿಸುವ ಹಾಗೆ ಉಭಯತರೂ ದೇವರು ಅನ್ನೋ ಪರ ವಸ್ತುವನ್ನು ಹ್ಯಾಗೆ ಪ್ರೀತಿಸಬೇಕು ಅನ್ನೋದನ್ನ ಕಲೀಬೇಕು'; 'ಪ್ರೀತಿಯ ದೈವೀ ಸ್ವರೂಪ ಅಂದ್ರೆ ಭಕ್ತಿ'; ('ಪ್ರಾಣ ತುಂಬಿದ ಪಾತ್ರ'; ವಿಜ್ಞಾನ ಮತ್ತು ಕಾವ್ಯದ ಮ್ಯಾರೇಜ್ ಆಗಬೇಕು' (-'ಕವಿ ಹೃದಯ ಕಣ್ತೆರೆದಿತ್ತು). ಈ ನಾಟಕದ ಪ್ರೇಮಕುಮಾರ—(ಕಮಲಾಗೆ) 'ನಿನ್ನ ಮನಸ್ಸು ಚಿನ್ನದಂಥದು' ಎಂದಾಗ, ಕಮಲಾ — 'ಚಿನ್ನವಾಗಿರೋದು ಬೇಡ, ಚಿನ್ಮಯವಾಗಿರೋಣ' ಎನ್ನುತ್ತಾಳೆ. ಪ್ರೇಮಕುಮಾರ — (ಕೊನೆಯುಸಿರೆಳೆಯು

ವಾಗ) - 'ಡಾಕ್ಟರ್, ಪ್ರೇಮದ ಅದ್ವೈತ ಅಂದರೇನು ? ಅದರ ಸಾಕ್ಷಾತ್ಕಾರ ಕಂಡುಕೊಂಡೆ, (ಕ್ಷೀಣವಾಗಿ) ಶೂನ್ಯದಲ್ಲಿ ಅದ್ವೈತ!' ಎನ್ನುತ್ತಾನೆ.

'ಎನ್ಕೆತನ' ಹೀಗೆ ಹಾಸ್ಯ - ಗಾಂಭೀರ್ಯಗಳ ಇಮ್ಮುಖವಾಗಿದೆ. 'ಕವಿ ಚಿರಂಜೀವಿ' ಯಲ್ಲಿಯ 'ಎಲ್ಲಿಹುದು ಸುಣಭಯವು ಅಲ್ಲಿಹುದು ದೇವಾಂಶ' ಮತ್ತು 'ಬಂಧುಗಳ ದರುಶನ ಫಲವಲಾ ಸಂಸಾರ ತರುವಿಂಗೆ' ಎಂಬ ಕುಮಾರವ್ಯಾಸ ಸೂಕ್ತಿಸಾರವನ್ನು ಹೇಳಿ, ಅರಗಿಸಿಕೊಂಡು ಬೆಳೆದ ಸೌಜನ್ಯ - ಸೌಶೀಲ್ಯಗಳೂ' ಎನ್ಕೆತನದ ಹುರುಳು - ತಿರುಳು.

# ಜನಪ್ರಿಯ ಏಕಾಂಕ ಲೇಖಕ

## ಜಿ. ಎಸ್. ಗ್ರಾಮಪುರೋಹಿತ

ಸಂಭಾಷಣೆಯ ಮೊನಚು, ವಿಡಂಬನೆಯ ಮಾರ್ಮಿಕತೆ, ನವಿರು ಹಾಸ್ಯ, ಕೌಟುಂಬಿಕ ಆತ್ಮೀಯತೆಯ ಸೊಗಸು ಇವು ಎನ್ಕೆ ಸಾಹಿತ್ಯದ ಇತರ ಪ್ರಕಾರಗಳಲ್ಲಿರುವಂತೆ ಏಕಾಂಕಗಳಲ್ಲಿಯೂ ವಿಪುಲವಾಗಿವೆ. ಏಕಾಂಕಗಳ ಪರಿಮಿತಿಯಲ್ಲಿ ಅವಕ್ಕೆ ಇನ್ನೂ ಹೆಚ್ಚಿನ ಅರ್ಥಪೂರ್ಣತೆ ಸಾಂದರ್ಭಿಕತೆಯಿಂದ ಒದಗುವದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಉತ್ತರ ಕರ್ನಾಟಕದ ಅದರಲ್ಲಿಯೂ ಮಧ್ಯಮ ವರ್ಗದ ಬ್ರಾಹ್ಮಣ ಸಮಾಜದ ರೀತಿ-ನೀತಿಗಳು, ನಡಾವಳಿಗಳು ಇವುಗಳಲ್ಲಿಯ ದಿನಬಳಕೆಯ ಆಡುಮಾತುಗಳಲ್ಲಿ ಅಡಕವಾಗಿರುವದು ಸೂಕ್ಷ್ಮವಾಗಿ ತೋರುತ್ತದೆ.

ಪ್ರಕಟಿತ ಎನ್ಕೆ ಏಕಾಂಕಗಳಲ್ಲಿ ವಿಷಯವೈವಿಧ್ಯವಿದೆ. ಎನ್ಕೆಯವರ ಏಕಾಂಕಗಳಲ್ಲಿ ಕೇವಲ ಪುರುಷ ಪಾತ್ರಗಳಿರುವವೂ ಇವೆ. ಕೇವಲ ಸ್ತ್ರೀಪಾತ್ರಗಳಿರುವ ಏಕಾಂಕಗಳೂ ಇವೆ. ಇವೆಲ್ಲ ವಿವಿಧ ಸಂದರ್ಭಗಳಿಗೆ ಮಾಡುವ ಕಲಾಕಾರರ ಅನುಕೂಲತೆಗೆ ತಕ್ಕ ಹಾಗೇ ರಚಿತವಾಗಿರಬೇಕು.

ಆಕಾಶವಾಣಿಯ ಸೇವೆಗೆ ಸೇರುವ ಮುನ್ನವೇ ಬರಹಗಾರರಾಗಿದ್ದ ಎನ್ಕೆ ತಮ್ಮ ಬಹುದಿನದ ಸೇವೆಯನ್ನು ಆಕಾಶವಾಣಿಗೇ ಸಲ್ಲಿಸಿದುದರ ಫಲವಾಗಿಯೋ ಏನೋ ಅವರ ಏಕಾಂಕಗಳಲ್ಲಿ ಭಾಷೆ-ಧ್ವನಿಗಳ ಸೂಚನೆ ತೀವ್ರವಾಗಿ ಅವು ಕೂಡಲೆ ಪರಿಣಾಮ ಬೀರುವದರಲ್ಲಿ ಸಫಲವಾಗುತ್ತವೆ. ಸಹಜವಾಗಿ ಅರಳುವ ಹೂವಿನಂತೆ ಮಾತಾಡುತ್ತಿದ್ದಂತೆಯೇ ಅದರ ಅರ್ಥ ಹೊರಹೊಮ್ಮಿ ಕೇಳುಗನಿಗೆ, ಪ್ರೇಕ್ಷಕನಿಗೆ ಹೃದಯ ತಟ್ಟುತ್ತದೆ. ಸಂವೇದನೆ ವೇದ್ಯವಾಗುತ್ತದೆ. ವಿಡಂಬನೆ ಎನ್ಕೆ ಏಕಾಂಕದ ಅವಿಭಾಜ್ಯ ಅಂಗವೆಂದರೂ ಸಲ್ಲುತ್ತದೆ. ಪ್ರತಿಯೊಂದು ಏಕಾಂಕ, ಅದರಲ್ಲಿಯ ಪ್ರತಿಯೊಂದು ಸನ್ನಿವೇಶದಲ್ಲಿಯೂ ವಿಡಂಬನೆ ಹಾಸುಹೊಕ್ಕಾಗಿದೆ. ಹೀಗಾಗಿ ಸಂಭಾಷಣೆ ಕೊನೆಯವರೆಗೂ ಕುತೂಹಲಕಾರಿಯಾಗಿಯೇ ಬೆಳೆದು ಬರುತ್ತದೆ. ಮುಕ್ತಾಯಕ್ಕೊಂದು ವಿಪರ್ಯಾಸದ ಮುಸುಕು ಹೊದಿಸಿ-ಸರಿಸಿದಂತೆ ಇಡೀ ಏಕಾಂಕದ ಧ್ವನಿ ಬೆಳ್ಳಂಬೆಳಕಾಗಿ ಹೊಳೆಯುತ್ತದೆ.



ನಾನಿಕಾಕಾ : ಎನ್ಕೆಬರೆಹ/೩೮೭

ಎನ್ಕೆ ವಿಡಂಬನೆಯ ವಸ್ತುಗಳೋ ತೀರ ಸಾಮಾನ್ಯ. ದಿನನಿತ್ಯದ ಅನುಭವಗಳು. ತತ್ಕಾಲೀನ ಸಮಾಜದ ರೂಢಿ-ಸಂಪ್ರದಾಯಗಳು, ಮಹೋನ್ನತ ತತ್ವಗಳನ್ನಾಗಲಿ, ವಿಶ್ವವ್ಯಾಪಕ ಸಮಸ್ಯೆಗಳನ್ನಾಗಲಿ ಅಷ್ಟಾಗಿ ಇವರು ವಿಡಂಬನಾ ವಸ್ತುವಾಗಿಸಿಲ್ಲ. ಇದಕ್ಕೆ ಕಾರಣ ಎನ್ಕೆ ಬದುಕಿನ ಪರಿಸರದ ಸಹಜ ಶಿಶುವಾಗಿ ತಮ್ಮ ಆಳವಾದ ಅನುಭವದಿಂದ ಸಾಮಾನ್ಯ ಪ್ರಜ್ಞೆಗೆ ಸಂವೇದನಾಶೀಲರಾದುದು. ಅಂದರೆ ದಿನದಿನದ ಬದುಕೇ ನಿಜ ಜೀವನ ಎಂದು ಅರಿತವರು. "ಕಿವಿಮಾತು" ಏಕಾಂಕದಲ್ಲಿ ಮನೆಮನೆಯ ಒಂದು ಸಾಮಾನ್ಯ ಸಮಸ್ಯೆಗೆ ಕನ್ನಡಿ ಹಿಡಿದ ರೀತಿ ಬಹಳ ಮಾರ್ಮಿಕವಾಗಿದೆ.

ಎನ್ಕೆಯವರ ಏಕಾಂಕಗಳಲ್ಲಿರುವ ಅಪೂರ್ವತೆ ಎಂದರೆ ಅದರಲ್ಲಿಯ ವಿನೋದ. ಹಾಸ್ಯಸಾಹಿತ್ಯ ಬಹಳ ವಿರಳವಾಗಿರುವ ಕನ್ನಡದಲ್ಲಿಯಂತೂ ಎನ್ಕೆಯವರದು ವಿಶಿಷ್ಟ ಹಾಗೂ ಮಹತ್ವಪೂರ್ಣ ಕೊಡುಗೆಯೆಂದೇ ಹೇಳಬೇಕು. ಎನ್ಕೆಯವರ ಜನಪ್ರಿಯತೆ ಅವರ ಏಕಾಂಕಗಳ ಮೇಲೆಯೇ ಹೆಚ್ಚಾಗಿ ಬೆಳೆದಿದೆಯೆಂದೂ ಹೇಳಬಹುದು.

# 'ಕಾಲಾಯ ತಸ್ಮೈ ನಮಃ' ಮತ್ತು 'ಹಿಪ್ಪಿನಾಟಿಜಂ'

ಡಾ. ವೀರಣ್ಣ ರಾಜೂರ

ಬೆಂಗಳೂರು 'ರಂಗಸಂಪದ' ನಾಟಕಮಾಲೆಯ ನಾಲ್ಕನೆಯ ಕೃತಿಯಾಗಿ ೧೯೭೩ ರಲ್ಲಿ ಪ್ರಕಟವಾದ ಇದರಲ್ಲಿ ಎನ್ಕೆ ಅವರ ಎರಡು ನಾಟಕಗಳಿವೆ. ಒಂದು ಸಂಸ್ಕೃತ ಉದ್ಧರಣೆಯ ಶೀರ್ಷಿಕೆಯನ್ನು ಪಡೆದಿದ್ದರೆ- ಕಾಲಾಯ ತಸ್ಮೈ ನಮಃ, ಮತ್ತೊಂದು ಆಂಗ್ಲ ತಲೆಬರಹವನ್ನು ಹೊಂದಿದೆ – ಹಿಪ್ಪಿನಾಟಿಜಂ. ಎರಡೂ ಕಿರು ನಾಟಕಗಳು; ಬಾನುಲಿಗಾಗಿ ಬರೆದುವು.

" ಕಾಲಾಯ ತಸ್ಮೈ ನಮಃ " ನಾಟಕದಲ್ಲಿ ಮೂರು ದೃಶ್ಯಗಳಿವೆ. ಕೇವಲ ಎರಡು ಪಾತ್ರಗಳು; ಯಜಮಾನ, ಯಜಮಾನಿ. ಯಜಮಾನ ಸಂಪ್ರದಾಯಸ್ಥ; ಸನಾತನವಾದ ಆರ್ಯಧರ್ಮದಲ್ಲಿ ಅಚಲವಾದ ನಂಬಿಕೆ ಇಟ್ಟವನು. ಯಜಮಾನಿ ಅವನಿಗೆ ತದ್ವಿರುದ್ಧ; ಹೊಸಕಾಲಕ್ಕೆ ತಕ್ಕಂತೆ ಹೊಂದಿಕೊಂಡು ನಡೆಯಬೇಕೆಂಬ ಇಚ್ಛೆಯುಳ್ಳವಳು. ಇವರಿಗೆ ಒಬ್ಬಳೇ ಮಗಳು. ಹೆಸರು ಶಕುಂತಲೆ. ಕಡೀ ಹುಟ್ಟು ಎಂದು ಅವಳನ್ನು ತಾಯಿ ಅಚ್ಚಬಚ್ಚಾ ಮಾಡಿ ಬೆಳೆಸಿದ್ದಳು. ಹೆಣ್ಣು ಕೇವಲ ಅಡಿಗೆ ಮನೆಯ ಆಳು, ಪತಿ, ಅತ್ತೆ-ಮಾವರ ಸೇವೆಯಲ್ಲಿ ಇರಬೇಕಾದ ದಾಸಿ, ಎಂಬುದನ್ನು ಅಲ್ಲಗಳೆಯಲು ಅವಳನ್ನು ಕಾಲೇಜಿಗೆ ಓದಲೂ ಕಳಿಸಿದ್ದಳು. ಅದು ಯಜಮಾನನಿಗೆ ಸರಿ ಕಂಡಿರಲಿಲ್ಲ. ತಮ್ಮ ಮನೆತನದಲ್ಲಿ ಹಿಂದಿನವರು ನಡೆದುಕೊಂಡು ಬಂದಂತೆ-ಕಾಲಲ್ಲಿ ಚಪ್ಪಲಿ ಮೆಟ್ಟದೆ, ಹಿರಿಯರ ಎದುರು ತಲೆಯೆತ್ತಿ ನಿಲ್ಲದೆ, ಪರ-ಪುರುಷರ ಜೊತೆ ಮಾತನಾಡದೆ, ಮನೆಬಿಟ್ಟು ಹೊರಗೆಲ್ಲಿಯೂ ಹೋಗದೆ – ಇರಬೇಕೆಂಬುದು ಅವನ ಸಿದ್ಧಾಂತ. ಆದರೂ ಯಜಮಾನಿಯ ಒತ್ತಾಯಕ್ಕೆ ಒಳಗಾಗಿ ಒಲ್ಲದ ಮನಸ್ಸಿನಿಂದ ಅದಕ್ಕೆ ಸಮ್ಮತಿಸಿದ್ದ.

ಮಗಳು ಅಭ್ಯಾಸದ ಜೊತೆಗೆ ಒಮ್ಮೆ ರೇಡಿಯೋ ನಾಟಕದಲ್ಲಿ ಪಾತ್ರವಹಿಸಲು ಸಿದ್ಧಳಾಗುತ್ತಾಳೆ. ಯಜಮಾನ 'ನಾಳೆ ಮದುವೆಯಾಗುವ ಹುಡುಗಿ ಹೀಗೆ ಗಂಡು ಹುಡುಗರ ಜೊತೆ ಪಾತ್ರ ವಹಿಸುವುದು ಸರಿಯಲ್ಲ' ಎಂದು ವಾದಿಸುತ್ತಾನೆ. ಅದಕ್ಕೆ ಯಜಮಾನಿ 'ಇದು ಬಣ್ಣಾ ಹಚಿಗೊಂಡು ಹೊರಗ ಆಡೂ ನಾಟ್ಗ ಅಲ್ಲ,

ರೇಡಿಯೋದಾಗ ಆಗೂದು. ಅಲ್ಲಿ ನೋಡೂರ ಸುದ್ದ ಇರೂದಿಲ್ಲ' ಎಂದು ಸಮಜಾ ಯಿಸಲು ಪ್ರಯತ್ನಿಸಿದರೆ, ಯಜಮಾನ 'ಯಾವ ನಾಟ್ಗ್ಯಾನರ ಆಗ್ಲಿ, ಗಂಡಾ-ಹೆಂಡತಿ ಆಗೂದು ಸುಳ್ಳೇನು. ಜಣ್ಣಾ ಹಚಿಗೊಳ್ಳದಿದ್ದರೇನಾತು ಭಾವನಾ ಏನರ ಸುಳ್ಳೇನು ? ಭಾವನಾಕ ಹೀಂಗ ಚಾಲನಾ ಸಿಕ್ಕರ ಮನಸು ಬ್ರೆಕ್ ಇಲ್ದ ಹರೀತದ. ಹೀಂಗ ಸಿಕ್ಕಾಂಗ ಕುಣದ್ರ ಆರ್ಯಧರ್ಮ ಅಂಬೋದು ಉಳೀತೇನು ? ಗೌರವಸ್ಥ ಮನೆತನದ ಹೆಣ್ಣುಮಕ್ಕಳು ಹೀಗೆಲ್ಲ ಮಾಡಬಾರ್ದು. ನಾಳೆ ನೋಡಾಕ ಬಂದ ವರ ಈಕಿ ನಾಟ್ಗ್ಯ ಮಾಡ್ತಾಳನ್ನೂ ಸುದ್ದೀ ಕೇಳಿದ್ರ ತಿರಸ್ಕಾರ ಮಾಡ ಬಹುದು' ಎಂದು ಮತ್ತೆ ತನ್ನ ಸಂಪ್ರದಾಯ ಶರಣತೆಯನ್ನು ಮೆರೆಯುತ್ತಾನೆ. ಯಜಮಾನಿ ಅವನ ಮಾತಿಗೆ ಮಣಿಯುವುದಿಲ್ಲ. 'ದಿನಾ ರೇಡಿಯೋದಾಗ ಇಂಥಾ ನಾಟ್ಗ ಸಾಕಷ್ಟು ಆಗತಾವ. ಎಲ್ಲಾರೂ ನಿಮ್ಹಂಗ ವಿಚಾರ ಮಾಡತಾರನು. ಇಂದಿನ ಜನ ಏನು ? ಇಂದಿನ ಹುಡುಗ್ರು ಏನು ? ಇಂದಿನ ವಿಚಾರ ಏನು ? ಇಂದಿನ ಫ್ಯಾಶನ್ ಏನು ? ಅದೆಲ್ಲ ಬಿಟ್ಟುಕೊಟ್ಟು ಸ್ವತಂತ್ರ ಹುಡುಗುರ್ನ ಒಂದು ಕಟ್ಟಿನೊಳಗ ಇಡತೀನಂದರ ಹ್ಯಾಂಗ ? ಪ್ರವಾಹ ಹ್ಯಾಂಗ ಹರೀತದ ಹಾಂಗ ಈಸಬೇಕಾಗತದ. ಇಂದಿನ ಸಿನೇಮಾ ಏನು, ಇಂದಿನ ಶಿಕ್ಷಣ ಏನು, ಇಂದಿನ ಕಾಲಕ್ಕ ನಿಮ್ಮ ಹಳೀ ಪುರಾಣ ಬಿಚ್ಚಿದರ ನೋಡಲಿಕ್ಕೆ ಬಂದವರು ನಕ್ಕು ಹೋದಾರು. ಇಂದಿನ ಕನ್ಯಾ ಪರೀಕ್ಷೆದಾಗ ಹುಡಿಗ್ಗಿ ಹಾಡಲಿಕ್ಕೆ ಬರತ್ತೇನು, ನೃತ್ಯ ಮಾಡಲಿಕ್ಕೆ ಬರತ್ತೇನು, ಅದು ಬರತ್ತೇನು, ಇದು ಬರತ್ತೇನು, ಅಂತಾ ಕೇಳತಾರ. ನೀವು ಇಲ್ಲದ ವೈರಾಗ್ಯದ ಮಾತ ಹೇಳಬ್ಯಾಡ್ರಿ, ಇದೊಂದು ಸರ್ತಿ ರೇಡಿಯೋದಾಗ ಮಾಡಿ ಬರ್ಲಿ' ಎಂದು ಬಾಯಿ ಮುಚ್ಚಿಸುತ್ತಾಳೆ.

ಮಗಳು ಆಡಿದ ನಾಟಕ 'ಶಾಕುಂತಲ'. ಅದರಲ್ಲಿ ಈಕೆಯದು ಹೆಸರಿಗೆ ತಕ್ಕ ಶಕುಂತಲೆಯ ಪಾತ್ರ. ದುಷ್ಯಂತನ ಪಾತ್ರ ವಹಿಸಿದವ ಅವಳ ಜೊತೆಗೇ ಕಾಲೇಜಿನಲ್ಲಿ ಓದುತ್ತಿದ್ದ ಒಬ್ಬ ಯುವಕ. ನಾಟಕ ತುಂಬ ಯಶಸ್ವಿಯಾಯಿತು. ಕೇಳಿದ ಶ್ರೋತೃಗಳೆಲ್ಲ ಮೆಚ್ಚಿ ಅನೇಕ ಪತ್ರಗಳನ್ನು ಬರೆಯುತ್ತಾರೆ. ಅಧ್ಯಾಪಕರು ಗಳೆಲ್ಲ ಕೊಂಡಾಡುತ್ತಾರೆ. ಯಜಮಾನಿ ದೇವರ ಗುಡಿಗೆ ಹೋದಾಗ, ಅಲ್ಲಲ್ಲಿ, ಕಂಡಲ್ಲಿ, ಪರಿಚಿತ ಹೆಂಗಸರು ಮಗಳ ಪಾತ್ರವನ್ನು ಮೆಚ್ಚಿ ಹೊಗಳುತ್ತಾರೆ. ಈ ಸಂಗತಿಯನ್ನು ಆಕೆ ಉಬ್ಬಿ ಹೆಮ್ಮೆಯಿಂದ ಯಜಮಾನನ ಮುಂದೆ ತಿಳಿಸುತ್ತಾಳೆ. ಅವನದು ಮತ್ತೆ ಅದೇ ಹಳೇ ರಾಗ. 'ಮದುವಿ ಆಗೂ ಹುಡ್ಗಿ ಹೀಂಗ ಗಂಡಾ-ಹೇಣತಿ ಆಗಿ ನಾಟಕ ಆಡಿದ್ರ ಹ್ಯಾಂಗ ? ಇದ ಮೊದಲು ಇದ ಕೊನಿ. ಇನ್ನ ಈ ನಾಟಕದ ಮಾತ ಎತ್ತಬ್ಯಾಡ' ಎಂದು ಆಜ್ಞಾಪಿಸುತ್ತಾನೆ. ಪಾಲಿಸುವವರಿದ್ದರೆ ತಾನೆ ಆಜ್ಞೆಗೆ ಬೆಲೆ! ಯಜಮಾನಿ ಅದನ್ನು ಮುರಿಯುತ್ತಾಳೆ; ಅಲ್ಲದೆ ಮುಂದು ವರಿದು 'ಯಾಕ ಎತ್ತಬಾರ್ದು ? ಏನ ತಪ್ಪಾತು ? ನಿಮ್ಮ ಮಗಳು ನಾಟಗ ಮಾಡಿ,

ಶಾಬಾಸಗಿರಿ ಜೋಡಿ ರೇಡಿಯೋದಿಂದ ರೂಪಾಯಿನೂ ತಗೊಂಡ ಬಂದಾಳ. ಮಗಳ ಕಲಾ ನೋಡಿ ಕೌತುಕ ಪಡ್ರಿ' ಎಂದು ಅವನಿಗೇ ಮರುಆಜ್ಞೆ ಮಾಡಿ 'ನಾಟಗಾ ಬಾಳ ಛಲೋ ಆತು ಅಂತ ಕಾಲೇಜ ವಾರ್ಷಿಕೋತ್ಸವದೊಳಗ ಅದನ್ನ ಸ್ಟೇಜ ಮ್ಯಾಲೆ ಮಾಡತಾರಂತ' ಎಂಬ ಮುಂದಿನ ವಿಚಾರವನ್ನೂ ತಿಳಿಸುತ್ತಾಳೆ. ಈ ಮಾತು ಕೇಳಿ ಯಜಮಾನ ಕಿಡಿ ಕಿಡಿ ಆದ. 'ರೇಡಿಯೋ ಹೋಗಿ ಈ ಸ್ಟೇಜಿನ ಮಟ್ಟಕ್ಕೆ ಮುಂದುವರಿದಳೇನು ?' ಎಂದು ರೇಗಾಡಿದ. ಆದರೆ ಮರುಕ್ಷಣದಲ್ಲಿಯೇ ಅಸಹಾಯಕನಂತೆ 'ಇನ್ನೇನು ಕಿತು, ಇದನ್ನೆಲ್ಲ ನೋಡಾದಕಿಂತ ಮೊದಲು ನನ್ನ ಕಣ್ಣ ಮುಚ್ಚಿಸ ದೇವರ. ಇದ್ದೊಬ್ಬ ಮಗಳ ಮದವಿ ಮಾಡಿ ಕಣ್ಣಮುಚ್ಚಬೇಕಂದ್ರ ಏನೇನೋ ಆಗಲಿಕ್ಕೆ ಹತ್ಯು' ಎಂದು ಅಳಹತ್ತಿದ. ಯಜಮಾನಿ ಅದಕ್ಕೆ ಕರಗಲಿಲ್ಲ, ಕನಿಕರಗೊಳ್ಳಲಿಲ್ಲ. ಪ್ರತಿಯಾಗಿ 'ನಮ್ಮ ಹುಡಿಗೇನ ಕುಂಟ್ಯಾ, ಕುರುಡ್ಯಾ, ಇಂದಿನ ಕಾಲದ ಸುಧಾರಿಸಿದ ವರಾ ಯಾವನರ ಬಂದು ಮಾಡಿಕೊಳತಾನ. ಇರ್ಲಿ ನಡ್ರಿ, ನಾಟಕ ಕಾಲೇಜಿನ ಪೂರ್ತೆಕ್ಕ. ಅಲ್ಲೆ ಎಲ್ಲಾರು ಮನೀ ಮಂದಿ ಇದ್ದಾಂಗ ಇರತಾರ' ಎಂದು ಸಮಾಧಾನಿಸುತ್ತಾಳೆ. ಯಜಮಾನ 'ಏನ ಬಂತಪ ಕಲಿಕಾಲ' ಎಂದು ಕಾಲವನ್ನು ಹಳಿದರೆ, ಯಜಮಾನಿ 'ಕಲಿಕಾಲ ಅಲ್ಲ ಇದು ಕಲಿಯೂಕಾಲ. ನಾನು ಕಲಿತಿರಲಿಲ್ಲ. ನೀವು ಕಲಿತಿದ್ದಿರಿ. ಈಗ ನಮ್ಮ ಮಗಳು ಕಲಿತಾಳ. ಆಕಿ ಹೆಜ್ಜಿ ನೋಡಿ ನಾನೂ ಹೆಜ್ಜಿಹಾಕಾಕ ಸಿದ್ಧ ಆಗೀನಿ. ನೀವು ಇನ್ನೂ ಸನಾತನ ಕಾಲದಾಗ ಇದ್ದೇನು ಅಂತೀರಿ' ಎಂದು ಕಲಿಯುಗಕ್ಕೆ ಹೊಸ ಅರ್ಥ ಕಲ್ಪಿಸಿ ಯಜಮಾನನನ್ನು ಒಪ್ಪಿಸುತ್ತಾಳೆ.

ನಾಟಕ ಸ್ಟೇಜಿನ ಮೇಲೆ ಬಾನುಲಿಗಿಂತ ಹೆಚ್ಚು ಪರಿಣಾಮಕಾರಿಯಾಗಿ, ಜನಮೆಚ್ಚುಗೆಯನ್ನು ಗಳಿಸಿತು. ಅದರಲ್ಲಿಯೇ ಶಕುಂತಲೆಯ ಪಾತ್ರವಂತೂ ಅನುಪಮವಾಗಿ ತೋರಿತು. ಮಗಳ ಅಭಿನಯ ಕೌಶಲ ಕಂಡು ತಾಯಿ ಉಬ್ಬಿ ಹೋದಳು. ಆಕೆಯ ಆನಂದಕ್ಕೆ ಪಾರವೇ ಇರಲಿಲ್ಲ. ತನಗಾದ ಸಂತೋಷವನ್ನು ಯಜಮಾನನೊಡನೆ ಹಂಚಿಕೊಳ್ಳಬೇಕೆಂದು-ನಾಟಕಕ್ಕೆ ಬರದೇ ಮನೆಯಲ್ಲಿಯೇ ಕುಳಿತ ಅವನೆದುರು ಮಗಳ ಉನ್ನತ ಮಟ್ಟದ ಅಭಿನಯ, ನಾಟಕ ಬಿಟ್ಟೊಡನೆ ಗ್ರೀನ್ ರೂಮಿನಲ್ಲಿ ನುಗ್ಗಿ ಅನೇಕ ಜನ ಆಕೆಯ ಅಭಿನಯಕ್ಕೆ ಮೆಚ್ಚಿ ಕೊಟ್ಟ ಶಾಹಬಾಸಗಿರಿ, ದುಷ್ಯಂತ-ಶಕುಂತಲೆ ಜೋಡಿಯಾಗಿ ನಿಂತು ಫೋಟೋ ತೆಗೆಸಿದ್ದು, ತಾನು ಅದರ ಒಂದು ಪ್ರತಿಯನ್ನು ಮನೆಗೆ ತೆಗೆದುಕೊಂಡು ಬರಲು ತಿಳಿಸಿದ್ದು-ಎಲ್ಲವನ್ನೂ ಅಭಿಮಾನದಿಂದ ಅರುಹಿದಳು. ಈ ಎಲ್ಲ ಸಂಗತಿ ಕೇಳಿದ ಯಜಮಾನನ ಪಿತ್ತ ನೆತ್ತಿಗೇರಿತು. 'ಫೋಟೋ ತೆಗೆಸೂದು, ಸಿಕ್ಕಾರ ಕೂಡ ನಾಟಗಾಮಾಡಾದು, ನಾಳೆ ಮದುವಿ ಆಗೂ ಹುಡಿಗೇರು ಹೀಗೆಲ್ಲ ಮಾಡಿದ್ರ ಹ್ಯಾಂಗ ?' ಎಂದು ಕೂಗಾಡಿದ. 'ಈಗೇನಾಗೇದ ?' 'ಇನ್ನೂ ಏನಾಗಬೇಕು. ಮೊನ್ನೆ ರೆಡಿಯೊ ಆತು,

ನಿನ್ನೆ ಸ್ಟೇಜ ಆತು, ಮತ್ತೆ ನಾಳೆ ಇನ್ನೇನಾಗುತ್ತೋ ?' 'ಅಂದಾಂಗ ಇನ್ನೊಂದ ವಿಷಯ ಮರತಿದ್ದೆ. ನಾಳೆ ವಸಂತೋತ್ಸವದ ಸಾಂಸ್ಕೃತಿಕ ಕಾರ್ಯಕ್ರಮ ಅಂತ, ಅದೇನೊ ಯುವಕ ಜನರ ಸಲುವಾಗಿ ಅಂತ ಶಕೂನ ನಾಟಕ ದಿಲ್ಲೀಗೆ ಆರಿಸ್ಯಾರಂತ. ಅದನ್ನ ಟೆಲಿವಿಜನ್ನದಾಗೂ ತೋರಸ್ತಾರಂತ.' ಈ ಮಾತು ಕೇಳಿದಾಗಂತೂ ಯಜಮಾನ ಆಕಾಶವೇ ಕಡಿದು ತಲೆಯ ಮೇಲೆ ಬಿದ್ದವನಂತಾಗಿ ಕುಸಿದ. ಆಕೆ ಹಾಗೇ ಮುಂದುವರಿದು 'ಅಲ್ಲೀ ಕಾಶ್ಮೀರಕ್ಕೂ ಹೋಗಿ ಬರತಾರಂತ' ಎಂದು ಹೇಳಿದಳು. ಯಜಮಾನನಿಗೆ ತಡೆಯಲಾಗಲಿಲ್ಲ. 'ಅಲ್ಲ್ಯಾಕ ಹನಿಮೂನಿಗೇನು ?' 'ಹೌದಂತ. ಅದೇನ ಶಕೂ ಹೇಳತಿದ್ಲು ಇಂಗ್ಲೀಷಿನಾಗ'. 'ಅಲ್ಲ ನಾಳೆ ಮದುವಿ ಆಗೂ ಹುಡಿಗಿ....' 'ಆವರೇನಾತು. ಆ ಹುಡುಗ ಬಾಳ ಛಂದ ಅದಾನ. ಜಾತೀನು ಒಂದ್ಽಅಂತ. ಹೆಸರು ಮದನಮೋಹನ, ನಮ್ಮ ಶಕೂ ಅಂದರ ಬಿದ್ದ ಸಾಯಿತಾನ, ಅವರಿಬ್ಬರೂ ಅದೇನ ಲವ್ ಮ್ಯಾರೇಜು ಆಗತಾರಂತ. ನೋಡಿದಿರಾ ನಿಮ್ಮ ಮಗಳು ನಾಟಗ ಮಾಡಿಕೊಂತ ಮದಿವೀನೂ ಗೊತ್ತುಮಾಡಿಕೊಂಡ ಬಿಟ್ಟಳು', 'ನಾಟಗಾ ಮಗಳ ಆಡಲಿಲ್ಲ, ನೀ ಮಾಡಿದಿ', 'ಏನ ತಪ್ಪಾತೀಗ', ಇಷ್ಟ ಸುಲಭದಾಗ ಇಂಥಾ ಛಲೋ ವರಾ ಎಲ್ಲಿ ಸಿಗತಿದ್ದ? ಅದೂ ವರದಕ್ಷಿಣೆ, ಮದುವೀ ಖರ್ಚೂ ಇಲ್ದ ಪುಕ್ಕಟದಾಗ. ಮಗಳ ಮದಿವಿ, ಮದಿವಿ ಅಂತ ಗೋಳಾಡ ತಿದ್ದಿರಿ, ಈಗ ಜವಾಬ್ದಾರಿ ತೀರಿತಲ್ಲ ?', ಅಂದರ ಮದುವಿ ಆಗೇಬಿಟ್ಟರೇನೀಗ ?', 'ಗೊತ್ತ ಮಾಡಿಕೊಂಡಾರಂತ. ಅದೇನೋ ರಿಜಿಸ್ಟರ್ ಅಂತ ಮಾಡಿಕೋತಾರಂತ, ಹಾಂಗ ದಿಲ್ಲೀ-ಕಾಶ್ಮೀರ ಕಂಡ ಬಂದ ಮ್ಯಾಲೆ ನಿಮ್ಮ ಆಶೀರ್ವಾದ ಕೇಳಲಿಕ್ಕೆ ಬರತಾರಂತ', 'ನಾನು ಈ ಆಘಾತದಿಂದ ಬದುಕಿ ಉಳಿದರೆ' 'ಆಘಾತ ಯಾಕ ? ಜವಾಬ್ದಾರಿ ನಿರ್ವಿಘ್ನದಿಂದ ಕೊನೆಗೊಂಡಿತು ಅಂತ ನಿಟ್ಟುಸಿರು ಹಾಕಿರಿ. ಹಗುರ ಮನಸ್ಸಿನಿಂದ ಖರ್ಚು ಇಲ್ಲದ ಆಶೀರ್ವಾದ ಮಾಡಿ ಕಳಿಸಿರಿ' 'ಹೂಂ ಆಶೀರ್ವಾದ ಅಂದರ Ex- Post Facto Sanction ಗೆ ಸಹಿ ಹಾಕಿಧಾಂಗೇನು ? ಕಾಲಾಯ ತಸ್ಮೈ ನಮಃ' ಎಂದು ಯಜಮಾನ ಕಾಲಕ್ಕೆ ಶರಣಾಗತನಾಗುತ್ತಾನೆ.

ಹೀಗೆ ನಾಟಕ ದೃಶ್ಯದಿಂದ ದೃಶ್ಯಕ್ಕೆ ಕುತೂಹಲ ಕೆರಳಿಸುತ್ತ ಬೆಳೆಯುತ್ತ ಸಾಗಿ, ಕೊನೆಗೆ ಒಂದು ಪರಿಣಾಮಕಾರಿ ಮುಕ್ತಾಯವನ್ನು ಹೊಂದುತ್ತದೆ. ಬದಲಾದ ಕಾಲಲ, ಅದಕ್ಕೆ ಸಂಪ್ರದಾಯಸ್ಥ ವ್ಯಕ್ತಿ ಹಾಗೂ ಹೊಸದನ್ನು ಸ್ವಾಗ ತಿಸುವ ವ್ಯಕ್ತಿಗಳು ಸ್ಪಂದಿಸುವ ರೀತಿಯನ್ನು ಇಲ್ಲಿ ಮಾರ್ಮಿಕವಾಗಿ ಚಿತ್ರಿಸಲಾಗಿದೆ.

ಮೊದಲ ದೃಶ್ಯದಲ್ಲಿ ರೇಡಿಯೋ ನಾಟಕ, ಎರಡನೆಯದರಲ್ಲಿ ಸ್ಟೇಜಿನ ಮೇಲೆ ವಾರ್ಷಿಕೋತ್ಸವದಲ್ಲಿ ಅವರ ಪ್ರಯೋಗ, ಮೂರನೆಯದರಲ್ಲಿ ವಸಂತೋತ್ಸವ ಸಾಂಸ್ಕೃತಿಕ ಯುವಕಾರ್ಯಕ್ರಮದಲ್ಲಿ ಭಾಗವಹಿಸಲು ದಿಲ್ಲಿಗೆ ಪ್ರಯಾಣ – ಹೀಗೆ

ಹಂತ ಹಂತವಾಗಿ ನಾಟಕದ ಬೆಳವಣಿಗೆ. ಅದರ ಜೊತೆಗೆ ಮೊದಲ ದೃಶ್ಯದಲ್ಲಿ ಶಕುಂತಲೆ ಮದನಮೋಹನರಲ್ಲಿ ಪ್ರೇಮಾಂಕುರ, ಎರಡನೆಯದರಲ್ಲಿ ಅದರ ಬೆಳವಣಿಗೆ ಗಟ್ಟಿಗೊಳ್ಳುವಿಕೆ, ಕೊನೆಗೆ ರಜಿಸ್ಟರ್ಡ ಪ್ರೇಮವಿವಾಹದಲ್ಲಿ ಪರ್ಯವಸಾನ.

ಶಕುಂತಲೆ ಪಾಠದ ಜೊತೆಗೆ ಪ್ರೇಮದ ಪಾಠವನ್ನೂ ಕಲಿಯುತ್ತಾಳೆ. ನಾಟಕದ ಜೊತೆಗೆ ಪ್ರೇಮನಾಟಕವನ್ನೂ ಆಡುತ್ತಾಳೆ. ಆದಕ್ಕೆ ತಾಯಿ ಪ್ರೇರಕ ಶಕ್ತಿಯಾಗಿ ನಿಂತು ಯಶಸ್ವಿಯಾಗಿ ಪೂರೈಸುತ್ತಾಳೆ. ಈ ಗುಟ್ಟು ಕೊನೆಯಲ್ಲಿ ರಟ್ಟಾಗುತ್ತದೆ. ಇದೇನನ್ನೂ ಅರಿಯದ ಯಜಮಾನ ನಾಟಕದಲ್ಲಿ ಪಾತ್ರವಹಿಸಲು ವಿರೋಧಿಸುತ್ತ ಬರುತ್ತಾನೆ. ಮೊದಲು 'ಏನಕೇನರ ಆದ್ರ...' ಎಂದು ಸಂಶಯ ವ್ಯಕ್ತಪಡಿಸಿದವನು ಮುಂದೆ 'ಇದೊಂದ ಸರ್ತಿ ನೋಡ ಮತ್ತ, ಇದ ಕೊನಿ, ಇದ ಮೊದಲಃ' ಎಂದು ಕಟ್ಟು ಹಾಕುತ್ತಾನೆ. ಕೊನೆಯಲ್ಲಿ ತಾಯಿ, ಮಗಳಿಗೆ ಎಲ್ಲ ದೃಷ್ಟಿಯಿಂಡ ಸಲುಗೆ ಕೊಟ್ಟು ತನ್ನ ಗಂಡನನ್ನು ತಾನೇ ಹುಡುಕಿಕೊಳ್ಳುವಂತೆ ಮಾಡಿ, ತನ್ನ ತಲೆಯ ಮೇಲಿದ್ದ ಭಾರವನ್ನು ಖರ್ಚಿಲ್ಲದೆ ಸುಲಭವಾಗಿ ಇಳಿಯುವಂತೆ ಮಾಡಲು, ಸಂಪ್ರದಾಯ, ಸನಾತನ ಧರ್ಮ ಇತ್ಯಾದಿಗಳಿಗೆ ಕಟ್ಟುಬಿದ್ದ ಅವನು ಕ್ರಮಕ್ರಮವಾಗಿ ಅವುಗಳಿಂದ ಸಡಿಲುಗೊಳ್ಳುತ್ತ ಸಂಪೂರ್ಣವಾಗಿ ಬದಲಾದ ಕಾಲಕ್ಕೆ ಶರಣಾಗತನಾಗುತ್ತಾನೆ. 'ಪ್ರವಾಹಕ್ಕೆ ತಕ್ಕಂತೆ ಈಸಬೇಕು, ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕಬೇಕು' ಎಂಬ ಯಜಮಾನಿಯ ಮಾತಿಗೆ ಮಣಿಯುತ್ತಾನೆ. ಕೇವಲ ಎರಡು ಪಾತ್ರಗಳ ಸಂಭಾಷಣೆಯಲ್ಲಿಯೇ ಇಷ್ಟೆಲ್ಲ ಘಟನೆಗಳು ನಡೆದು ಹೆಣ್ಣು ಹೆತ್ತ ತಂದೆ–ತಾಯಿಗಳ ಒಂದು ಮೂಲಭೂತ ಹಿರಿಯ ಸಮಸ್ಯೆ-ಮಗಳ ಮದುವೆ ಮಾಡುವುದು – ಅತಿ ಸುಲಭವಾಗಿ ಬಗೆಹರಿಯುವಲ್ಲಿ ಈ ನಾಟಕದ ವೈಶಿಷ್ಟ್ಯ ಅಡಗಿದೆ. ನಾಟಕಕಾರರ ಕಲ್ಪನಾಚಾತುರ್ಯ ಎದ್ದು ತೋರುತ್ತದೆ.

ಎರಡನೆಯ ನಾಟಕ "ಹಿಪ್ಪಿನಾಟಿಜಂ." ಇದರ ವಸ್ತು ಪಾಶ್ಚಾತ್ಯರ ದಟ್ಟವಾದ ಪ್ರಭಾವದಿಂದ ಆಧುನಿಕ ಯುಗದಲ್ಲಿ ನಮ್ಮ ಯುವಪೀಳಿಗೆಯ ವೇಷ–ಭೂಷಣ ನಡೆ–ನುಡಿ, ಆಚಾರ–ವಿಚಾರ, ರೀತಿ–ನೀತಿಗಳಲ್ಲಿ ಆದ ಅದ್ಭುತ ಬದಲಾವಣೆಯ ವಿಡಂಬನೆ. ಇಲ್ಲಿ ಆರು ಪಾತ್ರಗಳು ಕಥೆಯನ್ನು ನಡೆಸಿಕೊಂಡು ಹೋಗುತ್ತವೆ. ತಂದೆ, ತಾಯಿ, ಅಜ್ಜಿ, ಬಾಬು, ಬೇಬಿ ಮತ್ತು ವ್ಯಕ್ತಿ ಎರಡು ದೃಶ್ಯಗಳಲ್ಲಿ ನಾಟಕ ಮುಗಿಯುತ್ತದೆ.

ಯಾವಾಗಲೂ ಮಡಿಹುಡಿ, ಆಚಾರ, ಧರ್ಮ ಎನ್ನುವ ಅಜ್ಜಿ ಹಳೆಯ ಸಂಪ್ರದಾಯಕ್ಕೆ ಕಟ್ಟುಬಿದ್ದವಳು. ತಂದೆ-ತಾಯಿ ಆಧುನಿಕ ಬದಲಾವಣೆಯನ್ನು ಒಪ್ಪಿಕೊಂಡರು. ಬಾಬು-ಬೇಬಿ ಮತ್ತು ವ್ಯಕ್ತಿ ಸಂಪೂರ್ಣವಾಗಿ ಆಧುನೀಕರಣಗೊಂಡು ಫಾಶನ್ ಯುಗದ ಪ್ರತಿನಿಧಿಗಳಾಗಿ ನಿಂತವರು.

ಬಾಬು-ಬೇಬಿ ಒಂದೇ ರೀತಿಯ ಬಟ್ಟೆ ಹೊಲಿಸಿದ್ದಾರೆ. ಅವನು ಹುಡಿಗೆಯ ರಂತೆ ಉದ್ದ ಕೂದಲು ಬಿಟ್ಟರೆ (ಹಿಪ್ಪಿ), ಅವಳು ಹುಡುಗರಂತೆ ಕೂದಲು ಕತ್ತರಿಸಿ ಕೊಂಡಿದ್ದಾಳೆ (ಬಾಬ್ ಕಟ್ಟು). ಇಬ್ಬರೂ ಪ್ಯಾಂಟು, ಬುಶ್ ಕೋಟು ಧರಿಸುತ್ತಿದ್ದಾರೆ. ಅವನದು ಫಿಟ್ ಪ್ಯಾಂಟು; ಇವಳದು ಬೆಲ್ ಬಾಟಂ. ಅವಳು ಎತ್ತರವಾಗಿ ಕಾಣಲು ಹೈಹೀಲ್ಡ್ ಶೂಜ. ತುರುಬು ಕಟ್ಟಲು ಬನ್ನು ಉಪಯೋಗಿಸುತ್ತಾಳೆ. ಮನೆಯುದ್ದ ಬೆಳೆದು ನಿಂತಿದ್ದರೂ ಆಗಾಗ ಮಿನಿಸ್ಕರ್ಟನ್ನೂ ಹಾಕುತ್ತಾಳೆ. ಪ್ಲಾಸ್ಟಿಕ್ ಹೂ ಇತ್ಯಾದಿ ಕೃತಕ ಆಭರಣಗಳನ್ನು ಬಳಸುತ್ತಾಳೆ. ಅವನು ಜಂಪರ ಅರಬಿ ಶರ್ಟ (ಗುರುಶರ್ಟ) ಹೊಲಿಸಿದ್ದಾನೆ; ಹೆಂಗಸರ ಪತ್ತಲವನ್ನೇ ಲುಂಗಿಯನ್ನಾಗಿ ಪರಿವರ್ತಿಸಿಕೊಂಡಿದ್ದಾನೆ. ಇಲಿಮೂತಿಯ ಶೂಜ (ಪಾಯಿಂಟೆಡ್) ಮೆಟ್ಟುತ್ತಾನೆ. ಹೆಣ್ಣು ಗಂಡಿನ ಭೇದ ಅರಿಯಲು ಸಾಧ್ಯವಾಗದ ರೀತಿಯ ಈ ವೇಷ ಭೂಷಣಗಳನ್ನು ಕಂಡು ಹಳೆಯ ಕಾಲದ ಅಜ್ಜಿ ಬೆರಗಾಗಿದ್ದಾಳೆ. ಅವಳಿಗೆ ಬಾಬು ಯಾರು, ಬೇಬಿ ಯಾರು ಎಂದು ಗುರುತಿಸಲು ಸಾಧ್ಯವಾಗದೆ ಗೊಂದಲಕ್ಕಿಟ್ಟುಕೊಂಡಿದೆ. ಅದಕ್ಕಾಗಿ ಬೇಬಿಯನ್ನು ಬಾಬು ಎಂದೂ ಬಾಬುನನ್ನು ಬೇಬಿ ಎಂದೂ ತಪ್ಪುತಪ್ಪಾಗಿ ಕರೆಯುತ್ತಾಳೆ.

ಒಮ್ಮೆ ಅಜ್ಜಿ ಬಾಬುನನ್ನು 'ಏನಿದು ಹೀಂಗ ಹೆಂಗಸರಂಗ ಕೂದಲ ಬಿಟ್ಟಿ' ಎಂದು ಕೇಳುತ್ತಾಳೆ. ಅವನು 'ಇದು ಹಿಪ್ಪೀ. ತ್ರೇತಾಯುಗದಿಂದ ನಡಕೊಂಡ ಬಂದದ. ರಾಮ-ಕೃಷ್ಣ ಮೊದಲಾದ ದೇವರು ಹೀಂಗ ಉದ್ದ ಕೂದಲ ಬಿಡತಿದ್ದರಂತೆ' ಎಂದು ಹಿಪ್ಪೀ ಪರಂಪರೆಯನ್ನು ಹೆಮ್ಮೆಯಿಂದ ವಿವರಿಸುತ್ತಾನೆ. ತಾಯಿ ಇಬ್ಬರ ಪ್ಯಾಂಟಿನ ಭೇದ ತಿಳಿಯದೆ ಹಿಂಡಿ ಹಾಕಿದಾಗ 'ನಿನ್ನ ಮಡಿ ಸೀರಿ ಹಿಂಡಿದಾಂಗ ನನ್ನ ಟೆರಿಲಿನ್ ಪ್ಯಾಂಟ ಹಿಂಡಿದರ ನಮ್ಮ ಪ್ರಾಣಾನ ಹಿಂಡಿದಾಂಗ ಆಗುತ್ತ' ಎನ್ನುತ್ತಾನೆ. ಎಲ್ಲರಿಗಿಂತಲೂ ಎತ್ತರವಾದ ಹೈಹೀಲ್ಡ್ ಶೂಜ ಹಾಕಿಕೊಂಡು 'ನನ್ನ ಹೈಟು ಐದು ಫೂಟು ನಾಲ್ಕು ಇಂಚು. ನಮ್ಮ ಕ್ಲಾಸಿನೊಳಗ ನನ್ನದೇ ಎತ್ತರ ಹೆಚ್ಚು' ಎನ್ನುತ ಉಬ್ಬುತ್ತ ಬಂದ ಬೇಬಿಗೆ ಅಜ್ಜಿ 'ಹಂಗರ ನೀ ಮನ್ಯಾಗಿದ್ದರ ಒಣಾಹಾಕೂ ಕೋಲ ಬ್ಯಾಡ' ಎಂದು ವ್ಯಂಗ ನುಡಿಯುತ್ತಾಳೆ. 'ಹೈಟ ಇದ್ದರ ಬ್ಯೂಟಿ ಹೆಚ್ಚು. ಮಿಸ್ ಇಂಡಿಯಾ ಆಗಬೇಕಾದ್ರ ಹೈಟೇ ಮುಖ್ಯ' ಎಂದು ಅದರ ಮಹತಿಯನ್ನು ತಿಳಿಸುತ್ತಾಳೆ ಬೇಬಿ. 'ಮನಿ ಎತ್ತರ ಬೆಳೆಯೋದು ಮ್ಯಾಲ ಮಿನಿಸ್ಕರ್ಟ ಹಾಕೊಂಡು ಏನ ಛಂದ?' ಎಂದು ತಾಯಿ ಆಕ್ಷೇಪಿಸಿದರೆ, 'ದೇವರು ಚೆಲುವಿಕೆ ಮೈತುಂಬ ಅಂಗಾಂಗಗಳೊಳಗ ತುಂಬಿರತಾನಂತ. ಸಂಪೂರ್ಣ ಸೌಂದರ್ಯ ಗೊತ್ತಾಗಬೇಕಾದರ' ಎಂದು ಬೇಬಿ ಅರ್ಧಕ್ಕೆ ನಿಲ್ಲಿಸಿದ ಮಾತನ್ನು ಬಾಬು 'ಬಟ್ಟೆಗಳನ್ನು ಮಿನಿಮಮ್ ವಾಪರಸಬೇಕು ಹೌದಲ್ಲ' ಎಂದು ಪ್ರಶ್ನಾರ್ಥಕದಲ್ಲಿ ಮುಗಿಸುತ್ತಾನೆ. ಅಜ್ಜಿ ಮಧ್ಯೆ ಪ್ರವೇಶಿಸಿ 'ಫ್ಯಾಶನ್ನು ಫ್ಯಾಶನ್ನು ಅಂತ

ಗಂಡಸರು ಹೆಂಗಸರಂಗ ಕೂದಲಾಬಿಡಾದು, ಹೆಂಗಸರು ಗಂಡಸರಂಗ ಕೂದಲಾ ಕತ್ತರಸಾದು, ಹೆಂಗಸರು ಚಣ್ಣಾ ಹಾಕಾದು, ಗಂಡಸರು ಜಂಪರ ತೊಡಾದು, ಹೆಂಗಸರು ಅಸಯ್ಯಾಗಿ ಕೂದ್ಲ ಕತ್ತರಸಾದು. ಮತ್ತೆ ತುರುಬುಕಟ್ಟಲಿಕ್ಕೆ ಅಂತ ತ್ಯಾಪಿಹಚ್ಚಾದು ಇದೇನ ಫ್ಯಾಶನ್ನೋ' ಎಂದು ಟೀಕಿಸುತ್ತಾಳೆ. ತಃದೆ 'ಇದು ಕೃತಯುಗ ಅಲ್ಲ, ಕೃತಕಯುಗ. ಇಂದಿನ ಊಟ, ಉಡಿಗಿ, ಪ್ರೀತಿ, ಪ್ರೇಮ ಎಲ್ಲಾ ಕೃತ್ರಿಮ. ಇಂದಿನವರು ಅರ್ಧನಾರೀ ನಟೇಶ್ವರರು' ಎಂದು ಹೇಳಿ, ಇಂದಿನ ಲಿಂಗ ಪರಿವರ್ತನ ಪ್ರಕರಣ, ಗಂಡಸು ಗರ್ಭ ಧರಿಸುವ ವಿಷಯ, ಮುಂದಾಗಬಹುದಾದ ಅತಿಮಾನಸ ಅವತಾರ, ಅದರಲ್ಲಿ ಸ್ತ್ರೀ-ಪುರುಷರ ಭೇದ ಇಲ್ಲದೆ ಇರುವಂಥ ದೇಹ ರಚನಾ ನಿರ್ಮಾಣದ ಸಂಗತಿಗಳನ್ನು ತಿಳಿಸುತ್ತಾನೆ. ಅಜ್ಜಿ ಈ ಮಾತುಗಳನ್ನು ಕೇಳಿ 'ಇದು ಅದರ ತಯಾರಿ ಅಂತ ಕಾಣಸ್ತದ' ಎಂದು ಉದ್ಗಾರ ತೆಗೆದು ಮನ ನೊಂದು 'ಇಂಥಾದೆಲ್ಲಾ ನೋಡೂದಕಿಂತ ನನ್ನ ಕಣ್ಣ ಮುಚ್ಚಿಪ್ಪ' ಎಂದು ದೇವ ರಲ್ಲಿ ಮೊರೆಯಿಡುತ್ತಾಳೆ.

ಒಂದು ದಿವಸ ಸುಮಾರು ಇಪ್ಪತ್ತೈದು ವರ್ಷದ ವ್ಯಕ್ತಿಯೊಬ್ಬ ಬಣ್ಣ-ಬಣ್ಣದ ಪತ್ತಲವನ್ನೇ ಲುಂಗಿಯಾಗಿ ಸುತ್ತಿಕೊಂಡು, ನಡುವೆ ಬೈತಲೆ ತೆಗೆದು ಕೊಂಡು ಹೆಗಲಮೇಲೆ ಕೂದಲು ಇಳಿಬಿಟ್ಟು ಒಂದು ಗುರುಶರ್ಟು ಹಾಕಿ, ಮೈಮೇಲೆ ತೆಳ್ಳನೆಯ ನಕ್ಷೆಯ ಸುಂದರ ಕಾಶ್ಮೀರಿ ಶಾಲು, ಕಣ್ಣಿಗೆ ಕಪ್ಪುಕನ್ನಡ, ಬಲಗೈಯಲ್ಲಿ ಒಂದು ಸ್ಟೀಲ್ ಬಳೆ ಧರಿಸಿಕೊಂಡು ಲಿಂಗಭೇದ ಗುರುತಿಸಲು ಸಾಧ್ಯವಾಗಧ ರೀತಿ ಯಲ್ಲಿ ಹಿಪ್ಪಿಯುಗದ ಅಪರಾವತಾರನಾಗಿ ಬಂದು ಬಾಗಿಲ ಬಡಿಯುತ್ತಾನೆ. ಅಜ್ಜಿ ಬಾಗಿಲ ತೆಗೆದು ಆಕಾರ ನೋಡಿ ಹೆಣ್ಣೆಂದು ಭಾವಿಸಿ 'ಒಳಗ ಬಾರವ್ವ' ಎಂದು ಸ್ವಾಗತಿಸಿ, ಮುತ್ತೈದಿ ಅರಿಷಿಣ ಕುಂಕುಮಕ ಬಂದಿರಬೇಕೆಂದು ತಿಳಿದು ಸೊಸೆ ಯನ್ನು ಕೂಗಿ ಕರೆಯುತ್ತಾಳೆ. ವ್ಯಕ್ತಿ 'ಅಲ್ಲ' ಎನ್ನುತ್ತಾನೆ. ಅಜ್ಜಿ ಮತ್ತೆ ದಿಟ್ಟಿಸಿ ನೋಡಿ, 'ನೀವು ಗಂಡಸರೇನಪ್ಪ, ಕಿಟ್ಟಣ್ಣ ಬೇಕೇನು ?' ಎಂದು ಕೇಳುತ್ತಾಳೆ. 'ಉಹುಂ' 'ಹಂಗಾರ ಬೇಬಿ ಗೆಳತೇನು ?' 'ಅಲ್ಲ' 'ಬಾಬೂನ ಗೆಳೆಯಾನೇನು ?' 'ಅಲ್ಲಲ್ಲ' 'ಮತ್ತೆ ಹಂಗಾರ ನನ್ನ ಕಡಿಗೆ ಬಂದಿದೇನು ?' 'ಇಲ್ಲ ಬೇಬಿ ಫ್ರೆಂಡು' ಎಂದ. ಅರ್ಥವಾಗದ ಅಜ್ಜಿ ಸೊಸೆಯನ್ನು ಕರೆದಳು. ಆಕೆಗೂ ಗುರುತಿಸಲಾಗಲಿಲ್ಲ. ಮಗನನ್ನು ಕರೆದಳು. ಆತನಿಗೂ ಗುರುತು ಹತ್ತಲಿಲ್ಲ. ಬಾಬು ಬಂದು ನೋಡಿದ. ಅವನಿಗೂ ಪರಿಚಯ ಸಿಗಲಿಲ್ಲ. ಕೊನೆಗೆ ಬೇಬಿ ಬಂದು ನೋಡಿ ಗುರುತು ಹಿಡಿದು 'ಹಲೋ, ಇವರು ನನ್ನ ಫ್ರೆಂಡು' ಎಂದು ತಿಳಿಸಿದಳು. ಅರ್ಥವಾಗದ ಬಾಬು 'ಜಂಟಲ್‌ಮೆನ್ನೋ, ಜಂಟಲ್ ಉಮೆನ್ನೋ' ಎಂದು ಪ್ರಶ್ನಿಸಿದ. 'ಬಾಯ್ ಫ್ರೆಂಡು' ಎಂದು ಬೇಬಿ ಉತ್ತರಿಸಿದಳು. 'ನಿನ್ನ ಬಾಯ್‌ಫ್ರೆಂಡು ನಮಗೆಲ್ಲ ಒಳ್ಳೆ

ಹಿಪ್ನಾಟಿಜಂ ನೋಡು’ ಎಂದ ಬಾಬು. ‘ಹಿಪ್ನಾಟಿಜಂ ಅಲ್ಲ, ಹಿಪ್ಪೀನಾಟಿಜಂ’ ಎಂದು ತಂದೆ ಹೊಸ ಪದ ನಿರ್ಮಿಸಿದರು. ಅಲ್ಲದೆ ಮುಂದುವರಿದು ‘ಹೀಂಗ ನಮ್ಮ ಬಾಬುನ ಗರ್ಲ ಫ್ರೆಂಡು ಬಂದಬಿಟ್ಟರ ... ಎಂದ. ತಾಯಿ– ‘ಅರಿಷಿಣ, ಕುಂಕುಮ ಹಚ್ಚೀ ಕಳಸಬಹುದು’ ಎಂದಳು. ಅಜ್ಜಿ – ‘ಹೂಂ ಉಡಿ ಸುದ್ದಾ ತುಂಬಿ ಕಳಸಬಹುದು’ ಎಂದು ನುಡಿದು, ‘ಏನ ವಿಪರೀತ ಕಾಲ ಬಂತಪ’ ಎಂದು ವಿಷಾದಿಸುತ್ತಾಳೆ. ಹೀಗೆ ಫ್ಯಾಶನ್ ಗೊಂದಲದ ಅತಿರೇಕದೊಂದಿಗೆ ನಾಟಕ ಮುಕ್ತಾಯವಾಗುತ್ತದೆ.

ಎರಡೂ ನಾಟಕಗಳು ಆಧುನಿಕ ಯುಗದ ಮೇಲೆ ಕ್ಷ ಕಿರಣ ಬೀರುತ್ತವೆ. ಹಳತು-ಹೊಸತುಗಳ ಮಧ್ಯದ ಸೆಣಸಾಟದಲ್ಲಿ ಹೊಸತರ ಕೈ ಮೇಲಾಗುತ್ತದೆ. ಹಳೆಯ ಕಾಲ ತನ್ನ ವೈಶಿಷ್ಟ್ಯಗಳನ್ನು ಕಳೆದುಕೊಂಡು, ಹೊಸಯುಗದಲ್ಲಿ ಲೀನವಾಗುತ್ತದೆ. ಬದಲಾದ ವಾತಾವರಣ ಸಂಪ್ರದಾಯಸ್ಥ ಜನರಿಗೆ ಹಿಡಿಸದಿದ್ದರೂ ಆದ ಪರಿವರ್ತನೆಗೆ ತಕ್ಕಂತೆ ಹೊಂದಿಕೊಂಡು ಹೋಗುವುದು ಅನಿವಾರ್ಯವಾಗುತ್ತದೆ.

ಧಾರವಾಡ ಕನ್ನಡದ ಹದವಾದ ಬಳಕೆ, ತಿಳಿಹಾಸ್ಯದ ಝಳುಕು, ಸಂಭಾಷಣೆಯ ಚುರುಕು, ಎರಡೂ ನಾಟಕಗಳಲ್ಲಿ ಸಮಪ್ರಮಾಣದಲ್ಲಿ ವ್ಯಕ್ತವಾಗಿ ಕೇಳುಗರ ಕಿವಿಗೆ ಹಿತವನ್ನು ಒದಗಿಸುತ್ತವೆ. ಜೊತೆಗೆ ಅವುಗಳನ್ನು ರಂಗದ ಮೇಲೆ ಪ್ರದರ್ಶಿಸಿದಾಗ, ಪಾತ್ರಗಳ ವಿಶಿಷ್ಟ ವೇಷ-ಭೂಷಣ, ಹಾವಭಾವಗಳು ಅಷ್ಟೇ ಪ್ರಮಾಣದಲ್ಲಿ ಕಣ್ಣಿಗೆ ಆನಂದವನ್ನು ನೀಡುವ ಗುಣಗಳನ್ನೂ ಪಡೆದುಕೊಂಡಿವೆ. ಆದರಲ್ಲಿಯೇ ಎರಡನೆಯ ನಾಟಕ ಬಾನುಲಿಗಿಂತ ರಂಗದ ಮೇಲೆಯೇ ಹೆಚ್ಚು ಪರಿಣಾಮಕಾರಿಯಾಗಿ ಯಶಸ್ಸನ್ನು ಗಳಿಸುತ್ತದೆ. ಎರಡೂ ನಾಟಕಗಳಲ್ಲಿ ಎನ್ಕೆ ವೈಶಿಷ್ಟ್ಯಗಳಾದ ಹಾಸ್ಯ, ವ್ಯಂಗ್ಯ, ವಿಡಂಬನೆ, ಸಮಾಜವಿಮರ್ಶೆ ಎದ್ದು ಕಾಣುತ್ತದೆ.



# 'ಪ್ರಾಣ ತುಂಬಿದ ಪಾತ್ರ'

## ದೇಶಪಾಂಡೆ ಸುಬ್ಬರಾಯ

೧

ನನ್ನ ಅಪಾರ ಜನತೆಯ ಅಗಾಧ ಬೇಡಿಕೆಗನುಗುಣವಾಗಿ ಮೂಡಿ ಬರುವ (ಒಮ್ಮೊಮ್ಮೆ ಕನಿಕರ ಹುಟ್ಟುವಂಥ) ಹಾಸ್ಯಲಹರಿ, ಹರಟೆ, ಮನೋರಂಜನೆ, ನಾಟಕ ಇತ್ಯಾದಿಗಳ ನಿರ್ಜೀವ ಸಪ್ಪಳಗಳಾಚೆ ಒಮ್ಮೊಮ್ಮೆ ಥಕ್ಕನೆ ಜೀವ ಮಿಡಿಯುವ ಸಂಕೇತಗಳ ಶ್ರವಣ; ಒಮ್ಮೆಲೇ ಶವಕ್ಕೆ ಉಸಿರಾಟ. ಆಗ, ಹೆಚ್ಚು ಸಪ್ಪಳ, ಕಡಿಮೆ ಸತ್ವದ ಈ 'ಶಬ್ದಗಳ ನಿತ್ಯ ಸಂತೆ'ಯ ಗೊಂದಲಗಳ ಮಧ್ಯದಲ್ಲಿ ತೇಲಿ ಬರುವ ಒಳ್ಳೆಯ ಧ್ವನಿಗಳಲ್ಲಿ ಸಿಂಹದ ಪಾಲು 'ಎನ್ಕೆ' ಅವರದು. * ಬಾನುಲಿಯಲ್ಲಿ ಬರುವ ಅವರ ಈ ಆಕರ್ಷಕ ಧ್ವನಿಯ ಹಿಂದಿರಬಹುದಾದ ಸೂಕ್ಷ್ಮ ಸಂವೇದನೆ, ಅಭ್ಯಾಸಾರ್ಹ ವೈಚಾರಿಕತೆಗಳ ಬಗ್ಗೆ ತಿವಿದಷ್ಟು ಸ್ಪಷ್ಟವಾದ ಎರಡು ಮೂರು ಉತ್ತಮ ದಾಖಲೆಗಳಲ್ಲಿ ಒಂದು 'ಪ್ರಾಣ ತುಂಬಿದ ಪಾತ್ರ.'

೨

ನಾಟಕದಲ್ಲಿ ಒಡೆದು ಕಾಣುವ ವೈಶಿಷ್ಟ್ಯ : ಅದರ ತೀವ್ರವಾದ ಪ್ರಾಮಾಣಿಕ ಬೆಳವಣಿಗೆ, ಅದಕ್ಕೂ ಮುಖ್ಯವಾಗಿ, ನಾಟಕದ ರಭಸಕ್ಕೆ ಕುಮ್ಮಕ್ಕು ಕೊಡುತ್ತಲೇ ಜೊತೆಯಲ್ಲಿಯ ತಟಸ್ಥ (ಮ್ಯಾನೇಜರ, ನಾಟಕಕಾರ), ತೆವಳುವ (ಮುನಿಯಮ್ಮ), ದುರಂತಕ್ಕಿಳಿಯುವ (ಮಾಲಿಕ) ಪಾತ್ರಗಳು ಮತ್ತು ತನ್ನ ಮಧ್ಯೆ :

---

೧. ಈ ನಾಟಕವನ್ನು ಕುರಿತು ಕೆಲ ಮಾತುಗಳನ್ನು ಬರೆಯುವ ಮೊದಲು ಈ ಬರಹಕ್ಕೆ, ಇಟ್ಯಾಲಿಯನ್ ಬರಹಗಾರ 'Pirandelo Luigi' (1867 - 1936) ಯ Six Characters In Search of an Author (1921) ನಾಟಕ ಕಿಂಚಿದಂಶದಲ್ಲಾದರೂ ಸ್ಫೂರ್ತಿ ಇತ್ತಿದ್ದರೂ ಈ ನಾಟಕ ತೀರ ಭಿನ್ನ, ಸ್ವತಂತ್ರ ಎಂಬ ಅರಿವು ಕೂಡ.

ಮಾನಸಿಕತೆ ಮತ್ತು ವೈಚಾರಿಕತೆಗಳ ನಡುವೆ ತಳಮಳಿಸುವ (ಮೇನಕ, ರತ್ನ) ಪಾತ್ರಗಳನ್ನು ಮೀರಿ ಬೆಳೆಯುತ್ತ, ಬದುಕಿನ ಒಂದು ದೊಡ್ಡ ತಿರುವನ್ನೇ ದಾಟಿ, ತನ್ನ 'ಪಾತ್ರ'ಕ್ಕೆ 'ಪ್ರಾಣ' ತುಂಬಿದ ಕುಮಾರನ ವ್ಯಕ್ತಿತ್ವದ ಬದಲಾವಣೆ ಮತ್ತು ಬೆಳವಣಿಗೆ.

ಅಂತೆಯೇ, ಒಂದರಿಂದ ಇನ್ನೊಂದು ತೀರ ಭಿನ್ನವಾದ ಚಲನವಲನವನ್ನು ಬೆಳವಣಿಗೆಯ ತೀವ್ರತೆಯನ್ನು ಹೊಂದಿದ ಇತರ ಪಾತ್ರಗಳೂ, ತಮ್ಮೊಳಗಿನ ಅನಿವಾರ್ಯ ಬಿರುಕುಗಳನ್ನು ವಿಸ್ತರಿಸುತ್ತಲೇ ಉಳಿದ ಪಾತ್ರಗಳಿಗೆ, ವಿಶೇಷವಾಗಿ ಮೇನಕೆಯ ಅಸಹಾಯಕತೆಯನ್ನು ಅರ್ಥೈಸಿಕೊಳ್ಳಲು, ಕುಮಾರನ ರಭಸದ ಬೆಳವಣಿಗೆಯನ್ನೂ, ಮಹತ್ವದ ತಿರುವನ್ನೂ ತಿಳಿಯಲು ದಟ್ಟವಾದ ಒತ್ತು ಕೊಡುತ್ತ, ತಮ್ಮ ಕುಬ್ಜ ವ್ಯಕ್ತಿತ್ವಕ್ಕೆ ಎಷ್ಟೋ ಮಿಗಿಲಾದ ಎತ್ತರಕ್ಕೇರಲು ನಾಟಕಕ್ಕೆ ಪುಷ್ಟಿಯನ್ನು ನೀಡುವವು ಇನ್ನೊಂದು ವೈಶಿಷ್ಟ್ಯ.

೨

ಕುಮಾರ ತುಳಸೀದಾಸನ ಪಾತ್ರ ವಹಿಸುತ್ತ ಸಂತನೇ ಆಗಿ ಪರಿವರ್ತಿಸಿ ಬಿಡುವ ಮಹತ್ವದ ಹೊರಳುವಿಕೆಗೆ ಕಾರಣ: ಆತ, ಆ 'ಪಾತ್ರ'ಕ್ಕೆ ತನ್ನನ್ನು ಇಡಿಯಾಗಿ ಅರ್ಪಿಸಿಕೊಂಡಿದ್ದ ಪ್ರಾಮಾಣಿಕತೆ. ಬರಿಯ ಭೌತಿಕ ಮಟ್ಟದಲ್ಲಲ್ಲದೆ, ಆತನ ವ್ಯಕ್ತಿತ್ವದ ಮಾನಸಿಕ (ಭಾವನಾತ್ಮಕ) ಮತ್ತು ವೈಚಾರಿಕ ಮಜಲುಗಳಲ್ಲೂ ಕೂಡ, 'ತುಳಸೀದಾಸ' ನ ವ್ಯಕ್ತಿತ್ವದ ಪೂರ್ತಿ ಆಹ್ವಾನದ ಆವರಣ. ಎಂತಲೇ ಕುಮಾರನಲ್ಲಿ, 'ಕುಮಾರತ್ವ'ದ ಸ್ಥಳದಲ್ಲಿ 'ತುಳಸೀದಾಸ'ನ ಪಾತ್ರದ ವ್ಯಕ್ತಿತ್ವದ್ದೇ ಮಿಡಿತ, ಯೋಚನೆ ಮತ್ತು ಬದುಕು. ಪರಿಣಾಮ: 'ರಂಗ'ದ ಈ ತಾತ್ಕಾಲಿಕ, ಆದರೆ ಭದ್ರ ಅಸ್ತಿತ್ವ. 'ತುಳಸೀದಾಸನ' ವ್ಯಕ್ತಿತ್ವದ ಖಾಯಂ ಪ್ರವೇಶ ಮತ್ತು ಬುನಾದಿಗೆ ಕಾರಣವಾದಂತೆ 'ಕಮಾರತ್ವ'ದ ಮುಕ್ತಿಗೂ ಕಾರಣ, ತುಳಸಿದಾಸನ 'ಪಾತ್ರಕ್ಕೆ' 'ಪ್ರಾಣ' ಭರಣ.

ಆದರೆ ಮೇನಕೆಯ 'ಮೇಲೇರುವಿಕೆ' ಬರಿಯ ಕನಸಾಗಿ, ದ್ವಂದ್ವವಾಗಿ ಕುಸಿಯುವ ಕಾರಣ: ಕುಮಾರನಂತೆ, ತನ್ನ 'ರತ್ನ'ಳ ಪಾತ್ರಕ್ಕೆ ಪೂರ್ತಿಯಾಗಿ ಒಪ್ಪಿಕೊಂಡು ಅದನ್ನು ಆಹ್ವಾನಿಸಿಕೊಳ್ಳುವದಕ್ಕೆ ಸಾಧ್ಯವಾಗದಿರುವ ಆಕೆಯ ದೌರ್ಬಲ್ಯ. ಕೇವಲ ಭೌತಿಕವಾಗಿ 'ರತ್ನ'ಳ ಪೋಷಾಕನ್ನು ತೊಟ್ಟ ಅವಳು ಮಾನಸಿಕವಾಗಿ ಮತ್ತು ವೈಚಾರಿಕವಾಗಿ 'ರತ್ನ'ಳನ್ನು ಮೀಡಿಯದಂತೆ ತಡೆಯುವ ಗೋಡೆ: ಆ ಹಂತಗಳಲ್ಲೂ (ಮಾನಸಿಕ, ವೈಚಾರಿಕ) ಕೂಡ ಮೇನಕೆಯೊಂದಿಗೆ ಸೊಲ್ಲೆತ್ತುತ್ತಿರುವ ಮುನಿಯಮ್ಮನ ಅಸ್ತಿತ್ವ, ಮತ್ತು ಇನ್ನೂ ಮುಖ್ಯವಾಗಿ ಆ

ಮಟ್ಟಗಳಲ್ಲಿಯ ಮುನಿಯಮ್ಮನ ಬೇರುಗಳನ್ನು ಕಿತ್ತೆಸೆಯಲಾಗದ ಮೇನಕೆಯ ಅಸಾಮರ್ಥ್ಯ. ಎಂತಲೇ, ಮೇನಕೆಯನ್ನು 'ಮನುಷ್ಯತ್ವ'ದಿಂದ 'ದೇವತ್ವ'ಕ್ಕೆ ಮೇಲಕ್ಕೆತ್ತಿಕೊಳ್ಳುವ ರತ್ನಳ ಗುದ್ದಾಟದಷ್ಟೇ ನಿಖರ, ತನ್ನ 'ನೀಚ' ಅಸ್ತಿತ್ವಕ್ಕಾಗಿ ಮುನಿಯಮ್ಮನ 'ಪಶುತ್ವ'ಗೈವ ಹೋರಾಟ. ಆದರೆ, ಕೊನೆಯಲ್ಲಿ, ಧಾಳಾಗಿ ಉರಿದು ಒಮ್ಮೆಲೇ ನಂದುವ ದೀಪದಂತೆ, ತನ್ನ 'ಪಶುತ್ವ'ದೊಂದಿಗೆ ಮಾಯವಾದ ಮುನಿಯಮ್ಮನ ಬೇಡಿಗಳಿಂದ ಮೇನಕೆಗೆ ಬಿಡುಗಡೆ ಮತ್ತು 'ದೇವತ್ವ'ದ ಕರೆಗೆ ಓಗೊಡುವ ನಿರ್ಧಾರ ಕೈಕೊಳ್ಳಲು ಅನುಕೂಲ.

"ಇದೋ ನಿನ್ನ ನೆರಳಾಗಿ ಬಂದೆ
ನಾನು ನಿನ್ನ ಪಾತ್ರ, ನೀನು ನನ್ನ ಪ್ರಾಣ
'ಪ್ರಾಣ ತುಂಬಿದ ಪಾತ್ರ'"

ರತ್ನಳ 'ಪಾತ್ರ'ಕ್ಕೆ ನ್ಯಾಯವಿತ್ತು ಅದನ್ನು ಪೂರ್ತಿಯಾಗಿ ಬದುಕಲಾರದ ಮೇನಕೆಯ ದೌರ್ಬಲ್ಯಕ್ಕೆ ಇನ್ನೊಂದು ಕಾರಣ, ಕುಮಾರನಲ್ಲಿಯ 'ತುಳಸೀದಾಸ' ನಿಗಿಂತಲೂ 'ಕುಮಾರತ್ವ'ವನ್ನೇ ಗಾಢವಾಗಿ ಆತುರಗೊಂಡಿರುವ ಆಕೆಯ ಮೋಹ.

ಕೊನೆಯ ದೃಶ್ಯದಲ್ಲಿ ರತ್ನ,
"ಕುಮಾರನ ಮಾತು ಮರೆತುಬಿಟ್ಟೆಯಾ?"
ಎಂದು ಕೇಳಿದಾಗ, ಮೇನಕೆ,
"ಇಲ್ಲಿಲ್ಲ, ಕುಮಾರನನ್ನು ಮರೆತಿಲ್ಲ..."
ಎಂದೇ ಹೇಳುತ್ತಾಳೆ.

೪

ಇಷ್ಟಾಗಿಯೂ, ವ್ಯಕ್ತಿತ್ವಗಳ ದ್ವಂದದಲ್ಲಿ ಕುಮಾರನ ಗೆಲುವನ್ನು ಮತ್ತು ಮೇನಕೆಯ ಸೋಲನ್ನು ತೀರ್ಮಾನಿಸುವ ಮುಂಚೆಯೇ ಇನ್ನೊಂದು ಅಂಶದ ಗಮನ ಹಿತಕರ.

ವ್ಯಕ್ತಿತ್ವಗಳ ಇಲ್ಲಿಯ ಸೋಲುಗೆಲುವು, ಈ ನಾಟಕದಲ್ಲಿಯ ಕಂಪ್ನಿ ನಾಟಕಕಾರ ಒಂದೆಡೆಗೆ ಸೂಚಿಸುವಂತೆ 'ಸತ್ವ, ರಜಸ್ ಮತ್ತು ತಮೋ' ಗುಣಗಳ 'ಸೋಲು ಗೆಲುವೂ' ಹೌದು.

ತುಳಸೀದಾಸನ ಪಾತ್ರ ವಹಿಸುವದಕ್ಕೆ ಮುಂಚೆಯೇ ಕುಮಾರ, ತಮೋ ಗುಣವನ್ನು ಮೆಟ್ಟಿನಿಂತ 'ಸುಸಂಸ್ಕೃತ'. ಎಂತಲೇ 'ಕುಮಾರ' ಮತ್ತು

‘ತುಳಸೀದಾಸ’ ವ್ಯಕ್ತಿಗಳ ದ್ವಂದ್ವ, ರಜಸ್ ಮತ್ತು ಸತ್ವಗಳ, ಕೇವಲ ದ್ವಿಪಕ್ಷೀಯ ದ್ವಂದ್ವ ಮಾತ್ರ. ಈಗ ರಜಸ್ಸೊಂದನ್ನೇ ಎದುರಾಳಿಯಾಗಿ ಪಡೆದ ಸತ್ವಕ್ಕೆ, ಎಂದರೆ ‘ತುಳಸೀದಾಸ’ನ ವ್ಯಕ್ತಿತ್ವಕ್ಕೆ ಜಯಘೋಷ ಸುಲಭ.

ಆದರೆ ಮೇನಕೆಯಲ್ಲಿ, ತನ್ನ ರಜಸ್ಸಿನೊಟ್ಟಿಗೆ, ರತ್ನಳ ಸತ್ವ ಮತ್ತು ಮುನಿ-ಯಮ್ಮನ ತಮಸ್‌ಗಳ ಒಟ್ಟೊಟ್ಟಿಗೆ ಅಸ್ತಿತ್ವ. ಎಂತಲೇ ವ್ಯಕ್ತಿತ್ವದ ಹೋರಾಟ ಇಲ್ಲಿ ತ್ರಿಪಕ್ಷೀಯ. ಪರಿಣಾಮ : ತಮ ಮತ್ತು ರಜಸ್‌ಗಳ ಎದುರಾಳಿದ್ವಯ ಗಳನ್ನು ಹೊಂದಿದ ಸತ್ವಕ್ಕೆ, ಈ ಹೋರಾಟದಲ್ಲಿ ಸೋಲು, ‘ರತ್ನ’ಳ ವ್ಯಕ್ತಿತ್ವಕ್ಕೆ ಧಕ್ಕೆ.

ಈ ದೃಷ್ಟಿಯಿಂದ ನಾಟಕದ ಕೊನೆಯಲ್ಲಿ ‘ಸತ್ವ’ಕ್ಕೆ ಅನುಕೂಲವಾಗಿ ನಿರ್ಣಯ ಕೈಕೊಳ್ಳುವ ಮೇನಕೆಯ ದ್ವಂದ್ವ : ಮುಂಬರುವ ‘ರತ್ನ’ಳ ವ್ಯಕ್ತಿತ್ವದ ಗೆಲುವು ಮತ್ತು ಆಕೆಯ (ಮೇನಕೆಯ) ಪಾತ್ರದ ಬಹು ಪ್ರಮುಖವಾದ ಹಂತ ಪ್ರಂಪರ ನಿದರ್ಶನ. ಅಸಂಸ್ಕೃತ, ತಮೋಗುಣದ ಮುನಿಯಮ್ಮನ ಅಸ್ತಿತ್ವವನ್ನು ಮೆಟ್ಟಿ ನಿಲ್ಲುವ ಮೇನಕೆಯ ಈ ನಿರ್ಧಾರ ಆಕೆಯ ಬದುಕಿನಲ್ಲಿ ಮಿನುಗಲಿರುವ ಹೊಸ ‘ಮನ್ವಂತರ’ದ ಮುಖ್ಯ ಘಟ್ಟ; ‘ಪಾತ್ರ’ಗಳು ಮುಂದೆ ‘ಪ್ರಾಣ’ ತುಂಬಿ ಕಳಕಳಿಸಬಹುದಾದ ಸಂಕೇತ.

೫

ಒಂದು ದೃಷ್ಟಿಯಿಂದ ಕುಮಾರನ ಪಾತ್ರಕ್ಕೆ ತೀವ್ರ ಪ್ರತಿಕ್ರಿಯೆಯಾಗಿ ಬಂದಿರುವ ಪಾತ್ರ ಮಾಲಿಕ; ತುಳಸೀದಾಸನ ಪಾತ್ರಮಾಧ್ಯಮ ತಂದ ‘ಸತ್ವ’ದ ಪರಾಕಾಷ್ಠೆಗೇರಿ, ಬದುಕಿನಲ್ಲಿ ಹೊಸ ತಿರುವನ್ನು ಪಡೆದು, ‘ಪೂರ್ಣತ್ವ’ವನ್ನು ಪಡೆಯುವ ಕುಮಾರನ ಪರಿವರ್ತನೆಗೆ ತದ್ವಿರುದ್ಧವಾಗಿ ಅದೇ ಪಾತ್ರಮಾಧ್ಯಮ ದಿಂದಲೇ ‘ತಮೋ’ಗುಣದ ಪಾತಾಳಕ್ಕಿಳಿದು ‘ನೀಚತ್ವ’ ಮೆರೆಯುವ ಈತ.

ಬರಿಯ ಮುನಿಯಮ್ಮನ ಸಂಗಕ್ಕಷ್ಟೇ ಆರಂಭವಾಗಿದ್ದ ಕುಮಾರನ ಮೇಲಿನ ಆತನ ಸಿಟ್ಟು; ಕುಮಾರ ‘ತುಳಸೀದಾಸನ’ನ ಪಾತ್ರ ನಿರ್ವಹಿಸಲು ತೊಡಗಿದ ನಂತರ, ತೀರ ದ್ವೇಷವಾಗಿ ಬೆಳೆಯುತ್ತ, ಕುಮಾರನನ್ನು ಕಂಪನಿಯಿಂದ ಹೊರ ತಳ್ಳುವಷ್ಟು ನೀಚತನಕ್ಕಿಳಿದ ಮಟ್ಟಿಗೆ ಅವನತಿಗೆ ಪರಿವರ್ತಿತ.

ಒಬ್ಬನನ್ನು ‘ಮನುಷ್ಯತ್ವ’ದಿಂದ ‘ದೇವತ್ವ’ಕ್ಕೆ ಇನ್ನೊಬ್ಬನನ್ನು ‘ಪಶುತ್ವ’ಕ್ಕೆ ಪರಿವರ್ತಿಸುವದು ಒಂದೇ ಪಾತ್ರಮಾಧ್ಯಮ. ಅಸಂಗತ ಸತ್ಯ. ಆದರೆ ‘ಪಶುತ್ವ’ಕ್ಕೆ ತೀವ್ರವಾಗಿ ಕುಸಿಯುವ ಪಾತ್ರವೇ ‘ದೇವತ್ವ’ಕ್ಕೆ ಅಷ್ಟೇ ತೀವ್ರವಾಗಿ ಪುಟಿಯುವ

ಪಾತ್ರದ ಮೇಲೆ, ಅದರ ಗೆಲುವಿನ ಮೇಲೆ ವಿಶೇಷ ಬೆಳಕನ್ನು ಚೆಲ್ಲುವದೇ ಇಲ್ಲಿಯ ವೈಶಿಷ್ಟ್ಯ.

೬

ನಾಟಕ ಇಷ್ಟೊಂದು ಗಂಭೀರವಾಗಿ ಮನಸ್ಸನ್ನು ತಟ್ಟುವದಕ್ಕೆ ಕಾರಣ: ಗೊಂದಲವಿಲ್ಲದ ಸೂಕ್ಷ್ಮ ಭಾಷೆ. ಕೇಂದ್ರ ಪ್ರಜ್ಞೆಯನ್ನು ಪೋಷಿಸುತ್ತಲೇ, ತನ್ನ ಶರೀರಕ್ಕೆ ಮೀರಿದ ಅರ್ಥ–ವೈಶಿಷ್ಟ್ಯ ಸಂಪಾದಿಸುವ ಅದರ ತವಕ. ಎಂದರೆ ಭಾವನಾತ್ಮಕ ಕೇಂದ್ರ ಪ್ರಜ್ಞೆ ಇದ್ದೂ, ಮುಗ್ಧ, ದೊಡ್ಡ ದೊಡ್ಡ ಉಪದೇಶಾತ್ಮಕ ನುಡಿಗಳಿಂದ 'ಸನ್ನಿವೇಶ'ಗಳ ಸೊಬಗನ್ನು ಕೊಂದು, ಕಿವಿಗಳಿಗೆ ಶಿಕ್ಷೆಯಾಗಿಸದ ಭಾಷೆಯ ಸೊಬಗು.

ಪಾತ್ರಗಳ ಬೆಳವಣಿಗೆಯ ರಭಸ, ವೈಶಿಷ್ಟ್ಯಗಳಿಗನುಗುಣವಾಗಿ ಭಾಷೆ, ತಟಸ್ಥ ಪಾತ್ರಗಳ ಭಾಷೆ ಮೊದಲಿನಿಂದ ಕೊನೆಯವರೆಗೆ ಒಂದೇ ನಿಲುವಿನಲ್ಲಿದ್ದರೆ ಅಧೋಗತಿಗಿಳಿಯುವ ಪಾತ್ರಗಳ ಭಾಷೆ 'ಅಧೋಗತಿ'ಯನ್ನು ಮುಟ್ಟಿದ ಮುಖವಾಡವನ್ನು ಕಿತ್ತೆಸೆದಷ್ಟು ಸ್ಪಷ್ಟವಾಗಿ ಅಭಿನಯಿಸಿ ಹೇಳುತ್ತದೆ. (ಗಮನಿಸಿ: ಮಾಲಿಕ ಪಾತ್ರ. ಸಂಭಾಷಣೆ.) ಇನ್ನು ಬೆಳೆಯುವ ಪಾತ್ರಗಳ ಭಾಷೆಯ ಮೊನಚು, ಬಹುಶಃ ಈ ನಾಟಕದ ಇನ್ನೊಂದು ವೈಶಿಷ್ಟ್ಯ. (ಗಮನಿಸಿ: ಮುನಿಯಮ್ಮ, ಮೇನಕೆ ಮತ್ತು ರತ್ನರ ಪಾತ್ರ, ಸಂಭಾಷಣೆಗಳು.)

೭

ಈ ನಾಟಕದ ತಾಂತ್ರಿಕ ಯಶಸ್ಸು ಕೂಡ ತುಂಬ ಗಮನಾರ್ಹ. ಒಂದು ರೆಡಿಯೋ ನಾಟಕ ತನ್ನ ಅಳವಿಗೆ ಹಿಡಿದುಕೊಳ್ಳಬಹುದಾದಕ್ಕಿಂತಲೂ ಹೆಚ್ಚಿನದನ್ನು ಹಬ್ಬಿಸಲು ಪ್ರಯತ್ನಿಸಿದ ಲೇಖಕರು ಅದರಲ್ಲಿ ಸಾಕಷ್ಟು ಯಶಸ್ವಿ.

ರೆಡಿಯೋ ನಾಟಕದಲ್ಲಿ ವ್ಯವಸಾಯ ನಾಟಕ ಕಂಪ್ನಿ, ಕಂಪ್ನಿಯ ನಟವರ್ಗ, ನಾಟಕ ಕಂಪ್ನೀ ನಾಟಕ, (ರಂಗದ ಮೇಲೆ, ರಂಗದ ಹೊರಗೆ), ಕಂಪ್ನೀ ನಾಟಕದಲ್ಲಿಯ ಪಾತ್ರಗಳು, ನಟವರ್ಗದ ಆಂತರಿಕ ನಾಟಕ, ವೈಚಾರಿಕ ತುಮುಲ, ಭಾವನಾತ್ಮಕ ಸಂಘರ್ಷ ಹೀಗೆ ಒಂದರೊಳಗೊಂದು ಬೆಸೆಯುತ್ತ, ಪೋಣಿಸುತ್ತ ಹೋದರೂ, ತಾಂತ್ರಿಕವಾಗಿ, ನಾಟಕ ಎಡವದೆ, ಗೊಂದಲಕ್ಕೆಡೆಮಾಡಿಕೊಡದೆ, ಅರ್ಥಪೂರ್ಣವಾಗಿ ತನ್ನ ಸಮಸ್ತ ಗರಿಗೆದುರುವಿಕೆಯೊಂದಿಗೆ ಗುರಿಯತ್ತ ಧಾವಿಸುವದೇ ಒಂದು ಸೊಗಸು. ಒಂದು ರೀತಿಯಲ್ಲಿ ಲೇಖಕರು ತಾಂತ್ರಿಕವಾಗಿ ಹೊತ್ತಿರುವ ಜವಾಬ್ದಾರಿ, ಸಮಸ್ತ ಬಗೆಯ ತೊಂದರೆಗಳಿಗೂ ಮೀಸಲಾಯುವಂಥದು. ಒಂದೇ

ಪಾತ್ರ, ಎರಡು ಅಥವಾ ಮೂರು ಪಾತ್ರ-ಮುಖಗಳನ್ನು, ವಿವಿಧ ಸ್ತರಗಳಲ್ಲಿ ಕೆಲವೊಮ್ಮೆ ಒಂದೇ ಸಂದರ್ಭದಲ್ಲಿ ನಿರ್ವಹಿಸಬೇಕಾದ ಸನ್ನಿವೇಶಗಳು ಸಾಕಷ್ಟು. ಹಾಗಿದ್ದೂ ಈ ಪಾತ್ರಗಳ, ಸನ್ನಿವೇಶಗಳ ಸುಲಭ ಗುರುತಿಸುವಿಕೆಗೆ ಸಾಧ್ಯತೆ ಮೂಡಿಸಿದ್ದು ಭಾಷೆಯ ಜಾಣ್ಮೆ, ತಾಂತ್ರಿಕ ಕೌಶಲ. ( ನೋಡಿ: ಕುಮಾರ ಮತ್ತು ತುಳಸೀದಾಸ ಮತ್ತು ಮುನಿಯಮ್ಮ, ಮೇನಕೆ ಮತ್ತು ರತ್ನರ ಅನೇಕ ಪ್ರವೇಶಗಳು. ಆದರೆ ಇನ್ನೊಂದು ದೃಷ್ಟಿಯಿಂದ ಇಂಥ ನಾಟಕ ಪ್ರಯೋಗದಲ್ಲಿ ಪಾತ್ರ ನಿರ್ವಹಿಸುವ ನಟರ ವೈಯಕ್ತಿಕ ಪ್ರತಿಭೆಗೂ ಇಲ್ಲಿ ಆಹ್ವಾನ. )

ಹಾಗೆಯೇ, ಕಂಪನಿ ನಾಟಕದ ಗಣಂಸೆಯ ಪ್ರಯೋಗದ ಪೂರ್ವದಲ್ಲಿ ಮಾಲಕ ನೀಡುವ ಭಾಷಣ-ಸೂಚನೆಗಳು, ನಾಟಕದ ದೃಶ್ಯ ಬದಲಾವಣೆಗಳನ್ನು ಸೂಕ್ಷ್ಮವಾಗಿ ಸೂಚಿಸುವದು, ಪ್ರೇಕ್ಷಕರ ಕಲ್ಪನೆ, ಚಪ್ಪಾಳೆ, ಹಾರ್ಮೋನಿಯಂ, ನಾಟಕದಲ್ಲಿಯ ಗುಡುಗು ಮಳೆಗಳ ವರ್ಣನೆ ಇವೆಲ್ಲ, ನಾಟಕಕಾರನಲ್ಲಿಯ ತಾಂತ್ರಿಕ ಜಾಣ್ಮೆ ಮತ್ತು ಜಾಗೃತ ನಿರ್ದೇಶಕ ಪ್ರಜ್ಞೆ ಕುರಿತು ಕೆಲವು ಸೂಚನೆಗಳು.

೮

'ಲಘು-ನಗೆಗಾರ' ಎನ್ಕೆಗಿಂತ 'ಗಂಭೀರ-ವಿಚಾರಿ' ಎನ್ಕೆ ಹೆಚ್ಚು ತೂಕ ಪಡೆಯುತ್ತಿರುವ ಸ್ವಾಗತಾರ್ಹ ತಿರುವನ್ನು ಕುರಿತು, 'ಸಾವಿನ ಉಡಿಯಲ್ಲಿ', 'ಕಸಿ ಹೃದಯ ಕಣ್ತೆರೆಯಿತು' ನಾಟಕಗಳು ನೀಡಿದ ಸೂಚನೆಯ ಮುಂದಿನ ಮುಖ್ಯ ಹೆಜ್ಜೆಯಾಗಿ ಬಂದ ಮಹತ್ವದ ಮಜಲು, ಮತ್ತು ಆಕಾಶವಾಣಿಯು ಆಗೀಗ ಸಾಧಿಸುವ ತೀಕ್ಷ್ಣ ಎಚ್ಚರವನ್ನು ಎತ್ತಿ ತೋರಿಸುವ ಒಂದು ಗಂಭೀರ ಪ್ರಯೋಗ, 'ಪ್ರಾಣ ತುಂಬಿದ ಪಾತ್ರ'.

# 'ಠಕ್ಕಾ-ಠಕ್ಕಿ ಮತ್ತು ಇತರ ನಗೆ ನಾಟಕಗಳು'

ವಸಂತ ಕುಷ್ಟಗಿ

ಎನ್ಕೆ ಅವರ ಏಕಾಂಕ ನಾಟಕಗಳಲ್ಲಿ ಒಂದು ಮತ್ತೊಂದರಂತೆ ಇಲ್ಲ. ಪ್ರತಿಯೊಂದೂ ನೂತನ ವಸ್ತು. ನೂತನ ತಂತ್ರದಿಂದ ವಿಕಾಸಗೊಂಡವುಗಳಾಗಿವೆ. ಅವರ 'ಠಕ್ಕಾ-ಠಕ್ಕಿ' ಸಂಗ್ರಹವು ೧೬ ಅಂತಹ ನಾಟಕಗಳಿಂದ ಕೂಡಿ ಮಹಾದ್ವಾರಕ್ಕೆ ಕಟ್ಟಿದ ತೋರಣವಾಗಿದೆ. ಇಲ್ಲಿಯ ತಂತ್ರ ರೇಡಿಯೋ, ತೆರೆ ಮತ್ತು ರಂಗಭೂಮಿಗಳಿಗೆ ಅಳವಡಿಸುವಂತಹದು. ಅಂತೆಯೇ ಈ ನಾಟಕಗಳ ಮೌಲ್ಯ ಅಪಾರ ಮತ್ತು ಶಾಶ್ವತ.

'ಠಕ್ಕಾ-ಠಕ್ಕಿ' ನಾಟಕ ಸಂಗ್ರಹದಲ್ಲಿ ನಿರೂಪಿತವಾಗಿರುವ ಸಮಸ್ಯೆಗಳು ಎಲ್ಲಿಯೋ ಕವಿಕಲ್ಪಿತವಲ್ಲ. ಬೇರೆ ಭಾಷೆ, ದೇಶಗಳಿಂದ ಎರವಲು ತಂದಂತಹವು ಅಲ್ಲ. ಆ ಸಮಸ್ಯೆಗಳು ಜೀವಂತ, ನಮ್ಮ ಸುತ್ತುಮುತ್ತಲಿನ ಪರಿಸರದ್ದು. ನಮ್ಮದೇ ಎಂದು ಹೇಳಿದರೂ ತಪ್ಪಾಗುವುದಿಲ್ಲ. ಆದ್ದರಿಂದ ಸನ್ನಿವೇಶ, ಸಂಭಾಷಣೆ, ಪಾತ್ರಗಳಲ್ಲೆಲ್ಲ ನಾವು ನಮ್ಮನ್ನೇ ಕಾಣುತ್ತೇವೆ. ಇಲ್ಲೆಲ್ಲ ಎನ್ಕೆ ಯಶಸ್ವಿಯಾಗಿದ್ದಾರೆ.

'ಬ್ರಹ್ಮಚರ್ಯ'ದಲ್ಲಿ ಮಾರುತಿ, ಮಾರುತಿಯ ಹೆಸರನ್ನೇ ಇಟ್ಟುಕೊಂಡು ನಡೆಸಿದ ಸರ್ಕಸ್ಸು ಬಯಲಾದಾಗ ನಗೆಯ ಬುಗ್ಗೆ ಏಳುತ್ತದೆ. ಮನುಷ್ಯ ಸ್ವಭಾವದ ಅಸಹಾಯಕತೆಗೆ ಅನುಕಂಪ ಮೂಡುತ್ತದೆ. ಮೋಹಿನಿ ಅಲ್ಲಿ ಮಾರುತಿಯ ಮೇಲೆ ಮೋಹದ ತೆರೆಯನ್ನು ಎಳೆದಿರಬೇಕೇ? ಎಂಬುದು ಖಾತ್ರಿಯಾದಂತೆ ತೋರುತ್ತದೆ.

'ನಾಟಕ ನಿರ್ಮಾಣ' ಎಂಬುದು ನಾಟಕದಲ್ಲಿಯ ನಾಟಕ. ಇದರಲ್ಲಿ ಪಾತ್ರ ವಹಿಸುವವರು ಗೈರ್ಹಾಜರಿಯಾದಾಗ ಪ್ರೊಡ್ಯೂಸರ್ ಅನುಭವಿಸಬೇಕಾದ ಕಷ್ಟವು ನಗೆಯ ರೂಪವನ್ನು ತಾಳಿದುದು ಆಕರ್ಷಕವಾಗಿದೆ. ಹೊಸ ಹೊಸ ಟೆಕ್ನಿಕ್‌ಗಳ ಮುಖಾಂತರ ಆಕಾಶವಾಣಿಯ ನಾಟಕಗಳನ್ನು ರಂಗಭೂಮಿಗೆ ತರುವ ಪ್ರಯತ್ನವನ್ನು ಈ ರೂಪಕದಲ್ಲಿ ಕಾಣಬಹುದಾಗಿದೆ.

ದೀಪಾವಳಿಗಾಗಿ ಬೆಂಗಳೂರಿಗೆ ಬಂದ ಅಳಿಯನಿಗೆ ವಿಳಾಸವನ್ನು ಹೇಳುವುದರಲ್ಲಿ ಕೇಳುವುದರಲ್ಲಿ ಕನ್‌ಫ್ಯೂಜ ಆದಾಗ ಆದ ಅವಾಂತರ, ಆತಂಕ, ಚಿತ್ತಭಿತ್ತಿಯ

ಮೇಲೆ "ಮಂಗಳಾರತಿ"ಯಲ್ಲಿ ಬೆಳಕಿನ ಎಳೆಗಳನ್ನು ನಗೆಯ ಜೊತೆಗೆ ಹೆಣೆದು ಕೊಂಡು ರಂಗುರಂಗಾಗಿ ಕಚಗುಳಿ ಇಡುತ್ತವೆ.

ಹೆಸರನ್ನು ಧರ್ಮರಾಯ ಎಂದು ಇಟ್ಟುಕೊಂಡ ಮಧ್ಯಸ್ಥ ಕುಟುಂಬದ ಯಜಮಾನನು ಆರ್ಥಿಕ ಇತಿಮಿತಿಯ ಹಿನ್ನೆಲೆಯಲ್ಲಿ ಧರ್ಮವನ್ನು ಅನುಕೂಲ ಸಿಂಧುವಾಗಿಸಿಕೊಳ್ಳುವ ವ್ಯವಹಾರಜ್ಞಾನವು "ಮನಸ್ಸಿನಂತೆ ಮಾದೇವ"ದಲ್ಲಿ ಸಾಧಿಸಿದೆ. ಯಾರೋ ಖರ್ಚುಕೊಟ್ಟು ಕರೆದುಕೊಂಡು ಹೋದರೆ ತಿರುಪತಿ ಯೆಂಕಪ್ಪನ ದರುಶನ ಎಂಬಂತಹ ವಾಡಿಕೆಗಳೂ ಇಂತಹ ಹಿನ್ನೆಲೆಯಲ್ಲಿಯೇ ಹುಟ್ಟಿದಂತಹವು. ಇಂತಹ ವಾಡಿಕೆಯ ಮಾತುಗಳಿಗೆ 'ಮನಸ್ಸಿನಂತೆ ಮಾದೇವ' ಒಂದು ದೃಶ್ಯ ವ್ಯಾಖ್ಯಾನ.

'ನೆಲಸಮತಾವಾದಿ' ಇಂದಿನ ಸಮತಾವಾದದ ಪ್ರತಿಪಾದಕರನ್ನು ಚಿಂತನಾ ಶೀಲರನ್ನಾಗಿ ಮಾಡುವ, ಅವರಿಗೆ ದೈವೀ ಕೃಪೆಯಲ್ಲಿ ಆಸಕ್ತಿಯನ್ನು ಹುಟ್ಟಿಸುವ ಕುಟುಂಬ ಕಲ್ಯಾಣ ಯೋಜನೆಯ ವೇದಿಕೆಗೆ ಪ್ರಚೋದನೆ ನೀಡುವ ಸುಂದರ ನಾಟಕ. ಭೂದಾನದಂತೆ ಸಂತಾನ ದಾನವನ್ನು ಯಶಸ್ವಿಗೊಳಿಸುವ ನವೀನ ಸೂತ್ರ ವನ್ನು ಜಾರಿಗೆ ತರುವಲ್ಲಿ ಈ ನಾಟಕ ಪ್ರಭಾವೀ ಪ್ರಯೋಗ.

'ನಿಧಿ' ಜಾನಪದ ಕಥಾಸತ್ವವನ್ನು ಕಣ್ಣಿಗೆ ಕಟ್ಟುವಂತೆ ಶ್ರದ್ಧಾ ವಿಶ್ವಾಸಗಳಲ್ಲಿ ಹೊಸತು ಮೂಡಿಸುವ ಸಂಪತ್ತು. ಹೂತಿಟ್ಟ, ಕಾಲುಮುರಿದುಕೊಂಡು ಬಿದ್ದ ನಿಧಿ ಪರಿವರ್ತನೆಗೊಂಡು ಬರುವ ಮಗನ ರೂಪದಲ್ಲಿ ಬಂದುದು ಧ್ವನಿಪೂರ್ಣ. ತತ್ ಪರಿಣಾಮವಾಗಿ ಸಾಪ್ರೂ ಸುಖವೇ ಎಂಬ ತಾತ್ವಿಕ ಸತ್ಯದ ಮೇಲೆ ಸಾಮಾನ್ಯ ಜೀವನದಲ್ಲಿ ಕವಿದಿರುವ ಬೂದಿಯನ್ನು ಊದಿ ಹಾರಿಸುವ ಕಾರ್ಯಸಿದ್ಧಿ. ಈ ಹಿನ್ನೆಲೆಯಲ್ಲಿ ಇಲ್ಲಿ ನಗೆ ಕನಿಕರದ ಹಳ್ಳವಾಗಿ ಹರಿದಿದೆ.

ಮದುವೆ, ವರದಕ್ಷಿಣೆ, ನೌಕರಿ ಇತ್ಯಾದಿ ಸಮಸ್ಯೆಗಳಿಗೆ ವಿಶ್ವಭಾರತಿ ತತ್ತ್ವವು ಸಹಾಯಕಾರಿಯಾಗಿ ನಿಂತು ಪರಿಹಾರ ನೀಡಲು ಸಾಧ್ಯವಿದೆ. ಅಂತಹ ಕಾರ್ಯಾ ಚರಣೆಗೆ ಹಳೆಯ ಮತ್ತು ಹೊಸ ತಲೆಮಾರಿನಲ್ಲಿರುವ ಇಂದಿನ ತ್ರಿಶಂಕು ಸಮಾಜಕ್ಕೆ ಒಂದು ಶಾಶ್ವತ ನಿಲುಗಡೆಯ ಸೂಚನೆಯು "ಸ್ಥಳಾಂತರ" ದಲ್ಲಿರುವುದು ಗಮ ನಾರ್ಹ ವಿಷಯ. ಅರ್ಥಪೂರ್ಣವಾಗಿ ಒಂದು ಮನೆಯಿಂದ ಇನ್ನೊಂದು ಮನೆಗೆ, ಗಂಡು ಹೆಣ್ಣು ಇಡೀ ಕುಟುಂಬ, ಆಯಾ ಕುಟುಂಬಗಳ ಸಮಸ್ಯೆಗಳು ಸ್ಥಳಾಂತರ ವಾಗುತ್ತಲೇ ಇದ್ದರೆ ಅಲ್ಲಿ ಜೀವನ ಸಾಮರಸ್ಯ ಪ್ರತಿಪಾದನೆ ಶತಸಿದ್ಧ. ಅದು ನಿತ್ಯ ಜೀವನದಲ್ಲಿ ಕಾಣುವ ಹಿಮಾಲಯದ ಮಂಜಿನ ಹೊಗೆಯೂ ಹೌದು.

ಕಾಕತಾಳೀಯ ನ್ಯಾಯವು ಮನುಷ್ಯನ ಅದೃಷ್ಟ ಸಂಖ್ಯೆಯನ್ನು ಒಮ್ಮೊಮ್ಮೆ ತೆರೆದು ಬಿಡುತ್ತದೆ. ಅದೇ ಮೂಢ ನಂಬಿಗೆಗೂ ಕಾರಣವಾಗುತ್ತದೆ. ಆದರೆ "ಅದೃಷ್ಟವಂತ"ದ ರಾಯರು ಮಾತ್ರ ಅದೃಷ್ಟವನ್ನು ತೆರೆದು ನೋಡಿದವರು. ನಿರ್ದಿಷ್ಟಗೊಂಡ ತೇದಿಯಂದು ಮಗನು ಬಾರದೇ ಇದ್ದಾಗ, ಟ್ರೇನ್ ದುರಂತ ಗೊಂದಲವೆಬ್ಬಿಸಿದಾಗ ಕೊನೆಯಲ್ಲಿ ಉಂಟಾಗುವ ಮೋಜು ಸುಂದರ ದುಃಖಾಂತ. ಜೊಯ್ಸರ ಮತ್ತು ರಾಯರ ಸಂಭಾಷಣೆಗಳಲ್ಲಿ ನಾಟಕದ ತುಂಬೆಲ್ಲ ನಗೆಯ ಚಿಲುಮೆಗಳು ಛಿಲ್ಲನೇ ಏಳುತ್ತವೆ.

"ಸಂ (ಸೊಂ) ಪಿನ ಸಂಸಾರ" ಶೀರ್ಷಿಕೆಯೇ ಹೇಳುವಂತೆ ಸಂಸಾರದಲ್ಲಿಯೂ ಒಕ್ಕಲಗಿತ್ತಿ ಸಂಪು ಮಾಡಿದಾಗ ಬರುವ ಬವಣೆಗಳ ಹಿನ್ನೆಲೆಯಲ್ಲಿ ಸಮತಾವಾದ, ಕಾರ್ಯಗೌರವ, ಶ್ರಮದಾನ, ಎಂಟರ್ಟೇನ್‌ಮೆಂಟ್ ಹೌಸ್, ಕಾಮನ್ ಕಿಚನ್, ಫ್ಯಾಮಿಲಿ ಪ್ಲ್ಯಾನಿಂಗ್, ವೆಲ್ಫೇರ್ ಟೌನಷಿಪ್, ಇತ್ಯಾದಿ ಸುಧಾರಣೆಗಳು ತಾನೇ ತಾನಾಗಿ ಅವಶ್ಯವೆನಿಸುತ್ತವೆ. ಇದನ್ನು ವಿಡಂಬನೆಯ ಮಾಧ್ಯಮದಲ್ಲಿ ಈ ಪ್ರಹಸನವು ಅಚ್ಚುಕಟ್ಟಾಗಿ ಚಿತ್ರಿಸಿದೆ. ಇಲ್ಲಿ ಬರುವ ತತ್ತ್ವವಿಮರ್ಶೆಯು ಮಾರ್ಮಿಕ ಮತ್ತು ರಮ್ಯ.

"ಶೀನ – ಉದಾಶೀನ" ಶ್ಲೇಷಾರ್ಥದಿಂದ ಶ್ರದ್ಧೆಯನ್ನೂ ಮೌಢ್ಯತೆಯನ್ನೂ ವಿಶ್ಲೇಷಿಸುತ್ತದೆ. ನಮ್ಮ ಮನೆ ಹರಕು ನಾವೇ ಮುಚ್ಚಿಕೊಳ್ಳಬೇಕು. ಅದಕ್ಕೆ ಪ್ರಯತ್ನ ಮಾಡುವುದೇ ಪೌರುಷ. ಪ್ರಯತ್ನವಿಲ್ಲದೆ ದೈವ ತೆರೆಯುವುದೇ ಇಲ್ಲ, ಬ್ರಹ್ಮನಿಷ್ಯದಲ್ಲಿ ಏನು ಬರೆದಿದ್ದರೂ ಅದು ಸಾಧ್ಯವಿಲ್ಲ. ಇಂಥ ಪರಿಣಾಮವನ್ನು ಬಿಂಬಿಸುವ ಈ ನಾಟಕ ಉಲ್ಲೇಖನೀಯ.

ಸಾಮಾನ್ಯ ಕುಟುಂಬವೊಂದರಲ್ಲಿ ಗಂಡು ವಿದ್ಯಾವಂತನಾಗದಿದ್ದರೆ ಒಂದು ಸಮಸ್ಯೆ. ಅದರಂತೆ ಕಲಿತ ಹೆಣ್ಣೂ ಒಂದು ಸಮಸ್ಯೆ. ಇದಕ್ಕೆಲ್ಲ ಕಾರಣ ಆರ್ಥಿಕ ಸಂಪದ. ಅದಿಲ್ಲದಾಗ ಪರಿಸ್ಥಿತಿಯು ತಿಗಣೆಯಾಗಿ ಹೀರತೊಡಗುತ್ತದೆ. ಆಗ ಅದರ ಪರಿಹಾರಕ್ಕೆ ಔಷಧ ಬೇಕು. ಆ ಔಷಧವೇ ವಿಚಾರ ಪರಿವರ್ತನೆ. ಇದು ಸಾಂಕೇತಿಕವಾಗಿ "ತಿಗಣಿಯ ಯಜ್ಞ"ದಲ್ಲಿ ನಗೆಯ ರಸಾಯನದ ಹಿನ್ನೆಲೆಯಲ್ಲಿ ತ್ರಿಗುಣ ಯಜ್ಞ ವಿಚಾರವು ಸ್ವಾರಸ್ಯವಾಗಿ ನಿರೂಪಿತವಾಗಿದೆ.

"ಅವಲಕ್ಕಿ ಸರ" ಹಾಸ್ಯದ ಹೊನಲಿನ ಮಧ್ಯೆ ಕುತೂಹಲ ಕೆರಳಿಸುವ ನಾಟಕ. ನೆರೆಯವರ ಸಹಕಾರದಿಂದ ಗುಂಡೂರಾಯನ ಜಿಪುಣತನಕ್ಕೆ ಅವರ ಪತ್ನಿಯು ಸಂಚು ಹೂಡಿ ಪಾಠ ಕಲಿಸಿದ ಸನ್ನಿವೇಶ ಚಿರಸ್ಮರಣೀಯ. ಹೆಣ್ಣು ಮಕ್ಕಳಿಗೆ ಸಹಜವಾಗಿಯೇ ಒಡವೆಗಳ ಅಪೇಕ್ಷೆ ಇರುತ್ತದೆ. ವಿತ್ತ ಸಂಪಾದನೆ

ಯಲ್ಲಿಯೂ ಅಷ್ಟು ಇಷ್ಟು ಹಿತ ಸಾಧಿಸಲು ಸಾಧ್ಯವಿದೆ. ಆದರೆ ಆ ಕಡೆಗೆ ಇಂದಿನಿತೂ ಯೋಚಿಸಿದ ಅರಸಿಕರು ಇರುತ್ತಾರೆ. ಇವಕ್ಕೆ ಮೂಲ ಕಾರಣ ಅವರ ಜಿಪುಣತನ. ಇಂತಹ ಮನೋದೌರ್ಬಲ್ಯಗಳನ್ನು ಯೋಗ್ಯರೀತಿಯಲ್ಲಿ ಪರಿಹಾರ ಮಾಡಿದ ಕೌಶಲ ಈ ನಾಟಕದ ವೈಶಿಷ್ಟ್ಯ.

ಧಾತ್ರಿ – ಮೈತ್ರೀ - ಧಾತ್ರಿ ನಡುವೆ ಅಡ್ಡಗೋಡೆ ಇದು ನೆರೆಹೊರೆಯ ಇತಿಹಾಸ. ಲೋಕಸತ್ಯವಾದ ಈ ಮಾತಿನ ಸಾಕ್ಷೀಚಿತ್ರ, "ಅಡ್ಡಗೋಡೆ." ಆದರೆ ಇಂತಹ ಅಡ್ಡಗೋಡೆಯನ್ನು ಅವಳಿ ಮಕ್ಕಳ ಪುಣ್ಯದಿಂದ ಕಮಲಮ್ಮ ನಂತಹರ ಸುಸಂಸ್ಕೃತ ಸ್ನೇಹವಾತ್ಸಲ್ಯಗಳು ಒಡೆದು ಧಾತ್ರಿ ಮತ್ತೆ ಎಲ್ಲಿಡೆಯೂ ಅವರಿಗೆ ಮೈತ್ರಿಯಾದ ಘಟನೆಯು ಅಳಿಸಲಾರದ ಆದರ್ಶ ಚಿತ್ರ.

ಪಟ್ಟಣದ ಚಾಳುಗಳ ನಳಗಳಲ್ಲಿ, ಬೀದಿಯ ನಳಗಳಲ್ಲಿ "ನಳೋಪಾಖ್ಯಾನ"ದ ಅಧ್ಯಾಯಗಳು ವೈವಿಧ್ಯಪೂರ್ಣ. ಅವುಗಳನ್ನು ಹಿಡಿದಿಟ್ಟಿರುವ ನಳೋಪಾಖ್ಯಾನವು ಸಮಾಜವನ್ನು ಪ್ರತಿಬಿಂಬಿಸುವ ಸ್ಪಷ್ಟ ದರ್ಪಣ. ತೋಳ ಬಂದಿ ಕಾರ, ಒನ್‌ಬೈಟು, ಚೌಚೌ – ಇತ್ಯಾದಿ ರಸಿಕತೆಯ ದ್ವಂದ್ವಾರ್ಥದ ಪದಗಳನ್ನು ಉಪ ಯೋಗಿಸಿದ ಮೊದ್ಲಣ ಮನೋಹರೆಯರ ಸಂಭಾಷಣೆ ಈ ಹೇಳಿಕೆಗೊಂದು ಪ್ರಮಾಣ. ವೀರ ಭಾರತ ಯುವಕ, ಕನ್ನಡ ಕುಲ - ಪೀರಕುಲ, ಮಾನವಗೋತ್ರ ಇತ್ಯಾದಿ ಮಾತುಗಳು ಸಮಾಜಕ್ಕೆ ಬಂದಿರುವ ಒಳ್ಳೆಯ ತಿರುವನ್ನು ನೀಡಿ ಪಾಠ ಹೇಳುವಂತಿವೆ. ಸಾಮಾನ್ಯ ಸಮಸ್ಯೆಗಳಾದ ವರದಕ್ಷಿಣೆ ಬಹಿಷ್ಕಾರಕ್ಕೆ ಸರಳ ಮದುವೆಯ ಪುರಸ್ಕಾರಕ್ಕೆ ಪುಟವನ್ನು ನೀಡುತ್ತಿವೆ. ಸರಳರಗಳೆ, ಮುಕ್ತಛಂಧದ ಧಾಟಿಯಲ್ಲಿ ಬಂದಿರುವ ಈ ಗೀತ ನಾಟಕ ಒಟ್ಟಂದದಲ್ಲಿ ಸ್ವಾರಸ್ಯವಾಗಿದೆ.

ಶಾಂತಿ ಸಂತಸದ ಸಮರಸಗಳ ನಿಲ್ದಾಣವನ್ನು ಸೇರಲು ಕನ್ನಡ ಮರ್ಲಿಮನ್ರೋ ಒಬ್ಬೊಬ್ಬ ರಸಿಕನ ನೀರನ್ನು ಅಳೆಯಲು ಕ್ಯೂನಲ್ಲಿನಿಂತ ವರಗಳ ಪರೀಕ್ಷೆ ಮಾಡುವ ಚಿತ್ರ "ನವ್ಯ ಸ್ವಯಂವರ" ಮತ್ತೊಂದು ಗೀತ ನಾಟಕ. ಕವಿ, ಬ್ರಹ್ಮಚಾರಿ, ರಸಿಕ, ಪ್ರೊಫೆಸರ್, ಡಾಕ್ಟರ್, ಮೊದಲಾದವರು ಹುರಿಯಾಳುಗಳು. ಕ್ಯೂನಲ್ಲಿರುವ ಇವರಲ್ಲಿ ಡಾಕ್ಟರ್ ಈ ಕಾಲದ ಆಕರ್ಷಣವೂ ಎಂಬಂತೆ ಆ ಡಾಕ್ಟರನಿಗೆ ಗೆಲುವು. ಸಾಮಯಿಕ ಸಮಸ್ಯೆಯ ಪರಿಹಾರಕ್ಕೆ ಮನಃಸ್ತರಗಳ ಮೌಲ್ಯಗಳ ಸ್ಪಷ್ಟ ಚಿತ್ರವು ಈ ನಾಟಕದ ಪ್ರತಿ ವಾಕ್ಯದಲ್ಲಿ ನೆಲೆಯಾಗಿದೆ. ಇಲ್ಲಿ ಬರುವ ಮಾತುಗಳು ಮೋಜೆನಿಸಿದರೂ ಹಿಂಜಿ ನೋಡಿದಾಗ ನಿಚ್ಚಳವಾಗಿ ಮೂಡುವ ಅರ್ಥ ಮನಸ್ಸನ್ನು ಮಿಡಿಯುತ್ತದೆ. ಗೊತ್ತಿಲ್ಲದಂತೆ ಆಗುತ್ತಿರುವ ಸಮಾಜ ಪರಿವರ್ತನೆ ಮತ್ತು ಮನುಷ್ಯನ ಸ್ವಭಾವ ಪರಿವರ್ತನೆಗಳ ಹೆಜ್ಜೆಗಳನ್ನೂ ಇಲ್ಲಿ ಗುರುತಿಸಲು ಸಾಧ್ಯ.

"ಸೀರಿಯುಸ್ಸು" ಎಂಬ ಮಾತಿನ ಶ್ಲೇಷದ ಹಂದರದ ಮೇಲೆ ಹಬ್ಬಿರುವ ನವ ದಂಪತಿಗಳ ವಿರಹ ವ್ಯಾಖ್ಯಾನವು 'ಠಕ್ಕ – ಠಕ್ಕಿ'ಯಲ್ಲಿ ಸ್ವಾರಸ್ಯದ ಹಾಲ್ಗಡಲನ್ನೇ ನಿರ್ಮಿಸಿದೆ. ಅವರು, ಸ್ವಲ್ಪೇ ದಿವಸದ ದಾಂಪತ್ಯದಲ್ಲಿ ಒಬ್ಬರು ಮತ್ತೊಬ್ಬರನ್ನು ಬಹಳಷ್ಟು ತಿಳಿದುಕೊಂಡಿದ್ದರೂ, ಅವರಿಬ್ಬರೂ ಸೇರಿಗೆ ಸವ್ವಾಸೇರಾದರೂ ಠಕ - ಠಕ್ಕಿಯರಲ್ಲಿ ಒಬ್ಬರೂ ಗೆಲ್ಲಲಿಲ್ಲ. ಒಬ್ಬರೂ ಸೋಲಲಿಲ್ಲ. ಇಬ್ಬರೂ ಜೋಡಾಗಿ ಗೆದ್ದರು, ಜೋಡಾಗಿ ಸೋತರು. ಈ ಮಾತನ್ನು ಸಿದ್ಧಮಾಡಲು ಸ್ವಾಭಾವಿಕವಾಗಿಯೇ ಏರ್ಪಟ್ಟ ಘಟನಾವಳಿಗಳು ಮೋಜಿನ ಅದ್ಭುತವನ್ನೇ ಏರ್ಪಡಿಸಿವೆ.

ಹೀಗೆ 'ಠಕ್ಕಾ-ಠಕ್ಕಿ' ಮತ್ತು ಇತರ ನಗೆ ನಾಟಕಗಳಲ್ಲಿ ಇದೇ ಶತಮಾನ ದಲ್ಲಿಯ ಇದೇ ಕಾಲದಲ್ಲಿಯ ತಾಂಡವವೋ ಲಾಸ್ಯವೋ ಒಟ್ಟಾರೆ ಕುಣಿದೆದ್ದಿರುವ ವಿವಾಹ, ನಿರುದ್ಯೋಗ, ಸುಧಾರಣೆ, ಸ್ವಾತಂತ್ರ್ಯ, ಪ್ರಜಾರಾಜ್ಯ, ದಾಂಪತ್ಯ, ಮೊದಲಾದ ಸಮಸ್ಯೆಗಳು ನಮ್ಮವೂ ಹೌದು; ಬೇರೆಯವರವೂ ಹೌದು. ಅಂತೆಯೇ ಅವುಗಳ ನಿರೂಪಣೆ ಸ್ವಾರಸ್ಯಕರ ಮತ್ತು ಸ್ವಾಭಾವಿಕ. ಒಂದ ರ್ಥದಲ್ಲಿ ಇಲ್ಲಿಯ ನಾಟಕಗಳು ಒಂದೇ ತಂತುವಿನಲ್ಲಿ ಸರವಾಗಿವೆ. ಕಾರಣ ಎಲ್ಲ ನಾಟಕಗಳಲ್ಲಿ ಒಂದಿಲ್ಲಒಂದು ಬಗೆಯ ಠಕ್ಕತನ ಬಯಲಿಗೆ ಬಂದಾಗ ಅಲ್ಲಿ ಸುಧಾರ ಣೆಯ ಬೀಜದ ಬಿತ್ತಿಗೆಯು ನಗೆಯ ಸೋನೆಯಲ್ಲಿ ಆಗಿರುವುದು ಸಂಕೇತವಾಗಿದೆ. ಆದ್ದರಿಂದ ಈ ಸಂಗ್ರಹಕ್ಕೆ "ಠಕ್ಕಾ-ಠಕ್ಕಿ ಇತರ ನಗೆ ನಾಟಕಗಳು" ಎಂಬುದು ಪ್ರಾತಿನಿಧಿಕ ಮತ್ತು ಸಮನ್ವಯದ ಸಂಕೇತ. ಇದೆಲ್ಲ ಯಥಾರ್ಥ.

ಈ ನಾಟಕಗಳು ಯಶಸ್ವಿಯಾಗಲು ಕಾರಣ ಇಲ್ಲಿ ಬಳಕೆಯಾದ ಉತ್ತರ-ದಕ್ಷಿಣ ಕರ್ನಾಟಕದ ಸಾಮಾನ್ಯ ಜನರಿಗೂ ಅರ್ಥವಾಗುವ ಒಳಕೆಯ ಸತ್ವಯುತ ಸರಳ ಭಾಷೆ. ಆ ಭಾಷೆಯಲ್ಲಿ ನಗೆಯು ನವಿರುನವಿರಾಗಿ ಅರಳಿಬಿಡುತ್ತದೆ. ಇದರಲ್ಲಿ ಕೃತ್ರಿಮತೆ ಇರುವುದಿಲ್ಲ. ಅದೆಲ್ಲ ಕೇವಲ ಸ್ವಾಭಾವಿಕ.

ಹಲವು ಕಡೆ ಗಾದೆಮಾತುಗಳ ಸತ್ವ, ಲೋಕಾನುಭವದ ತಿರುಳು ತುಂಬಿ ತುಳುಕಿವೆ. ಅಲ್ಲದೆ ಆಯಾ ಪಾತ್ರಗಳ ಅಂತಸ್ತು ಆ ಮಾತುಗಳಿಂದಲೇ ಅಭಿವ್ಯಕ್ತ ಗೊಳ್ಳುತ್ತದೆ. ಆಯಾ ನಾಟಕಗಳಲ್ಲಿಯ ಪಾತ್ರಗಳೂ ಕೂಡ ತಾವು ಹೆಸರು ಇಟ್ಟು ಕೊಂಡ ಹೆಸರಿಗೆ ತಕ್ಕಂತಹ ವ್ಯಕ್ತಿತ್ವವನ್ನು ವಿಡಂಬನವಾಗಿಯೇ ನೇರವಾಗಿಯೇ ಸಾಬೀತು ಪಡಿಸಿವೆ. ಈ ಎಲ್ಲ ಪಾತ್ರಗಳೂ ಜೀವಂತ ಪಾತ್ರಗಳೇ ಆಗಿವೆ. ಈ ನಗೆಯ ನಾಟಕಗಳು ನಾವು ಬಾಳುತ್ತಿರುವ ಸಮಾಜದ ಯಶಸ್ವೀ ಪ್ರತಿಬಿಂಬ.

# ‘ ಎನ್ಕೆ ಏಕಪಾತ್ರ-ದ್ವಿಪಾತ್ರಾಭಿನಯಗಳು ’

ಡಾ. ಶಾಂತಿನಾಥ ದಿಬ್ಬದ / ಹೂಲಿ ಶೇಖರ್

೧

ಪ್ರಸ್ತುತ ಕೃತಿಯಲ್ಲಿ ಎನ್ಕೆ ಅವರಿಂದ ರಚಿತವಾದ ಎಂಟು ಏಕಪಾತ್ರ ಹಾಗೂ ಆರು ದ್ವಿಪಾತ್ರಾಭಿನಯಗಳು ಸಂಕಲಿತವಾಗಿವೆ. ‘ನನ್ನ ಮಾತು’ ಎಂಬ ಭಾಗದಲ್ಲಿ ಈ ಸಂಗ್ರಹದ ಹಿಂದಿರುವ ಲಘುಮನರಂಜನೆಯ ಉದ್ದೇಶವನ್ನು ಸ್ವತಃ ಲೇಖಕರೇ ಸ್ಪಷ್ಟಪಡಿಸಿದ್ದಾರೆ. ಅಲ್ಪಸಮಯ ಹಾಗೂ ವಿಷಯವೈವಿಧ್ಯದತ್ತ ವಿಶೇಷ ಗಮನವಿಟ್ಟು ರಚಿಸಿದ ಈ ಚಿಕ್ಕ ನಗೆದೃಶ್ಯಗಳು ವಿಲಾಸೀ ಮನೋಭಾವದ ಶಾಲೆಕಾಲೇಜಿನ ವಿದ್ಯಾರ್ಥಿಗಳಾಗಿಯೇ ರಚಿತವಾಗಿವೆಯೆಂಬುದೂ ಲೇಖಕರ ಮಾತಿನಿಂದ ತಿಳಿದುಬರುತ್ತದೆ. ಗಾತ್ರದಲ್ಲಿ ಚಿಕ್ಕವಾಗಿದ್ದರೂ ಮನರಂಜನೆಯ ದೃಷ್ಟಿಯಿಂದ ಇವೆಲ್ಲ ಸ್ವಯಂಪೂರ್ಣವಾಗಿವೆಯೆಂಬುದನ್ನು ಈ ಏಕಪಾತ್ರ-ದ್ವಿಪಾತ್ರಾಭಿನಯಗಳ ವಸ್ತುನಿಷ್ಠ ವಿವೇಚನೆಯ ಮೂಲಕ ಪರಿಶೀಲಿಸಬಹುದಾಗಿದೆ.

ನಾಟಕಸಾಹಿತ್ಯ ಪ್ರಕಾರದಲ್ಲಿ ಏಕಾಂಕ ಅನೇಕಾಂಕ ನಾಟಕಗಳ ಸುಗ್ಗಿಯ ತರುವಾಯ, ನವೀನ ಪ್ರಯೋಗಗಳಾಗಿ ಹೊರಹೊಮ್ಮಿದ ಈ ಏಕಪಾತ್ರ-ದ್ವಿಪಾತ್ರಾಭಿನಯಗಳು ನಾಟಕಸಾಹಿತ್ಯಪ್ರಕಾರದ ಶ್ರೀಮಂತಿಕೆಯನ್ನು ಹೆಚ್ಚಿಸುವುದರೊಂದಿಗೆ ವೈವಿಧ್ಯತೆಯನ್ನು ಹೆಚ್ಚಿಸಿವೆ. ಪ್ರಸ್ತುತ ಲೇಖಕರು ಹಿಂದೆ ಪ್ರಚಲಿತವಿದ್ದ ಅಂಶಗಳ ಪರಿಕಲ್ಪನೆಯ ಜಾಡನ್ನೇ ಅನುಸರಿಸಿ ಇಲ್ಲಿ ‘ ಏಕಪಾತ್ರ ’, ‘ದ್ವಿಪಾತ್ರ’ ಎಂಬ ನವೀನ ಮಾದರಿಗೆ ಎಡೆಗೊಟ್ಟಿದ್ದಾರೆಯೆಂದು ಅನ್ನಿಸಿದರೂ ಪ್ರಯೋಗ ಹಾಗೂ ಪ್ರಕಾರಗಳ ದೃಷ್ಟಿಯಿಂದ ಈ ಪ್ರಯತ್ನ ಹೊಸದೆಂದೇ ಹೇಳಬೇಕಾಗುತ್ತದೆ.

ನಾಟಕ ರಚನೆಯಲ್ಲಿ, ಅದರಲ್ಲೂ ಹಾಸ್ಯಮಯತೆಯಲ್ಲಿ ಸಿದ್ಧಹಸ್ತರಾದ ಎನ್ಕೆ ಈ ಮೂಲಕ ನಾಟಕಸಾಹಿತ್ಯಪ್ರಕಾರದಲ್ಲಿ ಹೊಸ ಕ್ಷಿತಿಜವೊಂದನ್ನು ಪ್ರವೇಶಿಸಿ ತಮ್ಮ ಪ್ರಯೋಗಪ್ರಿಯತೆಯನ್ನು ಮೆರೆದಿರುವರಲ್ಲದೆ ಅಪೂರ್ವ ಯಶಸ್ಸನ್ನೂ ಸಾಧಿಸಿದ್ದಾರೆ. ಸಾಮಾನ್ಯ ದೃಷ್ಟಿಗೆ ಇಲ್ಲಿಯ ದೃಶ್ಯಗಳು ಹಾಸ್ಯಲೇಖನ, ಹರಟೆ, ಪ್ರಹಸನಗಳಿಗೆ ಸಮೀಪದವೆನ್ನಿಸಿದರೂ ಇಲ್ಲಿರುವ ಸಂವಾದ, ಅಭಿನಯಗಳಿಂದಾಗಿ

ಇವು ಆ ಎಲ್ಲ ಪ್ರಕಾರಗಳಿಗಿಂತ ಹೆಚ್ಚಿನ ಸ್ಪಷ್ಟತೆ ಹಾಗೂ ರಂಜಕತೆಗಳನ್ನು ಪಡೆದು ಪ್ರೇಕ್ಷಕರಿಗೆ ತೀರ ಆತ್ಮೀಯವಾಗಬಲ್ಲವಾಗಿವೆ.

ಸುಮಾರು ಹದಿನೈದು ನಿಮಿಷಗಳಿಗೆ ಮೀರದ ವಸ್ತು ಇಲ್ಲಿಯ ಏಕ ಪಾತ್ರಾಭಿನಯಗಳದ್ದು- ಹೆಸರೇ ಸೂಚಿಸುವಂತೆ ಇಲ್ಲಿರುವುದು ಒಂದೇ ಪಾತ್ರ. ಅದು ಪ್ರತ್ಯಕ್ಷ ಪಾತ್ರವೂ ಹೌದು. ಆದರೆ ದೃಶ್ಯ ಮುಂದುವರೆದಂತೆ ಆ ಪ್ರತ್ಯಕ್ಷ ಪಾತ್ರವೇ ಒಮ್ಮೊಮ್ಮೆ ಬೇರೆ ಬೇರೆ ಅಪ್ರತ್ಯಕ್ಷ ಪಾತ್ರವಾಗಿಯೂ ಕಾರ್ಯ ಪೂರೈಸುತ್ತದೆ. ಅಂದರೆ ಪರೋಕ್ಷ ಪಾತ್ರಗಳ ಅಭಿನಯ ಹಾಗೂ ಸಂವಾದ ಪ್ರೇಕ್ಷಕರಿಗೆ ನೋಡಲು ಕೇಳಲು ಲಭ್ಯವಾಗಲಾರದು. ಹಾಗಿದ್ದಾಗಲೂ ಸಹಿತ ಆ ಅಪರೋಕ್ಷ ಪಾತ್ರದ ಅಭಿನಯ ಸಂವಾದಗಳನ್ನು ತಾನೇ ಗ್ರಹಿಸಿದಂತೆ ಮಾಡಿ ಅವುಗಳಿಗೆಲ್ಲ ಪ್ರತಿಯಾಗಿ ಪ್ರತಿಕ್ರಿಯಿಸುತ್ತದೆ ಈ ಪ್ರತ್ಯಕ್ಷ ಪಾತ್ರ. ಇದನ್ನೇ ಇನ್ನಷ್ಟು ವಿಸ್ತರಿಸಿ ಹೇಳುವುದಾದರೆ, ಇತರ ಪಾತ್ರಗಳು ಅಗೋಚರವಾಗಿದ್ದುಕೊಂಡು ಏನನ್ನೋ ಹೇಳುತ್ತಿವೆ. ಅದನ್ನು ಕೇಳಿ ಈ ಪ್ರಮುಖ ಪಾತ್ರ ಅವುಗಳಿಗೇ ಉತ್ತರಿಸುತ್ತಿದೆ ಎಂದು ತೋರುತ್ತದೆ. ಈ ದೃಷ್ಟಿಯಿಂದ ಪ್ರತ್ಯಕ್ಷ ಪಾತ್ರವೊಂದರಲ್ಲೇ ಇಡೀ ದೃಶ್ಯ ಹಾಗೂ ಇತರ ಪಾತ್ರಗಳೆಲ್ಲವೂ ಕೇಂದ್ರೀಕೃತವಾಗಿರುತ್ತವೆಯೆಂದೂ ಹೇಳಬಹುದು. ಆದ್ದರಿಂದ ಅಪೂರ್ವ ನಟನಾಕೌಶಲವಿದ್ದ ನಟ ಮಾತ್ರ ಇದನ್ನು ಯಶಸ್ವಿಯಾಗಿ ಪೂರೈಸಬಲ್ಲ. ಇಲ್ಲಿ ಸೂಚಿಸಲಾದ ಪರೋಕ್ಷಪಾತ್ರಗಳೆಲ್ಲವೂ ಪ್ರತ್ಯಕ್ಷ ಪಾತ್ರದ ಅಭಿನಯ ಹಾಗೂ ಸ್ವಗತ ಸಂಭಾಷಣೆಗಳನ್ನು ಆಧರಿಸಿ ನಿಂತ ಊಹೆಯ ಮೇಲೆ ಅರ್ಥ ಮಾಡಿಕೊಳ್ಳಬಹುದಾದವು ಮಾತ್ರ. ಅಂದಾಗ ಇಲ್ಲಿಯ ಪ್ರೇಕ್ಷಕನೂ ಕೂಡ ಅಷ್ಟೇ ಜಾಣ್ಮೆಯುಳ್ಳವನಾಗಿರಬೇಕಾದುದು ಅನಿವಾರ್ಯ.

ಪ್ರಸ್ತುತ ಸಂಗ್ರಹದಲ್ಲಿ ಬಂದಿರುವ ಎಂಟು ಏಕಪಾತ್ರಾಭಿನಯಗಳಲ್ಲಿ ಸಂಪ್ರದಾಯಪ್ರಿಯತೆ, ಸಮಾಜದರ್ಶನ, ದೇಶಪ್ರೇಮ, ಸಮಾಜ ಸುಧಾರಣೆ, ವಿಶೇಷವಾಗಿ ನೌಕರರ ಜೀವನ ಇತ್ಯಾದಿ ಅಂಶಗಳು ಸ್ಥಾನ ಪಡೆದಿವೆ. ಇವೆಲ್ಲ ವಾಸ್ತವಿಕತೆಯ ನೆಲೆಗಟ್ಟಿನ ಮೇಲೆ ಅರ್ಥಪೂರ್ಣವಾಗಿ, ಅಷ್ಟೇ ಆಕರ್ಷಕವಾಗಿ ಬಿಂಬಿತವಾಗಿವೆ. ವಿಡಂಬನೆ ಹಾಗೂ ನೇರನುಡಿಗಳು ಇಲ್ಲಿಯ ವೈಶಿಷ್ಟ್ಯಗಳಾಗಿವೆ. ಇಲ್ಲಿಯ ಏಕಪಾತ್ರಾಭಿನಯಗಳನ್ನು ಈ ಕೆಳಗಿನಂತೆ ಸಂಕ್ಷೇಪಿಸಿ ಹೇಳಬಹುದಾದರೂ ಇದು ಕೇವಲ ಆಂಶಿಕ ಪರಿಚಯ ಮಾತ್ರ. ಅಭಿನಯಮಾಧ್ಯಮದಿಂದ ಅವುಗಳ ಸಂಪೂರ್ಣ ಪರಿಚಯವನ್ನು ಪಡೆಯಬಹುದು.

ವಾರದಲ್ಲಿ ಸಿಗುವ ಒಂದೇ ಒಂದು ರವಿವಾರದಂದು ಕೂಡ ಮನಬಂದುದನ್ನು ಮಾಡಿ ತಿನ್ನಲಾಗದ ಅಸಹಾಯಕ ನೌಕರನ ಬದುಕು, ಕೈಗೆ ಬಂದ ತುತ್ತು

ಬಾಯಿಗೆ ಬರಲಿಲ್ಲ ಎಂಬಂತೆ 'ಭಜಿಗೆ ಬಾಯಿಲ್ಲವಯ್ಯ' ಎಂಬ ದೃಶ್ಯವಾಗಿ ಕಂಗೊಳಿಸಿದೆ. ರವಿವಾರಕ್ಕೇ ಸಂಬಂಧಿಸಿದ ಇನ್ನೊಂದು ದೃಶ್ಯ 'ಭಾನುವಾರದ ಬೆಳಗ್ಗೆ'. ಬರುವ ರವಿವಾರದ ಬಗ್ಗೆ ಇಡೀ ವಾರ ಯೋಜನೆ - ಕನಸುಗಳನ್ನು ಕಾಣಲಾಗುತ್ತದೆಯಾದರೂ ಅಂದುಕೊಂಡಂತೆ ಯಾವುದೂ ನಡೆಯುವುದಿಲ್ಲ. ಸ್ವತಃ ಇಸ್ತ್ರಿ ಮಾಡುವುದು, ಮಗನಿಗೆ ಹಣ್ಣು-ಹಲ್ವಾ ಚಿಂತೆ, ರಿಕ್ಷಾ-ಸಿನಿಮಾ ವೆಚ್ಚ, ಸೋಮವಾರದ ಕಛೇರಿಯ ಚಿಂತೆ ಇತ್ಯಾದಿಗಳಿಂದ ಕೂಡಿದ ರವಿವಾರ ಕೇವಲ ಅಶಾಂತಿಯ ಆಗರವಾಗುತ್ತಿದೆಯೆಂಬುದು ಇಲ್ಲಿಯ ವಸ್ತು. ಸೈನ್ಯದಲ್ಲಿರುವ ಮಗನಿಂದ ಕಾಗದಕ್ಕಾಗಿ ದಾರಿ ಕಾಯುವ ತಾಯಿಯೋರ್ವಳ ಕಳವಳ–ಕಾತರಗಳು, ತಂದೆಯ ಸಾಂತ್ವನ ಇತ್ಯಾದಿಗಳಿಂದ ಕೂಡಿದ ಮನೋವೈಜ್ಞಾನಿಕ ನಿರೂಪಣೆಯೇ ದೇಶಾಭಿಮಾನಪರವಾದ ದೃಶ್ಯ 'ನಿರ್ಮಲಾ'. ಲಗ್ನದ ತರುವಾಯ ಮೊದಲ ದೀಪಾವಳಿಯಂದು ಮಾವನಿಂದ ಯಥೇಚ್ಛವಾದ ಉಡುಗೊರೆಯನ್ನು ಪಡೆಯಲಿಚ್ಛಿಸುವ ಅಳಿಯನೊಬ್ಬ 'ನರಕಚತುರ್ದಶಿಯ ನಸುಕಿನಲ್ಲೇ' ಕನಸು ಕಾಣಲಾರಂಭಿಸುವ ಸನ್ನಿವೇಶವಂತೂ ತೀರ ಸಹಜಸುಂದರವಾಗಿದೆ. ತಿಳಿಹಾಸ್ಯವನ್ನೊಳಗೊಂಡ ಈ ದೃಶ್ಯದಲ್ಲಿ ನವನಾಗರಿಕತೆಯ ಅರ್ಥಹೀನತೆಯ ಮೇಲೆ ಬೆಳಕು ಬೀರಲಾಗಿದೆ. 'ನರಕಚತುರ್ದಶಿಯ ನಸುಕಿನಲ್ಲಿ' ಅಳಿಯನ ಅಬ್ಬರ ವ್ಯಕ್ತವಾಗಿದ್ದರೆ 'ಸಕ್ರಿಯ ಸಹಾಯ'ದಲ್ಲಿ ಮಾವನ ಕಳವಳ ಬಿಂಬಿತವಾಗಿದೆ. ಹೆಣ್ಣು ಸಂತಾನ ಪಡೆದವರ ಗೋಳು ಇಲ್ಲಿ ಪರಿಣಾಮಕಾರಿಯಾಗಿ ಮೂಡಿದೆ. ನಿನ್ನ ಅತ್ತೆಗೆ ಮೈಯಲ್ಲಿ ಹುಷಾರಿಲ್ಲ, ದೀಪಾವಳಿಗೆ ಬರಬೇಡ ಎಂದು ಅಳಿಯನಿಗೆ ಕಾಗದ ಬರೆದು ತನ್ನನ್ನೇ ತಾನು ಜಾಣನೆಂದುಕೊಂಡ ಮಾವ, ಆ ಕಾಗದ ಕಂಡು ಓಡಿ ಬಂದ ಅಳಿಯ ಹಾಗೂ ಅಳಿಯನಿಂದ ಸಂಗತಿ ತಿಳಿದ ಅತ್ತೆ ಇವರ ಮುಂದೆ ಮೂರ್ಖನಾಗುವ ಚಿತ್ರ ರಂಜನೀಯವಾಗಿದೆ;

ತಮ್ಮ ಭಾಷಣವನ್ನು ಸಿದ್ಧಪಡಿಸಿಕೊಳ್ಳುವ ಚಿಂತೆ ಸಾಹೇಬರದಾದರೆ ಬರುವ ನೂರೆಂಟು ಫೋನುಗಳಿಗೆ ಉತ್ತರಿಸುವ ಚಿಂತೆ ಚಪರಾಸಿಯದು. ಆ ಚಪರಾಸಿಯ ಮುಗ್ಧಮನಸ್ಸಿನ ಚಿತ್ರವೇ 'ರಾಂಗ್ ನಂಬರ್ ಪ್ಲೀಜ್'ನ ವಿಶೇಷ ಆಕರ್ಷಣೆ! ಮುಗ್ಧನಾಗಿದ್ದರೂ ಆತನ ಹುಚ್ಚು ತರ್ಕ ಹಾಗೂ ತಲೆಹರಟೆಗಳು ಎಲ್ಲರನ್ನೂ ಸೆರೆಹಿಡಿಯುತ್ತವೆ. ಬ್ರಾಹ್ಮಣರ ಮಡಿವಂತಿಕೆಯನ್ನು ಪ್ರಸ್ತಾಪಿಸುವ ದೃಶ್ಯ 'ಅತ್ತೆಯ ಮನೆಯಲ್ಲಿ'. ಹಜಾಮತಿ ಮಾಡಿಸಿಕೊಂಡು ಅತ್ತೆಯ ಮನೆಯಲ್ಲಿ ಅಡಿಗೆಮನೆ ಪ್ರವೇಶಿಸಿದ ಅಳಿಯ, ಹೆಂಡತಿಯ ಕೈಯಿಂದ ಚಹಾ ಮಾಡಿಸಿ, ಇನ್ನೇನು ಕುಡಿಯುವಷ್ಟರಲ್ಲಿ ಅದು ವರೆಗೆ ಗೀತಾಪಾರಾಯಣ ಮಾಡುತ್ತಿದ್ದ ಅತ್ತೆ ಅಡಿಗೆಮನೆಗೆ ಬರಬೇಕೇ? ಅಣ್ಣತಂಗಿಯರ ನಡುವಿನ ಮೋಜಿನ ಪ್ರಸಂಗಗಳು ಅದರಲ್ಲೂ ಮೂರ್ಖರ ದಿನವೆಂದು ಪ್ರಸಿದ್ಧಿ ಪಡೆದಿರುವ ಎಪ್ರಿಲ್

ಒಂದರಂದು, ಅಣ್ಣನನ್ನು ಫೂಲ್ ಮಾಡಲು ಪ್ರಯತ್ನಿಸಿದ ತಂಗಿ ತಾನೇ ಮೂರ್ಖಳಾದ ಪ್ರಸಂಗ 'ಎಪ್ರಿಲ್ ಫೂಲ್'ನಲ್ಲಿದೆ. ಕೌಟುಂಬಿಕ ಸಾಮರಸ್ಯದ ಹಿನ್ನೆಲೆ, ನವನಾಗರಿಕತೆಯ ಸೋಂಕು ಹಾಗೂ ಆಧುನಿಕ ತರುಣ-ತರುಣಿಯರ ಮನೋಭಾವ ಇತ್ಯಾದಿಗಳನ್ನು ಇಲ್ಲಿ ಗುರುತಿಸಬಹುದು.

ಇನ್ನು ಏಕಪಾತ್ರಾಭಿನಯಗಳ ಹಿನ್ನೆಲೆಯೊಂದಿಗೆ ಹೋಲಿಸಿ ನೋಡುವುದರ ಮೂಲಕ ದ್ವಿಪಾತ್ರಾಭಿನಯಗಳ ಬಗ್ಗೆ ಹೆಚ್ಚು ಸ್ಪಷ್ಟವಾಗಿ ತಿಳಿದುಕೊಳ್ಳಬಹುದಾಗಿದೆ. ಹೆಸರೇ ಸೂಚಿಸುವಂತೆ ಏಕಪಾತ್ರಾಭಿನಯದಲ್ಲಿ ಬರುವುದು ಒಂದೇ ಪಾತ್ರ, ಒಂದೇ ದೃಶ್ಯ. ಆ ರಂಗಸಜ್ಜಿಕೆಗೆ ಆತನೇ ಜೀವಾಳ. ಆದರೆ ದ್ವಿಪಾತ್ರಾಭಿನಯದಲ್ಲಿ ಎರಡು ಪಾತ್ರಗಳಿರುತ್ತವೆ. ಏಕಪಾತ್ರಾಭಿನಯದಲ್ಲಿ ವ್ಯಕ್ತಿಯೋರ್ವನ ಮಾತಿನಲ್ಲಿ ಇನ್ನೊಬ್ಬನ ಮಾತಿನ ಮಥಿತಾರ್ಥ ಹುದುಗಿರುತ್ತದೆ. ಆದರೆ ದ್ವಿಪಾತ್ರಾಭಿನಯದಲ್ಲಿ ಇಬ್ಬರ ಮಾತುಗಳೂ ಬೇರೆ ಬೇರೆಯಾಗಿರುತ್ತವೆ. ಏಕಪಾತ್ರಾಭಿನಯದಲ್ಲಿಯ ದೃಶ್ಯ ಆಂಶಿಕ, ಅಪರಿಪೂರ್ಣ ಹಾಗೂ ಕಲ್ಪನೆಯ ಮೇಲೆ ನಿಂತುದುದು. ಆದರೆ ದ್ವಿಪಾತ್ರಾಭಿನಯದಲ್ಲಿಯ ದೃಶ್ಯ ಪರಿಪೂರ್ಣ ಪ್ರತ್ಯಕ್ಷ. ಏಕಪಾತ್ರಾಭಿನಯದಂತೆ ಅಪೂರ್ವ ನಟನಾ ಕೌಶಲದ ನಟನೇ ಇಲ್ಲಿಯೂ ಬೇಕೆಂದು ಅನ್ನಿಸುವುದಿಲ್ಲ. ಸಾಮಾನ್ಯ ಮಟ್ಟದ ನಟನೂ ದ್ವಿಪಾತ್ರಾಭಿನಯದಲ್ಲಿ ಯಶಸ್ವಿಯಾಗಬಲ್ಲನು. ಅದೇ ರೀತಿ ಸಾಮಾನ್ಯ ಮಟ್ಟದ ಪ್ರೇಕ್ಷಕರೂ ಕೂಡ ಇದನ್ನು ಸುಲಭವಾಗಿ ಗ್ರಹಿಸಬಲ್ಲರು. ಈ ದೃಷ್ಟಿಯಿಂದ ಏಕಪಾತ್ರಾಭಿನಯವು ವಿಶೇಷ ಜಾಣ್ಮೆಯ ನಟ ಹಾಗೂ ಪರಿಣತ ಪ್ರೇಕ್ಷಕರ ವಸ್ತುವಾದರೆ ದ್ವಿಪಾತ್ರಾಭಿನಯವು ಸಾಮಾನ್ಯ ನಟ ಹಾಗೂ ಪ್ರೇಕ್ಷಕರ ವಸ್ತುವಾಗಿದೆ. ಇದನ್ನೇ ಬೇರೆ ಮಾತಿನಲ್ಲಿ ಹೇಳುವುದಾದರೆ, ಏಕಪಾತ್ರಾಭಿನಯದಲ್ಲಿ ರಸಾನುಭೂತಿ ಕಷ್ಟಸಾಧ್ಯವಾದರೆ ದ್ವಿಪಾತ್ರಾಭಿನಯದಲ್ಲಿ ಅದು ಸುಲಭಸಾಧ್ಯವೆನ್ನಬಹುದು. ಒಟ್ಟಿನಲ್ಲಿ ದ್ವಿಪಾತ್ರಾಭಿನಯ ಒಂದು ಹಳೆಯ ಪ್ರಕಾರವಾದರೆ ಏಕಪಾತ್ರಾಭಿನಯ ಒಂದು ಹೊಸ ಪ್ರಯೋಗ!

ಪ್ರಸ್ತುತ ಕೃತಿಯಲ್ಲಿ ಸಂಗ್ರಹಿತವಾಗಿರುವ ಆರು ದ್ವಿಪಾತ್ರಾಭಿನಯಗಳ ವಿಮರ್ಶಾತ್ಮಕ ಪರಿಚಯದಿಂದ ಮೇಲಿನ ಮಾತುಗಳನ್ನು ಸಮರ್ಥಿಸಬಹುದು.

ಸಂಪ್ರದಾಯಪ್ರಿಯಳಾದ ಅತ್ತೆ, ಸೇವಾನಿವೃತ್ತ ಪತಿ, ಸತಿಗಾಗಿ ಬಿದ್ದು ಸಾಯುವ ಮೂರ್ಖ ಮಗ, ಹಿರಿಯರನ್ನು ಅಗೌರವದಿಂದ ಕಾಣುವ ಸ್ವೇಚ್ಛಾಚಾರಿ ಸೊಸೆ ಈ ರೀತಿ ಕೌಟುಂಬಿಕ ಕಥಾಹಂದರದಲ್ಲಿ ಸಂಬಂಧ-ಸಂಪ್ರದಾಯ-ಸಂಸ್ಕೃತಿ ಮುಂತಾದ ಜಟಿಲ ಹಾಗೂ ಮೌಲಿಕ ವಿಷಯಗಳ ಬಗ್ಗೆ ಚಿಂತನೆ ನಡೆದಿದೆ. ಮೊದಲ ದ್ವಿಪಾತ್ರಾಭಿನಯದಲ್ಲಿ, 'ಶಿಕ್ಷಣದಿಂದ ಅಂತಃಕರಣ ಬತ್ತುವುದೇ?' ಎಂಬ

ಅರ್ಥಪೂರ್ಣ ಮಾತು ನಾಟಕದ ಕೇಂದ್ರೋಕ್ತಿಯಾಗಿದೆ. ಕುಲಮತಾದಿಗಳ ಭೇದ ಸಲ್ಲದು ಎಂಬ ಭಾವೈಕ್ಯತೆಯ ಕರೆ ಇಲ್ಲಿಯ ವಿಶೇಷ. ಸಂಪ್ರದಾಯಬದ್ಧಳಾದ ಅಜ್ಜಿ ಕೂಡ ಕೊನೆಗೆ ಪರಿವರ್ತನೆ ಹೊಂದುವಳೆಂಬ ಸೂಚನೆಯೊಂದಿಗೆ ಎಲ್ಲರ ಹೃದಯವೈಶಾಲ್ಯವನ್ನು ಪ್ರೇರಿಸುವುದು ಈ ಸನ್ನಿವೇಶದ ಆಶಯವಾಗಿದೆ. ಈ ಮನೆಯ ಸೊಸೆ ಆ ಮನೆಯ ಅತ್ತೆ ಇವರಿಬ್ಬರ ಮಧ್ಯೆ ಹೋಲಿಸಿ ಗುಣದೋಷ ವಿಮರ್ಶೆ ಮಾಡಿದ್ದಾರೆ ಲೇಖಕರು.

ಸಂಪ್ರದಾಯಪ್ರಿಯಳಾದ ಸತಿ - ಸುಧಾರಿಸಿದ ಪತಿ ಇವರಿಬ್ಬರ ವಿಭಿನ್ನ ಮನೋಭಾವಗಳನ್ನು ಪರಿಚಯಿಸಿಕೊಡುವ ಲಘು ನಾಟಕ 'ಶನಿವಾರದ ಸಂಜೆ.' ರವಿವಾರ ವಿಶ್ರಾಂತಿಯ ದಿನವೆಂಬುದೇ ಶನಿವಾರ ಸಂಜೆಯ ಹುಮ್ಮಸ್ಸಿಗೆ ಕಾರಣ. ರವಿವಾರ ನೋಡಲಿರುವ ಸಿನಿಮಾದ ಆಯ್ಕೆಯಲ್ಲಿಯೇ ಅವರಿಬ್ಬರ ನಡುವಿನ ಅಂತರ ವೇದ್ಯವಾಗುತ್ತದೆ. ಸಿನಿಮಾದಿಂದಲೂ ಪುಣ್ಯಸಂಚಯವಾಗಬೇಕು, ಅಂತೆಯೇ ಸತಿಶಕ್ತಿ ಪತಿಭಕ್ತಿ ಆ ಮಹಾತ್ಮೆ ಈ ಮಹಾತ್ಮೆ ಇತ್ಯಾದಿಗಳನ್ನು ನೋಡಬೇಕೆಂಬ ತವಕ ಸತಿಶಿರೋಮಣಿಯದು. ಪತಿಗಾದರೋ ಅರೆಬೆತ್ತಲೆಯಾಗಿ ಮುತ್ತುಕೊಡುವ ಹಾಗೂ 'ಬೆಕ್ಕು ಕಡಿದಾಡಿದಂತೆ ಮಾತನಾಡುವ ಇಂಗ್ಲಿಷ್ ಚಿತ್ರಗಳೇ ಬೇಕು! ಗೃಹಿಣಿ, ಉದ್ಯೋಗಸ್ಥ ಮಹಿಳೆಯರಲ್ಲಿ ಸ್ವಾತಂತ್ರ್ಯದ ವಿಷಯ ದಲ್ಲಿರುವ ಅಂತರ, ಗೃಹಿಣಿಯರನ್ನು ಗುಲಾಮರಂತೆ ದುಡಿಸಿಕೊಳ್ಳಲಾಗುತ್ತಿದೆ ಯೆಂಬ ಆರೋಪ ಇತ್ಯಾದಿ ವಿಷಯಗಳ ವೈಚಾರಿಕ ವಿವೇಚನೆ ಈ ದೃಶ್ಯದ ವೈಶಿಷ್ಟ್ಯವಾಗಿದೆ.

ನೌಕರರ ಪ್ರತಿನಿತ್ಯದ ಬೆಳಗಿನ ಅವಸರವೇ 'ಆಫೀಸಿನ ಅವಸರ.' ಅವಸರ ಕ್ಕಾಗಿ ಎಲ್ಲವೂ ಅಸ್ತವ್ಯಸ್ತ. ಸ್ನಾನದ ನಂತರ ಆಯುಷ್ಕರ್ಮ! ಸ್ಟೋವ್‌ಗೆ ಬತ್ತಿ ಯಿಲ್ಲ, ಚಪಾತಿಗೆ ಹಿಟ್ಟಿಲ್ಲ, ಅವಸರದಲ್ಲಿ ಅಲ್ಲಿರುವ ಬ್ಲೇಡ್ ಹೆಂಡತಿಯ ಕೈಗೆ ತಗುಲಿ ರಕ್ತ ಬರುತ್ತದೆ. ಅಂತೂ ಇಂತೂ ಆಫೀಸಿನ ಸಮಯ ಮೀರಿ ಪತಿ ರಜೆ ಹಾಕಲು ನಿರ್ಧರಿಸುತ್ತಿರುವಂತೆಯೇ ಸತಿಗೆ ತಿಂಗಳ ರಜೆ!

ದರಗಳು ಗಗನಕ್ಕೇರಿದ ಇಂದಿನ ಯುಗದಲ್ಲಿ, ದೊಡ್ಡ ಸಂಸಾರ ಹೊಂದಿದ ದಂಪತಿಗಳು ಸಂಸಾರದ ವೆಚ್ಚವನ್ನು ನಿಭಾಯಿಸುವ ಬಗ್ಗೆ ವಿಚಾರಿಸಿ ವೈದ್ಯಕೀಯ, ಮನರಂಜನೆ, ಶೈಕ್ಷಣಿಕ, ಉಳಿತಾಯ ಇತ್ಯಾದಿಗಳಿಂದ ಕೂಡಿದ ಯಶಸ್ವಿ, ಅಂದಾಜುಪತ್ರಿಕೆಯೊಂದನ್ನು ರಚಿಸುವ ಸುಂದರ ಸನ್ನಿವೇಶವೇ 'ಫ್ಯಾಮಿಲಿ ಬಜೆಟ್'. ಅದರಲ್ಲೂ ಹೆಚ್ಚು ಹೆಣ್ಣು ಹಡೆದವರ ಗೋಳಂತೂ ಹೇಳತೀರದು. ಅವರಿಗೆ ಕಲಿಸಿದರೊಂದು ಚಿಂತೆ, ನೌಕರಿಗೆ ಸೇರಿಸಿದರೆ ಇನ್ನೊಂದು ಚಿಂತೆ. ಹೀಗೆ ಮಧ್ಯಮವರ್ಗದ ಕುಟುಂಬದ ಜೀವಂತ ಚಿತ್ರಣ ಇಲ್ಲಿದೆ.

ಇಂದಿನ ಫ್ಯಾಶನ್‌ಯುಗ, ಟೇಲರುಗಳ ಮನೋಭಾವ ಇತ್ಯಾದಿಗಳ ವಿಡಂಬನೆಯೇ 'ಬುಶ್‌ಕೋಟು'. ತಾನು ತಪ್ಪಾಗಿ ಹೊಲಿದ ಶರ್ಟಿಗಾಗಿ ಸಿಂಪಿಗನು ಗಿರಾಕಿಗಳ ಶರೀರದ ಮೇಲೆ ಆರೋಪ ಹೊರಿಸುತ್ತಾನೆ. ನಿಮ್ಮ ಬಾಡಿ ಹೀಗಿದೆ-ಹಾಗಿದೆ; 'ಹೊಟ್ಟೀ ತಕ್ಕ ಎದಿ ಇಲ್ಲ' ಇತ್ಯಾದಿ! ಅದಕ್ಕೆ ಗಿರಾಕಿಯೂ ಕೂಡ 'ನಿನ್ನ ಬುದ್ಧಿ, ನಿನ್ನ ಕೈಯೊಳಗಿನ ಕತ್ತರಿ ಪ್ರೊಪೋರ್ಶನೇಟ ಇದ್ದಿರಲಿಕ್ಕಿಲ್ಲ' ಎಂದು ಅಷ್ಟೇ ಚುರುಕಾಗಿ ಉತ್ತರಿಸುತ್ತಾನೆ. ಈ ಹಿನ್ನೆಲೆಯಲ್ಲಿ 'ಟೆರಿಲಿನ್ ಯುಗ' 'Automatic wash', ಮಕ್ಕಳ ಫ್ಯಾಶನ್ನಿನ ಹಂಬಲ, ಅಂದಿನ ಹಾಗೂ ಇಂದಿನ ಸ್ತ್ರೀಯರ ಬಟ್ಟೆಬರೆ, ಕುಂಕುಮಗಳಲ್ಲಿ ಪರಿವರ್ತನೆಯಾದುದು ಈ ಅನೇಕ ವಿಷಯಗಳ ಚಿಂತನೆ ನಡೆದಿದೆ. 'ಸೋವಿ ದರದೊಳಗ ಶ್ಯಾಣ್ಯಾತನ ಅದ, ಶ್ಯಾಣ್ಯಾತನದೊಳಗ ಫ್ಯಾಶನ್ ಅದ'ಎಂಬ ನಿರ್ಧಾರದೊಂದಿಗೆ ಸನ್ನಿವೇಶ ಚಿತ್ತಾಕರ್ಷಕವಾಗಿದೆ.

ಸತಿಪತಿಗಳ ಸರಸ ಜೀವನದ ಸಣ್ಣ ಘಟನೆಯೊಂದು ನಿರೂಪಿತವಾಗಿದೆ 'ಉಷಃ ಪಾರಾಯಣ' ದಲ್ಲಿ-ಬೆಳಿಗ್ಗೆ ಎದ್ದು ಪತಿಯು ಸತಿಯನ್ನು ಪದೇ ಪದೇ ಕರೆಯುವದನ್ನೇ ಕವಿ 'ಉಷಃ ಪಾರಾಯಣ' ವೆಂದು ವಿಡಂಬಿಸಿದ್ದಾನೆ.

ಹೀಗೆ ಇಲ್ಲಿ ಸಂಗ್ರಹಿತವಾಗಿರುವ ಎಲ್ಲ ಕಿರುನಾಟಕಗಳೂ ಒಂದಿಲ್ಲೊಂದು ಕಡೆಯಲ್ಲಿ ಪ್ರಯೋಗಗೊಂಡು ಜನಪ್ರಿಯತೆಯನ್ನು ಪಡೆದವೇ ಆಗಿವೆ. ಅತ್ಯಲ್ಪ ಸಮಯದಲ್ಲಿ ಅನಲ್ಪ ರಂಜನೆ ನೀಡುವ ಈ ದೃಶ್ಯಗಳು ತಮ್ಮ ವಿಷಯವೈವಿಧ್ಯದಿಂದ ಪ್ರೇಕ್ಷಕರನ್ನು ಬೆರಗುಗೊಳಿಸಬಲ್ಲವೂ ಆಗಿವೆ. ಸನ್ನಿವೇಶಕ್ಕೆ ಹೊಂದುವ ತೀರ ಕನಿಷ್ಠತಮ (ಕಡಿಮೆ) ರಂಗ ಪರಿಕರಗಳೊಂದಿಗೆ ಅಭಿನಯಿಸಬಹುದಾದ ಸೌಲಭ್ಯ ಈ ದೃಶ್ಯಗಳ ಇನ್ನೊಂದು ಉತ್ತಮಾಂಶವಾಗಿದೆ. ಪ್ರತ್ಯಕ್ಷ ಹಾಗೂ ನೇರ ಅಭಿನಯ ಮತ್ತು ಸಂವಾದಗಳಿಂದಾಗಿ ದ್ವಿಪಾತ್ರಾಭಿನಯಗಳು ಏಕಪಾತ್ರಾಭಿನಯಗಳಿಗಿಂತ ಹೆಚ್ಚು ಸುಲಭಗ್ರಾಹ್ಯ ಹಾಗೂ ಜನಪ್ರಿಯವಾಗಬಲ್ಲವೆಂಬುದನ್ನಿಲ್ಲಿ ಹೇಳಬೇಕಾದುದು ಅನಿವಾರ್ಯ.

ಒಟ್ಟಿನಲ್ಲಿ, ಎನ್ಕೆ ಅವರ ಶೈಲಿ ಸರಳವಾದುದಾದರೂ ಸೊಗಸಿನಿಂದ ಕೂಡಿದುದು. ಆಡುಮಾತಿನ ಸೊಗಡು ಅಲ್ಲಿ ಪ್ರಾಧಾನ್ಯತೆ ಪಡೆಯುತ್ತದೆ. ಅದರಲ್ಲೂ ಧಾರವಾಡದ ವಿಶಿಷ್ಟಭಾಷೆ ಅವರಲ್ಲಿ ಜೀವಂತವಾಗಿ ಕಾಣುತ್ತದೆ. ಅಪಾರವಾದ ಲೋಕಾನುಭವಸಂಪತ್ತಿ ಎನ್ಕೆಯವರ ಸಾಹಿತ್ಯದ ಸೊಬಗನ್ನು ಇನ್ನೂ ಹೆಚ್ಚಿಸಿದೆ. ಸಮಾಜದ ವಾಸ್ತವ ಚಿತ್ರಣ, ಅದರ ಲೋಪದೋಷಗಳ ಪ್ರಾಸಂಗಿಕ ಪರಿಚಯ, ಆಧುನಿಕತೆಯ ಸೋಂಕು, ಒಳಿತಿನ ಅಪೇಕ್ಷೆ, ಮೊನಚಾದ ವಿಡಂಬನೆ, ವೈಚಾರಿಕತೆಯ ಒಪ್ಪ ಈ ಎಲ್ಲ ಗುಣವಿಶೇಷಗಳಿಂದ ಕೂಡಿದ ಇಲ್ಲಿಯ ಈ ಏಕಪಾತ್ರಾ

ಭಿನಯ ದ್ವಿಪಾತ್ರಾಭಿನಯಗಳು ಎನ್ಕೆ ಸಾಹಿತ್ಯಕೃತಿಯಲ್ಲಿ ಹಾಗೂ ಆಧುನಿಕ ನಾಟಕಸಾಹಿತ್ಯದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿವೆಯೆಂಬುದು ನಿಸ್ಸಂದೇಹ.

— **ಶಾಂತಿನಾಥ ದಿಬ್ಬದ**

## ೨

ಏಕಪಾತ್ರಾಭಿನಯ ರಂಗಮಂಚಕ್ಕೆ ಮೊದಲ ಮೆಟ್ಟಿಲು. ಇದನ್ನು ಹತ್ತಲು ಬಾರದವನಿಗೆ ರಂಗಭೂಮಿಯು ನೆಲ ಅಂಕು-ಡೊಂಕು. ಆದ್ದರಿಂದ ರಂಗ ನಟನಾಗುವವನಿಗೆ ಏಕಪಾತ್ರಾಭಿನಯದ ಚುರುಕುತನ ಅತ್ಯವಶ್ಯ. ಅವರ ನೆಲೆಗಳನ್ನು ಗುರುತಿಸಿ, ಚೌಕಸಿ ಮಾಡಿ ಅರಗಿಸಿಕೊಳ್ಳುವ ಗುಣ ಅತೀ ಮುಖ್ಯ. ಅಂಥವನ ಭಾವನೆಗಳಿಗೆ ಒತ್ತು ಕೊಡುವ ಸಾಹಿತ್ಯವೂ ಅಷ್ಟೇ ಅಗತ್ಯ.

ಆದರೆ ಇಂದು ಕನ್ನಡ ಸಾಹಿತ್ಯದಲ್ಲಿ ಅಭಿನಯ ಕಲಿಸುವ, ಭಾವನೆಗಳನ್ನು ಥಳಥಳಿಸುವ ಸಾಹಿತ್ಯ ತೀರ ಕಡಿಮೆ.

ಆದರೆ ಎನ್ಕೆ ನಿರಾಶೆಗೊಳಿಸಿಲ್ಲ. ತಮ್ಮ 'ಏಕಪಾತ್ರಾಭಿನಯ – ದ್ವಿಪಾತ್ರಾಭಿನಯಗಳು' ಎಂಬ ಪುಸ್ತಕದಲ್ಲಿ ಆ ಕೊರತೆ ತುಂಬಿಸಿದ್ದಾರೆ. ಈ ಸಂಕಲನದಲ್ಲಿ ಎಂಟು ಏಕಪಾತ್ರಾಭಿನಯಗಳು, ಆರು ದ್ವಿಪಾತ್ರಾಭಿನಯಗಳು ಸೇರಿವೆ. ಈ ಬರಹಗಳಿಗೆ ಎನ್ಕೆಯವರು 'ನಾಟ್ಯಛಟ' ಎಂದು ಕರೆದಿದ್ದಾರೆ. ಅವರ ಸುಲಲಿತ ಭಾಷೆಗೆ, ವಿನೋದಪ್ರಿಯತೆಗೆ, ಬದುಕನ್ನು ಗುರುತಿಸುವ ಶೋಧನಾದೃಷ್ಟಿಗೆ ಇವು ಸಾಕ್ಷಿಯಾಗಿವೆ.

ಏಕತಾನತೆಯಿಂದ ಈ ಏಕಪಾತ್ರಾಭಿನಯದ ಲೇಖನಗಳನ್ನು ಓದುತ್ತಿದ್ದಂತೆ ನಮಗರಿವಿಲ್ಲದೆಯೇ ನಾವು ನಟರಾಗಿ ಬಿಡುವ ಅಪಾಯವೂ ಇದೆ. ಅಂಥ ಶಕ್ತಿಯನ್ನು ಈ ರಸಲೇಖನಗಳು ಪಡೆದುಕೊಂಡಿವೆ. ಈ ಸಂಕಲನದಲ್ಲಿಯ ಮೊದಲ ಲೇಖನ 'ಭಜಿಗೆ ಬಾಯಿಲ್ಲವಯ್ಯಾ' ಇದು ಮನುಷ್ಯನ ಸ್ವಾರ್ಥಕ್ಕೆ ರಾವುಗನ್ನಡಿ ಹಿಡಿಯುತ್ತದೆ. ಮನುಷ್ಯನಲ್ಲಿ ಸ್ವಾರ್ಥದ ಎಳೆಯೊಂದು ತಂಬೂರಿಯಾಗಿ ಸದಾ ಮೀಟುತ್ತಲೇ ಇರುತ್ತದೆ ಎಂಬುದನ್ನು ಎನ್ಕೆ ಇಲ್ಲಿ ತುಂಬ ಸೊಗಸಾಗಿ ಚಿತ್ರಿಸಿದ್ದಾರೆ. ತಾನು ಅಡುಗೆಮನೆಯಲ್ಲಿ ಕೂತು ಭಜಿ ತಿನ್ನುತ್ತಿರುವಾಗ ಮನೆಗೆ ಸ್ನೇಹಿತರು ಬಂದರೆ ಅವರಿಗೂ ಪಾಲು ಕೊಡಬೇಕಾಗುತ್ತದಲ್ಲ ಎಂಬ ಭಾವ ಇಡೀ ಮನುಷ್ಯಕುಲದ ಆಂತರಿಕ ಸ್ವಾರ್ಥದ ತದ್ರೂಪವಾಗಿ ಬಿಡುತ್ತದೆ. ಆದರೆ ಮಾನವನ ಇಂಥದೊಂದು ಸ್ವಭಾವವನ್ನು ಗುರುತಿಸಿ ವಿಶ್ಲೇಷಿಸುವ ರೀತಿ, ಸೂಕ್ಷ್ಮ ಎಳೆಹಿಡಿದು, ಅದನ್ನು ಅಗಾಧ ರೀತಿಯಲ್ಲಿ ಕಟ್ಟುವ ಜಾಣ್ಮೆ ಎನ್ಕೆಯಂಥವರಿಗೇ ಸಾಧ್ಯ. 'ಭಾನುವಾರದ ಬೆಳಗ್ಗೆ' ಆಧುನಿಕ ಬದುಕಿನಲ್ಲಿ ಚಿಂದಿಯಾಗುತ್ತಿರುವ ನೌಕರವರ್ಗದವರ

ಒಂದು ಕ್ಷಣದ ಆನಂದದ ಚಿಂತನೆಯನ್ನು ಮೂಡಿಸುತ್ತಿದೆಯಾದರೂ ಆ ಸಂತೋಷ ಎಷ್ಟೊಂದು ಕ್ಷಣಿಕ ಎಂದೆನಿಸಿದಾಗ ಮನಸ್ಸು ಟುಸ್ಸಾಗಿ ಬಿಡುತ್ತದೆ. ಬೆಳಗಿನ ನಿದ್ರೆಯಿಂದ ಆರಂಭವಾದ ಯೋಚನೆ ಸಂಸಾರದ ತಾಪತ್ರಯಗಳನ್ನು ಹೆಕ್ಕುತ್ತ, ಅವುಗಳನ್ನು ಅರಗಿಸಿಕೊಳ್ಳಲಾಗದೆ ಕಕ್ಕಿಕೊಳ್ಳುವ ಶ್ರೀಸಾಮಾನ್ಯನ ನೋಟ ಕಣ್ಣಿಗೆ ಇರಿಯುತ್ತದೆ.

'ನರಕ ಚತುರ್ದಶಿಯಲ್ಲಿ' ವ್ಯಂಗದ ಲೇಪನದೊಡನೆ ಬಂದ ವಿನೋದಲೇಖನ. ಹೊಸದಾಗಿ ಮದುವೆಯಾದ ಅಳಿಯ ಮೊದಲ ದೀಪಾವಳಿಗೆ ಮಾವನ ಮನೆಗೆ ಬಂದಿದ್ದಾನೆ. ಮಾವ ಕೊಡಲಿರುವ ಉಡುಗೊರೆಗಳಿಗಾಗಿ ಮನಸ್ಸಿನಲ್ಲಿಯೇ ಮಂಡಿಗೆ ತಿನುತ್ತ ತನ್ನ 'ನಾಟ್ಯಛಟ' ತೀರಿಸಿಕೊಳ್ಳುತ್ತಾನೆ. ಇಲ್ಲಿ ಎನ್ಕೆಯವರ ಹಾಸ್ಯಪ್ರಜ್ಞೆ ಗರಿಗೆದರಿದೆ. ಶಹನಾಯಿಯಲ್ಲಿ ಕನ್ನಡ ಎಲ್ಲಿಂದ ಬರಬೇಕು ಎಂದು ಮಾತಿಗೆ ತಿವಿಯುತ್ತ, ಬಿಯರ್ರಾನಿಗೆ ಕನ್ನಡ ಹೆಸರು ಕೊಡೋಣ ಎಂದು ಉದಾರಿಯಾಗುತ್ತಾರೆ. ಮಾವಂದಿರನ್ನು ಬುಡತನಕ ಅಲ್ಲಾಡಿಸುವ ಆಧುನಿಕ ಅಳಿಯಂದಿರನ್ನು ಛೇಡಿಸುತ್ತಾರೆ. ಆರತಿಗೆ ಹಾಕಲೂ ನೋಟುಗಳಿಲ್ಲದ ಅಳಿಯಂದಿರ ಪರವಾಗಿ ಮತ್ತೊಂದೆಡೆ ನಿಂತು ಅವರದೆಲ್ಲ ಚಿಕ್ಕು ವ್ಯವಹಾರ ಎಂದು ನಗಿಸುತ್ತಾರೆ. ಕೊನೆಗೆ ಉಂಡ ಮನೆಯ ಗಳ ಎಣಿಸುವ ರೀತಿ ಈ ಅಳಿಯಂದಿರದು ಎಂದು ಸಾಬೀತು ಮಾಡುವ ಈ ಲೇಖನ ಕೊಡುವ ತೃಪ್ತಿ ಅಗಾಧ.

ಎನ್ಕೆ ತಮ್ಮ ಹಾಸ್ಯ ಹಾಗೂ ವ್ಯಂಗ್ಯ ಮಿಶ್ರಿತ ಅಲುಗಿನಿಂದ ರಾಜಕೀಯವನ್ನೂ ತಿವಿಯುತ್ತ ಹೋಗುತ್ತಾರೆ. 'ದೇಶಕ್ಕೆ ಏರಕೀ ಕಾಲ ಬರತದ' ಎಂದು ಹೇಳುವ ಲೇಖಕರು ಹತಾಶನಾದ ಶ್ರೀಸಾಮಾನ್ಯನನ್ನು ಕೆರಳಿಸುತ್ತಾರೆ. ಕೊನೆಗೆ 'ಕೇಜೀ ರೇಟೆಲ್ಲ ಏರ್ತ್ಯಾವಲ್ಲ' ಎಂಬ ಸಮರ್ಥನೆಯನ್ನೂ ನೀಡುತ್ತಾರೆ.

'ಅತ್ತೆಯ ಮರೆಯಲ್ಲಿ' ನಮಗೆ ರಸಿಕತನದ ಗುಂಗು ಹಿಡಿಸುತ್ತದೆ. ಅತ್ತೆಯ ಮನೆಗೆ ಹೊಸದಾಗಿ ಬಂದ ಹುಡುಗಿ ನೀರೊಲೆಯ ಹತ್ತಿರ ಪುಕ್ಕಲು ಗಂಡನೊಡನೆ ನಡೆಸುವ ಸಂವಾದ, ಪ್ರಾಯ ಸರಿದವರಿಗೆ ಒಳ್ಳೇ ಟಾನಿಕ್ಕು ನೀಡುತ್ತದೆ. ಹೊಸ-ಜಿಸಿಯ ದಂಪತಿಗಳಿಗೆ, ಅದು ತಮ್ಮದೇ ಗುಟ್ಟು ಅನ್ನುವಂಥ ಕೋಪ ತರಿಸುತ್ತದೆ. ಹುಡುಗಿಯ ಮಾತು ಹೃದಯದ ಭಾಷೆಯಾಗುತ್ತದೆ.

ಹೀಗೇ 'ಎಪ್ರಿಲ್ ಫೂಲ್', 'ನಿರ್ಮಲಾ' ಲೇಖನಗಳೂ ನಗಿಸುತ್ತವೆ. ಭಾವನನ್ನು, ಮಾತಿನ ಮೊನಚುಗಳನ್ನು ಅರ್ಥಮಾಡಿಕೊಂಡು ಅಭಿನಯಿಸಿದರೆ ನಟನೆ ಪಕ್ಕಾ ಆಗುತ್ತದೆ. ನಟ ಚಾಲೂಕನಾಗುತ್ತಾನೆ. ಭಾವನೆಗಳ ಕೊರತೆ

ಯಿರುವವರಿಗೆ, ವಸ್ತುವಿನ ಬರ ಬಂದರ್ವಗೆ ಈ ಏಕಪಾತ್ರಾಭಿನಯಗಳು ಸೊಗಸಾದ ಆಹಾರವಾಗುತ್ತವೆ.

ಎನ್ಕೆ ನಮ್ಮ ಕಾಲದ ಮುದ್ರಣ ಎಂದು ತೆರೆದ ಹೃದಯದಿಂದ ಒಪ್ಪಿಕೊಳ್ಳುವುದಾದರೆ ಅವರ ದ್ವಿಪಾತ್ರಾಭಿನಯಗಳನ್ನು ಓದಬೇಕು. ಜೇನಿನಂಥ ನುಡಿ, ಶಬ್ದ ಲಾಲಿತ್ಯದೊಡಗೂಡಿದ ವಾಕ್ಯಬಂಧಗಳು, ಕಡೆಗಣ್ಣಲ್ಲೇ ಹೃದಯಕ್ಕೆ ಚೂರಿ ಹಾಕುವ ರಸಹನಿಗಳು, ಆಡುಮಾತಿನಲ್ಲಿ ಪ್ರೀತಿ ಹುಟ್ಟಿಸುವ ಸಂಭಾಷಣೆಗಳು. ಇಲ್ಲಿ ಎನ್ಕೆ ಎಷ್ಟೊಂದು ರಸಿಕರು ಎಂದು ಅಚ್ಚರಿಪಡುವಂತಾಗುತ್ತದೆ. ಈ ದ್ವಿಪಾತ್ರಾಭಿನಯದಲ್ಲಿ 'ಒಂದು ಗಂಡು, ಒಂದು ಹೆಣ್ಣು'....ಮಿಗಿಲಾಗಿ 'ಗಂಡ-ಹೆಂಡತಿ' ಭಾಷೆಯೊಡನೆ ಕ್ರಿಯೆ ನಡೆಸುತ್ತಾರೆ. ಹದಿಹರೆಯದ ದಂಪತಿಗಳೇ ಇಲ್ಲಿ ಮುಖ್ಯವಾಗುತ್ತಾರೆ. ಅವರಾಡುವ ಸರಸ-ವಿರಸ, ಅವರು ಜೀವನವನ್ನು ನೋಡುವ ವಿಭಿನ್ನ ದೃಷ್ಟಿ, ಭೂತ-ಭವಿಷ್ಯಕ್ಕೆ ಅವರು ಹಾಕುವ ಚಾಳೀಸು, ಕೈಗೆ ಸಿಕ್ಕ ವಸ್ತುವಿನಲ್ಲೇ ಬದುಕನ್ನು ಅಗೆದು ನೋಡುವ ಪರಿಶೋಧನಾಶೀಲತೆ... ನಮಗೆ ಅಚ್ಚರಿಯುಂಟುಮಾಡುತ್ತವೆ, ಎನ್ಕೆ ಈ ಎಲ್ಲ ಪಾತ್ರಗಳಿಗೂ ಹಾಸ್ಯದ ಅಂಗಿ ತೊಡಿಸಿದ್ದರೂ ಅವುಗಳೊಳಗೆ ಇಳಿದಂತೆ ಜೀವನದ ಹತ್ತು ಮುಖಗಳನ್ನು ಕಂಡ ಅನುಭವ ನಮಗಾದಾಗ, ನಾವು ಕೇವಲ ನಗಲಾಗುವದಿಲ್ಲ.

'ಶನಿವಾರ ಸಂಜೆ' ಉದ್ಯೋಗಸ್ಥರ ಪಾಲಿಗೆ ಹೊಸ ಹುರುಪಿನದು. ಎನ್ಕೆ ಆ ಹುರುಪನ್ನು ಗಂಡಿನಲ್ಲಿ ತುಂಬುತ್ತಿದ್ದಂತೆ ವಾಚಾಳೀ ಹೆಂಡತಿ, ತನಗೂ ಸಮಾನ ಹಕ್ಕು ಬೇಕೆನ್ನುವ ಬೇಡಿಕೆ ಇಟ್ಟು, ಗಂಡಿನ ಹುರುಪನ್ನು ಹುರಿದು ಹಾಕುತ್ತಾಳೆ. ಗಂಡನನ್ನು ಗೆದ್ದುಕೊಳ್ಳುವ ತಂತ್ರಗಳನ್ನು ಎನ್ಕೆ ಇಲ್ಲಿ ಬಲು ಚೆನ್ನಾಗಿ ನಿರೂಪಿಸಿದ್ದಾರೆ.

'ಅವಸರ'ದ ನೀತಿ ಕನ್ನಡದಲ್ಲಿ ಈಗಾಗಲೇ ಸವಕಳಿಯಾಗಿ ಹೋಗಿದ್ದರೂ, ಎನ್ಕೆ ಕಾಣುವ ಅವಸರದಲ್ಲೂ ಚೆಲುವಿದೆ. ಹೆಂಡತಿಯೊಡನೆ ಅವರು ತೋರುವ ಚಾಲೂಕತನ ಮುಖದಲ್ಲಿ ಬಿಗಿದ ನರಗಳನ್ನು ಸಡಿಲಿಸುತ್ತದೆ.

'ಫ್ಯಾಮಿಲಿ ಬಜೆಟ್' ಸೊಗಸಾದ ಪ್ರಹಸನ. ಸಂಸಾರದ ಖರ್ಚು-ವೆಚ್ಚಗಳ ಲೆಕ್ಕ ಹಾಕುವ ಗಂಡ-ಹೆಂಡತಿಯ ಮಾತು, ಮನೆಯಿಂದ ಜಿಗಿದು, ಪಾರ್ಲಿಮೆಂಟಿನ ಅಂದಾಜುಪತ್ರಿಕೆಯನ್ನು ಲೇವಡಿ ಮಾಡುತ್ತದೆ. ಇಲ್ಲಿ ಗಂಡ-ಹೆಂಡಿರ ಲೆಕ್ಕ, ರಾಷ್ಟ್ರೀಕರಣವಾಗುತ್ತದೆ. ಫ್ಯಾಮಿಲಿ ಬಜೆಟ್ ನಮಗೂ ತಪ್ಪಿಲ್ಲವಲ್ಲ ಎಂಬ ಪ್ರಜ್ಞೆ ನಮಗಾದಾಗ, ನಗು ನಮ್ಮಿಂದ ದೂರಾಗುತ್ತದೆ.

ಎನ್ಕೆ ಕೇವಲ ಮನೆ, ಆಫೀಸು, ಸರಕಾರಗಳನ್ನಷ್ಟೇ ಲೇವಡಿ ಮಾಡುವದಿಲ್ಲ. ಸಮಾಜ ಮತ್ತು ಅದರ ಬದಲಾಗುತ್ತಿರುವ ಮೌಲ್ಯಗಳನ್ನೂ ಹಿಡಿದು ಅಲ್ಲಾಡಿಸು

ತ್ತಾರೆ. ಫ್ಯಾಶನ್ ಈಗ ನಡೆಯುತ್ತಿರುವ ನಾಣ್ಯ. ಎನ್ಕೆ ಅದನ್ನು ಎತ್ತಿ ನೀವಾಳಿಸಿದ್ದಾರೆ ತಮ್ಮ 'ಬುಶ್‌ಕೋಟ್' ಪ್ರಹಸನದಲ್ಲಿ. ಗಂಡ ತನ್ನ ಹೊಸ ಬುಶ್‌ಕೋಟ್ ಬಗ್ಗೆ ಹೇಳುತ್ತ ಹೋಗುತ್ತಿದ್ದಂತೆ,ಅಲ್ಲಿ ಇಂದಿನ ಫ್ಯಾಶನ್ನಿನ ವಿಶ್ಲೇಷಣೆಯೂ ಆಗಿಬಿಡುತ್ತದೆ. ಹೆಂಡತಿ ಹೊಲಿಸಿದ ರವಿಕೆಯ ಬಗ್ಗೆಯೂ ಹಾಗೆಯೇ. ಟೊಂಕದ ಕೆಳಗಿರಬೇಕಾದ ರವಿಕೆ ಮೇಲಮೇಲಕ್ಕೆ ಹೇಗೆ ಅಮರಿಕೊಳ್ಳುತ್ತಬಂತು ಎಂಬುದನ್ನು ಹೇಳುವಾಗ ಎನ್ಕೆ ಕಣ್ಣಲ್ಲಿ ಮಿಂಚುತ್ತಾರೆ. ಹೆಂಗಸರು ಉಡುವ ಸೀರೆ, ಹಣೆಗೆ ಹಚ್ಚುವ ಚಿತ್ರ - ವಿಚಿತ್ರ ಕುಂಕುಮದ ಬೊಟ್ಟುಗಳು, ಕಲರ ಮ್ಯಾಚಿಂಗ್ ಹವ್ಯಾಸ—ಹೀಗೇ ಒಂದೊಂದಾಗಿ ಹಿಡಿಯುತ್ತ—ಹಿಂದೆ ಬಂದರೆ ಒದೆಯುತ್ತ, ಮುಂದೆ ಬಂದರೆ ತಿವಿಯುತ್ತ ಈ ಫ್ಯಾಶನ್ನನ್ನು ಎನ್ಕೆ ತುಂಬ ಅಗ್ಗ ಮಾಡಿದ್ದಾರೆ.

ಎನ್ಕೆಯವರ ನಾಟ್ಯಘಟಿಗಳನ್ನು ಓದುತ್ತಿದ್ದಂತೆ ನಾವೂ ಅದನ್ನು ಅಂಟಿಕೊಳ್ಳದಿರಲಾಗುವದಿಲ್ಲ. ಸಾಹಿತ್ಯದಲ್ಲಿ ಜೀವನವನ್ನು ಪ್ರೀತಿಸುವ ಆಶೆ ಇರಬೇಕು ಅನ್ನುವ ಮಾಸ್ತಿಯವರ ಮಾತು, ಎನ್ಕೆಯವರ ಬರಹದಲ್ಲಿ ಕಾಂಕ್ರೀಟಾಗಿದೆ. ಅವರ ಸಾಹಿತ್ಯ ಓದುತ್ತಿದ್ದರೆ, ಓದಿ ಅರಗಿಸಿಕೊಂಡರೆ ನಾವೂ ಕೂಡ ಜೀವನವನು ಇನ್ನಷ್ಟು ಪ್ರೀತಿಸುತ್ತೇವೆ.

— **ಹೂಲಿ ಶೇಖರ್**

# ಎನ್ಕೆ ಅವರ ಹಾಸ್ಯದ ಸ್ವರೂಪ

ಡಾ. ಬಸವರಾಜ ಮಲಶೆಟ್ಟಿ

ಕನ್ನಡದ ಹಾಸ್ಯ ಬರಹಗಾರರಲ್ಲಿ ಎರಡು ವಿಧ. ಹಾಸ್ಯವನ್ನೇ ತಮ್ಮ ಸಾಹಿತ್ಯದ ಏಕಮಾತ್ರ ಧ್ಯೇಯವಾಗಿಟ್ಟುಕೊಂಡವರು ಕೆಲವರು. ಉಳಿದವರು ತಮ್ಮ ಕೃತಿಗಳಲ್ಲಿ ಹಾಸ್ಯವನ್ನು ಪ್ರಾಸಂಗಿಕವಾಗಿ ವ್ಯಕ್ತಗೊಳಿಸುವವರು ಮತ್ತು ಇತರ ಸಾಹಿತ್ಯಸೃಷ್ಟಿಯೊಂದಿಗೆ ಹಾಸ್ಯ ಸಾಹಿತ್ಯವನ್ನು ತಕ್ಕಮಟ್ಟಿಗೆ ಬರೆದವರು. ಎನ್ಕೆಯವರು ಎರಡನೆಯ ವರ್ಗಕ್ಕೆ ಸೇರುತ್ತಾರೆ. ಅವರ ಸಾಹಿತ್ಯಸೃಷ್ಟಿ ವೈವಿಧ್ಯಮಯವಾಗಿದೆ. ಕಾದಂಬರಿ, ನಾಟಕ, ಹರಟೆ, ಕವಿತೆ, ಚರಿತ್ರೆ, ವಿಮರ್ಶೆ, ಸಂಶೋಧನೆ ಎಂದು ಮುಂತಾಗಿ ಹರಡಿಕೊಂಡಿರುವ ಎನ್ಕೆಯವರ ಸಾಹಿತ್ಯರಾಶಿಯಲ್ಲಿ ಕೇವಲ ಹಾಸ್ಯಕ್ಕಾಗಿಯೇ ಮೀಸಲಾದ ಸಾಹಿತ್ಯ ಬಹಳ ಕಡಿಮೆ. ಕಾದಂಬರಿ, ನಾಟಕ, ಪ್ರಹಸನ ಮತ್ತು ಹರಟೆಗಳಲ್ಲಿ ಅವರ ಹಾಸ್ಯ ಅಲ್ಲಲ್ಲಿ ಅಭಿವ್ಯಕ್ತಗೊಂಡಿದೆ.

ಮೃದುತನ ಎನ್ಕೆಯವರ ಹಾಸ್ಯದ ಪ್ರಧಾನ ಗುಣ. ತೀರಾ ಸಹಜವಾಗಿ ಹೂ ಅರಳಿದಂತೆ ಮೂಡಿಬರುವ ಅವರ ಹಾಸ್ಯ ಹೂವಿನಂತೆಯೇ ಮೃದುವಾದುದು. ಹಾಸ್ಯಭರಿತ ಮಾತುಗಳು ನಡುವೆ ಬಾಣಗಳಾಗಿರದೆ ಮುಟ್ಟಿ ಪುಳಕಗೊಳಿಸುವ ಹೂಬಾಣಗಳಾಗಿ ಚಿಮ್ಮಿ ಬರುತ್ತವೆ. ಗಂಭೀರ ವಾತಾವರಣದಲ್ಲಿಯೂ ಸುವಾಸನೆಯ ಬೆಳದಿಂಗಳನ್ನು ಮೂಡಿಸುತ್ತವೆ. ಎನ್ಕೆಯವರ ಹಾಸ್ಯ ಒತ್ತಾಯದ ಜಗ್ಗಾಟದಲ್ಲಿ, ಎಳೆದು ತಂದು ನಿಲ್ಲಿಸಿದ್ದಲ್ಲ. ಬರೀ ಮಾತಿನ ಮಸೆದಾಟವಲ್ಲ. ಅದು ಸಂದರ್ಭಕ್ಕೆ ತಕ್ಕಂತೆ ನಿರಾಯಾಸವಾಗಿ ನಿರರ್ಗಳವಾಗಿ ಒಡಮೂಡುತ್ತದೆ. ಎನ್ಕೆಯವರ ಹಾಸ್ಯದ ಇನ್ನೊಂದು ಪ್ರಮುಖ ಲಕ್ಷಣವೆಂದರೆ, ಅದರ ಅಂತರಾಳದಲ್ಲಿ ಅಂತಃಕರಣದ ಒರತೆಯಿದೆ. ನೋವು ನುಂಗಿ ನಕ್ಕ ನಗೆ ಅದು. ಆದ್ದರಿಂದ ಅವರ ಹಾಸ್ಯಕ್ಕೆ ಮನಸ್ಸನ್ನು ಮೃದುವಾಗಿ ಮುಟ್ಟುವಂಥ ಸಹಜ ಚಲನೆಯಿದೆ. ವಿಡಂಬನೆಯಲ್ಲಿ ಆತ್ಮೀಯತೆ ತುಂಬಿದೆ. ವಿವಿಧ ಕೃತಿಗಳ ಅವಲೋಕನದಿಂದ ಇದನ್ನೆಲ್ಲ ಕಂಡುಕೊಳ್ಳಬಹುದಾಗಿದೆ.

# ಏಕಾಂಕ ನಾಟಕಗಳು

ಎನ್ಕೆಯವರ ಅಸಂಖ್ಯಾತ ನಾಟಕಗಳ ವಸ್ತು ಸಾಮಾನ್ಯವಾಗಿ ಮಧ್ಯಮ ವರ್ಗದ ಬ್ರಾಹ್ಮಣ ಕುಟುಂಬಗಳ ಆಗುಹೋಗುಗಳು. ಸಮಕಾಲೀನ ಸಮಸ್ಯೆಗಳು ಈ ಕುಟುಂಬಗಳ ಮೇಲೆ ಮಾಡುವ ಪರಿಣಾಮ, ನಿತ್ಯ ಜೀವನದ ತೊಳಲಾಟ, ಆರ್ಥಿಕ ಮುಗ್ಗಟ್ಟು, ಬಿಡಿಸಿಕೊಳ್ಳಲಾರದ ಮತೀಯ ಶಿಷ್ಟಾಚಾರ, ಸಾಮಾಜಿಕ ಸ್ಥಿತ್ಯಂತರಗಳು, ಸಂಪ್ರದಾಯ-ಹೊಸತನಗಳ ಘರ್ಷಣೆ ಈ ಮುಂತಾದವು ಅವರ ನಾಟಕಗಳಲ್ಲಿ ಹೃದಯಂಗಮವಾಗಿ ಚಿತ್ರಣಗೊಂಡಿವೆ. ಹಾಗಂತ ಎನ್ಕೆಯವರು ಇದನ್ನೆಲ್ಲ ಕುರಿತು ಗಂಭೀರ ವಿವೇಚನೆ ನಡೆಸಿದ್ದಾರೆಂದಲ್ಲ. ಯಥಾವತ್ತಾಗಿ ಹಗುರು ನಡಿಗೆಯಲ್ಲಿ ಆಕರ್ಷಕವಾಗಿ ಹಿಡಿದಿರುತ್ತಾರೆ. ಆಗ ನಡುನಡುವೆ ಹಾಸ್ಯ ತನಗರಿವಿಲ್ಲದೇ ನುಸುಳಿಕೊಂಡು ಬರುತ್ತದೆ.

ಅಳಿಯಂದಿರು ದೀಪಾವಳಿಗೆ ಮಾವನ ಮನೆಗೆ ಬಂದು ಅವನಿಂದ ಸಾಧ್ಯ ವಿದ್ದಷ್ಟು ಕಿತ್ತುಕೊಳ್ಳುವ ಶಿಷ್ಟಾಚಾರದ ಶೋಷಣೆಯ ಸುತ್ತ ಎನ್ಕೆಯವರು ಹಲವಾರು ಏಕಾಂಕ, ಪ್ರಹಸನ ಮತ್ತು ಹರಟೆಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ದೀಪಾವಳಿಯ ದಶಮಗ್ರಹ' ಪ್ರಮುಖವಾದುದು. ದೀಪಾವಳಿಯ ಸಂದರ್ಭ ಈಗಾಗಲೇ ಅಳಿಯಂದಿರನ್ನು ತೃಪ್ತಿಪಡಿಸಲು ಏನೆಲ್ಲ ಮಾಡಿ ಕೈ ಬರಿದು ಮಾಡಿ ಕೊಂಡಿರುವ ಪೆನ್‌ಶನ್‌ದಾರ ಹುಚ್ಚರಾಯರು ಈಗ ಕೊನೆಯ ಅಳಿಯನ ಬರ ವನ್ನು ಆತಂಕದಿಂದ ನಿರೀಕ್ಷಿಸುತ್ತಿದ್ದಾರೆ. ಎನ್ಕೆಯವರು ಪಾತ್ರ ಪರಿಚಯ ಮಾಡಿ ಕೊಡುವಾಗಲೇ ಈ ಹುಚ್ಚರಾಯರ ಬಗ್ಗೆ "ಯತ್ನಕ್ಕಿಂತ ದೈವಕ್ಕೆ, ಧರ್ಮಕ್ಕಿಂತ ಪತ್ನಿಗೆ ಅಧೀನವಾದ" ವ್ಯಕ್ತಿ ಎಂದು ಹೇಳುವುದರ ಮೂಲಕ ಆ ಪಾತ್ರದ ಬಗ್ಗೆ ಸ್ಪಷ್ಟ ಕಲ್ಪನೆ ಕೊಟ್ಟಿದ್ದಾರೆ. "ಈ ಅಳಿಯಂದಿರಿಗೆ ಮಾಡಿಯೇ ನನ್ನ ತಲಿ ಬೆಳ್ಳಗಾಯಿತು. ಪೆನ್‌ಶನ್ ಆದಮೇಲೆ ಆದರೂ ತಲೆಯ ಮೇಲೆ ಒಂದೆರಡು ಎಳೆ ಚಂಡಿಕಿ ಉಳಿಯಲಿ ಅಂತ ನಮ್ಮ ಇಚ್ಛಾ" ಎಂದು ಹೇಳುವ ಮಾತು ನಗೆ ಬರಿಸು ವಂತಿದ್ದರೂ ಅದರ ಹಿಂದಿನ ನೋವು ಆಳವಾದುದು. ತಂದೆಯ ಪರದಾಟ ಸಹಿಸಿ ಕೊಳ್ಳಲಾರದ ಮಗಳು ಅನ್ನುತ್ತಾಳೆ— "ಅಪ್ಪಾ ನನ್ನ ಮದವೀ ಮಾಡೋದರ ಬದಲಾಗಿ ನನಗ ಉಚ್ಚ ಶಿಕ್ಷಣ ಕೊಟ್ಟಿದ್ದರೆ —" ಇದಕ್ಕೆ ಅಪ್ಪನ ಉತ್ತರ — "ಇಷ್ಟೊತ್ತಿಗೆ ತ್ರಿಶಂಕು ಸ್ವರ್ಗ ಸಿಗತಿತ್ತು. ಯಾಕಂದರ ಬೆಳೆದ ಹುಡಗಿನ್ನ ಮನೆ ಯಲ್ಲಿಟ್ಟುಕೊಂಡಾನs ಅಂತ ಬ್ರಾಹ್ಮಣ ಸಮಾಜದವರು ನನ್ನನ್ನು ಭೂಮಿ ಬಿಟ್ಟು ಮೇಲಕ್ಕೆ ಏರಿಸಿ ಬಿಡತಿದ್ದರು. ಮೇಲೆ ಹೋದ ಮೇಲೆ, ಎಲ್ಲ ಹೆಣ್ಣುಮಕ್ಕಳ ಮದುವೆ ಮಾಡದೆ ವಾಸನಾ ಹಿಡಿದು ಬಂದೀನೀ ಅಂತ ಕೆಳಗ ಅಟ್ಟಿ ಬಿಡತಿ ದ್ದರು." ತ್ರಿಶಂಕು ಸ್ವರ್ಗದ ಬಗೆಗಿನ ಈ ಆಧುನಿಕ ವ್ಯಾಖ್ಯಾನ ನಗೆ ಹುಟ್ಟಿಸು

ವುದರೊಂದಿಗೆ ಜಾತಿಯ ಕಟ್ಟುಪಾಡುಗಳ ನಡುವೆ ಸಿಕ್ಕು ತೊಳಲಾಡುವ ಬಡ ತಂದೆಯ ಬಗ್ಗೆ ಮರುಕ ಹುಟ್ಟಿಸುತ್ತದೆ. ಉದ್ರಿಗೆ ಸಾವಿರಾರು ಸಿಗದೆ ಮರಳಿ ಬಂದ ಮಗ— "ನೋಡಿದಲ್ಲೆಲ್ಲಾ ಬರೇ ಉದ್ದರೀ ಉದ್ದರೀ. ಆಸ್ತಿ ಅಂದರ ನಿಮ್ಮಪ್ಪ ಬರೇ ಉದ್ದರೀನೇ ಮಾಡ್ಯಾನೇನೋ ಅಂತ ಕೇಳತಾರ ಎಲ್ಲಾರು".— ಎಂದು ಹೇಳುತ್ತಾನೆ. ಜನ ಹಾಸ್ಯಮಾಡುವ ರೀತಿ (ಅದರೊಂದಿಗೆ ಚುಚ್ಚಿ ಮಾತಾಡುವ ಶೈಲಿ) ಇಲ್ಲಿದೆ. ಅಳಿಯರ ಕಾಟಕ್ಕೆ ಬೇಸತ್ತು ಸಾಕಾಗಿ ಹುಚ್ಚರಾಯರು ಹೇಳುತ್ತಾರೆ— "ಧರ್ಮಪತ್ನಿ ಧರ್ಮಾರ್ಥ ಬೋರ್ಡಿಂಗ ಲಾಜಿಂಗ ಅಂತ ಇವರ ಉದಾತ್ತ ಕಲ್ಪನೆ."

'ಕಾವ್ಯದ ಕಾರಖಾನೆ' ಮುದ್ರಾಂಕಪಿಗಳನ್ನು ಪಿಡಂಬಿಸುವ ಕಾಲ್ಪನಿಕ ಚಿತ್ರಣ. ಪ್ರತಿಭಾಹೀನರ ಬೌದ್ಧಿಕ ಕಸರತ್ತಿನ ಫಲವಾಗಿ ಮೂಡಿಬರುವ ಕವಿತೆಗಳು ಕಾರಖಾನೆಯ ಉತ್ಪತ್ತಿಗಳಂತಾಗುತ್ತವೆಂಬುದು ಇವರ ಒಟ್ಟು ಧೋರಣೆ. ನಿವೇದಕ ಪ್ರಾರಂಭದ ಪರಿಚಯದಲ್ಲಿ "ಇದು Poetry Factory, Poultry Factory, Pottery Faetory ಹಾಗೇನೂ ಅಲ್ಲ ಮತ್ತೆ" ಎಂದು ಹೇಳಿ ನಗೆ-ಕುತೂಹಲ ಎರಡನ್ನೂ ಒಮ್ಮೆಲೇ ಹುಟ್ಟಿಸುತ್ತಾನೆ. ಮಧ್ಯರಾತ್ರಿ ಸುಮಾರಿಗೆ ಕವಿಗೆ ಸ್ಫೂರ್ತಿ ಬಂದುಬಿಡುತ್ತದೆ. ಗಡಬಡಿಸಿಕೊಂಡು ಏಳುತ್ತಾನೆ. ಸ್ಫೂರ್ತಿ ದೇವತೆಯನ್ನು ತಾಯೇ ತಾಯೇ ಎಂದು ಕೂಗಿ ಕೂಗಿ ಹೊಗಳುತ್ತಿರುವಾಗ ಕವಿಯ ಶಿಷ್ಯ ಭಗವಂತ ಎಚ್ಚರಗೊಂಡು—"ಪಾಪ! ತಾಯಿಯ ನೆನಪಾಗಿ ದುಃಖ ಉಕ್ಕಿ ಬಂದಿರೇನೋ. ಯಾಕೆ ಗುರುಗಳೆ ಡಾಕ್ಟರನ್ನೇನಾದರೂ ಕರೆದುಕೊಂಡು ಬರ್ಲೇನು?"— ಎಂದು ಕೇಳುವನು. ಕವಿ— "ಡಾಕ್ಟರನ ಕರಕೊಂಡು ಬಂದು ಏನ್ಮಾಡ್ತಿ? ಪ್ರಕಾಶಕರನ್ನ ಕರಕೊಂಡು ಬಾ. ನನಗೊಂದು ಕಾವ್ಯದ ಕೂಸು ಹುಟ್ಟೇದ"— ಅನ್ನುತ್ತಾನೆ. ಭಗವಂತ ಗಾಬರಿಗೊಂಡು— "ನಿಮಗ? ಕೂಸು ಹುಟ್ಟೈತಿ?"— ಎಂದು ಪ್ರಶ್ನಿಸುವನು. ಹೀಗೆ ಇವರಲ್ಲಿ ಹಾಸ್ಯ ಬೆಳೆಯುತ್ತ ಸಾಗುವುದು. ಇವನೊಬ್ಬ ಅದ್ಭುತ ಕವಿ. ಇವನ ಕಾವ್ಯದ ಫಾರ್ಮುಲಾ ತಮಾಷೆಯಾಗಿದೆ. ಶಿಷ್ಯನಿಗೆ ಹೀಗೆ ಬೋಧಿಸುತ್ತಾನೆ — " ದೋಸೆಯ ಹಿಟ್ಟ ಕಲಿಸಿದ ಹಾಗೆ ................. ನಮ್ಮ ಕಾವ್ಯದ ಹಿಟ್ಟೂ ಫಾರ್ಮುಲಾಕ್ಕೆ ಸರಿಯಾಗಿ ಕಲಿಸಿ ತಯಾರಾಗಿಟ್ಟಿರಬೇಕು. ಗಿರಾಕಿಗಳು ಬಂದ ಹಾಗೆ ಅವರ ಇಚ್ಛಾನುವರ್ತಿಯಾಗಿ ಮಸಾಲೆ ದೋಸೆಯನ್ನೋ, ತುಪ್ಪದ ದೋಸೆಯನ್ನೋ ಹೊಯ್ದು ಕೊಡುವಂತೆ ನಮ್ಮಲ್ಲಿ ಕಾವ್ಯದ ಹಿಟ್ಟು ಕಳಿತು ಹುಳಿಬಿಟ್ಟು ಹದವಾಗಿದ್ದ ಬಿಟ್ಟರೆ ಪ್ರಕಾಶಕರ ಬೇಡಿಕೆಯ ಮೇರೆಗೆ, ಧ್ವನಿಮುದ್ರಕರ ಬೇಡಿಕೆಯ ಮೇರೆಗೆ, ಕಂಪನಿಗಳ ಬೇಡಿಕೆಯ ಮೇರೆಗೆ, ಜನತೆಯ ಬೇಡಿಕೆಯ ಮೇರೆಗೆ, ಜಗತ್ತಿನ ಬೇಡಿಕೆಯ ಮೇರೆಗೆ ಕರುಣಾರಸ ಕಾವ್ಯವನ್ನೋ, ಹಾಸ್ಯರಸ

ಕಾವ್ಯವನ್ನೋ, ಶೃಂಗಾರರಸ ಕಾವ್ಯವನ್ನೋ ಬರೆದು ಕೊಡಬಹುದು. ಇದೆಲ್ಲಾ ಫಾರ್ಮುಲಾ ಸ್ವಲ್ಪ ಸ್ವಲ್ಪ ವ್ಯತ್ಯಾಸ ಮಾಡುವುದರಿಂದ ಉತ್ಪನ್ನವಾಗುತ್ತದೆ."— ಶಿಷ್ಯ ಕೇಳುತ್ತಾನೆ — "ಗುರುಗಳೆ, ನಾಗಚಂದ್ರನ ಕಾವ್ಯ ಕೇಳಿ ಕಲ್ಲು ಕರಗಿತು ಅಂತಾ ಹೇಳ್ತಾರೆ. ನಿಮ್ಮ ಕಾವ್ಯಕ್ಕೂ ಕಲ್ಲು ಕರಗುತ್ತದೆಯೋ?"— ಈ ಪ್ರಶ್ನೆಗೆ ಕವಿ — "ಮೂರ್ಖಾ ಕಲ್ಲು ಅಂದರೆ ಕಲ್ಲು ಅಂತಲೇ ತಿಳಿಯುವ ನಿನ್ನ ಬುದ್ಧಿಯೂ ಅಂಥಾದ್ದೇ ನೋಡು. ಕಾವ್ಯದಲ್ಲಿ ಕಲ್ಲು ಅಂದರೆ ಆಣೆಕಲ್ಲು ಅಂತಾ"— ಎಂದು ಹೇಳಿ ಪಾರಾಗುತ್ತಾನೆ.

'ನಾ ಪು ಬಾಡ್ಗಿ ಕೊಡ್ತೀವಿ' ಎಂಬುದು ಮನೆ ಬಾಡಿಗೆಯವನೊಬ್ಬನ ಜಪ. ಪಕ್ಕದ ಬಾಡಿಗೆಮನೆಯವರೊಂದಿಗೆ ಸಣ್ಣಸಣ್ಣದಕ್ಕೆಲ್ಲ ಜಗಳ ತೆಗೆದು ಯಾವ ಮಾತಿಗೂ "ನಾಪ್ರು ಬಾಡ್ಗಿ ಕೊಡ್ತೀವಿ" ಅನ್ನುತ್ತಾನೆ. ಇದರಲ್ಲಿ ಕಿವುಡ ಮುದುಕ ನೊಬ್ಬನಿರುವದರಿಂದ ಹಾಸ್ಯೋತ್ಪತ್ತಿಗೆ ಸಹಜ ಮೆರಗು ಬಂದಿದೆ. ಹೆಂಡತಿ ಮಗನಿಗೆ — "ಪ್ಯಾಟ್ಯಾಗ ಹೋಗಿಲ್ಲೇನು ಇದ್ಲಿಚೀಲಾ ತರಲಿಕ್ಕೆ"— ಎಂದಾಗ ಈ ಕಿವುಡ ಯಜಮಾನ — "ಚೀಲಗಟ್ಲೆ ಇಡ್ಲಿ ತರಿಸಿ ಅದೆಷ್ಟು ದಿವಸಾಗ ತಿನಬೇಕು ಅಂತೀದಿ. ಚೀಲಗಟ್ಲೆ ಇಡ್ಲಿ ಹಿಡಿಸೋ ಅಂಥಾ ಒಡ್ಲು ಕೊಟ್ಟಾನೋ ಏನು ದೇವರು ನಿನಗ?"— ಹೀಗೆ ನಡುನೆ ಬಾಯಿ ಹಾಕಿ ನಗೆ ಉಕ್ಕಿಸುತ್ತಾನೆ. ಜಗಳಗಂಟಿ ಬಾಜೂ ಮನೆಯವನನ್ನು ಗಾಂಧೀಜಯಂತಿ ದಿವಸ ನೆರೆಹೊರೆಯವರು ಅಣ್ಣತಮ್ಮಂದಿರಂತಿರಬೇಕು ಅಂತ ಯಾಕೆ ಮಾತಾಡಿದೆ? ಎಂದು ಕೇಳಿದರೆ, ಅವನು— "ಯಾಕ ಮಾತಾಡಿದ್ರೀ ಅಂದರ? ನಾ ಬಾಡಿಗಿ ಕೊಡತೀನಿ ತಿಳಿ ತಿಲ್ಲೋ"— ಎಂದು ತನ್ನ ಮಾಮೂಲಿ ಜಪ ಪಠಿಸುತ್ತಾನೆ.

'ಬಾರ್ ರೂಮು' ನಿರುದ್ಯೋಗಿ ವಕೀಲರ ಚಿಂತಾಜನಕ ಸ್ಥಿತಿಯನ್ನು ಹಾಸ್ಯದ ವಾತಾವರಣದಲ್ಲಿ ಚಿತ್ರಿಸುತ್ತದೆ. ವಕೀಲನೊಬ್ಬನ ಸೂಚನೆ ಹೀಗಿದೆ— "ಈ ಪಕ್ಷಕಾರನಾ ಪಥಾಂಗ ಪಕ್ಷಗಾರರ ಮಾಸವೊಂದು ಯಾಕ ಬೀಬಾರದು ಪಂಚಾಂಗದವರು ಅಂತ. ಅಂದರೇನಾದರೂ, ನಮ್ಮ ಹಣೇಬರಕ್ಕ ಒಬ್ಬಿಬ್ಬರು ಪಕ್ಷಗಾರರು ಸಿಕ್ಕಾರೇನೋ ಅಂತ"— ಇವರು ಕಾಲಿಕೈಯವರಾದರೂ ಬಾಯಿ ತುಂಬ ಜಂಬ ಕೊಚ್ಚಿಕೊಳ್ಳುವಂಥವರು. ತನ್ನ ಕಡೆಗೆ ಒಬ್ಬ ವ್ಯಕ್ತಿ ಬರುವುದನ್ನು ಕಂಡು ಪಕ್ಷಗಾರನೊಬ್ಬ ಸಿಕ್ಕನೆಂದು ಉತ್ಸಾಹದಿಂದ ಒಬ್ಬ ವಕೀಲ ಏಳುತ್ತಾನೆ. ಆದರೆ ಆ ವ್ಯಕ್ತಿ ಇವನ ಹತ್ತಿರ ತಂಬಾಕು ಕೇಳಲು ಬಂದಿರುತ್ತಾನೆ. ಪೆಚ್ಚಾದರೂ ಎದೆ ಸೆಟೆಸಿ ಹೇಳುತ್ತಾನೆ. — "ನಾಲ್ಕು ಮಂದಿ ಆದರೂ ಬರತಾರಿಲ್ಲೋ ನಮ್ಮ ಕಡೆಗೆ" — ಈ ಮಾತಿಗೆ ಇನ್ನೊಬ್ಬ ವಕೀಲನ ಪ್ರತಿಕ್ರಿಯೆ ಹೀಗಿದೆ — "ಎಲ್ಲಾರ ಕಡೆಗೂ ನಾಲ್ಕು ಮಂದಿ ಬಂದೇಬರತಾರ ಬಿಡ್ರಿ ಒಮ್ಮಿಲ್ಲಾ ಒಮ್ಮೆ"—

'ಉಷಃ ಪಾರಾಯಣ'ದ ರಸಿಕನಿಗೆ ಕಲ್ಪನಾ ಲೋಕದಲ್ಲಿ ವಿಹರಿಸುತ್ತ ಸಾಹಿತ್ಯ ರಚಿಸಬೇಕೆಂಬ ಚಪಲ. ಅವನ ಹೆಂಡತಿ ಕಮಲಳಿಗೆ ಮನೆಕೆಲಸದ ತರಾತುರಿ. ಚಹಾ ಕೊಡಲು ಬಂದ ಅವಳನ್ನು ಒತ್ತಾಯದಿಂದ ನಿಲ್ಲಿಸಿಕೊಂಡಾಗಿನ ಸಂಭಾಷಣೆ—

ರಸಿಕ — ಈಗಾರ ಹೇಳು, ನೀರೆಯರ ಮುಖವನ್ನು ಕಮಲಕ್ಕೆ ಯಾಕ ಹೋಲಿಸತಾರ ಅಂಜೋದನ್ನ ...... ಸ್ವಲ್ಪ ವಿಚಾರಿಸಿ ನೋಡು ಹೊಳದೀತು.

ಕಮಲ — ಹೊಳಿಯೋದು ಬ್ಯಾಡಾ, ಮಿಂಚೋದು ಬ್ಯಾಡಾ.

ರಸಿಕ — ಕಿಂಚಿತ್ ತಲಿಹಾಕಿ ನೋಡು, ಮಿಂಚೀತು.

ಕಮಲ — ಇಲ್ಲಿ ಮಿಂಚೋದರಾಗ ಅಲ್ಲಿ ನಳಾ ಹೋಗತದ.

ರಸಿಕ — (ಚಟ್ಟನೆ ಎದ್ದು) ಆಂ. ಹಾ! ನನ್ನ ಉಪಮೆಯ ಉತ್ತರಾ ನಿನ್ನ ಮೇಲಿನ ವಾಕ್ಯದೊಳಗ ಹುದುಗಿಕೊಂಡsದ. ಹೇಳು, ಹೆಂಗಸರಿಗೆ ಕಮಲದ ಉಪಮಾ ಯಾಕೆ ಕೊಡತಾರ?

ಕಮಲ — ಯಾಕಂದರ, ಅವರು ಇಪತ್ತನಾಲ್ಕ ತಾಸೂ ನೀರಾಗನ ಇರತಾರಂತ.

ಹೀಗೆ, ಚಿಕ್ಕ ಚಿಕ್ಕ ಸಂಭಾಷಣೆಗಳ ಜೋಡಣೆಯಿಂದ ನಿರಾಯಾಸವಾಗಿ ಹಾಸ್ಯ ವನ್ನು ನಿರ್ಮಿಸುವ ಎನ್ಕೆ ಅವರ ಕಲೆ ಪ್ರತಿಭಾಸಂಪನ್ನವಾಗಿದೆ.

'ಜಂಗೀ ಸಂಗೀತ ಕುಸ್ತಿ' ಛಂಪ ಸಂಗೀತಗಾರರಿಬ್ಬರ ಹಾರ್ದಿಕ ವಿಡಂಬನೆ ಯಾಗಿದೆ- ರಾತ್ರಿ ಶಿಷ್ಯನಿಗೆ ಪಾಠ ಹೇಳುವ ಸಂದರ್ಭದಲ್ಲಿ ಚಕ್ರಪಾಣಿ ತಾನು ಬಿಭಾಸ ಹಾಡಿ ಸೂರ್ಯನು ಮೂಡಿ ಬೆಳಗಾಗುವಂತೆ ಮಾಡಬಲ್ಲೆನೆಂದು ಜಂಭ ಕೊಚ್ಚಿಕೊಳ್ಳುತ್ತಾನೆ. ಶಿಷ್ಯ ಹಾಗೇ ಮಾಡಲು ಗುರುಗಳನ್ನು ಒತ್ತಾಯಿಸಿದಾಗ — "ಮೂರ್ಖಾ, ಈ ಹೊತ್ತಿನಲ್ಲಿ ಈ ದೇಶಕ್ಕೆ ಸೂರ್ಯನನ್ನು ಕರೆಯಿಸಿಕೊಂಡರೆ ಪಾಪ, ಅಮೇರಿಕೆಯ ಗತಿಯೇನು? ಅದು ಕತ್ತಲೆಯಲ್ಲೇ ಕೊಳೆಯಬೇಕೇ?" — ಎಂದು ಸಮಾಧಾನ ಹೇಳುತ್ತಾನೆ. ವಿಚಿತ್ರಕಂಠನು — "ದುರ್ಗಾಕ್ಕೆ ತೀವ್ರ ಗಾಂಧಾರ ಹಚ್ಚಿದರೆ ದೇವಗಾಂಧಾರವಾಗುವುದು" — ಎಂದರೆ, ಚಕ್ರಪಾಣಿ — "ಹೌದು, ಕೋಮಲ ಗಾಂಧಾರ ಹಚ್ಚಿದರೆ ದಾನವಗಾಂಧಾರವಾಗುತ್ತದೆಂಬುದು ನಿಮಗೆ ತಿಳಿದಿರಬೇಕು" — ಎನ್ನುತ್ತಾನೆ. ಹೀಗೆ ಹಾಸ್ಯಾಸ್ಪದವಾದ ಸಂಗೀತ ಪಾಂಡಿತ್ಯದ ಮೂಲಕ ಇದು ರಂಜನೀಯವಾಗಿದೆ.

## ಏಕಪಾತ್ರ – ದ್ವಿಪಾತ್ರಾಭಿನಯಗಳು

ಎನ್ಕೆಯವರ ಈ ಹೆಸರಿನ ಸಂಗ್ರಹವೊಂದು ಪ್ರಕಟವಾಗಿದೆ. ಒಂದು ವಿಚಾರವನ್ನು, ಒಂದು ಸನ್ನಿವೇಶವನ್ನು ಒಂದೇ ಪಾತ್ರದ ಮೂಲಕ ಪರಿಣಾಮಕಾರಿಯಾಗಿ ಅಭಿವ್ಯಕ್ತಿಗೊಳಿಸುವುದು ಏಕಪಾತ್ರಾಭಿನಯ. ಲೇಖಕನಿಗೆ ಇಲ್ಲಿ ತಂತ್ರದ ಮೇಲೆ ಬಹಳಷ್ಟು ಹಿಡಿತವಿರಬೇಕು. ಇಲ್ಲವಾದರೆ ಅದೊಂದು ನೀರಸ ವರದಿಯಾಗಬಹುದು. ಎನ್ಕೆಯವರು ಕೆಲವು ಏಕಪಾತ್ರ ಹಾಗೇ ದ್ವಿಪಾತ್ರ ಅಭಿನಯಗಳನ್ನು ರಚಿಸಿದ್ದಾರೆ. ಇವು ನಾಟಕೀಯ ಅಂಶ ಮತ್ತು ಹರಟೆಯ ನಿರರ್ಗಳತೆ ಎರಡನ್ನೂ ಸಮಪ್ರಮಾಣಲ್ಲಿ ಒಳಗೊಂಡಿವೆ.

'ಭಜಿಗೆ ಬಾಯಿಲ್ಲವಯ್ಯಾ' ಎಂಬುದು ರವಿವಾರದ ಬೆಳಿಗ್ಗೆ ಬಿಸಿಬಿಸಿ ಭಜಿ ತಿನ್ನಬೇಕೆಂಬ ಹಂಬಲದ ಗೃಹಸ್ಥನ ಪೀಕಲಾಟದ ಚಿತ್ರಣವಾಗಿದೆ. ಸ್ನೇಹಿತರು, ಅತಿಥಿಗಳು ಬಂದರೆ ಅವರಿಗೂ ಕೊಡಬೇಕಾಗುತ್ತದೆ. ಅವರು ಬರುವುದರೊಳಗೇ ತಿಂದು ಮುಗಿಸಬೇಕೆಂಬ ಅವಸರ. ಹೆಂಡತಿಗೆ ಜೋರು ಮಾಡುತ್ತಾನೆ—ಸ್ನೇಹಿತರು ಬಂದರೆ ಹೆಚ್ಚು ಭಜಿ ತೀರದಂತಿರಲು ಹೆಂಡತಿಗೆ ಉಪಾಯ ಸೂಚಿಸುತ್ತಾನೆ— "ಅಲ್ಲಾ ಒಂದೊಂದು ಮೆಣಸಿನಕಾಯಿ ಭಜಿ ಕೊಟ್ಟುಬಿಡು, ಒಂದು ಕಡದ್ರೂ ಅಂದ್ರ ಮತ್ತೊಂದು ಬೇಡಿದರ ಕೇಳು." — ಇಷ್ಟರಲ್ಲಿ ಸ್ನೇಹಿತರ ಗುಂಪು ಬಂದು ಇಷ್ಟರಲ್ಲಿಯೇ ಮತ್ತೆ ಬರುವೆವು ಅಂತ ಹೇಳಿ ಹೋಗುವರು. ತನ್ನ ಭಜಿಯ ಗುಟ್ಟು ಎಲ್ಲಿ ರಟ್ಟಾಗುವುದೋ ಎಂದು ಆತಂಕಗೊಂಡಿದ್ದವನಿಗೆ ಅವರು ವಾಸನೆ ಗುರುತಿಸ್ಟಲಾರದೆ ಹೋದಮೇಲೆ ಅನ್ನುತ್ತಾನೆ— "ಅಲ್ಲಾ ಈ ಘ್ಲೂದ ಗಾಳಿ ಬೆಂಗಳೂರಾಗ ಬೀಸಿದ್ದರಿಂದ ಎಷ್ಟು ಅನುಕೂಲ ಆಗೇದ ಅಂತೀನಿ. ಯಾಕ ಅಂತ ಕೇಳ್ತಿಯಾ? ಒಬ್ಬೊಬ್ಬರಿಗೂ ನೆಗಡಿ ಬಂದು ಭಜಿ ವಾಸನಿ ಹತ್ತಲಿಲ್ಲಾ...ದೇವರಿದ್ದಾನ ನಮ್ಮ ಮ್ಯಾಲ."— ಮಗುವಿನ ತಂದೆಯಾದ ಉಲ್ಲಾಸದಲ್ಲಿ ಬಂದವನೊಂದಿಗೆ—"ವಿಶೇಷ ಅದ್ಯನ? ಏನಪಾ ಅಂಥಾ ವಿಶೇಷ? ಬಾಯ್ ಸಿಹಿ ಮಾಡ್ತೀರಾ? ಏನು, ಸಂದರ್ಭಾ ಏನು? Hallo, Hallo, ಕೈ ತರ್ರಿ...ಅಂತೂ ಪ್ರೊಡ್ಯೂಸರ್ ಆದ್ರಿ... ಅಲ್ಲಾ...ಗಂಡೋ, ಹೆಣ್ಣೋ? ಏನಾರ ಆಗ್ಲಿಬಿಡ್ರಿ"—ಎಂದು ಮಾತನಾಡುತ್ತಾನೆ. ಇಲ್ಲಿ ಪ್ರೊಡ್ಯೂಸರ್ ಶಬ್ದದೊಂದಿಗೆ ಚೆಲ್ಲಾಟವಾಡಿ ನಗೆ ತರಿಸಲಾಗಿದೆ.

'ಸಕ್ರಿಯ ಸಹಾಯ' ದಲ್ಲಿ ನಿವೃತ್ತವಾದ ಮಧ್ಯಮವರ್ಗದ ಗೃಹಸ್ಥನ ಸಂಸಾರ ಜೀವನದ ಜಂಜಾಟವಿದೆ. ತನ್ನ ಗೋಳನ್ನು ಆತ್ಮೀಯ ಶೈಲಿಯಲ್ಲಿ ವಿವರಿಸುವಾಗ ನಡುನಡುವೆ ಹಾಸ್ಯದ ಎಳೆಗಳು ಬೆರೆತುಕೊಳ್ಳುತ್ತವೆ. ಮಗ ದುಡಿದು ಗಳಿಸಿ ಕುಟುಂಬದ ನೆರವಿಗೆ ಬರೋದು ಇನ್ನೂ ದೂರವೆಂದು ಹೇಳುವಾಗ—

"ಎಂ. ಬಿ. ಬಿ. ಎಸ್. ಮುಗಸಲಿಕ್ಕೆ ಇನ್ನೂ ನಾಲ್ಕು ವರ್ಷ ಬೇಕು. ಈಗ ಇನ್ನೂ ಎರಡು ವರ್ಷ ಬೇಕು. ಈಗ ಇನ್ನೂ ಹೆಣಾ ಕೊಯ್ಯೋ ಸ್ಟೇಜಿನಾಗ ಇದ್ದಾನ. ಇನ್ನ ಇನಾ ಜೀವಂತ ಮನಿಸ್ಯಾರ ಹೊಟ್ಟೀ ಕೊಯ್ಯಲಿಕ್ಕೆ ಚಾಕೂ ಹಿಡಿಯೋ ತನಕಾ ಅಂದರ ನಾವ ಹೆಣಾ ಆಗಿ ಹೋಗಿರತೀವಿ"– ಎನ್ನುವಲ್ಲಿ ನೋವಿಗೆ ನಗೆ ಲೇಪಿಸಲಾಗಿದೆ. ದೇಶದ ದುರ್ಭರ ಸ್ಥಿತಿಯನ್ನು ತನ್ಮೂಲಕ ತನ್ನ ಕುಟುಂಬದ ದುಃಸ್ಥಿತಿಯನ್ನು ಕುರಿತು— "ಮಹಾ ಚುನಾವಣೆ ಕಾಲಕ್ಕ ಒಬ್ಬ ಜ್ಯೋತಿಷಿ ಭವಿಷ್ಯ ಹೇಳಿದರು– ಸರಕಾರ ಬದಲೀ ಆದ ಮ್ಯಾಲ ಇಂಡಿಯಾಕ್ಕ ಏರಿಕೆಕಾಲ ಬರತದ ಅಂತ. ...... ಮೊನ್ನೆ ಒಬ್ಬರು ಹೋಗಿ ಆ ಜ್ಯೋತಿಷಿನ್ನ ಕೇಳಿದರಂತ– ಎಲ್ಲಿ ಅದ ನಿಮ್ಮ ಏರಕೀಕಾಲ ಅಂತ, ಆವಾಗ ಜ್ಯೋತಿಷಿ ಹೇಳಿದನು— ಇನ್ನೂ ಎಷ್ಟ ಏರಕಿ ಕಾಲ ಬೇಕರೀ, ಹದಿನೆಂಟ ರೂಪಾಯಿಗೆ ಕೆ. ಜಿ. ಸಕ್ಕರೆ ಸಾಲ್ದೇನು ಅಂತ...... ಹಾಂಗ ಅದ ನೋಡು ಇಂಡಿಯಾದ ಏರಿಕಿ ಕಾಲ... ನನಗೂ ಏರಿಕಿ ಕಾಲ ಅಂತ ವರ್ಷ ಭವಿಷ್ಯದೊಳಗ ಬರೆದಿತ್ತು. ಈ ಸಾರೆ ಅಳೀತನ ಹಬ್ಬಿಸಿ ಕೊಂಡರ ಭಲೋ ಏರಕಿಕಾಲ, ಸ್ವರ್ಗಾರೋಹಣದ ಏರಿಕೆಕಾಲ ...—. ಹೀಗೆ ಹೇಳುತ್ತಾನೆ. ಇಲ್ಲಿ ಹಾಸ್ಯದೊಂದಿಗೆ ವ್ಯಂಗ್ಯ ಬೆರೆತಿದೆ. ಎನ್ಕೆಯವರ ನವಿರು ಹಾಸ್ಯದಂತೆ ಅವರ ವ್ಯಂಗ್ಯ ವಿಡಂಬನೆಗಳೂ ಮೃದುವಾದವುಗಳು. ಆದರೆ ಅವುಗಳ ಪರಿಣಾಮ ಅಪಾರವಾದುದು.

'ಶನಿವಾರದ ಸಂಜೆ'ಯಲ್ಲಿ ಸಂಪ್ರದಾಯಸ್ಥ ಗೃಹಿಣಿಯೊಬ್ಬಳು ಇಂಗ್ಲೀಷ್ ಸಿನೆಮಾದ ಬಗ್ಗೆ ಹೀಗೆ ವ್ಯಾಖ್ಯಾನ ಮಾಡುತ್ತಾಳೆ— "ಅಲ್ಲಾ ಇದೇನು ಚಿಕ್ಕ ಕಡದಾಡಿದ ಹಾಗೆ ಮಾತನಾಡತಾವೆ, ಮುದ್ದು ಕೊಡತಾವೆ, ಆದೇನು ಚೆನ್ನಾಗಿ ದುಕ್ತೆ ಅಂದರೆ, ಒಂದು ಒಳ್ಳೇ ಹಾಡು ಅಲ್ಲ, ದೇವರ ಕಥೆಯಲ್ಲ"— ಎಂದು.

'ಆಫೀಸಿನ ಅವಸರ' ದಲ್ಲಿರುವ ಗಂಡ ಸ್ಟವ್‌ಗೆ ಬತ್ತಿಯಿಲ್ಲವೆಂದು ಹೇಳಿದ ತನ್ನ ಹೆಂಡತಿಗೆ ಉಪಾಯ ಸೂಚಿಸುತ್ತಾನೆ—"ಸಾಕಾಯ್ತು ಮಾರಾಯ್ತಿ, ನಿನ್ನ ಮಂಗಳಾರತಿ ಬತ್ತಿನೇ ಯಾಕೆ ಹೊತ್ತಿಸಿ ಬಿಡಬಾರದು"—. ಇದಕ್ಕೆ ಅವಳ ಉತ್ತರ ಸಿದ್ಧವಾಗಿಯೇ ಇದೆ.— "ನನ್ನ ಮಂಗಳಾರತಿ ಬತ್ತಿ ಹಚ್ಚೋದಕ್ಕಿಂತಲೂ ನಿಮ್ಮ ಬಿಳಿ ಬತ್ತೀನೇ ಹಚ್ಚಿಬಿಡಿ, ಜೇಬಿನಲ್ಲಿಟ್ಟುಕೊಂಡೀರಲ್ಲ" – ಹೀಗೆ ತುಂಬಾ ಸಹಜವಾಗಿ ಚಿಮ್ಮಿ ಬರುವ ಮಾತುಗಳನ್ನು ವ್ಯವಸ್ಥಿತವಾಗಿ ಪೋಣಿಸಿ ಹಾಸ್ಯದ ವಾತಾವರಣ ನಿರ್ಮಿಸುವುದರಲ್ಲಿ ಎನ್ಕೆಯವರು ನಿಪುಣರೆಂದು ಹೇಳಬಹುದು.

## ಹರಟೆಗಳು

ಕನ್ನಡ ಹರಟೆಯ ಸಾಹಿತ್ಯಕ್ಕೆ ಎನ್ಕೆಯವರು ಗಮನಾರ್ಹ ಕೊಡುಗೆ ನೀಡಿದ್ದಾರೆ. "ಮೋಪಕಾ ಬಜಾರ" ಎಂಬುದು ಅವರ ಆಯ್ದ ಹರಟೆಗಳ ಸಂಗ್ರಹ.

ಒಳ್ಳೆಯ ಹರಟೆಯಲ್ಲಿರಬೇಕಾದ ಭಾವಗೀತಾತ್ಮಕ ಗುಣ, ವ್ಯಕ್ತಿತ್ವದ ಪ್ರತಿಬಿಂಬ, ನಿರರ್ಗಳತೆ, ಹಾಸ್ಯ-ವಿಡಂಬನೆ-ವ್ಯಂಗ್ಯಗಳು, ಭಾರವಲ್ಲದ ಶಾಸ್ತ್ರಜ್ಞಾನ, ಮುಂತಾದವುಗಳೆಲ್ಲ ಎನ್ಕೆಯವರ ಹರಟೆಗಳಲ್ಲಿರುವುದನ್ನು ಗಮನಿಸಬಹುದು.

'ಮೋಡಕಾ ಬಾಜಾರ್' ಎಂಬುದು ಹಳೆಯ ಪುಸ್ತಕಗಳ ವ್ಯಾಪಾರ. ಸಂಗ್ರಹಗಳ ಸತ್ತ ಹೆಣೆಯಲಾದ ರಂಜನೀಯ ಹರಟೆಯಾಗಿದೆ. ಮೊದಲನೆಯ ಪ್ಯಾರಾದಲ್ಲಿ– " ನನ್ನ ಮನೆಯ ಪುಸ್ತಕಾಲಯದ ಮುಕ್ಕಾಲು ಭಾಗ ಸಂಗ್ರಹವಾದುದು ಮೋಡಕಾ ಬಾಜಾರಿನಿಂದಲೇ. ಕಿರಿಯ ಕಾಸಿನಲ್ಲಿ ಹಿರಿಯ ಕೃತಿಗಳು ದೊರೆಯ ಹತ್ತಿದುದರಿಂದಲೇ ಪುಸ್ತಕ ಪರಿಚಯ ಮಾಡಿಕೊಳ್ಳುವುದಕ್ಕಿಂತ ಪುಸ್ತಕ 'ಪರಿಚೇಜ್' ಮಾಡುವಲ್ಲಿಯೇ ನನ್ನ ಆಸಕ್ತಿ ಬೆಳೆಯುತ್ತ ಬಂದು, ನನ್ನ ಸುದೈವವೋ ಸಾಹಿತಿಗಳ ದುರ್ದೈವವೋ ಅಂತೂ ಮೋಡಕಾ ಬಾಜಾರಿನಲ್ಲಿ ಮಹಾಕವಿಗಳ ಬೆಲೆ ಇಳಿದುದು ಶೋಚನೀಯ ಸಂಗತಿಯೆಂಬುದು ಸುಳ್ಳಲ್ಲ"–ಎಂದು ಹೇಳುತ್ತ ಹಾಸ್ಯದ ವಾತಾವರಣ ನಿರ್ಮಿಸುವುದು ಆಕರ್ಷಕವಾಗಿದೆ. ಮೋಡಕಾ ಬಜಾರದ ಕೆಲವು ಪುಸ್ತಗಳನ್ನು ಗೆದ್ದಲು ಹುಳು ತಿಂದುದಕ್ಕೆ ಎನ್ಕೆಯವರ ಸಮಾಧಾನ ಹೀಗಿದೆ– "ಸಾಹಿತ್ಯರಸದ ರುಚಿಯನ್ನು ಕನ್ನಡಿಗರಿಗಿಂತ ಕನ್ನಡದ ಕಿಸುನೆಲದ ಗೆದ್ದಲಿಗಳೆ ಹೆಚ್ಚು ಅರಿತಿವೆಯೇನೋ ಎಂಬಂತೆ ಪುಸ್ತಕಗಳ ಅಂಚುಗಳನ್ನೂ ಮಧ್ಯಮಧ್ಯದ ಮಹತ್ವದ ಭಾಗಗಳನ್ನೂ ಅವು ಜೀರ್ಣಿಸಿಕೊಂಡುದು ಕಂಡುಬರುತ್ತದೆ."

'ಅತಿಥಿ ದೇವೋಭವ'ದಲ್ಲಿ ಇಂದಿನ ತುಟ್ಟೀಕಾಲದಲ್ಲಿ ಅತಿಥಿಗಳ ಆತಿಥ್ಯದ ಹೊಣೆ ಹೊರಲಾರದೆ ತೊಳಲಾಡುವವರ ಚಿಂತಾಜನಕ ಸ್ಥಿತಿಯನ್ನು 'ಅತಿಥಿ ದೇವೋಭವ' ಎಂಬ ಬಹುವ್ರೀಹಿ ಸಮಾಸಕ್ಕೆ ಎನ್ಕೆಯವರ ಅರ್ಥವಿವರಣೆ ಸ್ವಾರಸ್ಯವಾಗಿದೆ. ವ್ರೀಹಿ ಅಂದರೆ ಬತ್ತ, ಬಹುವ್ರೀಹಿ ಅಂದರೆ ಬಹಳಷ್ಟು ಬತ್ತ ವಿದ್ದವರ ಸಮಾಸ. ಹಿಂದಿನ ಪೂರ್ವಜರು ತಕ್ಕಮಟ್ಟಿಗೆ ಸುಸ್ಥಿತಿಯಲ್ಲಿದ್ದರು. ಆದ್ದರಿಂದಲೇ ಅವರು ಬಹುವ್ರೀಹಿಗಳು. ಆದರೆ ಇಂದಿನ ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕು ಅತಿಥಿದೇವನಾಗು, ಅಂದರೆ ನೀನೇ ಮತ್ತೊಬ್ಬರಿಗೆ ಅತಿಥಿಯಾಗು ಎಂದು ಅರ್ಥ ಮಾಡಿಕೊಂಡಿದ್ದಾರೆ. ಶಬ್ದಗಳೊಂದಿಗೆ ಚೆಲ್ಲಾಟವಾಡುತ್ತ ನಗೆಯನ್ನು ಹೊರಸೂಸುವ ಇಂಥ ಹಲವಾರು ಉದಾಹರಣೆಗಳನ್ನು ನೀಡಬಹುದಾಗಿದೆ.

'ಆ ಧರ್ಮಶಾಲೆ'ಯ ತಿರುಕರ ಬಗ್ಗೆ ಹೇಳುತ್ತ — "ಮನೆ ಮಾಡಬೇಕು, ಮಂಟಪ ಕಟ್ಟಬೇಕು, ನಾಳಿನ ಮಕ್ಕಳಿಗೊಂದು ನೆರಳು ಮಾಡಬೇಕು — ಎಂಬ ಇಹದ ಹವ್ಯಾಸ ನಮ್ಮಂತಹ ವಾಸನಾಬದ್ಧ ಮಾನಿಸರಿಗೆ. ಈ ತಿರುಕರೋ ನಿಜವಾಗಿಯೂ ಬೌದ್ಧಯತಿಗಳು" — ಎಂದು ತಾತ್ವಿಕ ಸ್ವರದಲ್ಲಿ ನಗೆಯ ಅಲೆ ಎಬ್ಬಿಸುತ್ತಾರೆ.

ನಾಸಿಕಾಕಾ : ಎನ್ಕೆ ಬರೆಪ/೪೩೩

'ಜೇಬುಗಳು' ಸುಂದರವಾದ ಹರಟೆ. ಹೆಂಗಸರ ರವಿಕೆಯನ್ನು 'ಜೇಬಿಲಿ' (ಜೇಬು ಇಲ್ಲದ್ದು ಜೇಬಿಲಿ, ಬಹುವ್ರೀಹಿ ಸಮಾಸ) ಎಂದು ಕರೆದಿದ್ದಾರೆ. ಶ್ರೀಕೃಷ್ಣನ ಬಟ್ಟೆಬರೆ ವಿಚಾರ ಹೇಳುತ್ತ "ಕೃಷ್ಣನು ಆಗ ಜೇಬುಗಳುಳ್ಳ ಬಟ್ಟೆಗಳನ್ನು ಧರಿಸುತ್ತಿರಲಿಲ್ಲ ಪೀತಾಂಬರವನ್ನು ಉಟ್ಟುಕೊಳ್ಳುತ್ತಿದ್ದರೂ ಮೈಮುಚ್ಚುವುದಕ್ಕೆ ಒಂದು ಸ್ವೆಟರ್ ಕೂಡ ಅತನಿಗೆ ಇದ್ದಿರಲಿಲ್ಲ. ಚಳಿ-ಮಳೆಗಳಲ್ಲಿ ಹೇಗೆ ಕಾಲಕಳೆಯುತ್ತಿದ್ದನೋ ಮಹಾರಾಯ! ಸುಖ-ದುಃಖಗಳಂತೆ ಶೀತೋಷ್ಣಗಳೂ ಸಮನೆಂದು ನಂಬಿದ್ದ ಆ ಯೋಗೇಶ್ವರನಿಗೆ ಅಂಗನ್ಯಾಸಗಳಾವುವೂ ಅಗತ್ಯವಿರಲಿಕ್ಕಿಲ್ಲ." — ಎಂದು ತಮಾಷೆ ಮಾಡಿದ್ದಾರೆ "ಜೇಬುಗಳಿಗೂ ಜೆಂಟಲ್‌ಮನ್‌ಗಳಿಗೂ ಜೋಡು. ಜೇಬುಳ್ಳವರು ಜೆಂಟಲ್‌ಮನ್. ಎಂದೇ ಜೇಬುಗಳ್ಳರು ಅವರಿಗೆ ಜೋಡಾಗಿರುತ್ತಾರೆ." ಹೀಗೆ ಗೇಲಿ ಮಾಡುವಲ್ಲಿ ಹಾಸ್ಯದ ಲೇಪವಿದೆ. "ಈಗಿನ ಫಿಟ್‌ಪ್ಯಾಂಟ ಅವತಾರವಾದಾಗಿನಿಂದ ಸ್ತ್ರೀ-ಪುರುಷರ ಲಿಂಗಭೇದಭಾವಗಳು ಅಳಿಯುವದಕ್ಕೆ ಒಂದು ಸದವಕಾಶ ಪ್ರಾಪ್ತವಾದಂತಾಗಿದೆ" ಎಂದು ಸಮಾನತೆಯನ್ನು ಗುರುತಿಸಲು ಪ್ರಯತ್ನಿಸಿದ್ದಾರೆ.

'ದಾಡಿಯ ಸಮಸ್ಯೆ' ಒಂದು ಲವಲವಿಕೆ ಹುಟ್ಟಿಸುವಂಥ ಹರಟೆ — 'ಬೆಳಗಿನಲ್ಲಿ ಕಣ್ಣೆವೆಯನ್ನು ಎತ್ತಿ ನೇಸರನ ಅರುಣ ಕಿರಣಗಳನ್ನು ಕಾಣುವ ಮೊದಲೇ ಈ ಹಾಳು ಗಡ್ಡಗಳು ತೆರಪಿಲ್ಲದೆ ಮೊಳೆತು, ಬಲಿತು, ಮರವಾಗಿ ಅರುಣ ಕಪೋಲಗಳನ್ನು ಕಾರ್ಮುಗಿಲು ಮುತ್ತಿದ ಆಕಾಶದಂತೆ ಕಳೆಗೆಡಿಸಿ ಎದುರಿನ ಕನ್ನಡಿಯಲ್ಲಿ ಕಾಣಿಸಿಕೊಳ್ಳುತ್ತವೆ. ಅದರಲ್ಲಿಯೂ ನನ್ನ ಗಡ್ಡಗಳ ಪೀಕು ಬಹು ಹುಲುಸಾದುದು. ಅನೇಕರು ನನಗೆ ಕಂಬಳಿಯನ್ನು ದಾನ ಮಾಡಿದ ಕರ್ಣ ಎಂದು ಬಿರುದು ಬಾವಲಿಯನ್ನು ಕೊಟ್ಟಿದ್ದಾರೆ." ಅಲಂಕಾರಿಕ ಭಾಷೆಯನ್ನು ಉಪಯೋಗಿಸಿ ಹಾಸ್ಯರಸಾಯನ ಹುಟ್ಟಿಸಿರುವ ಈ ಉದಾಹರಣೆ ಅತ್ಯಂತ ಮನೋಜ್ಞವಾಗಿದೆ. ಶ್ರೀಕೃಷ್ಣ, ರಾಮ-ಲಕ್ಷ್ಮಣರಿಗೆ ದಾಡಿ ಇರದುದಕ್ಕೆ ಎನ್ಕೆಯವರ ಊಹೆ ಹೀಗಿದೆ– "ಶ್ರೀಕೃಷ್ಣನು ನಿತ್ಯ ಎರಡು ಸಲವಾದರೂ ದಾಡಿ ಮಾಡಿಕೊಳ್ಳುತ್ತಿರಬೇಕು. ಇಲ್ಲವೆ ಅವನಿಗೆ ದಾಡಿಗಳೇ ಬರುತ್ತಿರಲಿಕ್ಕಿಲ್ಲ. ದಾಡಿ ಬಾರದೆ ಇರಲಿಕ್ಕೆ ಅವನಿಗೇನು ಧಾಡಿ? ... ರಾಮ-ಲಕ್ಷ್ಮಣರು ತಮ್ಮ ದಾಡಿಗಳನ್ನೆಲ್ಲಾ ದಶರಥನಿಗೇ ಧಾರೆಯೆರೆದು ಕೊಟ್ಟಿದ್ದರೋ? ... ಅವರು ಅಲೌಕಿಕ ಪುರುಷರು. ಜಗತ್ತಿನ ಬೀಜಮಂತ್ರವೇ ಅವರ ಕೈಯಲ್ಲಿರುವಾಗ ಒಂದು ದಾಡಿಯ ಸಮಸ್ಯೆಯನ್ನು ಒಂದಿಲ್ಲೊಂದು ರೀತಿಯಿಂದ ಬಗೆಹರಿಸಿ ಬಿಡುವುದು ಅವರಿಗೇನು ಅಗಾಧವಾದ ಮಾತೇ?" — ಈ ದಾಡಿಯ ಉಪದ್ರವದಿಂದ ಬೇಸತ್ತ ಎನ್ಕೆಯವರ ಪೀಕಲಾಟ ಇದು– "ಸ್ತ್ರೀಯರಂತೆ ಪುರುಷರಿಗೆ 'ವೇಣೀಬಂಧನ' ಉಪದ್ರವವು ಇರದಿದ್ದರೂ ಈ ದಾಡಿಖಂಡನದ

ಮೋಡಿ ಪ್ರಸಂಗಗಳಲ್ಲಿ ಒಮ್ಮೆಯಾದರೂ ಅರುಣ ನುಣ್ಣದವುಗಳನ್ನು ಧರಿಸುವ ಸೌಭಾಗ್ಯ ನನಗೆ ಒದಗಬಾರದೇ ? ಎಂದೆನಿಸಿ ಕಂಬನಿ ಮಿಡಿದಿದ್ದೇನೆ."

## ಕಾದಂಬರಿಗಳು

ಎನ್ಕೆಯವರು ಬರೆದ ಆರೇಳು ಕಾದಂಬರಿಗಳಲ್ಲಿ 'ವೈನಿ' ಮತ್ತು 'ಎರಡನೆಯ ಸಂಬಂಧ' ಎಂಬ ಎರಡು ಕಾದಂಬರಿಗಳನ್ನು ನಾನು ವಿಶೇಷವಾಗಿ ಮೆಚ್ಚಿದ್ದೇನೆ. ಮೂಲತಃ ಕರುಣರಸವನ್ನು ಗರ್ಭೀಕರಿಸಿಕೊಂಡಿರುವ ಈ ಕಾದಂಬರಿಗಳಲ್ಲಿ ಅಲ್ಲಲ್ಲಿ ಪ್ರಾಸಂಗಿಕವಾಗಿ ಹಾಸ್ಯದ ತುಣುಕುಗಳು ಸೇರಿಕೊಂಡಿವೆ.

'ವೈನಿ' ಕಾದಂಬರಿಯಲ್ಲಿ ಹೈಸ್ಕೂಲ್ ಹುಡುಗ ಜಯಣ್ಣ ತನ್ನ ಮಿತ್ರ ಬಿಂದನಿಗೆ ಪತ್ರ ಬರೆದಿರುತ್ತಾನೆ. ಅದರ ಆರಂಭ ಹೀಗಿದೆ—"ತರುವಾಯ ಈ ಪತ್ರ ಬರೆಯಲು ಕಾರಣವೇನಂದರೆ ಬಾ ನಮ್ಮಲ್ಲಿ ಇಳಿ. ಯಾಕಂದರೆ ಇಲ್ಲಿ ಎಲ್ಲರೂ ಸುರಕ್ಷಿತವಾಗಿದ್ದಾರೆ."— ಕಾಲೇಜಿನ ಸಹಪಾಠಿ ವಿದ್ಯಾರ್ಥಿನಿ ಬಿಂದೂನನ್ನು ಪಿಕ್ನಿಕ್ಕಿಗೆ ಕರೆದಾಗ ಬಡಬ್ರಹ್ಮಚಾರಿ ವಿದ್ಯಾರ್ಥಿ ಬಿಂದೂ ಹೇಳುತ್ತಾನೆ— "ನಾನು ಏನು ತೆಗೆದುಕೊಂಡು ಬರಲಿ ? ನನ್ನಲ್ಲಿ ಕನ್ನಡ ಮನೀನೂ ಇಲ್ಲಾ, ಇಂಗ್ಲೀಷ್ ಮನೀ (Money) ನೂ ಇಲ್ಲಾ." ಅಣ್ಣ (ಜಯಣ್ಣ) ತಂಗಿಗೆ (ವತ್ಸಲಾ) ಸೈಕಲ್ ಕಲಿಸುವ ಸನ್ನಿವೇಶ ಸ್ವಾರಸ್ಯವಾಗಿದೆ— "ಹಿಂದಿನಿಂದ ಕೈಬಿಟ್ಟಾಗ ವತ್ಸಲಾ ಭೂಮಿತಾಯಿಯನ್ನು ಮುದ್ದಿಸಿದಳು. ಆಗ ಸೈಕಲ್ ಗಂಟೆಯ ಹಿಡಿಕೆಯ ತುದಿ ವತ್ಸಲೆಯ ಹಲ್ಲು ಮುರಿಯಿತು." ಮುರಿದ ಹಲ್ಲನ್ನು ಕೈಯಲ್ಲಿಯೇ ಹಿಡಿದು ಕೊಂಡಿದ್ದ ತಂಗಿಗೆ ಜಯಣ್ಣ ಅನ್ನುತ್ತಾನೆ— "ಏ ಹುಚ್ಚೀ ಒಗದಬಿಡು ಅದನ್ನು. ನಿನ್ನವೇನು ಆನಿಕೋರಿ ಹಲ್ಲೇನು ? ಮಾರಿದರ ರೊಕ್ಕ ಬರತಾವಂತ ತಿಳಕೊಂಡಿ ಯೇನು ?"— ಇಂಥ ಉದಾಹರಣೆಗಳನ್ನು 'ಎರಡನೆಯ ಸಂಬಂಧ'ದಲ್ಲಿಯೂ ಕಾಣಬಹುದಾಗಿದೆ.

## ಆಕಾಶವಾಣಿ

ಎನ್ಕೆಯವರು ತಮ್ಮ ಇಡೀ ವೃತ್ತಿ ಜೀವನವನ್ನು ಆಕಾಶವಾಣಿಯಲ್ಲಿ ಕಳೆದವರು. ಆ ಅವಧಿಯಲ್ಲಿ ಅವರು ಅಸಂಖ್ಯಾತ ನಾಟಕ, ಹರಟೆ, ಹಾಡು ಮುಂತಾದವುಗಳನ್ನು ಪ್ರಸಾರಗೊಳಿಸಿದ್ದಾರೆ. ಆದರೆ ಅವು ದಾಖಲೆಗೊಳ್ಳದೆ ಗಾಳಿಮಾತಾಗಿ ತೇಲಿ ಹೋಗಿರುವುದು ವಿಷಾದದ ಸಂಗತಿ. ಅವರು ಧಾರವಾಡ ನಿಲಯದಿಂದ ಬಹುಕಾಲದ ವರೆಗೆ ಪ್ರಸ್ತುತ ಪಡಿಸಿದ 'ಗೃಹಗೋಷ್ಠಿ' ಎಂಬ ವಾರದ ಕೌಟುಂಬಿಕ ಚರ್ಚೆ ಸಹ ತುಂಬಾ ಲವಲವಿಕೆಯಿಂದ ಕೂಡಿರುತ್ತಿತ್ತು.

# ಎನ್ಕೆಯವರ ಹರಟೆಗಳ ವೈಶಿಷ್ಟ್ಯ

## ಸರೋಜ ಲೋಕೇಶ್

ಕನ್ನಡ ಸಾಹಿತ್ಯಕ್ಕೆ ಹರಟೆಗಳ ಮೂಲಕ ಆಕರ್ಷಕ ಹಾಸ್ಯವನ್ನು ನೀಡಿದವರಲ್ಲಿ ಎನ್ಕೆಯವರೂ ಒಬ್ಬರು. 'ಮುಂಗಾಲ್ ಪುಟಿಗೆ' (೧೯೪೫) 'ತ್ರಿಶೂಲಿಗಳು (ಅನ್ಯರೊಂದಿಗೆ – ೧೯೫೩), 'ಇದು ಬೆಂಗಳೂರು' (೧೯೬೪), 'ಎನ್ಕೆ ಬರೆಹಗಳು' (೧೯೬೬), 'ಮೋಡಕಾ ಬಾಜಾರ' (೧೯೬೭)– ಇವು ಎನ್ಕೆಯವರ ಹರಟೆಗಳ ಸಂಕಲನಗಳು.

'ಮುಂಗಾಲ್ ಪುಟಿಗೆ', 'ಮೋಡಕಾ ಬಾಜಾರ' ಮತ್ತು 'ತ್ರಿಶೂಲಿಗಳು' (ಎನ್ಕೆಯವರ ಎದೆಶೂಲಿ) ಸಂಕಲಗಳನ್ನು ಮುಖ್ಯವಾಗಿ ಇಲ್ಲಿ ವಿವೇಚಿಸಲಾಗಿದೆ ಎನ್ಕೆಯವರ ಹರಟೆಗಳು ಸಾಹಿತ್ಯ ಪ್ರಕಾರಕ್ಕೆ ಒಳ್ಳೆಯ ಕೊಡುಗೆ. 'ಮುಂಗಾಲ್ ಪುಟಿಗೆ', 'ಮೋಡಕಾ ಬಾಜಾರ' - ಈ ಕೃತಿಗಳು ಹರಟೆ ಸಾಹಿತ್ಯದ ಜನಪ್ರಿಯ ಸಂಗ್ರಹಗಳು.

ಸಮೀಕ್ಷೆಗೆ ತೆಗೆದುಕೊಂಡಿರುವ ಮೂರು ಕೃತಿಗಳಲ್ಲಿ ಸಂಕಲಿತವಾಗಿರುವ ಎಲ್ಲ ಬರೆಹಗಳೂ ಹರಟೆಯ ಸಾಲಿಗೆ ಸೇರುವುದಿಲ್ಲ. ಆದರೆ ಬಹುಮಟ್ಟಿನ ಬರೆಹಗಳು ಹರಟೆಗಳಾದುದರಿಂದ 'ಹರಟೆಯ ಸಂಕಲನ'ವೆಂದು ಕರೆದಿದ್ದಾರೆ. ಇವುಗಳಲ್ಲಿ ಕೆಲವು ಲಘುಪ್ರಬಂಧಗಳಾಗಿವೆ, ಕಥೆಯ ಸೆರಗು ಹೊದ್ದ ಘಟನೆಗಳಿವೆ, ವಿಡಂಬನಾತ್ಮಕ ಬರೆಹಗಳಿವೆ, ಕೆಲವು ವರ್ಣನಾತ್ಮಕವಾಗಿದ್ದರೆ, ಉಳಿದವು ಸಂಪೂರ್ಣ ಸ್ವರೂಪದ ಹರಟೆಗಳಾಗಿವೆ. ಎಲ್ಲ ಬರೆಹಗಳಲ್ಲೂ ಎನ್ಕೆಯವರ ಪ್ರಕೃತಿ. ಸಹಜವಾದ ರಸಿಕತೆ, ವಿಸ್ತಾರವಾದ ಲೋಕಾನುಭವ, ಅಪಾರ ವಿದ್ವತ್ತು, ಕಾವ್ಯಪ್ರಿಯತೆ, ಹರಿತವಾದ ವಿಮರ್ಶಾ ಶಕ್ತಿ, ಹಾಸ್ಯಮನೋಧರ್ಮ ಮತ್ತು ನಿರೂಪಣಾ ಚಾತುರ್ಯಗಳು ಎದ್ದುಕಾಣುತ್ತವೆ.

ಎನ್ಕೆಯವರು ಜೀವನದ ಎಲ್ಲ ಮುಖಗಳಲ್ಲಿಯೂ ಉತ್ಸಾಹವುಳ್ಳವರು. ಅವರ ಹರಟೆಗಳ ವಸ್ತು ವಿವಿಧ ಹಾಗೂ ವರ್ಣರಂಜಿತ. 'ಹರಟೆ ಮನಸ್ಸಿನ ಸ್ವಚ್ಛಂದ ಲಹರಿ'ಯಾದುದರಿಂದ ಹರಟೆಗಾರರ ಭಾವನೆಗಳಿಗೆ, ವಿಚಾರಗಳಿಗೆ ಯಾವ ಕಟ್ಟು

ಪಾಡೂ ಇಲ್ಲ. ಅವರ ಮನಸ್ಸು ಗೆದ್ದಲು ಹುಳುಗಳ ಗೂಡಿನಿಂದ ಹಿಡಿದು ಸ್ವರ್ಗ ಲೋಕದ ವರೆಗೂ ಸ್ವೇಚ್ಛಾ ಪ್ರವಾಸ ಮಾಡುತ್ತದೆ; ವಿಜ್ಞಾನದ ವಿಕ್ರಮಗಳನ್ನು ಅವಲೋಕಿಸುತ್ತದೆ. ಮನಸ್ಸಿನ ಮಂಗಾಟಗಳನ್ನು ವಿಶ್ಲೇಷಿಸುತ್ತದೆ; ಚಟಗಳನ್ನು ವಿಡಂಬಿಸುತ್ತದೆ ದಾಡಿ-ಮೀಸೆಗಳ ಸಮಸ್ಯೆಯನ್ನು ಚರ್ಚಿಸುತ್ತದೆ, ಮುಂಗಾಲ್ ಪುಟಿಗೆಯ ಮಾತುಗಳ್ನಾಡಿ ಆಕರ್ಷಿಸುತ್ತದೆ; ಇವುಗಳ ಜೊತೆಯಲ್ಲಿ ಸಮಾಜದ ಓರೆಕೋರೆಗಳಿಗೆ, ವ್ಯಕ್ತಿಯ ದೌರ್ಬಲ್ಯಗಳಿಗೆ ಕನ್ನಡಿ ಹಿಡಿಯುತ್ತದೆ. ಅಪ್ರಿಯ ಸತ್ಯಗಳನ್ನು ಯಾರ ಮನಸ್ಸಿಗೂ ನೋವಾಗದಂತೆ ರಂಜನೀಯವಾಗಿ ವಿಮರ್ಶಿಸುತ್ತದೆ. ಈ ಸಂದರ್ಭದಲ್ಲೆಲ್ಲ ಲೇಖಕರ ಅನುಭವದ, ಬರವಣಿಗೆಯ ಹಾಗೂ ವ್ಯಕ್ತಿತ್ವದ ವಿವಿಧ ಮುಖಗಳ ಪರಿಚಯವಾಗುತ್ತದೆ.

ಎನ್ಕೆಯವರ ಹರಟೆಗಳೇ ಒಂದು ವೈಶಿಷ್ಟ್ಯ. ಲೇಖಕರು ಪ್ರಾಸಂಗಿಕವಾಗಿ ಯಾವುದೇ ವಿಷಯ ತೆಗೆದುಕೊಂಡರೂ ಆ ವಿಷಯದಿಂದ ಉದಯಿಸಿದ ಎಲ್ಲ ವಿಚಾರಗಳಲ್ಲೂ ಲೀಲಾಜಾಲವಾಗಿ ವಿಹರಿಸುತ್ತಾರೆ. ಸ್ವಾನುಭವದಿಂದ ಅವುಗಳನ್ನು ವಿಮರ್ಶಿಸುತ್ತಾರೆ. ಆದರೆ ವಿಷಯದ ಜಾಡನ್ನು ಎಲ್ಲಿಯೂ ಬಿಡುವುದಿಲ್ಲ. ಕೆಲವೊಮ್ಮೆ ಅನಾವಶ್ಯಕವಾಗಿ ವಿಷಯ ವಿಸ್ತಾರಗೊಂಡಂತೆ ಕಂಡರೂ ಲೇಖಕರು ತಟ್ಟನೆ ಜಾಗೃತರಾಗಿ ವಿಷಯಾಂತರವಾಗದಂತೆ ಮೂಲ ವಿಷಯಕ್ಕೆ ಕೊಂಡಿ ಕೂಡಿಸಿ ಮುಕ್ತಾಯ ಹಾಡುತ್ತಾರೆ. ಹಾಸ್ಯವೊಂದೇ ಎಲ್ಲ ಹರಟೆಗಳ ಕೇಂದ್ರಬಿಂದುವಾದರೂ ಅದರ ಹಿನ್ನಲೆಯಲ್ಲಿ ವ್ಯಂಗ್ಯ, ಅಣಕ ಮತ್ತು ವಿಡಂಬನೆಗಳೂ ಮಿಂಚುತ್ತವೆ.

'ಮುಂಗಾಲ್‌ಪುಟಿಗೆ' ಎನ್ಕೆಯವರ ಹರಟೆಗಳ ಪ್ರಥಮ ಸಂಕಲನ. ಮುನ್ನುಡಿಯಲ್ಲಿ, "ಪ್ರಪಂಚದ ಅಷ್ಟಾದಶ ಮುಖಗಳನ್ನು ತೋರಿಸುವ ಹದಿನೆಂಟು ಹರಟೆಗಳು ಇದರಲ್ಲಿವೆ" ಎಂದಿದ್ದಾರೆ, ತಿರಸಷ್ಟಿ, ಸ್ವರ್ಗಲೋಕಕ್ಕೆ ಸ್ವೇಚ್ಛಾ ಪ್ರವಾಸ, ಕಣ್ಮರೆಯಾದ ಕಾಲ್ಮರಿ, ಚಟಗಳು, ದಾಡಿಯ ಸಮಸ್ಯೆ, ಜೋಗದರ್ಶನ, ಎರಡಾಣೆಯ ಫಜೀತಿ, ಸ್ವಾವಲಂಬನದ ಪ್ರಥಮ ಪಾಠ, ಮುಂಗಾಲ್‌ಪುಟಿಗೆಯ ಮುಂದಾಳುಗಳು-ಇವೆಲ್ಲ ಉತ್ತಮ ಬರೆಹಗಳು. ಹರಟೆಯ ಅಂಶವೇ ಪ್ರಧಾನವಾಗಿವೆಯಾದರೂ ಕೆಲವು ಬರೆಹಗಳು ಲಘುಪ್ರಬಂಧಗಳ ಕಡೆಗೂ ಮತ್ತೆ ಕೆಲವು ಕತೆಗಳ ಕಡೆಗೂ ವಾಲುತ್ತವೆ.

'ತಿರಸಷ್ಟಿ' ಮತ್ತು 'ಮುಂಗಾಲ್‌ಪುಟಿಗೆಯ ಮುಂದಾಳು'ಗಳಲ್ಲಿ ಎನ್ಕೆಯವರ ವಿಡಂಬಕ ವಿಚಾರಲಹರಿಯನ್ನು ಕಾಣಬಹುದು. 'ತಿರಸಷ್ಟಿ' ತ್ರಿಷಷ್ಟಿ ಶಲಾಕ ಪುರುಷರ ಪುರಾಣ ಪ್ರವಚನವಲ್ಲ. 'ತಿರಸಷ್ಟಿ' ತ್ರಿಷಷ್ಟಿ ಶಬ್ದದ ಅಪಭ್ರಂಶ ರೂಪ. ಸಂಸ್ಕೃತದಲ್ಲಿ 'ತಿರಸಷ್ಟಿ' ಎಂದರೆ 'ಅರವತ್ತು ಮೂರು' ಎಂದರ್ಥ. ನಮ್ಮಲ್ಲಿ ಕೆಲವರು ಆ ಶಬ್ದಕ್ಕೆ ಅಧಿಕಪ್ರಸಂಗಿ, ತಲೆತಿರುಕ, ಅವಿವೇಕಿ- ಮುಂತಾಗಿ ಅರ್ಥೈಸುತ್ತಾರೆ. 'ಅಧಿಕಪ್ರಸಂಗಿ' ಎಂದಾಕ್ಷಣ ಆ

ವ್ಯಕ್ತಿಯ ಬಗೆಗೆ ಸನ್ಮುಲ್ಲಿ ಹಗುರ ಭಾವನೆ ಮೂಡುವುದು ಸಹಜ. ಆದರೆ ಹರಟೆಗಾರರು "ತ್ರಿಪಿಷ್ಟತನವೇ ಮಹಾಪುರುಷನ ಮೂಲ ಲಕ್ಷಣ"ವೆಂದು ಕರೆದು ಅದರ ಹಿರಿಮೆಯನ್ನು ಎತ್ತಿ ಹಿಡಿಯುತ್ತಾರೆ. ತಿರಸಿಷ್ಟತನದ ಲಕ್ಷಣಗಳನ್ನೂ, ಧಾರ್ಮಿಕ, ಸಾಂಸ್ಕೃತಿಕ, ಸಾಹಿತ್ಯಿಕ ಹಾಗೂ ರಾಜಕೀಯ ರಂಗಗಳಲ್ಲಿ ಅನಿವಾರ್ಯವಾಗಿರುವ ಅವರ ಅಗತ್ಯಗಳನ್ನೂ ಸ್ವಾರಸ್ಯವಾದ ಧಾಟಿಯಲ್ಲಿ ಸಮರ್ಥಿಸುತ್ತ ತಮ್ಮ 'ತ್ರಿಶಿಷ್ಟ್ಯ'ವನ್ನು ಸೊಗಸಾಗಿ ಮೆರೆಸುತ್ತಾರೆ.

'ಮುಂಗಾಲ್‌ಪುಟಿಗೆಯ ಮುಂದಾಳುಗಳು'– ಕೀರ್ತಿಸಂಪನ್ನರಾಗಬೇಕೆನ್ನುವವರಿಗೆ ಸುಲಭ ಮಾರ್ಗಗಳನ್ನು ಸೂಚಿಸುತ್ತದೆ. ಸಾಹಿತ್ಯ, ರಾಜಕೀಯ, ವ್ಯವಹಾರ, ಸಂಸಾರ, ಪರಿಪ್ರಾಪ್ತನ ಅಪರಿಚಿತ ಪರಿಸರ ಹೀಗೆ ಎಲ್ಲ ಕ್ಷೇತ್ರಗಳಲ್ಲಿ ಹಾಗೂ ಸಂದರ್ಭಗಳಲ್ಲಿ ಇಂದು ಮುಂಗಾಲ್‌ಪುಟಿಗೆಯ ಔಚಿತ್ಯವನ್ನೂ, ಹಿರಿಮೆಯನ್ನೂ ಎತ್ತಿ ಹಿಡಿಯುತ್ತಾರೆ. ಮುಂಗಾಲ್‌ಪುಟಿಗೆ ಎಂದರೆ 'ಇಲ್ಲದ್ದನ್ನು ಹೇಳುವುದು'– ಭಟ್ಟಂಗಿತನದ ಉತ್ಕರ್ಷ, ಮುಖಸ್ತುತಿ! ಈ ಗುಣ ಕರಗತವಾಯಿತೆಂದರೆ ಸಾಕು ಉಳಿದುದೆಲ್ಲಾ ಬಹು ಸುಲಭ!

ಕೀರ್ತಿಯನ್ನು ಸಂಪಾದಿಸಬೇಕೆನ್ನುವವರು ಮೊದಲು ಮಹಾಪುರುಷರಾಗಬೇಕು. ಮಹಾಪುರುಷರಾಗುವುದು ಹೇಗೆ? ಅದನ್ನು ಲೇಖಕರ ಬಾಯಿಂದಲೇ ಕೇಳಬೇಕು; "ಮಹಾಪುರುಷನಾಗಬೇಕೆನ್ನುವವರು ಮೊದಲು ಸಾಹಿತಿ, ಉಜ್ವಲ ವಾಗ್ಮಿ. ಇಂತಲ್ಲದೆ ರಾಜಕೀಯ, ಸಾಮಾಜಿಕ ನೈತಿಕ, ಭೌತಿಕ, ಆಧ್ಯಾತ್ಮಿಕ (ಚ) ಪಾತಿಕ - ಯಾವುದೇ ಚಳುವಳಿಯ ನಾಯಕ, ಅಥವಾ ದೇಶಭಕ್ತ......... ಹೀಗೆ ಒಂದಿಲ್ಲೊಂದು ರೀತಿಯ ಬಂಡುಗಾರನಾಗಲು ಮೊದಲು ಯತ್ನಿಸಬೇಕು. ಇಂದಿನ ಬಂಡುಗಾರರೇ ನಾಳಿನ ಕ್ರಾಂತಿಪುರುಷರಾಗುವರೆಂಬಲ್ಲಿ ಸಂದೇಹವಿಲ್ಲ." ಉದಾಹರಣೆಗೆ, ಸಾಹಿತ್ಯದ ಸಾರ್ವಭೌಮನಾಗಬೇಕೆಂದಿರುವವನು ಕನಿಷ್ಠ ಒಂದು ಸಾರ್ವಜನಿಕ ಲೈಬ್ರರಿಯ ಕಾರ್ಯದರ್ಶಿಯಾದರೂ ಆದರೆ ಸಾಕು! ಆಗ ಎಲ್ಲ ಭಾಷೆಯ, ಎಲ್ಲ ಕೃತಿಗಳ ಸಂಪರ್ಕ ಈ ಮೂಲಕ ಸರಸ್ವತಿಯ ನಂಟು ಗಟ್ಟಿಯಾದೀತು! ಸಾಹಿತಿಗಳ ಲಿಸ್ಟಿನಲ್ಲಿ ದಾಖಲಾತಿಯೂ ದೊರೆತೀತು! ಮುಂದೆಲ್ಲಾ ಕೇವಲ ಮುಂಗಾಲ್‌ಪುಟಿಗೆಯ ಕೈವಾಡವಿದ್ದರೆ ಸಾಕು. ಕನಸು ನನಸಾದಂತೆಯೇ!

'ಕಣ್ಮರೆಯಾದ ಕಾಲ್ಮರಿ' ಕಳೆದುಹೋದ ಮೆಟ್ಟುಗಳನ್ನು ಕುರಿತ ವಿರಹಗಾಥೆ. ಬೆಡ್‌ಷೀಟಿನ ಬಿಲ್ಲಿನ ತಪ್ಪುಲೆಕ್ಕದಲ್ಲಿ ದೊರೆತ ನಾಲ್ಕಾಣೆ ಲಾಭದ ಸಂಭ್ರಮದ ಹೊಸ್ತಿಲಿನಲ್ಲಿದ್ದಾಗಲೇ ಹೊಚ್ಚ ಹೊಸ ಕಾಲ್ಮರಿಯನ್ನು ಕಳೆದುಕೊಂಡು ದುಃಖದ ಮಡುವಿಗೆ ಧುಮುಕಿದ ಪರಿಯನ್ನು ಈ ಬರೆಹ ಸೊಗಸಾಗಿ

ನಿವೇದಿಸುತ್ತದೆ. ಹರಟೆ ವಿರಹದಲ್ಲಿ ಆರಂಭವಾಗಿ, ದುಃಖದಲ್ಲಿ ಮುಳುಗಿ, ವೈರಾಗ್ಯ ಪಶ್ಚಾತ್ತಾಪಗಳಲ್ಲಿ ಹಾದು ಕೊನೆಗೆ ಮಿತವ್ಯಯದ ವೇದಾಂತದಲ್ಲಿ ವಿನೋದವಾಗಿ ಮುಕ್ತಾಯವಾಗುತ್ತದೆ.

ಪುರುಷರನ್ನು ಕಾಡುವ ದಿನನಿತ್ಯದ ಸಮಸ್ಯೆ ಎಂದರೆ ದಾಡಿಯ ಸಮಸ್ಯೆ. ಗೊಬ್ಬರ ನೀರು ಹಾಕಿ ಬೆಳೆಸದಿದ್ದರೂ ದಿನವಹಿ ಬೆಳೆಯುವ ಈ ಸಮೃದ್ಧ ಕಳೆಯನ್ನು ನಿವಾರಿಸಲು ಪ್ರತಿನಿತ್ಯ ಕೆಲವು ನಿಮಿಷಗಳನ್ನು ಮೀಸಲಾಗಿಡಬೇಕು. ಹರಟೆಗಾರರ ವಿಚಾರಲಹರಿಗೆ ಸಿಕ್ಕಿದ 'ದಾಡಿಯ ಸಮಸ್ಯೆ' ವಿನೋದವಾಗಿ ಹರಿದಿದೆ. ದಾಡಿಯ ಸಮಸ್ಯೆಯನ್ನು ಇಂದಿನ ಜಾಗತಿಕ ಸಮಸ್ಯೆಗಳಲ್ಲಿ ಒಂದೆಂದು ಭಾವಿಸುವದು, ದಾಡಿಧಾರಿಗಳಾದ ಹಿಂದಿನ ಕಾಲದ ಋಷಿಗಳು ಜಗತ್ತಿನ ಮಹಾಪುರುಷರುಗಳನ್ನು ಹೆಸರಿಸಿ, ಇವರೆಲ್ಲರೂ ದಾಡಿಗಾಗಿಯೇ ತಮ್ಮ ಅಮೂಲ್ಯ ಸಮಯವನ್ನು ಹಾಳುಮಾಡುತ್ತ ಕುಳಿತಿದ್ದರೆ, ಅವರಿಂದ ಲೋಕಕಲ್ಯಾಣ ಕಾರ್ಯಗಳಾಗಲೀ, ಮಹತ್ಕೃತಿಗಳಾಗಲೀ ಸಾಧ್ಯವಾಗುತ್ತಿರಲಿಲ್ಲವೆಂದು ಕಲ್ಪಿಸುವುದು; ಲೇಖಕರು ಕವಿಗಳು, ಆಧ್ಯಾತ್ಮಿಗಳು, ದೇಶಭಕ್ತರು, ಗರ್ಭವತೀಭಾರ್ಯಾಕರು ಮುಂತಾದವರನ್ನು ನಿರಂಕುಶ ಪ್ರಭುಗಳೆಂದು ಕರೆಯುವುದು ಸ್ವಾರಸ್ಯವಾಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ಮಾತಿಗೊಮ್ಮೆ ಜಟೆ ಅಪ್ಪಳಿಸುವದಕ್ಕಾಗಿಯೇ ದೂರ್ವಾಸರು ಜಟಾಜೂಟಧಾರಿಗಳಾಗಿದ್ದಾರೇನೋ [ಎದೆಶೂಲಿ] ಎನ್ನುವಲ್ಲಿ ಹಾಸ್ಯದ ಬುಗ್ಗೆ ಚಿಮ್ಮುತ್ತದೆ.

ಬಹುಮಟ್ಟಿಗೆ ಇದೇ ವಸ್ತುವನ್ನು ಹೋಲುವ ಮತ್ತೆರಡು ಬರೆಹಗಳು 'ಪ್ರಥಮ ಪ್ರವೇಶ' ಮತ್ತು 'ಮೀಸೆಯ ಕಂಸ'. ಪ್ರಥಮ ಪ್ರವೇಶದಲ್ಲಿ ಹೇರ್ ಕಟ್ ಮಾಡುವವರಿಗೆ 'ಹೆದ್ದೇಲೇದು' ಎನ್ನುವುದನ್ನು ಕಥೆಯ ಹಂದರದಲ್ಲಿ ಬಿಡಿಸಿ ತೋರಿದ್ದರೆ, 'ಮೀಸೆಯ ಕಂಸ'ದಲ್ಲಿ ಬೇಡವೆನಿಸಿದರೂ ಅನಿವಾರ್ಯವಾಗಿ ಇಟ್ಟುಕೊಳ್ಳಬೇಕಾದ ಮೀಸೆಯ ಜೊತೆಗೆ ನಡೆಸಿದ ಪ್ರಯೋಗಗಳ ವಿವರವಿದೆ. 'ಸೋಸದ ಚಹ' ಕುಡಿಯುವ 'ಮೀಸೆ ಮಾಮಾ'ನ ಪರಿಚಯವಾಗುವುದೂ ಇಲ್ಲಿಯೆ!

ಹರಟೆಯ ವಸ್ತುಪ್ರಪಂಚ ಅತ್ಯಂತ ವಿಶಾಲವಾದದ್ದು. ಮಹತ್ವವಲ್ಲದ ವಿಷಯಗಳೂ ಇಲ್ಲಿ ಹೇಳುವ ರೀತಿಯಿಂದ ಮಹತ್ವವನ್ನು ಪಡೆದುಕೊಳ್ಳುತ್ತವೆ. ಹರಟೆಗಳು ಕೆಲವೊಮ್ಮೆ ಹಾಸ್ಯದೊಡನೆ ವಿವೇಚನಾ ಶಕ್ತಿಯನ್ನೂ ಪಡೆದುಕೊಂಡಿರುತ್ತವೆ. ಉದಾಹರಣೆಗೆ 'ಚಟಗಳು' 'ಪಂಕ್ಚುಯಾಲಿಟಿಯ ಪರಮಾವಧಿ' 'ಸ್ವಾವಲಂಬನದ ಪ್ರಥಮ ಪಾಠ' ಮೊದಲಾದವುಗಳನ್ನು ಹೆಸರಿಸಬಹುದು. ಈ ಪ್ರಬಂಧಗಳು ಹರಟೆಸ್ಥಾನದಿಂದ ಮೇಲೇರಿ ಲಘು ಪ್ರಬಂಧದ ಲಕ್ಷಣವನ್ನು ಪಡೆದ ಬರೆಹಗಳು.

'ಚಟಗಳು' ಮನುಷ್ಯನ ಮಾನಸಿಕ ಮತ್ತು ಶಾರೀರಿಕ ಚಟಗಳ ವಿಶ್ಲೇಷಣೆ. ಚಟಗಳ ದಾಸನಾದ ವ್ಯಕ್ತಿ ಅವುಗಳಿಂದ ಬಿಡಿಸಿಕೊಳ್ಳಲಾಗದೆ ತೊಳಲಾಡುವುದು ಸಹಜ. ನಶ್ಯ ಹಾಕುವುದು, ಉಗುರು ಕಡಿಯುವುದು, ಭುಜಹಾರಿಸುವುದು ಮೊದಲಾದುವು ವಿಶಿಷ್ಟ ಚಟಗಳಾದರೆ, 'ಎಷ್ಟೋ ಜನರಿಗೆ ಅತಿಥಿಗಳ ಮನೆಗೆ ಹೋದಾಗ ಅವರ ಪುಸ್ತಕಗಳ ಶೆಲ್ಫನ್ನು ಕಿತ್ತಿಹಾಕುವ ಚಟವಿರುವುದು ಸ್ವಾಭಾವಿಕ. ಅನೇಕರಿಗೆ ಎರವಾಗಿ ತೆಗೆದುಕೊಂಡ ಹಣವನ್ನು ಮರಳಿಕೊಡದೆ ಮರೆತಂತೆ ನಟಿಸುವ ಸಚ್ಚಟವಿದ್ದರೆ ಇನ್ನು ಹಲವರಿಗೆ ಅನ್ಯರ ವಸ್ತುಗಳನ್ನು ಪುಕ್ಕಟೆ ಬಳಸುವ ಪ್ರಬಲ ಚಟವಿರುತ್ತದೆ. ಬಹುಜನರಿಗೆ ವಿಶೇಷಕಾರ್ಯ ಸಾಧನೆಯಾಗದಿದ್ದರೂ ಸುಳ್ಳು ಸುಳ್ಳೇ ಸುಳ್ಳು ಹೇಳುವ ಒಳ್ಳೇ ಚಟವಿರುತ್ತದೆ"– ಹೀಗೆ ವ್ಯಕ್ತಿಗಳ ವಿಶಿಷ್ಟ ಚಟಗಳೊಡನೆ ಅವರ ದುಶ್ಚಟಗಳನ್ನು ವಿಡಂಬಿಸಿ ಕೊಡುವ ಮುಸುಕಿನೊಳಗಿನ ಗುದ್ದುಗಳು ಸ್ವಾರಸ್ಯವಾಗಿವೆ.

'ಪಂಕ್ಚುಯಾಲಿಟಿಯ ಪರಮಾವಧಿ'ಯಲ್ಲಿ ನಮ್ಮಲ್ಲಿನ ಸಮಯ ಪರಿಪಾಲನೆಯ ಅತೀವೃಷ್ಟಿತನ ಮತ್ತು ಅನಾವೃಷ್ಟಿತನಗಳೆರಡನ್ನೂ ಕುರಿತು ವಿಡಂಬಿಸಿದ್ದಾರೆ.

ಪಾಶ್ಚಾತ್ಯರಿಂದ ನಾವು ಬಳುವಳಿ ಪಡೆದ ಅನೇಕ ಸಾಮಾಜಿಕರೂಢಿಗಳಲ್ಲಿ 'ಪಂಕ್ಚುಯಾಲಿಟಿ'ಯೂ ಒಂದು. ಸಿಂಪಿಗರು, ಅಗಸರು ಅವರವರ ಕಾರ್ಯಕ್ಷೇತ್ರಗಳಲ್ಲಿ ಸಮಯ ಪರಿಪಾಲನೆಯ ತತ್ವವನ್ನು ಅಕ್ಷರಶಃ ಪಾಲಿಸಲೇಬೇಕು ಆಗ ಮಾತ್ರ ನಾಡಿನ ಕಲ್ಯಾಣವಾದೀತು! ಆದರೆ ಪ್ರತಿಯೊಬ್ಬ ಸಾಮಾನ್ಯ ಮನುಷ್ಯನೂ ಮಹತ್ವವಿಲ್ಲದ ಕಾರ್ಯಗಳಿಗೆಲ್ಲಾ ಮಹತ್ವ ಕೊಟ್ಟು ಪಂಕ್ಚುಯಾಲಿಟಿಯ ಹೆಸರಿನಲ್ಲಿ ಜೀವನವನ್ನು ಯಂತ್ರವತ್ತಾಗಿ ಮಾಡುವುದೇಕೆ? ಸಮಯ ಪರಿಪಾಲನೆಗೆಂದೇ ಹಸಿವಿಲ್ಲದಿದ್ದರೂ ತಿನ್ನುವುದು, ನಿದ್ದೆ ಬಾರದಿದ್ದರೂ ಮಲಗುವುದು – ಇಂತಹವರನ್ನು ಛೇಡಿಸುವರು. "ನಿತ್ಯ ೯॥ ಮಲಗುವದು ಇದ್ದದ್ದೇ. ಒಂದು ದಿನ ನಾಲ್ಕು ಜನ ರಸಿಕರು ಕೂಡಿ ಕೇರಂ ಹಾಗೂ ಇಸ್ಪೇಟು ಆಟದಲ್ಲಿಯೊ ಸರಸ ಮಧುರವಾದ ಹರಟೆಯಲ್ಲಿಯೊ, ಚಹಾಪಾನದಲ್ಲಿಯೋ ಸಿನಿಮಾ ನಾಟಕದಲ್ಲಿಯೋ ಒಂದು ದಿನ ನಿದ್ದೆಗೆಟ್ಟರೆ ನಮಗೆ incorrigible ಎಂಬ ಪದವಿ ಬಂದೇ ಬಿಡಬೇಕೆ? ...... ಶುಷ್ಕನಾಗಿ, ಯಾಂತ್ರಿಕವಾಗಿ ಬರಿ engagements ಎಂದೇ ನಿಂತರೆ ಅದು ವಿರಸ ಜೀವನವಾಗಲಿಕ್ಕಿಲ್ಲವೆ? ಸ್ಫೂರ್ತಿ ಬಂದಾಗ ಪ್ರಣಯಚೇಷ್ಟೆ ಮಾಡುವುದು ಬಿಟ್ಟು 'ಟಾಯಂಟೇಬಲ್ ಪ್ರಕಾರ' ಪ್ರಣಯ ಮಾಡಹೋದರೆ ವಾತ್ಸ್ಯಾಯನನ ತತ್ವಕ್ಕೆ ಯಾಕೆ, ನನ್ನ ತತ್ವಕ್ಕೇ ವಿರುದ್ಧವಾಗಲಿಕ್ಕಿಲ್ಲವೆ?" ಆದ್ದರಿಂದ, "ಜೀವನದ ಸ್ವಾರಸ್ಯವನ್ನು

ಮೀಸಲಾಗಿರಿಸುವುದರ ಸಲುವಾಗಿಯಾದರೂ ಜೀವನದಲ್ಲಿ ಒಮ್ಮೊಮ್ಮೆ ಏರಿಳಿತಗಳು ಬೇಕು." ಜೀವನದಲ್ಲಿ ಶಿಸ್ತು ವ್ಯವಸ್ಥೆಗಳಿರಬೇಕು ನಿಜ. ಆದರೆ ಅದು ಅತಿಯಾದರೆ ಜೀವನ ನೀರಸವಾಗುತ್ತದೆ ಎಂಬುದೂ ಅಷ್ಟೇ ನಿಜ! ಈ ದೃಷ್ಟಿಯಿಂದಲೆ ಪಂಕ್ಚುಯಾಲಿಟಿಯ ದಾಸ್ಯತ್ವವನ್ನು ಅಲ್ಲಗಳೆಯುವುದು.

'ಸ್ವಾವಲಂಬನದ ಪ್ರಥಮ ಪಾಠ' ಹರಟೆಗಾರರ ಸ್ವಾನುಭವ ಕಥನ. ರೇಶನ್ ಜೋಳವನ್ನು ಸ್ವತಃ ಹೊತ್ತು ತರುವುದು ಅನಿವಾರ್ಯವಾದಾಗ ಇದ್ದಕ್ಕಿದ್ದಂತೆಯೇ ಮಹಾತ್ಮರ 'ಡಿಗ್ನಿಟಿ ಆಫ್ ಲೇಬರ್' ತಲೆಗೆ ಹೊಳೆದು ಮನಸ್ಸು ಭಾಷಣ ಬಿಗಿಯಿತು: "ನಮಗೆ ದುಡಿಮೆಯ ಮಹತ್ವವೇ ಗೊತ್ತಿಲ್ಲ. ಹೀಗಾಗಿಯೇ ನಾವು ದಾಸ್ಯ ಶೃಂಖಲೆಯಲ್ಲಿ ಕೊಳೆಯುತ್ತಿದ್ದೇವೆ. ಸುಳ್ಳು ಸುಳ್ಳೇ 'ಸುಧಾರಣೆ','ನಾಗರಿಕತೆ'ಎನ್ನುತ್ತ ನಮ್ಮನ್ನೇ ನಾವು ವಂಚಿಸಿಕೊಳ್ಳುವ ಹೊರತು ಮತ್ತೇನೂ ಮಾಡುತ್ತಿಲ್ಲ. ನಿಜವಾದ ನಾಗರಿಕತೆಯ ತಿರುಳೇನು? ನೆಪೋಲಿಯನ್ ಎಂತಹ ನಾಗರಿಕನಾಗಿದ್ದ? ರಾಜಧುರೀಣನಾಗಿದ್ದ? ವಾಶಿಂಗ್‌ಟನ್‌ನ ಆದರ್ಶ ಉದಾಹರಣೆಯೆಲ್ಲಿ? ಭಂಗಿಯ ಕೆಲಸ ಮಾಡಿದ ಮಹಾತ್ಮರೆಲ್ಲಿ?... ಇಂದು ನನಗೆ ಜೋಳದ ಚೀಲವನ್ನು ಒಯ್ಯಲು ಸಂಕೋಚವೇಕೆ?" ಹೀಗೆ ವಿನೋದದಿಂದ ಹೇಳುವ ಮಾತಿನಲ್ಲಿ ಸತ್ಯವಿದೆ. ಎನ್ಕೆಯವರ ಮಾತುಮಾತಿನಲ್ಲಿ ಸಹಜ ವಿನೋದ ಒಂದು ಕಡೆ, ವಿಚಾರ ಗಾಂಭೀರ್ಯವೊಂದು ಕಡೆ – ಎರಡೂ ಹಿತಮಿತವಾಗಿ ಹರಿದಿವೆ.

'ಎರಡಾಣೆಯ ಫಜೀತಿ'ಯನ್ನೂ ಹರಟೆಗಾರರ ಸ್ವಾನುಭವ ಕಥನವೆಂದೇ ಭಾವಿಸಬಹುದು. ನಿದ್ದೆ ಬರದ ಒಂದು ರಾತ್ರಿ ಅಗ್ಗದಲ್ಲಿ ಸಿನಿಮಾ ಮನರಂಜನೆಯನ್ನು ಪಡೆಯಲಪೇಕ್ಷಿಸಿ ಎರಡಾಣೆಯ ಬೆಂಚಿನಲ್ಲಿ ಕುಳಿತಾಗ ನಡೆದ ಮನಸ್ಸಿನ ದೊಂಬರಾಟ 'ಎರಡಾಣೆಯ ಫಜೀತಿ'ಯಲ್ಲಿ ಕಥಾತ್ಮಕವಾಗಿ ವರ್ಣಿತವಾಗಿದೆ. ಅಂತಸ್ತಿಗೂ ಆರ್ಥಿಕ ಮುಗ್ಗಟ್ಟಿಗೂ ನಡೆದ ಹೋರಾಟದಲ್ಲಿ ಹಣವೇ ಗೆದ್ದು ಎರಡಾಣೆಯ ಸೀಟಿನಲ್ಲಿ ಕುಳಿತದ್ದೂ ಆಯಿತು. ಅಲ್ಲಿ ಮತ್ತೆ ಆರಂಭವಾಯ್ತು ಅಂತಸ್ತಿನ ಹೊಯ್ದಾಟ! ಒಮ್ಮೆ ತತ್ವಜ್ಞಾನಿಯಾಗಿ, ಒಮ್ಮೆ ಸಮಾಜ ವಿಜ್ಞಾನಿಯಾಗಿ, ಒಮ್ಮೆ ಆರ್ಥಿಕ ಶಾಸ್ತ್ರಜ್ಞನಾಗಿ ತನ್ನ ನಿಲುವನ್ನು ಮತ್ತೆ ಮತ್ತೆ ಸಮರ್ಥಿಸಿಕೊಂಡರೂ ಪ್ರಯೋಜನವಾಗಲಿಲ್ಲ. ಎರಡಾಣೆ ಸೀಟಿನಿಂದ ಎದ್ದು ನಾಲ್ಕಾಣೆ Exitದಿಂದಾದರೂ ಹೊರಹೋಗಿ ಥಕ್ಕಯರಾದ ಅಂತಸ್ತಿಗೆ ಸಮಾಧಾನಿಸಲು ಪ್ರಯತ್ನಿಸಿದರೆ ಆ ಮಬ್ಬುಗತ್ತಲಿನಲ್ಲೂ ಮಿತ್ರರು ಗುರುತಿಸಬೇಕೇ? ಒಟ್ಟಿನಲ್ಲಿ, ಸೂಲಿನ ತೆರೆಯ ಮೇಲಿನ ಚಿತ್ರಪಟ ಹೇಗಿತ್ತೋ ಏನೋ. ಲೇಖಕರ ಮನದ ತೆರೆಯ ಮೇಲೆ ನಡೆದ ಚಿತ್ರಪಟವಂತೂ ಬಹು ರಮ್ಯವಾಗಿದೆ.

ಇನ್ನು 'ವರ್ಷಾಕಾಲ' ಮಳೆಗಾಲದ ವೈಭವವನ್ನೂ ಸೊಬಗನ್ನೂ ವರ್ಣಿಸುತ್ತದೆ. ಮಳೆಗಾಲದ ಮತ್ತೊಂದು ವರ್ಣನೆ 'ಶ್ರಾವಣದ ಕೋಳಿ' ಶ್ರಾವಣದ ಹಸಿರು, ಮಳೆಯ ವೈಭವ, ಆಗಸದ ಸೌಂದರ್ಯ ಕವಿಗಳಿಗೆ ಕಾವ್ಯಸ್ಫೂರ್ತಿಯನ್ನಿತ್ತಿದೆ. ಆದರೆ ಅವರಿಂದ ನುಣುಚಿಕೊಂಡ ಅಥವಾ ಉಪೇಕ್ಷೆಗೆ ಗುರಿಯಾದ 'ಶ್ರಾವಣದ ಕೋಳಿ' ಹರಟೆಗಾರರ ಗಮನ ಸೆಳೆದು ಹರಟೆಗೆ ವಸ್ತುವನ್ನೊದಗಿಸುತ್ತದೆ. 'ಕೋಳಿರಾಜನ ಅಧಿಕಾರ ಮುದ್ರೆ' ಹೊತ್ತಿರುವ ಬಟ್ಟೆಗಳು ಸೋರುವ ಮನೆಗಳು, ರಾಡಿ ರಜ್ಜು ಹಿಡಿದ ಕಾಯಿಪಲ್ಲೆಗಳು ಎಲ್ಲ ಕಡೆಯೂ ಕೋಳಿಯ ಸಾಮ್ರಾಜ್ಯವೇ! ಜಿಟಿ ಜಿಟಿ ಮಳೆಯಲ್ಲಿ ಕೊಚ್ಚಿಕೊಂಡು ಎದ್ದು ಗದ್ದುಗೆ ಏರಿದ ಕೋಳಿರಾಜನ ಅಧಿಕಾರದ ವೈಭವಪೂರಿತ ವರ್ಣನೆ ಕಣ್ಣಿಗೆ ಕಟ್ಟುವಂತಿದೆ.

ಲೇಖಕರ ಪ್ರವಾಸದ ಅನುಭವಗಳನ್ನು ಕುರಿತ ಕೆಲವು ಹರಟೆಗಳಿವೆ. 'ಮೊಗಲಾಯಿಯಿಂದ ಮುಂಬಯಿವರೆಗೆ' ಹರಟೆಗಾರರು ಪ್ರವಾಸಕಾಲದಲ್ಲಿ ಕಂಡ ವೈವಿಧ್ಯಮಯ ಜಗತ್ತಿನ ವರ್ಣನೆಯಾದರೆ 'ಸ್ವರ್ಗಲೋಕದಲ್ಲಿ ಸ್ವೇಚ್ಛಾ ಪ್ರವಾಸ' ಅವರ ಕಲ್ಪನಾಸಾಮರ್ಥ್ಯಕ್ಕೆ ಕನ್ನಡಿ ಹಿಡಿಯುತ್ತದೆ. 'ಜೋಗ ದರ್ಶನ' ಮಾಡಹೊರಟವರು ದಾರಿಯುದ್ದಕ್ಕೂ ಹಸಿವಿನ ಬೃಹತ್ ದರ್ಶನ ಮಾಡಿಸುತ್ತಾರೆ. 'ನಾನು ಫಿರ್ತಿಯಮೇಲಿದ್ದಾಗ' ಇದೂ ಪ್ರವಾಸ ಸಮಯದಲ್ಲಿನ ಅನುಭವವೇ ವರ್ಣಿತವಾಗಿದೆ. ಹಗುರ ಪ್ರವಾಸ, ಪುಸ್ತಕ ಒಯ್ಯುವುದು, ಗಾಡಿಯಲ್ಲಿ ಕುಳಿತು ಬರೆಯುವ,ಉಪನ್ಯಾಸದ ವಿಷಯ ಸಿದ್ಧತೆಯ ಹವ್ಯಾಸ, ಥರ್ಡಕ್ಲಾಸ ಬೋಗಿಯ ಪ್ರಯಾಣದಲ್ಲಿನ ಕಹಿ ಸಿಹಿ ಅನುಭವಗಳು ಎಲ್ಲವೂ ಹಂತಹಂತವಾಗಿ ನಿರೂಪಿತವಾಗಿವೆ. ಈ ಎಲ್ಲ ಬರೆಹಗಳಲ್ಲೂ ಲೇಖಕರ ಸ್ವಂತ ಅನುಭವ ಮಿಂಚಿನಂತೆ ಹರಿದಾಡಿವೆ. ಲಲಿತವಾದ ಶೈಲಿ ಸುಲಭವಾಗಿ ಓದಿಸಿಕೊಂಡು ಹೋಗುತ್ತದೆ.

ಬೇರೆಯವರೊಂದಿಗೆ ಸೇರಿ ಬರೆದ 'ತ್ರಿಶೂಲಿಗಳು' ಸಂಕಲನದಲ್ಲಿ ಎನ್ಕೆಯವರ 'ಎದೆಶೂಲಿ'ಯ ಪರಿಣಾಮವಾಗಿ ಆರು ಹರಟೆಗಳು ಮೈದಾಳಿವೆ. ಈಗಾಗಲೇ 'ಮೀಸೆಯ ಕಂಸ' 'ಶ್ರಾವಣದ ಕೋಳಿ' ಮತ್ತು 'ನಾನು ಫಿರ್ತಿಯ ಮೇಲಿದ್ದಾಗ' ಬರೆಹಗಳನ್ನು ಪ್ರಸ್ತಾಪಿಸಲಾಗಿದೆ. 'ಮೋಡಕಾ ಬಾಜಾರ' ಮೇಲಿನ ಮೂರು ಸಂಕಲನಗಳಲ್ಲಿಯೂ ಸೇರ್ಪಡೆಯಾಗಿರುವುದರಿಂದ ಅದನ್ನು ಮುಂದೆ ವಿವೇಚಿಸಲಾಗಿದೆ. ಇನ್ನುಳಿದವು 'ಮುದ್ರಾದೇವತೆ' ಮತ್ತು 'ಸೋಮಾರಿಯ ಪಾಡು'. 'ಮುದ್ರಾದೇವತೆ' ಅಚ್ಚಿನ ದೋಷಗಳನ್ನು ಕುರಿತದ್ದು. ಮುದ್ರಾರಾಕ್ಷಸನ ಹಾವಳಿಯಿಂದ ವಿಪರ್ಯಾಸಗೊಂಡ ಶಬ್ದಗಳು ಉಳಿದವರಿಗೆ ತಲೆನೋವಿನ ಸಂಗತಿಯಾದರೆ ಹರಟೆಗಾರರಿಗೆ ಅಚ್ಚುಮೆಚ್ಚಿನ ದೋಷಗಳಾಗುತ್ತವೆ. ಆ ದೋಷಗಳು ಒಂದು ದೊಡ್ಡ ಅಭ್ಯಾಸದ ವಿಷಯವಾಗುತ್ತದೆ. ಮೂಲ ಲೇಖನದಲ್ಲೇ ಲೇಖನ ದೋಷಗಳಾಗಿದ್ದರೆ ಲೇಖಕನ ಮನೋವ್ಯಾಪಾರವನ್ನೂ, ಮುದ್ರಣದಲ್ಲಿ ದೋಷಗಳಾಗಿದ್ದರೆ

ಕಂಪ್ರೋಜಿಟರನ ಬುದ್ಧಿವ್ಯಾಪಾರವನ್ನೂ ವ್ಯಕ್ತಪಡಿಸುತ್ತವೆ. ಅದರ ಜೊತೆಗೆ ಸಂಶೋಧಕರ ವಿಚಾರಕ್ಕೆ ಅನ್ನ ಕೊಡುತ್ತವೆ. ಆದ್ದರಿಂದಲೇ ಅವರ ದೃಷ್ಟಿಯಲ್ಲಿ "ಮುದ್ರಾರಾಕ್ಷಸನು ನಿಜವಾಗಿಯೂ ಪ್ರಚ್ಛನ್ನ ಕಲ್ಯಾಣಕಾರಿಯಾದ ಮುದ್ರಾ ದೇವತೆ''ಯಾಗುತ್ತದೆ. ಈ ಹೇಳಿಕೆಯಲ್ಲಿಯೇ ಎರಡು ಮುದ್ರಣ ದೋಷಗಳು ಸೇರಿರುವುದು ಹರಟೆಗಾರರ ಮಾತನ್ನು ಸಮರ್ಥಿಸುತ್ತದೆ. ಇನ್ನು 'ಸೋಮಾರಿಯ ಪಾಡು' ನಿರುದ್ಯೋಗಿಗಳ ನಾಡಿನಲ್ಲಿ ಸೋಮಾರಿತನವನ್ನು ಪ್ರೋತ್ಸಾಹಿಸುವ ಹರ ಟೆಯ ಹಾಡು. 'ಕಾಯಕ'ವಿಲ್ಲದೆ ಕೈಲಾಸವನ್ನನುಭವಿಸಬೇಕೆನ್ನುವ ಕನ್ನಡಿಗರ ಆಲಸ್ಯ ಮನೋಭಾವವನ್ನು ಕುರಿತು ಅಣಕವಾಡಿದ್ದಾರೆ.

'ಮೋಡಕಾ ಬಾಜಾರ' ಎನ್ಕೆಯವರ ಉತ್ತಮ ಹರಟೆಗಳ ಸಂಕಲನ. ಶೀರ್ಷಿಕೆಯ ಹೆಸರಿನದೇ ಲಘುಪ್ರಬಂಧ ಅವರ ಮೂರೂ ಸಂಕಲನಗಳಲ್ಲಿ ಸೇರಿದೆ. ಅಲ್ಲದೆ 'ಮುಂಗಾಲ್ ಪುಟಿಗೆ'ಯ ಎಂಟು ಹರಟೆಗಳು ಇಲ್ಲಿ ದ್ವಿತೀಯ ಮುದ್ರಣ ವನ್ನು ಕಂಡಿವೆ.

'ಮೋಡಕಾ ಬಾಜಾರ' ಸೆಕೆಂಡ್‌ಹ್ಯಾಂಡ್ ವಸ್ತುಗಳ 'ಮಾಯಾ ಬಜಾರ್'. ಅದರಲ್ಲೂ ಮೂಲ ಯಜಮಾನನ ಆದರ ಕಳೆದುಕೊಂಡೋ, ಕಣ್ಣು ತಪ್ಪಿಸಿಯೋ ಬಂದು ಬೀಳುವ ಪುಸ್ತಕಗಳದೇ ಒಂದು ವೈಶಿಷ್ಟ್ಯ. ಮೂಲ ಬೆಲೆಯನ್ನು ಕೊಟ್ಟು ಹೊಸ ಪುಸ್ತಕಗಳನ್ನು ಕೊಳ್ಳಲಾಗದ ಸಾಹಿತ್ಯ ಭಕ್ತರಿಗೆ ಮೋಡಕಾ ಬಾಜಾರಿನ ಈ ಅನಾಥಾಶ್ರಮ ಒಂದು ವರದಾನವಿದ್ದಂತೆ, ಇನ್ನು ಈ ಸಾಹಿತ್ಯದ ತಿಪ್ಪೆಯಲ್ಲಿ ಶೋಧಿಸಿದರೆ ಸಿಕ್ಕುವ ಅಮೂಲ್ಯ ಕೃತಿರತ್ನಗಳಿಗೆ ಯಾರಿಂದ ಬೆಲೆ ಕಟ್ಟಲು ಸಾಧ್ಯ? ಆದರೆ ಅನಾಥಾಶ್ರಮದಲ್ಲಿ ಒಮ್ಮೊಮ್ಮೆ ಹೆಣ್ಮಣಿಗಳೂ 'ಬೀದಿಯ ನಾರಿ'ಯರಾಗುವ ಹಾಗೆ ಮೋಡಕಾ ಬಾಜಾರಿನಲ್ಲಿ ಈ ಕೃತಿ ರತ್ನಗಳೂ ಕಸವಾಗುತ್ತವೆ. ಕಿಟೆಲ್ ಶಬ್ದಕೋಶದಿಂದ ಹಿಡಿದು ಲಕ್ಷ್ಮೀಶ, ಶೆಕ್ಸ್‌ಪಿಯರ್, ಮಿಲ್ಟನ್ ಮೊದಲಾದವ ರಿಂದ ರಚಿತವಾದ ಮಹತ್ವದ ಕೃತಿಗಳೂ ಇಲ್ಲಿ ಬೆಲೆ ಕಳೆದುಕೊಳ್ಳುವ ಪ್ರಸಂಗ ಕನ್ನಡಿಗರ ವಾಚನಾಭಿರುಚಿಯ ಮಟ್ಟವನ್ನು ಎತ್ತಿ ತೋರುತ್ತದೆ.

ಕೊನೆಯಲ್ಲಿ ಪ್ರಬಂಧಕಾರರು ಕಸದಲ್ಲಿ ರಸವನ್ನು ತುಂಬುವ ಜಪಾನೀ ಯಾತ್ರಿಕರ ಕೌಶಲ್ಯವನ್ನು ಸ್ಮರಿಸುವ ಮೂಲಕ, ರಸವನ್ನು ಕಸವಾಗಿಸುವ ನಮ್ಮ ಪ್ರವೃತ್ತಿಯನ್ನು ನವಿರಾಗಿ ವಿಡಂಬಿಸುವರು.

ನಮ್ಮ ಇಂದಿನ ಬದುಕಿನಲ್ಲಿ ಹರಡಿಕೊಂಡಿರುವ ವಿವಿಧ ಸಮಸ್ಯೆಗಳನ್ನು ಎನ್ಕೆ ಯವರು ತಮ್ಮ ಹರಟೆಗಳ ಮೂಲಕ ಕೆಲವೊಮ್ಮೆ ವಿಶ್ಲೇಷಿಸುವುದೂ ಉಂಟು. ಹಿಂದೆ ಮೌಲ್ಯಭರಿತವಾಗಿದ್ದ ಹಲವಾರು ನಂಬಿಕೆಗಳು, ವಿಚಾರಗಳು ಮತ್ತು

ಪದ್ಧತಿಗಳು ಇಂದು ಮುಖ್ಯವಾಗಿ ಆರ್ಥಿಕ ಮುಗ್ಗಟ್ಟಿನಿಂದಾಗಿ ಅರ್ಥ ಕಳೆದು ಕೊಳ್ಳುತ್ತಿವೆ, ಸಂಸ್ಕೃತಿಗೆ ಧಕ್ಕೆ ತರುತ್ತಿವೆ. 'ಅತಿಥಿ ದೇವೋಭವ' ಇದಕ್ಕೆ ಉತ್ತಮ ನಿದರ್ಶನ.

ಮಧ್ಯಮ ವರ್ಗದ ಚಿಕ್ಕ ಮನೆಯ ಅನಾನುಕೂಲದ ಸಮಸ್ಯೆಯಿಂದಾಗಿ ಬರುವ ಅತಿಥಿಗಳನ್ನು ಬಾರದಂತೆ ತಡೆಯಬೇಕಾಯಿತು. ಆ ಸಂದರ್ಭದಲ್ಲಿ 'ಅತಿಥಿ ದೇವೋಭವ' ಸೂಕ್ತಿಯನ್ನು 'ಅತಿಥಿದೇವಃ' ಎಂದು ಅನಿವಾರ್ಯವಾಗಿ ಬದಲಾಯಿಸಬೇಕಾಗಿ ಬಂದ ಪ್ರಸಂಗವನ್ನು ಕುರಿತು ಹೇಳುತ್ತ ಅವರ ಮನಸ್ಸು ಆ ಸೂಕ್ತಿಯ ಮಂಥನವನ್ನು ನಡೆಸಿದೆ.

ಅತಿಥಿಗಳನ್ನು ಡಂಗುರ ಹೊಡೆಯಿಸಿ ಕರೆಸುವ ಕಾಲವೊಂದಿತ್ತು. ಆದರೆ ಇಂದು! "ಮನೆಯಲ್ಲಿ ರೇಶನ್ ಅಕ್ಕಿ ತೀರಿಹೋಗಿ ದೂರ್ವಾಸರು ಆಗಮಿಸಿದಾಗ ಯಾವ ಅಕ್ಷಯ ಪಾತ್ರೆ ಏನು ಮಾಡೀತು?" ಅಲ್ಲದೆ ಮಧ್ಯಮ ವರ್ಗದ ಚಿಕ್ಕ ಮನೆಯ ಇಕ್ಕಟ್ಟಿನ ಸಮಸ್ಯೆಯಲ್ಲಿ ಅತಿಥಿಗಳನ್ನು ಆದರಿಸುವುದಾದರೂ ಹೇಗೆ? ಇನ್ನು ಮನೆಗೆ ಬರುವ ಅತಿಥಿಗಳ ದುಶ್ಚಟಗಳು ಹಲವಾರು ಸಮಸ್ಯೆಗಳ ಸೃಷ್ಟಿಗೆ ಕಾರಣವಾಗುತ್ತವೆ. ಆದ್ದರಿಂದ ಇಂದಿನ ವ್ಯಾವಹಾರಿಕ ಪ್ರಪಂಚದಲ್ಲಿ ಅತಿಥಿಗಳಿಗೆ ದೇವಪೂಜೆ ಸಲ್ಲಬೇಕಾದರೆ ಅತಿಥಿಗಳು 'ಗಿವ್ ಅಂಡ್ ಟೇಕ್' ತತ್ವವನ್ನು ಅನುಸರಿಸಬೇಕು ಎಂಬ ಅಭಿಪ್ರಾಯ ವಿನೋದದೊಂದಿಗೆ ವಿಚಾರವನ್ನೂ ಕೆದಕಿದೆ.

ಇಷ್ಟಾದರೂ ಲೇಖಕರು 'ಅತಿಥಿ' ಶಬ್ದದ ಹಿಂದಿರುವ ತಾತ್ವಿಕ ಬೆಲೆ ಮೌಲ್ಯಗಳನ್ನು ಅಲ್ಲಗಳೆದಿಲ್ಲ. "ದೇವರ ಸೃಷ್ಟಿಯಲ್ಲಿ ಬಂದು ಹೋಗುವ ಎಲ್ಲರೂ ಒಬ್ಬೊಬ್ಬ ಅತಿಥಿಗಳು. ಹೋದಲ್ಲೆಲ್ಲಾ ಆತಿಥ್ಯ ನೀಡುವವರು ಬಂಧುಗಳಾಗಿ ಬಿಡುತ್ತಾರೆ ಆತನಿಗೆ. ಆದರೆ ಅತಿಥಿ ಮಾತ್ರ ಅತಿಥಿಯೇ. ಅನಾಸಕ್ತ ಅತಿಥಿ ಆತ. ನಮ್ಮ ಮನೆಗಳಲ್ಲಿಯೂ ನಾವು ಒಬ್ಬ ಅತಿಥಿಯಾಗಿಯೇ ಇರಬೇಕು. ಪ್ರತಿಫಲಾಪೇಕ್ಷೆ ಇಲ್ಲದೆ ಆತಿಥ್ಯ ನಡೆಯಬೇಕು. ಆಸಕ್ತಿಯಿಲ್ಲದೆ ಅತಿಥಿಯಾಗಿ ಉಳಿಯಬೇಕು. ಇದು ನಿಜವಾದ 'ಅತಿಥಿದೇವೋಭವ' ಎಂಬ ಮಾತಿನ ಮೌಲ್ಯ."

'ಆ ಧರ್ಮಶಾಲೆ' ಲೇಖಕರೇ ಮುನ್ನುಡಿಯಲ್ಲಿ ಹೇಳುವಂತೆ, ಧಾರವಾಡದ ಸ್ಟೇಶನ್ ರೋಡಿನಲ್ಲಿ ಒಂದಾನೊಂದು ಕಾಲಕ್ಕಿದ್ದ ಒಂದು ಧರ್ಮಶಾಲೆಯ ಚಿತ್ರಣ. ಒಂದು ಕಾಲದಲ್ಲಿ ಧರ್ಮಶಾಲೆಯಾಗಿದ್ದು ಇಂದು ಭಿಕ್ಷುಕರ, ಅಲೆಮಾರಿಗಳ ತಾಣವಾಗಿರುವ ಆ ಧರ್ಮಶಾಲೆ ಹರಟೆಗಾರರ ವಿಮರ್ಶೆಗೆ ಸಾಮಗ್ರಿ ಒದಗಿಸುತ್ತದೆ. ಇನ್ ಕಮ್ ಟ್ಯಾಕ್ಸ್ ಆಫೀಸರರ ಕಣ್ಣಿಗೆ ಬೀಳದೆ ಕೇವಲ ಭಿಕ್ಷೆಯ ಗಳಿಕೆಯಿಂದಲೇ

ಖಜಾಂಚಿ ಚಕ್ರವರ್ತಿಗಳಾದ ಭಿಕ್ಷುಕರ ಅರಮನೆ ಅದು, ಜೊತೆಗೆ ಆಗಾಗ್ಗೆ ವಲಸೆ ಬಂದು ವ್ಯಾಪಾರದ ನೆವದಲ್ಲಿ ಗಿರಾಕಿಗಳ 'ಕಿಸೆಗೆ ಕತ್ತರಿ, ಹೃದಯಕ್ಕೆ ಚೂರಿ' ಹಾಕುವ ಇರಾನೀ ತುಂಬುಜವ್ವನದ ತರುಣಿಯರ, ಮತ್ತವರ ಗುಂಪಿನ 'ಫ್ರೀ ಲಾಜಿಂಗ್, ಫ್ರೀ ಬೋರ್ಡಿಂಗ್' "ಊರೆಲ್ಲಿಯೋ, ತಾವು ಎತ್ತೋ ? ಎಲ್ಲಿ ಕಾಲು ಚಾಚಲಿಕ್ಕೆ ಧರ್ಮಶಾಲೆ ಸಿಕ್ಕಿತೋ ಅಲ್ಲಿಯೇ ತಮ್ಮ ನೆರಳು ಮಾಡಿಕೊಂಡು ಜೀವನವನ್ನೇ ಒಂದು ಸರಸ ಕಾವ್ಯವಾಗಿ ಮಾಡಿಕೊಳ್ಳುವ ಇವರ ರಸಿಕತೆಗೆ" ಹರಟೆಗಾರರ ರಸಿಕ ಮನಸ್ಸು ತಲೆದೂಗುತ್ತದೆ. ಅವರ ಚೇತನವೂ "ಈ ಧರ್ಮಾರ್ಥಿ ಯಾತ್ರಿಕರಂತೆ ಕಂಡ ನೆಲದಲ್ಲಿ ಮೂರು ನಿಮಿಷ ತಂಗಿ ಮತ್ತೆ ಹೊಸ ಜಲ ಹೊಸ ನೆಲ ಹೊಸ ಜನ ಎಂದು ಜಗತ್ತನ್ನೇ ಸುತ್ತಾಡುವ ಮುಸಾಫಿರಿಯಾಗಬೇಕೆಂದು" ಹಾರೈಸುತ್ತದೆ.

'ಮನವೆಂಬ ಮರ್ಕಟ' ಮಾನವನ ಮಂಗಮನಸ್ಸಿನ ತುಮುಲಗಳನ್ನು ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಪರಿಶೀಲಿಸುವ ಒಂದು ಪ್ರಯತ್ನ. ಮಂಗನಿಂದ ವಿಕಾಸಗೊಂಡ ಮಾನವ ನಾಗರಿಕ ಸಮಾಜದಲ್ಲಿ ಸಭ್ಯತೆಯ ಪರಮಾವಧಿಗೇರಿದ್ದರೂ ಅವನ ಮನಸ್ಸು ಮಾತ್ರ 'ಮಂಗಮಟ್ಟ'ದಲ್ಲಿಯೇ ಇದೆ ಎಂಬುದನ್ನು ಗ್ರಹಿಸಿ, ಅದನ್ನು ಸರಸವಾಗಿ ಬಣ್ಣಿಸುತ್ತಲೇ ಮನಸ್ಸನ್ನು ಪ್ರತಿಬಂಧಿಸುವ ಬಗೆಯನ್ನೂ ಕುರಿತು ವಿವೇಚಿಸುವರು. "ಬಾಹ್ಯದಲ್ಲಿ ಮಂಗನು ಮನುಷ್ಯನಾದರೂ ಅಂತರ್ಯ ದಲ್ಲಿ ಮಾತ್ರ ಮನುಷ್ಯನಿನ್ನೂ ಮಂಗನ ಅವಸ್ಥೆಯಲ್ಲೇ ಉಳಿದಿದ್ದಾನೆ. ನಮ್ಮ ಸಾವಿರಾರು ವರುಷಗಳ ಸಂಸ್ಕೃತಿ ನಾಗರಿಕತೆಗಳು ಬಾಹ್ಯವನ್ನು ಬದಲಿಸಿರಬಹುದಲ್ಲದೆ ಅಂತರ್ಯವನ್ನಲ್ಲ." ಪ್ರತಿಯೊಬ್ಬ ಮಾನವನ ಮನಸ್ಸೂ ಒಂದೊಂದು ಕ್ಷೋಭಿತ ಮಹಾಸಾಗರವಿದ್ದಂತೆ. ಲೈಂಗಿಕ ವಿಕಾರಗಳ ಆಗರವಾದ ಅದು ದ್ವೇಷಾಸೂಯೆಗಳ ಕುರುಕ್ಷೇತ್ರ. ಸಾರ್ವಜನಿಕ ಸಂಪರ್ಕ ದೃಷ್ಟಿಯಿಂದ ಸಭ್ಯತೆಯ ಮುಖವಾಡ ಹಾಕಿ ಅವುಗಳನ್ನು ಹತ್ತಿಕ್ಕಿದರೂ ಮನದ ಆಳದಲ್ಲಿ ಎಲ್ಲೋ ಒಂದು ಕಡೆ ಅನಾಗರಿಕ ಪ್ರಕೃತಿ ತನ್ನ ಆಟ ನಡೆಸಿಯೆ ಇರುತ್ತದೆ ಎಂಬುದನ್ನು ಹಲವಾರು ದೃಷ್ಟಾಂತಗಳ ಮೂಲಕ ವಿಶ್ಲೇಷಿಸುತ್ತಾರೆ.

'ಹಾಗಾದರೆ ? ಈ ಮನದ ಮರ್ಕಟನನ್ನು ಪ್ರತಿಬಂಧಿಸಲು ಸಾಧ್ಯವಿಲ್ಲವೇ?' ಸಾಧ್ಯವಿದೆ. ಅಭ್ಯಾಸಬಲದಿಂದ ಏನನ್ನು ಬೇಕಾದರೂ ಸಾಧಿಸಬಹುದು. "ಮನಸ್ಸಿನ ಆಸುರೀ ಶಕ್ತಿಗಳನ್ನು ಹೊಡೆದೋಡಿಸಬೇಕಾದರೆ ಮನಸ್ಸನ್ನು ನಿಶ್ಚಲಗೊಳಿಸುವು ದೊಂದೇ ಅದಕ್ಕೆ ಸುಲಭೋಪಾಯ. ಮನಸ್ಸನ್ನು ಕ್ರಮೇಣ ಸ್ತಬ್ಧಗೊಳಿಸುತ್ತ ಒಳಗಿನ ಕಸವನ್ನೆಲ್ಲ ಗೂಡಿಸಿ ಚೆಲ್ಲುವದಕ್ಕೆ ಸಾಧ್ಯವಾಗುತ್ತದೆ. ಹೀಗೆ ಮನಸ್ಸು ತನ್ನ ಆಳದಿಂದ ನಿಸ್ತರಂಗಗೊಂಡಮೇಲೆ ಅಲ್ಲಿ ಹೊಸದೊಂದು ಪ್ರಜ್ಞೆ ಮೂಡುತ್ತದೆ. ಅದುವೆ

ದೈವೀ ಪ್ರತಿಮೆ. ಒಮ್ಮೆ ಮನಸ್ಸು ನಮ್ಮ ಹತೋಟಿಯಲ್ಲಿ ಬಂತೆಂದರೆ ಸಾಕು ಅದಕ್ಕೆ ನಾವು ದಾಸರಾಗದೆ ಅದು ನಮ್ಮ ದಾಸನಾಗುತ್ತದೆ. ನಿಜವಾದ ಸಭ್ಯತೆ, ನಾಗರಿಕತೆ ಇಲ್ಲಿಂದ ಉದಯವಾಗಬೇಕು. ಅದುವೆ. ನಿಜವಾದ ಸಂಸ್ಕೃತಿ." ಈ ಸಂಸ್ಕಾರ ಕಾರ್ಯ ಆಂತರಿಕವಾಗಿ ನಡೆದಂತೆ ಮನದ ಮರ್ಕಟತನವಳಿದು ಮಾನವತೆ ಬೆಳೆಯುತ್ತದೆ, ದೈವತ್ವದ ಪ್ರಜ್ಞೆ ಮೂಡುತ್ತದೆ. "ತಮಸೋಮಾ ಜ್ಯೋತಿರ್ಗಮಯ" ಎಂಬ ಪ್ರಾರ್ಥನೆಯಿಂದ ಮನಸ್ಸು ಉದಾತ್ತವಾಗುತ್ತದೆ. ಅದೇ ನಿಜವಾದ ಸಭ್ಯತೆಯ ಹಾಗೂ ಸಂಸ್ಕೃತಿಯ ಕುರುಹು.

ಬರೆಹ ಮೊದಲು ಸರಸವಾಗಿ ಆರಂಭವಾಗಿ ಕ್ರಮಕ್ರಮವಾಗಿ ವಿಮೋಚನಾಯುಕ್ತವಾಗಿ ಬೆಳೆದು ಕಡೆಗೆ ಗಂಭೀರವಾದ ಅರವಿಂದರ ದಾರ್ಶನಿಕ ವಿಚಾರದಲ್ಲಿ ಮುಕ್ತಾಯವಾಗುತ್ತದೆ. "ಆಚೆಗಿನ ಸ್ವರ್ಗ ದೊಡ್ಡದು, ಅದ್ಭುತವಾದದ್ದು. ಆದರೆ ನಿನ್ನೊಳಗಿನ ಸ್ವರ್ಗ ಅದಕ್ಕೂ ದೊಡ್ಡದು, ಅದಕ್ಕೂ ಅದ್ಭುತವಾದದ್ದು. ನಮ್ಮ ಮನಸ್ಸು ನಮ್ಮೊಳಗಿನ ಸ್ವರ್ಗವನ್ನು ತೆರೆಯಬೇಕು, ನರಕವನ್ನಲ್ಲ" ಎಂಬ ಮಾತು ಓದುಗರ ಅಂತರಂಗದ ಕಣ್ಣನ್ನು ತೆರೆಸುತ್ತವೆ. ಈ ಬರೆಹ ಎಲ್ಲ ವಿಧಗಳಿಂದಲೂ ಹರಟೆಯ ಸ್ಥಾನದಿಂದ ಮೇಲೇರಿ ವಿಚಾರಾತ್ಮಕ ಪ್ರಬಂಧದ ಸಾಲಿಗೆ ಸೇರುತ್ತದೆ. ಲೇಖಕರು ಒಮ್ಮೆ ಸಮಾಜವಿಜ್ಞಾನಿಯಾಗಿ, ಇನ್ನೊಮ್ಮೆ ಆಧ್ಯಾತ್ಮಿಯಾಗಿ, ಮತ್ತೊಮ್ಮೆ ಮನೋವಿಜ್ಞಾನಿಯಾಗಿ, ಮಗದೊಮ್ಮೆ ದಾರ್ಶನಿಕನಾಗಿ ಎಲ್ಲಾ ಕೋನಗಳಿಂದಲೂ ವಿಷಯವನ್ನು ಅವಲೋಕಿಸಿದ್ದಾರೆ. 'ಲಘು ವಿವೇಚನೆ' ಎಂದಿದ್ದರೂ ಲೇಖಕರು ಹರಟೆಯ ಮೂಲಕವೇ ಯಾವುದೇ ವಿಷಯದಒಳಹೊಕ್ಕು ಆಳವಾಗಿಯೂ ವಿಚಾರಮಾಡಬಲ್ಲರು ಎಂಬುದಕ್ಕೆ ಈ ಪ್ರಬಂಧ ಅತ್ಯುತ್ತಮ ನಿದರ್ಶನ.

ವೈಜ್ಞಾನಿಕ ವಿಕ್ರಮಗಳು ಹರಟೆಯಲ್ಲಿ ಇಂದಿನ ವೈಜ್ಞಾನಿಕ ಯುಗದಲ್ಲಿನ ವಿಜ್ಞಾನದ ಪ್ರಗತಿಗಳನ್ನು ಅವಲೋಕಿಸುವ ಮೂಲಕ ಲೇಖಕರ ಕಲ್ಪನಾ ಲಹರಿ ಹರಿದಿದೆ. ವಿಜ್ಞಾನಿಗಳ ಮುಂದಿನ ವೈಜ್ಞಾನಿಕ ಸಿದ್ಧಿಗಳನ್ನು ಬಲ್ಲವರಾರು? "ಬಹುಶಃ ವಿಜ್ಞಾನಿ ಇನ್ನು ಕೆಲವೇ ದಿನಗಳಲ್ಲಿ ಪ್ರಕೃತಿಯ ರಹಸ್ಯಗಳನ್ನು ಒಂದೂ ಬಿಡದಂತೆ ಬಯಲಿಗೆಳೆದು ಎಲ್ಲಿಯೋ ಅಡಗಿ ಕುಳಿತಿದ್ದ ಆಲ್‌ಮೈಟಿ ದೇವರನ್ನು ಬಹಿರಂಗಕ್ಕೆಳೆದು ಬಿಡಬಹುದು." ಈಗ ಮನುಷ್ಯನ ಕೈಗೆ ಸಿಗದೆ ಓಡೋಡಿ ಹೋಗುತ್ತಿರುವ ಆ ಪರಮಾತ್ಮ ಮುಂದೆ ಒಂದಲ್ಲ ಒಂದು ದಿನ ವಿಜ್ಞಾನಿಯ ಬುದ್ಧಿಶಕ್ತಿಯ ಮುಂದೆ 'ಹೆಳವನಂತೆ' ಬಿದ್ದುಕೊಳ್ಳಬಹುದು. ಬ್ರಹ್ಮ ಸೃಷ್ಟಿಯನ್ನು ಹಿಂದೆ ಹಾಕುವ ಪ್ಲಾಸ್ಟಿಕ್ ದೇಹಧಾರಿಗಳ ಹೊಸವಿಶ್ವಾಮಿತ್ರಲೋಕ ಸೃಷ್ಟಿಯಾಗಬಹುದು. ಆಗ ಬ್ರಹ್ಮ ತನ್ನ ಸೃಷ್ಟಿಗೆ ತಾನೇ ನಾಚಿ ವಿಜ್ಞಾನಿಯ ಬೆನ್ನುಕಟ್ಟಿ

ಜೀವನ ಎಲೆಕ್ಟ್ರಾನಿಕ್ ಆದಂ ಮತ್ತು ಈವ್‌ಗಳಿಗೆ ಆತ್ಮವನ್ನು ಜೋಡಿಸಿಕೊಡಬಹುದು. ಇಷ್ಟಾದಮೇಲೆ ಮನುಷ್ಯನ ಜಾತಕಗಳಲ್ಲಿ ಗ್ರಹಗಳದೇನು ಪಾರುಪತ್ಯ? 'ಚಂದ್ರನನ್ನು ಮುಟ್ಟಿದ ವಿಜ್ಞಾನಿ ಶನಿಯನ್ನು ಮುಟ್ಟಿ' ಅವರೆಲ್ಲರ ಜಾತಕಗಳನ್ನು ತಾನೇ ಬರೆಯಲಿಲ್ಲ. ವಿಜ್ಞಾನದ ಬಲದಿಂದ ನಾವಿಂದು "ರೋಗರುಜಿನಗಳನ್ನು ಗೆದ್ದು ದೀರ್ಘಾಯುಗಳಾಗಿದ್ದೇವೆ. ಜನನವನ್ನು ಹತೋಟಿಯಲ್ಲಿಟ್ಟುಕೊಂಡಿದ್ದೇವೆ. ಇನ್ನು ಉಳಿದುದು ಮರಣದ ಮೇಲಿನ ಗೆಲುವು ಒಂದೆ?" ಪ್ಲ್ಯಾಸ್ಟಿಕ್ ಹೃದಯ ಜೋಡಣೆಯ ಇಂದಿನ ಯುಗದಲ್ಲಿ ಅದೂ ದೂರದಲ್ಲಿಲ್ಲ. ಹಾಗಿರುವಾಗ ದೇವತೆಗಳಿಗೆ ಮಾತ್ರ ಮೀಸಲಾಗಿದ್ದ ಅಮರತ್ವ ಮನುಷ್ಯರಿಗೂ ಸಲ್ಲುವ ದಿನ ಬರುತ್ತದೆ. 'ಆಮೇಲೆ ಮನುಷ್ಯನಿಗೇ ಅಮರ (ಅಮರಾ ನಿರ್ಜರಾದೇವಾಃ ಇತ್ಯಮರಃ) ಅನ್ನಬೇಕಲ್ಲವೇನು?"

ಕೆಲವೊಮ್ಮೆ ಪ್ರಸಿದ್ಧ ಕವಿಗಳ ಕಾವ್ಯದ ನುಡಿಗಳೂ ಇವರ ಹರಟೆಗೆ ವಸ್ತುವಾಗುವುದುಂಟು. 'ಶೃಂಗಾರಮೆ ರಸಂ' ನೇಮಿಚಂದ್ರ ಕವಿಯ 'ಸ್ತ್ರೀರೂಪಮೆ ರೂಪಂ ಶೃಂಗಾರಮೆ ರಸಂ' ಉಕ್ತಿಯ ಸರಸ ವಿಶ್ಲೇಷಣೆಯಾದರೆ, 'ಸ್ಪರ್ಶೇಂದ್ರಿಯ ವಿಚಾರ' ಮೋಜಿನದಾಗಿದೆ. ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಹೊಲೆಯ ರಾಡುವ 'ಕೂಡಿರ್ದ ಪಂಚೇಂದ್ರಿಯಗಳೊಳು ನಾಲ್ಕಧಮ ಒಂದಧಿಕವೆ' ಎಂಬ ನುಡಿ ಹರಟೆಗಾರರ ಜಿಜ್ಞಾಸೆಗೆ ಗುರಿಯಾಗಿ ವಿನೋದಕ್ಕೆಡೆ ಕೊಟ್ಟಿದೆ. ಸಿಟಿಬಸ್ಸಿನ ನೂಕು-ನುಗ್ಗಲಿನಲ್ಲಿ ರಸಿಕ ತರುಣನೊಬ್ಬ ಸ್ಪರ್ಶೇಂದ್ರಿಯದ ಅವಾಂತರದಿಂದಾಗಿ ಕಪಾಳಮೋಕ್ಷ ಮಾಡಿಸಿಕೊಂಡ ಪ್ರಸಂಗ ಮರೆಯುವಂತಿಲ್ಲ.

ಅಲಂಕಾರ ಶಾಸ್ತ್ರದ ಪಾರಿಭಾಷಿಕ ಪದ 'ಕಾಂತಾಸಮ್ಮಿತಿ' ಕೂಡ ಹರಟೆಗಾರರ ಗಮನ ಸೆಳೆಯದೆ ಬಿಟ್ಟಿಲ್ಲ. ಕಾವ್ಯ-ಸಾಹಿತ್ಯಗಳಲ್ಲಿನ ರಸದ ಅನುಭವವನ್ನು ವಿಮರ್ಶಕರು 'ಕಾಂತಾಸಮ್ಮಿತಿ'ಗೆ ಹೋಲಿಸುವರು. ಲೇಖಕರ ವಕ್ರದೃಷ್ಟಿಗೆ ಸಿಲುಕಿನ ಈ ಶಬ್ದ ಸುಂದರ ಹರಟೆಯಾಗಿ ರೂಪ ತಾಳಿದೆ, ಸಂಸಾರ ಕ್ಷೇತ, ವ್ಯವಹಾರ ಪ್ರಪಂಚ, ರೋಗಿಗಳ ಜಗತ್ತು ಎಲ್ಲೆಡೆಯಲ್ಲೂ 'ಕಾಂತೆ'ಯರ ಮಾದಕ, ಮೋದಕ ಮಾಂತ್ರಿಕ ಶಕ್ತಿಯ ಪ್ರಭಾವವನ್ನು ಕುರಿತು ವಿನೋದವಾಗಿ ವಿಡಂಬಿಸುವರು. ಫರ್ಮುಗಳಲ್ಲಿನ ಮೋಹಕ ರಿಸೆಪ್ಸನಿಸ್ಟಗಳನ್ನು ವರ್ಣಿಸುತ್ತ "ಇಂದಿನ ವ್ಯಾಪಾರ ಜಗತ್ತಿನಲ್ಲಿ ಸರಕುಗಳಿಗೆ ಮೂಲ್ಯ ಬರಬೇಕಾದರೆ ಇಂತಹ ಮೋಹಕ ಮಾತನಾಟದ ಮಾರಾಟಗಾರರು ಬೇಕು" ಎನ್ನುವರು. ರಂಭೆ, ಊರ್ವಶಿ ಮತ್ತು ಮೇನಕೆಯರು ದೇವೇಂದ್ರನ ರಿಸೆಪ್ಸನಿಸ್ಟುಗಳಂತೆ ತನ್ನ ಪಟ್ಟ ಭದ್ರಮಾಡಿಕೊಳ್ಳುವುದಕ್ಕೆ ದೇವೇಂದ್ರ ಸುಕುಮಾರ ಶಸ್ತ್ರಗಳನ್ನು ಬಳಸುತ್ತಿದ್ದ ಎನ್ನುವುದು ವಿನೋದವಾಗಿದೆ. "ಇನ್ನಷ್ಟು ತಪಶ್ಚರ್ಯದಲ್ಲಿ ಮುಂದುವರಿದು

ಬಿಟ್ಟಿದ್ದರೆ ವಿಶ್ವಾಮಿತ್ರ ಏನಾಗುತ್ತಿದ್ದನೋ, ಏನು ಮಾಡುತ್ತಿದ್ದನೋ! ಆದರೇನು ಇಳಿದುಬಂದಳು ಮೇನಕೆ; ಆತ ಆದ ಮೇಕೆ". ಇಷ್ಟಲ್ಲದೆ ರೋಮನ್ ರಾಜ್ಯವನ್ನೇ ತೊಟ್ಟಿಲಾಡಿಸಿದ ಕ್ಲಿಯೋಪಾತ್ರಳ ಕಾಂತಾಸಮ್ಮಿತಿಯ ಪಾತ್ರವನ್ನು ನೆನೆಯುತ್ತ ಮಿತ್ರನ ಹೆಂಡತಿಯ ಚಂಡಿತನವನ್ನು ಹೀಗೆಳೆಯುವಲ್ಲಿ ನೀತಿಯ ಎಳೆಯೂ ಮಿಂಚದಿರದು.

'ಮುಂಗಾಲ್ ಪುಟಿಗೆಯ ಮುಂದಾಳುಗಳು' ಬರೆಹದಲ್ಲಿ ಕೀರ್ತಿ ಸಂಪನ್ನರಾಗ ಬೇಕೆನ್ನುವವರಿಗೆ ಕಿವಿಮಾತುಗಳನ್ನು ಸಾರಿದರೆ, 'ಹೌದಪ್ಪಗಳು ಅರ್ಥಾತ್ ಕವಲೆತ್ತುಗಳು' ಬರೆಹದಲ್ಲಿ ಮುಂದಾಳುಗಳಿಗೆ ಮಣಿಹಾಕುವ ವ್ಯಕ್ತಿಗಳ 'ಹೌದಪ್ಪತನ'ವನ್ನು ಕುರಿತು ಮಾರ್ಮಿಕವಾಗಿ ವಿಡಂಬಿಸುತ್ತಾರೆ. ಒಬ್ಬ ಕೀರ್ತಿಶಾಲಿಯ ಸುತ್ತ ಮುಖಸ್ತುತಿ ಮಾಡುವವರ ಗುಂಪೇ 'ಹೌದಪ್ಪಗಳು'. ಇವರನ್ನೇ 'ಕವಲೆತ್ತುಗಳು' ಎಂದೂ ಕರೆಯುವುದು. ಪ್ರಖ್ಯಾತ ಸಂಗೀತಗಾರರ ಸಭೆಯಲ್ಲಿ 'ವಾಹವಾ' ಎಂದು ತಲೆದೂಗುವುದು, ನಾಟಕದಲ್ಲಿ ಹೀರೋನ ಸುತ್ತಲೂ ಜಯಜಯಕಾರ ಹೇಳುತ್ತಾ ತಿರುಗುವುದು, ಆಫೀಸಿನಲ್ಲಿ ಮೇಲಧಿಕಾರಿಗಳನ್ನು ಸದಾ ಹೊಗಳುತ್ತಿರುವುದು- ಹೀಗೆ ಮುಖಸ್ತುತಿ ಮಾಡುವುದೊಂದೊಂದೇ ಉದ್ಯೋಗ ಅವರದು.

ಮುಂಗಾಲ್ ಪುಟಿಗೆಯ ಮಹತ್ವದಿಂದ ಮುಂದಾಳುಗಳಾದ ರಾಜಕಾರಣಿಗಳು, ಸಾಹಿತಿಗಳು ಮುಂತಾದವರು ಈ ಕವಲೆತ್ತುಗಳನ್ನು ಬಾಡಿಗೆ ಕೊಟ್ಟಾದರೂ ಸಾಕಿಕೊಂಡಿರಬೇಕು. "ಕವಲೆತ್ತುಗಳ ಮುಖಾಂತರ ಆಯಾ ವ್ಯಕ್ತಿಯ ಮಹತ್ವಕ್ಕೆ ಮೌಲ್ಯ ಬರದಿದ್ದರೂ ಮಹತ್ವ ಬರುತ್ತದೆ". ಇವರು ಇಂಗ್ಲಿಷಿನ 'ಸೈಕೊಫೇಂಟ್'ಗಳಿದ್ದಂತೆ. ಈ ಸೈಕೊಫೇಂಟ್‌ಗಳ ಹೊಗಳಿಕೆಯ 'ಪ್ರಭಾವಳಿ' ಯಿಂದ ನಾಯಕ 'ಮೂರ್ತಿ'ಯ ಹೊಳಪು ಹೆಚ್ಚುತ್ತದೆ.

ಹೀಗೆ ಸ್ವಂತ ವ್ಯಕ್ತಿತ್ವವನ್ನು ಪೂರ್ಣವಾಗಿ ನಾಯಕನಿಗೊಪ್ಪಿಸಿ ಅವನಾಡಿಸಿದಂತೆ ಗೋಣಾಡಿಸುವುದೇನೂ ಸಾಮಾನ್ಯ ಕೆಲಸವಲ್ಲ. ಹಾಗೆ "ಹೌದಪ್ಪಗಳೆನಿಸಿಕೊಳ್ಳುವುದಕ್ಕೂ ಅರ್ಹತೆ ಬೇಕು. ತಮ್ಮ ನಾಯಕನು ಯೋಗ್ಯನಹುದೊ ಅಲ್ಲವೊ ಎಂಬ ಗೋಜಿಗೆ ಹೋಗದೆ ಎಷ್ಟೊಂದು ತಾಳ್ಮೆಯಿಂದ, ಆತ ನುಡಿದುದಕ್ಕೆಲ್ಲ ಹಾಸಾಡ ಎನ್ನಬೇಕು!" ಸ್ವಂತ ಅಭಿಪ್ರಾಯವೇ ಇಲ್ಲದೆ ಸದಾ ಮತ್ತೊಬ್ಬರ ನೆರಳಿನಲ್ಲಿ ಬಾಳಬೇಕಾದ ಶ್ರೀಸಾಮಾನ್ಯ ಆ ಗುಣವನ್ನು ಹೊಂದದಿದ್ದರೆ ಹೇಗೆ? ಆದ್ದರಿಂದಲೇ 'ನಮ್ಮದು ಹೌದಪ್ಪಗಳ ನಾಡು' ಹೌದಪ್ಪಗಳ ವೈಶಿಷ್ಟ್ಯವೆಂದರೆ 'ಮಹಾಜನೊ ಏನ ಗತಃ ಸಪಂಥಾಃ' ಅನ್ನುವ ಹಾಗೆ ಒಬ್ಬರು ಕೈಯೆತ್ತಿದರೆ ಸಾಕು ಎಲ್ಲರೂ ಕೈಯೆತ್ತುವರು. ಹೀಗೆ ಎತ್ತುವ ಕೈ ನಾಯಕನಿಗಾಗಿ ತೋರುವ ಅಭಯಹಸ್ತ

ವಾದುದರಿಂದ ಅಂತಹವರನ್ನು ಹೇಡಿಗಳೆಂದು ಭಾವಿಸಬಾರದು. ಹಾಗೆ ಭಾವಿಸಿದರೆ ಅದು ದೊಡ್ಡ ತಪ್ಪಾದೀತು!

ಹರಟೆಗಾರರ ಈ ವಿಲಕ್ಷಣ ವಿಚಾರಧಾರೆ ನಿಮಗೆ ಅರ್ಥವಾಗಿರಲಿ ಬಿಡಲಿ "ಇಲ್ಲ ಎಂದು ತಲೆಯಲ್ಲಾಡಿಸಬೇಡಿ ಹೌದು ಎಂದು ತಲೆಹಾಕಿ ಕೈಯೆತ್ತಿರಿ ಹೌದಪ್ಪಗಳಿಗೆ ಜಯವಾಗಲಿ!" ಎಂದಾಗ ಅವರ ಮಾತಿನ ಚಮತ್ಕಾರಕ್ಕೆ ಮರುಳಾಗಿ, ಎಚ್ಚರತಪ್ಪಿ ಗೋಣು ಹಾಕಿದಿರೋ ಮುಗಿಯಿತು!

'ಸ್ಟೆಪ್ನೀ' ಮೋಟಾರು ವಾಹನದ ಎಕ್‌ಸ್ಟ್ರಾ ಚಕ್ರಕ್ಕೆ ಬಳಸುವ ಶಬ್ದ. ವಾಹನ ಪಂಕ್ಚರ್ ಆಗಿ ಕೆಟ್ಟು ನಿಂತಾಗ ಸ್ಟೆಪ್ನೀ ಚಕ್ರವನ್ನು ಬಳಸುವಂತೆ ಸಂಸಾರರಥ ಮುಗ್ಗಡಿಸಿದಾಗ ಗೃಹಸ್ಥನಿಗೆ ಕಾಯಿದೆ ಪ್ರಕಾರ ಒಬ್ಬಳು 'ಸ್ಟೆಪ್ನೀ ಪತ್ನಿ' ಇದ್ದರೆ ಒಳ್ಳೆಯದಂತೆ. ಅವರ ಕುಚೋದ್ಯದ ವಿಚಾರಲಹರಿಯನ್ನು ಕೇಳಿ: ಪತ್ನಿಯಾದವಳು ... "ಟೈಪಿಸ್ಟ್ ಕೆಲಸವನ್ನು ಮಾಡಿ ಮನೆಯ ಗಂಡನನ್ನೂ, ತನ್ನ ಆಫೀಸಿನ ಬಾಸ್‌ನನ್ನೂ ಸಂಭಾಳಿಸಿಕೊಂಡು ಮನೆಯ ಅಡಿಗೆ ಕೆಲಸವನ್ನೂ ನೋಡಿಕೊಳ್ಳಬೇಕು ಎಂದರೆ?" ಅಲ್ಲದೆ ತಿಂಗಳ 'ಮೂರು ದಿನ'ಗಳಲ್ಲಿ, ಹೆರಿಗೆ ಕಾಲದ ಆರೋ ಒಂಭತ್ತೋ ತಿಂಗಳ ಅವಾಂತರಗಳಲ್ಲಿ ಗಾರ್ಹಸ್ಥ್ಯದ ಗಂಡಾಂತರಗಳನ್ನು ಎದುರಿಸುವವರ್‍ಯಾರು? ಹಿಂದೆ ಶ್ರೀಮಂತ ಜಮೀನ್ದಾರರು, ಪ್ರತಿಷ್ಠಿತರು ಕೆಲಸವಿಲ್ಲದಿದ್ದರೂ ಉಪಪತ್ನಿಯರನ್ನು ಹೊಂದಿರುವುದು 'ಹೆಮ್ಮೆಯ ನಿಶಾನೆ' ಎನಿಸಿತ್ತು. ಅಂದಮೇಲೆ "ಇಂದಿನ ದುಡಿಮೆಯ ದಂಪತಿಗಳಿಗೆ ಸ್ಟೇಪ್ನೀ ಪತ್ನಿ ಯಾಕಿರಬಾರದು?" ಎಂಬುದು ಅವರ ಪ್ರಶ್ನೆ! ಹೀಗೆ ಅವರ ವಿಚಾರಧಾರೆ ಒಂದೇ ನಿಟ್ಟಿನಲ್ಲಿ ಹರಿಯುತ್ತಿದ್ದರೂ ಓದುಗರ ಮನಸ್ಸಿನಲ್ಲೇಳುವ ಮತ್ತೊಂದು ನಿಟ್ಟಿನ ಪ್ರಶ್ನೆಯ ಕಲ್ಪನೆಯೂ ಅವರಿಗಿದೆ. ತಟ್ಟನೆ ನಿಮ್ಮ ಮನಸ್ಸನ್ನು ಅರಿತವರಂತೆ "ಸ್ಟೇಪ್ನೀ ಪತ್ನಿಯಂತೆ ಸ್ಟೇಪ್ನೀ ಪತಿ ಯಾಕಿರಬಾರದು ಎನ್ನುವಿರಾ? ಪತ್ನಿಯ ಹಾಗೆ ಪತಿಗೆ ಹೆರಿಗೆಯ ಭೀತಿ ತಿಂಗಳಿಗೆ ಮೂರು ದಿನಗಳ ಕಡ್ಡಾಯದ ರಜಾ ಏನೂ ಇಲ್ಲವಲ್ಲ? ಸರಿ ತಾನೆ ನಾನು ಹೇಳಿದ್ದು?'' ಎಂದು ತಮ್ಮ ವಾದವನ್ನು ಸಮರ್ಥಿಸಿಕೊಳ್ಳುತ್ತಾರೆ. ಈ ವಾದ ವೈಖರಿಯ ಚಮತ್ಕಾರಕ್ಕೆ ಏನು ಹೇಳುತ್ತೀರಿ ?

"ಹರಟೆಗೆ ಗಮ್ಯವಿಲ್ಲ, ಪೂರ್ವೋದ್ದೇಶವೂ ಇಲ್ಲ." ಆದರೂ ಕೆಲವೊಮ್ಮೆ ಅನುದ್ದೇಶಪೂರಿತವಾಗಿಯೇ ಸಮಸ್ಯೆಗಳ ಪರಿಶೀಲನೆಯೂ ನಡೆಯುತ್ತದೆ. ಆದರೆ ಸಮಸ್ಯೆಗಳೇ ಮುಖ್ಯವಾಗುವುದಿಲ್ಲ. ಉದಾಹರಣೆಗೆ, 'ರೇಲ್ವೆ ರೆಸ್ಟಾರಂಟ್‌ನಲ್ಲಿ' ಶ್ರೀಮಂತ ಪ್ರಯಾಣಿಕರ ಎಂಜಲು ತಟ್ಟೆಯಲ್ಲಿ ಹಸಿದ ಮಕ್ಕಳು ಇಡ್ಲಿ ಚೂರುಗಳನ್ನು ಹೆಕ್ಕುತ್ತಿದ್ದಾಗ ಸರ್ವರನು ಅವರನ್ನು ಹೊಡೆದುದನ್ನು ಕಂಡು ಲೇಖಕರು "ಏನಯ್ಯಾ ಉಳಿದ ಎಂಜಲನ್ನು ನೀನಾದರೂ ತಿಪ್ಪಿಗೆ ಹಾಕುತ್ತಿಯಾ (ತಿಪ್ಪಿಗೆ

ಹಾಕುತ್ತಾನೊ ಅಥವಾ ಗಿರಾಕಿಗಳಿಗೇ.........) ಪಾಪ, ಮಕ್ಕಳು ತಿಂತಾವೆ. ಯಾಕೆ ಬೈದು ಬಡಿಯುತ್ತೀ?" ಎಂದರು. "ಅಯ್ಯೋ ಬಿಡಿ ಸಾರ್. ಹಾಗೇ ಬಿಟ್ರೆ ಇದೇ ಧಂದೆ ಮಾಡತಾರೆ ಅವರು" ಸರ್ವರನ ಈ ಮಾತಿನಿಂದ ಹರಟೆಗಾರರ ಕಣ್ಮುಂದೆ ಪ್ರತಿಯೊಬ್ಬರ ತುತ್ತಿನ ಚೀಲದ ಧಂದೆಯ ಸಮಸ್ಯೆ ಮಿಂಚಿ ಮಾಯವಾಗುತ್ತದೆ.

'ಮುಂಗಾಲ್ ಪುಟಿಗೆ' ಸಂಕಲನದ 'ಪುಣ್ಯಾಶ್ರಮದ ಒಂದು ದೃಶ್ಯ'ದಲ್ಲಿ ಉಡುಪಿ ಹೋಟಲನ್ನು ಒಂದು ಪುಣ್ಯಾಶ್ರಮಕ್ಕೆ ಹೋಲಿಸುವ ಹರಟೆಗಾರರು ಅಲ್ಲಿನ ಅವ್ಯವಸ್ಥೆ, ಮಾಲೀಕ, ಗ್ರಾಮಫೋನು, ಮಾಣಿಗಳ ಬದುಕು, ತಿಂಡಿಗಳ ರುಚಿ ಈ ಎಲ್ಲ ಸಮಸ್ಯೆಗಳ ಮೇಲೂ 'ಕ್ಷ' ಕಿರಣ ಹುಸುತ್ತಾರೆ.

ಇನ್ನು ನಿರುದ್ಯೋಗದ ಸಮಸ್ಯೆಯನ್ನು ಹಲವು ಕಡೆ ಪ್ರಸ್ತಾಪಿಸುತ್ತಾರೆ. 'ಪಂಕ್ಚುಯಾಲಿಟಿಯ ಪರಮಾವಧಿ'ಯಲ್ಲಿ ಪಂಕ್ಚುಯಾಲಿಟಿಯ ಅತಿವೃಷ್ಟಿಯನ್ನು ವಿಡಂಬಿಸುತ್ತ "ನಿರುದ್ಯೋಗದ ನಾಡಿನಲ್ಲಿ ಪಂಕ್ಚುಯಾಲಿಟಿಯ ಅವಶ್ಯಕತೆಯೇಕೆ? ಒಂದು ಕೆಲಸವನ್ನು ಆ ಕಾಲಕ್ಕೆ ಮಾಡದಿದ್ದರೆ ಮುಂದಿನ ಕಾರ್ಯಕಲಾಪಕ್ಕೆ ಚ್ಯುತಿ ಬರುವುದೆಂಬ ಭೀತಿಯಿದ್ದಾಗಲ್ಲವೆ ಅದರ ಮಹತ್ವ? ಸ್ವರ್ಗದ ದೇವತೆಗಳಂತೆ ಕನ್ನಡಿಗರೂ ಕೆಲಸವಿಲ್ಲದೆ ಬಿಡುಗಣ್ಣರಾದಾಗ ಯಾಕೆ ಈ ವೇಳೆಯ ಕಂಗಾಲತನ?" ಎನ್ನುವರು. 'ಸೋಮಾರಿಯ ಪಾಡು' ವಿನಲ್ಲಿ "ವೇಳೆಯನ್ನು ಧಾರಾಳವಾಗಿ ವೆಚ್ಚಮಾಡುವ ಕರ್ಣರೆ ಕರ್ನಾಟಕರು ಎಂಬಲ್ಲಿ ಸಂದೇಹವೇನು? ಇಂತಹ ಕರ್ಣರ ನಾಟಕವೇ ಕರ್ನಾಟಕ. ಕರ್ನಾಟಕ ಎಂಬುದೇ ಒಂದು ಮಹಾನಾಟಕವೆಂದರೆ ಅದರಲ್ಲಿ ಇಂತಹ ಕಲಿಕರ್ಣರು ನಿರುದ್ಯೋಗ ವೀರರಾಗಿ ಮೆರೆಯುವ ಮಹಾಪಾತ್ರಗಳು" ಇತ್ಯಾದಿ. ನಿರುದ್ಯೋಗಿಗಳನ್ನು ಸುರುತಿಸುವ ಹರಟೆಗಾರರ ಮನೋಧರ್ಮ ನಗೆ ತುಸಿದರೂ ಅದರ ಹಿಂದಿರುವ ಕಾಳಜಿಯನ್ನು ಗುರುತಿಸಬಹುದು.

ಒಟ್ಟಿನಲ್ಲಿ ಎನ್ಕೆಯವರ ಹರಟೆಯ ಪ್ರಪಂಚ ವಿಶಾಲವಾದದ್ದು. ಅವರು ಆರಿಸಿಕೊಳ್ಳುವ ಯಾವುದೇ ವಿಷಯವಾಗಲಿ ಓದುಗರನ್ನು 'ಬೋರ್' ಹೊಡೆಸುವ 'ಬೈರಿಗೆ'ಯಾಗುವದಿಲ್ಲ. ಅವರ ವಿಚಾರವಾಹಿನಿಯಲ್ಲಿ ಮಿಂದ ಪ್ರತಿಯೊಂದು ವಿಷಯವೂ ತನ್ನದೇ ಆದ ವೈಶಿಷ್ಟ್ಯತೆಯನ್ನು ಪಡೆದುಕೊಳ್ಳುತ್ತವೆ. ಅವರ ವಿಶಿಷ್ಟ ದೃಷ್ಟಿಗೆ ಸಿಕ್ಕಿದ ಅಲ್ಪವೂ ಅಪಾರವಾಗುತ್ತದೆ. ಹೆಚ್ಚಿನ ಹರಟೆಗಳು ಸ್ವಂತ ಅನುಭವದ ಆಧಾರದ ಮೇಲೆ ರಚಿತವಾದವುಗಳಾದುದರಿಂದ ಅವುಗಳಲ್ಲಿ ಸ್ವಜತೆ ತುಂಬಿತುಳುಕುತ್ತವೆ. ಹಾಸ್ಯ ಸನ್ನಿವೇಶಗಳ ನಿರ್ಮಾಣದಲ್ಲಿ ಘಟನೆಗಳ ಜೋಡಿಸುವಿಕೆಯಲ್ಲಿ ಕಲ್ಪನೆ ಮತ್ತು ಚಮತ್ಕಾರಗಳು ಮಿಂಚುತ್ತವೆ. ವಿರಾಮ ಕಾಲದಲ್ಲಿ ವಿನೋದವಾಗಿ ಓದಲು ಉತ್ತಮ ಸಾಧನವಾಗಿವೆ.

**ಳಳತಿ/ನಾನಿಕಾಕಾ : ಎನ್ಕೆ ಬರೆಹ**

# ಎನ್ಕೆ ಅವರ ಹರಟೆಗಳಲ್ಲಿ ಹಾಸ್ಯಪ್ರಜ್ಞೆ

ಜಿ. ಡಿ. ನಾಡಕರ್ಣಿ

ಕಳೆದ ಅನೇಕ ವರ್ಷಗಳಿಂದ ಜನಪ್ರಿಯ ಲೇಖಕರಾದ ಎನ್ಕೆಯವರು ಕಾದಂಬರಿ, ಏಕಾಂಕಗಳು, ರೇಡಿಯೋ ನಾಟಕಗಳು, ಹರಟೆಗಳು, ಸಾಹಿತ್ಯ ಚರಿತ್ರೆ ಇತ್ಯಾದಿ ಅನೇಕ ಸಾಹಿತ್ಯ ರೂಪಗಳಲ್ಲಿ ಕೃತಿಗಳನ್ನು ರಚಿಸಿ ಕನ್ನಡದ ಕಣಜವನ್ನು ತುಂಬುತ್ತಲೇ ಬಂದಿದ್ದಾರೆ; ಕನ್ನಡದ ಶ್ರೀಮಂತಿಕೆಯನ್ನು ಹೆಚ್ಚಿಸಿ ದ್ದಾರೆ. ಎನ್ಕೆ ಅವರನ್ನು ಅರಿಯದ ಕನ್ನಡಿಗರಿಲ್ಲ; ಅವರ ಬರವಣಿಗೆಯನ್ನು ಓದದ ವ್ಯಕ್ತಿ ಇಲ್ಲ. ವೈಯಕ್ತಿಕ ಜೀವನದಲ್ಲಿ ಅವರು ಅನೇಕ ನೋವುಗಳನ್ನು ಉಂಡರೂ, ಅವುಗಳನ್ನೆಲ್ಲ ಸಹಿಸಿಕೊಂಡು, ಕನ್ನಡಿಗರಿಗೆ ಉತ್ತಮ ಸಾಹಿತ್ಯ ನೀಡಿದ್ದಾರೆ ಎನ್ಕೆ ಅವರ ಜನಪ್ರಿಯತೆಗೆ ಅವರ ಹಾಸ್ಯಮನೋಧರ್ಮವೇ ಮುಖ್ಯ ಕಾರಣ. ಸಂಭಾಷಣೆಯಲ್ಲಾಗಲಿ, ಭಾಷಣಗಳಲ್ಲಾಗಲಿ ಅವರ ಹಾಸ್ಯ ಸಹಜವಾಗಿ ಪ್ರಸಂಗಕ್ಕೆ ತಕ್ಕಂತೆ ಹೊರಹೊಮ್ಮುತ್ತದೆ. ಅಲ್ಲದೆ, ಅವರ ವಿನೋದ ಯಾರನ್ನೂ ನೋಯಿಸುವಂಥದಲ್ಲ. ಸರ್ವಜ್ಞ ಕವಿ ಹೇಳಿದಂತೆ, ಅವರ "ನಕ್ಕು ನಗಿಸುವಾ ನಗೆ ಲೇಸು." ಉತ್ತಮ ಹಾಸ್ಯದ ಎಲ್ಲಾ ಲಕ್ಷಣಗಳು ಎನ್ಕೆಯವರ ವಿನೋದ ಪ್ರವೃತ್ತಿಯಲ್ಲಿವೆ. ಸಹಜವಾಗಿಯೇ, ಸಕ್ಕರೆಯ ಬಗ್ಗೆ ಹೇಳುತ್ತ ಅವರು "ಸಕ್ರಿಯ ಸಹಾನುಭೂತಿ" ಎನ್ನುತ್ತಾರೆ. ಫಿಟ್ ಪ್ಯಾಂಟಿನ ಪ್ರಸ್ತಾಪ ಬಂದಾಗ– "ಇದು Survival of the fittest ಯುಗವಲ್ಲವೆ?" ಎಂದು ಪ್ರಶ್ನಿಸುತ್ತಾರೆ. ಲಿಪ್ ಸ್ಟಿಕ್ ವಿಚಾರ ಹೇಳುವಾಗ, "Lip Sympathy" ಎನ್ನುತ್ತಾರೆ! ಪರವೂರಿನಲ್ಲಿದ್ದ ಗಂಡನು ಹೆಂಡತಿಗೆ ಪತ್ರ ಬರೆದು,– "ತತ್ತಿಯನ್ನು ತಿನ್ನಲು ಪ್ರಾರಂಭಿಸಿದ್ದೇನೆ" ಎಂದರೆ, ಸಂಪ್ರದಾಯದ ಅವನ ಹೆಂಡತಿ ಅದನ್ನು "ಉತ್ತತ್ತಿಯನ್ನು" ಎಂದು ತಿದ್ದುತ್ತಾಳೆ. ಇನ್ನೊಂದು ಸಲ ಹೆಂಡತಿ "ಲಕ್ಷ್ಮಿ" ಎಂದು ಬರೆಯುವಾಗ ತಪ್ಪಿ, "ಮ"ದ ಒತ್ತನ್ನು ಮರೆತಿರುತ್ತಾಳೆ. ಅವಳ ಗಂಡನು "ಕ್ಷ"ಕ್ಕೆ "ಮ"ದ ಒತ್ತು ಕೊಡಬೇಕು ಎಂದು ಬರೆದಾಗ, ಹೆಂಡತಿ ತನ್ನ ಎರಡನೆಯ ಪತ್ರದಲ್ಲಿ ತಿದ್ದಿಕೊಂಡು– "ಕ್ಷ್ಮಮಿಸಿರಿ" ಎಂದು ಬರೆದುದಲ್ಲದೆ, ಈ ಸಲ ಮರೆಯದೆ "ಕ್ಷ"ಕ್ಕೆ "ಮ"ದ ಒತ್ತನ್ನು ಕೊಟ್ಟಿದ್ದನ್ನು ಸ್ಪಷ್ಟೀಕರಿಸುತ್ತಾಳೆ! "ಶ್ಯಾಮು" ಎಂಬ ಗೆಳೆಯನ

ಹೆಸರನ್ನು ತಿರುವುಮುರುವಾಗಿ ಓದಿದರೆ ಏನಾಗಬಹುದು? "ರೇಶನ್"ದ ಪ್ರಸ್ತಾಪ ಬಂದಾಗ, "Man is a rational animal" ಎನ್ನುವುದು ಎನ್ಕೆಯವರಿಗೆ ಸಹಜ.

ಎನ್ಕೆಯವರು ಏಕಾಂಕಗಳಲ್ಲಿ, ರೇಡಿಯೋ ನಾಟಕಗಳಲ್ಲಿ ಅವರ ಹಾಸ್ಯ ಪ್ರಜ್ಞೆಯು ಸೂಸಿ ಹುದಿದೆ. ಹರಟೆಗಳಲ್ಲಿ ಹಾಸ್ಯಕ್ಕೆ ವಿಶೇಷವಾದ ಅವಕಾಶ ಸ್ವಾಭಾವಿಕವಾಗಿಯೇ ದೊರಕುತ್ತದೆ. ಎಂಥ ಪ್ರಸಂಗಗಳಲ್ಲಿಯೂ ವಿನೋದವನ್ನು ತರಬಲ್ಲ ಹುಟ್ಟುನಗೆಗಾರ ಎನ್ಕೆಯವರಿಗೆ ಹರಟೆಗಳು ಅವರ ಹಾಸ್ಯಪ್ರಜ್ಞೆಗೆ ವಿಶೇಷ ಅವಕಾಶ ನೀಡಿವೆ. ಹರಟೆಗಳು "ಮಿತ್ರಸಮ್ಮಿತ"ದ ಜಾತಿಯ ಬರವಣಿಗೆ: ಇಲ್ಲಿ ಗಂಭೀರವಾದ ತತ್ವಪ್ರತಿಪಾದನೆ ಇಲ್ಲ. ವಿಷಯದ ಪೂರ್ಣ ವಿವೇಚನೆ ಅವಶ್ಯವಿಲ್ಲ. ನಿತ್ಯಜೀವನದ ಸಾಮಾನ್ಯ ಸಂಗತಿ-ವಸ್ತುವಿನ ಬಗೆಗೆ ಹರಟೆಯ ಮಲ್ಲನು ಆಪ್ತಸ್ನೇಹಿತನಂತೆ ತನ್ನ ಪ್ರತಿಕ್ರಿಯೆಗಳನ್ನು ವಿವರಿಸುತ್ತ ಹೋಗುತ್ತಾನೆ. ಲೇಖಕನ ಅನಿಸಿಕೆಗಳು, ಅವನ ವ್ಯಕ್ತಿತ್ವ– ಇವುಗಳಿಗೆ ಹರಟೆಯಲ್ಲಿ ಪ್ರಾಶಸ್ತ್ಯ. ಬೇಕನ್, ಆ್ಯಡಿಸನ್, ಸ್ಟೀಲ್, ಲ್ಯಾಂಬ್, ಗಾರ್ಡಿನರ್ ಮೊದಲಾದ ಪ್ರತಿಭಾವಂತ ಆಂಗ್ಲ ಲೇಖಕರು ಇಂಗ್ಲಿಷ್ ಲಲಿತ ಪ್ರಬಂಧಗಳನ್ನು ಬರೆದು, ಕನ್ನಡದ ಹರಟೆಗಳಿಗೆ ಮಾರ್ಗದರ್ಶನ ಮಾಡಿದರು ಎಂದರೆ ತಪ್ಪಿಲ್ಲ. ಹರಟೆ ಅಥವಾ ಲಲಿತಪ್ರಬಂಧ ಒಂದು ಗದ್ಯ ಭಾವಗೀತವಿದ್ದಂತೆ. ಎನ್ಕೆಯವರು ಹರಟೆಯ ಸ್ವರೂಪ-ಲಕ್ಷಣಗಳನ್ನು ಕುರಿತು ಹೀಗೆ ವಿವರಿಸಿದ್ದಾರೆ— "ವಿಚಾರಪ್ರಬಂಧವು ಹೆಚ್ಚು ಶಾಸ್ತ್ರೀಯವೂ ಪಾಂಡಿತ್ಯಪೂರ್ಣವೂ ಎನಿಸಿದರೆ ಹರಟೆ 'ಮನಸ್ಸಿನ ಸ್ವಚ್ಛಂದ ಲಹರಿ' ಎನ್ನಬಹುದು. ಇಲ್ಲಿ ಲೇಖಕನ ಭಾವನಾಲಹರಿಗಳು ಮನಬಂದಂತೆ, ಹೂಬಿಸಿಲಿನಂತೆ ಅರಳಬಹುದು; ನರಿಯ ಲಗ್ನದಂತೆ ತಮಾಷೆಯ ತುಷಾರಗಳು ಸೇಚನೆಗೈಯ್ಯಬಹುದು. ಹರಟೆಗಳಲ್ಲಿ ಮಿಂಚುವ ಹಾಸ್ಯವು ಬೇಸಗೆಯ ಆಣೆಕಲ್ಲಿನ ಮಳೆಯಂತೆ ಬೆಂದ ಹೃದಯಕ್ಕೆ ತಂಪು ನೀಡುತ್ತದೆ. ಹರಟೆ ಹಗುರಾದ. ನವುರಾದ ಸಾಹಿತ್ಯವೆಂದರೂ ಅದರಲ್ಲಿ ದಾರ್ಶನಿಕನ ಆಳ, ಕವಿಯ ಆದರ್ಶ, ಚಿಂತಕನ ವೇದಾಂತಗಳು ಇಣಿಕಿ ಹೋಗಬಹುದು. ಇದರಿಂದಾಗಿ ಈ ಸಾಹಿತ್ಯ ಪ್ರಕಾರಕ್ಕೆ ಹೆಚ್ಚಿನ ಗುಣಮೂಲ್ಯ ದೊರೆಕೊಳ್ಳುತ್ತದೆ. ಇಷ್ಟೆಲ್ಲ ಆದಮೇಲೆ ಮನರಂಜನೆಯ ಗುಳಿಗೆಯೆನಿಸಿದ ಈ ಹರಟೆಯಲ್ಲಿ ನೀತಿಬೋಧೆಯೂ ಗುಳಿಗೆಯ ಹಿಂದೆ ಔಷಧಿಯಂತೆ ಅಡಗಿರಬಹುದು, ರುಚಿಕರವಾದ 'ಪೆಪ್ಸ್'ನಂತೆ."

ಯಶಸ್ವಿ ಹರಟೆಯ ಮಲ್ಲರಾದ ಎನ್ಕೆ ಬಹಳ ಹಿಂದೆಯೇ 'ಝುಂಗಾಲ್‌ಪುಟಗೆ' ಎಂಬ ಹೆಸರಿನಲ್ಲಿ ಹರಟೆಗಳ ಸಂಗ್ರಹ ಪ್ರಕಟಿಸಿದರು. ಮುಂದೆ 'ಎನ್ಕೆ ಬರೆಹಗಳು' ಎಂಬ ಸಂಗ್ರಹ ಬೆಳಕು ಕಂಡಿತು. ಹಿಂದಿನ 'ಜಯಂತಿ' ಪತ್ರಿಕೆಯಲ್ಲಿ, ಇಂದಿನ

ಸುಧಾ, ಪ್ರಜಾಮತ, ಕಸ್ತೂರಿ, ಜನಪ್ರಗತಿ, ಮೊದಲಾದ ಪತ್ರಿಕೆಗಳಲ್ಲಿ ಎನ್ಕೆ ಹರಟೆಗಳು ಪ್ರಕಟಗೊಂಡು ರಸಿಕ ಕನ್ನಡಿಗರು ಅವುಗಳನ್ನು ಓದಿ ನಕ್ಕು ನಲಿಯು ವಂತಾಗಿದೆ. ಹೊಸಗನ್ನಡದ ಆಕರ್ಷಕ ಹಾಗೂ ನವೀನ ಸಾಹಿತ್ಯ ರೂಪವಾದ ಹರಟೆಯ ಆದ್ಯ ಪ್ರವರ್ತಕರಲ್ಲಿ ಅಗ್ರಗಣ್ಯರು ಎನ್ಕೆ ಎಂದರೆ ಅತಿಶಯೋಕ್ತಿಯಲ್ಲ. ಉತ್ತಮ ಹರಟೆಯ ಲಕ್ಷಣಗಳೆಲ್ಲ ಅವರ ಲಲಿತಪ್ರಬಂಧಗಳಲ್ಲಿವೆ. ಪರಿಪಕ್ವ ಜೀವ ನಾನುಭವ, ವಿಶಾಲವಾದ ಓದು, ಸಹೃದಯತೆ, ಆಶಾವಾದ, ಸೂಕ್ಷ್ಮ ನಿರೀಕ್ಷಣ ಶಕ್ತಿ, ಚಿಕ್ಕ-ಪುಟ್ಟ ವಿಷಯಗಳಿಂದಲೂ ಶಾಶ್ವತ ಸತ್ಯವನ್ನು ತಿಳಿಸುವ ಮನೋ ಧರ್ಮ, ಹಗುರುಬಗೆ ಮೇಲಾಗಿ ವಿನೋದ ದೃಷ್ಟಿ, ಇಂಥವುಗಳ ಮೂಲಕ ಎನ್ಕೆ ಯಶಸ್ವಿ ಹರಟೆಗಾರರಾಗಿದ್ದಾರೆ. ಅವರ ಹರಟೆಗಳ ವಿಷಯವ್ಯಾಪ್ತಿ ವಿಶ್ವವಿಶಾಲ ವಾದುದು. 'ಕಣ್ಮರೆಯಾದ ಕಾಲ್ಮರಿ' ಅಥವಾ 'ದಾಡಿಯ ಸಮಸ್ಯೆ' ಯಿಂದ ಆರಂಭಿಸಿ 'ಸ್ಪರ್ಶೇಂದ್ರಿಯ ವಿಚಾರ' 'ವೈಜ್ಞಾನಿಕ ವಿಕ್ರಮಗಳು' ಎನ್ನುವುದರ ವರೆಗೆ ಈ ಹರಹು ಚಾಚಿಕೊಂಡಿದೆ. ಹರಟೆಗಳಲ್ಲಿ ಬರುವ ವ್ಯಕ್ತಿಗಳೂ ನಮಗೆ ಪರಿಚಿತರು. ಆದರೆ ಸುಪರಿಚಿತರೆಂದು ನಾವು ತಿಳಿದುಕೊಂಡವರಲ್ಲಿಯೂ ಎಲ್ಲರಿಗೂ ಕಾಣದ ಕೆಲವು ವೈಶಿಷ್ಟ್ಯಗಳನ್ನು ಅವರು ಕಾಣುತ್ತಾರೆ. ಇಂಥ 'ಅಪರಿಚಿತ ಪರಿಚಿತ' ಎಷ್ಟೋ ವ್ಯಕ್ತಿಗಳು ಅವರ ಹರಟೆಗಳಲ್ಲಿ ಎದ್ದು ಕಾಣುತ್ತಾರೆ. ಸಿಂಪಿಗ, ಕ್ಷೌರಿಕ, ಗೌಳಿ, ಹೊಟೆಲ್ ಮಾಣಿ, ಅಂಗಡಿಕಾರ, ಟಾಂಗಾವಾಲಾ, ಶಾಲಾ ಶಿಕ್ಷಕ, ರಾಜಕಾರಣಿ, ಸಂಗೀತಗಾರ, ಹೌದಪ್ಪಗಳು, ಅತಿಥಿಗಳು —ಇಂಥ ವ್ಯಕ್ತಿ ಗಳು ಹರಟೆಗಳಲ್ಲಿ ಸುಳಿದುಹೋಗುತ್ತಾರೆ. ನಿತ್ಯವೂ ನಾವೆಲ್ಲ ಅವರನ್ನು ನೋಡು ತ್ತಲೇ ಇದ್ದರೂ, ವಿದ್ಯಾವಂತರಿಗೂ – ತತ್ವಜ್ಞಾನಿಗಳಿಗೂ ಕೂಡ ಹೊಳೆಯದ ಕೆಲವು ನೂತನ ವಿಚಾರ-ಸಲಹೆಗಳನ್ನು ಅವರು ನೀಡುತ್ತಾರೆ! ಇನ್ನು ಹರಟೆ ಗಳಲ್ಲಿಯ ಸ್ಥಳಗಳೂ ಹಾಗೆಯೇ! ಹಾಸ್ಯ ಎಲ್ಲಿ ಇಲ್ಲ? ನೋಡುವ ದೃಷ್ಟಿಯಿದ್ದರೆ ಬಹುಶಃ ಸ್ಮಶಾನದಲ್ಲಿಯೂ ವಿನೋದ ಕಂಡೀತು! ಎನ್ಕೆ ಅವರ ಹರಟೆಗಳಲ್ಲಿ ಹೇರ್ ಕಟಿಂಗ್ ಸಲೂನು, ರೇಲ್ವೆ ರೆಸ್ಟಾರಂಟು, ಮೋಡಕಾ-ಬಾಜಾರ, ಧರ್ಮಶಾಲೆ, ಭಾಡಿಗೆಯ ಮನೆ, ನಮ್ಮ ಸ್ವಂತ ಮನೆ- ಇಂಥ ಪರಿಚಿತ ಸಾಮಾನ್ಯ ಸ್ಥಳಗಳು ಹರಟೆ ಗಳಲ್ಲಿ ರಾಜ – ಮಹಾರಾಜರ ಅರಮನೆ- ಅಂತಃಪುರಗಳ ಬೆಡಗಿಗಿಂತ ನೂರುಪಟ್ಟು ವಿನೋದ, ವೈಚಿತ್ರ್ಯ, ಸೊಗಸಿನಿಂದ ಮೆರೆಯುತ್ತವೆ. ಹರಟೆಯಲ್ಲಿ ಮನೋಕಲ್ಪಿತ ಸ್ಥಳಗಳಿಲ್ಲ; ಅಲ್ಲಾವುದ್ದೀನನ ಕಥೆಯ ಕಲ್ಪನಾರಮ್ಯ ಭವನಗಳಿಲ್ಲ. ಆದರೇನು? ಅತಿಪರಿಚಿತ ಸ್ಥಳಗಳಲ್ಲಿಯೇ ನಿತ್ಯನೂತನ, ಚಮತ್ಕಾರದ ಅನುಭವವನ್ನು ಹುಟ್ಟಿಸಿ ತೋರಿಸುವ ಜಾದೂಗಾರಿಕೆ ಹರಟೆಗಾರನಲ್ಲಿರುವ ತನಕ, ಯಾವ ಸ್ಥಳವೂ ಕಡಿಮೆಯದಲ್ಲ! ಅದರಂತೆ ನಾವು ದಿನಾಲು ಧರಿಸುವ ಕಾಲ್ಮರಿ, "ಸಂಭವಾಮಿ ದಿನೇ ದಿನೇ" ಎಂದು ಭರವಸೆಕೊಟ್ಟು ಭರದಿಂದ ಬೆಳೆಯುವ ದಾಡಿ, ಕಾಯಿ-ಪಲ್ಲೆ

ಚೇಲಗಳು, ನಮ್ಮ ಕೋಟಿನ ಜೇಬುಗಳು-ಇಂಥ ಸಣ್ಣ-ಪುಟ್ಟ ವಿಷಯಗಳ ಸುತ್ತ ಎನ್ಕೆ ತಮ್ಮ ಕಲ್ಪನಾವಿಲಾಸ ಹರಿಬಿಟ್ಟು ಒಂದು ರಮ್ಯ, ಕುತೂಹಲಪೂರ್ಣ, ವಿನೋದಮಯ ನೂತನ ಜಗತ್ತನ್ನು ನಿರ್ಮಿಸುತ್ತಾರೆ.

ಉದಾಹರಣೆಗೆ ಅವರ ಯಶಸ್ವಿ ಹರಟೆಯಾದ— "ಆ ಧರ್ಮಶಾಲೆ" ನೋಡಬಹುದು. ಆಪಾತತಃ ಧರ್ಮಶಾಲೆ ಎಂದರೆ ಭಿಕ್ಷುಕರ ನಿವಾಸಸ್ಥಾನ. ಅಲ್ಲಿ ಎಲ್ಲೆಲ್ಲೂ ಹೊಲಸು, ಓಕರಿಕೆ ಹುಟ್ಟಿಸುವಂಥ ವಾತಾವರಣ. ಇಂಥದೊಂದು ಹೆಸರಿಲ್ಲದ ಸ್ಥಳದಲ್ಲಿ ಎಂಥ ರಮ್ಯತೆಯನ್ನು ಎನ್ಕೆ ಕಂಡಿದ್ದಾರೆ! ಅವರು ಅದನ್ನು ಎತ್ತಿತೋರಿಸಿದ ಮೇಲೆ ಎಲ್ಲರಿಗೂ ಹೌದೆನ್ನಿಸುತ್ತದೆ; ತಲೆದೂಗಿಸುತ್ತದೆ. ಆದರೆ, ಮೊದಲೇ ನಮಗೆ ಏಕೆ ಕಾಣಲಿಲ್ಲ?— ಎಂಬ ವ್ಯಥೆ ಆಗದೆ ಇರಲಿಕ್ಕಿಲ್ಲ. ಆ ಧರ್ಮಶಾಲೆಯ ವರ್ಣನೆ ಹೀಗಿದೆ "ಒಬ್ಬ ಮುದುಕಿ ಒಂದು ಮರದ ಅಡಿಯಲ್ಲಿ ಒಲೆ ಹೂಡಿ ರೊಟ್ಟಿ ಬಡಿಯುತ್ತಿರುತ್ತಾಳೆ. ಒಬ್ಬ ಯುವಕ ಬೇವಿನ ಮರದ ಬುಡಕ್ಕೆ ಹೊರಸಿನ ಮೇಲೆ ಕೂತು ಬುಲ್‌ಬುಲ್‌ತರಂಗ ಬಾರಿಸುತ್ತಾನೆ. ಅವನ ಬದಿಗೆ ಅವನ ಆಕೆ ಇನಿಯನಿಗಾಗಿ ಅಂಗಡಿಯಿಂದ ತಂದ ಚಹದ ಕಪ್ಪು ಹಿಡಿದುಕೊಂಡು ನಿಂತಾಗ— "ಬಾ ತುಂಬು ಬಟ್ಟಲನು" ಎಂದು ಹಾಡುವ ಉಮರ ಖಯ್ಯಾಮನ ಸವಿನೆನಪು ಯಾರ ಮನಸ್ಸಿನಲ್ಲಿ ಬಾರದು? ಅದೇ ಕ್ಷಣಕ್ಕೆ ಇನ್ನೊಬ್ಬ ರಸಿಕ ತನ್ನದೇ ಒಂದು ಭಾಷೆಯಲ್ಲಿ ಭಾವಪೂರ್ಣವಾಗಿ ಗಾನ ಮಾಡುತ್ತಿರುತ್ತಾನೆ. ಊರೆಲ್ಲಿಯೋ, ತಾವು ಎತ್ತೋ? ಎಲ್ಲಿ ಕಾಲು ಚಾಚಲಿಕ್ಕೆ ಧರ್ಮಶಾಲೆ ಸಿಕ್ಕಿತೋ ಅಲ್ಲಿಯೇ ತಮ್ಮ ನೆರಳು ಮಾಡಿಕೊಂಡು ಜೀವನವನ್ನೇ ಒಂದು ಸರಸ ಕಾವ್ಯವಾಗಿ ಮಾಡಿಕೊಳ್ಳುವ ಇತರ ರಸಿಕತೆಗೆ ಯಾರು ತಲೆದೂಗರು?"

ಒಮ್ಮೊಮ್ಮೆ ಈ ಧರ್ಮಶಾಲೆಯಲ್ಲಿ ಇರಾಣಿ ಜನರ ಮಹಾಮಂಡಲ ಠಾಣೆ ಹಾಕುತ್ತದೆ. ಪುರುಷರಂತೆ ಬಣ್ಣಬಣ್ಣದ ಶರ್ಟು, ಪಾಯಿಜಾಮ್ ಹಾಕಿ ತುಂಬಿದ ಎದೆಯಿಂದ ನೋಟಕರಲ್ಲಿ ಮಿಂಚಿನ ಚಕಮಕಿಯನ್ನು ಹುಟ್ಟಿಸುವ ಹರೆಯದ ಇರಾಣಿ ಹುಡುಗಿಯರು ಈ ಗುಂಪಿನ ಪ್ರಮುಖ ಆಕರ್ಷಣೆ. ಅವರು ಮುಸಾಫಿರಾಗಿ ಊರೂರು ತಿರುಗುತ್ತ, ಊರೊಳಗೆ ಪೇಟೆಯಲ್ಲಿ ತಮ್ಮ ಚಾಕು-ಚೂರಿ, ಕತ್ತರಿಗಳನ್ನು ಬಯಲಂಗಡಿಯಲ್ಲಿ ಹರವಿಕೊಂಡು ಕೂಡುತ್ತಾರೆ. "ಅವರ ತಂಬುಲದ ತುಟಿ, ತುಂಬಿದ ಮೈ ನೋಡಿ ಮಳ್ಳು ಜನ ಕತ್ತರಿ-ಚಾಕುಗಳ ವ್ಯಾಪಾರಕ್ಕೆ ಬರುತ್ತಾರೆ. ಆಗ ಅವರ ಕಿಸೆಗೆ ಕತ್ತರಿ, ಹೃದಯಕ್ಕೆ ಚೂರಿ! ಇದ್ದೇ ವ್ಯಾಪಾರ." ಈ ರೀತಿ ಸೊಗಸಾಗಿ ಈ ಜನರನ್ನು ಬಣ್ಣಿಸಿದ ಎನ್ಕೆ ಅಲ್ಲಿಗೇ ನಿಲ್ಲದೆ, ನಾಗರಿಕರೆಂದು ಗೃಹಸ್ಥರೆಂದು ಹೆಮ್ಮೆಪಡುವ ನಾವು ಗಳಿಸಿದ್ದಾದರೂ ಏನು ಮಹಾ?

ಈ ಜನರ ಹಾಗೆ ಸ್ವಚ್ಛಂದವಾಗಿ, ಸಂತೋಷವಾಗಿ ಯಾಕೆ ಇರಬಾರದು?-ಎಂಬ ಮಾತಿಗೆ ಹೋಗಿ ತಲುಪುತ್ತಾರೆ- "ಆ ಧರ್ಮಶಾಲೆ ನಿಜವಾಗಿಯೂ ನನಗೊಂದು ಧರ್ಮದ ಪಾಠ ಹೇಳುವ ಸಾಲೆಯಾಗಿದೆ. ನನ್ನ ಪದವಿ, ನನ್ನ ಪಗಾರ, ನನ್ನ ಉನ್ನತಿ, ನನ್ನ ಸಂಸ್ಕೃತಿ ಎನ್ನುತ್ತ ಈ ಸಂಸಾರ ಭೂಮಿಗಿಳಿದು ನಾನು ಸುರಿದು ದೇನು ? ಸುಖಿಸಿದುದು ಎಷ್ಟು? ನಾನೂ ಇಂತಹ "ಮುಸಾಫಿರ್" ಆಗಬಾರದೆ? ....ನನಗಂತೂ ಮನೆ ಬೇಡ, ಮಾರುಬೇಡ. ಈ ಧರ್ಮಾರ್ಥ ಯಾತ್ರಿಕರಂತೆ ಕಂಡ ನೆಲದಲ್ಲಿ ಮೂರು ನಿಮಿಷ ತಂಗಿ, ಮತ್ತೆ ಹೊಸ ಜಲ, ಹೊಸ ನೆಲ, ಹೊಸ ಜನ ಎಂದು ಜಗತ್ತನ್ನೇ ಸುತ್ತಾಡುವ ಮುಸಾಫಿರಿಯಾಗಬೇಕೆನ್ನಿಸುತ್ತದೆ."

ಒಂದು ಸಾಮಾನ್ಯ ಸಂಗತಿಯನ್ನು ಕಣ್ಣಿಗೆ ಕಟ್ಟುವಂತೆ ಹೃದ್ಯವಾಗಿ ಬಣ್ಣಿಸಿ, ಕೊನೆಗೆ ಜೀವನದೃಷ್ಟಿ-ಜೀವನವಿವೇಕದ ಮಟ್ಟಕ್ಕೆ ಹೋಗಿ ಮುಟ್ಟುವ ಈ ಹರಟೆ ತುಂಬಾ ಯಶಸ್ವಿಯಾದುದು.

"ಮೋಡಕಾ-ಬಾಜಾರ" ಹರಟೆ ಅನೇಕ ದೃಷ್ಟಿಯಿಂದ ಓದುಗರನ್ನು ಆಕರ್ಷಿಸುವಂಥದು. ಮುರುಕು ಸಾಮಾನುಗಳ ಒಂದು ಅಂಗಡಿಯಲ್ಲಿಯ ಅನುಭವ ಈ ಹರಟೆಯ ವಸ್ತು. ಕಬ್ಬಿಣದ ಮುರುಕು ವಸ್ತುಗಳು, ಹರಕು ಚಪ್ಪಲಿ, ಹಳೆಯ ಪುಸ್ತಕಗಳು ಇಲ್ಲಿ ಇರುವ ಬಂಡವಲು. ಕೇವಲ ನಾಲ್ಕಾಣೆಗೆ ಮೋಡಕಾ ಬಾಜಾರದಲ್ಲಿ ಕಿಟೆಲ್ ಶಬ್ದಕೋಶ ಕೊಂಡದ್ದನ್ನು ವಿವರಿಸಿ ಲೇಖಕರು, ಇನ್ನೊಂದು ಸಲ ಇದೇ ಸ್ಥಳದಲ್ಲಿ ಲಕ್ಷ್ಮೀಶನ ಜೈಮಿನಿ ಭಾರತವನ್ನು ಅತ್ಯಲ್ಪ ಬೆಲೆಗೆ ತಾವು ಕೊಂಡದ್ದನ್ನು ನಿರೂಪಿಸಿದ್ದಾರೆ. "ಕನ್ನಡಿಗರ ವಾಚನಾಭಿರುಚಿಯ ಮಟ್ಟ ಎಷ್ಟು ಎತ್ತರವಾಗಿದೆಯೆಂಬುದನ್ನು ಮೋಡಕಾ ಬಾಜಾರದಲ್ಲಿಯ ಆ ಗ್ರಂಥರಾಶಿಯಿಂದಲೇ ಕಂಡುಕೊಳ್ಳುವಂತಿರುತ್ತದೆ. ಸಾಹಿತ್ಯರಸದ ರುಚಿಯನ್ನು ಕನ್ನಡಿಗರಿಗಿಂತ ಗೆದ್ದಲಿಗಳೇ ಹೆಚ್ಚು ಅರಿತಿವೆಯೇನೋ ಎಂಬಂತೆ ಪುಸ್ತಕಗಳ ಅಂಚುಗಳನ್ನೂ, ಮಧ್ಯಮಧ್ಯದ ಮಹತ್ವದ ಭಾಗಗಳನ್ನೂ ಅವು ಜೀರ್ಣಿಸಿಕೊಂಡುದು ಕಂಡುಬರುತ್ತದೆ" ಎಂದು ಲೇಖಕರು ಮಾರ್ಮಿಕವಾಗಿ ಟೀಕಿಸಿದ್ದಾರೆ. ಇಲ್ಲಿ ದೊರೆಯುವ Second-Hand ಪುಸ್ತಕಗಳು ಪುನರ್ವಿವಾಹವಾದ ಸ್ತ್ರೀಯಂತೆ ಎನ್ಕೆಯವರಿಗೆ ಅನ್ನಿಸಿದೆ. "ಒಬ್ಬ ಒಡೆಯನನ್ನು ಕಳೆದುಕೊಂಡು ಇನ್ನೊಬ್ಬನಿಗಾಗಿ ದಾರಿ ಕಾಯುತ್ತಿರುತ್ತವೆ. ಮೋಡಕಾ ಬಾಜಾರು ಎಂದೊಡನೆಯೇ "ಅನಾಥ ಬಾಲಕಾಶ್ರಮ" ಇದ್ದಂತೆ – ಕೈಗೆ ಸಿಕ್ಕವರನ್ನು ಕೈಗೆ ಬಂದಂತೆ ಮಾರುವದು! ಅನಾಥಾಶ್ರಮದಲ್ಲಿ ಹೇಗೆ ಒಮ್ಮೊಮ್ಮೆ ಪೆಣ್ಮಣಿಗಳು "ಬೀದಿಯ ನಾರಿ" ಯರಾಗುತ್ತಾರೋ ಹಾಗೆ ಮೋಡಕಾ ಬಾಜಾರಿನಲ್ಲಿ ಕೃತಿರತ್ನಗಳೂ ಕಸವಾಗುತ್ತವೆ.

ನಾನಿಕಾಕಾ : ಎನ್ಕೆಬರೆಹ/೪೪೭

ಸಮಾಜ ವಿಡಂಬನೆಯು ಸುಂದರವಾಗಿ ಬಂದಿದೆ ಎನ್ಕೆಯವರ ಕೆಲವು ಹರಟೆಗಳಲ್ಲಿ. "ಮುಂಗಾಲ್‌ಪುಟಿಗೆಯ ಮುಂದಾಳು"- ಈ ಬಗೆಯ ಹರಟೆಗಳಲ್ಲಿ ಉತ್ತಮವಾದುದು. ಯಾವ ವಿಶೇಷ ಅರ್ಹತೆಯಿಲ್ಲದಿದ್ದರೂ ಮುಂಗಾಲ್‌ಪುಟಿಗೆಯ ಚತುರಮತಿ ಒಂದಿದ್ದರೆ ಸಾಕು, ಸಾಹಿತ್ಯಿಕ, ಸಾಮಾಜಿಕ, ರಾಜಕೀಯ ಕ್ಷೇತ್ರಗಳಲ್ಲಿ ಸುಲಭ ಕೀರ್ತಿ ಸಂಪಾದಿಸಬಹುದು. ಇಂತಹ "ಧೂರ್ತತನದಿಂದ ಮಂಕನೂ ಮನುವಾಗಬಹುದು, ಎಗ್ಗನೂ ಯಾಜ್ಞವಾಲ್ಕ್ಯನಾಗಬಹುದು, ಚೋರನೂ ಚಾಣಕ್ಯನಾಗಬಹುದು." ಲೇಖಕರು ಹರಟೆಯ ಕೊನೆಗೆ ಮಾರ್ಮಿಕವಾಗಿ ಹೇಳುತ್ತಾರೆ— "ಹೀಗಿದೆ ಸ್ವಾಮಿ, ಹೀಗಿದೆ ಪ್ರಪಂಚ. ಒಬ್ಬರನ್ನೊಬ್ಬರು ತಿಂದು ಬದುಕುವ ಈ ಜಗತ್ತಿನಲ್ಲಿ "ಬಾಯಿ ಇದ್ದವನೆ ಬದುಕಿದ" ಎಂಬ ಮಾತು ಸುಳ್ಳಲ್ಲ ಬಾಯಿ ಇದ್ದವನು ಎಂದರೆ ಮುಂಗಾಲ್‌ಪುಟಿಗೆಯ ಮುಂದಾಳೇ ಎಂದು ಮತ್ತೆ ಹೇಳಬೇಕೆ ?' ಹಾಗೆಯೇ 'ಹ್ಯಾವಪ್ಪಗಳು ಅರ್ಥಾತ್ ಕವಲೆತ್ತುಗಳು' ಎಂಬ ಹರಟೆಯಲ್ಲಿಯೂ ಮಾನವ ಸಹಜವಾದ ದೌರ್ಬಲ್ಯಗಳ ವಿಡಂಬನೆ ಸಿಶ್ಚಿತವಾಗಿ ಬಂದಿದೆ. ಇಂಥ ಹರಟೆಗಳಲ್ಲಿ ಒಂದು ಕಾಲದ ರೂಢಿ-ಸಂಪ್ರದಾಯಗಳ ಟೀಕೆ ಮಾತ್ರ ಇರದೆ, ಮಾನವನ ಅಂತರಂಗದ ದೌರ್ಬಲ್ಯಗಳ ಚಿತ್ರಣವಿರುವುದರಿಂದ ಇವುಗಳಿಗೆ ವಿಶೇಷ ಮಹತ್ವ ಪ್ರಾಪ್ತವಾಗಿದೆ.

'ರೇಲ್ವೆ ರೆಸ್ಟಾರಂಟಿನಲ್ಲಿ', 'ಪ್ರಥಮ ಪ್ರವೇಶ', 'ಕಣ್ಮರೆಯಾದ ಕಾಲ್ಮರಿ', 'ಚಟಿಗಳು' – ಮುಂತಾದ ಹರಟೆಗಳಲ್ಲಿ ಎನ್ಕೆಯವರ ವಿನೋದಪ್ರವೃತ್ತಿಯ ಲಾಸ್ಯಕ್ಕೆ ವಿಶೇಷ ಇಂಬು ದೊರೆತಿದೆ. 'ದಾಡಿಯ ಸಮಸ್ಯೆ' ನಾಗರಿಕನ ನಿತ್ಯದ ಸಮಸ್ಯೆ. ಎಷ್ಟು ಲೇಖಕರು ಈ ಸನಾತನ ಪ್ರಶ್ನೆಯ ಬಗ್ಗೆ ಬರೆದರೂ, ಬರೆಯಬೇಕಾದದ್ದು ಇನ್ನೂ ಉಳಿದೇ ಇದೆ! ಆ ಹರಟೆಯ ಪ್ರಾರಂಭದಲ್ಲಿ ಲೇಖಕರು ಕೇಳುತ್ತಾರೆ– "ನೀವು ಎಂದಾದರೂ ಯಾವ ತೊಂದರೆಯೂ ಇಲ್ಲದೆ ದಾಡಿಯನ್ನು ಮಾಡಿಕೊಂಡಿದ್ದೀರಾ ?" ಜನರೆಲ್ಲರೂ ದಾಡಿಧಾರಿಗಳೇ ಆದರೆ, ಹಿಂದು-ಮುಸ್ಲಿಂ ಐಕ್ಯವೇ ಆಗಿಬಿಡಬಹುದು ! ಎಂಬ ಮಾತಿನ ವರೆಗೆ ಈ ಸಾಮಾನ್ಯವೆಂದು ತೋರುವ ವಿಷಯ ವ್ಯಾಪಿಸುತ್ತ ಹೋಗುತ್ತದೆ. 'ಜೇಬುಗಳ' ಬಗ್ಗೆ ಬರೆಯುತ್ತ ಲೇಖಕರು– "ಈಗಿಷ್ಟಷ್ಟೇ ನಮ್ಮ ಜೇಬುಗಳಲ್ಲೂ ರೇಶನ್ ಮ್ಯಾನೇಜ್ ಮಾಡಬಹುದು !" ಎಂದು ಹೇಳಿ ಇಂದಿನ ರೇಶನ್ ಯುಗದ ಅಭಾವ ಸ್ಥಿತಿಯನ್ನು ಸೂಚ್ಯವಾಗಿ ವಿಡಂಬಿಸಿದ್ದಾರೆ. 'ಅತಿಥಿದೇವೋಭವ' ಹರಟೆಯಲ್ಲಿ, ಅತಿಥಿದೇವ ಶಬ್ದವನ್ನು ಬಹುವ್ರೀಹಿ ಸಮಾಜವೆಂದು ಬಣ್ಣಿಸಿ, ಲೇಖಕರು-ಬಹುವ್ರೀಹಿ ಎಂದರೆ 'ಬಹಳಷ್ಟು ಭತ್ತ ಉಳ್ಳವರು.' ಆದ್ದರಿಂದ ಪೂರ್ವಜರಿಗೆ ಸಾಕಷ್ಟು ಧಾನ್ಯ ದೊರೆಯುತ್ತಿದ್ದುದರಿಂದ, ಬಹುವ್ರೀಹಿಗಳಾಗಿ ಅವರು ಇದ್ದುದರಿಂದ, ಅವರು 'ಅತಿಥಿದೇವ'ರಾಗಿದ್ದರು ಎಂದು ವಿವರಿಸಿದ್ದಾರೆ.

ಒಟ್ಟಿನಲ್ಲಿ, ಎನ್ಕೆಯವರ ಹರಟೆಗಳಲ್ಲಿ ಹಾಸ್ಯಪ್ರಜ್ಞೆ ಹಾಸುಹೊಕ್ಕಾಗಿದೆ. ವಿನೋದ, ವಿಡಂಬನೆ, ವ್ಯಂಗ್ಯೋಕ್ತಿ, ಕಟಕಿ, ಚಮತ್ಕಾರ-ಮೊದಲಾದ ಹಾಸ್ಯದ ಅನೇಕ ಪ್ರಕಾರಗಳು ಅವರ ಹರಟೆಗಳಲ್ಲಿ ಕಂಡು ಬರುತ್ತವೆ. ಕಥೆ-ಕಾದಂಬರಿ, ಕವನ - ಇವುಗಳಿಗೇ ಉದಯೋನ್ಮುಖ ಲೇಖಕರು ಹೆಚ್ಚಾಗಿ ಪ್ರಾಶಸ್ತ್ಯ ನೀಡುತ್ತಿರುವ ಇಂದಿನ ಕಾಲದಲ್ಲಿ ಹರಟೆಯ ಸಾಹಿತ್ಯ ಇಂದು ಅಪೇಕ್ಷಿತ ಪ್ರಮಾಣದಲ್ಲಿ ಬೆಳೆಯುತ್ತಿಲ್ಲ. ಆದರೆ ಎನ್ಕೆಯವರು ಮೊದಲಿನಿಂದಲೂ ಜನಪ್ರಿಯ ಹರಟೆಗಳನ್ನು ಬರೆದು ಈ ಕೊರತೆಯನ್ನು ತುಂಬುತ್ತ ಬಂದಿದ್ದಾರೆ. ಸಾಹಿತ್ಯದ ಈ ವಿಶಿಷ್ಟ ಹಾಗೂ ಜನಪ್ರಿಯ ಪ್ರಕಾರಕ್ಕೆ ಎನ್ಕೆಯವರ ಕೊಡುಗೆ ತುಂಬಾ ಶ್ಲಾಘ್ಯವಾಗಿದೆ.

# 'ಮೋಡಕಾ ಬಾಜಾರ'

## ಡಾ. ವಾಮನ ಬೇಂದ್ರೆ

'ಮೋಡಕಾ-ಬಾಜಾರ' ಎನ್ಕೆಯವರ ಆಯ್ದ ಉತ್ತಮ ಹರಟೆಗಳ ಎರಡನೆಯ ಸಂಕಲನ ೧೯೭೩ ರಲ್ಲಿ ಪ್ರಕಟವಾಯಿತು. ಇದರಲ್ಲಿ ೨೦ ಹರಟೆಗಳಿವೆ. ಹರಟೆಗಳ ಪ್ರಾರಂಭಕ್ಕೆ ಮುನ್ನುಡಿಯಾಗಿ ಎನ್ಕೆಯವರು ಅನೇಕ ಮಹತ್ತ್ವದ ಮಾತುಗಳನ್ನು ಬರೆದಿದ್ದಾರೆ. 'ಹರಟೆ' ಎಂಬ ಹೆಸರಿನ ಉದಯ, ಇಂಗ್ಲಿಷ ಸಾಹಿತ್ಯದಲ್ಲಿ ಈ ಸಾಹಿತ್ಯ ಪ್ರಕಾರ ಬೆಳೆದು ಬಂದ ಬಗೆ ಮತ್ತು ಕನ್ನಡ ಸಾಹಿತ್ಯ ದಲ್ಲಿ ಅತ್ಯುತ್ತಮ ಹರಟೆಗಾರರನ್ನು ಕುರಿತು ವಿವೇಚಿಸಿದ್ದಾರೆ.

'ಹರಟೆ' ಹೇಗಿರಬೇಕು ಎಂಬುವರ ಬಗ್ಗೆ ತಮ್ಮ ನಿಲುವು ಮತ್ತು ಧ್ಯೇಯ ಧೋರಣೆಗಳನ್ನು ಎನ್ಕೆಯವರು ಸ್ಪಷ್ಟಪಡಿಸಿದ್ದಾರೆ. ಗೊರೂರ ಅವರು 'ಹರಟೆ' ಭಾವಗದ್ಯ ಎಂದು ಕರೆದಿರುವುದನ್ನು ಒಪ್ಪಿಕೊಂಡು ತಮ್ಮ ಗದ್ಯಕ್ಕೆ ಪದ್ಯಗುಣವನ್ನೂ ಸೇರಿಸಿದ್ದಾರೆ; ತಮ್ಮ ಹರಟೆಗಳನ್ನು ಗದ್ಯಭಾವಗೀತ ಮಾಡುವ ಗುರಿ ಇಟ್ಟುಕೊಂಡಂತೆ ಕಂಡುಬರುತ್ತದೆ.

ಈ ಇಪ್ಪತ್ತು ಹರಟೆಗಳಲ್ಲಿ ಕೇವಲ ಮೂರು — ಮೋಡಕಾ ಬಜಾರ, ಆ ಧರ್ಮಶಾಲೆ ಮತ್ತು ಜೋಗ ದರ್ಶನ — ವಾಚಕರ ಮನಸ್ಸನ್ನು ಗೆದ್ದಿವೆ. ಇನ್ನುಳಿದ ಹರಟೆಗಳನ್ನೂ ವಾಚಕರು ಲಕ್ಷಗೊಟ್ಟು ಓದಬೇಕು.

'ಕಾಂತಾಸಮ್ಮಿತಿ', 'ಶೃಂಗಾರಮೆ ರಸಂ' ಮತ್ತು 'ಸ್ಟೆಪ್ನೀ' — ಎಂಬ ವಿಷಯಗಳ ಬಗ್ಗೆ ಜನ ಸಾಮಾನ್ಯರಿಗೆ ಕುತೂಹಲ ಕೆರಳಲಿಕ್ಕಿಲ್ಲ. ಸಾಹಿತ್ಯ ಅಭ್ಯಾಸಿಗಳ ಮತ್ತು ವಿದ್ವಾಂಸರ ಕುತೂಹಲ ಕೆರಳಿಸುವ ಸಾಮರ್ಥ್ಯ ಮೇಲೆ ನಮೂದಿಸುವ ವಿಷಯಗಳಲ್ಲಿದೆ. ಇನ್ನುಳಿದ ಪ್ರತಿಯೊಂದು ಹರಟೆಯ ತಲೆಬರೆಹ- ಚಟಗಳು, ಸ್ವಾವಲಂಬನ, ಮೋಡಕಾ ಬಾಜಾರ, ಅತಿಥಿದೇವೋಭವ, ಮನವೆಂಬ ಮರ್ಕಟ, ಮುಂಗಾಲ್‌ಪುಟಿಗೆ- ಜನಸಾಮಾನ್ಯರು ಪ್ರತಿನಿತ್ಯ ಮಾತಿ ನಲ್ಲಿ ಉಪಯೋಗಿಸುವ ವಿಷಯಗಳಿಂದ ಕೂಡಿದೆ. ಆದುದರಿಂದ ಜನಸಾಮಾನ್ಯರ ಕುತೂಹಲ ಈ ಹರಟೆಗಳನ್ನು ಓದಬಯಸುವುದು ಸ್ವಾಭಾವಿಕ. ಒಟ್ಟಿನಲ್ಲಿ

'ಮೋಡಕಾ ಬಾಜಾರ' ವಿದ್ವಾಂಸರಿಂದ ಹಿಡಿದು ಜನಸಾಮಾನ್ಯರ ವರೆಗೂ ರುಚಿಸಬಹುದಾದ ಹರಟೆಗಳ ಸಂಗ್ರಹವಾಗಿದೆ.

'ಮೋಡಕಾ ಬಾಜಾರ' ಅಂದರೆ ಒಂದು ಅರ್ಥದಲ್ಲಿ ತಿಪ್ಪೆ; ಇನ್ನೊಂದರ್ಥದಲ್ಲಿ ಕಸದಿಂದ ರಸ ಮಾಡಬಹುದಾದ ಖನಿ. ಮೋಡಕಾ ಬಾಜಾರದಿಂದ ಏನು ಸಂಗ್ರಹಿಸಬೇಕು ಮತ್ತು ಅದರಿಂದ ಏನು ಮಾಡಬಹುದು ಎಂಬ ದೃಷ್ಟಿ-ಕಣ್ಣು ಅವಶ್ಯಬೇಕು.

ಸಂಸ್ಕೃತ ಸುಭಾಷಿತ, ಭಗವದ್ಗೀತೆಯ ಅವತರಣಿಕೆ, ಇಂಗ್ಲಿಷ್ ಸಾಹಿತ್ಯದಿಂದ ಅವತರಣಿಕೆ, ಗಾದೆಮಾತು ಮತ್ತು ಚುಟುಕು ಕಥೆಗಳನ್ನು ಆಯ್ದು, ಅವುಗಳನ್ನು ಜೋಡಿಸಿ, ಅವುಗಳ ಬಗ್ಗೆ ಪರ ಮತ್ತು ವಿರುದ್ಧ ವಿಚಾರಗಳನ್ನು ಕೆರಳಿಸುವ ರಸವಂತಿಕೆ ಎನ್ಕೆಯವರ ಹರಟೆಗಳ ಸಾಮರ್ಥ್ಯ. ಎನ್ಕೆಯವರ ಮಾತುಗಾರಿಕೆ ಹೇಗೆ ಸುಶ್ರಾವ್ಯ ಮತ್ತು ರೋಚಕವೋ ಹಾಗೆ ಅವರ ಹರಟೆಗಳ ಸರಳ ಶೈಲಿ-ಪೆಪ್ಸಿ ಪಾಕದಿಂದ ಕೂಡಿದೆ. 'ದ್ರಾಕ್ಷಾಪಾಕ' 'ನಾರಿಕೇಳಪಾಕ' ಎಂಬವು ಸಂಸ್ಕೃತ ಕಾವ್ಯ ಶೈಲಿಗೆ ಮಾತ್ರ ಸೀಮಿತ ಶಬ್ದಗಳು.

ಪಂಪನಿಂದ ಬೇಂದ್ರೆಯವರ ವರೆಗೆ ಅನೇಕ ಕವಿಗಳ ಅವತರಣಿಕೆಗಳನ್ನು ಎನ್ಕೆಯವರು ತಮ್ಮ ಹರಟೆಗಳಲ್ಲಿ ಬಳಸಿದ್ದಾರೆ. ಈ ಅವತರಣಿಕೆಗಳ ಸಾಹಿತ್ಯಿಕ ಅರ್ಥ ಪ್ರಚಾರದಲ್ಲಿದೆ. ಆದರೆ ಅವುಗಳನ್ನು ಜನಸಾಮಾನ್ಯರು ಯಾವ ರೀತಿಯಿಂದ ಅರ್ಥಮಾಡಿಕೊಂಡು ಬಳಸಬಹುದು ಎಂಬುದನ್ನು ಸೂಚಿಸಿದ್ದಾರೆ, 'ನೆನೆವುದೆನ್ನ ಮನಂ ಬನವಾಸಿ ದೇಶಮಂ' ಎಂಬ ಮಹಾಕವಿ ಪಂಪನ ಕಾವ್ಯೋಕ್ತಿ-'ನೆನೆವುದೆನ್ನ ಮನಂ ಬಿಸಿದ್ವಾಸಿ ದೇಶಮಂ' ಎಂದು ವಿನೋದೋಕ್ತಿಯಾಗಿ ಪರಿಣಮಿಸುತ್ತದೆ. ಮಹಾಕಾವ್ಯೋಕ್ತಿ— ವಿನೋದೋಕ್ತಿ ಆಗಬೇಕೆ? ಹೀಗಾಗುವುದು ಉನ್ನತಿ ಕಾರಕವೋ? ಅವನತಿಕಾರಕವೋ ಎಂಬುದು ಇಲ್ಲಿಯ ಪ್ರಶ್ನೆ. 'ಉಪಮಾ ಕಾಲಿದಾಸಸ್ಯ' ಎಂಬುದರಲ್ಲಿಯ ಉಪಮಾ ಎಂಬ ಶಬ್ದಕ್ಕೆ ಉಪ್ಪಿಟ್ಟು ಎಂದು ಎನ್ಕೆ ಹರಟೆ ಓದಿದವರು ಅರ್ಥ ಹೇಳಿಬಿಟ್ಟರೆ ಏನು ಗತಿ? ಆದುದರಿಂದ ಮಹಾಕಾವ್ಯೋಕ್ತಿಗಳನ್ನು ಗಂಭೀರವಾಗಿ ಆಲೋಚಿಸಿ, ಅದರ ಅಂತರಾಳವನ್ನು ಅರ್ಥಮಾಡಿಕೊಳ್ಳಬೇಕು ಎಂಬ ನೀತಿಯನ್ನು ಬಹಳ ನವುರಾಗಿ ಎನ್ಕೆಯವರು ಬೋಧಿಸಿದ್ದಾರೆ. ಇದೇ ರೀತಿ ಭಗವದ್ಗೀತಾ ವಚನಗಳ ಅಪಾರ್ಥ ಮಾಡುವವರು, ಶ್ರೀಕೃಷ್ಣ ದಿನದಲ್ಲಿ ಎಷ್ಟು ಸಲ ದಾಡಿಮಾಡಿಕೊಳ್ಳುತ್ತಿರಬೇಕು, ಶ್ರೀಕೃಷ್ಣನಿಗೆ ಹದಿನಾರು ಸಾವಿರ ಹೆಂಡಂದಿರಿದ್ದು ಏನು ಉಪಯೋಗ ಮೊದಲಾದ ವಿಷಯಗಳು ತರುಣ ಮಂಡಲಗಳಲ್ಲಿ ಹೇಗೆ ನಗೆಯ ಬುಗ್ಗೆ ಚಿಮ್ಮಿಸುತ್ತವೆ. ಎಂಬುದನ್ನು ಎನ್ಕೆಯವರು ವಿವರಿಸಿದ್ದಾರೆ. ಎನ್ಕೆಯವರು ಭಗವದ್ಗೀತಾ ಉಪಾಸಕರಾಗಿರುವುದರಿಂದ ಅವರ ಹರಟೆ

ಗಳಲ್ಲಿ ಭಗವದ್ಗೀತೆಯ ಬಗ್ಗೆ ವ್ಯಕ್ತವಾದ ಅಭಿಪ್ರಾಯ ಅವರವಲ್ಲ; ಇನ್ನೊಬ್ಬರ ಕಣ್ಣಿನಿಂದ ಭಗವದ್ಗೀತೆ ನೋಡಿದ್ದಾರೆ ಎಂದು ಹೇಳಬೇಕಾಗುತ್ತದೆ.

'ದಿ ಲಕ್ಷ್ಮೀ ಮದ್ರಾಸ್ ಹೇರ್ ಕಟಿಂಗ ಸಲೂನ', 'Oh! if I were a monkey, ಜನ್ನ — ಘನ್ನ, ಸಾಂಗತ್ಯ — ಅತ್ಯಗತ್ಯ, ಟೀಲಿನ್ ಆದ್ದರಿಂದ — ನಾಲಿಗೆಯಿಂದ ಸವುಕೊಂಡು ಬಿಟ್ರೆ ಹೋಗಿಬಿಡುತ್ತದೆ, ಮೊದಲಾದ ನೂರಾರು ವಿಡಂಬನೆಯ ವಾಕ್ಯಗಳು ಎನ್ಕೆಯವರ ಹರಟೆಗಳಲ್ಲಿ ಸಿಗುತ್ತವೆ. ವಿಡಂಬನೆಯಿಂದ ಜನರ ಅಜ್ಞಾನವನ್ನು ಬಹಿರಂಗಪಡಿಸುವ ಆಶಯ ಎನ್ಕೆಯವರ ಹರಟೆಗಳಿಗಿದೆ.

ಬೆಂಗಳೂರಿನ ಮಹಿಳೆಯರು ಬಸ್ಸಿನಿಂದ ಇಳಿಯಬೇಕಾದ ಬಾಗಿಲಿನಿಂದಲೇ ಹತ್ತುವ ರೀತಿ; ಚಾಕು ಕತ್ತರಿ ಮಾರುವ ಹೆಣ್ಣುಮಕ್ಕಳು — ಮಳ್ಳರ ಕಿಸೆಗೆ ಕತ್ತರಿ ಮತ್ತು ಹೃದಯಕ್ಕೆ ಚೂರಿ ಹಾಕುವ ಬಗೆ; ಬಸ್ಸಿನಲ್ಲಿ ಕೈ ಎತ್ತಿ ನಿಂತ ದ್ರೌಪದಿಸುಂದರಿಯರ ಕಷ್ಟ; ಶೂರ್ಪಣಖಿ 'ಮೂಗಿಲಿ'ಯಾದ ಪ್ರಸಂಗ ಎನ್ಕೆಯವರ ಹರಟೆಗಳಿಂದಲೇ ಓದಿ ಸವಿಯಬೇಕು.

ಸಂಸ್ಕೃತದಲ್ಲಿ ಶೃಂಗಾರ ಎಂದು ಮನ್ನಣೆ ಪಡೆದಿರುವ ಮಾತುಗಳನ್ನು ಕನ್ನಡದಲ್ಲಿ ಹೇಳಿದರೆ ಅಶ್ಲೀಲವೆನಿಸಿಕೊಳ್ಳುವ ಚಮತ್ಕಾರವನ್ನು ಎನ್ಕೆಯವರು ವಿವರಿಸಿದ್ದಾರೆ. "ಮೈತುಂಬ ಜೇಬುಗಳಿದ್ದ ಬಟ್ಟೆ ಪುರುಷರು ಧರಿಸುವುದು ಸದ್ಯದ ಕಾಲಕ್ಕೆ ಅವಶ್ಯ ಏಕೆಂದರೆ ರೇಶನ್ ತರುವುದಕ್ಕೆ ಅನುಕೂಲವಾಗುತ್ತದೆ" ಎಂಬ ಒಂದು ವಿನೋದದ ವಾಕ್ಯ 'ಜೇಬುಗಳು' ಎಂಬ ಹರಟೆಯಲ್ಲಿ ಬಂದಿದೆ. ಆದರೆ ಈ ವಿನೋದದ ಹಿಂದೆ ಒಂದು ಕಟು ಸತ್ಯ ಅಡಗಿದೆ. ಇಂದಿನ ರೇಶನ್ ಯುಗದಲ್ಲಿ ಜನರಿಗೆ ಎಷ್ಟು ಕಡಿಮೆ ರೇಶನ್ ಕೊಡುತ್ತಾರೆ ಎಂಬುದರ ದಾರುಣತೆ ವ್ಯಕ್ತಪಡಿಸುವುದು ಲೇಖಕನ ಉದ್ದೇಶವಾಗಿದೆ.

'ಚಟವೆಂದರೆ ಸಲುಗೆಯ ನಾಯಿ ಇದ್ದಂತೆ': 'ಮೋಪಕಾ ಬಾಜಾರು ಅನಾಥ ಬಾಲಿಕಾಶ್ರಮ ಇದ್ದಂತೆ': 'ಮನುಷ್ಯನೆಂದರೆ ಚಟಗಳ ಒಂದು ಮೂರ್ತಿ' 'ಕ್ಯಾಮೆರಾ ತೂಗಾಡುವ ಜನಿವಾರ': ಮೊದಲಾದ ವಾಕ್ಯ: 'ಹಲ್ಮಿಡಿ, ಹಲ್ಕಡಿ' 'ಬರ್ಲಿನ್ - ಹೋಗ್ಲಿನ್'; 'ಗೋರಿಂಗ್ - ಬೋರಿಂಗ್' 'ಆ - ಜಂ, ಈ - ಜಂ, ಮ್ಯೂಜಂ' ಮೊದಲಾದ ಪ್ರಾಸ ಶಬ್ದಗಳ ರೀತಿ ಎನ್ಕೆ ಹರಟೆಗಳಲ್ಲಿ ಕಾವ್ಯ ವಿನೋದದ ಎಳೆಗಳನ್ನು ನೇಯುತ್ತದೆ 'ಕಾವ್ಯದ ಕಾರಖಾನೆ' ಏಕಾಂಕ ಬರೆದ ಎನ್ಕೆಯವರ ಕೈ ಕಾವ್ಯ ಬರೆಯುವ ಸಾಧನೆಯನ್ನು ಸಾಕಷ್ಟು ಮಾಡಿದೆ. ಅವರು ಆಧುನಿಕ ಕಾವ್ಯ ಶೈಲಿಗಳ ಜೊತೆಗೂ ವಿವಿಧ ಛಂದಸ್ಸುಗಳಲ್ಲಿ ಅನೇಕ ಕವನಗಳನ್ನು ಬರೆದಿದ್ದಾರೆ ಎಂಬುದು ಗಮನಾರ್ಹವಾದ ವಿಷಯ. 'ಮುಂಗಾಲ್‌ಪುಟಿಗೆ'ಯ

ಮುಂದಾಳುಗಳು' ಎಂಬ ಒಂದು ಹರಟೆ ಪುಟ ೧೫೫ ಕೊನೆಯ ಗದ್ಯವಾಕ್ಯ ವೃಂದವನ್ನು —

"ಹೀಗೆ ಸ್ವಾಮಿ,
ಹೀಗಿದೆ ಪ್ರಪಂಚ!
ಒಬ್ಬರನ್ನೊಬ್ಬರು ತಿಂದು ಬದುಕುವ ಜಗತ್ತಿನಲ್ಲಿ
'ಬಾಯಿ ಇದ್ದವನೆ ಬದುಕಿದ'
ಎಂಬ ಮಾತು ಸುಳ್ಳಲ್ಲ.
ಹಿರಿಯರ ಗಾದೆಯ ಮಾತು ಎಂದರೆ ಸುಮ್ಮನೆಯಲ್ಲ!
ಬಾಯಿ ಇದ್ದವನು ಎಂದರೆ
ಮುಂಗಾಲ್‌ಪುಟಗೆಯ ಮುಂದಾಳೇ —
ಎಂದು ಮತ್ತೆ ಹೇಳಬೇಕೇ ?
ಧರ್ಮಕ್ಷೇತ್ರ, ಕುರುಕ್ಷೇತ್ರ, ಕಾಶೀಕ್ಷೇತ್ರ
ಎಲ್ಲಾ ಕ್ಷೇತ್ರಗಳಲ್ಲಿಯೂ —
ಬಾಯಿ ಇದ್ದವರೆ – ಅರ್ಥಾತ್ ಕುಮಾರವ್ಯಾಸನ ಶಬ್ದಗಳಲ್ಲಿ —
ನಾಲಗೆಯ ಸೀರರೇ ನಿಜವಾದ ವೀರರು !
ಕಾರಣ ಎಲ್ಲಾ ಕ್ಷೇತ್ರಫಲ, ಘನಫಲ —
ಮುಂಗಾಲ್‌ಪುಟಗೆಯಿಂದಲೆ"



ಹೀಗೆ ಮುದ್ರಿಸಿದರೆ ಯಾವುದೇ ಆಧುನಿಕ ಕವಿತೆಯ ಹಂತವನ್ನು ಎನ್ಕೆ ಬರವಣಿಗೆ ತಲುಪಿಬಿಡುತ್ತದೆ. ಹೀಗಾಗಿ ಎನ್ಕೆಯವರ ಹರಟೆ ಓದುವಾಗ — ಇದೇನು ಸಣ್ಣ ಕಥೆಯೋ ? ಭಾವಗೀತೆಯೋ ? ಯಾವುದೋ ನಾಟಕದೊಳಗಿನ 'ಸ್ವಗತ ಭಾಷಣವೇ' ಎಂಬ ವಿಚಾರ ಮೂಡಿ ವಾಚಕನು ತಲೆದೂಗುವಂತೆ ಆಗುತ್ತದೆ. ಹೀಗಿದೆ ಎನ್ಕೆ ಹರಟೆಗಳ ಮಾಹಾತ್ಮ್ಯ. 'ಸ್ಟೆಪ್ನೀ ಪತ್ನಿ ಯಾಕಿರಬಾರದು?' ಎಂಬ ವಾಕ್ಯ ಓದಿ ಅರಳಿದ ಮುಖ 'ಸ್ಟೆಪ್ನೀ ಪತಿ ಯಾಕಿರಬಾರದು?' ಎಂಬ ವಾಕ್ಯ ಓದಿದಾಗ ಅರಳದ ಮುಖ ಚಿಂತಾಕ್ರಾಂತವಾಗುತ್ತದೆ. ಹೀಗೆ ಎನ್ಕೆಯವರ ಹರಟೆಗಳಲ್ಲಿ ವೈಚಾರಿಕತೆಯೂ ಸಾಕಷ್ಟಿದೆ.

ಎನ್ಕೆಯವರ ಹರಟೆಗಳಲ್ಲಿ– ಮಿಂಚಿನ ಕಲ್ಪನಾವಿಲಾಸ; ರಸವಂತಿಕೆಯ ಸಂಜೀವನಸ್ಪರ್ಶ ಮತ್ತು ವಿಷಯದ ಹುದುವಿನಲ್ಲಿ ವಿಚಾರದ ಹೂರಣವನ್ನು ತುಂಬುವ ಶಕ್ತಿ ಇದೆ ಎಂದು 'ಮೋಡಕಾ ಬಾಜಾರ' ಓದಿ ನಾನಂತೂ ಮನಗಂಡಿರುವೆ. ರಸಿಕ ವಾಚಕರಿಗೆ ನನ್ನಂತೆಯೇ ಅನುಭವ ಬಂದೀತು ಎಂದು ಭಾವಿಸುವೆ. ಆದರೆ ಕನ್ನಡನಾಡಿನಲ್ಲಿ, 'ಸಾಹಿತ್ಯರಸದ ರುಚಿಯನ್ನು ಕನ್ನಡಿಗರಿಗಿಂತ ಕನ್ನಡದ ಕಿಸುನೆಲದ ಗೆದ್ದಲಿಗಳೇ ಹೆಚ್ಚು ಅರಿತಿನೆಯೇನೋ'ಎಂಬ ಒಂದು ವ್ಯಂಗ್ಯ ವಿಡಂಬನೆಯ ವಾಕ್ಯ 'ಮೋಡಕಾ ಬಾಜಾರ' ಹರಟೆಯಲ್ಲಿ ಬಂದಿದೆ. ಎನ್ಕೆ ಸಾಹಿತ್ಯದ ಬಗ್ಗೆ ಹೀಗಾಗಬಾರದು.

ನಾನಿಕಾಕಾ : ಎನ್ಕೆಬರೆಹ/೪೫೩

# 'ಕನ್ನಡ ಸಾಹಿತ್ಯ ವಾಹಿನಿ'

ಎಸ್. ಪಿ. ಪಾಟೀಲ

ಕನ್ನಡ ಸಾಹಿತ್ಯ ವೈವಿಧ್ಯಮಯವೂ, ವೈಶಿಷ್ಟ್ಯಪೂರ್ಣವೂ, ಸಂಪದ್ಭರಿತವೂ ಆಗಿದೆ. ಸುಮಾರು ಸಾವಿರದ ಐನೂರು ವರ್ಷಗಳ ಇತಿಹಾಸದಲ್ಲಿ ಕಾಲಮಾನ ಪರಿಸರದ ಹಿನ್ನೆಲೆಯಲ್ಲಿ ತನ್ನ ವಸ್ತು ನಿರೂಪಣೆಯನ್ನು ಮಾರ್ಪಡಿಸಿಕೊಳ್ಳುತ್ತ ಜೀವಂತಿಕೆಯನ್ನು ತೋರುತ್ತ ಬಂದುದಾಗಿದೆ. ಹೀಗೆ ಶ್ರೀಮಂತ ಪರಂಪರೆಯನ್ನು ಹೊಂದಿದ ಕನ್ನಡ ಸಾಹಿತ್ಯದ ರೂಪು-ರೇಷೆ-ಚರಿತ್ರೆಯನ್ನು ನಿರೂಪಿಸುವ ಪ್ರಯತ್ನ ಇತ್ತೀಚೆಗಷ್ಟೇ ನಡೆದುದನ್ನು ಕಾಣುತ್ತೇವೆ. ಬೆಂಗಳೂರು, ಮೈಸೂರು ವಿಶ್ವವಿದ್ಯಾಲಯಗಳು ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ಯೋಜನೆಯನ್ನು ಹಮ್ಮಿಕೊಂಡು ಯಶಸ್ವಿಯಾಗಿ ಹೊರತರುತ್ತಿರುವದು ತುಂಬ ಸಂತೋಷದ ಸಂಗತಿ. ವಿಶ್ವವಿದ್ಯಾಲಯಗಳಂಥ ಸಂಸ್ಥೆಗಳು ನಾಡಿನ ಪಂಡಿತರ ನೆರವಿನಿಂದ ಕಾರ್ಯರೂಪಕ್ಕೆ ತರುತ್ತಿರುವ ಪ್ರಯತ್ನ ಇದಾಗಿದೆ. ವೈಯಕ್ತಿಕ ನೆಲೆಯಲ್ಲಿ ನಿಂತು ನೋಡಿದರೆ ಈಗಾಗಲೇ ತುಂಬ ಪ್ರಸಿದ್ಧವಾದ ಡಾ. ರಂ ಶ್ರೀ. ಮುಗಳಿ ಅವರ "ಕನ್ನಡ ಸಾಹಿತ್ಯ ಚರಿತ್ರೆ" ನಮ್ಮ ಕಣ್ಣೆದುರು ನಿಲ್ಲುತ್ತದೆ. ಹಿರಿಯ ವಿದ್ವಾಂಸರೂ, ವಿಮರ್ಶಕರೂ ಆದ ಡಾ. ಮುಗಳಿ ಅವರು ಹಲವಾರು ವರ್ಷಗಳ ವರೆಗೆ ಪರಿಶ್ರಮಪಟ್ಟು "ಕನ್ನಡ ಸಾಹಿತ್ಯ ಚರಿತ್ರೆ"ಯನ್ನು ರಚಿಸಿದುದಲ್ಲದೆ, ಇಂಥ ಪ್ರಯತ್ನವನ್ನು ಮುಂದೆ ಕೈಕೊಳ್ಳಬಹುದಾದವರಿಗೆ ಮಾರ್ಗದರ್ಶಿ ಸೂತ್ರಗಳನ್ನು ವಿವರಿಸುವ ರೀತಿಯಲ್ಲಿ ಕೃತಿರಚನೆಮಾಡಿ ಆದರ್ಶ ಮಾರ್ಗವನ್ನು ಸೂಚಿಸಿದ್ದಾರೆ. ಆದರೆ ಡಾ. ರಂ. ಶ್ರೀ. ಮುಗಳಿ ಅವರ ಕೃತಿ ಪ್ರಕಟವಾಗುವ ಪೂರ್ವದಲ್ಲಿಯೇ ಅವರ ಶಿಷ್ಯರಾದ ಎನ್ಕೆ ಅವರಿಂದ "ಕನ್ನಡ ಸಾಹಿತ್ಯ ವಾಹಿನಿ" ಪ್ರಕಟವಾಗಿ ೧೯೫೭ ರಲ್ಲಿಯೇ ಅದರ ಎರಡನೆಯ ಮುದ್ರಣದ ಹೊಸ ಆವೃತ್ತಿಯೂ ಬೆಳಕಿಗೆ ಬಂದುದು ಐತಿಹಾಸಿಕ ಮಹತ್ವವುಳ್ಳ ಸಂಗತಿಯಾಗಿದೆ. ಅದರ ಮುನ್ನುಡಿಯಲ್ಲಿ ಅವರೇ ಹೇಳಿಕೊಂಡಿರುವಂತೆ "ಬಿ. ಎ., ಎಂ. ಎ. ಪರೀಕ್ಷೆಯ ವಿದ್ಯಾರ್ಥಿಗಳ ಉಪಯೋಗಕ್ಕಾಗಿಯೆಂದೇ ಇದನ್ನು ಬರೆಯಲಾಗಿದೆ." ಅಂದು ಉಪಲಬ್ಧವಾದ ಆಕರ ಸಾಹಿತ್ಯದ ಹಿನ್ನೆಲೆಯಲ್ಲಿ, ನಿರ್ದಿಷ್ಟ ಉದ್ದೇಶವನ್ನು ಇಟ್ಟುಕೊಂಡು ಹೊರಟ ಕೃತಿಯ ಉಪಯುಕ್ತತೆ ಅದರಾಚೆಯೂ ಇರುವುದನ್ನು ಮನಗಾಣಬಹುದಾಗಿದೆ.

ಕನ್ನಡ ಸಾಹಿತ್ಯದ ಸಂಪೂರ್ಣ ಪರಿಚಯಕ್ಕೆ ಕನ್ನಡನಾಡಿನ ತಿಳುವಳಿಕೆಯೂ ಅಗತ್ಯವಾದದ್ದೇ. ಆದುದರಿಂದ ಕನ್ನಡದ ಪ್ರಾಚೀನತೆ, ವೇದ ಪುರಾಣಗಳಿಂದ, ಪ್ರಾಚೀನ ಅವಶೇಷಗಳಿಂದ ತಿಳಿದುಬರುವದನ್ನು ಎನ್ಕೆ ಸಂಕ್ಷೇಪವಾಗಿ ಸಂಗ್ರಹಿಸಿದ್ದಾರೆ. ಶಾಸನಗಳ ಆಧಾರದಿಂದ ಕರ್ನಾಟಕದ ಐತಿಹಾಸಿಕತೆ-ರಾಜಕೀಯ ವಂಶಗಳ ಹಿನ್ನೆಲೆಯನ್ನು ನಿರೂಪಿಸಿದ್ದಾರೆ. ಕನ್ನಡಭಾಷೆ ಸಾಹಿತ್ಯಿಕ ರೂಪ ಪಡೆಯುವ ಮುಂಚೆಯೇ ಕನ್ನಡ ಭಾಷೆ ಅಸ್ತಿತ್ವದಲ್ಲಿದ್ದಿರಬೇಕು. ಗ್ರೀಕ್ ನಾಟಕದಲ್ಲಿ ಉಲ್ಲೇಖಿತ ಕನ್ನಡ ಮಾತು ಹಾಗೂ 'ಕವಿರಾಜಮಾರ್ಗ' ಉಲ್ಲೇಖಿಸುವ 'ಪುರಾತನ ಕವಿಗಳ್' ಎಂಬ ಅಂಶಗಳನ್ನು ಪರಿಗಣಿಸಿ "...ಕನ್ನಡ ಕುಲವು ಆರ್ಯಪೂರ್ವವೆಂದೂ, ಕನ್ನಡ ನುಡಿಯು ವೇದೋಪನಿಷತ್ತಿನ ಕಾಲದಿಂದಲೇ ಪ್ರಸಿದ್ಧವೆಂದು ತೋರಿಸಲು ಸಾಧ್ಯವಿದೆಯೆಂದೂ, ಕನ್ನಡನಾಡು ರಾಮಾಯಣ - ಮಹಾಭಾರತ ಕಾಲದಿಂದ ಸುಪ್ರಸಿದ್ಧವಾಗಿತ್ತೆಂದು, ಕನ್ನಡ ಸಾಹಿತ್ಯವು ಕ್ರಿ. ಶ. ೫ ನೆಯ ಶತಮಾನದಿಂದಲೇ ಪರಿಪುಷ್ಟವಾಗಿ ಬೆಳೆಯುತ್ತ ಬಂದಿತ್ತೆಂದೂ..." ನಿರ್ಧರಿಸಿದ್ದಾರೆ

'ಕನ್ನಡ ಸಾಹಿತ್ಯದ ಸ್ವರೂಪ'ವನ್ನು ವಿವರಿಸುವ ಎರಡನೆಯ ಅಧ್ಯಾಯದಲ್ಲಿ 'ಕನ್ನಡ ಸಾಹಿತ್ಯದ ಧ್ಯೇಯವು ಅಧ್ಯಾತ್ಮ ಪ್ರೇರಿತ' ಎಂಬುದನ್ನು ಲೇಖಕರು ಸರಿಯಾಗಿ ಗ್ರಹಿಸಿದ್ದಾರೆ. ಶೃಂಗಾರರಸಪ್ರಧಾನ ಕಾವ್ಯವನ್ನು ಬರೆಯಹೊರಟ ರತ್ನಾಕರವರ್ಣಿಯೂ ಸಹ 'ಅಧ್ಯಾತ್ಮವೇ ನಿಚಿತ ಪ್ರಯೋಜನವೆನಗೆ' ಎಂದುದನ್ನು ಉದಹರಿಸಿದ್ದಾರೆ. ತರುವಾಯ ವ್ಯಾಕರಣ, ಅಲಂಕಾರ, ಛಂದಶ್ಶಾಸ್ತ್ರ, ನಿಘಂಟು, ವೈದ್ಯಶಾಸ್ತ್ರ, ಪಾಕಶಾಸ್ತ್ರ, ಜ್ಯೋತಿಶ್ಶಾಸ್ತ್ರ, ಗಣಿತಶಾಸ್ತ್ರ, ಕಾಮಶಾಸ್ತ್ರ, ಸ್ವರಶಾಸ್ತ್ರ, ರತ್ನಶಾಸ್ತ್ರ, ಸಾಮುದ್ರಿಕಶಾಸ್ತ್ರ, ಬಣ್ಣಗಾರಿಕೆ ಮೊದಲಾದ ವೈವಿಧ್ಯಪೂರ್ಣ ಜನೋಪಯೋಗಿ ಶಾಸ್ತ್ರಗ್ರಂಥಗಳನ್ನು ಉಲ್ಲೇಖಿಸಿದ್ದಾರೆ. ಕನ್ನಡ ಭಾಷೆಯ ಅವಸ್ಥಾಭೇದಗಳು — ಎಂಬಲ್ಲಿ ಕನ್ನಡ ಪಂಡಿತರು ಕೈಕೊಂಡು ಮುಂದಿಟ್ಟ ಕನ್ನಡ ಸಾಹಿತ್ಯ ಚರಿತ್ರೆಯ ವಿಭಾಗಕ್ರಮ ಚರ್ಚಿತವಾಗಿದೆ. ಜೈನ ಯುಗ, ವೀರಶೈವ ಯುಗ, ಬ್ರಾಹ್ಮಣ ಯುಗ; ಕ್ಷಾತ್ರ ಯುಗ, ಮತಪ್ರಚಾರಕ ಯುಗ, ಸಾರ್ವಜನಿಕ ಯುಗ, ಮತ್ತು ಆಧುನಿಕ ಯುಗ; ಪೂರ್ವದ ಹಳಗನ್ನಡ, ಹಳಗನ್ನಡ-ನಡುಗನ್ನಡ-ಹೊಸಗನ್ನಡ– ಈ ಬಗೆಯ ವಿಭಾಗಕ್ರಮಗಳ ಬಗ್ಗೆ ಆಯಾ ಪಂಡಿತರು ಮಂಡಿಸಿದ ಅಭಿಪ್ರಾಯಗಳನ್ನು ಚರ್ಚಿಸಿ – "ಸಾಹಿತ್ಯವು ಮಾನವನ ಹೃದಯ ಬುದ್ಧಿಗಳ ಅಗಮ್ಯ ಮತ್ತು ಅಸಾಧಾರಣ ಶಕ್ತಿಗಳಿಂದ ನಿರ್ಮಾಣವಾಗುವದರಿಂದ, ಒಂದು ನಿಶ್ಚಿತ ರೂಪವನ್ನು ಹೇಳುವದು ಕಠಿಣವಿದೆ" ಎನ್ನುವಲ್ಲಿ ವಿಷಯದ ಜಟಿಲತೆ ಸ್ಪಷ್ಟವಾಗುತ್ತದೆ.

' ಕನ್ನಡ ಸಾಹಿತ್ಯದ ರೂಪ ಲಕ್ಷಣಗಳು" ಎಂಬ ಮೂರನೆಯ ಅಧ್ಯಾಯದಲ್ಲಿ ಕನ್ನಡ ಸಾಹಿತ್ಯಕ್ಕೆ ಧರ್ಮವೇ (ಮತ ಪ್ರಚಾರ) ಸ್ಫೂರ್ತಿಯ ಸೆಲೆ

ಎಂಬುದಾಗಿ ಸೂಚಿಸಿದ್ದಾರೆ. ಸಾಹಿತ್ಯವಷ್ಟೇ ಅಲ್ಲ ಕರ್ನಾಟಕ ಸಂಸ್ಕೃತಿಯೇ ಧರ್ಮದ ಬುನಾದಿಯ ಮೇಲೆ ನಿಂತುದಾಗಿದೆ. ಅದರೊಂದಿಗೆ ಕನ್ನಡ ಸಾಹಿತ್ಯದಲ್ಲಿ ಕಾಣುವ ಪ್ರತಿಭಟನಾಶಕ್ತಿ ಅಥವಾ ತನ್ನತನವನ್ನು ಕಾಯ್ದುಕೊಳ್ಳುವ ಶಕ್ತಿ ಎಂಬಲ್ಲಿ ಲೇಖಕರ ಸೂಕ್ಷ್ಮದೃಷ್ಟಿ ಗೋಚರವಾಗುತ್ತದೆ. ಸಾಹಿತ್ಯವನ್ನು ಕೇವಲ ಧರ್ಮಮೂಲದೃಷ್ಟಿಯಿಂದ, ಕಾವ್ಯಾಂಶಗಳ ದೃಷ್ಟಿಯಿಂದ ಮಾತ್ರ ನೋಡುತ್ತ ಆಸ್ವಾದಿಸುತ್ತ ಬಂದ ಸಮಗೆ ಅದರಲ್ಲಿಯ ಪ್ರತಿಭಟನಾಶಕ್ತಿಯತ್ತ ಗಮನ ಹರಿಸುವ ಲೇಖಕರ ಪ್ರಯತ್ನ ಮಹತ್ವಪೂರ್ಣವಾಗಿ ತೋರುತ್ತದೆ. ತೀರ ಇತ್ತೀಚಿನ ಬಂಡಾಯ, ದಲಿತ ಸಾಹಿತಿಗಳ ಮಾತು ಕೃತಿಗಳಲ್ಲಿ ಮಾತ್ರ ಕಾಣಬಹುದೆಂದು ಭಾವಿಸುವ ಪ್ರತಿಭಟನಾಶಕ್ತಿ ಪ್ರಾಚೀನ ಕನ್ನಡ ಸಾಹಿತ್ಯದಲ್ಲಿಯೂ ಇರುವದನ್ನು ತಿಳಿದು ಕನ್ನಡ ಸಾಹಿತ್ಯದ ವೈಶಿಷ್ಟ್ಯಕ್ಕಾಗಿ ಹೆಮ್ಮೆಯನಿಸುವದು ಪ್ರತಿಭಟನಾಶಕ್ತಿಯನ್ನು ಗುರುತಿಸಿದ ಲೇಖಕರು ಅದನ್ನೇ ತುಸು ನಯವಾಗಿ ಹೇಳುವ ಉದ್ದೇಶದಿಂದ 'ತನ್ನತನವನ್ನು ಕಾಯ್ದುಕೊಳ್ಳುವ ಶಕ್ತಿ' ಎಂದು ಕರೆದಿದ್ದಾರೆ.

ಕನ್ನಡ ಸಾಹಿತ್ಯವು ೧. ಕಾವ್ಯ, ೨. ವಚನಗಳು, ೩. ಕೀರ್ತನೆಗಳು, ೪. ನಾಟಕಗಳು, ೫. ಶಾಸ್ತ್ರಗಳು ಎಂದೂ, ಕಾವ್ಯಗಳಲ್ಲಿ (ಅ) ಚಂಪೂಕಾವ್ಯ, (ಬ) ರಗಳೆ, (ಕ) ಷಟ್ಪದಿ, (ಡ) ಸಾಂಗತ್ಯಗಳೆಂದೂ ಚಂಪೂವಿನಲ್ಲಿ ಪುರಾಣ ಮತ್ತು ಲೌಕಿಕ ಎಂದು ಶಾಖೋಪಶಾಖೆಯಾಗಿ ಬೆಳೆದುದನ್ನು ಒಂದು ಚೌಕಟ್ಟಿನಲ್ಲಿಟ್ಟು ಅಭ್ಯಸಿಸಲು ಅನುಕೂಲವಾಗುವಂತೆ ಮಾಡಿದ್ದಾರೆ. ಇಲ್ಲಿ ಕೃತಿಗಳನ್ನು ಸಾಹಿತ್ಯ ಪ್ರಕಾರವನ್ನು ಗಮನದಲ್ಲಿರಿಸಿಕೊಂಡು ಅವುಗಳ ವಿವೇಚನೆ ನಡೆದಿದೆ. ಕವಿಯ ಕಾಲ, ಕೃತಿಸಂಖ್ಯೆ ಅವುಗಳ ಬಗೆಗಿನ ವಾದ-ವಿವಾದಗಳಿಗೆ ಇಳಿಯದೆ ಕೃತಿಯ ಮಹತ್ವವನ್ನು ಸ್ಪಷ್ಟಪಡಿಸುವತ್ತ ಲೇಖಕರ ಗಮನ ಕೇಂದ್ರೀಕೃತವಾಗಿದೆ. ಕೊನೆಯಲ್ಲಿ 'ಕನ್ನಡ ಸಾಹಿತ್ಯದ ಪೋಷಕರು' ಎಂಬ ಹತ್ತನೆಯ ಅಧ್ಯಾಯದಲ್ಲಿ ವಿದ್ಯಾಪಕ್ಷಪಾತಿಗಳೂ,ಸಾಹಿತ್ಯ ಸಂಸ್ಕೃತಿ ಕಲೆಗಳ ಸಂರಕ್ಷರೂ ಆದ ಕನ್ನಡನಾಡಿನ ಸಮ್ರಾಟರು, ಮಂತ್ರಿಮಾನ್ಯರು ನೀಡಿದ ಪ್ರೋತ್ಸಾಹವನ್ನು ಸಂಕ್ಷೇಪವಾಗಿ ವಿವೇಚಿಸಿದ್ದಾರೆ.

ಡಾ. ರಂ. ಶ್ರೀ. ಮುಗಳಿ ಅವರ ಸಾಹಿತ್ಯಚರಿತ್ರೆ ಹಾಗೂ ಬೆಂಗಳೂರು ಮೈಸೂರು ವಿಶ್ವವಿದ್ಯಾಲಯಗಳ ಸಾಹಿತ್ಯ ಚರಿತ್ರೆಯ ಸಂಪುಟಗಳನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಎನ್ಕೆ ಅವರ ಕನ್ನಡ 'ಸಾಹಿತ್ಯ ವಾಹಿನಿ'ಯನ್ನು ನೋಡಬೇಕಾಗಿಲ್ಲ. ಇವೆಲ್ಲ ಇನ್ನೂ ರೂಪತಾಳುವ ಪೂರ್ವದಲ್ಲಿ ಅದರಲ್ಲಿ ಕಾಲೇಜ, ಮಹಾವಿದ್ಯಾಲಯದಂಥ ಸಂಸ್ಥೆಗಳಲ್ಲಿ ಬೋಧನಾ ಕಾರ್ಯದಲ್ಲಿ ತೊಡಗದೆ, ಸ್ವಪರಿಶ್ರಮದಿಂದ ಕಲೆಹಾಕಿದ ವಿವರವನ್ನು ಅವರು ನಿರೂಪಿಸುವ ಕ್ರಮ ಅದರಲ್ಲಿಯ ಕೆಲವು

ವಿಶೇಷತೆಗಳು ಸಾಹಿತ್ಯ ಚರಿತ್ರೆಯ ವಿದ್ಯಾರ್ಥಿಗಳಿಗೆ ಅಭಿಮಾನಾಸ್ಪದ ಸಂಗತಿಗಳಾಗಿವೆ ಎಂಬುದರಲ್ಲಿ ಸಂದೇಹವಿಲ್ಲ. ಇಷ್ಟೇ, ಎಷ್ಟೋ ಸಂದರ್ಭದಲ್ಲಿ ನಮಗೆ ತಿಳಿದ ಯಾವುದೋ ಕೃತಿಯ ಬಗ್ಗೆ ವಿವರಣೆ ಇನ್ನೂ ಹೆಚ್ಚಿಗೆ ಬೇಕೆನಿಸುವವಂತೆ ಆಗಾಗ ಅನ್ನಿಸುವದುಂಟು. ಆದರೆ ಸೀಮಿತ ಪರಿಧಿಯನ್ನು ಇರಿಸಿಕೊಂಡ ಲೇಖಕರಿಗೆ ಅದನ್ನು ವಿಸ್ತರಿಸಲು ಇಲ್ಲಿ ಅವಕಾಶವಿಲ್ಲ. ಸಂಕ್ಷೇಪತೆ, ಸಾರಸಂಗ್ರಹ, ಸೂಚಕತೆಗಳೇ ಇದರ ಸೂತ್ರಗಳು. ಇನ್ನೊಂದು ಅಂಶವನ್ನು ನಾವು ಇಲ್ಲಿ ಗಮನಿಸಬಹುದು. ಸಾಹಿತ್ಯ ಚರಿತ್ರಕಾರ ವಿಸ್ತಾರವಾದ ಕನ್ನಡ ಸಾಹಿತ್ಯವನ್ನು ಇಡಿಯಾಗಿ ಪರಿಶೀಲಿಸುವದು ಕಷ್ಟಕರ. ಕಣ್ಣಾರೆ ಕಾಣದ ಕೃತಿಗಳ ಬಗ್ಗೆಯೂ ಬರೆಯಬೇಕಾಗುತ್ತದೆ. ಹೀಗಾದುದಕ್ಕೆ ಉದಾಹರಣೆಯಾಗಿ ಧರ್ಮಪರೀಕ್ಷೆಯನ್ನು ಬರೆದ ಬ್ರಹ್ಮಶಿವನೂ, ಸಮಯ ಪರೀಕ್ಷೆಯನ್ನು ಬರೆದ ವೃತ್ತವಿಲಾಸನೂ (ಪುಟ ೪೪) ಎಂಬ ಉಲ್ಲೇಖವನ್ನು ನೋಡಬಹುದು. ಬ್ರಹ್ಮಶಿವ (ಸಮಯಪರೀಕ್ಷೆ.) ವೃತ್ತವಿಲಾಸ (ಧರ್ಮಪರೀಕ್ಷೆ) ದ ಕೃತಿಗಳು ಅದಲು ಬದಲಾಗಿರುವದನ್ನು ಕಾಣುತ್ತೇವೆ.

ಒಟ್ಟಿನಲ್ಲಿ ಸಂಕ್ಷೇಪದಲ್ಲಿ ಕನ್ನಡ ಸಾಹಿತ್ಯದ ಪರಿಚಯವನ್ನು ಪಡೆಯಬಯಸುವ ವಿದ್ಯಾರ್ಥಿಯಾಗಿರಲಿ ಅಥವಾ ಸಾಮಾನ್ಯನಾಗಿರಲಿ, ಅವನಿಗೆ ತೀರ ಉಪಯುಕ್ತವಾದ ಕೃತಿ "ಕನ್ನಡ ಸಾಹಿತ್ಯವಾಹಿನಿ". ಕನ್ನಡ ಸಾಹಿತ್ಯದ ಪರಿಚಯ ಮಾಡಿಕೊಡುವದರೊಂದಿಗೆ ಅದರ ಪ್ರೇರಣೆ ಧ್ಯೇಯ ಧೋರಣೆ ಸನ್ನಿವೇಶ ಈ ಮೊದಲಾದ ಅಂಶಗಳತ್ತಲೂ ಅದು ದೃಷ್ಟಿ ಹರಿಸಿರುವದು ಅಂದಿನ ಕಾಲದ ಹಿನ್ನೆಲೆಯಲ್ಲಿ ವೈಶಿಷ್ಟ್ಯಪೂರ್ಣವಾಗಿದೆ. ಅದರಿಂದಾಗಿಯೇ ಅದು ಇಂದಿಗೂ ತನ್ನ ಮೌಲ್ಯವನ್ನು ಕಾಪಾಡಿಕೊಂಡು ಬಂದಿದೆ.

ನಾನಿಕಾಕಾ : ಎನ್ಕೆಬರೆಹ/೪೫೭

# "ಕುಮಾರವ್ಯಾಸ ನಿಘಂಟು"

## ಡಾ. ವಾಮನ ಬೇಂದ್ರೆ

ಮಹಾಕವಿ ಕುಮಾರವ್ಯಾಸ ರೂಪಕಸಾಮ್ರಾಜ್ಯದ ಚಕ್ರವರ್ತಿ. ಅವನು ರಚಿಸಿದ ಗದುಗಿನ ಭಾರತ ಅತ್ಯಂತ ಜನಪ್ರಿಯವಾದ ಮತ್ತು ಕಂಠದಿಂದ ಕಂಠಕ್ಕೆ ಹೋಗುವಾಗ ಅನೇಕ ಪಾಠಾಂತರಗಳನ್ನು ಹೊಂದುತ್ತ ಹೋದ ಮಹಾಕಾವ್ಯ. ಈ ಕಾವ್ಯದ ಶುದ್ಧ ಪ್ರತಿಯನ್ನು ಪ್ರಕಟಿಸುವುದು ಕರ್ನಾಟಕದ ಯಾವ ವಿಶ್ವ ವಿದ್ಯಾಲಯಕ್ಕೂ ಅಥವಾ ಸಾಹಿತ್ಯ ಪರಿಷತ್ತಿಗೂ ಇನ್ನೂ ವರೆಗೆ ಸಾಧ್ಯವಾಗಿಲ್ಲ. ಗವರ್ನಮೆಂಟ್ ಓರಿಯಂಟಲ್ ಲಾಯಬ್ರರಿ ಸಿರೀಜ್‌ದಲ್ಲಿ ೧೯೧೩ ರಲ್ಲಿ ಪ್ರಕಟಗೊಂಡ ಕುಮಾರವ್ಯಾಸ ಮಹಾಭಾರತ ಸಂಪುಟಗಳೇ ನಮ್ಮೆಲ್ಲರ ಅಭ್ಯಾಸಕ್ಕೆ ಆಧಾರ. ಅನೇಕ ಸಾಹಿತಿಗಳು ಕುಮಾರವ್ಯಾಸ ಭಾರತವನ್ನು ತಮ್ಮ ತಮ್ಮ ದೃಷ್ಟಿಯಿಂದ ಸಂಪಾದನೆ ಮಾಡಿ ಪ್ರಕಟಿಸಿದ್ದರೂ ಅವರೆಲ್ಲರ ಅಭಿಪ್ರಾಯ – "ಕುಮಾರವ್ಯಾಸ ಮಹಾಭಾರತದ ಪರಿಷ್ಕೃತ ಮತ್ತು ಪಾಠಾಂತರಗಳನ್ನು ಶಾಸ್ತ್ರ ಶುದ್ಧವಾಗಿ ನಿಶ್ಚಯಿಸಿದ ಹತ್ತೂ ಪರ್ವಗಳು ಮುದ್ರಣಗೊಳ್ಳುವುದು ಅವಶ್ಯ" ಎಂದು. ಈ ಕಾರ್ಯ ಇಂದಿನವರೆಗೆ ಆಗಿಲ್ಲ. ಹೀಗಿರುವಾಗ ಕುಮಾರವ್ಯಾಸ ಭಾರತದ ನಿಘಂಟು ಅಥವಾ ಸಂದರ್ಭ ಗ್ರಂಥಗಳನ್ನು ರಚಿಸುವುದು ಮಹಾಕಷ್ಟದ ಕೆಲಸ.

ಅನೇಕ ಸಂಪಾದಕರು ಕನ್ನಡ ಕಾವ್ಯಗಳನ್ನು ಸಂಪಾದಿಸುತ್ತಾರೆ. ತಮಗೆ ತೋಚಿದ ಕೆಲವು ಪಾಠಗಳನ್ನು ಸ್ವೀಕರಿಸುತ್ತಾರೆ, ಕೆಲವು ಪಾಠಗಳನ್ನು ಅಡಿ ಟಿಪ್ಪಣಿಯಾಗಿ ಕೊಡುತ್ತಾರೆ. ಕಾವ್ಯದ ಕೊನೆಗೆ ಒಂದು ಶಬ್ದ ಕೋಶ ಕೊಡುವುದೂ ಒಂದು ಪದ್ಧತಿ. ಇದರಲ್ಲಿ ಸರ್ವಸಾಮಾನ್ಯವಾಗಿ ಅರ್ಥವಾಗುವ ಎಲ್ಲ ಶಬ್ದಗಳ ಅರ್ಥ ಕೊಟ್ಟು, ಸಂದಿಗ್ಧವಾದ ಶಬ್ದಗಳಿಗೆ ಅರ್ಥ ಕೊಡದೆ ಕಾವ್ಯಾಭ್ಯಾಸಿಗಳಿಗೆ ಸಂಕಟದಲ್ಲಿ ಕೆಡವುತ್ತಾರೆ. ಕುಮಾರವ್ಯಾಸ ಭಾರತದ ಸಂಪಾದಕರೂ ಕೆಲವರು ಇದೇ ರೀತಿ ಮಾಡಿದ್ದಾರೆ. ಎನ್ಕೆಯವರು ಮಾತ್ರ ಕುಮಾರವ್ಯಾಸ ಭಾರತದ ಸಂಪಾದನೆಗೆ ಕೈಹಾಕಲಿಲ್ಲ. ಆದರೆ ೧೯೬೬ ರಿಂದ ೧೯೮೨ ರ ವರೆಗೆ ಕುಮಾರವ್ಯಾಸ ಭಾರತವನ್ನು ಆಧರಿಸಿ 'ಕುಮಾರವ್ಯಾಸ ಮತ್ತು ಕೃಷ್ಣಕಥೆ', 'ಕುಮಾರವ್ಯಾಸ

ಭಾರತ' (ಗದ್ಯಸಾರ), 'ಕುಮಾರವ್ಯಾಸ ನಿಘಂಟು', 'ಗದುಗಿನ ಗಂಡುಕವಿ ಕುಮಾರವ್ಯಾಸ' ಮತ್ತು 'ಕನ್ನಡ ವ್ಯಾಸ ಭಾರತ (ಕುಮಾರವ್ಯಾಸ ಮತ್ತು ತಿಮ್ಮಣ್ಣರ ಭಾರತಗಳ ಗದ್ಯಸಾರ) ಮಹಾಸಂಪುಟ' ಹೀಗೆ ಐದು ಗ್ರಂಥಗಳನ್ನು ಪ್ರಕಟಪಡಿಸಿದ್ದಾರೆ. ೧೯೭೭ ರಲ್ಲಿ ಪ್ರಕಟಗೊಂಡ ಕೃತಿ 'ಕುಮಾರವ್ಯಾಸ ನಿಘಂಟು'. ಎನ್ಕೆಯವರ ಈ ಎಲ್ಲ ಗ್ರಂಥಗಳಲ್ಲಿ ಅವರು ಮಾಡಿದ ಕುಮಾರವ್ಯಾಸ ಭಾರತದ ಆಳವಾದ ಅಭ್ಯಾಸ, ಅವನನ್ನು ಮೆಚ್ಚಿ ಆನಂದಪಟ್ಟ ರೀತಿ ಮತ್ತು ಮೂಲಭಾರತ ವನ್ನು ಓದಿ ನೋಡುವ ಕುತೂಹಲವನ್ನು ಕೆರಳಿಸುವ ಬಗೆ ನಾವು ಕಾಣಬಹುದು.

'ಕುಮಾರವ್ಯಾಸ ನಿಘಂಟು'ವಿನಲ್ಲಿ ೭೦ ಪುಟಗಳ ಶಬ್ದಕೋಶ, ೫೮½ಪುಟಗಳ ಪದಪ್ರಯೋಗ ಪಟ್ಟಿ, ೧೩ ಪುಟಗಳ ಜಾಣ್ಣುಡಿ-ನಾಣ್ಣುಡಿಗಳು (ಪ್ರತಿ ಪರ್ವ ಅನುಸರಿಸಿ) ಮತ್ತು ೭ ಪುಟಗಳಲ್ಲಿ ಕುಮಾರವ್ಯಾಸ ಭಾರತದಲ್ಲಿ ವರ್ಣಿಸಲಾಗಿದ್ದ ಆಯುಧ, ಜಟ್ಟಿ ಗಾಳಿಗದ ರೀತಿ, ವಿವಿಧ ಬಲೆ, ವಿವಿಧ ವಾದ್ಯ, ಭಾಷಾ ವೈಶಿಷ್ಟ್ಯದ ವಿಶಿಷ್ಟ ಪ್ರಯೋಗ ಮತ್ತು ದೇಶ ವರ್ಣನೆ ಉಲ್ಲೇಖಗಳು—ಎಂಬುದಾಗಿ ವಿಭಜನೆ ಇದೆ. ಇದರಲ್ಲಿಯ ಕೊನೆಯ ಏಳು ಪುಟಗಳು ಜನಸಾಮಾನ್ಯರ ಕುತೂಹಲವನ್ನು ಕೆರಳಿಸಿದರೆ, ಜಾಣ್ಣುಡಿ ಮತ್ತು ನಾಣ್ಣುಡಿಗಳು ಕುಮಾರವ್ಯಾಸಪ್ರಿಯರಿಗೆ ರಸ ಕವಳದ ಆನಂದವನ್ನು ಕೊಡುತ್ತವೆ. ಪದಪ್ರಯೋಗ ಪಟ್ಟಿ ಕುಮಾರವ್ಯಾಸನ ವ್ಯಕ್ತಿ ವೈಶಿಷ್ಟ್ಯವನ್ನು ನೆನಪಿಗೆ ತಂದುಕೊಡುತ್ತದೆ. ಶಬ್ದಕೋಶ ಮಾತ್ರ ಅಭ್ಯಾಸಿ ಗಳಿಗೆ ಸಹಾಯದ ಬದಲು ಅನಾನುಕೂಲ ಮನಸ್ಥಿತಿಯನ್ನು ನಿರ್ಮಾಣ ಮಾಡು ತ್ತದೆ ಎಂದು ಕಂಡು ಬರದೇ ಇರದು.

ಕುಮಾರವ್ಯಾಸ ನಿಘಂಟುವಿನ ಪ್ರಾರಂಭಕ್ಕೆ ಪ್ರಕಾಶಕರು ಜಾಹೀರು ಪಡಿಸಿದ— 'ಪ್ರಪ್ರಥಮ ಶಬ್ದಕೋಶ', 'ಏಕೈಕ ಕೈಗನ್ನಡಿ', 'ಕನ್ನಡ ವಿದ್ಯಾರ್ಥಿ ಗಳಿಗೆ ಅತ್ಯಂತ ಉಪಯುಕ್ತ ನಿಘಂಟು'–ಎಂಬ ಮೂರೂ ಉಕ್ತಿಗಳು ಅತಿಶಯೋಕ್ತಿ ದೋಷದಿಂದ ಮತ್ತು ಕೇವಲ ವ್ಯಾಪಾರ ಕೌಶಲ್ಯ ಪ್ರಚಾರ ನೀತಿಯಿಂದ ಕೂಡಿವೆ. ಈ ಪುಟವನ್ನು ಓದಿ 'ಕುಮಾರವ್ಯಾಸ ನಿಘಂಟು' ಕೊಂಡವರಿಗೆ ಅಸಮಾಧಾನ ವಾಗುವುದು ನಿಶ್ಚಿತ.

ಕುಮಾರವ್ಯಾಸನ ಮಾರ್ಗದಲ್ಲಿ ನಡೆಯುವಾಗ ಎಡಹುವುದು ಸಹಜ "ವಿದ್ವಾಂಸರು ನನ್ನ ತಪ್ಪುಗಳನ್ನು ತೋರಿಸಿಕೊಟ್ಟು ಯೋಗ್ಯಮಾರ್ಗದರ್ಶನ ಮಾಡಿಕೊಟ್ಟಲ್ಲಿ ನಾನು ಕೃತಜ್ಞನಾಗಿ ಉಳಿಯುವೆ" ಎಂದು ಎನ್ಕೆಯವರು ತಮ್ಮ ಮುನ್ನಡಿಯಲ್ಲಿ ವಿನಯಪೂರ್ವಕವಾಗಿ ಬರೆದದ್ದು ಎಲ್ಲರೂ ಮೆಚ್ಚುವಂಥ ಮಾತು. ಕುಮಾರವ್ಯಾಸ ಮಹಾಭಾರತದಲ್ಲಿ ಅನೇಕ ಪಾರಾಯಣಗಳನ್ನು ಮಾಡಿ ಅದನ್ನು ಯಾರು ಸಾಕಷ್ಟು ಮುಖೋದ್ಗತ ಮಾಡಿಕೊಂಡಿರುವರೋ ಅವರಿಗೆ ಎನ್ಕೆಯವರ

ಈ ಗ್ರಂಥ ಉಪಯೋಗಕ್ಕೆ ಬರುತ್ತದೆ. ಅವರು ತಮ್ಮ, ಎನ್ಕೆಯವರ ಕುಮಾರವ್ಯಾಸ ಅಭ್ಯಾಸದ ತೌಲನಿಕ ಮೌಲ್ಯವನ್ನು ಕಟ್ಟಬಹುದು. ಮಾನ್ಯ ಶಂ. ಬಾ. ಜೋಶಿ, ಬೆಟಗೇರಿ ಕೃಷ್ಣಶರ್ಮ, ಕೆ. ಜಿ, ಕುಂದಣಗಾರ ಮತ್ತು ದ. ರಾ. ಬೇಂದ್ರೆಯವರ ಸಹಾಯದಿಂದ ಎನ್ಕೆಯವರು ಶಬ್ದಗಳಿಗೆ, ಪಾರಿಭಾಷಿಕ ಪದಗಳಿಗೆ ಅರ್ಥ ಹಚ್ಚಿದ್ದರಲ್ಲಿ ವೈಶಿಷ್ಟ್ಯವನ್ನು ಅಥವಾ ಭಿನ್ನತೆಯನ್ನು ಪರಿಣತ ಪ್ರಜ್ಞೆಯುಳ್ಳವರು ಕಾಣುವ ಸಾಧ್ಯತೆ ಸಾಕಷ್ಟು ಇದೆ.

'ಕನ್ನಡ ವಿದ್ಯಾರ್ಥಿಗಳಿಗಾಗಿ ಈ ಕುಮಾರವ್ಯಾಸ ನಿಘಂಟು ರಚಿಸಲಾಗಿದೆ' ಎಂಬ ಉದ್ದೇಶವನ್ನು ಅನುಲಕ್ಷಿಸಿ ಈ ಗ್ರಂಥದ ವಿಫಲತೆಯನ್ನು ಅನಿವಾರ್ಯವಾಗಿ ಹೇಳಲೇಬೇಕಾಗುತ್ತದೆ. ಈ ನಿಘಂಟುವನ್ನು ರಚಿಸುವಾಗ ಎನ್ಕೆಯವರು ೧) ಕುಮಾರವ್ಯಾಸ ಭಾರತದ ಯಾವುದೇ ಒಂದೇ ಒಂದು ಮುದ್ರಣವನ್ನು ಬಳಸಬೇಕಾಗಿತ್ತು. ಇದರಿಂದ ಶಬ್ದ ಯಾವ ಸಂಧಿ ಮತ್ತು ಯಾವ ಪದ್ಯದಲ್ಲಿ ಬಂದಿದೆ ಎಂಬುದನ್ನು ಮತ್ತು ಪದ ಪ್ರಯೋಗವನ್ನು ಕೊಡಲು ಅನುಕೂಲವಾಗುತ್ತಿತ್ತು. ಪದಪ್ರಯೋಗದಿಂದಲೇ ಯಾವಾಗಲೂ ಶಬ್ದದ ಅರ್ಥ ಖಚಿತವಾಗುತ್ತದೆ. ೨) ಆಯ್ಕೆ ಮಾಡಿದ ಎಲ್ಲ ಶಬ್ದಗಳನ್ನು ವರ್ಣಾನುಕ್ರಮದಲ್ಲಿ ಜೋಡಿಸಬೇಕಾಗಿತ್ತು. ೩) ಶಬ್ದಗಳ ಮತ್ತು ಅರ್ಥಗಳ ಪುನರಾವೃತ್ತಿ ತಪ್ಪಿಸಬೇಕಾಗಿತ್ತು. ೪) ಒಂದು ಪದದ ಜೊತೆಗೆ ಪದಪುಂಜವೇ ಶಬ್ದವೆಂದು ಸೇರ್ಪಡೆಯಾಗಬಾರದಿತ್ತು. ಹೀಗಾಗಿದ್ದರೆ ವಿದ್ಯಾರ್ಥಿಗಳಿಗೆ ಈ ನಿಘಂಟು ನಿಶ್ಚಿತವಾಗಿಯೂ ಉಪಕಾರಿಯಾಗುತ್ತಿತ್ತು. ಅನೇಕ ಸುಲಭವಾದ ಶಬ್ದಾರ್ಥಗಳನ್ನು ಬಿಟ್ಟು ಸ್ವಲ್ಪ ಕಠಿಣವಾದ ಶಬ್ದಗಳಿಗೆ ಅರ್ಥವನ್ನು ಕೊಟ್ಟು ನಿಘಂಟುವಿನ ಪುಟ ಸಂಖ್ಯೆ ಕಡಿಮೆ ಮಾಡಿದ್ದರೂ ಇದರ ಮೌಲ್ಯ ಮತ್ತು ಸಹಾಯ ಹೆಚ್ಚಾಗುತ್ತಿತ್ತು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಎನ್ಕೆಯವರ ರಸಿಕ ಕಾವ್ಯಾಭ್ಯಾಸದ ಒಂದು ಸೂಚಿ ಎಂದು ಈ 'ಕುಮಾರವ್ಯಾಸ ನಿಘಂಟು' ವನ್ನು ನಾವು ಕರೆಯಬಹುದು. ಒಂದು ಒಳ್ಳೆಯ ಕೆಲಸ ಸಂಕಲಿತವಾಗಿದೆ. ಆದರೆ ಇದಕ್ಕೆ ಒಂದು ಶಾಸ್ತ್ರೀಯ ಸುಸಂಬಂಧತೆಯನ್ನು ಕೊಟ್ಟು ಔಪಯೋಗಿಕತೆಯನ್ನು ಹೆಚ್ಚಿಸಿದ್ದಾದರೆ ಈ ಕೃತಿಯ ಮೌಲ್ಯ ನಿಶ್ಚಿತವಾಗಿ ಬೆಳೆಯದೆ ಇರದು.

# 'ಗದುಗಿನ ಗಂಡುಕವಿ ಕುಮಾರವ್ಯಾಸ'

## ಸರೋಜ ಲೋಕೇಶ್

ಕುಮಾರವ್ಯಾಸ ಕನ್ನಡ ಸಾಹಿತ್ಯದಲ್ಲಿ ಹಲಗೆ ಬಳಪವ ಪಿಡಿಯದೊಂದಗ್ಗಳಿಕೆಯ ಧೀಮಂತ ಕವಿ. ಈತನ 'ಕರ್ನಾಟಕ ಭಾರತ ಕಥಾಮಂಜರಿ' 'ಕನ್ನಡದ ಹೊಸಹುಟ್ಟಿನಲ್ಲಿ ಹೊಸ ಮಾರ್ಗಕ್ಕೆ ಹೊಸ ಶಕ್ತಿಗೆ ದಿಕ್ಸೂಚಿ'ಯಾದ ಉಜ್ವಲ ಕೃತಿ. ಇಂತಹ ಒಬ್ಬ ಪ್ರತಿಭಾವಂತ ಕವಿಯನ್ನು ಹಾಗೂ ಅವನ ಕೃತಿಯನ್ನು ಹಲವು ಸ್ತರಗಳಲ್ಲಿ ಸಮಗ್ರವಾಗಿ ಸಮೀಕ್ಷಿಸಿದ ಕೀರ್ತಿ ಎನ್ಕೆಯವರಿಗೆ ಸಲ್ಲುತ್ತದೆ.

ಎನ್ಕೆಯವರು ಕುಮಾರವ್ಯಾಸನನ್ನು ಕುರಿತು ಆಳವಾಗಿ ಸಂಶೋಧನೆ ನಡೆಸಿದವರು. ಅವರ ಅಧ್ಯಯನದ ಫಲವಾಗಿ ನಾಲ್ಕು ಕೃತಿಗಳು ಪ್ರಕಟವಾಗಿವೆ. * 'ಕುಮಾರವ್ಯಾಸ ಮತ್ತು ಕೃಷ್ಣಕಥೆ' 'ಕುಮಾರವ್ಯಾಸ ಭಾರತ' 'ಕುಮಾರವ್ಯಾಸ ನಿಘಂಟು' ಮತ್ತು 'ಗದುಗಿನ ಗಂಡುಕವಿ ಕುಮಾರವ್ಯಾಸ'. ಕವಿ – ಕೃತಿ ದರ್ಶನದ ಈ ಗ್ರಂಥಗಳು ಎನ್ಕೆಯವರು ಸಾಹಿತ್ಯ ವಿಮರ್ಶೆಗೆ ನೀಡಿದ ಅಪೂರ್ವ ಕೊಡುಗೆಗಳಾಗಿವೆ. ಕುಮಾರವ್ಯಾಸನನ್ನು ಕುರಿತು ವ್ಯಾಪಕವಾಗಿ ಅಧ್ಯಯನ ಮಾಡಬಯಸುವವರಿಗೆ ಇವರ ಕೃತಿಗಳು ಅತ್ಯುಪಯುಕ್ತವಾಗಿವೆ.

'ಗದುಗಿನ ಗಂಡುಕವಿ ಕುಮಾರವ್ಯಾಸ' ಕುಮಾರವ್ಯಾಸ ಕವಿಯ ಹಾಗೂ ಅವನ ಕೃತಿಯ ದರ್ಶನಮಾಡಿಸುವ ಒಂದು ಉತ್ತಮ ಕೃತಿ. ಕನ್ನಡದ ಅಗ್ರಮಾನ್ಯ ಕವಿಯಾಗಿ, ಯುಗಪುರುಷನಾಗಿ ಪರಿಗಣಿತನಾಗಿದ್ದರೂ ಕವಿಯ ಕಾಲ, ದೇಶ, ಮತಗಳು ಇಂದಿಗೂ ವಿವಾದಾಸ್ಪದವಾಗಿವೆ. ಆ ನಿಟ್ಟಿನಲ್ಲಿ ಹಲವಾರು ವಿಮರ್ಶಕರ ಸಂಶೋಧನೆ ನಡೆದಿದೆ. ಎನ್ಕೆಯವರ ಸಂಶೋಧನೆಯ ಫಲವಾಗಿ ಹೊರಬಂದ ಪ್ರಸ್ತುತ ಗ್ರಂಥದ ಪರಿಚಯವಿಲ್ಲಿದೆ.

ಸಂಶೋಧಕರು ಗ್ರಂಥದ ಆರಂಭದಲ್ಲಿಯೇ 'ಕನಕನ ಕಿಂಡಿ'ಯ ಮುಖಾಂತರ ಕೃತಿಯ ಸಾಮಾನ್ಯಸ್ವರೂಪ, ಉದ್ದೇಶ, ಮಿತಿ – ಮೊದಲಾದವುಗಳ ಮೇಲೆ ಬೆಳಕು ಹಾಯಿಸಿದ್ದಾರೆ. ೧೯೬ ಪುಟಗಳ ಚಿಕ್ಕ ಗ್ರಂಥವಿದಾದರೂ, ಅದರ ಸೀಮಿತವಾದ ಚೌಕಟ್ಟಿನಲ್ಲಿಯೇ ಎನ್ಕೆಯವರು ಕವಿಯ ಕಾಲ, ದೇಶ, ಮತ,

* ಐದನೆಯದು "ಕನ್ನಡ ವ್ಯಾಸಭಾರತ (ಸಂ.)"

ಕಾವ್ಯಕಥಾವಾಹಿನಿ, ಶೈಲಿ 'ಪಾತ್ರಸೃಷ್ಟಿ, ದಿವ್ಯಪ್ರಜ್ಞೆ, ದರ್ಶನ, ಪ್ರತಿಭೆ, ಕಾವ್ಯಗುರುತ್ವ ಮೊದಲಾದವುಗಳನ್ನು ಸಂಗ್ರಹವಾಗಿ ಆದರೆ ಸಮರ್ಥವಾಗಿ ಕಂಡರಿಸಿದ್ದಾರೆ; ವಿಶ್ಲೇಷಿಸಿದ್ದಾರೆ.

'ಕುಮಾರವ್ಯಾಸನ ಕಾಲ' ವಿಭಾಗದಲ್ಲಿ ಕವಿಯ ಊರು ಮತ ಕೃತಿ ಸಂಖ್ಯೆಗಳ ಬಗೆಗೂ ಮಾಹಿತಿ ದೊರೆಯುತ್ತದೆ. ಕೋಳಿವಾಡದ 'ಪಾಟೀಲ' ಮನೆತನದವರನ್ನು ಖುದ್ದು ಸಂದರ್ಶಿಸಿ ಮಾಹಿತಿ ಸಂಗ್ರಹಿಸಿರುವ ಸಂಶೋಧಕರು ಇಂದಿಗೂ ಅಲ್ಲಿ ವಾಸವಾಗಿರುವ 'ತಿಪ್ಪನ ಗೌಡರು' ಕವಿಯ 'ಹನ್ನೊಂದನೆಯ ತಲೆಮಾರಿನವರು' ಎಂದು ಗುರುತಿಸುತ್ತಾರೆ. ಕುಮಾರವ್ಯಾಸನ ವಂಶಜರು ಕೋಳಿವಾಡ(ಕೋಳಿಂಗನ ಪುರ)ವನ್ನು ಕ್ರಯಕ್ಕೆ ಕೊಂಡ ಬಗೆಗೆ ಪ್ರಚಲಿತವಿರುವ ಕತೆಯನ್ನು ಉದ್ಧರಿಸಿ 'ಚಿನ್ನದ ಕೈ ಮಾಧವರಸಯ್ಯ, ಕೋಳಿವಾಡದ ಮೂಲ ಪುರುಷನಾದ ಬಗೆಯನ್ನು ಮನಗಾಣಿಸುತ್ತಾರೆ. ಎಸ್ಕೆಯವರು ಪುನರ್ರಚಿಸಿದ ಕುಮಾರವ್ಯಾಸನ ವಂಶವೃಕ್ಷದಿಂದ ಲಕ್ಕರಸನಿಗೆ 'ವೀರನಾರಾಯಣ'ನಲ್ಲದೆ ಕೃಷ್ಣರಸ, ಶಂಕರಸ, ತಿರುಮಲರಸ, ಅಶ್ವತ್ಥಾಮ – ರೆಂಬ ಇನ್ನೂ ನಾಲ್ಕು ಮಂದಿ ಮಕ್ಕಳಿದ್ದ ಅಂಶ ತಿಳಿದುಬರುತ್ತದೆ. ಇನ್ನೂ ಚರ್ಚಾಸ್ಪದವಾಗಿರುವ ಕವಿಯ ಕಾಲವನ್ನು ಇತರ ವಿಮರ್ಶಕರ ಅಭಿಪ್ರಾಯಗಳೊಡನೆ ಚರ್ಚಿಸುತ್ತ, ಪರಿಶೀಲಿಸುವ ಎಸ್ಕೆಯವರು ಡಾ. ಸದಾನಂದ ನಾಯಕರ 'ಮೂವರು ಕುಮಾರವ್ಯಾಸರಿದ್ದಿರಬಹುದೆ'ನ್ನುವ ಅಭಿಪ್ರಾಯದ ಜಾಡಿನಲ್ಲಿ ಸಾಗುತ್ತಾರೆ. "ಕುಮಾರವ್ಯಾಸ ಭಾರತದ ದಶಪರ್ವಗಳನ್ನು ಭಾಷಾಶೈಲಿಯ ದೃಷ್ಟಿಯಿಂದ ನೋಡಲಾಗಿ ಪ್ರಾರಂಭದ ಕೆಲವು ಭಾಗವು ಒಂದಿಷ್ಟು ಜಾಳಾಳಾಗಿ, ಶಿಥಿಲವಾಗಿ ಇರುವಂತೆ ಕಂಡುಬರುತ್ತದೆ. ಕುಮಾರವ್ಯಾಸನ ಭಾಷೆಯ ಬಿಗುಹು, ಕೆಚ್ಚು ಈ ಪ್ರಾರಂಭದ ಭಾಗದಲ್ಲ ಕಂಡುಬರುವದಿಲ್ಲ. ಸಂಭವಪರ್ವದಲ್ಲಿ ಸೇರಿದ ಮತ್ಸ್ಯಾದ್ಯವತಾರಗಳ ಚರಿತ್ರ ಭಾಗ ಮತ್ತು ಐರಾವತ ಕಥೆ ಇವು ಮೂಲ ಸಂಸ್ಕೃತ ಭಾರತದಲ್ಲಿ ಇಲ್ಲವಾದ್ದರಿಂದ ಇವು ಮತ್ತೊಬ್ಬ ಕವಿಯಿಂದ ರಚಿಸಲ್ಪಟ್ಟು ಕುಮಾರವ್ಯಾಸನ ಸಂಭವಪರ್ವದಲ್ಲಿ ಪ್ರಕ್ಷಿಪ್ತವಾಗಿ ಸೇರಿಕೊಂಡಿರಬಹುದು ಎಂಬ ಅನುಮಾನಕ್ಕೂ ಅವಕಾಶವಿದೆ. ಮುಂದೆ ಯುದ್ಧ ಪಂಚಕದ ವರ್ಣಕ ಶೈಲಿಯ ಬಿಗಿಬಂಧಗಳನ್ನು ನೋಡಿದರೆ ಆ ಕುಮಾರವ್ಯಾಸನೇ ಬೇರೆಯಿದ್ದಿರಬಹುದೇ?" ಎಂಬ ಶಂಕೆ ಅವರದು. ಕೋಳಿವಾಡದ ವಂಶಾವಳಿ, ಕವಿಯ ಭಾಷಾ ಶೈಲಿ ಮತ್ತಿತರ ಆಂತರಿಕ ಪುರಾವೆಗಳನ್ನು ಪರಿಗಣಿಸಿ "ಭಾಮಿನಿ ಷಟ್ಪದಿಯಲ್ಲಿಯೆ ಕಾವ್ಯರಚನೆ ಮಾಡಿದ ಭೀಮಕವಿ (ಸು. ೧೪೦೦) ಗಿಂತ ಮೊದಲಿಗನಾಗಿದ್ದನೆನ್ನಲು ಸಾಧ್ಯವಿದೆ" ಎಂದು ಕವಿಯ ಕಾಲದ ಬಗೆಗೆ ಅಭಿಪ್ರಾಯ ಮಂಡಿಸುತ್ತಾರೆ. ಕವಿಯ ಮತದ ಬಗೆಗೆ ಹೆಚ್ಚು ಚರ್ಚಿಸದೆ, "ಆತನ ಹಣೆಯ ಮೇಲೆ ಯಾವ ಲಾಂಛನವಿದ್ದರೇನು, ನಮಗೆ ನಮ್ಮ

ಈ ದಿವ್ಯಕವಿ ನಮ್ಮವನು; ಕನ್ನಡಿಗನು....." ಎಂಬ ಶ್ರೀ ಬಿ. ಎಂ. ಶ್ರೀಯವರ ಉದ್ಗಾರವನ್ನು ನೆನೆದಿರುವುದು ಯೋಗ್ಯವಾಗಿದೆ.

ಕುಮಾರವ್ಯಾಸ ಯಾವ ರಾಜಾಶ್ರಯದ ಹಂಗಿಗೂ ಒಳಗಾಗದ ಸ್ವತಂತ್ರ ಕವಿ; ಜನತಾ ಕವಿ. ಶಿವಶರಣರುಗಳಿಂದಲೂ, ಹರಿದಾಸರುಗಳಿಂದಲೂ ಉಕ್ಕಿ ಹರಿದ ಕಾವ್ಯಧಾರೆಯ ಭಕ್ತಿಯ ಹೊನಲಲ್ಲಿ ಮಿಂದು ಪುನೀತನಾಗಿದ್ದ ಭಕ್ತಕವಿ ಈತ. ಆದ್ದರಿಂದ ಸಹಜವಾಗಿಯೇ ಕಾವ್ಯದ ತುಂಬೆಲ್ಲ ಕೃಷ್ಣಭಕ್ತಿ ಓತಪ್ರೋತವಾಗಿ ಹರಿದಿದೆ. ಆತನ ಭಾರತ 'ಕೃಷ್ಣಕಥಾಮೃತ', 'ತುಳಸಿಯ ಉದಕ.' "ಈ ಗದುಗಿನ ಭಾರತದ ನಾಟಕಕ್ಕೆ ಶ್ರೀಕೃಷ್ಣನೆ ಸೂತ್ರಧಾರಿ. ಉಳಿದ ಪಾತ್ರಗಳು ಆತನ ಯಂತ್ರದ ಪಾಪೆಗಳು ಮಾತ್ರ. ಇಲ್ಲಿ ನಡೆಯುವುದೆಲ್ಲವೂ ಶ್ರೀಕೃಷ್ಣನ ಸಂಕಲ್ಪದ ಮೇರೆಗೆ". ಕವಿಯಾದರೂ ಕೇವಲ ಪದುಮನಾಭನ ಮಹಿಮೆಯನ್ನು ಮೆರೆಯುವ ಲಿಪಿಗಾರ! ಆದ್ದರಿಂದಲೇ "ತಿಳಿಯಹೇಳುವೆ ಕೃಷ್ಣಕಥೆಯನು....." ಎಂದು ತನ್ನ ಭಕ್ತಿಪಾರಮ್ಯವನ್ನು ಸೂಸುತ್ತಾನೆ.

ತಮ್ಮ ಸಂಶೋಧನಾ ಕಾಲದಲ್ಲಿ ಕುಮಾರವ್ಯಾಸನ ಮೇಲೆ ಬಂದಿರುವ ಎಲ್ಲ ಆವೃತ್ತಿಗಳನ್ನು ಪರಿಶೀಲಿಸಿರುವ ಲೇಖಕರು ಸಂಶೋಧನಾತ್ಮಕವಾಗಿ ಅಭ್ಯಾಸ ಮಾಡುವವರಿಗೆ ಕವಿಜೀವನದ ವಿವರವನ್ನೊಳಗೊಂಡ ಹಾಗೂ ಅವನ ದೇಸಿ, ಪ್ರಾಕೃತ, ಮರಾಠಿ ಭಾಷೆಯ ಬಗೆಗೆ ಅರ್ಥೈಸುವ, ಸಂಪಾದನಾಕಾರ್ಯವುಳ್ಳ, ಒಂದು ಸಮರ್ಥ ಆವೃತ್ತಿಯನ್ನು ಹೊರತರುವ ಅನಿವಾರ್ಯತೆಯನ್ನು ಒತ್ತಿ ಹೇಳುತ್ತಾರೆ.

'ಕುಮಾರವ್ಯಾಸನ ಕಾವ್ಯ ಕಥಾವಾಹಿನಿ'ಯಲ್ಲಿ ಗದುಗಿನ ಭಾರತದ ಕಥೆಯನ್ನು ಸಂಗ್ರಹಿಸಿ ನಿರೂಪಿಸಲಾಗಿದೆ. 'ಕುಮಾರವ್ಯಾಸನ ಶೈಲಿ ಮತ್ತು ದರ್ಶನ' ಹಾಗೂ 'ಕುಮಾರವ್ಯಾಸನ ಕೆಲವು ಮುಖ್ಯ ಪಾತ್ರಗಳು ಉಳಿದೆಲ್ಲ ಭಾಗಗಳಿಗಿಂತ ಸುದೀರ್ಘವಾಗಿ ಹರಡಿಕೊಂಡ ಲೇಖನಗಳು'.

ಶೈಲಿ ಮತ್ತು ದರ್ಶನಗಳ ವಿಭಾಗದಲ್ಲಿ ಕುಮಾರವ್ಯಾಸನ ಕಾವ್ಯತಂತ್ರ, ಕಥನ ಕೌಶಲ, ಸನ್ನಿವೇಶ ರಚನೆ, ರಸಾಲಂಕಾರಗಳು, ವರ್ಣನೆಗಳು, ಭಾಷೆಯ ಬಳಕೆ, ಅದರಲ್ಲಿಯ ದೇಸಿ ಬೆಡಗು, ಪಡೆನುಡಿಗಳ ಪೆಂಪು, ಆತನ ವ್ಯಾಕರಣ ವೈಚಿತ್ರ್ಯ – ಎಲ್ಲವೂ ಅಡಕವಾಗಿವೆ. "ಕುಮಾರವ್ಯಾಸನ ಸೃಜನಾತ್ಮಕ ಪ್ರಜ್ಞೆಯೊಂದಿಗೆ ಆತನ ಉಚ್ಚ ಸಂಸ್ಕಾರ, ಉದಾತ್ತ ಭಾವನೆಗಳು, ಅನುಭಾವದುನ್ನತಿಕೆ, ಆಧ್ಯಾತ್ಮ ವಿಚಾರಗಳೆಲ್ಲವೂ ಕವಿಯ ಶೀಲಲಕ್ಷಣಗಳಾಗಿ ಅವನ ಶೈಲಿಯ ನಾವೀನ್ಯತೆಗೆ ಪುಷ್ಟಿಕೊಟ್ಟಿವೆ" ಎಂಬುದನ್ನು ವಸ್ತು, ಭಾವ, ಭಾಷೆ, ಛಂದಸ್ಸು–

ಈ ಎಲ್ಲ ದಿಕ್ಕುಗಳಲ್ಲೂ ಸೋದಾಹರಣವಾಗಿ ಅವಲೋಕಿಸಿದ್ದಾರೆ. 'ಆತನ ಶೈಲಿಯ ಸೆಲ್ಲೆಯಲ್ಲಿ' ಹಾಸುಹೊಕ್ಕಾಗಿ ಬೆರೆತು ಮಿಂಚಿದ ಕವಿಯ ಪ್ರಜ್ಞೆ-ಪ್ರತಿಭೆಗಳನ್ನು ವಿಮರ್ಶಕರ ಪ್ರತಿಭೆ ಗುರುತಿಸಿದೆ.

'ಕುಮಾರವ್ಯಾಸನ ಕೆಲವು ಮುಖ್ಯ ಪಾತ್ರಗಳ'ಲ್ಲಿ ಕಾವ್ಯದ ಕೇಂದ್ರ ಪಾತ್ರವಾದ ಶ್ರೀಕೃಷ್ಣ, ಗಂಡುಕಪಿಯ 'ಗಂಡುಪಾತ್ರ'ವಾದ ದ್ರೌಪದಿ. 'ತ್ಯಾಗ ಸಿಂಹಾಸನದ ಚಕ್ರವರ್ತಿ'ಯಾಗಿ ಮೆರೆಯುವ ಕರ್ಣ, ಛಲದ ಬಲದಿಂದ ಆದಿಯಿಂದ ಅಂತ್ಯದವರೆಗೆ ಸೆಣಸಾಟ ನಡೆಸಿದ ದುರ್ಯೋಧನ, 'ಪುರುಷರ ಪುರುಷ' ಭೀಮ, ಭಕ್ತಿಯಬಲದಿಂದಲೆ ಶ್ರೀಕೃಷ್ಣನನ್ನು ಗೆದ್ದ ಭೀಷ್ಮ, 'ಚಾಪ ವಿದ್ಯಾಗುರು' ದ್ರೋಣ, 'ಕುರುಭೂಮಿಯಲ್ಲಿ ಮಿಂಚಿನಂತೆ ಸಂಚರಿಸಿ ಕೊನೆಗೆ ಅಸ್ತಂಗತನಾದ' ಅಭಿಮನ್ಯು- ಈ ಎಲ್ಲ ಪ್ರಧಾನ ಪಾತ್ರಗಳ ಗುಣ ಶೀಲಗಳ ವರ್ಣನೆಯಿದೆ.

ಆರನೆಯ ಭಾಗದಲ್ಲಿ ಲೇಖಕರು 'ಕುಮಾರವ್ಯಾಸನ ಸಮಕಾಲೀನ ಪ್ರಜ್ಞೆ', ಪ್ರತಿಭೆಗಳನ್ನು ಗುರುತಿಸಲು ಹವಣಿಸಿದ್ದಾರೆ. ಯುದ್ಧದ ಸಿದ್ಧತೆಗಳ ವರ್ಣನೆ ವಿಜಯನಗರ ಕಾಲದ ವಿದೇಶಿ ಪ್ರವಾಸಿ ನ್ಯೂನಿಜನು ಮಾಡಿರುವ ಸೈನ್ಯದ ಪಾಳೆಯದ ವರ್ಣನೆಗೆ ಸಮೀಪವೆನಿಸುತ್ತದೆ ಎಂದಿರುವುದು ಲೇಖಕರ ತೌಲನಿಕ ದೃಷ್ಟಿಯನ್ನು ಸಮರ್ಥಿಸುತ್ತದೆ. "ಕವಿಯ ಕಾವ್ಯದಲ್ಲಿ ಆ ಕಾಲದ ಆಚಾರ-ವಿಚಾರಗಳು, ಸಂಪ್ರದಾಯಗಳು, ಕೃಷಿ ವ್ಯವಸಾಯ, ವಾಣಿಜ್ಯ ವ್ಯವಹಾರ, ನಾಟಕ-ನಾಟ್ಯ, ಸಂಗೀತ, ರಾಜಸಭೆ, ರಾಜನೀತಿ, ಯುದ್ಧಭೂಮಿ, ಯುದ್ಧನೀತಿ, ಶಸ್ತ್ರಾಸ್ತ್ರಗಳು ಜೀವನದ ಸರ್ವಕ್ಷೇತ್ರಗಳೂ ಪ್ರತಿಬಿಂಬಿತವಾಗಿವೆ. ಮೂಲಭಾರತದಲ್ಲಿಲ್ಲದ ಯಾವುದೆ ಸಾಮಾಜಿಕ ಆಚಾರ-ವಿಚಾರಗಳ ಸಂದರ್ಭ ಕುಮಾರವ್ಯಾಸ ಭಾರತದಲ್ಲಿ ಬಂದಿದ್ದರೆ ಅವು ಸಮಕಾಲೀನ ದ್ಯೋತಕವಾಗಿವೆ. ಕವಿಯ ವರ್ಣನೆಗಳು, ಪಾತ್ರಗಳ ಸಂಭಾಷಣೆಗಳು, ನಾಣ್ಣುಡಿಗಳು, ಜಾಣ್ನುಡಿಗಳು, ಗಾದೆಗಳು, ಪಡೆನುಡಿಗಳು, ದೇಶಿನುಡಿಗಳು ಇವೆಲ್ಲವೂ ಸಮಕಾಲೀನ ಜೀವನಕ್ಕೆ ಕನ್ನಡಿ ಹಿಡಿಯುತ್ತವೆ" ಎಂಬುದನ್ನು ಸಾಧಾರವಾಗಿ ನಿರೂಪಿಸಿರುವ ಸಂಶೋಧಕರ ಪ್ರಯತ್ನವೂ ಸ್ತುತ್ಯಾರ್ಹ.

ಕೊನೆಯಲ್ಲಿ ಕವಿ ತನ್ನ ಕಾವ್ಯದ ಬಗೆಗೆ ಹೇಳಿಕೊಂಡ "ಅರಸುಗಳಿಗಿದು ವೀರ ದ್ವಿಜರಿಗೆ ಪರಮವೇದದ ಸಾರ......" ಪದ್ಯವನ್ನು ವಿವರವಾಗಿ ವಿಶ್ಲೇಷಿಸುತ್ತ, ಗದುಗಿನ ಭಾರತದಲ್ಲಿ ವೀರ, ವೇದದ ಸಾರ, ತತ್ವವಿಚಾರ, ಬುದ್ಧಿಗುಣ, ಶೃಂಗಾರ, ಅಲಂಕಾರಗಳೆಲ್ಲವೂ ಸಮರಸವಾಗಿ ಬೆರೆತು ಭಾರತ ಕಥಾಮಂಜರಿಯು 'ಕಾವ್ಯಕೆ ಗುರು' ಎಂಬ ವಾಣಿಗೆ ಪಾತ್ರವಾದ ಆಗ್ಗಳಿಕೆಯನ್ನು ಮನಗಾಣಿಸುತ್ತಾರೆ.

೪೬೪/ನಾನಿಕಾಕಾ: ಎನ್ಕೆಬರೆಹ

ಒಟ್ಟಿನಲ್ಲಿ ಗದುಗಿನ ಗಂಡುಕವಿ ಕುಮಾರವ್ಯಾಸನ ಎಲ್ಲ ಮುಖಗಳನ್ನು ಚೊಕ್ಕವಾಗಿ ವಿವೇಚಿಸುವ ಈ ಕೃತಿ ಎನ್ಕೆಯವರ ಅಧ್ಯಯನ, ಚಿಂತನದೃಷ್ಟಿಗಳಿಗೆ ಕನ್ನಡಿ ಹಿಡಿದಿದೆ. ಗ್ರಂಥವನ್ನು ಕವಿ ಕೃತಿದರ್ಶನಕ್ಕೆ 'ಕನಕನ ಕಿಂಡಿ ಮಾತ್ರ' ಎಂದಿದ್ದರೂ, 'ನೋಟ ನೇರವಾಗಿದ್ದರೆ ಕಿಂಡಿದರ್ಶನವೂ ಯಥಾವತ್ತಾದೀತು' ಎಂಬ ಆತ್ಮವಿಶ್ವಾಸವನ್ನು ಸುಳ್ಳಾಗಿಸದು. ಕವಿಯ ಬಗೆಗೆ ಸಂಗ್ರಹಿಸಿರುವ ಮಾಹಿತಿ, ಕಥಾಸಾರ, ಶೈಲಿಯ ವೈಶಿಷ್ಟ್ಯ, ಪಾತ್ರವಿಮರ್ಶೆ- ಇವೆಲ್ಲವೂ ಕವಿಯನ್ನೂ, ಕಾವ್ಯವನ್ನೂ ಅರ್ಥಮಾಡಿಕೊಳ್ಳಲು ಹೆಚ್ಚು ಸಹಾಯಕವಾಗಿವೆ.

# 'ಕನ್ನಡ ವ್ಯಾಸಭಾರತ'

ಸುರೇಂದ್ರ ದಾನಿ/ಸ. ಸ. ಮಾಳವಾಡ/ಎಂ. ಜಿ. ವೆಂಕಟೇಶಯ್ಯ

೧

ಕುಮಾರವ್ಯಾಸನಿಲ್ಲದ ಕನ್ನಡ ಕಡು ಬಡವನಂತೆ ಕಾಣುತ್ತದೆ. ಕನ್ನಡವನ್ನು ಬಲ್ಲೆ ಎಂದು ಹೇಳಿಕೊಳ್ಳುವ ಪ್ರತಿಯೊಬ್ಬನೂ ಕುಮಾರವ್ಯಾಸ ಭಾರತವನ್ನು ಯಥಾಶಕ್ತಿ ಓದಲೇಬೇಕು. ಕನ್ನಡ ಸಾಹಿತ್ಯ ಸರಸ್ವತಿಗೆ ಮುಕುಟ ಮಣಿಯಂತಿರುವ ಈ ಗ್ರಂಥವನ್ನು ಕುರಿತು ಅನೇಕರು ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಆದರೆ ಒಬ್ಬರೇ ಕುಮಾರವ್ಯಾಸನನ್ನು ಕುರಿತು ಅನೇಕ ಗ್ರಂಥ ಬರೆದವರ ಹೆಸರುಗಳನ್ನು ಪಟ್ಟಿಮಾಡ ಹೊರಟರೆ ಎಸ್ಕೆ ಅವರ ಹೆಸರು ಮೊದಲಿನಲ್ಲೇ ಬರುತ್ತದೆ. ಕುಮಾರವ್ಯಾಸನ ಬದುಕನ್ನು ಕಂಡ ಗದುಗಿನ ಸೀಮೆಯವರೇ ಆದ ಅವರು ಅವನನ್ನು ತಮ್ಮ ಆರಾಧ್ಯ ಕವಿಯನ್ನಾಗಿಸಿಕೊಂಡಿದ್ದಾರೆ. ಕುಮಾರವ್ಯಾಸನನ್ನು ಕುರಿತು ಈಗಾಗಲೇ ನಾಲ್ಕಾರು ಗ್ರಂಥಗಳನ್ನು ರಚಿಸಿರುವ ಅವರು ಇನ್ನೊಂದು ಬೃಹದ್‌ಗ್ರಂಥವನ್ನು ಹೊರತಂದಿದ್ದಾರೆ. ಅದೇ ಕನ್ನಡ ವ್ಯಾಸಭಾರತ.

ಕುಮಾರವ್ಯಾಸನು ಬರೆದ ಭಾರತ ಗದುಗಿನ ಭಾರತ, ದಶಪರ್ವ ಭಾರತ ಎಂದೂ ಪ್ರಸಿದ್ಧವಾಗಿದೆ. ಗದುಗಿನ ವೀರನಾರಾಯಣನ ಸನ್ನಿಧಾನದಲ್ಲಿ ಕುಳಿತು ಬರೆದಿರುವದರಿಂದ ಅದು ಗದುಗಿನ ಭಾರತವಾದರೆ ಭಾರತದ ಹತ್ತು ಪರ್ವಗಳಿಗೇ ಅದು ಮುಕ್ತಾಯಗೊಳ್ಳುವುದರಿಂದ ಅದು ದಶಪರ್ವ ಭಾರತವೆಂದಾಗಿದೆ. ಗದುಗಿನ ನಾರಣಪ್ಪ ಹತ್ತೇ ಪರ್ವಗಳಿಗೆ ತನ್ನ ಕಾವ್ಯರಚನೆಯನ್ನೇಕೆ ನಿಲ್ಲಿಸಿದ ಎಂಬುದಕ್ಕೆ ಅನೇಕ ಊಹಾಪೋಹಗಳಿವೆ. ಅವನು ಸ್ವತಃ ತನ್ನ ಕೃತಿಯಲ್ಲಿ ಎಲ್ಲಿಯೂ ಇದಕ್ಕೆ ವಿವರಣೆ ಹೇಳಿಲ್ಲವಾದ್ದರಿಂದ ಈ ಊಹೆ ತರ್ಕಗಳಿಗೆ ಕೊನೆಯೆಂಬುದೇ ಇಲ್ಲವಾಗಿದೆ. ಆದರೆ ಅವನು ಇನ್ನುಳಿದ ಎಂಟು ಪರ್ವಗಳನ್ನೂ ಬರೆಯಬೇಕಾಗಿತ್ತೆಂದೂ ಎಲ್ಲರೂ ಅಂದುಕೊಳ್ಳುತ್ತಾರೆ.

ವಿಜಯನಗರದ ಅರಸು ಕೃಷ್ಣದೇವರಾಯ ಕೇವಲ ಹೀಗೆ ಅಂದುಕೊಳ್ಳಲಿಲ್ಲ. ಅವನು ತನ್ನ ಆಸ್ಥಾನ ಕವಿ ತಿಮ್ಮಣ್ಣನನ್ನು ಕರೆಸಿ "ಲೇಸೆನ್ನಿಸಿ ಮೊದಲಾ

ಕುಮಾರವ್ಯಾಸ ದಶಪರ್ವಗಳ ಹೇಳಿದ ಭಾರತದ ಉಳಿದ ಪರ್ವಗಳ ನೀ ಸಕಲ ಜನ ಮೆಚ್ಚುವಂತೆ ಹೇಳು" ಎಂದು ಆದೇಶ ನೀಡಿದನಂತೆ. ಇದನ್ನು "ಕೃಷ್ಣರಾಯ ಭಾರತಕಥಾಮಂಜರಿ" ಎಂದು ಹೆಸರಿಸಲಾಗಿದೆಯಾದರೂ ತಿಮ್ಮಣ್ಣ ಭಾರತ ಎಂದೇ ಅದು ಪ್ರಸಿದ್ಧವಾಗಿದೆ. ಕುಮಾರವ್ಯಾಸ ಬರೆದ ದಶಪರ್ವಗಳು ಮತ್ತು ತಿಮ್ಮಣ್ಣ ಕವಿ ಬರೆದ ಅಷ್ಟಪರ್ವಗಳು ಎರಡನ್ನೂ ಸೇರಿಸಿದರೆ ಸಮಗ್ರ ವ್ಯಾಸ ಭಾರತವಾಗುತ್ತದೆ. ಎನ್ಕೆಯವರು ಈ ಸಾಹಸವನ್ನು ಮಾಡಿದ್ದಾರೆ. ಎರಡೂ ಕಾವ್ಯ ಗ್ರಂಥಗಳನ್ನು ಸರಳ ಗದ್ಯದಲ್ಲಿ ಬರೆದು "ಕನ್ನಡ ವ್ಯಾಸ ಭಾರತ" ಎಂಬ ಹೆಸರಿನಲ್ಲಿ ಹೊರತಂದಿದ್ದಾರೆ.

ಈ ಗ್ರಂಥದ ಶೈಲಿಯಲ್ಲಿ ಒಂದು ವೈಶಿಷ್ಟ್ಯವಿದೆ. ಇದು ಸಂಪೂರ್ಣ ಹೊಸಗನ್ನಡ ಗದ್ಯವೂ ಅಲ್ಲ; ಹಳೆಗನ್ನಡದ ಪದ್ಯವೂ ಅಲ್ಲ. ಕುಮಾರವ್ಯಾಸ ತಿಮ್ಮಣ್ಣ ಕವಿಗಳೇ ಈ ಗ್ರಂಥ ರಚನೆಗೆ ಪದ್ಯಕ್ಕೆ ಬದಲಾಗಿ ಗದ್ಯ ರೂಪವನ್ನು ಆರಿಸಿಕೊಂಡಿದ್ದರೆ, ಹೇಗೆ ಬರೆಯಬಹುದಿತ್ತು? ಆ ಕಾಲದ ಕನ್ನಡದ ಮುತ್ತುಗಳನ್ನು ಹೊಸಗನ್ನಡದ ದಾರದಲ್ಲಿ ಪೋಣಿಸಿ ಈ ಹಾರವನ್ನು ಹೆಣೆದಿದ್ದಾರೆ. ಇದರಿಂದಾಗಿ ಕಥೆ ಮಾತ್ರವಲ್ಲ. ಆಯಾ ಕವಿಗಳ ಭಾಷೆ, ಶೈಲಿ, ಪದಪ್ರೌಢಿಮೆ, ಅಲಂಕಾರಗಳ ಸವಿಯನ್ನು ನೇರವಾಗಿ ಅನುಭವಿಸಬಹುದು. ಅಲ್ಲಲ್ಲಿ ಬರುವ ಎನ್ಕೆಯವರ ವಿವರಣೆ ಮತ್ತು ವಿಮರ್ಶೆಗಳನ್ನು ಆ ಅನುಭವ ಸವಿಯನ್ನು ಹೆಚ್ಚಿಸುತ್ತವೆ.

ಕಾವ್ಯಗಳು ಮತ್ತು ಹಿಂದಿನ ಕವಿಗಳ ಗ್ರಂಥಗಳು ಓದಲು ಕಬ್ಬಿಣದ ಕಡಲೆಗಳೆಂದು ಭಾವಿಸುವವರಿಗೆ ಈ ಗ್ರಂಥವನ್ನು ಓದಿದಾಗ ಭ್ರಮೆ ನಿರಸನವಾಗುತ್ತದೆ. ಕೆಲವು ಸಂದರ್ಭಗಳನ್ನು ಓದುವಾಗ ಕುಮಾರವ್ಯಾಸ ಅಂದಿನ ಕನ್ನಡದಲ್ಲಿ ಅಲ್ಲ; ಇಂದಿನ ಕನ್ನಡದಲ್ಲೇ ಬರೆದಿದ್ದಾನೆ. ಎನ್ನಿಸುತ್ತದೆ. ಉದಾಹರಣೆ :—

೧) "ಸರಿ, ಪಟ್ಟಾಭಿಷೇಕೋತ್ಸವ ವಿರಚಿಸಿತು. ಅವನೀಸುರರು ಮಂತ್ರಾಕ್ಷತೆಯ ಮಳೆಗರೆದರು. ಜಯರವಘೋಷ ಮೊಳಗಿತು. "ಕರ್ಣನ ಬಿರುದಿನುಬ್ಬಟೆ ಲಹರಿ ವಂದಿಜನ ಜಲಧಿಯಲಿ ಮಸಗಿತು. ಅರಸನ ವದನವು ಅರಳಿತು. ಶಕುನಿಯ ಹರುಷ ಹೆಚ್ಚಿತು. ದುಶ್ಯಾಸನನಿಗೆ ರೋಮಾವಳಿ ಉಬ್ಬರಿಸಿತು. ವಿಕರ್ಣಾದಿಗಳ ಮನ ನಲಿಯಿತು. ಗುರುಜ, ಕೃಪ, ಕೃತವರ್ಮ ಶಲ್ಯಾದ್ಯರಿಗೆ ಹೊಸಕದ ಒಲವು ಮಿಗಿಲಾಯಿತು. ಅಂದಿನಿರುಳು ಕರ್ಣನಿಗೆ ಪಟ್ಟವಾಯಿತು."

(ಕರ್ಣಪರ್ವ ಪುಟ ೨೯೯)

೨) "ಲಲಿತ ಭೋಜನದ ವಿವಿಧ ಭಕ್ಷ್ಯಾವಳಿಯು ಬಾಣಸಿನ ಮನೆಯಲಿ ಮಲಗಿದನ ಭೀಮಸೇನನನ್ನು ಎಬ್ಬಿಸಲು ಆತನೆಲ್ಲಿ ಭುಗಿಲೆಂಬನೋ ಎಂದು ಭಯ

ಪಟ್ಟಳು. ಮೆಲ್ಲನೆ ಮುಸುಕ ಸಡಿಲಿಸಿ ಗಲ್ಲವನು ಹಿಡಿದು ಅಲುಗಲು ಅಪ್ರತಿಮಲ್ಲನು ಪಾಂಚಾಲ ನಂದನೆಯ ನೋಡಿ "ಬರವೇನು ಮುಖದಲ್ಲಿ ತಲ್ಲಣವೇಕೆ ತೋರುತಿದೆ? ನಾವು ಇಲ್ಲಿ ದೇಸಿಗರು, ಯಾರಿಗೂ ತಿಳಿಯದಂತೆ ನಿನಗಾದ ದುಗುಡವನು ಹೇಳು."

—(ವಿರಾಟಪರ್ವ ಪುಟ ೧೮೦)

ನಮ್ಮ ದಿನಬಳಕೆಯ ಪದಗಳನ್ನೇ ಸಣ್ಣ ಸಣ್ಣ ವಾಕ್ಯಗಳಲ್ಲಿ ಅರ್ಥಪೂರ್ಣವಾಗಿ ಮತ್ತು ಭಾವನಾಯುಕ್ತವಾಗಿ ಕುಮಾರವ್ಯಾಸ ವ್ಯಕ್ತಪಡಿಸಿದ್ದನ್ನು ಇಲ್ಲಿ ಕಾಣಬಹುದು.

ಕುಮಾರವ್ಯಾಸನ ವರ್ಣನೆಗಳು ಕೇವಲ ಭಾವನಾತ್ಮಕವಾಗಿರುವದಿಲ್ಲ. ವಿವರಣಾತ್ಮಕವೂ ಆಗಿರುತ್ತವೆ. ಒಬ್ಬ ಚಿತ್ರಗಾರನಿಗೆ ಚಿತ್ರ ಬಿಡಿಸಲು ಹೇಳಬಹುದಾದ ಶೈಲಿಯಲ್ಲಿ ಅವನು ಹೇಳುತ್ತಾನೆ. ಕೌರವನು ತಾಯ್ತಂದೆ ಮತ್ತು ಹಿರಿಯರ ವಿರುದ್ಧ ಮೊಂಡು ಹಟ ಮಾಡಿ 'ಸತ್ಯಾಗ್ರಹ' ಮಾಡಿದ ವರ್ಣನೆಯನ್ನು ಇಲ್ಲಿ ನೋಡಿ:

೩) "ಕೌರವನು ದುಗುಡದಿಂದ ಸುರನದೀ ತೀರದಲಿ ಮೌನ ಬಿಗಿದು ಕುಳ್ಳಿರ್ದನು. ಹೊಗೆವ ಮೋರೆ, ನೆಲಕೆ ನೆಟ್ಟ ಅಲಿಗಳುಳ್ಳವನಾಗಿ ನಿಖಿಳ ಇಂದ್ರಿಯದ ರೋಚಕ ಬಿಗಿಯೆ ಬೇಗೆಯ ಬೇಸರಿನ ಬಿಸಿಗುದಿಯ ಸುಯ್ಲಿನಲಿ ನೃಪನಿರ್ದನು. ಗಂಗಾಜಲವ ತರಿಸಿ, ಗೋಮಯವ ಹೇರಿ ಕುಶೆ, ಸಮ್ಮಾರ್ಜನೆಯ ನಿರಶನ ವ್ರತವೆಂದು ಮುಂಕೊಳ್ಳುಚಿತ ಸಂಕಲ್ಪದಲಿ ಕೃತ ಪ್ರಾಯೋಪವೇಶದಲಿ ಪವಡಿಸಿದನು."

—(ಅರಣ್ಯಪರ್ವ ಪುಟ ೧೬೪)

ಮಾರಣ ಹೋಮವೂ ಕುಮಾರವ್ಯಾಸನಿಗೆ ತನ್ನ ಕಾವ್ಯ ಪ್ರತಿಭೆಯನು ತೋರಿಸಲು ಒಂದು ಸುವರ್ಣಾವಕಾಶ. ಮರಣವೇ ಇರಲಿ, ಕೊಲೆಯೇ ಇರಲಿ, ಅವನು ನೇರವಾಗಿ ಎಂದೂ ಹೇಳುವುದಿಲ್ಲ. ಅಭಿಮನ್ಯು ನಡೆಸಿದ ಸಂಹಾರ ಲೀಲೆಯ ವರ್ಣನೆ ಹೀಗಿದೆ :

೪) "ಪಾರ್ಥ ಕುಮಾರನ ಖಡ್ಗದ ಹೊಯ್ಲಿಗೆ ವೈರಿವೀರಪ್ರತತಿಗೂ ಅಮರಿನಾರಿಯರಿಗೂ ವಿವಾಹವು ವಿಸ್ತರಿಸಿ ಸಿತಾಕ್ಷತಾವಳಿಯ ರಚಿಸಿದಂತೆ ರಿಪುವಾರಣದ ಮಸ್ತಕದ ಮುತ್ತುಗಳು ಓರಣಿಸಿ ಒಪ್ಪಿದವು. ಕುಮಾರನು ತನ್ನ ಖಡ್ಗ ಭಟರ ನರಯುಟ್ಟಿ ಕೊಂದನು. ...

—(ದ್ರೋಣಪರ್ವ ಪುಟ ೨೫೮)

ಕುಮಾರವ್ಯಾಸನನ್ನು ಓದಿದ ಮೇಲೆ ತಿಮ್ಮಣ್ಣ ಕವಿಯ ಕೃತಿಯನ್ನು ಓದುವ ದೆಂದರೆ ಹಿಡಿ ಸಕ್ಕರೆ ಮುಕ್ಕಿ ಚಹ ಕುಡಿದಂತೆ. "ಸುರನದಿಯ ಯಮುನಾ ತರಂಗಿಣಿ ಬೆರೆಸಿ ಹರಿವಂದದಲಿ ಕವಿಕುಂಜರ ಕುಮಾರವ್ಯಾಸನ ಉರುವಾಕ್ ಲಹರಿಯೊಡನೀಗ ಸರಿಯೆನಿಸಿ" ಬರೆದಿರುವದಾಗಿ ಹೇಳಿಕೊಂಡ ಹೆಮ್ಮೆಗೆ ಪ್ರತ್ಯಕ್ಷ ಪ್ರಮಾಣಗಳು ಸಿಕ್ಕುವದಿಲ್ಲ. ಎಲ್ಲ ವಿಮರ್ಶಕರೂ ಇದನ್ನು ಒಪ್ಪುತ್ತಾರೆ. ಅಶ್ವಮೇಧ ಪರ್ವದಲ್ಲಿ ಅರ್ಜುನ-ಬಭ್ರುವಾಹನರಲ್ಲಿ ನಡೆದ ಯುದ್ಧದ ಸಂದರ್ಭದ ವರ್ಣನೆಯನ್ನು ಇಲ್ಲಿ ನೋಡಬಹುದು.

೫) "ಯೋಧರು ಬಿಡುವ ಬಾಣಗಳು ಸುರನಗರಿಯ ನಾರಿಯರಿಗೆ ಮೋಹಿಸಿದ ಸುಭಟರು ಬೆರಳು ಮಾಡಿ ಕರೆಯುತ್ತಿರುವಂತೆ ತೋರಿತು. ಭಟರ ಕೈಗಳಲ್ಲಿ ಹೊಳೆಯುವ ಢಾಲುಗಳು ವೈರಿರಾಜರ ತೇಜಸ್ಸೂರ್ಯನಿಗೆ ಅಡ್ಡೈಸಿದ ಮೇಘಗಳೋ, ಆಕಾಶಗಂಗೆಯನ್ನು ದಾಟಿಸುವ ಹರಿಗೋಲುಗಳೋ ಎಂಬಂತೆ ತೋರಿದವು. ವೈರಿಗಳ ದೇಹದ ರಕ್ತಪಾನ ಮಾಡಲು ಊಟಿದ ಜಿಗುಳಿಗಳೋ, ರಣದೇವಿಗೆ ಆರತಿ ಎತ್ತಲು ನೀಲಾಂಜನಕ್ಕೆ ಹೊತ್ತಿಸಿದ ಬತ್ತಿಗಳೋ – ಎಂಬಂತೆ ಖಡ್ಗಧಾರೆಗಳು ಪ್ರಕಾಶಿಸುತ್ತಿದ್ದವು.

— (ಅಶ್ವಮೇಧಪರ್ವ, ಪುಟ ೫೭೭-೭೮)

ಕುಮಾರವ್ಯಾಸನ ಶೈಲಿಯ ಅನುಕರಣೆಯ ವಿಫಲಯತ್ನ ಇಲ್ಲಿ ಸ್ಪಷ್ಟವಾಗಿದೆ.

ಪ್ರತಿಭೆ ಪಾಂಡಿತ್ಯಗಳಲ್ಲಿ ಇಷ್ಟೊಂದು ವ್ಯತ್ಯಾಸವುಳ್ಳ ತಿಮ್ಮಣ್ಣ ಕವಿ ಕುಮಾರವ್ಯಾಸನ ಕೃತಿಗೆ ತಾನೊಂದು ತಿದ್ದುಪಡಿ ಮಾಡುವೆನೆಂಬ ಸಾಹಸಕ್ಕೆ ಇಳಿಯಬಾರದಿತ್ತು ಎಂದು ಅನೇಕರು ಹೇಳಬಹುದು. ಆದರೆ ಒಂದು ದೃಷ್ಟಿಯಿಂದ ತಿಮ್ಮಣ್ಣ ಕವಿ ಕುಮಾರವ್ಯಾಸನಿಗೆ ದೊಡ್ಡ ಉಪಕಾರ ಮಾಡಿದ್ದಾನೆ. ಕಾರ್ಮೋಡದ ಹಿನ್ನೆಲೆಯಲ್ಲಿ ಮಿಂಚಿನ ನೋಟ್ಮೆ ಹೆಚ್ಚು ಪ್ರಭಾವಶಾಲಿಯಾಗಿ ಕಾಣುವದಲ್ಲವೇ ?

**— ಸುರೇಂದ್ರ ದಾನಿ**

## ೨

ವ್ಯಾಸ ಭಾರತ ನಮ್ಮ ಒಂದು ರಾಷ್ಟ್ರೀಯ ಕಾವ್ಯ. ಕುಮಾರವ್ಯಾಸ ಕನ್ನಡದ ಒಬ್ಬ ಹಿರಿಯ ಕವಿ. ವ್ಯಾಸ ಭಾರತದ ಹದಿನೆಂಟು ಪರ್ವಗಳಲ್ಲಿ ಕುಮಾರವ್ಯಾಸ ಹತ್ತು ಪರ್ವಗಳನ್ನು ಕನ್ನಡದಲ್ಲಿ ರೂಪಿಸಿದ ಇನ್ನುಳಿದ ಎಂಟು ಪರ್ವಗಳನ್ನು ತಿಮ್ಮಣ್ಣ ಕವಿ ಕನ್ನಡಕ್ಕೆ ತಂದನೆಂದು ಪ್ರತೀತಿಯಿದೆ. ಆದರೆ ಹನ್ನೊಂದನೆಯ ಪರ್ವವು ಆತನದಾಗಿರದೆ ಶ್ರೀನಿವಾಸ ಕವಿಯದೆಂದು ತಿಳಿದು

ಬಂದಿದೆ. ಈ ಕವಿಯ ಹೆಸರು ಗುಪ್ತವಾಗಿ ಉಳಿದಂತಿದೆ. ಕುಮಾರವ್ಯಾಸನದು ಗಂಗಾ, ತಿಮ್ಮಣ್ಣ ಕವಿಯದು ಯಮುನಾ ಎಂದು ಹೇಳಬಹುದಾದರೆ ಶ್ರೀನಿವಾಸ ಕವಿಯದು ಗುಪ್ತ ಸರಸ್ವತಿಯೆಂದಾಗುತ್ತಿದೆ. ಹೀಗೆ ಈ ತ್ರಿವೇಣಿ ಸಂಗಮದಿಂದಾಗಿ ವ್ಯಾಸ ಭಾರತವು ಕನ್ನಡದಲ್ಲಿ ಪೂರ್ತಿಗೊಂಡಂತಾಗುತ್ತಿದೆ. ಮಹಾಭಾರತದ ಈ ತ್ರಿವೇಣಿ ಸಂಗಮವನ್ನು ತೋರಿಸಿಕೊಡುವ ಕಾರ್ಯವನ್ನು ಎನ್ಕೆ ಮಾಡಿದ್ದಾರೆ. ಸಂಪೂರ್ಣ ಮಹಾಭಾರತವನ್ನು ಹೊಸಗನ್ನಡ ಗದ್ಯದಲ್ಲಿ ಏಕತ್ರ ಒದಗಿಸಿದ ಶ್ರೇಯಸ್ಸು ಅವರದಾಗಿದೆ.

ಏಳುನೂರು ಪುಟಗಳನ್ನು ಮಿಕ್ಕಿರುವ ಬೃಹತ್ ಕೃತಿಯದು. ಲೇಖಕರು ದೀರ್ಘಕಾಲದ ಪರಿಶ್ರಮದಿಂದ ಇದನ್ನು ರಚಿಸಿದ್ದಾರೆ. ಎನ್ಕೆ ಗದಗಿನವರು. ಅವರ ಪ್ರಥಮನಾಮ ಕುಮಾರವ್ಯಾಸನಂತೆಯೇ ಇದೆ. ಅವರು ಆ ಕವಿಯ ಕಾವ್ಯದ ಬಗೆಗೆ ವಿಶೇಷ ಅಭ್ಯಾಸಿಗಳು, ನಿಷ್ಣಾತರು. ಪ್ರಾಚೀನ ಕಾವ್ಯಗಳಲ್ಲಿ ಬಂದಿರುವ ಭಾರತದ ಕಥೆಯನ್ನೆಲ್ಲ ಒಳಗೊಂಡಿರುವ ಈ ಕೃತಿಯನ್ನು ಎನ್ಕೆ ಭಾರತವೆಂದು ಕರೆಯಬಹುದಾಗಿದೆ.

ಕುಮಾರವ್ಯಾಸನ ಕಾವ್ಯದ ಧೋರಣೆ, ಶೈಲಿ, ಪದಪ್ರಯೋಗ, ವರ್ಣನೆಗಳು, ಲೋಕಾನುಭವ, ಕಾವ್ಯಕಾಯಕ, ಕೃಷ್ಣನನ್ನು ಕುರಿತ ಭಕ್ತಿ ವಿಶಿಷ್ಟವಾದವು. ಆ ಕಾವ್ಯದ ಮೂಲದ ಸ್ವಾರಸ್ಯವನ್ನು ಹೊಸಗನ್ನಡದಲ್ಲಿ ಎತ್ತಿ ತೋರಿಸಿರುವುದು ಈ ಕೃತಿಯ ವಿಶೇಷತೆಯಾಗಿದೆ. ಅಲ್ಲದೆ ಅದನ್ನು ಸುಗಮಗೊಳಿಸಲಾಗಿದೆ. ಮೊದಲಿನ ದಶಪರ್ವಗಳ ಉತ್ಕಟತೆ, ಶಬ್ದ ಸಂಪತ್ತು ಲವಲವಿಕೆಗಳ ಪರಿಚಯವು ಯಥಾವತ್ತಾಗಿ ಈ ಕೃತಿಯಲ್ಲಿ ಬರುವಂತೆ ಕಾಳಜಿ ವಹಿಸಲಾಗಿದೆ. ಮುಂದಿನ ಎಂಟು ಪರ್ವಗಳ ವಾಚನದಲ್ಲಿ ಮೊದಲಿನ ಲವಲವಿಕೆ ಉಳಿದು ಬರಲಾರದು. ಆ ಪರ್ವಗಳ ಕಥೆಯಲ್ಲಿಯೇ ಆ ಬಗೆಯ ಲವಲವಿಕೆಯಿಲ್ಲ. ಅಲ್ಲದೆ ಕುಮಾರವ್ಯಾಸನ ಕಾವ್ಯರಚನಾಶಕ್ತಿಯ ಮಟ್ಟಕ್ಕೆ ತಿಮ್ಮಣ್ಣ ಬರಲಾರ. ಅಂತೆಯೇ ಆತನ ಕೃತಿಯು ಸಪ್ಪೆಯೆನಿಸುವುದು. ಇವರಿಬ್ಬರ ಕಾವ್ಯಧೋರಣೆಯ ಪರಿಚಯ ಒಂದೆಡೆ ಒದಗಿಬರುತ್ತಿರುವುದು ಇಲ್ಲಿಯ ಅನುಕೂಲತೆಯಾಗಿದೆ. ತಿಮ್ಮಣ್ಣ ಕವಿಯ ಭಾಗದಲ್ಲಿ ಪೂರ್ವಪುರಾಣ ಕಥೆ, ನೀತಿ, ಆಧ್ಯಾತ್ಮ ಬೋಧೆಗಳಿವೆ. ಅವುಗಳಿಂದ ಮನಸ್ಸಿಗೆ ಒಳ್ಳೆಯ ಸಂಸ್ಕಾರ ದೊರೆಯುತ್ತಿದೆ. ತಾತ್ವಿಕ ಜೀವನದ ಸ್ವಾರಸ್ಯ ಅಲ್ಲಿ ಇಲ್ಲವಾದರೂ ಮಾನವೀಯ ಬಾಳಿನ ಗುರಿ, ಅರ್ಥಗಳನ್ನು ಅದು ತೋರಿಸಿಕೊಡುತ್ತಿದೆ. ಕೆಲವು ಸ್ವಾರಸ್ಯಕರವಾದ ಉಪಮೆಗಳು ಅಲ್ಲಿ ಕಂಡುಬರುತ್ತಿವೆ.

ವೀರನಾರಾಯಣನನ್ನು ಕುರಿತ ಭಕ್ತಿ ನಿರ್ಭರತೆಯ ಸ್ಫೂರ್ತಿಯಿಂದ ಕುಮಾರವ್ಯಾಸ ತನ್ನ ಕೃತಿಯನ್ನು ಸೃಷ್ಟಿಸಿದ. ವಿಜಯನಗರದ ಕೃಷ್ಣದೇವರಾಯನ ರಾಜಾಜ್ಞೆಯಂತೆ ತಿಮ್ಮಣ್ಣ ಕವಿಯದು ರಚಿತವಾಗಿದೆ. ಅಂತೆಯೆ ಅವುಗಳಲ್ಲಿಯ ವ್ಯತ್ಯಾಸ ಸ್ಪಷ್ಟವಾಗಿ ಕಂಡು ಬರುತ್ತಿದೆ.

ಮಹಾಭಾರತವು ಪರಮಾತ್ಮನ ಲೀಲೆ, ಲೋಕವ್ಯವಹಾರ, ಮಾನವೀಯ ವಿಕಾರಗಳು, ಅವುಗಳನ್ನು ಮೀರಿ ನಿಲ್ಲಲು ಬೇಕಾಗುವ ತತ್ತ್ವಾದರ್ಶಗಳಿಂದ ಕೂಡಿ ಮಾನವೀಯ ಬಾಳಿಗೆ ಪ್ರಯೋಜನಕಾರಿಯಾದ ಕೃತಿಯಾಗಿದೆ. ಸಾಮಾನ್ಯರಿಗೆ ಅದನ್ನು ಮೂಲದಲ್ಲಿ ಓದಿಕೊಳ್ಳುವ ಅವಕಾಶವಿರುವುದಿಲ್ಲ. ಆದುದರಿಂದ ಎನ್ಕೆ ಅವರ ಈ ಕೃತಿಯು ಒಳ್ಳೆಯ ಆಹಾರವನ್ನು ಸುಲಭವಾಗಿ ಕಾರ್ಯದಲ್ಲಿ ಒದಗಿಸುವಲ್ಲಿ ಸಫಲವಾದಂತಿದೆ. ಈ ದಿಸೆಯಲ್ಲಿ ಅವರ ಪರಿಶ್ರಮಪೂರ್ಣ ವ್ಯಾಸಂಗ, ಸಹನೆ, ರಚನಾ ಶಕ್ತಿಗಳು ಸ್ತುತ್ಯವಾಗಿವೆ.

ಈ ಗ್ರಂಥಕ್ಕೆ ಎನ್ಕೆ ಮೂವತ್ತು ಪುಟಗಳ ಸಂಶೋಧನಾತ್ಮಕ, ವಿಮರ್ಶಾತ್ಮಕ ಪೀಠಿಕೆಯನ್ನು ಸೇರಿಸಿದ್ದಾರೆ. ಅದರಲ್ಲಿ ಕವಿಯ ಕಾಲ, ಜೀವನ, ಕಾವ್ಯದ ಹಸ್ತಪ್ರತಿಗಳು, ಆವೃತ್ತಿಗಳು, ಪಾಠಾಂತರ, ಕವಿಕಾವ್ಯ ವಿಮರ್ಶೆಗಳನ್ನು ಅವರು ಅಡಕವಾಗಿ ಪ್ರಸ್ತಾಪಿಸಿದ್ದಾರೆ. ಇದು ಅಭ್ಯಾಸಿಗಳಿಗೆ ಸಂಶೋಧಕರಿಗೆ ಉಪಯುಕ್ತ ಸಾಮಗ್ರಿಯಾಗಿದೆ. ಕಥಾಸಂಗ್ರಹದ ಮಧ್ಯದಲ್ಲಿಯೂ ವಿಮರ್ಶಾತ್ಮಕ, ವಿವೇಚನಾತ್ಮಕ ಒಂದೊಂದು ನುಡಿಯನ್ನು ಸೇರಿಸಿದ್ದಾರೆ. 'ಕುಮಾರವ್ಯಾಸ ಕೋಶ'ವನ್ನು ಈ ಕೃತಿಗೆ ಸೇರಿಸಿದ್ದರೆ ಗಾತ್ರ ದೊಡ್ಡದಾಗುತ್ತಿತ್ತು ನಿಜ. ಆದರೆ ಕೃತಿಯ ಉಪಯುಕ್ತತೆ ಇನ್ನೂ ಹೆಚ್ಚುತ್ತಿತ್ತು.

ಈ ಬಗೆಯ ಕಾರ್ಯ ಪಂಪ, ಹರಿಹರ, ಷಡಕ್ಷರದೇವ, ರತ್ನಾಕರವರ್ಣಿ ಇತ್ಯಾದಿ ಕನ್ನಡದ ಶ್ರೇಷ್ಠ ಕವಿಗಳ ಬಗೆಗೂ ನಡೆಯಬೇಕಾದುದು ಆವಶ್ಯಕವಾಗಿದೆ. ತನ್ಮೂಲಕ ಪ್ರಾಚೀನ ಕನ್ನಡ ಕಾವ್ಯಗಳ ಬಗೆಗೆ ಇಂದಿನವರಲ್ಲಿ ಆಸಕ್ತಿಯನ್ನು ಬೆಳೆಸುವ ಹೊಸಗನ್ನಡ ಸಾಹಿತ್ಯಕ್ಕೆ ಸಮೃದ್ಧಿಯನ್ನು ತರುವ ಇಂದಿನ ವಾಚಕರಲ್ಲಿ ಸದಭಿರುಚಿಯನ್ನು ರೂಢಿಸುವ ಕಾರ್ಯವನ್ನು ನೆರವೇರಿಸಿದಂತಾಗುವುದು.

ತಮ್ಮ ಲಘು ಬರಹಗಳಿಂದ ಜನಪ್ರಿಯತೆ ಪಡೆದ ಎನ್ಕೆ ಅವರ ಮಹತ್ತ್ವಪೂರ್ಣ ಕೃತಿ ಇದು. ಇದರಿಂದಾಗಿ ಅವರು ಹೊಸಗನ್ನಡ ಸಾಹಿತ್ಯದಲ್ಲಿ ಮಹತ್ವದ ಸ್ಥಾನಕ್ಕೆ ತಮ್ಮ ಅರ್ಹತೆಯನ್ನು ತೋರಿಸಿಕೊಟ್ಟಂತಾಗಿದೆ.

— **ಸ. ಸ. ಮಾಳವಾಡ**

ಸಾನಿಕಾಕಾ : ಎನ್ಕೆಬರೆಹ/೪೭೧

## ೩

ಈ ಹಿಂದೆ ಎನ್ಕೆ ಅವರು ಕುಮಾರವ್ಯಾಸನನ್ನು ನಮ್ಮ ಜನಕ್ಕೆ 'ಗದ್ಯಸಾರ'ದಲ್ಲಿ ಅಡಕ ಮಾಡಿಕೊಟ್ಟಿದ್ದರು. ಪುನರ್ ವಿಮರ್ಶಿಸಿ ಸಾಧ್ಯವಾದಷ್ಟು ನಿರ್ದುಷ್ಟವಾಗುವಂತೆ ಪುನರ್ ರಚಿಸಿ ತಿಮ್ಮಣ್ಣ ಕವಿಯ ಗದ್ಯಸಂಗ್ರಹದೊಂದಿಗೆ ಒಂದು ಇಡಿಯಾದ ಬೃಹತ ಗ್ರಂಥವಾಗಿಸಿ ಸಮಗ್ರ ಭಾರತವನ್ನು ಅಭ್ಯಾಸಿಗಳ ಕೈಗೆ ನೀಡಲಾಗುತ್ತಿದೆ... ಎಂದು ಈ ಕೃತಿಯ ಮೂಲಕ ಅರಿಕೆ ಮಾಡಿಕೊಂಡಿದ್ದಾರೆ.

ಹೀಗಾಗಿ ಕುಮಾರವ್ಯಾಸನ ೧೦,೫೦೦ ಪದ್ಯಗಳನ್ನೂ ತಿಮ್ಮಣ್ಣ ಕವಿಯ ೩,೨೦೦ ಪದ್ಯಗಳನ್ನೂ ಮೂಲಪದ್ಯಗಳಲ್ಲಿ ಓದುವುದಕ್ಕೆ ಆಗದೆ ಇರುವವರು ಗದ್ಯದ ಮೂಲಕ ಆ ಕವಿಯ ಹೃದಯವನ್ನು ತಿಳಿಯುವುದಕ್ಕೆ ಸಾಧ್ಯವಾಗಲು ತಕ್ಕ ಹಾಗೂ ಸಮರ್ಥ ನಿರೂಪಕರೊಬ್ಬರು ಬೇಕೇಬೇಕು. ಎನ್ಕೆ ಅವರಿಗೆ ಆ ನಿರೂಪಣಶಕ್ತಿ ಸ್ರಕಾಶವು ಇದೆ ಎಂಬುದನ್ನು ಗ್ರಂಥದ ಉದ್ದಕ್ಕೂ ಗಮನಿಸಬಹುದು. ಮೂಲದ ಅಷ್ಟೊಂದ ಪದ್ಯಗಳನ್ನು ಓದಿಕೊಂಡು ಮನನ ಮಾಡಿ, ಸವಿದು, ಅದನ್ನು ಹೊಸತದಲ್ಲಿ ಆತ್ಮಸಾತ ಮಾಡಿಕೊಂಡು ಬರೆಯಬೇಕಾದರೆ ಗ್ರಹಣಶಕ್ತಿ, ಅದಕ್ಕಿಂತ ಮಿಗಿಲಾಗಿ ಎಚ್ಚರ ಇದೆಷ್ಟಿರಬೇಕು? ಈ ಎಚ್ಚರವನ್ನೆಲ್ಲಾ ಬಳಸಿಕೊಂಡು ಗದ್ಯದಲ್ಲಿ ಆ ಎರಡೂ ಭಾರತಗಳನ್ನು ಕೊಡುವುದರ ಮೂಲಕ ಎನ್ಕೆ ಅವರು ಕೃತಕೃತ್ಯರಾಗಿದ್ದಾರೆ. ಕನ್ನಡಕ್ಕೊಂದು ವಿಶಿಷ್ಟ ಗದ್ಯವು ಎನ್ಕೆ ಅವರ ಈ ವ್ಯಾಸಭಾರತಗಳ ಮೂಲಕ ದೊರಕಿದೆ.

ಕೃತಿಯ ಮೊದಲಿಗೆ ಸುಮಾರ ೨೪ ಪುಟಗಳ ಮುನ್ನುಡಿಯಲ್ಲಿ ಕವಿಯ ಕಾಲ, ದೇಶ, ಕಾವ್ಯದಲ್ಲಿ ಪ್ರತಿಷ್ಠತೆ, ಈಗ ವಿದ್ವಾಂಸರನ್ನು ಕಾಡುತ್ತಿರುವ ವಿಚಾರಗಳನ್ನೆಲ್ಲಾ ಸವಿವರವಾಗಿ ವಿಮರ್ಶಿಸಿ ಒಂದು ನಿರ್ಣಯಕ್ಕೆ ತಲುಪುವಂತೆ ನೋಡಿಕೊಂಡಿದ್ದಾರೆ. ಇಲ್ಲೆಲ್ಲ ವಿದ್ವಾಂಸನ ಎಚ್ಚರಿಕೆ ಎನ್ಕೆ ಅವರಿಗೆ ಇರುವುದನ್ನು ಕಾಣಬಹುದು. ಉದಾ- ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿಸಿರುವ ತಿಮ್ಮಣ್ಣ ಕವಿಯ ಕೃಷ್ಣರಾಯ ಭಾರತದಲ್ಲಿ ಇರುವ ಪಾಠಾಂತರ ದೋಷಗಳು, ವಾಚನದೋಷ, ಶಬ್ದದೋಷ, ವಿಭಕ್ತಿ-ಪ್ರತ್ಯಯಗಳ ಅದಲು ಬದಲು ಹೀಗೆ ಹತ್ತು ಹನ್ನೊಂದು ಸದೋಷ ಮುಖಗಳನ್ನು ತೋರಿಸಿಕೊಟ್ಟಿದ್ದಾರೆ. ತಿಮ್ಮಣ್ಣ ಕಾವ್ಯದ ಸಂಪಾದನೆಯ ಕಾರ್ಯವು ನಿರ್ದುಷ್ಟವಾಗದೆ ಇದ್ದುದು ಕೃಷ್ಣರಾಯ ಭಾರತದ ಅಭ್ಯಾಸಿಗಳಿಗೆ ಮಹಾ ಆತಂಕಕಾರಿ ಎನಿಸಿದೆ. ಇದರ ಸುಧಾರಿತ ಆವೃತ್ತಿ ಇನ್ನಾವ ಕಾಲಕ್ಕೆ ಬರಬಹುದೊ ಏನೋ, ಈ ಎಚ್ಚರವನ್ನು ನಮ್ಮ ಭಾರತ ವಾಚನ ಮಾಡುವವರು ಗಮನಕ್ಕೆ ತಂದುಕೊಳ್ಳಬೇಕು.

ಎನ್ಕೆ ಅವರು ಮೂಲಕೃತಿಗಳನ್ನು ಓದಿ ಚೆನ್ನಾಗಿ ಪಚನ ಮಾಡಿಕೊಂಡು ಎಳೆಎಳೆಯಾಗಿ ಹಲಸಿನ ಹಣ್ಣಿನ ತೊಳೆಯಂತೆ ಬಿಡಿಸಿ ಇಟ್ಟಿದ್ದಾರೆ. ಎಲ್ಲ ರೀತಿಯ ಎಚ್ಚರವನ್ನೂ ವಹಿಸಿಕೊಂಡಿದ್ದಾರೆ. ತೀರ ವರ್ಣನೆ ಹೆಚ್ಚು ಎನ್ನುವ ಕಡೆಯಲ್ಲಿ ಸಂಕ್ಷಿಪ್ತಗೊಳಿಸಿಕೊಂಡು ಕವಿಯ ವಿಮಲಭಾವಕ್ಕೆ ಪೋಷಕವಾಗುವ ಹಾಗೆಯೇ ಅದನ್ನು ಬಳಿಸಿಕೊಳ್ಳುವುದರಲ್ಲಿ ತಮ್ಮ ಕಾವ್ಯ ವಿಚಕ್ಷಣತೆಯನ್ನು ಸರ್ವತ್ರ ಮೆರೆದಿದ್ದಾರೆ ಎಂಬುದನ್ನು ಓದಿಯೆ ನೋಡಬೇಕು. ಕುಮಾರವ್ಯಾಸನ ಮಾತನ್ನು ಎಲ್ಲೂ ತೆಗೆದು ಹಾಕದೆ, ತಮ್ಮ ಮಾತುಗಳನ್ನು ಎಲ್ಲೂ ಸೇರಿಸದೆ ಕವಿಯ ದೃಷ್ಟಿಯನ್ನೇ ತಮ್ಮ ಮನಸ್ಸಿನಲ್ಲಿ ನೆಟ್ಟುಕೊಂಡು ಹೀಗೆ ಪ್ರಗಲ್ಭ ಕೃತಿಯೊಂದರ ಸಮರ್ಪಕ ನಿರೂಪಣೆಯು ಕನ್ನಡಕ್ಕೆ ದಕ್ಕುವಂತೆ ಮಾಡಿರುವುದು ಕನ್ನಡ ಜನಮನದ ಭಾಗ್ಯವೆಂದು ಹೇಳಬಹುದು. ಪ್ರಕಾಶಕರ ಸಾಹಸವನ್ನು ಯಾರೂ ಮೆಚ್ಚಬೇಕು. ಕನ್ನಡಿಗರೆಲ್ಲರ ಮನೆ ಮನೆಯಲ್ಲೂ ಅಗತ್ಯವಾಗಿರಬೇಕಾದ ಗ್ರಂಥ ಇದು.

ಮಲ್ಲೇಶಪುರಂ ಜಿ. ವೆಂಕಟೇಶಯ್ಯ

# ‘ಬೇಂದ್ರೆ ನಾ. ದ. ಸಂವಾದ’

## ಚೆನ್ನವೀರ ಕಣವಿ

‘ಎನ್ಕೆ’ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ವ್ಯಕ್ತಿವೈಶಿಷ್ಟ್ಯವನ್ನು ಸೂಚಿಸುವ ಹೆಸರು. ನಾಟಕ, ಹರಟೆ, ಕಾದಂಬರಿ, ವಿಮರ್ಶೆ, ಸಾಹಿತ್ಯ ಚರಿತ್ರೆ, ಜೀವನ ಚಿತ್ರ- ಹೀಗೆ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಕೃಷಿಗೈದು ಪ್ರಸಿದ್ಧರಾದವರು. ಈಗಲೂ ಅವರ ಬರವಣಿಗೆ ಅಷ್ಟೆ ಲವಲವಿಕೆಯಿಂದ ಮುಂದುವರೆದಿದೆ. ಪ್ರಸ್ತುತಕೃತಿ ನಾರಾಯಣ ಅವರು (ನಾ) ದತ್ತರೊಡನೆ (ದ) ನಡೆಸಿದ ಸಂವಾದ. “ಜ್ಞಾನಪೀಠ ಪ್ರಶಸ್ತಿ ಪಡೆದ ವರಕವಿಯನ್ನು ಭಾರತದ ಜನ ಎಷ್ಟೊಂದು ಮಮತೆಯಿಂದ ಉತ್ಸಾಹದಿಂದ ಗೌರವಿಸಿತು ಎಂಬ ವೃತ್ತಾಂತವನ್ನು ಕಥೆ ಮಾಡಿ ತಮ್ಮದೇ ಆದ ಲಲಿತಶೈಲಿಯಲ್ಲ ಇಲ್ಲಿರುವ ಪ್ರವಾಸ ಪ್ರಬಂಧಗಳಲ್ಲಿ ಎನ್ಕೆಯವರು ವಾಚಕರಿಗೆ ಒದಗಿಸಿದ್ದಾರೆ” ಎಂಬುದು ಪ್ರಕಾಶಕರ ಮಾತಾದರೆ, “ಬೇಂದ್ರೆಯವರ ಓಡಾಟ ದಲ್ಲೆಲ್ಲ ಅವರ ಹೆಜ್ಜೆಯಲ್ಲಿ ಓಡಾಡಿ ಅವರ ಚಿಂತನ ಮಂಥನಗಳಲ್ಲಿ ನಾನೂ ಶ್ರೋತೃ ವಾಗಿ ಪಾಲುಗೊಂಡು ಉಪನಿಷದಿನ ಗುರು-ಶಿಷ್ಯ ಪರಂಪರೆಯಲ್ಲಿ ಈ ಏಳು ಪ್ರಬಂಧಗಳ ಸಪ್ತಪದಿಯನ್ನು ಸಿದ್ಧಪಡಿಸಿದ್ದೇನೆ” ಎಂಬುದು ಲೇಖಕರ ಅರಿಕೆ.

ಬೇಂದ್ರೆ ಕನ್ನಡನಾಡಿನ, ಅಷ್ಟೆ ಏಕೆ ಭಾರತದ ಅತ್ಯಂತ ಪ್ರತಿಭಾನ್ವಿತ ಕವಿಗಳಲ್ಲಿ ಒಬ್ಬರು. ಅವರ ಕಾವ್ಯದ ಸಮಗ್ರ ಸಮ್ಮೋಹಕತೆ ಒಂದು ಬಗೆಯಾದರೆ, ಅವರ ಭಾಷಣ, ಚರ್ಚೆ, ಸಂವಾದಗಳಲ್ಲಿ ಮಿಂಚುವ ಮಾತಿನ ಮೋಡಿ, ನಾಟು ನುಡಿ ಗಡಿಗಳದೇ ಮತ್ತೊಂದು ರುಚಿ. ಅವರ ವಿದ್ವತ್ತಿನ ಆಳ-ವಿಸ್ತಾರ, ಲೌಕಿಕ ಹಾಗೂ ಆಧ್ಯಾತ್ಮಿಕ ಚಿಂತನೆಯ ಸಹಜ ಸಾಮರಸ್ಯ, ಬದುಕಿನ ಬಗೆಗಿನ ಆಸಕ್ತಿಗಳು ನಮ್ಮನ್ನು ದಂಗುಬಡಿಸುತ್ತವೆ. ಅವರ ಭಾಷಣಕ್ಕೆ ನೇರವಾಗಿ ಒಂದು ವಿಷಯವಿರುತ್ತಿರಲಿಲ್ಲ. ಆ ವಿಷಯದ ನೆಪದಲ್ಲಿ ಹಲವಾರು ವಿಷಯಗಳಲ್ಲಿ ಸುತ್ತಾಡಿಸಿ ಕೇಳುಗರನ್ನು ಮೈಮರೆಸುತ್ತಿದ್ದರು. ಆಗೆಲ್ಲ ಹೊಮ್ಮುವ ಸಮಯಸ್ಫೂರ್ತಿ ಅಚ್ಚರಿಗೊಳಿಸುವಂಥದು. ಪತ್ರಿಕಾ ವರದಿಗಾರರಿಗಂತೂ ಅವರ ಭಾಷಣಗಳು ದೊಡ್ಡ ಸವಾಲಾಗಿರುತ್ತಿದ್ದವು- ಎಂದರೆ ತಪ್ಪಾಗದು. “ಬೇಂದ್ರೆಯವರ ಭಾಷಣ

ವನ್ನು ವೈ ಮ ರೆ ತು ಕೇಳುತ್ತಿರುವಾಗ ಹೆಜ್ಜೆಹೆಜ್ಜೆಗೆ ಒಳಗಣ್ಣಿಗೆ ಬೆಳಕು ಬೀರಿದಂತಾಗುತ್ತದೆ. ಆದರೆ ಆಮೇಲೆ ಭಾಷಣದ ಸಾರವನ್ನು ಸಂಗ್ರಹಿಸಬೇಕೆಂದರೆ ಕೈಗೆ ಎಟುಕದೇ ಹೋಗುತ್ತದೆ" ಎಂದು ಎಸ್ಕೆಯವರೇ ತಮ್ಮ ಅನುಭವವನ್ನು ಇಲ್ಲಿ ಒಂದೆಡೆ ಹೇಳಿದ್ದಾರೆ. ಆದರೂ ಬಹಳ ಕಾಲದಿಂದ ಬೇಂದ್ರೆ ನಾದವನ್ನು ಹತ್ತಿಸಿಕೊಂಡ ಎಸ್ಕೆ ಅವರ ವಿಚಾರಗಳ ಎಳೆಗಳನ್ನು ಹಿಡಿದು ಅದಕ್ಕೊಂದು ರೂಪುಕೊಡುವಲ್ಲಿ, ಹರಟೆಯಂಥ ಸಂದರ್ಭದಲ್ಲಿಯೂ ಅನಾಯಾಸ ಹೊರ ಹೊಮ್ಮುವ ವಾಗ್ವೈಖರಿಯನ್ನು ಹಿಡಿಯುವಲ್ಲಿ ಬಹುಮಟ್ಟಿಗೆ ಯಶಸ್ವಿಯಾಗಿದ್ದಾರೆ. ಕವಿಯ ಬಗೆಗಿನ ಆತ್ಮೀಯತೆ, ಅವರಿಂದ ಹೆಚ್ಚಿನದನ್ನು ತಿಳಿದುಕೊಳ್ಳಬೇಕೆಂಬ ಹಂಬಲ, ಆಗಾಗ ಪ್ರಶ್ನೆ ಹಾಕಿ ಹೊಸಹೊಸ ವಿಚಾರಗಳನ್ನು ಅವರಿಂದ ಹೊರಡಿಸಿ ಅವುಗಳನ್ನು ಆಗಲೇ ಟಿಪ್ಪಣಿಸುವ ಜಿಜ್ಞಾಸೆ ಅವರ ಈ ಯಶಸ್ಸಿಗೆ ಮುಖ್ಯ ಕಾರಣ ಗಳಾಗಿವೆ. 'ಮೊದಲು ನೀವು ತಿಳಿದುಕೊಳ್ರಿ' ಎಂದು ಬೇಂದ್ರೆಯವರು ಹೇಳುತ್ತಿದ್ದು ದನ್ನು ಲೇಖಕರು ಅಕ್ಷರಶಃ ಪಾಲಿಸಲು ಪ್ರಯತ್ನಿಸಿದ್ದಾರೆ. ಈ ರಸಿಕನ ಹಸಿವನ್ನು ತಿಳಿದ ಕವಿವರ್ಯರೂ ಸುಪ್ರಸನ್ನರಾಗಿ 'ಹಾಗಾದರ ಬರಕೊಳ್ರಿ' ಎಂದು ಹೇಳು ತ್ತಿಪ್ಪುದೂ ಈ ಗುರು-ಶಿಷ್ಯರ ಅಪರೂಪದ ಹೊಂದಾಣಿಕೆಯನ್ನು ವ್ಯಕ್ತಪಡಿಸುತ್ತದೆ.

ಈ ಸಂವಾದಗಳಿಗೆ ಪ್ರಬಂಧ ರೂಪವನ್ನು ಕೊಡುವಾಗ ಆಯಾ ಸಮಯ ಸಂದರ್ಭಗಳನ್ನು ನಾಲ್ಕು ತಕ್ಕ ಮಾತಿನಲ್ಲಿ ಬಣ್ಣಿಸಿ, ಬೇಂದ್ರೆ ಸಾಮಿಪ್ಯದ ವಾತಾ ವರಣವೊಂದನ್ನು ತಮ್ಮದೇ ಆದ ರೀತಿಯಲ್ಲಿ ಲೇಖಕರು ಸೃಷ್ಟಿಸಿ, ವಾಚಕರಿಗೆ ಅದರ ರುಚಿ ಹತ್ತಿಸುತ್ತಾರೆ. ಈ ಪ್ರಬಂಧಗಳು ಹೆಚ್ಚಾಗಿ ಹರಟೆಯ ರೂಪದಲ್ಲಿ ಹಲವಾರು ಸಂಗತಿಗಳನ್ನು ಒಳಗೊಳ್ಳುವುದರಿಂದ ಅಲ್ಲಿಯ ವಿಷಯವನ್ನು ಸಂಗ್ರಹಿಸಿ ಹೇಳುವದು ಕಷ್ಟ. ಅಲ್ಲದೆ ಆಯಾ ಸಂದರ್ಭಗಳಲ್ಲಿ ಲೇಖಕರು ಮಾಡಿಸುವ ಬೇಂದ್ರೆ ದರ್ಶನವನ್ನು ನಮ್ಮ ಮಾತಿನಲ್ಲಿ ಹೇಳಿದರೆ ತನ್ನ ಮಾಂತ್ರಿಕ ಸ್ಪರ್ಶವನ್ನು ಅದು ಕಳೆದುಕೊಳ್ಳಬಹುದು. ಆದರೂ ಕೆಲವು ಮಾತುಗಳನ್ನು ಇಲ್ಲಿ ಇದ್ದಕ್ಕಿದ್ದ ಹಾಗೇ ಎತ್ತಿಕೊಂಡು ವಿವೇಚಿಸಬಹುದು.

ಮೊದಲ ಪ್ರಬಂಧದಲ್ಲಿ, ಬೇಂದ್ರೆ ಕಾವ್ಯ ಸ್ಪೇಸ್ ಯುಗದ ಭವಿಷ್ಯವಾಣಿ ಎಂಬುದನ್ನು 'ಹಕ್ಕಿಹಾರುತಿದೆ' ಹಾಗೂ 'ನಾನು - ನೀನು' ಕವಿತೆಗಳ ಮೂಲಕ ತೋರಿಸಿರುವದು ಕುತೂಹಲಕಾರಿಯಾಗಿದೆ. ಬೇಂದ್ರೆ ಮನಸ್ಸಿನ ಮೇಲೆ, ಅವರ ಕಾವ್ಯದ ಮೇಲೆ ಚಂದ್ರನ ಪ್ರಭಾವ ಹೆಚ್ಚಾಗಿರುವದು ಒಂದು ಸಂಕಲ್ಪ ವಿಶೇಷವಾಗಿ ಗೋಚರಿಸುತ್ತದೆ. 'ಕಾವ್ಯ ಭೌತಿಕ-ಆಧ್ಯಾತ್ಮಿಕದ ಒಂದು ಸಮನ್ವಯ. ಮಣ್ಣಿ ನೊಳಗೆ ದೇವರಿರುತ್ತಾನೆ; ಕಾಣೋ ಕಣ್ಣು ಬೇಕು'. 'ರಸಸಿದ್ಧಿಗಾಗಿ ಹಾತೊರೆ ಯುವ ಕಾವ್ಯರಂಗ ಕವಿಕವಿಯ ಈರ್ಷ್ಯಾರಂಗವಾಗಿರಬಾರದು'. ಈಗ ಹಾಗಾಗಿದೆ

ಎಂಬುದರ ಸೂಚನೆಯಿದು. ಬಾಳು-ಬದುಕಿನ ಅಂತರವೇ ಗೊತ್ತಿರದ ನಮಗೆ ಕವಿ ತಿಳಿಸುತ್ತಾರೆ: 'ಬದುಕೋದು matter, ಬಾಳೋದು spirit. ಮನುಷ್ಯರು ಬರಿ ಬದುಕಬಾರದು, ಬಾಳಬೇಕು. ಬಾಳಬೇಕಾದರೆ ರಸಸಿದ್ಧಿಗಾಗಿ ಹವಣಿಸಬೇಕು.' ಬೇಂದ್ರೆ ಕಾವ್ಯದ ಬೆಳವಣಿಗೆಯನ್ನು ತಿಳಿದು ನೋಡುವ ಕುತೂಹಲ ಇದ್ದವರಿಗೆ ಕವಿಯೇ ತಮ್ಮ ಮೂರು ಕವನಗಳನ್ನು ಉದಾಹರಿಸುತ್ತಾರೆ; 'ಗರಿ'ಯಲ್ಲಿಯ 'ಯುಗಾದಿ', 'ನಾಕು ತಂತಿ'ಯಲ್ಲಿಯ 'ಇದು ಯುಗಾದಿ' ಹಾಗೂ 'ಶ್ರೀಮಾತಾ'ದಲ್ಲಿಯ 'ಯುಗಾದಿ' ಆ ಮೂರಕ್ಕೂ ಕವಿ ಕೊಡುವ ವಿವರಣೆಯನು ಲೇಖಕರು ತಮ್ಮ ಮಾತಿನಲ್ಲಿ ಹಿಡಿದಿದ್ದಾರೆ. ಸಂಖ್ಯೆಗಳು ಬೇಂದ್ರೆಯವರೊಡನೆ ಹೇಗೆ ಬಂದು ಮಾತನಾಡುತ್ತವೆ, ಹೊಸ ಹೊಸ ರಹಸ್ಯಗಳನ್ನು ಭೇದಿಸುತ್ತವೆ, ವಿಜ್ಞಾನದ ಬಿಂದುವಿನಿಂದ ಸಚ್ಚಿದಾನಂದ ತತ್ವವನ್ನು ಸಂಖ್ಯಾಶಾಸ್ತ್ರ ದ್ವಾರಾ ಅವರು ಹೇಗೆ ಗುರುತಿಸುತ್ತಾರೆ ಎನ್ನುವುದಕ್ಕೆ ಇಣುಕು ನೋಟವನ್ನು ಲೇಖಕರು ಇಲ್ಲಿ ಒದಗಿಸಿದ್ದಾರೆ. ಕವಿ ಅಂಬಿಕಾತನಯದತ್ತರ ವ್ಯಕ್ತಿತ್ವಕ್ಕೆ ಕನ್ನಡಿಯಾಗಿ ಅವರ ಕವನಗಳೇ ಇವೆ. ಆದರೆ ಆ ಆಧ್ಯಾತ್ಮಿ ಬೇಂದ್ರೆಯವರ ಎತ್ತರ-ಬಿತ್ತರ ಕಾಣಬೇಕಾದರೆ ಅವರ ಸಂದರ್ಶನ ಮಾಡಿಕೊಳ್ಳಬೇಕು ಎನ್ನುತ್ತಾರೆ ಎನ್ಕೆ. "ಬೇಂದ್ರೆ ಜೇಕಂಗೆ ಸವಿಭೆಟ್ಟಿ" ಪ್ರಬಂಧ ಇಂಥ ಕೆಲವು ಮಹತ್ವದ ಅಂಶಗಳಿಂದ ಪುಷ್ಟಿಗೊಂಡಿದೆ.

"ಬೇಂದ್ರೆ 'ಅಂ. ದತ್ತ' ಎಂಬ ವ್ಯಕ್ತಿ ಮತ್ತು ಶಕ್ತಿ" ಎಂಬ ಎರಡನೆಯ ಪ್ರಬಂಧದಲ್ಲಿ, ಕೈಯ್ಯಲ್ಲಿ ಒಂದು ಚೀಲ ಹಿಡಿದು 'ಸಂವಾದ ಭಿಕ್ಷೆ' ಗೆಂದು ಸಹೃದಯರ ಮನೆಗೆ ಭೆಟ್ಟಿಕೊಡುವ ವ್ಯಕ್ತಿ ಬೇಂದ್ರೆ ನಮ್ಮೆದುರು ನಿಲ್ಲುತ್ತಾರೆ. 'ವಾದಕ್ಕೆ ಪ್ರತಿವಾದ ಸಾಕು ವಾದವಿವಾದ, ಜೀವ ಸಂವಾದಕ್ಕೆ ಹಸಿದು ಬಂದೆ' ಎಂದು 'ಮನವನ್ನೆ' ಕವನದಲ್ಲಿ ನುಡಿದ ಕವಿಯನ್ನೇ ಇಲ್ಲೂ ಸಂದರ್ಶಿಸುತ್ತೇವೆ. 'ಸೂರ್ಯ ಕಿರಣ ಇದ್ದರೆ ಮಾತ್ರ ಪ್ರಕಾಶಕ್ಕೆ ಬರುವ ಕಮಲ ಅಲ್ಲ ಇದು; ಬೇಕಾದಲ್ಲಿ ಬೇಕಾದ ಹಾಗೆ ಘಂ ಅಂತ ವಾಸನೆ ಇಡುಗಿಸುವ ಕಾಮಕಸ್ತೂರಿ' ಎಂದು ಲೇಖಕರು ಈ ಕವಿಯ ಬಗ್ಗೆ ಹೇಳುವ ಮಾತು ಅರ್ಥಪೂರ್ಣವಾಗಿದೆ.

ಜ್ಞಾನಪೀಠ ಪ್ರಶಸ್ತಿ ದೊರೆತಾಗ ಬೆಂಗಳೂರಿನ ವಿವಿಧ ಕಡೆಗಳಲ್ಲಿ ಕವಿವರ್ಯರಿಗೆ ಸತ್ಕಾರ ನಡೆಯಿತು. ಆ ಸತ್ಕಾರಕೂಟಗಳ ಭಾವಪೂರ್ಣ ಅನುಭವ ಮೂರನೇ ಪ್ರಬಂಧದಲ್ಲಿ ಸ್ವಾರಸ್ಯವಾಗಿ ನಿರೂಪಿತವಾಗಿದೆ. ಆ ಐದು ದಿನಗಳಲ್ಲಿ ಒಂದು ಮಹಾವ್ಯಕ್ತಿತ್ವದ ಪಂಚಪೈಲುಗಳ ಮೇಲೆ ಬಿದ್ದ ಮಿಂಚಿನ ಬೆಳಕನ್ನು ಲೇಖಕರು ಕಂಡುಕೊಂಡಿದ್ದಾರೆ. 'ಬೇಂದ್ರೆ ಎಂದರೆ ಒಂದು ಪ್ರತಿಭೆಯ ಪ್ರತಿಮೆ'ಯಾಗಿ ಕಾಣುತ್ತಾರೆ. ಅವರೊಡನೆ ಕಾರಿನಲ್ಲಿ ಕುಳಿತು ಪ್ರಯಾಣ ಮಾಡು

ವಾಗಲೂ ನಡೆದ ಕಾವ್ಯಶಾಸ್ತ್ರವಿನೋದದಿಂದ, ಅವರ ಪ್ರತಿಭೆಯ ಲೀಲಾ ವಿಲಾಸದ ಸಹಜತೆ ಮುಗ್ಧಗೊಳಿಸುವ ಬಗೆಯನ್ನು ಚಿತ್ರಿಸಲಾಗಿದೆ. ಹೋದಹೋದಲ್ಲೆಲ್ಲ ಬೇಂದ್ರೆ ತಮ್ಮ ಸಂದರ್ಶಕರೊಡನೆ, ಸ್ನೇಹಿತರೊಡನೆ, ಇತರರೊಡನೆ ನಡೆದುಕೊಳ್ಳುವ ರೀತಿ 'ಕಾವ್ಯಕ್ಕಿಂತ ಜೀವನ ದೊಡ್ಡದು' ಎನ್ನುವದನ್ನು ಎತ್ತಿ ತೋರಿಸುವಂಥದು.

ಕವಿಯ ಜೊತೆಗಿನ ಧರ್ಮಸ್ಥಳದ ಯಾತ್ರೆ 'ಸಂಚಾರಿ ಜ್ಞಾನಪೀಠದೊಂದಿಗೆ ಸಂಚಾರ' ಎಂಬ ನಾಲ್ಕನೆಯ ಪ್ರಬಂಧದ ವಸ್ತುವಾಗಿದೆ. ಶೆಕ್ಸಪಿಯರನ ದುರಂತ ನಾಟಕಗಳು, ಕಾಳಿದಾಸ, ಮಾರಿಸ್‌ಮ್ಯಾಟರಲಿಂಕ್ ಮೊದಲಾದವರ ಬಗ್ಗೆ ದಾರಿಯುದ್ದಕ್ಕೂ ಚರ್ಚೆ, 'ನೋ' ಮತ್ತು 'ಡು' ಗಳ ವಿವರಣೆ; ಮಾಸ್ತಿಯವರೊಡನೆ ಬಂದ ಸಂಬಂಧದ ಹಾರ್ದಿಕ ನಿರೂಪಣೆ; ಕವಿ ರಸದ ಮೂಡಿನಲ್ಲಿದ್ದಾಗ ಯಾವುದು ಬೇಕು? ಯಾವುದು ಬೇಡ? ಉಡುಪಿ, ಬೆಂಗಳೂರು ಹಾಗೂ ಧರ್ಮಸ್ಥಳಗಳಲ್ಲಿ ಅವರು ಮಾಡಿದ ಭಾಷಣಗಳ ತಿರುಳನ್ನು ಲೇಖಕರು ಹರಳುಗಟ್ಟಿಸಿ ಒದಗಿಸಿದ್ದಾರೆ. 'ಬೇಂದ್ರೆಯವರದು ಟಿಪ್ಪಣಿ ಮಾಡಿಕೊಂಡು ವಿವರವಾಗಿ ಮಾತಾಡುವ ಯಂತ್ರ ಪದ್ಧತಿಯಲ್ಲ, ಸಮಯಸ್ಫೂರ್ತಿಯಿಂದ ಸಭಿಕರ ಹೃದಯಗಳನ್ನು ಸೂರೆಗೊಳ್ಳುವ ಮಂತ್ರ ಪದ್ಧತಿ' ಎಂಬ ಎನ್ಕೆ ಮಾತನ್ನು ಅಲ್ಲಗಳೆಯುವಂತಿಲ್ಲ. ಆ ಸ್ಫೂರ್ತಿಯ ಕ್ಷಣಗಳಲ್ಲಿ ಎನ್ಕೆ ಸದಾ ಎಚ್ಚರವಾಗಿದ್ದಾರೆ.

ಕವಿವರ್ಯರೊಂದಿಗೆ ಮುಂಬಯಿ ಸಂಚಾರದಲ್ಲಿ ಒಂದು ವಾರದ ವಾಸ್ತವ್ಯ; ಭಾಷಣ, ಭೆಟ್ಟಿ, ಚರ್ಚೆಗಳಲ್ಲಿ ಪ್ರೇಕ್ಷಕನಾಗಿ, ಶ್ರೋತೃವಾಗಿ ಪಡೆದ ಸುಖವನ್ನು ಐದನೆಯ ಪ್ರಬಂಧದಲ್ಲಿ ಲೇಖಕರು ಓದುಗರೊಡನೆ ಹಂಚಿಕೊಂಡಿದ್ದಾರೆ. ಅಲ್ಲಿಯ ಸಮಾರಂಭದಲ್ಲಿ ಶ್ರೀ ಗೋಕಾಕರು 'ನಾಕುತಂತಿ'ಯ ಪರಿಚಯ ಮಾಡಿಕೊಡುತ್ತಾರೆ. ಕನ್ನಡ ಮತ್ತು ಇಂಗ್ಲಿಷಿನಲ್ಲಿ, ಬೇಂದ್ರೆ ಗೋಕಾಕರು ಒಂದೆಡೆ ಮಿಲಿತರಾದಾಗ ನೋಡುವಂತಿರುತ್ತದೆ; ಅವರ ಸಂಭಾಷಣೆ ಕೇಳುವಂತಿರುತ್ತದೆ ಎನ್ನುವ ಎನ್ಕೆ 'ತಮ್ಮದೇ ಆದ ಭವ್ಯ ವ್ಯಕ್ತಿತ್ವವನ್ನು ಬೆಳೆಯಿಸಿಕೊಂಡಿದ್ದರೂ ಗೋಕಾಕರು ತಮ್ಮ ಕಾವ್ಯಗುರುವಾದ ಬೇಂದ್ರೆ ಅವರ ಮುಂದೆ ದ್ರೋಣಾಚಾರ್ಯರೆದುರು ಅರ್ಜುನನಂತೆ ನಡೆದುಕೊಳ್ಳುತ್ತಾರೆ' ಎಂಬ ಒಳನೋಟವನ್ನು ಬೀರಿದ್ದಾರೆ. ಅನಾರೋಗ್ಯದಿಂದ ದವಾಖಾನೆಯಲ್ಲಿ ಉಪಚಾರ ಪಡೆಯುತ್ತಿದ್ದ ಗಂಗಾಧರ ಚಿತ್ತಾಲರಲ್ಲಿಗೆ ಹೋಗಿ ಬೇಂದ್ರೆ ಅವರನ್ನು ಆತ್ಮೀಯವಾಗಿ ಅಪ್ಪಿಕೊಂಡುದು 'ಎರಡು ಹೃದಯಗಳ eloquence ಏನು ಎಂಬುದನ್ನು ತೋರಿಸಿಕೊಟ್ಟಿದೆ' ಲೇಖಕರಿಗೆ.

ದೊಡ್ಡಬಳ್ಳಾಪುರಕ್ಕೆ ಹೋದ ಸಹಸಂಚಾರದ ನೆನಪಂತೂ ಲೇಖಕರಿಗೆ ಒಂದು ಅಮೃತ ಅನುಭವವೆನಿಸಿದೆ. ಡಾಗುಂಟಿ ಕಾರಿನಲ್ಲಿ ಶ್ರೀ ಗೋಕಾಕ ಹಾಗೂ ಶ್ರೀ ದಿವಾಕರರು Trancendental meditation ಕುರಿತು ಬಿಸಿ ಬಿಸಿ ಚರ್ಚೆ ನಡೆಸಿದಾಗ ಬೇಂದ್ರೆಯವರು passive listener ಆಗಿ ಕೇಳುತ್ತಿದ್ದರಂತೆ! ಅಲ್ಲಿಯ ಒಂದು ಕಾರ್ಯಕ್ರಮದಲ್ಲಿ ಶಾಂಕರದರ್ಶನದಂತಹ ಗಹನ ವಿಚಾರವನ್ನು ಬಾಲ ಬೋಧೆಯಾಗಿ ಬೇಂದ್ರೆ ಮಾಸ್ತರರು ಫಲಕದ ಮೇಲೆ ಬರೆದು ತಿಳಿಯಪಡಿಸುತ್ತಾರೆ. ತರುವಾಯ ಚರ್ಚೆಯಲ್ಲಿ ಅವರು ಪುರುಷಸೂಕ್ತವನ್ನು ತಿಳಿಯಪಡಿಸಿದ ರೀತಿ ಗುರುಕುಲ ಆಶ್ರಮದ ಉಪನಿಷತ್ ಪಾಠಕ್ರಮವನ್ನು ಊಹಿಸಿಕೊಳ್ಳುವಂತೆ ಮಾಡುತ್ತದೆ. ಮುಂದೆ ಗೋಮಾಂತಕ ಪ್ರಯಾಣವೂ ಅಷ್ಟೇ ಸ್ವಾರಸ್ಯಕರ. ಬೇಂದ್ರೆ ಯವರ ಕಾಳಿದಾಸನ ಉಪನ್ಯಾಸಕ್ಕೆ ಕೊಂಕಣಿ cum ಮರಾಠಿ ಖ್ಯಾತಕವಿ ಬಿ. ಬಿ. ಬೋರ್ಕರ್ ಅವರ ಅಧ್ಯಕ್ಷತೆ. ಗೋವೆಯ ಜೀವನ ಪದ್ಧತಿಗಳನು ಕುರಿತು ಹರಟೆಯಲ್ಲಿ 'ಒಂದು ಬಟ್ಟಲು ಮಾದಕಪೇಯಸೇವನೆ ಇಲ್ಲಿಯ ಜನಜೀವನದ ರೂಢಿ' ಎಂದು ಬೋರ್ಕರ್ ನಗೆಯಾಡಿದಾಗ 'ನಾನು ಕಾಳಿದಾಸನನ್ನೇ ಕುಡಿದು ಮತ್ತನಾಗಿ ಬಂದಿದ್ದೇನೆ' ಎಂದು ಬೇಂದ್ರೆ ಮಾರ್ನುಡಿ. 'ಇವತ್ತೇನೋ ಹಜಾಮತಿ ಬ್ಯಾಡಲ್ಲಾ, ಸಾಕಷ್ಟು ಪ್ರಜೆಂಟೇಬಲ್ ಇದ್ದೀನಿ' ಎಂಬ ಬೇಂದ್ರೆ ತಮಾಷೆ. ಇಂಥ ಪ್ರಸಂಗಗಳ ಉಲ್ಲೇಖದಿಂದ ಆರನೆಯ ಪ್ರಬಂಧ ಹೆಚ್ಚು ಆಸ್ವಾದ್ಯವೆನಿಸಿದೆ. 'ನೀವು ದಿನಾಲು ಧ್ಯಾನಕ್ಕೆ ಎಷ್ಟು ಹೊತ್ತು ಕೂಡುತ್ತೀರಿ?' ಎಂಬ ಲೇಖಕರ ಪ್ರಶ್ನೆಗೆ ಬೇಂದ್ರೆ ಉತ್ತರವೇನು, ಗೊತ್ತೇ? 'ಇಪ್ಪತ್ನಾಲ್ಕು ತಾಸೂ ನನ್ನ ಧ್ಯಾನ ನಡದೇ ಇರ್ತದ. ನಿದ್ದ್ಯಾಗೂ ನನ್ನ ಧ್ಯಾನ ನಡದs ಇರತದ, ಕನಸಿನ್ಯಾಗ ನನ್ನ ಗುರುಗೋಳು ನನಗ ಮಾರ್ಗದರ್ಶನ ಮಾಡ್ತಾ ಇರ್ತಾರ.'

ಎಂಬತ್ತರ ಅಂಚಿನಾತನಯದತ್ತರ 'ಜೀವನ ಜಿಜ್ಞಾಸೆ' ಕೊನೆಯ ಪ್ರಬಂಧದ ಮಹತ್ವದ ವಸ್ತು. ಅಧ್ಯಾತ್ಮ ಮಾರ್ಗದಲ್ಲಿ ಶಬ್ದಕ್ಕಿಂತ ಸಂಜ್ಞೆಯೇ ಹೆಚ್ಚು ಖಚಿತ ವೆಂದು ನಂಬಿದ ಬೇಂದ್ರೆಯವರು ಕಾವ್ಯದಲ್ಲಿ ಚಾರುತ್ವ ಮತ್ತು ಚಾತುರ್ಯವನ್ನು ಪ್ರತಿನಿಧಿಸಿದ 'ನಾಕುತಂತಿ'ಯಲ್ಲಿಯ ಸಂಖ್ಯಾಸಿದ್ಧಿಯ ಬಗ್ಗೆ ಕವಿಯೊಡನೆ ಸಂವಾದ ನಡೆಸುತ್ತಿದ್ದಾಗಲೇ ಎಸ್ಕೆ ಬರೆದುಕೊಂಡು ಅದನ್ನಿಲ್ಲಿ ಓದುಗರಿಗೆ ಒಪ್ಪಿಸಿದ್ದಾರೆ. ಅಲ್ಲದೆ 'ಜೀವನ ಜಿಜ್ಞಾಸೆ'ಯ ಕೆಲವು ಪ್ರಶ್ನೋತ್ತರಗಳು ಬೇಂದ್ರೆ ವ್ಯಕ್ತಿತ್ವದ ವೈಶಿಷ್ಟ್ಯವನ್ನರಿಯುವ ದೃಷ್ಟಿಯಿಂದ ತುಂಬ ಮಹತ್ವದವೆನಿಸುತ್ತವೆ.

ಜೀವನ ಜಿಜ್ಞಾಸೆಯಲ್ಲಿ ವೇದ, ಉಪನಿಷತ್ತು, ಗೀತೆ ಇವುಗಳ ವಿಷಯ ಬರ ಬಾರದೋ ಹೇಗೆ? ಎಂಬ ಪ್ರಶ್ನೆಗೆ ಬರಬಾರದೆಂದೇ ಬೇಂದ್ರೆ ಅಭಿಪ್ರಾಯ. ಅವರು ಕೊಡುವ ಕಾರಣ ಅರ್ಥವತ್ತಾಗಿದೆ. "ಅವು ಮೂರು ಜೀವನವಲ್ಲ, ತಮ್ಮ ಕಾಲದ

ಜೀವನವನ್ನು ತಿಳಿದುಕೊಂಡವರ ಮಾತುಗಳಿವು... ಇವು ಇದ್ದದ್ದೇ ಗೊತ್ತಿಲ್ಲದವರು ಜೀವನ ಜಿಜ್ಞಾಸೆ ನಡೆಸಲಾರರೇ ? " ಜೀವನದಲ್ಲಿಯ ಸುಖ-ದುಃಖಗಳ ಬಗೆಗೂ ಅವರ ವಿಚಾರ ಬೀಜರೂಪದವು. "ನಿಮಗೆ ಸಹನೆ ಆಗದ್ದಕ್ಕೆ ದುಃಖ ಅಂತೀರಿ, ಸಹ್ಯವಾದದ್ದಕ್ಕೆ ಸುಖ ಅಂತೀರಿ, ಗ್ರಾಹ್ಯ-ಅಗ್ರಾಹ್ಯ ಅನುಭವವೇ ಸುಖ-ದುಃಖ. ಒಂದು norm keepup ಮಾಡೋದೆ ಜೀವನ". ಎಂಥಾ ಅನುಭವ ಬಂದರೂ ಎದೆಗೆಡದಿರುವುದೇ ಸುಖಿ ಆಗಿರೋ ರಹಸ್ಯ ಎಂದೂ, ದುಃಖ ಸಹನೆಯ ಅಭ್ಯಾಸವೇ ತಪಸ್ಸೆಂದೂ ಅವರ ನುಡಿ.

ಭಾರತೀಯ ಜ್ಞಾನಪಿಠ ಪ್ರಶಸ್ತಿಪ್ರದಾನ ಸಮಾರಂಭದಲ್ಲಿ ಬೇಂದ್ರೆಯವರು ಮಾಡಿದ ಭಾಷಣದ ಸೊಗಸಾದ ಕನ್ನಡ ಅನುವಾದ ಗ್ರಂಥದ ಕೊನೆಯಲ್ಲಿ ಪ್ರಥಮ ಬಾರಿಗೆ ಪ್ರಕಟವಾಗಿದೆ. ಪೂರ್ವಭಾವಿಯಾಗಿ ಸಿದ್ಧಪಡಿಸಿದ ಬೇಂದ್ರೆ ಭಾಷಣ ಎಷ್ಟು ಕ್ರಮಬದ್ಧವಾಗಿ, ಮಹತ್ವಪೂರ್ಣವಾಗಿರಬಲ್ಲುದು ಎಂಬುದಕ್ಕೆ ಇದೊಂದು ಉತ್ತಮ ಉದಾಹರಣೆ. ತತ್ವಜ್ಞಾನಿ, ಆಧ್ಯಾತ್ಮಿ, ವಿದ್ವಾಂಸ ಮೂವರು ಕವಿಯಲ್ಲಿ ಹೇಗೆ ಸಮರಸಗೊಂಡಿದ್ದಾರೆಂಬುದನ್ನೂ ಇಲ್ಲಿ ಕಾಣಬಹುದು.

ಬೇಂದ್ರೆಯವರಿಗೆ ಒಬ್ಬ ಬಾಸ್‌ವೆಲ್ ಬೇಕು ಎಂಬುದು ಅನೇಕರ ಅನಿಸಿಕೆ ಯಾಗಿತ್ತು. ಈ ಗ್ರಂಥದ ಒಂದೆಡೆಯಲ್ಲಿ ಎನ್ಕೆ ಹೇಳಿರುವಂತೆ I don't want any one to boss well over me ಎಂಬ ಸ್ವಭಾವದ ಬೇಂದ್ರೆ ಸಿಕ್ಕ ಸಿಕ್ಕವರ ಕೈಗೆ ಎಟಕುವಂತಿರಲಿಲ್ಲ. ಆದರೆ ಅವರ ಕಾವ್ಯದ ಬಗ್ಗೆ, ಅವರ ವಿಚಾರಗಳ ಬಗ್ಗೆ ನಿಜವಾದ ಆಸಕ್ತಿ ವಹಿಸಿ ಶ್ರದ್ಧೆಯಿಂದ ಬೆಂಬತ್ತಿದವರಿಗೆ ಮೂಡು ಬಂದಾಗೆಲ್ಲ ತಮ್ಮ ಎದೆಯ ಕಪಾಟನ್ನೇ ತೆಗೆದುಬಿಡುತ್ತಿದ್ದರೆಂಬುದಕ್ಕೆ ಇಲ್ಲಿಯ ಬರಹಗಳೇ ಸಾಕ್ಷಿ. "ಬೇಂದ್ರೆಯವರ ಸನ್ನಿಧಾನದಲ್ಲಿ ನಾನು ಗುರುವಿನ ಕರುಣೆ ಕಂಡಿದ್ದೇನೆ. ಅಣ್ಣನ ಪ್ರೀತಿಯನ್ನು ಉಂಡಿದ್ದೇನೆ, ತಾಯಿಯ ವಾತ್ಸಲ್ಯವನ್ನು ಸವಿದಿದ್ದೇನೆ." ಎಂಬ ಕೃತಕೃತ್ಯತೆಯ ಭಾವವನ್ನು ಲೇಖಕರು ತಳೆದಿದ್ದಾರೆ. ಸುಮಾರು ನಾಲ್ವತ್ತು ವರ್ಷಗಳಿಂದ ಸಾಧನಕೇರಿಯ ಯಾತ್ರೆಮಾಡಿ ಒಂದೊಂದು ಭೆಟ್ಟಿಯನ್ನು ದಿವ್ಯ ರೊಟ್ಟಿಯಾಗಿ ಬುತ್ತಿ ಕಟ್ಟಿಕೊಂಡ ಎನ್ಕೆಯವರಿಂದ ಬೇಂದ್ರೆ ಚರಿತ್ರೆಯೂ ಸೇರಿದಂತೆ ಅವರನ್ನು ಕುರಿತು ಬಾಸ್ವೆಲ್‌ನ The Life of Samuel Johnson ಮಾದರಿಯಲ್ಲಿ ಒಂದು ಗ್ರಂಥ ಬರಬಹುದಾದರೆ ಕನ್ನಡಕ್ಕೆ ಅಂಥ ಭಾಗ್ಯ ಬೇರೆ ಇಲ್ಲ.

# ‘ಭಾರತೀಯ ಧರ್ಮಪರಂಪರೆ ಮತ್ತು ಭಗವಾನ್ ಶ್ರೀ ಅರವಿಂದರ ದರ್ಶನ’

ಚಿ. ನಾ. ದೇಶಪಾಂಡೆ

ಎನ್ಕೆಯವರನ್ನು ಕನ್ನಡನಾಡು ಸಾಹಿತ್ಯಿಕ, ಹಾಸ್ಯಗಾರ, ಅದ್ವಿತೀಯ ಏಕಾಂಕ ಲೇಖಕ ಎಂದು ಮುಂತಾಗಿ ಗುರುತಿಸುತ್ತದೆ. ವೈಯಕ್ತಿಕ ಜೀವನದಲ್ಲಿ ಅವರು ನಂಜನ್ನುಂಡು, ಅದನ್ನು ಕಂಠದಲ್ಲಿಟ್ಟುಕೊಂಡು, ನಗುತ್ತ ಬೇರೆಯವರನ್ನು ನಗಿಸುವ ಗತ್ತು ಅವರಿಗೇ ಗೊತ್ತು. ಆದರೆ ಅವರ ವ್ಯಕ್ತಿತ್ವಕ್ಕೆ ಬೇರೊಂದು ಮುಖವಿದೆ, ಪರಿಪಕ್ವವಾದ ಅವರ ವ್ಯಕ್ತಿತ್ವದಲ್ಲಿ ಚಿಂತನಶೀಲತೆಯಿಂದ ಮೂಡಿ ಬಂದ ಮುಖ ಎಂದರೆ ಅವರಲ್ಲಿಯ ಆಧ್ಯಾತ್ಮಿಕ ಒಲವು.

ಎನ್ಕೆಯವರದು ವಿಶಾಲ ಹೃದಯ. “ವಸುಧೈವ ಕುಟುಂಬಕಮ್”, ಎಲ್ಲರೂ ತಮ್ಮವರೇ ಎಂಬ ಭಾವನೆ ಅವರದು. ಇದು ಅವರ ಬಾಹ್ಯ ವ್ಯವಹಾರಕ್ಕಷ್ಟೇ ಸೀಮಿತವಾಗಿಲ್ಲ. ಧಾರ್ಮಿಕ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳಲ್ಲಿಯೂ ಅದು ವ್ಯಾಪಿಸಿದೆ. ಪ್ರಪಂಚದಲ್ಲಿ ತಲೆಯೆತ್ತಿದ ಎಲ್ಲ ಮತ-ಧರ್ಮಗಳನ್ನು ಅಭ್ಯಸಿಸಿ, ಅವುಗಳಲ್ಲಿಯ ಒಳ್ಳೆಯ ಅಂಶಗಳನ್ನು ಅವರು ಗ್ರಹಿಸಿದ್ದಾರೆ. ಎಲ್ಲ ಮತ-ಧರ್ಮಗಳ ಬಗ್ಗೆ ಅವರಲ್ಲಿ ಸಮಾನವಾದ ಆಸ್ಥೆ, ಗೌರವ. ಭಾರತೀಯ ಮತ-ಧರ್ಮಗಳನ್ನಂತೂ ಅವರು ಆಳವಾಗಿ ಅಭ್ಯಾಸ ಮಾಡಿದ್ದಾರೆ. ವಿಶೇಷವಾದ ಅವರ ಆಸ್ಥೆ, ಶ್ರೀ ಅರವಿಂದರ ‘ಪೂರ್ಣಯೋಗ’ದಲ್ಲಿ. ಶ್ರೀ ಅರವಿಂದರು ನವಮನ್ವಂತರದ ದೈವ ಪ್ರೇಷಿತ ಪ್ರವಾದಿ; ಮಾನವಕುಲದ ಉದ್ಧಾರಕ. ಪೂರ್ಣಯೋಗವೇ ಭವತಾರಕ, ಅಮೃತತ್ವದಾಯಕ ಎಂಬುದು ಅವರ ಮನವರಿಕೆ. ಅರವಿಂದರ ಬಗ್ಗೆ ಎನ್ಕೆಯವರೊಡನೆ ಚರ್ಚೆಮಾಡುವಾಗ ನೋಡಬೇಕು ಅವರ ವಾಗ್ವೈಖರಿ! ಅರವಿಂದರ ಸಿದ್ಧಾಂತಗಳೆಲ್ಲ ತಮ್ಮ ಸಿದ್ಧಾಂತಗಳೇನೋ ಅನ್ನುವಷ್ಟು ಅವುಗಳನ್ನು ತಮ್ಮಲ್ಲಿ ಅಳವಡಿಸಿಕೊಂಡಿದ್ದಾರೆ.

‘ಧರ್ಮ’ ಎಂಬ ಶಬ್ದಕ್ಕೆ ಅನೇಕ ಅರ್ಥಗಳಿವೆ. ಸಾಮಾನ್ಯವಾಗಿ ಆ ಶಬ್ದವು ಯಾವದೊಂದು ದೇವತೆಯಲ್ಲಿ ಶ್ರದ್ಧೆಯನ್ನಿಟ್ಟು ಅದರ ಪ್ರೀತ್ಯರ್ಥವಾಗಿ ಮಾಡುವ

ವಿಶಿಷ್ಟವಾದ ಆಚಾರವನ್ನು ಸೂಚಿಸುತ್ತದೆ. 'ದರ್ಶನ'ವೆಂಬುದು ಮಾನವನ ಚಿರ ಶಾಂತಿಗಾಗಿ ರೂಪಿಸಿದ ಸಮಂಜಸವಾದ ವಿಚಾರಸರಣಿ. ಇದರಲ್ಲಿ ತರ್ಕ ಮತ್ತು ಅನುಭವಗಳಿಗೂ ಸ್ಥಾನವಿದೆ. ಧರ್ಮವೆಂದರೆ religion ಮತ್ತು ದರ್ಶನವೆಂದರೆ system of philosophy ಎನ್ನಬಹುದು. ಇದು ಪಾಶ್ಚಾತ್ಯರ ವಿಚಾರ. ಭಾರತದಲ್ಲಿ ಮಾತ್ರ ದರ್ಶನವು ತರ್ಕಾನುಭವಗಳಿಗಲ್ಲದೆ ಶಾಸ್ತ್ರಗ್ರಂಥಗಳಿಗೂ ಒಗ್ಗಬೇಕು. ಧರ್ಮವು ತರ್ಕಾನುಭವಗಳಿಗೆ ಸಮಂಜಸವಾಗಿರದಿದ್ದರೂ ನಡೆದೀತು. ಅದಕ್ಕಾಗಿ ದರ್ಶನಗಳೆಂದು ಪ್ರಸಿದ್ಧವಾದ ಅದ್ವೈತ, ವಿಶಿಷ್ಟಾದ್ವೈತ ಮುಂತಾದ ವುಗಳನ್ನು ಗ್ರಂಥದ ಶೀರ್ಷಿಕೆಯಲ್ಲಿ 'ಧರ್ಮ'ಗಳೆಂದು ಹೇಳಿದ್ದು ಅರವಿಂದರ ಬಗ್ಗೆ ಎನ್ಕೆಯವರ ಗೌರವವನ್ನು ಸೂಚಿಸುತ್ತದೆ. ಶೀರ್ಷಿಕೆಯಂತೆ ಅರವಿಂದರ ಪೂರ್ಣಯೋಗವೊಂದೇ ದರ್ಶನ, ಉಳಿದವುಗಳೆಲ್ಲ ಧರ್ಮಗಳು.

'ಗ್ರಂಥದರ್ಶನ'ದಲ್ಲಿ ಅವರೇ ಹೇಳಿದಂತೆ ವ್ಯಾಪಕವಾದ ಧರ್ಮ ಹಾಗೂ ದರ್ಶನ ಶಾಸ್ತ್ರಗಳನ್ನೆಲ್ಲ ಈ ಚಿಕ್ಕಗಾತ್ರದ ಪುಸ್ತಕದಲ್ಲಿ ಸಮಾವೇಶಗೊಳಿಸುವದು ನಿಜಕ್ಕೂ ಒಂದು ದೊಡ್ಡ ಸಮಸ್ಯೆ. ವಿಷಯದ ಮೇಲೆ ಸಂಪೂರ್ಣವಾಗಿ ಹತೋಟಿ ಯಿದ್ದವರಿಗೆ ಇದು ಸಾಧ್ಯ. ಈ ಗ್ರಂಥವನ್ನು ಬರೆಯಲು ಪ್ರಾರಂಭಿಸುವದು ಎನ್ಕೆ ಯವರ ಎಲ್ಲ ದರ್ಶನಗಳ ಮೇಲಿನ ಪ್ರಭುತ್ವವನ್ನು ಎತ್ತಿತೋರಿಸುತ್ತದೆ. ಗ್ರಂಥ ದಲ್ಲಿಯ ಪುಟಗಳ ಸಂಖ್ಯೆ ಅರವತ್ತೆಂಟು. ಭಾರತೀಯ ಧರ್ಮಪರಂಪರೆಗೆ ಮೀಸ ಲಾದವು ಮೂವತ್ನಾಲ್ಕು ಮತ್ತು ಅರವಿಂದರ ದರ್ಶನಕ್ಕೆ ಮೀಸಲಾದವು ಮೂವತ್ನಾಲ್ಕು. ಎಂಥ ನ್ಯಾಯದೃಷ್ಟಿ! ವಿಷಯಗಳ ವಿಂಗಡಣೆಯಲ್ಲಿ ಎಷ್ಟು ಚಾಕಚಕ್ಯತೆ! ನ್ಯಾಯವಾದುದನ್ನೇ ಮಾಡಬೇಕೆಂಬ ಅವರ ಜೀವನದಲ್ಲಿಯ ದೃಷ್ಟಿಯು ಈ ಗ್ರಂಥದಲ್ಲಿಯೂ ಕಂಡುಬರುತ್ತದೆ.

ಪೂರ್ವಾರ್ಧದ ಭಾರತೀಯ ಧರ್ಮಪರಂಪರೆಯಲ್ಲಿ ನಮ್ಮ ವೈದಿಕ ಪರಂಪರೆ, ಜೈನ-ಬೌದ್ಧ-ಚಾರ್ವಾಕ ಮತಗಳು ಹಾಗೂ ಆಚಾರ್ಯತ್ರಯರು ಮತ್ತು ಬಸವೇಶ್ವರರು ಎಂಬ ಮೂರು ಭಾಗಗಳಿವೆ. ವೇದ ವಾಙ್ಮಯವು ಅನಂತರದ ಎಲ್ಲ ಮತ-ಸಂಘಗಳ ಉಗಮ. ವೈದಿಕ ವಿಚಾರಗಳ ಪ್ರಭಾವದ ಅತಿರೇಕದಿಂದಲೆ ಅವು ಗಳನ್ನು ಪ್ರತಿಭಟಿಸಬೇಕೆಂದಲ್ಲೋ ಏನೋ, ಜೈನ, ಬೌದ್ಧ, ಚಾರ್ವಾಕ ಮತಗಳು ತಲೆಯೆತ್ತಿದವು. ಅರವಿಂದರ ದರ್ಶನವಾದರೂ ವೇದಗಳ ಪ್ರಭಾವವನ್ನು ಮೀರಿಲ್ಲ. ಈ ಮಾತನ್ನೇ ಎನ್ಕೆಯವರು "ಭಾರತದ ಹಿರಿಮೆ-ಗರಿಮೆ, ಪುಣ್ಯ ಪಾವಿತ್ರ್ಯಗಳ ಹಿನ್ನೆಲೆ ವೇದಯುಗದಿಂದ ಇಂದಿನ ವೈಜ್ಞಾನಿಕ ಯುಗದ ವರೆಗೆ ಮೈಚಾಚಿದೆ" (ಪುಟ ೨) ಎಂಬಲ್ಲಿ ವ್ಯಕ್ತಪಡಿಸಿದ್ದಾರೆ. ಇದಲ್ಲದೆ "ವೇದರ್ಷಿಗಳ ದಾರ್ಶನಿಕ ದೃಷ್ಟಿಯು ಆಧುನಿಕ ವೈಜ್ಞಾನಿಕ ವಿಷಯಗಳಿಗೆ ಸಂಪೂರ್ಣವಾಗಿ ಹೊಂದಿಕೆ

ಯಾಗಿದೆ." (ಪುಟ ೪) ಎಂಬ ಎಸ್ಕೆಯವರ ವಿಧಾನವಾದರೂ ಖಚಿತ. ಆಯಿನ್ ಸ್ಟೀನ್, ಎಡಿಂಗ್ಟನ್, ರಸೇಲ್, ಸರ್ ಜೇಮ್ಸ್‌ಜೀನ್ಸ್ ಮುಂತಾದ ಪಾಶ್ಚಾತ್ಯ ಭೌತಶಾಸ್ತ್ರಜ್ಞರ ಹಾಗೂ ತತ್ವಜ್ಞಾನಿಗಳ ಗ್ರಂಥಗಳನ್ನು ಪರಿಶೀಲಿಸಿದರೆ ಇದರ ಸತ್ಯತೆಯು ಕಂಡುಬರುತ್ತದೆ. ಗ್ರಂಥಕರ್ತರು ಈ ಭಾಗದಲ್ಲಿ ವೇದ, ಬ್ರಾಹ್ಮಣ, ಉಪನಿಷತ್ತು ಹಾಗೂ ಸ್ಮೃತಿಗಳ ತಿರುಳನ್ನು ಸಂಕ್ಷೇಪವಾಗಿ ಕೊಟ್ಟು ಭಗವದ್ಗೀತೆಯ ಸಂದೇಶವನ್ನಾದರೂ ಒಳ್ಳೇ ಮಾರ್ಮಿಕವಾಗಿ ಹೇಳಿದ್ದಾರೆ. "ಕೌಶಲವೆಂದರೆ ಕರ್ಮದಲ್ಲಿ ಅಭಿವ್ಯಕ್ತವಾಗುವ ಜ್ಞಾನವೆಂತಲೂ ಜ್ಞಾನನಿಯಂತ್ರಿತವಾದ ಕರ್ಮವೆಂತಲೂ ಅರ್ಥಮಾಡುತ್ತದೆ ಗೀತೆ ... ಭಗವತ್ತಾದಾತ್ಮ್ಯವೇ ಭಕ್ತಿಯ ಅಂತಿಮ ಗಮ್ಯ,ಎಂದರೆ ಭಕ್ತಿ ಅಂಧವಾಗಿರಬಾರದು ಜ್ಞಾನಪೂರ್ಣವಾಗಿರಬೇಕು" (ಪುಟ ೧೧) ಎಂಥ ಸಮರ್ಪಕವಾದ ವಿಶ್ಲೇಷಣೆ!

ಜೈನ-ಬೌದ್ಧ ಚಾರ್ವಾಕ ಮತಗಳನ್ನು ಚೆನ್ನಾಗಿ ವಿಶದೀಕರಿಸಿ ಗ್ರಂಥಕರ್ತರು ಅದ್ವೈತಾದಿ ದರ್ಶನಗಳ ವಿವರಣೆಯನ್ನೆತ್ತಿಕೊಳ್ಳುತ್ತಾರೆ. ಪಕ್ಷಪಾತವಿಲ್ಲದೆ ವರ್ಣಿಸುವ ಅವರ ತವಕವು ಎದ್ದುಕಾಣುತ್ತದೆ. ಯಾವ ವಿವಾದಾಸ್ಪದ ಅಂಶವನ್ನೂ ಉಲ್ಲೇಖಿಸಕೂಡದೆಂಬ ಜಾಗರೂಕತೆಯಾದರೂ ಕಂಡುಬರುತ್ತದೆ. "ಅದ್ವೈತ ಮತವು ಈ ಮೊದಲೆ ಕಂಡುಹಿಡಿಯಲ್ಪಟ್ಟಿದ್ದಿತು ಎಂದೂ ವೇದೋಪನಿಷತ್ತುಗಳು ಇದನ್ನೇ ಬೋಧಿಸುತ್ತವೆಂದೂ ನಂಬುಗೆ ಇದೆ". (ಪುಟ ೧೮) "ಪಾಂಚರಾತ್ರವು ಭಾಗವತದಿಂದ ಸ್ವಲ್ಪ ಭಿನ್ನವಾದದ್ದು ಎಂದೂ ವಿದ್ವಾಂಸರ ಮತ" (ಪುಟ ೨೩) ಇಂಥ ವಿಧಾನಗಳು ಮತ್ತು ಅಲ್ಲಲ್ಲಿ ವಿದ್ವಾಂಸರ ಗ್ರಂಥಗಳಿಂದ ಅವತರಣಿಕೆಗಳು ಇವಕ್ಕೆ ನಿದರ್ಶನ. ಎಸ್ಕೆಯವರ ಭಾರತೀಯ ದರ್ಶನಪರಂಪರೆಯ ಆಳವಾದ ಪ್ರಾಮಾಣಿಕವಾದ ಮತ್ತು ಸಹಾನುಭೂತಿಪರ ಅಭ್ಯಾಸವು ಪ್ರಶಂಸನೀಯ. ಆದರೆ "ಶಂಕರರ ತತ್ತ್ವಗಳು ಬೌದ್ಧಮತ ತತ್ತ್ವಗಳನ್ನು ಕೆಲಮಟ್ಟಿಗೆ ಹೋಲುವುದರಿಂದ ಅದಕ್ಕೆ ಪ್ರಚ್ಛನ್ನ ಬೌದ್ಧಮತವೆಂದು ಕರೆದರು." (ಪುಟ ೨೦) ಎಂಬ ವಿಧಾನವು ಅವರ ಕೈತಪ್ಪಿಹೋಗಿದೆ ಎಂದು ನನ್ನ ಭಾವನೆ. "ಕರೆದರು" ಎಂದರೆ ಯಾರು ಕರೆದರು ? ಅದಕ್ಕೆ ಆಧಾರವೇನು ? ಇರಲಿ. 'ಕಿಮಿವ ಹಿ ಮಧುರಾಣಾಂ ಮಂಡನಂ ನ ಕೃತೀನಾಮ್' ಸುಂದರವಾದ ಕೃತಿಗಳಿಗೆ ಯಾವುದು ಒಪ್ಪಾಗಿಲ್ಲ ? ಏನೆ ಇದ್ದರೂ ಶಂಕರರ, ರಾಮಾನುಜರ, ಮಧ್ವರ ಹಾಗೂ ಬಸವೇಶ್ವರರ ಸಿದ್ಧಾಂತಗಳು ಯಥಾರ್ಥವಾಗಿ, ಹಿತವಾಗಿ, ಮಿತವಾಗಿ ವರ್ಣಿಸಲ್ಪಟ್ಟಿವೆ. ಇದು ಗ್ರಂಥದ ಪೂರ್ವಾರ್ಧ. ಉತ್ತರಾರ್ಧದಲ್ಲಿ "ಪುರಾತನ ದರ್ಶನಗಳು ಎಲ್ಲಿ ನಿಂತುಬಿಟ್ಟವೋ, ಅಲ್ಲಿ ನನ್ನ ದರ್ಶನವು ಆರಂಭವಾಗುತ್ತದೆ" ಎಂದು ಅರವಿಂದರ ವಿಧಾನದ ಸಮರ್ಥನೆ ಇದೆ.

ಉತ್ತರಾರ್ಧದ ಮೊದಲನೆಯ ಭಾಗದಲ್ಲಿ ಎನ್ಕೆಯವರು ಅರವಿಂದರ ಜೀವನ ವನ್ನು ಸಂಕ್ಷೇಪವಾಗಿ ಬರೆದಿದ್ದಾರೆ. ವಿಷಯವನ್ನು ವಿಶದವಾಗಿ ಓದುಗರಿಗೆ ತಿಳಿಯ ಪಡಿಸುವದೆ ಅವರ ಉದ್ದೇಶವಾದ್ದರಿಂದ, ಅವರ ಲೇಖನಿಯಲ್ಲಿ ಸಹಜತೆ ಇದೆ. ಇದು ಮೂಲದಲ್ಲಿ ಅವರು ಶಿಕ್ಷಕರಾಗಿದ್ದ ಕುರುಹು ಆಗಿರಬಹುದು. ಕೆಲವೇ ಶಬ್ದ ಗಳಲ್ಲಿ ಸಾರವನ್ನು ಹೇಳುವದಕ್ಕೆ ಸಂಸ್ಕೃತ ಕಾವ್ಯಶಾಸ್ತ್ರದಲ್ಲಿ ವೈದರ್ಭೀ ರೀತಿ ಯೆನ್ನುವದುಂಟು. ಇಂಥ ಬರಹದಲ್ಲಿ ಎನ್ಕೆಯವರದು ಪಳಗಿದ ಕೈ. ನಿರೂಪಣೆ ಯಲ್ಲಿಯ ಮಾರ್ದವ್ರೂ ಅದನ್ನು ಸರಿಗಟ್ಟುವದು. "ಭಾರತದ ದಾಸ್ಯಸೆರೆಯಿಂದ ಅಲ್ಲ, ಮಾನವನ ಜೀವನ ಬಂಧನದ ಸೆರೆಯನ್ನೇ ಹರಿದು ಮುಕ್ತಿಸಿರಿಯ ಮಾರ್ಗ ವನ್ನು ತೆರೆಯಿತು." (ಪುಟ ೪೦), 'ಈ ಹಿಂದೂ ಧರ್ಮದಲ್ಲಿ ಒಂದು ಬ್ರಹ್ಮಾಂಡ ಸತ್ಯವಡಗಿರಬೇಕು.' (ಪುಟ ೪೧) ಮುಂತಾದ ವಿಧಾನಗಳು ಇದಕ್ಕೆ ನಿದರ್ಶನ. ವಿಧಿಯ ಕೈವಾಡದಿಂದ ಸರ್ ಅರವಿಂದೋ ಆಗಬೇಕಾಗಿದ್ದ ವ್ಯಕ್ತಿಯು ಭಗವಾನ್ ಶ್ರೀ ಅರವಿಂದರಾದ ಕಥೆಯು ಈ ಭಾಗದಲ್ಲಿ ಚೆನ್ನಾಗಿ ಚಿತ್ರಿಸಲ್ಪಟ್ಟಿದೆ.

ಎರಡನೆಯ ಭಾಗದಲ್ಲಿ ಮೀರಾ ಮಾತೆಯರ ಜೀವನ ಹಾಗೂ ಅವರ ಆಧ್ಯಾ ತ್ಮಿಕ ಅನುಭವಗಳ ವರ್ಣನೆಯಾದರೂ ಅಷ್ಟೇ ಹೃದ್ಯವಾಗಿವೆ. ಎನ್ಕೆಯವರ ಜೀವನ ರಹಸ್ಯವಾದರೂ ಸದ್ದುಗದ್ದಲವಿಲ್ಲದ ಆಧ್ಯಾತ್ಮಿಕ ಸಿದ್ಧಿಯೋಗ. ಅವರು ಮೀರಾ ಮಾತೆಯವರಿಂದ ಎಷ್ಟು ಪ್ರಭಾವಿತರಾಗಿರಬಹುದೆಂಬುದು ಸ್ಪಷ್ಟವಾಗಿ ಇಲ್ಲಿ ಕಂಡುಬರುತ್ತದೆ. 'ಭೋಗಭೂಮಿಯಲ್ಲಿ ಯೋಗದ ಶಿಶುವೊಂದು ಜನ್ಮವೆತ್ತುವದು ಚೋದ್ಯವಲ್ಲವೇ ?' (ಪುಟ ೬೩) ಮಾತೆಯರ ಹಾಗೂ ಅರವಿಂದರ ಸಂಬಂಧವು 'ಪೂರ್ವಜನ್ಮದ ಮೀರಾ-ಕೃಷ್ಣರ ಸಂಬಂಧವೆ ಏನೋ !' (ಪುಟ ೯೬) ಎಂಬವು ಗದ್ಯಕಾವ್ಯ. ಒಟ್ಟಿನಲ್ಲಿ ಮೀರಾಮಾತೆಯರು ಅರವಿಂದರ ಯೋಗಸಾಧನೆಯಲ್ಲಿ ಸಹಕಾರಿಯಾದರು.

'ಶ್ರೀ ಅರವಿಂದರ ಬೋಧೆ ಮತ್ತು ದಾರ್ಶನಿಕ ವಿಚಾರ'ವೆಂಬ ಭಾಗದಲ್ಲಿ ಎನ್ಕೆಯವರು ಅಸಾಧ್ಯವನ್ನೇ ಸಾಧಿಸಿದ್ದಾರೆಂದು ಹೇಳಬಹುದು; ಕೇವಲ ಒಂಬತ್ತು ಪುಟಗಳಲ್ಲಿ ಅರವಿಂದರ ದರ್ಶನದ ಸಾರಸರ್ವಸ್ವವನ್ನೇ ಹಿಂಡಿ ತೆಗೆದಿದ್ದಾರೆ. ಶ್ರೀ ಅರವಿಂದರು ಬರೆದ ಸಾಹಿತ್ಯ ಅಪಾರ. ಅವರ ಗ್ರಂಥಗಳನ್ನು ಓದಿ ಅರ್ಥ ಮಾಡಿಕೊಳ್ಳುವದೇ ಒಂದು ಮಹಾಸಾಧನೆ. The Life Divine, Savitri, Synthesis of yoga ಮುಂತಾದ ಅವರ ಗ್ರಂಥಗಳಲ್ಲಿ ಇಂಗ್ಲಿಷ ಭಾಷೆ ಜಟಿಲ; ಆ ಗ್ರಂಥಗಳಿಂದ ಅವರ ತತ್ತ್ವಗಳನ್ನು ಗ್ರಹಿಸುವದು ಇನ್ನೂ ಜಟಿಲ; ಮೇಲೆ Psychisisation, Supramentalisation ಮುಂತಾದ ಪಾರಿಭಾಷಿಕ ಶಬ್ದಗಳು ಓದುಗರಿಗೆ ಭಯವನ್ನುಂಟು ಮಾಡುತ್ತವೆ. ಅರವಿಂದರ ವಾಙ್ಮಯವನ್ನು

ಓದಿ ಅದರಲ್ಲಿ ಅವರು ಹೇಳಿದ ಸಾಧನೆಯನ್ನು ತಿಳಿಗನ್ನಡದಲ್ಲಿ ಸಾಮಾನ್ಯ ಜನರಿಗೆ ಮನದಟ್ಟಾಗುವಂತೆ ಬರೆದ ಎನ್ಕೆಯವರ ಸಾಧನೆ ನಿಜಕ್ಕೂ ಶ್ಲಾಘನೀಯ.

ಅರವಿಂದರು ತಮ್ಮ ದೇಹ-ಮನಸ್ಸುಗಳನ್ನ ಪ್ರಯೋಗಶಾಲೆಯನ್ನಾಗಿ ಪರಿವರ್ತಿಸಿ, ಆಧ್ಯಾತ್ಮ ಕ್ಷೇತ್ರದಲ್ಲಿಯ ಪ್ರಯೋಗಗಳನ್ನು ಸತತವಾಗಿ ನಾಲ್ಕು ದಶಕಗಳ ವರೆಗೆ ಕೈಕೊಂಡರು. ಡಾರ್ವಿನ್ನರ ಸ್ಥೂಲ ಪ್ರಪಂಚದಲ್ಲಿಯ ಜಡ ಉತ್ಕ್ರಾಂತಿವಾದವನ್ನು ಅರವಿಂದರು ಸೂಕ್ಷ್ಮಪ್ರಪಂಚದ ಪ್ರಜ್ಞಾ ವಿಕಾಸ ವಾದಕ್ಕೆ ಅನ್ವಯಿಸಿದರೆಂದು ನನ್ನ ಭಾವನೆ. ವಿಕಾಸವು ನಿಸರ್ಗದ ನಿಯಮ. ಜಡದಿಂದ ಸಸ್ಯಾದಿಗಳ ಪ್ರಜ್ಞಾ ವಿಕಾಸವಾಗಿ ಮುಂದೆ ಜೀವಪ್ರಜ್ಞೆ, ಮಾನಸಪ್ರಜ್ಞೆ ಆಧ್ಯಾತ್ಮಿಕಪ್ರಜ್ಞೆ, ಅಧಿಮಾನಸಪ್ರಜ್ಞೆ, ಅತಿಮಾನಸಪ್ರಜ್ಞೆ- ಈ ರೀತಿಯ ವಿಕಾಸ ಸೃಷ್ಟಿಯ ನಿಯಮ, ಇದು ಅನಿವಾರ್ಯ. ೧೯೨೬ ನವೆಂಬರ ೨೪ ರಂದು ಅರವಿಂದರು ಶ್ರೀಕೃಷ್ಣನು ಪಡೆದ ಅಧಿಮಾನಸ ಪ್ರಜ್ಞೆಯನ್ನು ಪಡೆದು, ಅನಂತರ ಅದನ್ನು ಮೀರಿದ ಅತಿಮಾನಸ (Super Mind) ಪ್ರಜ್ಞೆಯ ಸಾಧನೆಯನ್ನು ಕೈಕೊಂಡರು. ಶ್ರೀಕೃಷ್ಣನ ಅಧಿಮಾನಸ (Over Mind) ಸ್ತರವನ್ನು ಅನೇಕ ಋಷಿಗಳು ಪಡೆದಿದ್ದಾರೆಂದು ಅವರ ಪ್ರತಿಪಾದನೆ. ಉಪನಿಷತ್ತುಗಳಲ್ಲಿ ಇದಕ್ಕೆ ಅನೇಕ ಪುರಾವೆಗಳಿವೆ. ಪೂರ್ವರ್ಷಿಗಳ ಮನಸ್ಸಿನ ವಿಕಾಸವು ಆ ಸ್ತರಕ್ಕೆ ನಿಂತು ಹೋಗಿದ್ದಿತು. ಅದನ್ನು ಮೀರಿ ಅತಿಮಾನಸ ಪ್ರಜ್ಞೆಗೇರುವ ಸಾಧನೆಯೇ ಅರವಿಂದರ ಹೆಚ್ಚುಗಾರಿಕೆ. ಅನುಭಾವಿಗಳಾದ ಋಷಿಪರಂಪರೆಯು ಉಪನಿಷತ್ಕಾಲದಲ್ಲಿಯೇ ಕೊನೆಗಾಣದೆ, ಅರವಿಂದರಲ್ಲಿ ಅದು ಮುಂದುವರಿದಿದೆ. ಉಪನಿಷತ್ತುಗಳಷ್ಟೇ ಅರವಿಂದರ ವಾಙ್ಮಯವಾದರೂ ಅಪೌರುಷೇಯವೆಂದೇ ಹೇಳಬಹುದು. ಏಕೆಂದರೆ ಅದರ ಉಗಮ ಸಾಮಾನ್ಯ ಮನಸ್ಸಿನ ಸ್ತರದಿಂದಲ್ಲ; ಯೋಗದ ಶಿಖರದಿಂದ ಉಗಮವಾಗಿದೆ, ಅರವಿಂದರ ಅನುಭೂತಿ ಮತ್ತು ಅದರ ಅಭಿವ್ಯಕ್ತಿ.

ಅರವಿಂದರ ದರ್ಶನದಲ್ಲಿ ಬೇರೊಂದು ಹೊಸತನವಿದೆ. ಮನುಷ್ಯನು ತನ್ನ ಉತ್ಕಟ ಅಭೀಪ್ಸೆಯಿಂದ ಹಾಗೂ ದೈವೀ ಕೃಪೆಯಿಂದ ಸೆಳೆಮ ಅತಿಮಾನಸ ಸ್ತರಕ್ಕೆ ತನ್ನ ಪ್ರವಾಸವನ್ನು ಚುರುಕುಗೊಳಿಸಬಹುದು. ಆರೋಹಣ ಅವರೋಹಣ ಕ್ರಮ ಗಳಾದರೂ ನಿಸರ್ಗದ ವಿಕಾಸಕ್ರಮಕ್ಕೆ ಸಹಕಾರಿಯಾಗುತ್ತವೆ. ಮನಸ್ಸಿನ ಏಕಾ ಗ್ರತೆ, ಉತ್ಕಟತೆ, ಸಮರ್ಪಣ ಭಾವಗಳಿಂದ ಆರೋಹಣ ಕ್ರಮದಲ್ಲಿ ಸಿದ್ಧಿಯನ್ನು ಪಡೆದು ಮತ್ತೆ ಅವರೋಹಣವನ್ನು ಕೈಗೊಂಡು ಅದರಿಂದ ಮರ್ತ್ಯ ಜೀವನದ ಮಾನವನ ಪ್ರಾಣ,ದೇಹಗಳನ್ನು ಮಾರ್ಪಡಿಸಲು ಉಪಯೋಗಿಸಬಹುದು. 'ದಿವ್ಯ ಪ್ರಜ್ಞೆಯನ್ನು ಧರೆಗಿಳಿಸಿ ಪೃಥ್ವೀಪ್ರಜ್ಞೆಯನ್ನು ಪರಿವರ್ತಿಸುವ ಉದ್ದೇಶ ಇದರಲ್ಲಿದೆ.' ಅರವಿಂದರು ಬದುಕಿಸುದ್ದಕ್ಕೂ ಹೆಣಗಾಡಿದ್ದು 'ವೈಯುಕ್ತಿಕ ವಿಮೋಚನೆಗಾಗಿ ಅಲ್ಲ,

ಸಕಲ ಮನುಕುಲದ ವಿಮೋಚನೆಗಾಗಿ.' ಪೂರ್ವದಲ್ಲಿ ವೈಯುಕ್ತಿಕ ಮೋಕ್ಷವೇ ಶ್ರುತಿ ಸ್ಮೃತಿಗಳ ಗುರಿಯಾಗಿದ್ದಿತು. ಈ ದೃಷ್ಟಿಯಿಂದ ದೈವೀ ಪ್ರಜ್ಞೆಯನ್ನು ಭೂಮಿಗಿಳಿಸಿದ ಯೋಗಭಗೀರಥರು, ಅರವಿಂದರು.

ಈ ವಿಕಾಸಕ್ರಮದ ಆನುಷಂಗಿಕವಾದ ಇನ್ನೊಂದು ಸಿದ್ಧಾಂತವೆಂದರೆ ಜೀವವು ಮೇಲಿನ, ಮೇಲಿನ ಯೋನಿಯಲ್ಲಿ ಜನ್ಮಾಂತರವನ್ನು ಹೊಂದುವಾಗ, ಅದಕ್ಕೆ ಹಿಂಜರಿತವಿಲ್ಲ. ಎಂದರೆ ಜೀವವು ಮನುಷ್ಯ ಯೋನಿಯನ್ನು ಪಡೆದ ಮೇಲೆ ಈ ಏಣಿಯಿಂದ ಕೆಳಗೆ ಸರಿಯದು. ನಮ್ಮ ಕರ್ಮಸಿದ್ಧಾಂತದಂತೆ ನೀಚ ಕರ್ಮಗಳನ್ನು ಮಾಡಿದವನಿಗೆ ನೀಚಯೋನಿಯು ಕಟ್ಟಿಟ್ಟದ್ದೇ. ಆದರೆ ಅರವಿಂದರ ತತ್ತ್ವಜ್ಞಾನದಂತೆ ಮಾನವನು ತಿರುಗಿ ಮಂಗನಾಗುವದು ಸಾಧ್ಯವೇ ಇಲ್ಲ. ಹೀಗಾಗುವದು ನಿಸರ್ಗದಲ್ಲಿಯ ವಿಕಾಸ ಸಿದ್ಧಾಂತಕ್ಕೆ ವಿರುದ್ಧವಾಗಿದೆ. ಈ ವಿಷಯದ ಪ್ರತಿಪಾದನೆಯಲ್ಲಿ ಕೂಡ, ಅರವಿಂದರು ಪೂರ್ವಿಕರನ್ನು ಮೀರಿದ್ದಾರೆ. "ಪುರಾತನ ದರ್ಶನಗಳು ಎಲ್ಲಿ ನಿಂತುಬಿಟ್ಟವೋ ಅಲ್ಲಿ ನನ್ನ ದರ್ಶನವು ಆರಂಭವಾಗುತ್ತದೆ" ಎಂಬ ಅವರ ಹೇಳಿಕೆಯ ಔಚಿತ್ಯವನ್ನು ಇಲ್ಲಿ ಕಾಣಬಹುದು.

ಅರವಿಂದರು ಪ್ರಪಂಚದಲ್ಲಿ ಎಲ್ಲ ತತ್ತ್ವಜ್ಞಾನಗಳನ್ನು ಓದಿಕೊಂಡವರು; ಅವುಗಳನ್ನೆಲ್ಲ ಚೆನ್ನಾಗಿ ಅರ್ಥೈಸಿಕೊಂಡವರು. ಅವುಗಳ ಸತ್ಯಾಸತ್ಯತೆಯನ್ನು ತಮ್ಮದೇ ಆದ ಆಂತರಿಕ ಪ್ರಯೋಗಾಲಯದಲ್ಲಿ ಪರೀಕ್ಷಿಸಿದವರು. ಅದರಲ್ಲಿಯೂ ಭಾರತೀಯ ತತ್ತ್ವಜ್ಞಾನ-ಯೋಗಗಳನ್ನು ವಿಶೇಷವಾಗಿ ಮನನ ಮಾಡಿ, ಮಾನವನ ವಿಕಾಸಕ್ಕೆ ಹೊಸ ಆಯಾಮ ವಿಸ್ತಾರಗಳನ್ನೊದಗಿಸಿದವರು. ಅನೇಕ ಅವತಾರೀ ಪುರುಷರಂತೆ, ಅವರಾದರೂ ಒಂದು ಧ್ಯೇಯವನ್ನಿಟ್ಟುಕೊಂಡೇ ಜನ್ಮ ತಾಳಿದವರೆಂದು ತೋರುತ್ತದೆ. ಅವರ ಸತತ ಶ್ರಮ, ತೀಕ್ಷ್ಣವಾದ ಮತಿ, ಸರ್ವಗ್ರಾಹಿಯಾದ ಅವರ ಬುದ್ಧಿ, ಯಾವ ಆಧ್ಯಾತ್ಮಿಕ ಸಾಹಸಕ್ಕೂ ಹಿಂಜರಿಯದ ಅವರ ಧೈರ್ಯ, ತಮ್ಮ ಎಲ್ಲ ಆಧ್ಯಾತ್ಮಿಕ ಅನುಭವಗಳನ್ನು ವಿವೇಚಿಸುವ ಅವರ ಕುಶಲತೆ, "ಪೂರ್ವಿಕರನ್ನು ನಾನು ಮೀರಿದ್ದೇನೆ" ಎಂದು ಘಂಟಾಘೋಷವಾಗಿ ಹೇಳಿದ ಅವರ ಆತ್ಮವಿಶ್ವಾಸ ಇವೆಲ್ಲವನ್ನೂ ನೋಡಿದರೆ ಶ್ರೀಸಾಮಾನ್ಯನ ಸ್ಥಿತಿಯು ವಿಶ್ವರೂಪವನ್ನು ನೋಡಿದ ಅರ್ಜುನನಂತಾಗುತ್ತದೆ. ಶ್ರೀಕೃಷ್ಣನೇ ಪೂರ್ಣಾವತಾರವೆಂದು ನಮ್ಮ ಶಾಸ್ತ್ರವು ಸಾರುತ್ತದೆ. ಅದು ಪೂರ್ಣತೆಯ ಪರಮಾವಧಿಯೆ ? ಅದಕ್ಕಿಂತಲೂ ಪರಿಪೂರ್ಣಾವತಾರ ಬೇರೊಂದಾಗಲೂ ಸಾಧ್ಯವಿಲ್ಲವೆ ? ಸಾಧ್ಯವಿದ್ದರೆ ಅರವಿಂದರು ಆ ಪರಿಪೂರ್ಣಾವತಾರಿಗಳೇಕಾಗಬಾರದು ? – ಎಂಬುದೆ ಈ ಪುಸ್ತಕದಲ್ಲಿ ಎನ್ಕೆಯವರ ಪ್ರತಿಪಾದನೆ.

ನಾನಿಕಾಕಾ : ಎನ್ಕೆಬರೆಹ/೪೮೫

# 'ಬಾನುಲಿ ಬರೆವಣಿಗೆ'

**ನಾಗೇಶ ಶಾನಭಾಗ**

ಬಾನುಲಿ ಇಂದು ಅತಿ ಅಗತ್ಯದ,ಬೆಳೆಯುತ್ತಿರುವ ಮಾಧ್ಯಮ. ಅದರ ಯಶಸ್ಸು ಪ್ರಸಾರವಾಗುವ ಕಾರ್ಯಕ್ರಮಗಳ ಮೇಲೆ ಅವಲಂಬಿಸಿದೆ. ಕ್ಷಣಿಕ ಮನರಂಜನೆಗೆ ವೇಳೆ ವ್ಯಯಿಸುವ ಶ್ರೋತೃಗಳು ಎಷ್ಟರಮಟ್ಟಿಗೆ ವಿಚಾರಪೂರ್ಣ, ಸತ್ವಪೂರ್ಣ, ಸಾರ್ವಕಾಲಿಕ ಕಾರ್ಯಕ್ರಮಗಳನ್ನು ಕೇಳುತ್ತಾರೆ ಎಂದು ಹೇಳುವುದು ಕಷ್ಟ. ಬಾನುಲಿಯಲ್ಲಿ ಈಗೀಗ ಇಂಥ ಕಾರ್ಯಕ್ರಮಗಳ ಕೊರತೆ ಕಂಡುಬರುತ್ತಿರುವುದು ಇದಕ್ಕೆ ಕಾರಣ ಎಂದರೆ ತಪ್ಪೇನಿಲ್ಲ.

೬೦-೭೦ ರ ದಶಕದಲ್ಲಿ ಕನ್ನಡ ಬಾನುಲಿಗೆ ಒಂದು ಜನಪ್ರಿಯ ಸ್ಥಾನಮಾನ ನೀಡಿದ ಕೀರ್ತಿ ಎನ್ಕೆ ಅವರಿಗೆ ಸಲ್ಲುತ್ತದೆ.

ಎನ್ಕೆ ಪ್ರಭಾವ ಬಾನುಲಿಯ ಎಲ್ಲ ತರದ ಕಾರ್ಯಕ್ರಮಗಳಲ್ಲಿ ಕಾಣುತ್ತದೆ. ಒಂದು ರೀತಿಯಲ್ಲಿ 'ಅವುಮುಟ್ಟದ ಸೊಪ್ಪಿಲ್ಲ' ಎನ್ಕೆ ಜಾಲಾಡಿಸದ ಬಾನುಲಿ ಪ್ರಕಾರಗಳಿಲ್ಲ ಎನ್ನುವುದು ಅನ್ವರ್ಥಕ.

ಈ ಬಲವಾದ ಮಾಧ್ಯಮದಲ್ಲಿ ೩೫ ವರ್ಷಗಳ ಸೇವೆಯ ಅನುಭವವನ್ನು 'ಬಾನುಲಿ ಬರೆವಣಿಗೆ' ಕಿರುಪುಸ್ತಿಕೆಯಲ್ಲಿ ಮೂಡಿಸಿದ್ದಾರೆ.

ಆಕಾಶವಾಣಿಯ ಜನಪ್ರಿಯತೆ ಹೆಚ್ಚಿಸಲು ಆಕಾಶವಾಣಿಯ ಇಂದಿನ ಹೊಸ ಪೀಳಿಗೆ, ತರುಣ ಲೇಖಕರು ಅಗತ್ಯವಾಗಿ ಓದಿ ಮನನ ಮಾಡಿಕೊಳ್ಳಬೇಕಾದ ಕಿರುಹೊತ್ತಿಗೆಯಿದು.

ಭಾಷಣ, ನಾಟಕ, ಗೇಯ ನಾಟಕ, ಸಂದರ್ಶನಗಳು, ಸಂಭಾಷಣೆ, ರೂಪಕಗಳ ರಚನೆಯಲ್ಲಿ ಪಳಗಿದ ಅವರ ಲೇಖನಿ ಬಾನುಲಿ ಬರೆವಣಿಗೆಯ ತಂತ್ರ ಕುರಿತು ಸೋದಾಹರಣ ವಿವರಣೆ ಒದಗಿಸಿದೆ.

ಸ್ಟುಡಿಯೋ ಭಾಷಣವೆಂದರೆ ವೇದಿಕೆಯ ಭಾಷಣವಲ್ಲ ಎನ್ನುವ ಲೇಖಕರು, ಭಾಷಣಕಾರ ಹಾಗೂ ನಿರ್ಮಾಪಕನಿಗೆ ಸಾಮಾನ್ಯ ಪ್ರಜ್ಞೆ ಅಗತ್ಯ. ಶ್ರೋತೃಗಳ

ಮನಸ್ಸನ್ನು ಅರಿಯುವದು ಮುಖ್ಯ ಎಂದು ಭಾಷಣದ ವ್ಯಾಪ್ತಿ, ಸ್ವರೂಪ ವಿವರಿಸಿದ್ದಾರೆ. ಭಾಷಣಕ್ಕೆ ವಿಷಯ ನೀಡುವ ನಿರ್ಮಾತೃವಿಗೆ ಸೂಕ್ಷ್ಮ ಪ್ರಸಾರಪ್ರಜ್ಞೆ ಇರಬೇಕು ಎಂದು ಹಿತನುಡಿದಿದ್ದಾರೆ.

ಪ್ರಚಾರ ವಿಷಯುಗಳ ಬಗ್ಗೆ ಕಡ್ಡಾಯ ಪ್ರಸಾರ ಸರ್ಕಾರಿ ಮಾಧ್ಯಮಕ್ಕೆ ಅಗತ್ಯ ಎಂದು ಕೇಳುಗರಿಗೆ ಆಕಾಶವಾಣಿಯ ಕಷ್ಟವನ್ನು ಸೂಚ್ಯವಾಗಿ ವಿವರಿಸಿದ ಅವರು ಪ್ರಚಾರ ವಿಷಯಗಳ ಪ್ರಸಾರ ಶ್ರೋತೃಗಳ ಮನಸ್ಸಿಗೆ ಹಿಡಿಸುವಂತೆ ಮಾಡುವ ಗುಟ್ಟು ಹೇಳಿದ್ದಾರೆ.

ಅವರ ಜನಪ್ರಿಯ 'ಗೃಹಗೋಷ್ಠಿ' ಕಾರ್ಯಕ್ರಮದ ಪೂರ್ಣ ಅನುಭವದಿಂದ ಮೂಡಿಬಂದ ಮಾತಿದು.

ರಂಗನಾಟಕ, ರೇಡಿಯೋ ರೂಪಾಂತರ, ಕಥೆ-ಕಾದಂಬರಿಗಳ ಬಾನುಲಿ ರೂಪಾಂತರದ ತಂತ್ರವನ್ನು ತಿಳಿಯಪಡಿಸಿದ ಅವರು ಶ್ರೋತೃಹೃದಯ ಗೆದ್ದ ಅನುಭವವನ್ನು ವಿಶದಪಡಿಸಿದ್ದಾರೆ.

ಕಾಲಾತೀತತೆ ಸೂಚಿಸಲು ಅರೆನಿಮಿಷ ನೀರವತೆ ಅಪೇಕ್ಷಿತ ಪರಿಣಾಮ ಬೀರಬಲ್ಲದು ಎಂಬ ಮಾತು ಇತ್ತೀಚಿನ ನವೀನ ನಿರ್ದೇಶನದಲ್ಲಿ ಪ್ರಸಾರವಾದ ನಾಟಕಗಳಿಂದ ದೃಢಪಟ್ಟಿದೆ. ಆಳವಿಚಾರ, ಸಾಹಿತ್ಯತಂತ್ರದೊಂದಿಗೆ ಆಧುನಿಕ ರೇಡಿಯೋ ತಂತ್ರ ಕರಗತ ಮಾಡಿಕೊಂಡ ಎನ್ಕೆ ಅವರ ನಾಟಕಗಳು ಇದರಿಂದಲೇ ಯಶ ಗಳಿಸಿವೆ ಎಂದರೆ ತಪ್ಪೇನಿಲ್ಲ.

ರೇಡಿಯೋ ನಾಟಕಗಳು ಹೆಚ್ಚಿನ ಪಾತ್ರಗಳನ್ನು ಹೊಂದಿರಬಾರದು ಎನ್ನುವುದು ಇಂದಿನ ರೇಡಿಯೋ ನಾಟಕಕಾರರು (ಬೆರಳೆಣಿಕೆಯಷ್ಟು) ತಿಳಿದಿರುವುದು ಅವಶ್ಯಕ. ನಿರ್ಮಾತೃಗಳಿಗೆ ನಾಟಕ, ಗೇಯ ನಾಟಕಗಳ ರಚನೆಯ ಕಿವಿಮಾತು ಹೇಳಿದ್ದಾರೆ.

ರೇಡಿಯೋದ ಹೆಚ್ಚುಗಾರಿಕೆ ಮತ್ತು ಈಗಿನ ಕಾಲದಲ್ಲಿ ಅದರ ಮಹತ್ವವನ್ನು ಅಲ್ಲಲ್ಲಿ ಒತ್ತಿ ಹೇಳಿದ್ದಾರೆ.

ಸೇವೆಯನ್ನು ಆರಾಧಿಸಿದ ಅಂದಿನವರ ಅರ್ಪಣಭಾವ, ದುಡಿತ, ಉದರಂಭರಣೆಗಾಗಿ ದುಡಿಯುವ ಇಂದಿನವರಿಗೆ ಮಾರ್ಗದರ್ಶಕವೆನಿಸುವಂತೆ ಕೃತಿ ಮೂಡಿ ಬಂದಿದೆ.

ಸಂದರ್ಶನ ತೆಗೆದುಕೊಳ್ಳುವವ ಹಾಗೂ ಕೊಡುವವನ ಭಾಷಾಶೈಲಿ ಒಂದೇ ಇರಬೇಕು ಎನ್ನುವ ನುಡಿ ಇಂದಿನ ಕಾರ್ಯಕ್ರಮಗಳ ವೈಫಲ್ಯಕ್ಕೆ ಕನ್ನಡಿಯಂತಿದೆ.

ನಾಸಿಕಾಕಾ : ಎನ್ಕೆಬರೆಹ/೪೮೭

ಆರಂಭದಲ್ಲಿ ಆಕಾಶವಾಣಿಯ ಹುಟ್ಟು,ಬೆಳವಣಿಗೆ ವಿವರ ಬಂದಿದ್ದು, ಅಂತ್ಯಕ್ಕೆ ಮಕ್ಕಳ ಹಾಗೂ ಮಹಿಳಾ ಕಾರ್ಯಕ್ರಮಗಳ ಬಗ್ಗೆ ಸಂಕ್ಷಿಪ್ತ ವಿವರ ಇದೆ. ನಾಟಕ, ರೂಪಕ, ಭಾಷಣಗಳಂತೆ ಸೋದಾಹರಣ ವಿವರ ನೀಡಿ ಈ ವಿಭಾಗಗಳ ಕಾರ್ಯ ಕುರಿತು ಇನ್ನಷ್ಟು ಬರೆದಿದ್ದರೆ ಉತ್ತಮವಿತ್ತು.

ರೇಡಿಯೋ ಸಾಹಿತ್ಯದಲ್ಲಿ ಹಾಸ್ಯದ ಕೊರತೆಯನ್ನು ಎತ್ತಿ ತೋರಿದ್ದು ಉಚಿತ,

ಸಂಗೀತದ ಬಗ್ಗೆ ಜ್ಞಾನವಿರುವ ಲೇಖಕರು ಸಂಗೀತ ಕಾರ್ಯಕ್ರಮಗಳ ಸ್ವರೂಪ ಮೂಡಿಸಿದ್ದು ಸಹಜವಾಗಿದೆ.

ಈ ಕಿರುಪುಸ್ತಕದ ರಚನೆಗಾಗಿ ವಿವಿಧ ಆಕರಗಳ ಶ್ರಮಪೂರ್ವ ಅಧ್ಯಯನ ಮೆಚ್ಚುವಂತಹದು.

ಲೇಖಕರೇ ಹೇಳುವಂತೆ ಬಾನುಲಿ ಲೇಖನದ ತಂತ್ರಗಾರಿಕೆ ತಿಳಿಸಿಕೊಡುವಂತಹ ಯಾವ ಪುಸ್ತಕವೂ ಕನ್ನಡದಲ್ಲಿಲ್ಲ. ಇಂಥದರಲ್ಲಿ ಈ ಕಿರುಹೊತ್ತಗೆಯ ಕಾರ್ಯ ಸ್ತುತ್ಯ.

ಸಾಹಿತ್ಯಿಕ ಕ್ಷೇತ್ರ ಹಾಗೂ ಬಾನುಲಿ ತಂತ್ರವನ್ನು ಅರಿತ, ಅದರ ಮೇಲೆ ಬಲವಾದ ಪ್ರಭುತ್ವ ಹೊಂದಿರುವ ಎನ್ಕೆಯವರಿಂದ ಈ ಬಗ್ಗೆ ಬೃಹತ್ ಗ್ರಂಥವೊಂದು ಹೊರಬಂದರೆ ಆಕಾಶವಾಣಿಗೂ, ತರುಣ ಲೇಖಕರಿಗೂ, ಕನ್ನಡ ಸಾರಸ್ವತ ಪ್ರಪಂಚಕ್ಕೂ ಅಮೂಲ್ಯ ಪ್ರಯೋಜನವಾಗುವದರಲ್ಲಿ ಸಂದೇಹವಿಲ್ಲ.

# 'ಕನ್ನಡ ಭಾಷಣ ಕಲೆ'

## ಬಸವರಾಜ ವಕ್ಕುಂದ

(i) ಭಾಷಣಕಲೆ, (ii) ಪ್ರಾಸಂಗಿಕ ಭಾಷಣಗಳು, (iii) ಜಾಗತಿಕ ವಾಗ್ಮಿಗಳ ಭಾಷಣಗಳ ಕೆಲ ಉದಾಹರಣೆಗಳು, (iv) ಕನ್ನಡದ ಕೆಲ ಖ್ಯಾತ ವಾಗ್ಮಿಗಳ ಭಾಷಣಗಳ ಮಾದರಿ — ಹೀಗೆ ನಾಲ್ಕು ಭಾಗಗಳಲ್ಲಿ ಎನ್ಕೆಯವರ 'ಭಾಷಣಕಲೆ' ಪುಸ್ತಕ ವ್ಯಾಪಿಸಿದೆ. ಇದರ ಪ್ರಾಯೋಗಿಕ ವಿಮರ್ಶೆ ನನ್ನ ಸದ್ಯದ ಉದ್ದೇಶವಲ್ಲ. ಕಾರಣ ತುಲನಾತ್ಮಕ ವಿಮರ್ಶೆಗೆ ಅವಶ್ಯವಿರುವ ಕೃಷಿ ಈ ಕ್ಷೇತ್ರದಲ್ಲಿ ನಡೆದಿಲ್ಲದಿರುವದು ಮತ್ತು ಈ ವಿಷಯದಲ್ಲಿ ನನಗಿರುವ ಪರಿಮಿತ ಜ್ಞಾನ. ಎನ್ಕೆಯವರೇ ಹೇಳುವಂತೆ ಇದೊಂದು ಪ್ರಾಯೋಗಿಕ ಪುಸ್ತಕ. ಈ ಪ್ರಯೋಗದ ಹಿಂದೆ ಅವರ ವಿಭಿನ್ನ ಕ್ಷೇತ್ರಗಳ ಪರಿಪಕ್ವ ಅನುಭವ, ಚಿಂತನ-ಮಂಥನಗಳು ಪರಿಶ್ರಮ ವಹಿಸಿವೆ. ಅವರ ಈ ಶ್ರಮದ ಕಿರುಪರಿಚಯ ಮಾತ್ರ ಈ ಲೇಖನದ ಉದ್ದೇಶ.

'ಭಾಷಣ ಕಲೆಯ ರಹಸ್ಯವೇನು ? ಉತ್ತಮ ಭಾಷಣಕಾರನ ಲಕ್ಷಣಗಳೇನು ? ಭಾಷಣಗಳನ್ನು ಸಾಧಿಸುವ ಕ್ರಮ, ಭಾಷಣದ ಪಿದ್ಧತಿ ಮೊದಲಾದ ವಿಷಯಗಳನ್ನು ತಿಳಿದಿರುವದು ಈ ಕಾಲದಲ್ಲಿ ಅತ್ಯಗತ್ಯ,' ಎಂದು ಸಾರಿ ಅದನ್ನು ತಿಳಿಸಿಕೊಡುವ ಸಾಹಸಕ್ಕೆ ಕೈಹಾಕಿ ಕನ್ನಡಕ್ಕೆ ಅಪ್ತ-ಅಪರಿಚಿತ ಕ್ಷೇತ್ರವೊಂದರ ಬಾಗಿಲನ್ನು ತೆರೆದ ಶ್ರೇಯಸ್ಸು ಎನ್ಕೆಯವರಿಗೆ ಸಲ್ಲಬೇಕು. ಮೇಲಿನ ಎಲ್ಲ ಪ್ರಶ್ನೆಗಳಿಗೂ ಅವರು ಮೊದಲನೆಯ ಭಾಗದಲ್ಲಿಯೇ ಉತ್ತರ ನೀಡಿದ್ದಾರೆ.

ಕೆಲವೇ ಕ್ಷಣಗಳಲ್ಲಿ ಸಭಿಕರನ್ನು ಮಂತ್ರಮುಗ್ಧರನ್ನಾಗಿಸುವ ಮಾಂತ್ರಿಕ ಶಕ್ತಿ ಒಂದು ಉತ್ತಮ ಭಾಷಣಕ್ಕಿದೆ. ಒಂದು ಹಂತದಲ್ಲಿ ಕಥೆ ಕವನಗಳೇ ಮೊದಲಾದ ಸಾಹಿತ್ಯದ ಯಾವದೇ ಪ್ರಕಾರಗಳು ಮಾಡಲಾರದ ತೀವ್ರ ಪರಿಣಾಮವನ್ನು ಭಾಷಣ ಮಾಡಬಲ್ಲದು. ಆದರೆ ಭಾಷಣದ ವಿಷಯ, ಶೈಲಿ, ತಂತ್ರಗಳನ್ನು ಕುರಿತಾದ ಒಂದು ಶಾಸ್ತ್ರೀಯ ಪುಸ್ತಕ ಓದುಗನ ಮೇಲೆ ಅಂತಹದೇ ಪರಿಣಾಮವನ್ನು ಬೀರಬಲ್ಲುದೇ ಎಂಬ ಸಮಸ್ಯೆ ಕಥೆ, ಕಾದಂಬರಿ, ನಾಟಕಾದಿಗಳನ್ನು ಕುರಿತ

ವಿಮರ್ಶನಾ ಪುಸ್ತಕಗಳು ಅವುಗಳಷ್ಟೇ ಪರಿಣಾಮಕಾರಿಯೇ ಎಂಬ ಸಮಸ್ಯೆಯಷ್ಟೇ ಸಹಜವಾದದ್ದು. ಇದಕ್ಕೆ ಉತ್ತರ ಅಷ್ಟು ಸರಳವಿಲ್ಲ.

"ಪ್ರಜಾಪ್ರತಿನಿಧಿಗಳ ಸಮ್ಮೇಳನಗಳ ಭಾಷಣದಿಂದ ಸಂಗೀತ ಸಮ್ಮೇಳನ, ನಾಟ್ಯಸಮ್ಮೇಳನ, ಕುರುಡ-ಮೂಕರ ಸಮ್ಮೇಳನಗಳ ವರೆಗೆ ಭಾಷಣಗಳೇ ಭಾಷಣಗಳು ! ... ಗೃಹಿಣಿಯರಿಂದ ಮೊದಲ್ಗೊಂಡು ಅಸೆಂಬ್ಲಿಯ ಸ್ಪೀಕರರ ವರೆಗೆ ಎಲ್ಲರೂ ಒಂದು ಬಗೆಯ ಲೌಡಸ್ಪೀಕರರೇ ..." ಎನ್ನುವಷ್ಟರ ಮಟ್ಟಿಗೆ ಭಾಷಣದ ವ್ಯಾಪ್ತಿ ಆವರಿಸಿಕೊಂಡಿದೆ. 'ಧ್ವನಿವರ್ಧಕ ಗಂಟಲೊಳಗೆ ... ' ಎಂದು ಅಡಿಗರು ಮಂತ್ರಿಗಳನ್ನು ಕುರಿತು ಬರೆದಿದ್ದರೂ ಪ್ರಜಾತಂತ್ರದಲ್ಲಿ ಇದರಿಂದ ಯಾರೂ ತಪ್ಪಿಸಿಕೊಳ್ಳಲಾರರು. 'ಜಗತ್ತಿನ ಅತಿ ದೊಡ್ಡ ಡೆಮಾಕ್ರಸಿಯಲ್ಲವೇ ಭಾರತ? ತತ್ಪರಿಣಾಮವಾಗಿ ಭಾಷಣ ಸ್ವತಂತ್ರ ಪ್ರಜೆಯ ಉಸಿರಾಗಿದೆ' ಎನ್ನುವದು ಎಸ್ಕೆಯವರ ಸಮರ್ಥನೆ. 'ಯುದ್ಧಗಳು ಆರಂಭವಾಗುವದೇ ಭಾಷಣಗಳಿಂದ. ಮುಕ್ತಾಯಗೊಳ್ಳುವದು ಭಾಷಣಗಳಿಂದ. ಜಾಗತಿಕ ಶಾಂತಿಸ್ಥಾಪನೆಗೂ ಭಾಷಣ; ಮೃತರ ಆತ್ಮಶಾಂತಿಗೂ ಭಾಷಣ ...' ಹೀಗೆ ಭಾಷಣದ ವೈಪರೀತ್ಯ ವಿಪರ್ಯಾಸಗಳನ್ನು ಒತ್ತಿಹೇಳಿ ನಗುತ್ತಾರೆ ನಗಿಸುತ್ತಾರೆ ಎಸ್ಕೆಯವರು. ಅತ್ಯಾಧುನಿಕ ವಿಚಾರ ಪ್ರಗತಿಗಳನ್ನೆಲ್ಲ ಓದಿ ತಿಳಿದುಕೊಳ್ಳುವದು ಎಲ್ಲರಿಂದಲೂ ಸಾಧ್ಯವಾಗದು. ಆದ್ದರಿಂದ ಆಯಾ ವಿಷಯಗಳಲ್ಲಿಯ ಪರಿಣತರನ್ನು ಆಮಂತ್ರಿಸಿ ಅವರ ಪರಿಶ್ರಮದ ಲಾಭ ಇತರರಿಗೆ ತಟ್ಟುವಂತೆ ಮಾಡುವದು ಭಾಷಣದಿಂದ ಸಾಧ್ಯ. ಅಂತಹ ಭಾಷಣಕಾರರನ್ನು ಸಂಭಾವನೆಯೊಂದಿಗೆ ಗೌರವಿಸುವ ಕಾಲ ಇನ್ನೂ ಬರಬೇಕಾಗಿದೆ ಎನ್ನುವ ಎಸ್ಕೆಯವರ ಆಶಯ ಈಡೇರಿದರೆ ಭಾಷಣವು ಒಂದು ಬಗೆಯ ಲೋಕಶಿಕ್ಷಣ ಎನ್ನುವ ಅವರ ನಿಲುವು ಯಥಾರ್ಥವಾದೀತು, ಸಾರ್ಥಕ್ಯ ಹೊಂದೀತು.

ಅಮೇರಿಕೆಯಂತಹ ದೇಶಗಳಲ್ಲಿ ಭಾಷಣಕಾರರಿಗೆ ತರಬೇತಿ ಕೇಂದ್ರಗಳಿರುವಂತೆ ಹವ್ಯಾಸಿ ಭಾಷಣಕಾರರಿಗೆ ಭಾಷಣಗಳನ್ನು ಒದಗಿಸುವ ಕಾರಖಾನೆಗಳೂ ಅಲ್ಲುಂಟಂತೆ. ಭಾಷಣಗಳನ್ನು ಬರೆದು, ಮಾರಿ, ಹಣ ಸಂಪಾದಿಸುವ ವ್ಯಾಪಾರಿ ಸಂಸ್ಥೆಗಳು ಅಲ್ಲುಂಟಂತೆ. ಹೀಗೆ ಪರದೇಶಗಳಲ್ಲಿ ಭಾಷಣಕಲೆ ವ್ಯಾಪಾರವಾಗಿಯೂ ವಿಸ್ತೃತವಾಗಿ ಬೆಳೆಯುತ್ತಿರುವದನ್ನು ಎತ್ತಿ ತೋರಿಸಿ ಆ ದಿಶೆಯಲ್ಲಿ ನಮ್ಮ ಹಿಂದುಳಿಯುವಿಕೆಯತ್ತ ಗಮನ ಸೆಳೆಯುತ್ತಾರೆ.

'ಭಾಷಣಕಲೆ' ಭಾಷಣಕಾರರಿಗೆ ಒಂದು ಉಪಯುಕ್ತ ಕೈಪಿಡಿ. 'ಯಶಸ್ವಿ ಭಾಷಣಕಾರನಾಗಲಿಕ್ಕೆ ಪ್ರತಿಭೆಯೊಂದಿಗೆ ಆಳವಾದ ಅಭ್ಯಾಸ, ಸಂಶೋಧನೆ, ವಿಮರ್ಶೆ, ಚಿಕಿತ್ಸಕ ಬುದ್ಧಿಗಳೂ ಬೇಕಾಗುತ್ತವೆ. ಬೇಕಾದಷ್ಟು ವಿಷಯ ಪಾಂಡಿತ್ಯ

ವಿದ್ದರೂ ಅನನ್ನು ಸೊಗಸಾಗಿ ಹದವಾಗಿ ಹೇಳುವ ಕಲೆಯಿಲ್ಲದಿದ್ದರೆ 'ಗುಡ್ಡಕ್ಕೆ ಕಲ್ಲು ಹೊತ್ತಂತಾಗಬಹುದು.' ಭಾಷಣ ನಡೆದಿರುವಂತೆಯೇ ಕುರ್ಚಿಗಳು ಖಾಲಿಯಾಗುವದು ಮೊದಲಾದ ಇತರ ವಿಪರೀತ ಪ್ರತಿಕ್ರಿಯೆಗಳನ್ನು ಕಂಡವರಿಗೆ ಈ ಮಾತು ಹೊಸದೇನಲ್ಲ. ಆದರೆ ತಮ್ಮ ವಾಙ್ಮಯವನ್ನು ಬೀಸಿ ಸಭಿಕರನ್ನು ಕಟೆದ ಶಿಲೆಯಂತೆ ಮಂತ್ರಮುಗ್ಧರನ್ನಾಗಿಸಿ, ಹೃದಯಗಳನ್ನು ಕರಗಿಸಿ, ಕೋಪೋದ್ರಿಕ್ತಗೊಳಿಸಿ, ಸ್ಫೂರ್ತಿ ತುಂಬಿ ಹುಚ್ಚು ಹಿಡಿಸಿ ತನ್ನ ಉದ್ದೇಶಿತ ಕಾರ್ಯಕ್ಕೆ ಸಮಸ್ತ ಶ್ರೋತೃವೃಂದವನ್ನು ಅಣಿಗೊಳಿಸುವ ಅಣುಶಕ್ತಿ ಸದೃಶವಾದ ವಾಕ್‌ಚಾತುರ್ಯವನ್ನುಳ್ಳ ಎಷ್ಟೋ ಜನ ಜಾಗತಿಕ ಖ್ಯಾತಿಯನ್ನು ಹೊಂದಿದ ವಾಗ್ಮಿಗಳು ಇತಿಹಾಸದಲ್ಲಿ ದೊರೆಯುತ್ತಾರೆ. ಪ್ರಾಚೀನ ಗ್ರೀಸ್ ದೇಶದ ಡೆಮಾಸ್ಥೇನಿಸ್, ಪೆರಿಕ್ಲಸ್‌ರಿಂದ ಹಿಡಿದು ... ಸಿಸಿರೋ, ನೆಪೋಲಿಯನ್, ಲಿಂಕನ್, ಡಿಜರಾಯಿಲಿ, ಮಾರ್ಕ್ಸ್, ರೂಜವೆಲ್ಟ್, ಚರ್ಚಿಲ್, ಹಿಟ್ಲರ್, ಸ್ಟಾಲಿನ್, ಟೀಟೋ, ಗಾಂಧಿ, ಬೋಸ್, ನೆಹರು, ರಾಧಾಕೃಷ್ಣನ್, ಕೆನೆಡಿ, ವಿವೇಕಾನಂದ ... ಹೀಗೆ ಪಟ್ಟಿಯನ್ನು ಬೆಳೆಸುತ್ತ ಹೋಗಬಹುದು. ಕನ್ನಡದಲ್ಲಿ ಕೂಡ ಬಿ. ಎಂ. ಶ್ರೀ, ಶ್ರೀರಂಗ, ಕೈಲಾಸಂ, ಕುವೆಂಪು, ಬೇಂದ್ರೆ, ಅನಕೃ., ಕಾರಂತ ಇವರೇ ಮೊದಲಾದವರ ಧ್ವನಿ ಕನ್ನಡದ ಜತೆಯಲ್ಲಿಯೇ ನಿನಾದಿಸತಕ್ಕದ್ದು. 'ಭಾಷಣಕಲೆ'ಯ ಕೊನೆಯ ಎರಡು ಭಾಗಗಳಲ್ಲಿ ಎನ್ಕೆಯವರು ಇಂತಹ ಧೀಮಂತ ವ್ಯಕ್ತಿತ್ವಗಳ ಭಾಷಣಗಳ ಕೆಲ ತುಂಡುಗಳನ್ನು ಸಂಗ್ರಹಿಸಿ ಸಜೀವ ಕಾರಂಜಿಯಂತೆ ಪುಟಿಯುತ್ತಿದ್ದ ಅವರ ವಾಗ್ಝರಿಯ ಸ್ಪರ್ಶ ಮಾಡಿಸಿದ್ದಾರೆ. ಆ ಭಾಷಣಗಳನ್ನು ಓದಿದರೆ ಸಾಕು ಮೈತುಂಬ ಹಚ್ಚಗೆ ರೋಮಾಂಚನಗಳೇಳುತ್ತವೆ. ಇನ್ನು ಕೇಳಿದವರ ಸ್ಥಿತಿ ಏನಾಗಿರಬಾರದು !

ಈ ಬಗೆಯ ಪ್ರತಿಭಾವಂತ ವಾಗ್ಮಿಯೆನಿಸಿಕೊಳ್ಳಬೇಕಾದರೆ ಪ್ರತ್ಯುತ್ಪನ್ನಮತಿ, ಮಿಂಚಿನಂತಹ ಮಾತು, ವಿದ್ಯುತ್ತಿನಂತಹ ವಿಚಾರಗಳು ಅವಶ್ಯವೆಂದು ತಿಳಿಸುತ್ತ ವಿರೋಧವನ್ನು ಎದುರಿಸುವಲ್ಲಿ ಆತನಿಗೆ ಇರಬೇಕಾದ ಚಾತುರ್ಯದ ಬಗ್ಗೆ ವಿನೋದಪೂರ್ಣವಾದ ಒಂದು ಉದಾಹರಣೆಯನ್ನು ಎನ್ಕೆಯವರು ಎತ್ತಿಕೊಟ್ಟಿದ್ದಾರೆ. ಖ್ಯಾತ ಇಂಗ್ಲಿಷ ನಾಟಕಕಾರ, ಎಂ. ಪಿ. ಶೆರಿಡನ್, ಒಮ್ಮೆ ಪಾರ್ಲಿಮೆಂಟ್ ಸದಸ್ಯರನ್ನುದ್ದೇಶಿಸಿ ಆವೇಶದ ಭರದಲ್ಲಿ "Half the members of the house are asses" ಎಂದನಂತೆ. ಅದಕ್ಕೆ ಉದ್ರಿಕ್ತ ವಿರೋಧಿಗಳು ಆಕ್ಷೇಪವೆತ್ತಿ ಕ್ಷಮಾಪಣೆ ಕೇಳಲು ಹಚ್ಚಿದರಂತೆ. ಶೆರಿಡನ್ ಕ್ಷಮೆ ಕೇಳಿಕೊಂಡು ತನ್ನ ಹೇಳಿಕೆಯನ್ನು ಹೀಗೆ ತಿದ್ದಿಕೊಂಡನಂತೆ : " I am sorry, half the members of the house are not asses !" ಎಂದು. ಈ ಬಗೆಯ ಗಂಭೀರ ವ್ಯಂಗ್ಯ, ವಿಡಂಬನೆ, ಕಟಕಿ, ಕಾಕು ಮಾತುಗಳಿಗೆ ಚರ್ಚಿಲ್, ಬರ್ನಾರ್ಡ್ ಶಾ, ಜಿಮ್ಮಿ ಕಾರ್ಟರ್ ಮುಂತಾದ ಕೆಲವೇ ಕೆಲವು ಜನರನ್ನು ಹೆಸರಿಸಬಹುದು. ಇಂತಹ

ಹುಟ್ಟು ವಾಗ್ಮಿಗಳೂ ಕೂಡ ತಮ್ಮ ಭಾಷಣದ ಸಿದ್ಧತೆಯನ್ನು ಅತ್ಯಂತ ಮುತುವರ್ಜಿ ವಹಿಸಿ ಮಾಡಿಕೊಳ್ಳುತ್ತಾರೆ. ಉದಾಹರಣೆಗೆ ಅಬ್ರಹಂ ಲಿಂಕನ್ನರ ತಿಂಗಳುಗಟ್ಟಲೆಯ ಭಾಷಣದ ಸಿದ್ಧತೆಯನ್ನು ಲೇಖಕರು ಎತ್ತಿಕೊಟ್ಟಿದ್ದಾರೆ. ಸುಪ್ರಸಿದ್ಧ ಭಾಷಣಕಾರರ ಮಾತೇ ಹೀಗಾದರೆ ವೇದಿಕೆಯೇರಿದ ಕೂಡಲೇ ನಡುಗತೊಡಗುವ ಸಾಮಾನ್ಯರ ಪಾಡೇನು ? ಅವರೂ ಸಹ ಹೆದರಬೇಕಾಗಿಲ್ಲ ಎನ್ನುತ್ತಾರೆ ಎನ್ಕೆಯವರು. ಆ ಸಭಾಕಂಪದ ಭೀತಿಯನ್ನು ತೊಡೆದುಹಾಕಿ ನಿರರ್ಗಳವಾಗಿ ಭಾಷಣ ಮಾಡುವ ಸಹಜ ವಿಧಾನವನ್ನು ಅವರಿಲ್ಲಿ ತಿಳಿಸಿಕೊಟ್ಟಿದ್ದಾರೆ, ಇದನ್ನು ಓದುವದರಿಂದ ಯಾರಿಗೂ ಮೋಕ್ಷಪ್ರಾಪ್ತಿಯಾಗಲಿಕ್ಕಿಲ್ಲ. ಬದಲಾಗಿ ಮೂಕನಿಗೆ ಕೂಡ ಬಾಯಿ ಬರಬಲ್ಲದು. ಇದರ ಮೇಲಿಂದ ಈ ಪುಸ್ತಕದ ಮಹತ್ವ ನಿರ್ಣಯವಾಗುತ್ತದೆ.

ಆದರೆ ಭಾಷಣಕ್ಕಿಂತ ಬದುಕಿನ ನಿಷ್ಠೆ ಮುಖ್ಯ ಎಂಬ ತಾತ್ವಿಕ ಧ್ವನಿಯನ್ನು ನಾವಿಲ್ಲಿ ಉದ್ದಕ್ಕೂ ಕಾಣುತ್ತೇವೆ. ನಾಲಿಗೆ ಕುಲವನ್ನರುಹುತ್ತದೆ ಎಂಬ ಯಥಾರ್ಥತೆಯನ್ನು ಪ್ರಾಮಾಣಿಕ ವ್ಯಕ್ತಿ ಮಾತ್ರ ಅಧಿಕಾರವಾಣಿಯಿಂದ ಮಾತನಾಡಬಲ್ಲ ಎಂಬ ವಿವರಣೆಯಲ್ಲಿ ಅಡಕಗೊಳಿಸಿದ್ದಾರೆ. ಇದು ಎನ್ಕೆಯವರ ಜೀವನಶ್ರದ್ಧೆ, ಜೀವನದೃಷ್ಟಿ.

ಮೂರನೆಯ ಭಾಗದಲ್ಲಿ ಲೇಖಕರು ಹಲವಾರು ಪ್ರಾಸಂಗಿಕ ಭಾಷಣಗಳ ಮಾದರಿಯನ್ನು ಸಂಗ್ರಹಿಸಿಕೊಟ್ಟಿದ್ದಾರೆ. ಆದರೆ ಇವು ಕಿರುಪ್ರಬಂಧಗಳಂತೆ ಭಾಸವಾಗಿ ಅವರೇ ವಿವರಿಸಿದ ಭಾಷಣದ ಲಕ್ಷಣಗಳ ಎಲ್ಲೆಯನ್ನು ಮೀರಿವೆಯೇನೋ ಎಂಬ ಸಂದೇಹ ತಲೆಹಾಕುತ್ತದೆ. ಆದಾಗ್ಯೂ ಹಬ್ಬ-ಹುಣ್ಣಿವೆಗಳಿಗಿರುವ ನಮ್ಮ ಪರಂಪರೆಯ ಹಿನ್ನೆಲೆಯ ಪರಿಚಯವನ್ನು ಕಿರಿದರಲ್ಲಿ ಪಿರಿದಾಗಿ ಒದಗಿಸಿದ್ದಾರೆ. ವಿಭೂತಿ ಪುರುಷರನೇಕರ ಜನ್ಮದಿನಗಳ ಆಚರಣೆಯ ನೆಪದಲ್ಲಿ ಅವರ ಕಿರುಚರಿತ್ರೆಗಳನ್ನು ಒದಗಿಸಿದ್ದಾರೆ. ಉದ್ಘಾಟನಾ ಭಾಷಣಗಳು, ವಾರ್ಷಿಕೋತ್ಸವಗಳು ಬೀಳ್ಕೊಡುಗೆ ಸ್ವಾಗತ ಭಾಷಣ, ಪರಿಚಯ, ಸಮಾರೋಪ, ಆಭಾರಮನ್ನಣೆ .... ... ಹೀಗೆ ಸಾಮಾನ್ಯವಾಗಿ ಪ್ರಚಲಿತವಿರುವ ಕಾರ್ಯಕ್ರಮಗಳ ವಿಭಿನ್ನ ಮಗ್ಗಲುಗಳನ್ನು ಮಾದರಿಯಾಗಿ ನೀಡಿದ್ದಾರೆ. ಶಾಲೆ ಕಾಲೇಜುಗಳಲ್ಲಿಯ ಚರ್ಚಾಕೂಟಗಳ ಬಗ್ಗೆ ಸಮಕಾಲೀನ ವಿಷಯಗಳನ್ನಾಯ್ದುಕೊಂಡು ಪರ ವಿರೋಧಗಳೆರಡನ್ನೂ ಚರ್ಚಿಸಿದ್ದಾರೆ. ಹೀಗೆ ಭಾಷಣ ಕಲೆಯ ವಿಷಯುಗಳು ಅಸಂಖ್ಯ, ವ್ಯಾಪ್ತಿ ಬಹುಮುಖ.

ಭಾಷಣದ ಭೀಷಣತೆ ಸಾಹಿತ್ಯದ ಎಲ್ಲ ಪ್ರಕಾರಗಳನ್ನು ಮೀರುವಷ್ಟು ವಿಪುಲವಾಗಿದ್ದರೂ ಅದನ್ನು ಕುರಿತ ಗ್ರಂಥಗಳು ಇಲ್ಲವೇ ಇಲ್ಲ ಎನ್ನುವಷ್ಟು ವಿರಳ ಎಂಬುದು ದುರ್ದೈವದ ಸಂಗತಿ. ಅಂತಹ ಒಂದು ಕೊರತೆಯನ್ನು ನೀಗಿಸಬಲ್ಲ ಕೃತಿ ಎನ್ಕೆಯವರ ಈ 'ಭಾಷಣಕಲೆ'. ಇದನ್ನವರು ನೀರಸವಾದ ನಿಯಮಗಳ ಕಟ್ಟನ್ನಾಗಿಸದೇ ಕಾಂತಾ ಸಂಮಿತಿಗೂ ಮೀರಿದ ಲಘು-ಗಂಭೀರ ಹಾಸ್ಯ-ವಿನೋದಗಳ ಜತೆಗೆ ನಿರ್ವಹಿಸಿರುವದು ಅವರ ಸಹಜ ಕಲಾವಂತಿಕೆಗೆ ಸಾಕ್ಷಿ. ಭಾಷಣ ಕಲೆಯ ಬಗ್ಗೆ ಬರೆದ ಒಂದು ಕೃತಿ, ಭಾಷಣದಷ್ಟು ಪರಿಣಾಮಕಾರಿಯೇ ? ಎಂಬ ನನ್ನ ಆರಂಭದ ಪ್ರಶ್ನೆಗೆ ಇದು ಉತ್ತರ.

# ‘ಕೃಷ್ಣಾ ನದಿ’ ಮತ್ತು ‘ರಾಮರಾವ್ ಹುಕ್ಕೇರಿಕರ ಮಾಸ್ತರ್’

ಎಸ್. ಬಿ. ನರಗುಂದಕರ

ಈ ಪುಸ್ತಕಗಳು ಚಿಕ್ಕವು. ಆದರೆ ವಿಷಯ ವಸ್ತುಗಳ ಹಿರಿಮೆ ದೊಡ್ಡದು. ಒಂದರ ವಿಷಯ ‘ಕೃಷ್ಣಾನದಿ’; ಇನ್ನೊಂದರ ವಿಷಯ ನದಿಯಷ್ಟೇ ಪಾವನವೂ ಸಮೃದ್ಧವೂ, ದೀರ್ಘವೂ, ಆದ ‘ರಾಮರಾವ್ ಹುಕ್ಕೇರಿಕರ ಮಾಸ್ತರ’ರ ಬದುಕು, ಸಾರ್ಥಕ ಜೀವನ. ಗಂಗೆಯನ್ನು ಜಹ್ನುಋಷಿ ಅಂಜಲಿಯಲ್ಲಿ ತೆಗೆದುಕೊಂಡು ಆಪೋಷಣ ಮಾಡುತ್ತಾನೆ. ‘ಹರಿಯ ಅಡಿಯಿಂದ, ಹರನ ಜಡೆಯಿಂದ’ ಇಳಿದು ಬಯಲಿಗೆ ಹರಿದು ಬಂದ ಗಂಗೆಯಾಕೆ. ಆದರೂ ಜಹ್ನುವಿಗೆ ಆಪೋಷಣ ತೀರ್ಥ ಳಾಗುತ್ತಾಳೆ. ಹಾಗೆಯೆ ಎನ್ಕೆಯವರು ಈ ಎರಡು ಹಿರಿದಾದ ವಸ್ತುಗಳನ್ನು ತಮ್ಮ ಚಿಕ್ಕ ಹೊತ್ತಿಗೆಗಳಲ್ಲಿ ಆಪೋಷಣ ಮಾಡಿದ್ದಾರೆ. ಎನ್ಕೆ ಹಾಸ್ಯ ಬರಹಗಾರ ರೆಂದೆ ಖ್ಯಾತರು. ಆದರೂ ಗಂಭೀರವೆನ್ನಬಹುದಾದ ಈ ಎರಡೂ ವಿಷಯಗಳನ್ನು ಬಹುಶಃ ಸಮರ್ಥವಾಗಿ ಪ್ರತಿಪಾದಿಸಿದ್ದು ಬರಹಗಾರಿಕೆಯ ಅವರ ಕೌಶಲದ ಒಂದು ಮಾದರಿ; ಕಿರಿದರಲ್ಲಿ ಹಿರಿದನ್ನು ಕಾಣಿಸುವ ಅವರ ಕೈಚಳಕ, ಅವರ ಬಹು ಶ್ರುತತ್ವ ಕಂಡುಕೊಂಡ ಒಂದು ಹೊಸ ಆಯಾಮ.

ಭಾರತದ ಯಾವ ಯಾವ ‘ನದಿಗಳು ಶ್ರೀಹರಿ ಪಾದಪಂಕಜಭವ’ಗಳು ಎಂದು ಹೇಳುವಾಗ “ಕೃಷ್ಣೆ”ಯನ್ನೂ ಸ್ಮರಿಸಲಾಗುತ್ತದೆ. ವಿನಾಯಕರ “ಉಗಮ”ದಲ್ಲಿ ವರ್ಣಿಸಿದ ಹಾಗೆ ಕೃಷ್ಣೆ ಅಮೃತತರಂಗಿಣಿ, ಜೀವದಾಯಿನಿ. ಸಹ್ಯಾದ್ರಿಯ ಮಹಾಲಿಂಗದ ಜಡೆಯಿಂದ ಇಳಿದು ಬಂದಾಕೆ. ಆಕೆಯನ್ನು ನೋಡಿ ‘ದಿಕ್ಕು ದಿಕ್ಕಿಗೂ ಮಂಗಳಗೀತೆ’ ಉಕ್ಕಿದೆಯಂತೆ. ‘ಆಕೆಯ ದಂಡೆಯಗುಂಟ ಜನ ಪದಗಳು ನೆರೆದಿವೆ, ನಗರಗಳು ತಲೆಯೆತ್ತಿವೆ, ಹೊಲಗಳು ಹುಲುಸಾಗಿ ಬೆಳೆದಿವೆ, ತೋಟಗಳು ನಂದನಿಸಿವೆ.’ ಕೊಯನೆಯನ್ನು ಕರೆದಾಕೆ ಆಕೆ, ಪಂಚಗಂಗೆಯನ್ನು ಬೆರೆದಾಕೆ, ಮಲಪ್ರಭೆ-ಘಟಪ್ರಭೆಯರೊಡನೆ ಕೂಡಿ ಆಡಿದಾಕೆ, “ತುಂಗಭದ್ರೆಗೆ ಔತಣವಿತ್ತು ಭದ್ರಕಾಳಿಯಾದಾಕೆ”, ಸಕಲವನ್ನೂ ಸಂಗಮಿಸಿಕೊಂಡ ಹೊನ್ನಿನ ಹೊನಲಾಗಿಸಿ ಸಂಚಿತ ಪುಣ್ಯವನ್ನೆಲ್ಲ ಕಡಲದೊಡೆಯನಿಗೆ ಸರ್ವಾರ್ಪಣ-ಕೃಷ್ಣಾ

ರ್ಣವೆಂದು ಧಾರೆಯೆರೆದಾಕೆ. ವಿನಾಯಕರ ಕವಿಮನ ಕಂಡ ಈ ಕೃಷ್ಣೆಯನ್ನು ಈ "ಕಪಿಕಂಠ ಮುರುಳ"ನನ್ನು ಎನ್ಕೆ ಸಲಿಲಸಮಯದ ತಮ್ಮ ಲಲಿತ ಮಾತಿನಲ್ಲಿ ಕಿರಿದಾಗಿ ಹೇಳಿದ್ದಾರೆ; ಹಿರಿದಾಗಿ ಹೇಳಿದ್ದಾರೆ.

ಆ ಕೃಷ್ಣೆಯನ್ನು ಕುರಿತಾದ ಪೌರಾಣಿಕ ಉಲ್ಲೇಖಗಳು, ತನ್ನ ತೀರ ಪಾತ್ರಗಳಲ್ಲಿ ಬದುಕಿನಲ್ಲಿಯ ಆ ನದಿಯ ಪಾತ್ರ; ನದಿಯ ಮೂಲವಾದ ಮಹಾಬಲೇಶ್ವರ; ಜಲದುರ್ಗ, ಜಲಪಾತ, ಛಾಯಾ ಭಗವತಿ, ಸೀತಿಮನಿ, ಗಲಗಲಿಯ ನೃಸಿಂಹ ದೇವಸ್ಥಾನದಂಥ ಕ್ಷೇತ್ರಗಳು; ಡೋಣಿ ಹೊಳೆ ಕೃಷ್ಣೆಯನ್ನು ಕೂಡುವ ಎಲಗುಂಡಿ ಶ್ರೀಶೈಲದ ಮಲ್ಲಿಕಾರ್ಜುನ, ಪಾತಾಳಗಂಗೆ, ಮಲ್ಲಿಕಾರ್ಜುನ ಚೆಂಚುಲಕ್ಷ್ಮಿಯವರ ಐತಿಹ್ಯ, ಅಂಥ ಐತಿಹ್ಯ ಕುರಿತು ಆದಿಶಂಕರರು ರಚಿಸಿದ ಶ್ಲೋಕ. "ಚೆನ್ನಮಲ್ಲಿಕಾರ್ಜುನನೇ ಎನಗೆ ಗಂಡ ಕಾಣಿರವ್ವ" ಎಂದ ಅಕ್ಕಮಹಾದೇವಿ ಐಕ್ಯವಾದ ಕದಳಿವನ ಐತಿಹ್ಯ ಇಲ್ಲವನ್ನೂ ಎನ್ಕೆ ವರ್ಣಿಸಿದ್ದಾರೆ. ವೈಷ್ಣವ, ಶೈವ, ವೀರಶೈವ ಕ್ಷೇತ್ರಗಳಲ್ಲದೆ, ಬೌದ್ಧಮತ ನೆಲೆಗಳೂ ಇದರ ದಂಡೆಗುಂಟ ಉಂಟು. ಅಮರಾವತಿ, ಧರಣಿಕೋಟಿ, ನಾಗಾರ್ಜುನಕೊಂಡ, ಅದರ ಬೃಹತ್ ಅಣೆಕಟ್ಟು ಇವೆಲ್ಲವುಗಳ ಪರಿಚಯವೂ ಇದೆ. ಕರ್ನಾಟಕಾಂಧ್ರ-ಮಹಾರಾಷ್ಟ್ರಗಳ 'ನಾಗರಿಕತೆಯನ್ನು ಪೋಷಿಸಿಕೊಂಡ' 'ಕೃಷ್ಣೆಯ ಮಹತಿ'ಯನ್ನು ಎನ್ಕೆ ಹೇಳಿದ್ದಾರೆ.

ಕೃಷ್ಣಾ ಮೇಲ್ದಂಡೆ ಯೋಜನೆಯ ಬಗ್ಗೆಯಂತೂ ಒಂದು ಪ್ರಕರಣವೆ ಮೀಸಲಾಗಿದೆ. ಕೃಷ್ಣೆ ಪುರಾಣೇತಿಹಾಸೋಕ್ತಗಳು ಮಾತ್ರವಲ್ಲದೆ ವರ್ತಮಾನದ ಒಕ್ಕಲುತನದ ಅರ್ಥವ್ಯವಸ್ಥೆಯಲ್ಲೂ ಕೃಷ್ಣೆ ಆಡುತ್ತಿರುವ ಪಾತ್ರವನ್ನು ಸ್ಫುಟವಾಗಿಸಿದ್ದಾರೆ. ಅಂತೂ 'ಉಪನದಿಗಳ ರೂಪದಲ್ಲಿ ಹತ್ತು ಸಖಿಯರನ್ನು ಪಡೆದ ಕೃಷ್ಣೆ' ಮೂರು ತವರು ನಾಡುಗಳನ್ನು ಅಗಲಿ ಸಾಗರರಾಜನೊಂದಿಗೆ ಕೂಡಿಕೊಳ್ಳ ಎಂಬ ಅಗಲಿಕೆಯ ನೋವನ್ನು ಹೇಳಿಕೊಂಡು ಎನ್ಕೆ ಕೃಷ್ಣೆಯ ಈ ಕಥೆಯನ್ನು ಕೊನೆಗೊಳಿಸುತ್ತಾರೆ.

ಅವರ ಎರಡನೆಯ ಕಿರುಹೊತ್ತಿಗೆ 'ರಾಮರಾವ್ ಹುಕ್ಕೇರಿಕರ ಮಾಸ್ತರ್' ಬಗ್ಗೆ ಇದೆ. ಹುಕ್ಕೇರಿಕರರು ಬೆಳಗಾಂವ ಜಿಲ್ಲೆಯವರು, ಚಿಂಚಲಿ ಗ್ರಾಮದವರು. ಆದರೆ ಧಾರವಾಡವೆ ಅವರ 'ಕರ್ಮಭೂಮಿ; ತಪಸ್ಸಿನ ನೆಲೆ', ಅವರು ಸ್ವಾತಂತ್ರ್ಯಯೋಧರು, ಗಾಂಧೀಭಕ್ತರು, ಸಮಾಜ ಸೇವಕರು, ಪತ್ರಿಕೋದ್ಯಮಿಗಳು, ಶಿಕ್ಷಣತಜ್ಞರು. ಈಗ ಶ್ರೀಕ್ಷೇತ್ರ ಧರ್ಮಸ್ಥಳ ಶ್ರೀ ವೀರೇಂದ್ರ ಹೆಗ್ಗಡೆಯವರಿಂದ ಪೋಷಿತವೂ ಪುಷ್ಟವೂ ಆಗಿ ದಿನ-ದಿನಕ್ಕೆ ವರ್ಧಮಾನವಾಗಿರುವ ಧಾರವಾಡದ 'ವಿದ್ಯಾಗಿರಿ'ಯ ಜನತಾಶಿಕ್ಷಣ ಸಮಿತಿಯನ್ನು ಕಟ್ಟಿ ಬೆಳೆಸಿದವರು. ... ಪುಣ್ಯಶ್ಲೋಕರ ಸ್ಮರಣೆಯೂ ಬಾಳಬೆಳಗಿಸುವ ಉಸಿರಾಗಬಲ್ಲದಲ್ಲವೆ ?

'ರಾಮರಾವ ಹುಕ್ಕೇರಿಕರ ಮಾಸ್ತರರ ತಂದೆ-ತಾಯಿಯವರಾದ ಶ್ರೀನಿವಾಸ ರಾವ-ರಾಧಾಬಾಯಿ' ಚಿಂಚಲಿಯಲ್ಲಿಯ ಅವರ ಬಾಲ್ಯ ಮತ್ತು ಅವರ ಬಡತನ, ಶಿಕ್ಷಣವನ್ನು ಪಡೆಯುವದಕ್ಕಾಗಿ ಅವರು ಪಟ್ಟ ಶ್ರಮ; ಕೊಲ್ಹಾಪೂರ, ಸಾಂಗಲಿ, ರಾಯಬಾಗ, ಶಹಾಪೂರಗಳಲ್ಲಿ ಅವರು ಶಿಕ್ಷಣಕ್ಕಾಗಿ ವನವಾಸಪಟ್ಟದ್ದು, ಉಚ್ಚ ಶಿಕ್ಷಣಕ್ಕಾಗಿ ಪುಣೆಗೆ ತೆರಳಿದ್ದು, ಲೋಕಮಾನ್ಯ ಟಿಳಕರ ಸತ್ಸಂಗ ಪಡೆದದ್ದು; ಪ್ರೊ. ಭಾಟೆ, ಪ್ರೊ. ರಾಜವಾಡೆ, ಪ್ರೊ. ಪರಾಂಜಪೆಯಂಥವರ ನೆರಳಿನಲ್ಲಿ ನೆರವಿನಿಂದ ಕಾಲೇಜ ಶಿಕ್ಷಣ ಮುಂದುವರೆಸಿದ್ದು, ಲೋಕಮಾನ್ಯ ಟಿಳಕರೆ ಹುಕ್ಕೇರಿಕರರ ಶಿಕ್ಷಣದ ಜವಾಬ್ದಾರಿಯನ್ನು ವಹಿಸಿಕೊಂಡದ್ದು, ಇವೆಲ್ಲವನ್ನು ಈ ಕಿರುಹೊತ್ತಿಗೆಯಲ್ಲಿ ಕಾಣಬಹುದು.

ಪುಣೆಯ ನ್ಯೂ ಇಂಗ್ಲಿಷ ಸ್ಕೂಲಿನಲ್ಲಿಯ ರಾಮರಾಯರ ಶಿಕ್ಷಕ ವೃತ್ತಿಯ ಪ್ರಾರಂಭ; ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಪ್ರಿನ್ಸಿಪಾಲರಾದದ್ದು; ೧೯೧೮ ರ ಇನ್‌ಫ್ಲೂಯಂಜಾ ಹಾವಳಿಯಲ್ಲಿ ಅವರು ಗೈದ ಸಮಾಜಸೇವೆ, 'ಬಹದ್ದೂರ ಬಿಲ್ಲೆ'ಗಳನ್ನು ಶಾಲಾ ಬಾಲಕರಿಗೆ ಹಂಚಲು ಜಿಲ್ಹಾ ಕಲೆಕ್ಟರ ಕೊಟ್ಟ ಆಜ್ಞೆಯನ್ನು ನಿರಾಕರಿಸಿದ್ದು, ಅವರ ಉಗ್ರ ಹಾಗೂ ಉತ್ಕಟ ರಾಷ್ಟ್ರಾಭಿಮಾನ; ಕಾಂಗ್ರೆಸ ಚಳವಳಿಗಳು ಮತ್ತು ರಾಷ್ಟ್ರೀಯ ಶಾಲೆ, ಪತ್ರಿಕಾ ಪ್ರಪಂಚದಲ್ಲಿಯ ಅವರ ಸಾಹಸಗಳು ಮತ್ತು ಅವರು ಹೊರಡಿಸುತ್ತಿದ್ದ 'ಕರ್ಮವೀರ', 'ನವಶಕ್ತಿ', (ಇಂಗ್ಲಿಷ) 'ಧನಂಜಯ', 'ಯುನೈಟಿಡ್ ಕರ್ನಾಟಕ' (ಇಂಗ್ಲಿಷ) ಮುಂತಾದ ಪತ್ರಿಕೆಗಳು, 'ಕರ್ಮವೀರ'ದಲ್ಲಿ ಆಲೂರ ವೆಂಕಟರಾಯರು ಬರೆದ "ಭೂರಕ್ಕಸಾಯ ಸ್ವಾಹಾ" ಎಂಬ ಲೇಖನಕ್ಕಾಗಿ ಹುಕ್ಕೇರಿಕರ ಮಾಸ್ತರ ಮೇಲೆ ರಾಜದ್ರೋಹ ಖಟ್ಲೆ ಹಾಕಿ ಅವರಿಗೆ ಒಂದು ವರ್ಷ ಸಶ್ರಮ ಜೇಲು ಶಿಕ್ಷೆ ಕೊಟ್ಟದ್ದು; ಕರ್ನಾಟಕ ಏಕೀಕರಣ ಚಳವಳಿಯಲ್ಲಿಯ ಅವರ ಪಾತ್ರ, ಅಂಕೋಲಾದ ಉಪ್ಪಿನ ಸತ್ಯಾಗ್ರಹದಲ್ಲಿ ಅವರು ಇತ್ತ ನೆರವು; ೧೯೪೨ ರ ಚಲೇಜಾವ್ ಚಳವಳಿಯಲ್ಲಿಯ ಮುಂಬೆಯಲ್ಲಿಯ ಅವರ ಭೂಗತ ಬದುಕು; ೧೯೪೬ರ ಪ್ರಾಂತೀಯ ಚುನಾವಣೆಯಲ್ಲಿ ಅವರು ಶಾಸನಾಂಗಕ್ಕೆ ಆರಿಸಿ ಬಂದದ್ದು; ಅವರ ಷಷ್ಟ್ಯಬ್ದಿ (೧೯೪೭); ೧೯೫೨ರಲ್ಲಿ ಶ್ರೀ ಮುರಾರಜಿ ದೇಸಾಯಿ ಮುಖ್ಯಮಂತ್ರಿಯಾದ ನಂತರ ಮುಂಬೈ ವಿಧಾನ ಪರಿಷತ್ತಿನ ಸಭಾಧ್ಯಕ್ಷರಾದುದು; ೧೯೫೬ರ ಕರ್ನಾಟಕ ರಾಜ್ಯನಿರ್ಮಾಣದ ನಂತರ ಧಾರವಾಡಕ್ಕೆ ಮರಳಿದ್ದು; ಜನತಾ ಶಿಕ್ಷಣ ಸಮಿತಿಯನ್ನು ಸ್ಥಾಪಿಸಿ ಆ ಮೂಲಕ ವಿವಿಧ ಶೈಕ್ಷಣಿಕ ಸಂಸ್ಥೆಗಳನ್ನು ಕಟ್ಟಿದ್ದು, ೧೯೬೩ ರಲ್ಲಿ ಅವರು ದೈವಾಧೀನರಾದದ್ದು– ಅಲ್ಲದೆ ಅವರ ವೈಯುಕ್ತಿಕ ಹಾಗೂ ಕೌಟುಂಬಿಕ ಜೀವನದ 'ಕಟುಮಧುರ ಅಭ್ಯಾಸ'ವನ್ನು ಹೃದಯಂಗಮವಾದ 'ವ್ಯಾಖ್ಯಾನದೊಡಗೂಡಿ' ವಿವರಿಸಿದ್ದಾರೆ.

ಇಂಥ ವಿಷಯಗಳು ಹಾಗೂ ಇಂಥ ವಸ್ತುಗಳ ಬಗ್ಗೆ ಬರೆಯುವವರಿಗೆ ಈ ಎರಡು ಕಿರುಹೊತ್ತಿಗೆಗಳು ದಾರಿದೀಪವಾಗಬಲ್ಲವು.

ನಾನಿಕಾಕಾ : ಎನ್ನೆಬರೆಹ/೪೯೫

# ಕಿರಾನಾ ಘರಾಣೆಯ ಕಣ್ಮಣಿಗಳಿಬ್ಬರ ಜೀವನ ಸಂಗೀತ

ಎಂ. ಎಸ್. ಕಾಮತ

ಚೈತನ್ಯ ಸರ್ವಭೂತಾನಾಂ ವಿವೃತ್ತಂ ಜಗದಾತ್ಮನಾ ।
ನಾದಬ್ರಹ್ಮ ತದಾನಂದಂ ಅದ್ವಿತೀಯಮುಪಾಸ್ಮಹೇ ॥

(ಎಲ್ಲಾ ಭೂತಗಳ ಚೈತನ್ಯವೂ ಜಗತ್ತನ್ನೇ ತನ್ನ ಪ್ರಕಟಸ್ವರೂಪವಾಗಿ ಉಳ್ಳದ್ದೂ ಆನಂದವೂ ಸಾಟಿಯಿಲ್ಲದುದೂ ಆಗಿರುವ ನಾದಬ್ರಹ್ಮವನ್ನು ಉಪಾಸಿಸುತ್ತೇವೆ.)

ನಮ್ಮ ಪ್ರಾಚೀನ ಋಷಿಗಳು ಮಾನವ ಜ್ಞಾನಕೋಶದ ಎಲ್ಲಾ ಪಾತ್ರಗಳಿಗೂ ಸೀಮಾ ಪುರುಷರಾದರು. ನಾದ ಬ್ರಹ್ಮನ ಆರಾಧನೆಯೇ ಸಂಗೀತ ಶಾಸ್ತ್ರದ ಮೂಲ.

ಹಿಂದುಸ್ತಾನೀ ಸಂಗೀತ ಪದ್ಧತಿಯಲ್ಲಿ ಒಂದೊಂದು ಇಲ್ಲವೆ ಒಂದಕ್ಕಿಂತ ಹೆಚ್ಚು ವೈಶಿಷ್ಟ್ಯಗಳಿಂದಾಗಿ ಗ್ವಾಲ್ಹೇರ, ಆಗ್ರಾ, ಜಯಪುರ, ಕಿರಾನಾ, ಹೀಗೆ ಘರಾಣೆಗಳು ತಲೆಯೆತ್ತಿವೆ. ಇವುಗಳಲ್ಲಿ ಖಾನ್ ಸಾಹೇಬ್ ಅಬ್ದುಲ್ ಕರೀಮ್ ಖಾನರಿಂದ ಸ್ಥಾಪಿತವಾದ ಕಿರಾನಾ ಘರಾನಾ ಅಶ್ವತ್ಥಮರದಂತೆ ದಿಲ್ಲಿ, ಉತ್ತರಹಿಂದುಸ್ತಾನ, ಪಾಕಿಸ್ತಾನ, ಕರ್ನಾಟಕ, ಮಹಾರಾಷ್ಟ್ರಗಳಲ್ಲಿ ತನ್ನ ಶಾಖೆಗಳನ್ನು ಪಸರಿಸಿದೆ. ಖಾನ್ ಸಾಹೇಬರ ನೇರ ಹಾಗೂ ಪಟ್ಟದ ಶಿಷ್ಯರೆನಿಸಿದ ಸವಾಯಿ ಗಂಧರ್ವ ಉರ್ಫ ರಾಮಭಾವು ಕುಂದಗೋಳಕರರ ಮತ್ತು ಅವರ ಶಿಷ್ಯರಾದ ಡಾ. ಗಂಗೂಬಾಯಿ ಹಾನಗಲ್ ಮತ್ತು ಪಂಡಿತ ಭೀಮಸೇನ ಜೋಶಿ, ದಿ. ಫಕ್ಕೀರಪ್ಪ ಕುಂದಗೋಳ ದಿ. ವೆಂಕಟರಾವ ರಾಮದುರ್ಗ, ದಿ. ನೀಲಕಂಠ ಬುವಾ ಗಾಡಗೋಳಿ ಮೊದಲಾದವರೆಲ್ಲರೂ ಕರ್ನಾಟಕದವರೇ – ಹುಬ್ಬಳ್ಳಿ ಧಾರವಾಡದವರೇ ಆಗಿದ್ದಾರೆ. ಸ್ವರ ಮಾಧುರ್ಯ ಸುರೇಲಪಣ ಇವು ಕಿರಾನಾ ಘರಾಣೆಯ ಮುಖ್ಯ ವೈಶಿಷ್ಟ್ಯ.

ದೇಶದ ಸಂಗೀತ ದಿಗಂತದಲ್ಲಿ ಅಚ್ಚಳಿಯದ ಸ್ಥಾನವನ್ನು ಪಡೆದು ನಾಡಿನ ಉದ್ದಗಲಕ್ಕೂ ಸಂಗೀತ ಸುಧೆಯ ಧಾರೆಯನ್ನು ಹರಿಸಿ ಅಮರರಾದ ಕಿರಾನಾ ಘರಾಣೆಯ ದಿಗ್ಗಜಗಳಾದ 'ಸಂಗೀತರತ್ನ ಖಾನ್ ಸಾಹೇಬ್ ಅಬ್ದುಲ್ ಕರೀಮಖಾನ್' ಮತ್ತು 'ಸಂಗೀತಪುಂಗವ ಸವಾಯಿ ಗಂಧರ್ವ'ರ ಜೀವನ-ಇತಿಹಾಸ ನಾದೋಪಾಸಕರೆಲ್ಲರೂ ತಿಳಿದಿರಬೇಕಾದ ಅಂಶ. ಇವರಿಬ್ಬರ ಜೀವನ ಮತ್ತು ಸಂಗೀತ ಸಾಧನೆಯ ಇತಿಹಾಸವೆಂದರೆ ಕಿರಾನಾ ಘರಾಣೆಯ ಇತಿಹಾಸವೇ ಎಂದು ಹೇಳಬಹುದು.

ಕಿರಾನಾ ಘರಾಣೆಯ ಮೂಲ ಪುರುಷ ಅಬ್ದುಲ್‌ಕರೀಮ್‌ಖಾನರ ಹೆಸರು ದೇಶದಾದ್ಯಂತ ವಿಧಿತ. ಆದರೆ ಅವರ ಕಲೋಪಾಸಕ ಇತಿಹಾಸ ಸಾಧನೆಗಳನ್ನು ತಿಳಿದುಕೊಂಡವರು ವಿರಳ.

ಸಮಗ್ರ ಉತ್ತರ ಕರ್ನಾಟಕದಲ್ಲಿ ಕೂಡ ಹಿಂದುಸ್ತಾನಿ ಸಂಗೀತದ ಬೆಳವಣಿಗೆಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಕರೀಮ್‌ಖಾನರು ಪ್ರಭಾವ ಬೀರಿದ್ದಾರೆ ಎನ್ನುವದು ಅಷ್ಟೇ ಸತ್ಯ. ಸಂಗೀತವೆ ಉಸಿರಾಗಿ ಅದನ್ನು ಜಾತಿ, ಭಾಷೆ, ಧರ್ಮಗಳ ಚೌಕಟ್ಟಿನೊಳಗೆ ಬಂಧಿಸದೇ ಅದಕ್ಕೊಂದು ಸ್ವತಂತ್ರ ರೂಪು ಕೊಟ್ಟು ಹಿಂದುಸ್ತಾನಿ ಹಾಗೂ ಕರ್ನಾಟಕಿ ಪದ್ಧತಿಗಳು ಸಂಗೀತ ಸರಸ್ವತಿಯ ಎರಡು ಕಣ್ಣುಗಳೆಂಬ ಸಮನ್ವತೆಯನ್ನು ಸಾರಿದ ಮಹಾನ್‌ನಾದ ತಪಸ್ವಿ ಅಬ್ದುಲ್‌ಕರೀಮ ಖಾನರ ಜೀವನ ಚರಿತ್ರೆ ಓದಿದಾಗ ನಮ್ಮ ನಾಡು ಎಂತಹ ಪುಣ್ಯ ಭೂಮಿ ಎನಿಸುತ್ತದೆ.

ಇನ್ನು ಅಬ್ದುಲ್‌ಕರೀಮಖಾನರ ಮಾತುಗಳಲ್ಲಿ, ಸಂಗೀತ ಕೇವಲ ಸ್ವರಾಲಾಪನೆಗಳ ಕಸರತ್ತಿನ ಪ್ರದರ್ಶನವೇ ಶಾಸ್ತ್ರೀಯ ಸಂಗೀತವಲ್ಲ. ಬರಿಯ ಸಂಗೀತ ಶಾಸ್ತ್ರವನ್ನು ತಿಳಿದು ವ್ಯಾಕರಣ ಪಾಂಡಿತ್ಯ ಪ್ರದರ್ಶಿಸಿದರೆ ಶಾಸ್ತ್ರೀಯ ಸಂಗೀತವಾಗಲಾರದು. ರಸಾನಂದವಿಲ್ಲದೆ ಗಂಟೆಗಟ್ಲೆ ಸಂಗೀತ ಕಚೇರಿ ನಡೆಸಿದರೆ, ಶಾಸ್ತ್ರೀಯ ಸಂಗೀತವೆನಿಸದು. ಒಂದು ಭಕ್ತಿಗೀತೆಯನ್ನಾಗಲಿ, ಭಜನೆಯನ್ನಾಗಲಿ ಸಾಹಿತ್ಯ ಮತ್ತು ಸಂಗೀತಗಳೆರಡನ್ನೂ ಸಮತೋಲನವಾಗಿರಿಸಿಕೊಂಡು ಶಾಸ್ತ್ರ ಸಮ್ಮತವಾಗಿ ಹಾಡಬೇಕು. ಶ್ರೋತೃಗಳು ಯಾವ ಹಾಡುಗಾರಿಗಯನ್ನು ಕೇಳಿ ಆನಂದಪಡುವರೋ ಅದೇ ಶಾಸ್ತ್ರೀಯ ಸಂಗೀತ. ಇದು ತುಂಬ ಅರ್ಥಪೂರ್ಣ.

ಅಬ್ದುಲ್ ಕರೀಮಖಾನರ ಜೀವನದ ಏರಿಳಿತಗಳು ಸಂಗೀತಮಯ ಬದುಕಿನಲ್ಲಿ ಅವರು ಉಂಡ ಸಿಹಿ-ಕಹಿಗಳು ಶ್ರಮಪೂರ್ಣವಾಗಿ ಬೆಳೆಸಿದ ಕಿರಾನಾ ಘರಾಣೆಯ ಶಿಷ್ಯ ವೃಂದ ಇವೆಲ್ಲರ ನೈಜ ಚಿತ್ರಣ 'ಸಂಗೀತರತ್ನ ಖಾನಸಾಹೇಬ ಅಬ್ದುಲ್ ಕರೀಮ್‌ಖಾನ್' ಗ್ರಂಥ.

ಬಾಲಕ ಅಬ್ದುಲ್‌ಕರೀಮಖಾನ ತಮ್ಮ ಕಕ್ಕನಿಂದ ಸಂಗೀತ ಸರಸ್ವತಿಯ ಸ್ವರಾರಾಧನೆಗೆ ತೊಡಗಿ ವಾದ್ಯಕಾರರಾಗಿಯೂ, ಹಾಡುಗಾರರಾಗಿಯೂ, ಕಲಾ ತಪಶ್ಚರ್ಯವನ್ನು ಎಸಗಿದ ಬಗೆಯನ್ನು ಲೇಖಕರು ಸ್ವಾರಸ್ಯವಾಗಿ ನಿರೂಪಿಸಿದ್ದಾರೆ. ಮುಂದೆ ತಮ್ಮ ಖಾಸಗಿ ಜೀವನದಲ್ಲಿ ಅವರು ಎದುರಿಸಿದ ಎಡರುಗಳು ಶಾರೀರವನ್ನೇ ಕಳೆದುಕೊಂಡು ಭಕ್ತಿ ನಿಷ್ಠೆಗಳಿಂದ ಅದನ್ನು ಪುನಃ ಸಂಪಾದಿಸಿದ ಸಂಗತಿ ಕೊನೆಗೆ ಪಾಂಡಿಚೇರಿಗೆಂದು ಹೊರಟು ೧೯೩೭ ರಲ್ಲಿ ಸಿಂಗಪೆರುಮಾಳ್ ಕೊಯಿಲ್

ನಾನಿಕಾಕಾ : ಎನ್ಕೆಬರೆಹ/೪೯೭

ಎಂಬ ಚಿಕ್ಕನಿಲ್ದಾಣದಲ್ಲಿ ಅಸ್ವಸ್ಥರೆನಿಸಿ ದರ್ಬಾರಿ ಕಾನಡಾದಲ್ಲಿ 'ಪಾರಪರವರ್ ದಿಗಾರ್' ಎಂಬ ಪ್ರಾರ್ಥನೆಯನ್ನು ಸಲ್ಲಿಸುತ್ತಲೇ ಕೊನೆಯುಸಿರೆಳೆಯುವ ಸನ್ನಿವೇಶವಂತೂ ಅತ್ಯಂತ ಹೃದಯಸ್ಪರ್ಶಿಯಾಗಿ ಚಿತ್ರಿತವಾಗಿದೆ.

ಅದೇ ರೀತಿ ಸಂಗೀತ ಲೋಕದ ಇನ್ನೊಂದು ದ್ಯುವತಾರೆ ಅಬ್ದುಲ್ ಕರೀಮ್ ಖಾನರ ನಿಕಟ ಶಿಷ್ಯ ರಾಮಭಾವು ಕುಂದಗೋಳಕರ (ಸವಾಯಿ ಗಂಧರ್ವ)ರ ಪೂರ್ಣಪರಿಚಯ ಮಾಡಿಕೊಡುವ ಅಮೂಲ್ಯ ಹೊತ್ತಿಗೆ.

"ಸಂಗೀತಪುಂಗವ ಸವಾಯಿ ಗಂಧರ್ವ" ಸವಾಯಿಗಂಧರ್ವರ ಬಾಲ್ಯದಿಂದ ಹಿಡಿದು ಜೀವನದ ಕೊನೆಯ ಕ್ಷಣಗಳು ಕೂಡ ರೋಮಾಂಚಕವಾಗಿ, ಹೃದಯಸ್ಪರ್ಶಿಯಾಗಿ ಎನ್ಕೆಯವರ ಲೇಖನಿಯಿಂದ ಮೂಡಿಬಂದಿವೆ. ಪಾರ್ಶ್ವವಾಯುವಿಗೆ ತುತ್ತಾಗಿ ತಮ್ಮ ಸಂಗೀತ ಸಾಧನೆ ಇನ್ನು ನಿಷ್ಪ್ರಯೋಜಕವಾಯಿತಲ್ಲ ಎಂದು ಮರುಗುತ್ತ ತಮ್ಮ ಕುಂದಗೋಳ ಆಸ್ತಿಯನ್ನು ಮಾರಿ ಊರು ಬಿಟ್ಟು ಹೊರಡುವ ಸನ್ನಿವೇಶ ಕಣ್ಣೀರು ತರಿಸುವಂಥದು. ಶ್ರೇಷ್ಠ ಸಂಗೀತಗಾರನಾಗಿ ಮರಾಠಿ ರಂಗಭೂಮಿಯ ನುರಿತ ನಟನಾಗಿ. ಕಿರಾನಾ ಘರಾಣೆಯ ಕಂಪನ್ನು ದೇಶದಾದ್ಯಂತ ಹರಡಿದ ಈ ಮಹಾನ್ ನಾಯಕನ ಜೀವನಕಥೆ ಕಲಾವಿದರೆಲ್ಲರಿಗೂ ದಾರಿದೀಪ.

ಖಾನ್ ಸಾಹೇಬ ಅಬ್ದುಲ್ ಕರೀಮ್ ಖಾನ ಮತ್ತು ಸವಾಯಿ ಗಂಧರ್ವರು ಸಂಗೀತದ ಶ್ರೀಗಂಧವನ್ನು ತೀಡಿ ಅದರ ಪರಿಮಳವನ್ನು ನಾಡಿನ ಮೂಲೆ ಮೂಲೆಗಳಲ್ಲಿ ಪಸರಿಸಿದ ರಸಋಷಿಗಳು ಅವರ ಗತಜೀವನದ ಪದರುಗಳನ್ನು ಬಿಡಿಸಿ, ಒಳಹೊಕ್ಕು ಅವರ ಸಾಧನೆ, ಸಿದ್ಧಿಗಳೆರಡನ್ನೂ ಹಂತಹಂತವಾಗಿ ನಿರೂಪಿಸಿದ ಶೈಲಿ ನಮ್ಮನ್ನು ಸಂಧಿಸಿ ನಿಜವಾಗಿಯೂ ಆ ಮಹಾನ್ ಆತ್ಮಗಳು ನಮ್ಮ ಮುಂದೆ ಜೀವಂತವಾಗಿದ್ದಾರೇನೋ ಎಂಬ ಅನಿಸಿಕೆಗೆ ಕಾರಣವಾಗುತ್ತದೆ.

ಸ್ವಂತ ಪಳಗಿದ ಸಾಹಿತಿಯಾಗಿ ಎನ್ಕೆ ಅವರು ಆಕಾಶವಾಣಿಯಲ್ಲಿ ಕೆಲಸ ಮಾಡಿರುವುದರಿಂದಲೂ ಸಹಜ ಪ್ರವೃತ್ತಿಯಿಂದ ಸಂಗೀತದತ್ತ ಒಲವು ಪರಿಶ್ರಮಗಳಿರುವುದರಿಂದಲೂ ಹಿಂದುಸ್ತಾನೀ ಸಂಗೀತಗಾರರ ಅದರಲ್ಲೂ ಕರ್ನಾಟಕಸ್ಥ ಹಿಂದುಸ್ಥಾನೀ ಗಾಯಕರ ಜೀವನ ಸಾಧನೆಗಳ ಪರಿಚಯ ಮಾಡಿಕೊಡಲು ಅವರು ಸಮರ್ಥರಾಗಿದ್ದಾರೆ. ಈಗಾಗಲೇ ಡಾ. ಮಲ್ಲಿಕಾರ್ಜುನ ಮನ್ಸೂರ, ಡಾ. ಬಸವರಾಜ ರಾಜಗುರು, ಡಾ. ಗಂಗೂಬಾಯಿ ಹಾನಗಲ್, ಪಂ. ಭೀಮಸೇನ ಜೋಶಿ, ಪ್ರಾ. ಶಾರದಾ ಹಾನಗಲ್ ಮೊದಲಾದ ಖ್ಯಾತ ಕಲಾವಿದರ ಬಗ್ಗೆ ಲೇಖನಗಳನ್ನು ಬರೆದು ಪ್ರಕಟಿಸಿಯೇ ಇದ್ದಾರೆ.

ಧಾರವಾಡ, ಹುಬ್ಬಳ್ಳಿ, ಕುಂದಗೋಳ, ಗದಗ ಇವು ಹಿಂದುಸ್ತಾನೀ ಸಂಗೀತ ಸಾಮ್ರಾಜ್ಯದ ರಾಜಧಾನಿಗಳಂತಿವೆ. ಹಿಂದುಸ್ತಾನೀ ಸಂಗೀತ ನಕ್ಷೆಯಲ್ಲಿ ಧಾರವಾಡ ಜಿಲ್ಹೆ ಮೇಲ್ಮಟ್ಟದ ಸ್ಥಾನಮಾನಗಳನ್ನು ಪಡೆದುದಾಗಿದೆ. ಖ್ಯಾತ ಸಂಗೀತಗಾರ ಭಾಸ್ಕರಬುವಾ ಬಖಲೆಯವರು ಧಾರವಾಡದಲ್ಲೇ ಇದ್ದರು. ಧಾರವಾಡದವರೇ ಆಗಿದ್ದ ಪಿತ್ರೆ ವಕೀಲರು ಸಂಗೀತದಲ್ಲಿ ಹೆಸರುವಾಸಿ ಆಗಿದ್ದರು. ಸುವಿಖ್ಯಾತ ರಾಮಕೃಷ್ಣಬುವಾ ವಝೆ ಬೆಳಗಾವಿಯವರು. ಅವರ ಶಿಷ್ಯರಾಗಿದ್ದ ಗುರುರಾವ ದೇಶಪಾಂಡೆ ಅವರು ಧಾರವಾಡದವರಾಗಿದ್ದರು. ಕುಂದಗೋಳದಲ್ಲಿ ಇಂದಿಗೂ ಸವಾಯಿ ಗಂಧರ್ವರ ಪುಣ್ಯತಿಥಿ ಆರಾಧನೆ ವಿಜೃಂಭಣೆಯಿಂದ ನಡೆಯುತ್ತದೆ.

ಕರ್ನಾಟಕಸ್ಥ ಕಿರಾನಾ ಘರಾಣೆಯ ಸಂಗೀತಗಾರರನ್ನೇ ಕುರಿತು ಒಂದು ಗ್ರಂಥವನ್ನು ರಚಿಸುವ ಯೋಜನೆಯನ್ನು ಎನ್ಕೆಯವರು ಸಂಕಲ್ಪಿಸಿರುವದು ಸ್ತುತ್ಯವಾದುದು.

# ಮೂವರು ನಾಟ್ಯಕಲಾವಿದರು

ಡಾ. ಜಿ. ಎಸ್. ಕಾಪಸೆ

ಎನ್ಕೆ ಅವರು ಕನ್ನಡದ ಸುಪ್ರಸಿದ್ಧ ಲೇಖಕರು. ನಾಟಕಕಾರರಾಗಿ ಪ್ರಬಂಧ ಲೇಖಕರಾಗಿ, ಕವಿಯಾಗಿ ಸಾಹಿತ್ಯಕ್ಕೆ ವಿವಿಧಮುಖ ಸೇವೆಸಲ್ಲಿಸಿದ ಕೀರ್ತಿ ಅವರದು. ಅವರ ವಿಶೇಷವಾದ ಆಸಕ್ತಿ ಇರುವುದು ನಾಟಕ ರಚನೆಯಲ್ಲಿ ಮತ್ತು ಅದರ ಪ್ರಯೋಗದಲ್ಲಿ ಎಂದು ಹೇಳಬಹುದು. ಸ್ವತಃ ನಾಟಕಕಾರರಾದ ಎನ್ಕೆ ಅವರು ಕನ್ನಡ ರಂಗಭೂಮಿಯ ನೆಲಿ-ಬೆಲೆಗಳನ್ನು ಚೆನ್ನಾಗಿ ಬಲ್ಲವರು. ಕನ್ನಡದಲ್ಲಿ ವೃತ್ತಿ ನಾಟಕಗಳು ಹುಟ್ಟಿ ಬೆಳೆದುದನ್ನೂ, ವೃತ್ತಿ ನಾಟಕಕಾರರು ಕಟ್ಟಿದ ನಾಟಕ ಮಂಡಳಿಗಳ ಇತಿಹಾಸವನ್ನೂ, ನಮ್ಮ ನಾಟಕಕಾರರು ಜೀವನದುದ್ದಕ್ಕೂ ನಾಟಕ ಸೇವೆಗಾಗಿ ನಡೆಸಿದ ಹೋರಾಟವನ್ನೂ ಅವರು ಸಾದ್ಯಂತವಾಗಿ ತಿಳಿದವರು. ನಾಟಕಕಾರರ ಕಷ್ಟ-ನಷ್ಟಗಳನ್ನೂ ಸೋಲು-ಗೆಲವುಗಳನ್ನೂ ಹತ್ತಿರದಿಂದ ಬಲ್ಲ ಹಿರಿಯರಲ್ಲಿ ಅವರೊಬ್ಬರು. ಹೀಗಿರುವ ಎನ್ಕೆ ಅವರು ನಾಟ್ಯಕಲಾವಿದರ ಜೀವನವನ್ನು ಅರ್ಥಪೂರ್ಣವಾಗಿ ಚಿತ್ರಿಸಬಲ್ಲವರೆಂಬ ಪ್ರತ್ಯೇಕವಾಗಿ ಹೇಳಬೇಕಾದ ಅಗತ್ಯವಿಲ್ಲ.

ಎನ್ಕೆ ಅವರು ಮೂರು ನಾಟ್ಯಕಲಾವಿದರ ಜೀವನ ಚರಿತ್ರೆಯನ್ನು ಕಳೆದ ೧೦-೧೨ ವರ್ಷಗಳಲ್ಲಿ ಬರೆದು ಬೆಳಕಿಗೆ ತಂದಿದ್ದಾರೆ. ಗರೂಡ ಸದಾಶಿವರಾಯರು, ವಾಮನರಾವ್ ಮಾಸ್ತರ ಮತ್ತು ಗಂಗೂಬಾಯಿ ಗುಳೇದಗುಡ್ಡ ಇವರೇ ಆ ಮೂವರು ನಾಟ್ಯಕಲಾವಿದರು. ಈ ಮೂವರ ಜೀವನದಲ್ಲಿಯೂ ವೈಶಿಷ್ಟ್ಯವುಂಟು. ವೈವಿಧ್ಯವೂ ಉಂಟು. ಈ ಚರಿತ್ರೆಗಳು ಗಾತ್ರದಲ್ಲಿ ಕಿರಿದಾಗಿದ್ದರೂ ನಮ್ಮ ನಾಟ್ಯರಂಗದ ಅಧ್ಯಯನಕ್ಕೆ ಅಪರೂಪದ ಸಾಮಗ್ರಿಯನ್ನು ಒದಗಿಸುವಂತಹದಾಗಿವೆ, ವೃತ್ತಿನಾಟಕರಂಗಕ್ಕೆ ಗಮನಾರ್ಹ ಕಾಣಿಕೆಗಳಾಗಿವೆ. ಗರೂಡ ಸದಾಶಿವರಾಯರ ಚರಿತ್ರೆ ಸಂಗೀತನಾಟಕ ಅಕಾದೆಮಿಯಿಂದ ಪ್ರಕಟವಾಗಿದ್ದರೆ, ಗಂಗೂಬಾಯಿ ಗುಳೇದಗುಡ್ಡ ಚರಿತ್ರೆ ಐ. ಬಿ. ಎಚ್. ಪ್ರಕಾಶನದಿಂದ ಬೆಳಕು ಕಂಡಿದೆ. 'ವಾಮನರಾವ್ ಮಾಸ್ತರ'ರ ಜೀವನ ಚರಿತ್ರೆ ಸುಧಾ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಬಂದದ್ದಷ್ಟೇ ಅಷ್ಟೆ. ಅದಿನ್ನೂ ಪುಸ್ತಕರೂಪವನ್ನು ತಳೆಯಬೇಕಾಗಿದೆ.

## ‘ಶ್ರೀ ಗರೂಡ ಸದಾಶಿವರಾಯರು’

‘ಅಭಿನಯ ಕೇಸರಿ’ ಎನಿಸಿದ ಗರೂಡ ಸದಾಶಿವರಾಯರು ಕನ್ನಡವೃತ್ತಿ ರಂಗಭೂಮಿಗೆ ಒಂದು ಪರಂಪರೆಯನ್ನು ನಿರ್ಮಿಸಿಕೊಟ್ಟ ಧೀಮಂತರು. ಕವಿ ಕಲಾವಿದರ ಕ್ಷೇತ್ರವಾದ ಗದಗು ಅವರ ಕಲಾಪ್ರಜ್ಞೆಯನ್ನೂ ಪೋಷಿಸಿ, ಬೆಳೆಸಿದ ಸ್ಥಾನ. ಅವರ ಆರಂಭದ ನಾಟಕ ಪ್ರಯೋಗಗಳು ನಡೆದದ್ದು ಅಲ್ಲಿಯೇ. ‘ಗದಗು ರಂಗಭೂಮಿಯ ಗರುಡಿಮನೆ’ಯಾಯಿತು. ಸದಾಶಿವರಾಯರಿಗೆ ಕರ್ನಾಟಕ ನಾಟಕದ ಪ್ರಥಮ ಗುರುವೆನಿಸಿದ ಶಾಂತಕವಿಗಳು ಹಚ್ಚಿದ ನಾಟಕ ಪರಂಪರೆಯ ನೋಂಬತ್ತಿಗೆ ಸದಾಶಿವರಾಯರು ಬೆಳಕಿನ ಕುಡಿಯಾದರೆಂದು ಹೇಳಬಹುದು.

ಸದಾಶಿವರಾಯರು ತಾವು ಜನಿಸಿದ ಕೌಲೂರು ಮತ್ತು ಸೋದರ ಮಾವನ ಊರಾದ ರಾಯಚೂರಿನಲ್ಲಿ ತಮ್ಮ ಬಾಲ್ಯವನ್ನು ಕಳೆದರು, ಅಷ್ಟಿಷ್ಟು ಶಿಕ್ಷಣವನ್ನೂ ಪಡೆದರು. ಮರಾಠಿ ಮೂಲಕ ಶಿಕ್ಷಣ ಹೊಂದಿದರೂ ಸಂಘರ್ಷನಾಥಾಚಾರ್ಯ ರಂಥ ಶಿಕ್ಷಕರಿಂದ ಕನ್ನಡ ದೀಕ್ಷೆಯನ್ನೂ, ಕಾವ್ಯರಚನೆಯ ಸ್ಫೂರ್ತಿಯನ್ನೂ ಪಡೆದರು. ಅನಂತರದ ಕಲಬುರ್ಗಿಯ ಬ್ರಹ್ಮಪುರದ ಜೀವನ ಅವರಿಗೆ ಶಿಸ್ತು, ಸಂಯಮದ ಪಾಠವನ್ನು ಕಲಿಸಿಕೊಟ್ಟಿತು. ಗಣೇಶೋತ್ಸವ, ಶಿವಾಜಿ ಜಯಂತ್ಯುತ್ಸವಗಳಂಥ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಉತ್ಸಾಹದಿಂದ ಭಾಗವಹಿಸಲು ತೊಡಗಿದ್ದು ಇಲ್ಲಿಯೇ. ‘ಬಂಧವಿಮೋಚನ’ ಎಂಬ ರಾಷ್ಟ್ರೀಯ ನಾಟಕದಲ್ಲಿ ಅವರು ಪಾಲ್ಗೊಂಡು, ಪ್ರಪ್ರಥಮವಾಗಿ ತಮ್ಮ ನಾಟ್ಯಕಲೆಯನ್ನು ಪ್ರದರ್ಶಿಸಿದರು. ಅವರ ನಾಟ್ಯಕಲೆಗೆ ಪಾಂಡುರಂಗ ಜೇಡಕರ ಅವರು ಗುರುಗಳಾಗಿ ಪ್ರೋತ್ಸಾಹ ನೀಡಿದರು.

ಮರಾಠಿ ನಾಟಕಗಳ ಪ್ರಾಬಲ್ಯವಿರುವ ಕಾಲದಲ್ಲಿ ಕನ್ನಡ ನಾಟಕಗಳನ್ನು ಎತ್ತಿ ಹಿಡಿಯಲು ಗರೂಡರು ಪ್ರಯತ್ನಿಸಿದರು. ಅದೇ ತಾನೇ ಯುವಕರು ಕಟ್ಟಿಕೊಂಡ ‘ಶಿವಸುತ ಪ್ರಾಸಾದಿಕ ಮಂಡಲಿ’ಯ ಕಾರ್ಯದರ್ಶಿಗಳಾಗಿ ‘ಮಾರ್ಕಂಡೇಯ’, ‘ಕೀಚಕವಧೆ’ಯಂಥ ಪೌರಾಣಿಕ ನಾಟಕಗಳನ್ನು ಯಶಸ್ವಿಯಾಗಿ ಪ್ರಯೋಗಿಸಿದರು.

ಗಾಣಗಾಪುರದ ದತ್ತಾತ್ರೇಯನ ದರ್ಶನಾನಂತರ ಹೊಸ ಚೈತನ್ಯವನ್ನು ಪಡೆದು ‘ದತ್ತಾತ್ರೇಯ ನಾಟಕ ಮಂಡಲ’ ಕಟ್ಟಿದರು. ಅದು ಮುಂದೆ ಕರ್ನಾಟಕದಲ್ಲಿ ಒಂದು ಸುಪ್ರಸಿದ್ಧ ನಾಟಕ ಕಂಪನಿಯಾಗಿ ಮೆರೆಯಿತು. ‘ಬಲಸಿಂಹತಾರಾ’ ಈ ಕಂಪನಿಯ ಪ್ರಥಮ ನಾಟಕ. ಯಾದಗಿರಿಯಲ್ಲಿ ತನ್ನ ಜಯಭೇರಿ ಮೊಳಗಿಸಿದ ಈ ನಾಟಕ ಸುತ್ತ-ಮುತ್ತಲಿನ ಜನತೆಯನ್ನು ಬಲವಾಗಿ ಆಕರ್ಷಿಸಿತು. ಸದಾಶಿವರಾಯರು ಆಮೇಲೆ ‘ಶರಣಬಸವ’, ‘ಶಶಿಕಲಾ’ ನಾಟಕಗಳನ್ನು ತಾವೇ ಬರೆದು ಆಡಿದರು, ಜನಮನವನ್ನು ಸೂರೆಗೊಂಡರು.

ನಾಸಿಕಾಕಾ : ಎನ್ಕೈಬರೆಹ/೫೦೧

ಸದಾಶಿವರಾಯರು ಬೆಳೆಬೆಳೆದಂತೆ ಅಭಿನಯ ಶಾಸ್ತ್ರ, ಅಭಿನಯ ಕಲೆ, ಅಭಿನಯ ತತ್ವಗಳನ್ನು ಅರಿತುಕೊಂಡರು. ನಾಟಕದ ಮೂಲಕ ತಾವು ಜನತೆಗೆ ಏನನ್ನು ಕೊಡಬೇಕಾಗಿದೆ ಎಂಬುದನ್ನು ಅವರು ಚೆನ್ನಾಗಿ ತಿಳಿದಿದ್ದರು. ಸ್ವತಃ ನಾಟಕಕಾರರಾದ ಅವರು 'ಸತ್ಯ ಸಂಕಲ್ಪ','ಯಚ್ಚಮನಾಯಕ', 'ಉಗ್ರಕಲ್ಯಾಣ' ನಂತಹ ಉತ್ತಮ ಕೃತಿಗಳನ್ನು ರಚಿಸಿ, ಜನತೆಯ ಮನಸ್ಸನ್ನು ಹಸನಗೊಳಿಸಲು, ರಾಷ್ಟ್ರಪ್ರಜ್ಞೆಯನ್ನು ಮೂಡಿಸಲು ಯತ್ನಿಸಿದರು. ಅವರು ಹಿಂದಿ-ಮರಾಠಿ ನಾಟಕಗಳ ಪ್ರಭಾವಕ್ಕೆ ಒಳಗಾಗಿದ್ದರೂ ತಮ್ಮ ಸ್ವಂತಿಕೆಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಕನ್ನಡ ರಂಗಭೂಮಿಗೆ ವಿಶಿಷ್ಟ ಕೊಡುಗೆಗಳನ್ನು ನೀಡಿದರು. ನಟರಾಗಿ, ನಾಟಕಕಾರರಾಗಿ, ನಾಟಕಕಂಪನಿಯ ಒಡೆಯರಾಗಿ ಅವರು ಸಲ್ಲಿಸಿದ ಅಪರೂಪದ ಸೇವೆ ಕನ್ನಡ ನಾಡು ಮರೆಯದಂತಹದು.

ಎನ್ಕೆ ಅವರು ಅತ್ಯಂತ ಸಮರ್ಥವಾಗಿ ಸದಾಶಿವರಾಯರ ಚರಿತ್ರೆಯನ್ನು ರಚಿಸಿದ್ದಾರೆ. ಸುಮಾರು ತೊಂಬತ್ತು ಪುಟದ ಈ ಚಿಕ್ಕ ಕೃತಿಯಲ್ಲಿ ಕನ್ನಡ ನಾಟಕ ಪರಂಪರೆಯ ಸಿಂಹಾವಲೋಕನವಿದೆ. ಸದಾಶಿವರಾಯರ ಜೀವನದ ಏಳಿಳಿತಗಳ ಆತ್ಮೀಯ ಕಥನವಿದೆ, ಅವರ ಪ್ರಸಿದ್ಧವಾದ 'ಯಚ್ಚಮನಾಯಕ' ನಾಟಕದ ವಿಶ್ಲೇಷಣಾತ್ಮಕ ವಿಮರ್ಶೆಯಿದೆ. ಸದಾಶಿವರಾಯರ ನಾಟಕಕಲೆಯ, ಪಾತ್ರಾಭಿನಯದ, ನೂತನ ಪಾತ್ರಸೃಷ್ಟಿಯ, ನಾಟ್ಯ ಕಲಾವಿದರನ್ನು ಆರಿಸುವ ವಿಚಕ್ಷಣೆಯ ಪರಿಚಯವೂ ಇಲ್ಲಿದೆ. ಈ ಕೃತಿಯ ರಚನೆಯಲ್ಲಿ 'ಕಿರಿಯ ಕನ್ನಡಿಯಲ್ಲಿ ಅಡಗಿಸಿಟ್ಟಂತಹ' ಕಲೆಗಾರಿಕೆಯಿರುವುದನ್ನು ಗುರುತಿಸಬಹುದು.

## 'ವಾಮನರಾವ್ ಮಾಸ್ತರ್'

ರಬಕವಿಯ ಹುಂಡೇಕಾರ ಮನೆತನದ ವಾಮನರಾವ್ ಅವರು ಬಂಕಾಪುರದ ಸೋದರತ್ತೆಗೆ ದತ್ತಕ ಹೋದವರು. ಮುಲ್ಕೀ ಪರೀಕ್ಷೆ ಪಾಸಾಗಿ ಶಾಲಾ ಮಾಸ್ತರರಾದುದರಿಂದ 'ಮಾಸ್ತರ್' ಎಂಬುದು ಅವರ ಹೆಸರಿನೊಂದಿಗೆ ಅವಿಭಾಜ್ಯವಾಗಿ ಉಳಿಯಿತು. ಬಾಗಲ ನರಸಿಂಗರಾಯರ ಪ್ರೇರಣೆಯಿಂದ ಶಿಕ್ಷಣ ರಂಗದಿಂದ ನಾಟಕ ರಂಗಕ್ಕೆ ವಾಮನರಾವ್ ಮಾಸ್ತರರು ವಲಸೆ ಹೋದರು. ವಾಮನರಾವ್ ಅವರಿಗೆ ಹಾಡುಗಾರಿಕೆ ಹುಟ್ಟಿನೊಂದಿಗೇ ಬಂದ ಕಲೆಯಾಗಿತ್ತು. ದೈವದತ್ತವಾದ ಕಂಠ ಮಾಧುರ್ಯವಿತ್ತು. ಇದೇ ಅವರನ್ನು ರಂಗಭೂಮಿಗೆ ತರಲು ಕಾರಣವಾಯಿತು. ಶಿರಹಟ್ಟಿ ವೆಂಕೋಬರಾಯರು ತಮ್ಮ ಕಂಪನಿಯಲ್ಲಿ ವಾಮನರಾವ್ ಮಾಸ್ತರರನ್ನು ಬರಮಾಡಿಕೊಂಡಿದ್ದು ಅವರೊಬ್ಬ ಗಾಯಕರೆಂದೇ ಅಲ್ಲಿಂದ ವಾಮನರಾವ್ ಅವರು ರಂಗಭೂಮಿಯ ಕಲಾವಿದರಾಗಿ ತಮ್ಮ ಪ್ರತಿಭೆಯನ್ನು ಪ್ರಕಟಿಸಿದರು. ದಿನಗಳೆದಂತೆ ಅವರಲ್ಲಿ ಯಶಸ್ಸನ್ನೂ ಸಾಧಿಸತೊಡಗಿದರು.

ಶಿರಹಟ್ಟಿ ವೆಂಕೋಬರಾಯರಿಂದ ರಂಗಭೂಮಿ ಪ್ರವೇಶಿಸಿದರೂ ಅವರೊಂದಿಗೆ ವಾಮನರಾಯರಿಗೆ ಬಹಳ ದಿನ ಹೊಂದಿಕೊಂಡು ಹೋಗಲಿಕ್ಕಾಗಲಿಲ್ಲ. ಬೇಗನೇ ಸ್ವತಂತ್ರರಾಗಿ, ಬಂಕಾಪುರದ ಸ್ನೇಹಿತರ ನೆರವಿನಿಂದ 'ವಿಶ್ವಗುಣಾದರ್ಶ ಸಂಗೀತ ನಾಟಕ ಮಂಡಲಿ' (೧೯೧೪) ಯನ್ನು ಕಟ್ಟಿಕೊಂಡರು. ಈ ನಾಟಕ ಮಂಡಳಿ ಕರ್ನಾಟಕವನ್ನೆಲ್ಲ ಸಂಚರಿಸತೊಡಗಿತು. ಮೈಸೂರಿನ ಕಡೆಗೆ ಹೋದಾಗ ದಕ್ಷಿಣಾದಿ ಸಂಗೀತವನ್ನು ವಾಮನರಾಯರು ಮೈಗೂಡಿಸಿಕೊಂಡರು.

'ಭೋಜಪ್ರಬಂಧವು 'ಕವಿರತ್ನ ಕಾಳಿದಾಸ' ವಾಗಿ ರೂಪಗೊಂಡು ರಂಗಭೂಮಿಯ ಮೇಲೆ ಬಂದಿತು. 'ವಿವೇಕ ವಿಜಯ', 'ಪದ್ಮಾವತಿ ಪರಿಣಯ' ಮುಂತಾದವು ಪ್ರಾರಂಭದಲ್ಲಿ ಅವರು ಆಡಿದ ಇತರ ನಾಟಕಗಳು. ವಾಮನರಾಯರು ಗರುಡ ಸದಾಶಿವರಾಯರಂತೆ ಸ್ವತಃ ನಾಟಕ ರಚನೆಯಲ್ಲಿಯೂ ತೊಡಗಿದವರು. ಮೊದಮೊದಲು ಇವರು ಅನುವಾದದ ಮೂಲಕ ಈ ಕಾರ್ಯಕ್ಕೆ ಕೈಹಾಕಿದರು. 'ವಿದ್ಯಾಸಾಧನೆ' ಮರಾಠಿಯಿಂದ ಬಂದುದಾದರೆ 'ಲಂಕಾದಹನ' ತಮಿಳಿನಿಂದ ಪ್ರೇರಣೆ ಪಡೆದದ್ದಾಗಿತ್ತು. ಗಂಗೂಬಾಯಿ ಗುಳೇದಗುಡ್ಡ ಅವರು ವಾಮನರಾವ್ ಕಂಪನಿ ಸೇರಿದಾಗ ಅದಕ್ಕೊಂದು ವಿಶಿಷ್ಟ ಮೆರಗು ಬಂದಿತು. ಗಂಗೂಬಾಯಿಯವರ ಮೋಹಕ ವ್ಯಕ್ತಿತ್ವದ ಜೊತೆಗೆ ಅವರ ಶಾಸ್ತ್ರೀಯ ಸಂಗೀತಸಾಧನೆ ನಾಟ್ಯ ರಂಗಕ್ಕೆ ಹೊಸ ಸೊಬಗನ್ನೇ ತಂದುಕೊಟ್ಟವೆಂದು ಹೇಳಬೇಕು. ಆದರೆ ಈ ಗಂಗೂಬಾಯಿಯವರು ವಾಮನರಾವ್ ಅವರ ಕಂಪನಿಯಲ್ಲಿ ಬಹಳ ದಿನ ಉಳಿಯಲಿಲ್ಲ. ಮುಂದೆ 'ನಜೀರಸಾನಿ' ಎಂಬವನಿಂದ ಆ ಸ್ಥಾನವನ್ನು ತುಂಬಿಕೊಳ್ಳುವ ಪ್ರಯತ್ನವೂ ನಡೆಯಿತು.

ವಾಮನರಾವ್ ಮಾಸ್ತರರ ಕಂಪನಿಯಲ್ಲಿ ಪಾತ್ರವಹಿಸಿದ ಕೆಲವು ಪ್ರಮುಖ ಕಲಾವಿದರನ್ನು ಮರೆಯುವಂತಿಲ್ಲ. ಬಸವರಾಜ ಮನಸೂರ, ಮಲ್ಲಿಕಾರ್ಜುನ ಮನ್ಸೂರ, ಗುರುರಾಯ ದೇಶಪಾಂಡೆ ಇವರೇ ಆ ಪ್ರಮುಖರು. ಅಖಿಲ ಭಾರತ ಶ್ರೇಷ್ಠ ಗಾಯಕರೆನಿಸಿದ, ಕಾಳಿದಾಸ ಪ್ರಶಸ್ತಿಯನ್ನು ಪಡೆದ ಮಲ್ಲಿಕಾರ್ಜುನ ಮನ್ಸೂರರಂಥ ಪ್ರತಿಭಾನ್ವಿತರು ಅವರ ಕಂಪನಿಯಲ್ಲಿರುವಷ್ಟು ಕಾಲ ಅದರ ಸುವರ್ಣ ಕಾಲವೆಂದೇ ಹೇಳಬೇಕು. ಇವರೆಲ್ಲರ ಪ್ರತಿಭೆಯ ಸಹಕಾರ ಪಡೆದ ವಾಮನರಾವ್ ಮಾಸ್ತರರು ನಿಜವಾಗಿಯೂ ಸುದೈವಿಗಳು.

ಕರ್ನಾಟಕದ ತುಂಬ ತಮ್ಮ ರಂಗಭೂಮಿಯ ಸೇವೆಯಿಂದ ಪ್ರಸಿದ್ಧಿಯನ್ನು ಪಡೆದ ವಾಮನರಾವ್ ಮಾಸ್ತರರು ಸಂಪ್ರದಾಯನಿಷ್ಠರು. ಕುಟುಂಬವತ್ಸಲರು ಆಗಿದ್ದುದಲ್ಲದೆ ಭಗವದ್ಗೀತೆ, ದಾಸರ ಕೀರ್ತನೆಗಳಲ್ಲಿ ಶ್ರದ್ಧೆಯಿರಿಸಿದ ಭಕ್ತಿಭಾವ ಸಂಪನ್ನರೂ ಆಗಿದ್ದರು.

ನಾನಿಕಾಕಾ : ಎನ್ಕೆಬರೆಹ/೫೦೩

ಗರೂಪ ಸದಾಶಿವರಾಯರ ಚರಿತ್ರೆಗಿಂತ ಭಿನ್ನವಾದ ರೀತಿಯಲ್ಲಿ ವಾಮನ ರಾವ್ ಮಾಸ್ತರರ ಚರಿತ್ರೆಯನ್ನು ಎನ್ಕೆ ಅವರು ನಮಗೆ ಕೊಟ್ಟಿದ್ದಾರೆ. ಇಲ್ಲಿಯ ನಿರೂಪಣೆ ಹೆಚ್ಚು ಸಹಜ ಮತ್ತು ಆತ್ಮೀಯವಾಗಿದೆ. ಮೂಲ ಸಾಮಗ್ರಿ ವಿ. ವಿ. ಸವಣೂರ ಅವರಿಂದ ಪಡೆದಿದ್ದರೂ ಕಾದಂಬರಿಯ ತಂತ್ರದ ರೀತಿಯಲ್ಲಿ ಚರಿತ್ರೆಯನ್ನು ಬೆಳಸಿಕೊಂಡು ಹೋಗಿದ್ದಾರೆ. ಜೀವನದ ಹಲವಾರು ವಾಸ್ತವ ಸಂಗತಿಗಳ ಜೊತೆಗೆ ಅಲ್ಲಲ್ಲಿ ಸಾಹಿತ್ಯಿಕ ಬಣ್ಣಗಾರಿಕೆಯೂ ಬೆರೆತು ಇಡೀ ಚರಿತ್ರೆ ಆಕರ್ಷಕವಾಗಿದೆ.

## 'ಗಾನರತ್ನ ಗುಳೇದಗುಡ್ಡ ಗಂಗೂಬಾಯಿ'

ಗಂಗೂಬಾಯಿಯ ಕಥೆ ಕಾದಂಬರಿಯ ಕಥೆಗಿಂತಲೂ ವಿಲಕ್ಷಣವಾದುದು. ಕುಂತಿದೇವಿ ಕರ್ಣನನ್ನು ಪಡೆದಂತೆ ಗಂಗೂಬಾಯಿಯ ತಾಯಿ ಆಕೆಯನ್ನು ಪಡೆದಿದ್ದಳು. ಶಿಶುವಿನೊಂದಿಗೆ ಪೋಲಿಸು ಆತಿಥ್ಯ ಪಡೆದ ತಾಯಿ ಅಲ್ಲಿಂದ ಹೊರ ಬಂದಿದ್ದು ಕೈದಿಗಳೊಂದಿಗೆ, ಒಬ್ಬ ಗೌಡರ ಉಪಪತ್ನಿಯ ಮಗಳಾದ ಎಲ್ಲೂಬಾಯಿ ತಾಯ್ತನದ ಅರಿವಿನಿಂದ ಈ ಅನಾಥ ಮಗುವನ್ನು ಸಾಕಲು ಮುಂದಾದದ್ದು ಒಂದು ದೈವಯೋಗ.

ಎಲ್ಲೂಬಾಯಿ ಗುಳೇದಗುಡ್ಡದ ಗುರುಲಿಂಗಪ್ಪ ಗಂಗಣ್ಣವರ 'ಹುಲ್ಲೂರ ಕಂಪನಿ'ಯಲ್ಲಿ ಸ್ತ್ರೀ ಪಾತ್ರವಾಡಲು ಪ್ರವೇಶಿಸುತ್ತಾಳೆ. ಆ ಕಾಲದಲ್ಲಿ ಆರನೆಯ ಇಯತ್ತೆಯ ವರೆಗೆ ಓದಿದ ಈ ಹೆಣ್ಣುಮಗಳು ಗುರುಲಿಂಗಪ್ಪನವರ ಪ್ರೋತ್ಸಾಹದಿಂದ ನಾಟಕ ರಂಗದಲ್ಲಿ ತನ್ನ ಕಲಾವಂತಿಕೆಯನ್ನು ಪ್ರಕಟಪಡಿಸುತ್ತಾಳೆ. ಗುರುಲಿಂಗಪ್ಪನವರೊಂದಿಗೆ ನಾಯಕಿಯ ಪಾತ್ರವಹಿಸುತ್ತಿದ್ದ ಅವಳು ಅವರ ಜೀವನ ಸಂಗಾತಿಯೂ ಆಗುತ್ತಾಳೆ.

ಗುರುಲಿಂಗಪ್ಪ ಮತ್ತು ಎಲ್ಲವ್ವರ ಜೊತೆಗಿರುವ ಈ ಮಗು ನಾಟಕದಲ್ಲಿ ಪಾತ್ರವಹಿಸಬೇಕಾಗಿ ಬಂದುದು ತೀರ ಸಹಜ. ಹರಿಶ್ಚಂದ್ರ ನಾಟಕದಲ್ಲಿ ಆರು ವರ್ಷದ ಮಗುವಾಗಿರುವ ಗಂಗೂಬಾಯಿ ರೋಹಿತಾಶ್ವನ ಪಾತ್ರವಾಡಿ ಜನರನ್ನು ಮಂತ್ರಮುಗ್ಧಗೊಳಿಸಿದ್ದುಂಟು. ಅವಳ ಕಂಚಿನ ಕಂಠ ಅವಳು ಗಾಯಕಿಯಾಗುವುದರ ಸೂಚನೆಯನ್ನು ನೀಡುತ್ತಿತ್ತು. ಖ್ಯಾತ ಅಬ್ದುಲ್‌ಕರೀಮ್‌ಖಾನರ ಶಿಷ್ಯ ಬಾಳಕೃಷ್ಣ ಬುವಾ ಕಪಿಲೇಶ್ವರ ಗಂಗೂಬಾಯಿಗೆ ಪ್ರಥಮ ಸಂಗೀತ ಗುರುಗಳಾಗಿ ದೊರೆತರು. ನಂತರ ಶಂಕರರಾವ್ ಸರನಾಯಿಕ್ ಗುರುಗಳಾಗಿ ದೊರೆತರು. ಹೀಗಾಗಿ ಅವರು ತನ್ನ ಹದಿನೈದನೆಯ ವರ್ಷಕ್ಕೆ 'ಸಂಗೀತ ಜಲಸಾ' ಕಾರ್ಯಕ್ರಮ ನಡೆಸಲು ಸಾಧ್ಯವಾಯಿತು.

ಗಂಗೂಬಾಯಿ ಪ್ರಥಮವಾಗಿ ರಂಗಭೂಮಿಗೆ ಪ್ರವೇಶಿಸಿದ್ದು ೧೯೧೮ರಲ್ಲಿ. ಅವಳ ಸಂಗೀತ ಪ್ರತಿಭೆಯನ್ನು ಕೇಳಿದ ವಾಮನರಾವ್ ಮಾಸ್ತರರು ತಮ್ಮ ಕಂಪನಿಯಲ್ಲಿ ಆಕೆಗೆ ಸ್ಥಾನ ಕಲ್ಪಿಸಿಕೊಟ್ಟರು. 'ಲಂಕಾದಹನ' ದಲ್ಲಿ ಸೀತೆಯಾಗಿ ರಸಿಕವೃಂದದ ಕಣ್ಮನಗಳನ್ನು ಆಕೆ ಸೆಳೆದಳು. 'ಪದ್ಮಾವತಿ ಪರಿಣಯ' ದಲ್ಲಿ ಆಕೆಯ ಪದ್ಮಾವತಿಯ ಪಾತ್ರ ಪ್ರೇಕ್ಷರನ್ನು ಹುಚ್ಚುಹಿಡಿಸುವಷ್ಟು ಆಕರ್ಷಕ ವಾಗಿತ್ತು. ಅವಳ 'ಮಹಾನಂದಾ' ನಾಟಕ ಪಾತ್ರವಂತೂ ಅದ್ಭುತ ರಮ್ಯ ವಾಗಿತ್ತು. ಹೀಗೆ 'ಸಂದೇಹ ಸಾಮ್ರಾಜ್ಯದ' ಶತತಾರಾ ಪಾತ್ರದ ಅವಳ ಅಭಿನಯ ಆ ಕಾಲದಲ್ಲಿ ಅತ್ಯಂತ ಖ್ಯಾತಿಯನ್ನು ಪಡೆದಿತ್ತು.

ಹೀಗೆ ವಾಮನರಾವ್ ಮಾಸ್ತರರ ಕಂಪನಿಯಲ್ಲಿದ್ದ ಗಂಗೂಬಾಯಿ ತನ್ನ ತಾಯಿ ಎಲ್ಲವ್ವ ಮತ್ತು ಗುರುಲಿಂಗಪ್ಪನವರೊಡನೆ ಸ್ವತಂತ್ರವಾಗಲು ಯತ್ನಿಸಿ ದಳು. ಈ ಮೂವರು ಕೂಡಿ 'ಶ್ರೀಕೃಷ್ಣ ನಾಟಕ ಮಂಡಳಿ ಗುಳೇದಗುಡ್ಡ' ಎಂಬು ದನ್ನು ೧೯೩೭ ರಲ್ಲಿ ಪ್ರಾರಂಭಿಸಿದರು. ಇವರ ಕಂಪನಿಯಲ್ಲಿ ಕೆಲಕಾಲ ದೇಶಪಾಂಡೆ ಗುರುರಾಯರು, ಬಸವರಾಜ ಮನ್ಸೂರ ಮತ್ತು ಮಲ್ಲಿಕಾರ್ಜುನ ಮನ್ಸೂರರವರು ಇದ್ದುದು ಒಂದು ಉಲ್ಲೇಖನೀಯ ಸಂಗತಿಯೇ. ನಾಟ್ಯಕಲಾಪಿದೆಯಾದ ಗಂಗೂಬಾಯಿ ಗಾನಕಲಾವದಿಯಾಗಿದ್ದುದರಿಂದ ಅವಳಿಗೆ 'ಗಾನರತ್ನ' ಎಂಬ ಬಿರುದೂ ಆಮೇಲೆ ಬಂದಿತು.

ನಾಟ್ಯಕಲಾವಿದೆಯಾದರೂ ಗಂಗೂಬಾಯಿ ಶೀಲಸಂಪನ್ನಳು. ಅವಳು ದೇಶಪಾಂಡೆ ಮದ್ದುರಾಯರ ಕೈಹಿಡಿದು ಗೃಹಿಣಿಯಾಗಿಯೂ ಜೀವನ ಸಾಗಿಸಿದಳು. ಗಂಗೂಬಾಯಿಯ ಪ್ರತಿಭೆಯನ್ನು ಟಿ. ರಾಘವಾಚಾರ್ಯ, ಪಂಡಿತ ತಾರಾನಾಥ ರಂಥ ಹಿರಿಯರು ತುಂಬ ಮೆಚ್ಚಿಕೊಂಡಿದ್ದರು. ಪಂಡಿತ ತಾರಾನಾಥರು 'ವಾತ್ಸಲ್ಯದ ಪುತ್ರಿ ಚಿ. ಗಂಗೂಬಾಯಿ' ಎಂದೇ ಕರೆಯುತ್ತಿದ್ದರು. ಮೈಸೂರ ಅರಸರೂ ಆಕೆಯ ಕಲಾಪ್ರತಿಭೆಗೆ ಮೆಚ್ಚಿ ಕಾಣಿಕೆಯನ್ನು ಇತ್ತಿದ್ದರು.

ಕಂದಗಲ್ ಹನುಮಂತರಾಯರ ಸಹಕಾರವನ್ನು ಪಡೆದು, ಅವರು ಬರೆದ ಹಲವಾರು ನಾಟಕಗಳನ್ನು ಗಂಗೂಬಾಯಿಯ ಕಂಪನಿಯವರು ಆಡಿ, ಪ್ರಸಿದ್ಧಿ ಯನ್ನು ಸಂಪಾದಿಸಿದರು. ಗುಬ್ಬಿ ವೀರಣ್ಣನವರು 'ಸುಭದ್ರಾ' ಸಂಗೀತಮಯ ಚಿತ್ರ ತಯಾರಿಕೆಗೆ ತೊಡಗಿದಾಗ ಗಂಗೂಬಾಯಿಗೆ ಅದರಲ್ಲಿ ಪಾತ್ರವಹಿಸಲು ಕರೆ ಬಂದಿತು. ಆ ಚಿತ್ರೀಕರಣದಲ್ಲಿ ಯಾವ ಅತಿಗೂ ಹೋಗದೆ ನಾಟ್ಯಕಲೆಯ ಶ್ರದ್ಧೆ ಯಿಂದ ಅಭಿನಯ ಮಾಡಿದರು. ದುರ್ದೈವದ ಸಂಗತಿಯೆಂದರೆ ಆ ಚಿತ್ರ ತೆರೆಗೆ ಬಂದಾಗ ಗಂಗೂಬಾಯಿ ಬದುಕಿರಲಿಲ್ಲ.

ನಾನಿಕಾಕಾ : ಎನ್ಕೈಬರೆಹ/೫೦೫

ಗಂಗಬಾಯಿ ಶ್ರೀಕೃಷ್ಣ ಭಕ್ತಳು. ಅವರ ಭಕ್ತಿ ಪರಮಾರ್ಥ ಸಾಧನೆಯ ಪಥವೂ ಆಗಿದ್ದಿತು. ಸ್ತ್ರೀಯರು ನಾಟ್ಯರಂಗಕ್ಕೆ ಅಪರೂಪವಾಗಿದ್ದ ಕಾಲದಲ್ಲಿ ಆ ಕ್ಷೇತ್ರವನ್ನು ಪ್ರವೇಶಿಸಿ ರಂಗಭೂಮಿಗೆ ಶ್ರದ್ಧೆಯ ಸೇವೆಯನ್ನು ಸಲ್ಲಿಸಿದ ಅವರನ್ನು ಕನ್ನಡಿಗರು ಮರೆಯುವಂತಿಲ್ಲ. ಅವಲು 'ಗಾನರತ್ನ' ಎನ್ನಿಸಿಕೊಂಡಂತೆ 'ನಾಟ್ಯಕಲಾರತ್ನ' ಎಂಬ ಬಿರುದಿಗೂ ಅರ್ಹರಾಗಿದ್ದರೆಂದು ಹೇಳಬಹುದು.

ಗಂಗೂಬಾಯಿಯವರ ಜೀವನ ಚರಿತ್ರೆ ಸರಳ, ಸುಭಗ ಶೈಲಿಯಲ್ಲಿದ್ದು ಕುತೂಹಲವನ್ನು ಕೆರಳಿಸುತ್ತ ಹೋಗುತ್ತದೆ. ಇದು ಮಕ್ಕಳಿಗಾಗಿ ಬರೆದಿದ್ದರೂ ನಮ್ಮ ರಂಗಭೂಮಿಯ ಚರಿತ್ರೆಯ ಹಲವಾರು ದಾಖಲೆಗಳನ್ನೊಳಗೊಂಡಿದೆ.

ಈ ಮೂವರು ನಾಟ್ಯಕಲಾವಿದರು ಕನ್ನಡದ ಸ್ಮರಣೀಯ ವ್ಯಕ್ತಿಗಳು. ರಾಷ್ಟ್ರೀಯ, ಶೈಕ್ಷಣಿಕ ಹಾಗೂ ಸಾಮಾಜಿಕ ಕಾರ್ಯದಲ್ಲಿ ಪ್ರಸಿದ್ಧರಾದವರ ಚರಿತ್ರೆಗಳು ಸಾಮಾನ್ಯವಾಗಿ ಬರೆಯಲ್ಪಡುತ್ತವೆ. ಕವಿ ಸಾಹಿತಿಗಳ ಚರಿತ್ರೆಗಳೂ ಉಂಟು. ಆದರೆ ಜನತೆಯ ಹತ್ತಿರಕ್ಕೆ ಹೋಗುವ, ಅವರಿಗೆ ಮನರಂಜನೆಯನ್ನು ಉಂಟುಮಾಡುತ್ತಲೇ ಬದುಕಿನ ಮಹತ್ತ್ವದ ಪಾಠಗಳನ್ನು ಕಲಿಸಿಕೊಡುವ ನಾಟಕ ಕಲಾವಿದರ ಚರಿತ್ರೆಗಳು ನಮ್ಮಲ್ಲಿ ಬಹಳಷ್ಟು ಬಂದಿಲ್ಲ. ಹಲವಾರು ಜೀವನ ಮೌಲ್ಯಗಳನ್ನು ಕಾಪಾಡಿಕೊಂಡು, ಎಂಥ ಪರಿಸ್ಥಿತಿಯಲ್ಲಿಯೂ ತಮ್ಮ ಆದರ್ಶಕ್ಕೆ ಚ್ಯುತಿ ಬರದಂತೆ ನೋಡಿಕೊಂಡ ನಮ್ಮ ಕಲಾವಿದರ ಜೀವನ ಸಾಮಾನ್ಯವಾದದ್ದೇನೂ ಅಲ್ಲ. ಲೇಖಕಿ ಅವರು ಈ ಮೂವರು ಕಲಾವಿದರ ಜೀವನವನ್ನು ಬಹಳ ಆತ್ಮೀಯವಾಗಿ, ಸ್ಪಷ್ಟವಾಗಿ ಚಿತ್ರಿಸಿ ಒಂದು ಮಹತ್ತ್ವದ ಕಾರ್ಯವನ್ನೇ ನಿರ್ವಹಿಸಿದ್ದಾರೆಂದು ಹೇಳಬಹುದು. ಈ ಚರಿತ್ರೆಗಳ ಹೊಟ್ಟೆಯಲ್ಲಿ ನಮ್ಮ ನಾಟಕ ಪರಂಪರೆಯ ಇತಿಹಾಸವಿದೆ, ವೃತ್ತಿರಂಗಭೂಮಿಯ ಅಧ್ಯಯನಕ್ಕೆ ಬೇಕಾಗುವ ದಾಖಲೆಗಳಿವೆ. ಸಂಶೋಧಕರಿಗೆ ಬೇಕಾದ ಸಾಮಗ್ರಿಯೂ ಇದೆ.

# ‘ಸಾವಿರದವರಕವಿ ಬೇಂದ್ರೆ’

( ಎನ್ಕೆಯವರ ಇತ್ತೀಚಿನ ಕೃತಿ )

---

ಡಾ. ಜಿ. ಎಂ. ಹೆಗಡೆ

ಹೊಸಗನ್ನಡ ಕಾವ್ಯ, ಸಾಹಿತ್ಯವನ್ನು ಶ್ರೀಮಂತಗೊಳಿಸಿದ ದ. ರಾ. ಬೇಂದ್ರೆಯವರ ಜೀವನವು ಸಮೃದ್ಧವಾದದ್ದಾಗಿದೆ. ತಮ್ಮ ಸುದೀರ್ಘವಾದ ಬಾಳಿನಲ್ಲಿ ೮೫ ವಸಂತಗಳನ್ನು ಕಂಡು ಸತತವಾಗಿ ‘ಕಾವ್ಯೋದ್ಯೋಗ’ದಲಿ ತೊಡಗಿದವರು ಬೇಂದ್ರೆಯವರು. ಅವರ ಜೀವನದೊಂದಿಗೆ ಕಾವ್ಯಜೀವನವೂ ಬೆಳೆದು ಕನ್ನಡದ ನೆಲದಲ್ಲಿ ವಿಜೃಂಭಿಸಿದೆ. ಈ ಕವಿಜೀವನದ ಸುಂದರ ಅಧ್ಯಾಯಗಳನ್ನು ಬೇಂದ್ರೆಯವರೇ ಬರೆದ ಕಾವ್ಯೋದ್ಯೋಗದಲ್ಲಿ ನಾವು ಕಾಣಬಹುದು. ಡಾ. ವಾಮನ ಬೇಂದ್ರೆಯವರು ‘ಬೇಂದ್ರೆ ಜೀವನ ಪರಿಚಯ’ ಗ್ರಂಥದಲ್ಲಿ ದ. ರಾ. ಬೇಂದ್ರೆಯವರ ಜೀವನ ಸಾಧನೆಯ ದರ್ಶನ ಮಾಡಿಸಿದ್ದಾರೆ. ಈಗ ಬೇಂದ್ರೆಯವರ ನಿಧನದ ನಂತರ ‘ಸಾವಿರದವರಕವಿ ಬೇಂದ್ರೆ’ ಗ್ರಂಥವು ಪ್ರಸಿದ್ಧ ಲೇಖಕರಾದ ಎನ್ಕೆಯವರಿಂದ ರಚಿತವಾಗಿದೆ. ಮುಖ್ಯವಾಗಿ ಎನ್ಕೆಯವರ ಪ್ರಸ್ತುತ ಗ್ರಂಥವು ಕನ್ನಡ ನಾಡಿನ ಎಳೆಯ ಚೇತನಗಳಿಗೆ ಬೇಂದ್ರೆಜೀವನ ಪರಿಚಯ ಮಾಡಿಕೊಡುವ ಉದ್ದೇಶವನ್ನೊಳಗೊಂಡಿದೆ. ಕನ್ನಡದ ಮನೆಮನಗಳಲ್ಲಿ ತಮ್ಮ ಭಾವಗೀತೆಗಳ ಮೂಲಕ ಬೆಳಗುತ್ತಲಿರುವ ಬೇಂದ್ರೆಯವರ ಜೀವನದ ಬಗೆಗೆ ಕುತೂಹಲ ಕೆರಳುತ್ತದೆ. ವರಕವಿಯ ಬದುಕನ್ನು ನೋಡಿ ಪುಲಕಿತರಾಗುವವರು ಅನೇಕ. ಕವಿಜೀವನದ ಬಗೆಗೆ ಪರಿಣತರಾದ, ಅವರ ನಿಕಟವರ್ತಿಗಳಾದ ಎನ್ಕೆಯವರಂಥವರು ಬಿತ್ತರಿಸಿದಾಗ ಆಗುವ ಸಾಹಿತ್ಯಾನಂದ ಅಧಿಕವಾಗಿರುವದು. ಇಂತಹ ಕುತೂಹಲ, ನಿರೀಕ್ಷೆ ಎಲ್ಲವನ್ನೂ ಈಡೇರಿಸುವ ಗ್ರಂಥ ‘ಸಾವಿರದವರಕವಿ ಬೇಂದ್ರೆ’. ಅದರ ಸ್ಥೂಲ ಸಮೀಕ್ಷೆಯೇ ಈ ಪ್ರಬಂಧದ ಗುರಿ.

ಬೇಂದ್ರೆಯವರ ಜೀವನ ವೃತ್ತಾಂತವು ಅವರ ಕವಿಜೀವನದ ಉತ್ಕರ್ಷದ ಮಧುರ ಸ್ಮೃತಿಯೊಂದಿಗೆ ಆರಂಭವಾಗುತ್ತದೆ. ಬೇಂದ್ರೆ ಕಾವ್ಯದ ಪಂಕ್ತಿಗಳು ಕನ್ನಡಲೋಕಕ್ಕೆ ಚಿರಪರಿಚಿತವೆಂಬ ಸಂಗತಿಯಲ್ಲಿ ಅವರ ಜೀವನದ ಬಗೆಗೆ ಬೆರಗು

ಹುಟ್ಟುತ್ತದೆ. ೧೮೯೬ ರ ಜನವರಿ ೩೧ ರಂದು ಧಾರವಾಡದಲ್ಲಿ ಜನಿಸಿದ ಬೇಂದ್ರೆ ಯವರಿಗೆ ತಾಯಿ ಅಂಬಿಕೆಯಲ್ಲಿ ಅಪಾರವಾದ ಶ್ರದ್ಧೆ. ಎನ್ಕೆಯವರು ಬೇಂದ್ರೆ ಯವರ 'ಅಂಬಿಕಾತನಯದತ್ತ' ಕವಿತೆಯ ಕಡೆ ನಮ್ಮ ಗಮನಸೆಳೆದು ಆ ಕವಿತೆ ಯಲ್ಲಿ ಹೇಳಿದಂತೆ ಅವಳೇ ವರಕವಿಯ ಕಾವ್ಯಸ್ಫೂರ್ತಿಯ ದೇವತೆಯಾಗಿದ್ದಾ ಳೆಂದು ವಿದಿತಪಡಿಸಿದ್ದಾರೆ. ಸಾವಿರದ ಸಾವಿರದ ಕವನಗಳನ್ನು ರಚಿಸಿ ಸಾವಿರದ ಮನಗಳಲ್ಲಿ ಮನೆಯ ಮಾಡಿದ ಬೇಂದ್ರೆ ಅಮರ ಕವಿಯಾಗಿದ್ದಾರೆ. ನಾವು 'ಅಂಬಿಕಾತನಯದತ್ತ' ಕಾವ್ಯನಾಮದಲ್ಲಿ ಕವಿಯ ಶ್ರದ್ಧೆ ಗೌರವಗಳನ್ನು ಕಾಣ ಬಹುದಾಗಿದೆ. ಈ ಶ್ರದ್ಧೆ ಬೆಳೆಯಲು ಕಾರಣವಾದ ಭಾವುಕ ಸಂದರ್ಭಗಳನ್ನು ಎನ್ಕೆಯವರು ನಿರೂಪಿಸಿದ್ದಾರೆ.

ಕವಿಯಾಗಲೆಂದೇ ಹುಟ್ಟಿ ಬಂದ ಬೇಂದ್ರೆ ಬಡತನದ ಬಾಳಿನಲ್ಲಿ ಬೆಂದು ಬೆಳೆ ದವರು. 'ಬಾಳಿನಲ್ಲಿ ಬೆಂದರೆ ಬೇಂದ್ರೆ ಅದಾಗು' ಎಂದು ವಿಮರ್ಶಕರು ಹೇಳಿ ದಂತೆ ಬೇಂದ್ರೆ ಬದುಕಿನುದ್ದಕ್ಕೂ ನಾವು ಬಡತನದ ಬವಣೆಯನ್ನು ಕಾಣುತ್ತೇವೆ. ಆದರೂ ಆರದ ಜೀವನಾಸಕ್ತಿ, ಲವಲವಿಕೆ ಬೇಂದ್ರೆಯವರ ಹುಟ್ಟುಗುಣವಾಗಿದೆ. ಧಾರವಾಡದ ಕಾಮನಕಟ್ಟಿಯ ಸುತ್ತ ಬಾಲ್ಯಜೀವನವನ್ನು ಕಳೆದ ಬೇಂದ್ರೆಯವರ ಆಟಪಾಠಗಳನ್ನು, ಲೀಲಾವಿನೋದಗಳನ್ನು ಎನ್ಕೆಯವರು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಅಂದಿನ ಕಾಲದ ಜನಪದ ಕ್ರೀಡೆಗಳು, ಸೊಗಸು ಇಂದು ಕಾಣಲು ಸಿಗದಂಥವು. ಸ್ವತಃ ಬೇಂದ್ರೆಯವರೇ ತಮ್ಮ ಇತ್ತೀಚಿನ ೬೫೦ ಪಂಕ್ತಿಗಳ 'ಶ್ರಾವಣ ಬಂತು' ನೀಳ್ಗವನದಲ್ಲಿ ಬಾಲ್ಯದ ಕೆಲವು ಸಂಗತಿಗಳನ್ನು ಹಿಡಿದು ತಾರು ಣ್ಯಕ್ಕೆ ಬೆಳೆದವರೆಗಿನ ದಿನಗಳ ಮುಖ್ಯಾಂಶಗಳನ್ನು ಚಿತ್ರಿಸಿದ್ದಾರೆ. ಗತಜೀವನದ ನೋವಿನ ದಾರುಣ ಅನುಭವಗಳು, 'ಹಟ್ಟಿ ಹಾಡೆಲ್ಲವೂ ಹುಟ್ಟು ಹಾಡಾಗುತ ಒಂದು ಪಾಕಕ್ಕೆ ಬಂದಿದೆ' ಈ ಕವಿತೆಯಲ್ಲಿ, 'ಸಖಿಗೀತ'ಕ್ಕೆ ಪ್ರಾರಂಭದಂತೆ ಇರುವ ಈ ನೀಳ್ಗವನದ ಪಕ್ತಿಗಳನ್ನು ಎನ್ಕೆ ಉದ್ಧರಿಸಿ ಬಾಲ್ಯಾನುಭವ ಕುರಿತು ಹೇಳಿರು ವದು ಅತ್ಯಂತ ಉಚಿತವಾಗಿದೆ.

ಬೇಂದ್ರೆಯವರು ವಿದ್ಯಾರ್ಥಿ ಜೀವನದಲ್ಲೇ ಸಾಹಿತ್ಯಾಸಕ್ತರಾಗಿದ್ದರು, ಸಂಸ್ಕೃತದ ಕಾಳಿದಾಸ, ಭವಭೂತಿ, ಭಟ್ಟನಾರಾಯಣ, ಜಗನ್ನಾಥ ಪಂಡಿತ, ಮುರಾ ರಿಯ ಜ್ಞಾನೇಶ್ವರಿ, ಕನ್ನಡದ ಭಕ್ತಿ ಗೀತೆಗಳು, ಜನಪದ ಹಾಡುಗಳು, ಲಕ್ಷ್ಮೀ ಶನಕಾವ್ಯ, ಇಂಗ್ಲೀಷಿನ ಶೇಕ್ಸಪಿಯರ್ ಕೃತಿಗಳಲ್ಲದೆ ಶೆಲ್ಲಿ, ಕೀಟ್ಸ, ಮೊದಲಾದ ವರ ಕಾವ್ಯ ಅವರ 'ನೆನಪಿನ ಬಿಲ'ದಲ್ಲಿ ಮನೆಮಾಡಿದ್ದವು. ೧೯೧೩ ರಲ್ಲಿ ಮೆಟ್ರಿಕ್ ಪರೀಕ್ಷೆ ಪಾಸಾದ ಬೇಂದ್ರೆಯವರು ಅಜ್ಜಿಯನ್ನು ಕಳೆದು ಕೊಂಡು ದುಃಖದಲ್ಲಿ ಬಿ. ಎ. ವ್ಯಾಸಂಗಕ್ಕಾಗಿ ಪುಣೆಗೆ ತೆರಳಿದರು. ಅಲ್ಲಿ

ಅವರ ಸಾಹಿತ್ಯ ವ್ಯಾಸಂಗ ವಿಪುಲವಾಯಿತು. ಪುಣೆಯಲ್ಲಿ 'ಶಾರದಾ ಮಂಡಲ' ವನ್ನು ಸ್ಥಾಪಿಸಿ ಸಾಹಿತ್ಯಕ ಕಾರ್ಯಕ್ರಮಗಳನ್ನು ನಡೆಸತೊಡಗಿದರು. ಆಗಲೇ ಬೇಂದ್ರೆ ಕಾವ್ಯರಚನೆ ಮಾಡಲು ಆರಂಭಿಸಿದ್ದರು. ಬೇಂದ್ರೆಯವರ 'ಕೋಗಿಲೆ' ಕವಿತೆ 'ಪ್ರಭಾತ', 'ತುತ್ತೂರಿ'ಯಲ್ಲಿ ಅಚ್ಚಾಗಿ ಅವರ ಕಾವ್ಯ ಜೀವನದ ಸುಗ್ಗಿಗೆ ಮೊದಲಾಯಿತು. ಬಿ. ಎ. ಮುಗಿದ ಬಳಿಕ ಪುನಃ ಧಾರವಾಡದ ವಿಕ್ಟೋರಿಯಾ ಶಾಲೆಗೆ ಶಿಕ್ಷಕರಾಗಿ ಬೇಂದ್ರೆಯವರು ಬಂದು 'ಬೇಂದ್ರೆ ಮಾಸ್ತರ್' ಆದರು. ಬೇಂದ್ರೆ ವ್ಯಕ್ತಿತ್ವದಲ್ಲಿ ಆದರ್ಶ ಶಿಕ್ಷಕನ ಚೇತನ ಹೇಗೆ ತೊಡಗಿತ್ತೆಂಬುದನ್ನು ಎನ್ಕೆ ವಿವರಿಸುತ್ತ ಅವರ ಸಾಹಿತ್ಯಬೋಧನೆಯ ಪ್ರಭಾವಕ್ಕೊಳಗಾದ ಪ್ರಹ್ಲಾದ ನರೇಗಲ್, ವಿನೀತ ರಾಮಚಂದ್ರರಾವ್ ಮೊದಲಾದವರು ಮುಂದೆ ಕವಿತೆಗಳ ರಚನೆಗೆ ತೊಡಗಿದ್ದನ್ನು ಉಲ್ಲೇಖಿಸಿದ್ದಾರೆ.

ಬೇಂದ್ರೆ ಲಕ್ಷ್ಮೀಬಾಯಿಯ ಜೊತೆ ಮದುವೆಯಾಗಿ ನಡೆಸಿದ ದಾಂಪತ್ಯದ ನಲಿವು-ನೋವುಗಳನ್ನು 'ಸಖಿಗೀತ'ದಲ್ಲಿ ಹಾಡಿದ್ದಾರೆ. ಬೇಂದ್ರೆ ಕಾವ್ಯದ ಪ್ರಥಮ ಶ್ರೋತೃ ಅವರ ಪತ್ನಿಯೇ ಆಗಿರುತ್ತಿದ್ದರಂತೆ. 'ನರಬಲಿ' ಕವಿತೆ ಬರೆದ ಬೇಂದ್ರೆ ನೌಕರಿ ಕಳೆದುಕೊಂಡು ನಿರುದ್ಯೋಗಪರ್ವ ಅನುಭವಿಸಿದ್ದನ್ನು ಎನ್ಕೆ ಭಾವಮಯ ವಾಗಿ ವರ್ಣಿಸಿ ಕಾವ್ಯರಚನೆ, ಗೆಳೆಯರು, ಗ್ರಂಥದ ಆಸಕ್ತಿ ಕಳೆದುಕೊಳ್ಳದ ಬೇಂದ್ರೆತನವನ್ನು ಎತ್ತಿ ಹೇಳಿದ್ದಾರೆ.

ಬೇಂದ್ರೆಯವರು ಧಾರವಾಡದಲ್ಲಿ 'ಗೆಳೆಯರ ಗುಂಪು'ನ್ನು ಕಟ್ಟಿ ಹೊಸಕವಿ ಗಳಿಗೆ ಕಾವ್ಯನಿರ್ಮಿತಿಯ ತತ್ವಗಳನ್ನು ತಿಳಿಸಿದ ಸಂಗತಿ ಅತ್ಯಂತ ಮಹತ್ವಪೂರ್ಣ ವಾಗಿದೆ. ಬೆಳಗಾಂವಿ ಸಾಹಿತ್ಯ ಸಮ್ಮೇಳನದಲ್ಲಿ 'ಹಕ್ಕಿ ಹಾರುತಿದೆ' ಕವಿತೆಯ ಮೂಲಕ ಕನ್ನಡಿಗರ ಹೃದಯದಲ್ಲಿ ಬೇಂದ್ರೆ ಕಾವ್ಯ ಮಾಡಿದ ಅಸಾಧಾರಣ ಪರಿಣಾಮವನ್ನು ಎನ್ಕೆಯವರು ಹೇಳಿ ಈ ಕಾವ್ಯದ ಮಾಧುರ್ಯಕ್ಕೆ ಹಿರಿಯರಾದ ಮಾಸ್ತಿಯವರೂ ಮೆಚ್ಚಿ ಗುಣಗಾನ ಮಾಡಿದ್ದನ್ನು ಹೇಳಿರುವದು ಸಮಂಜಸ ವಾಗಿದೆ. ಮಾಸ್ತಿಯವರ ಔದಾರ್ಯದ ಫಲವಾಗಿ ಬೆಳಕುಕಂಡ 'ಗರಿ' ಕವನ ಸಂಗ್ರಹವು ಹೊಸಗನ್ನಡದ ಉತ್ಕೃಷ್ಟ ಭಾವಗೀತೆಗಳ ಸಂಕಲನವಾಗಿದೆ. ಬೇಂದ್ರೆ ಯವರ ಅತ್ಯಂತ ಜನಪ್ರಿಯ ಕವಿತೆಗಳೂ ಇದರಲ್ಲಿ ಸೇರಿದ್ದು, ಅವುಗಳ ಬಗ್ಗೆ ಎನ್ಕೆ ವಿಶದವಾಗಿ ಹೇಳಿರುವದರಿಂದ ಯುವಚೇತನ ಪುಳಕಿತರಾಗುವಂತಾಗಿದೆ.

ಬೇಂದ್ರೆ ಎಂ. ಎ. ವ್ಯಾಸಂಗ ಮಾಡಿ ಗದುಗಿನಲ್ಲಿ ಮುಖ್ಯೋಪಾಧ್ಯಾಯ ರಾದದ್ದು, ಅದನ್ನು ಬಿಟ್ಟು ದಶಕಗಳ ವರೆಗೆ ನಿರುದ್ಯೋಗಪರ್ವದಲ್ಲಿ ಅನುಭವಿಸಿದ ಕಷ್ಟದ ದಿನಗಳನ್ನು ಎನ್ಕೆಯವರು ವಿವರಿಸುತ್ತ ಕವಿ ಬೇಂದ್ರೆ ಕೀರ್ತಿಯ ಏರಿಕೆಗೆ ಯಾವ ಬಾಧೆಯೂ ಬರಲಿಲ್ಲವೆಂದು ಹೇಳಿರುವದು ಸತ್ಯಸಂಗತಿಯಾಗಿದೆ. ಬೇಂದ್ರೆ

ಯವರ ಮತ್ತು ಮಾಸ್ತಿಯವರ ಸಂಬಂಧ ಸೋದರ ಸಾಹಿತಿಗಳ ಮಧುರ ಸಂಬಂಧ ವಾಗಿದೆ. ಹೊಸಗನ್ನಡದ ನವೋದಯದಲ್ಲಿ ನಮ್ಮ ಸಾಹಿತ್ಯಲೋಕದ ವ್ಯಕ್ತಿಗಳ ಆದರ್ಶ ಸಾಹಿತ್ಯ ಮೈತ್ರಿಗೆ ಒಂದು ನಿದರ್ಶನವೆಂಬಂತೆ ಇರುವ ರೋಚಕ ಸಂಗತಿ ಗಳನ್ನು ಈ ಗ್ರಂಥಗಳಲ್ಲಿ ಎನ್ಕೆ ವಿವರಿಸಿರುವುದು ಅರ್ಥಪೂರ್ಣವಾಗಿದೆ. ಬೇಂದ್ರೆ ೧೯೪೪ರಲ್ಲಿ ಸೊಲ್ಲಾಪುರದ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇರಿ ನಿವೃತ್ತಿಯವರೆಗೆ ಗಡಿನಾಡಿನಲ್ಲಿ ಕನ್ನಡದ ಧ್ವಜವಾಗಿ ನಿಂತರು. ಮುಂದೆ ಧಾರವಾಡಕ್ಕೆ ಪುನಃ ಆಗಮಿಸಿ ಆಕಾಶವಾಣಿಯಲ್ಲಿ ಸೇವೆ ಸಲ್ಲಿಸಿದರು. ಹೀಗೆ ಅವರ ಕಾರ್ಯಕ್ಷೇತ್ರದ ಜೊತೆಗೆ ಸಾಹಿತ್ಯ... ನಿರ್ಮಿಸಿದ್ದನ್ನು ಎನ್ಕೆ ವಿವರಿಸಿದ್ದಾರೆ.

ಕವಿ ಬೇಂದ್ರೆಯವರ ೫೦, ೬೦, ೭೦, ೮೦, ೮೫ನೇ ಹುಟ್ಟುಹಬ್ಬವನ್ನು ಸಾಹಿತ್ಯಾಭಿಮಾನಿಗಳು ಧಾರವಾಡದಲ್ಲಿ ನಡೆಸಿದರು. ಬೇಂದ್ರೆ ಕನ್ನಡಿಗರ ಗೌರವಕ್ಕೆ ಸದಾ ಪಾತ್ರರಾಗುತ್ತ ಬಂದಿರುವರು. ಶಿವಮೊಗ್ಗಾ ಸಾಹಿತ್ಯಸಮ್ಮೇ ಳನದ ಅಧ್ಯಕ್ಷ ಪದವಿ, ಕರ್ನಾಟಕ ವಿಶ್ವವಿದ್ಯಾಲಯದ ಡಿ. ಲಿಟ್ ಪ್ರಶಸ್ತಿ, 'ಅರಳು ಮರಳು' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡಾಮಿ ಪ್ರಶಸ್ತಿ, 'ನಾಕುತಂತಿ'ಗೆ ಜ್ಞಾನಪೀಠ ಪ್ರಶಸ್ತಿ ಪಡೆದ ಬೇಂದ್ರೆಯವರು ಕನ್ನಡದ ಕೀರ್ತಿ ಸಂಪತ್ತಾಗಿದ್ದಾ ರೆಂದು ಎನ್ಕೆ ಹೇಳಿದ್ದಾರೆ. ಅವರ ೬೪ ಗ್ರಂಥಗಳು ಚೌಷಷ್ಟಿ ಕಲೆಗಳ ಸಂಕೇತ ವಾಗಿವೆಯೆಂದು ವಿವರಿಸಿ ಅವರ ಸಾಹಿತ್ಯವ್ಯಾಪ್ತಿಯ ವೈಪುಲ್ಯಗಳನ್ನು ಪರಿಚಯಿಸಿ ದ್ದಾರೆ. ಇದರ ಜೊತೆಗೆ ಅವರ ಸಂಖ್ಯಾಶಾಸ್ತ್ರ, ಜೋತಿಷ್ಯ, ವಿಜ್ಞಾನ ಮೊದಲಾದ ಅಧ್ಯಯನಕ್ಷೇತ್ರದ ವಿಸ್ತಾರವನ್ನು ಲೇಖಕರು ಹೇಳಿ, ಬೇಂದ್ರೆ ಅರವಿಂದರ ದರ್ಶನ ದಲ್ಲಿ ತಳೆದ ಆಸ್ಥೆಯನ್ನೂ ವಿವರಿಸಿದ್ದಾರೆ. ಬೇಂದ್ರೆಯವರ ಸಂಸಾರ ಜೀವನ, ಅವರ ಪುತ್ರ ಡಾ. ಬೇಂದ್ರೆ ಕನ್ನಡ ಸಾಹಿತ್ಯ ಸೇವೆಯಲ್ಲಿ ನಿರತರಾದದ್ದು ಮೊದಲಾದ ಸಂಗತಿಗಳನ್ನು ಹೇಳಿದ್ದಾರೆ. ಬೇಂದ್ರೆ ಕನ್ನಡ ಕಾವ್ಯ ಸಾಹಿತ್ಯದಲ್ಲಿ ಧ್ರುವನಕ್ಷತ್ರದಂತೆ ಬೆಳಗುವ ಚಿರಂಜೀವಿತ್ವದ ವ್ಯಕ್ತಿತ್ವವೆಂದು ಎನ್ಕೆ ಉದ್ಗರಿಸಿದ್ದಾರೆ. ಗ್ರಂಥದ ಕೊನೆಯಲ್ಲಿ 'ಕಾವ್ಯಶರೀರಿ ಬೇಂದ್ರೆ ೨೬-೧೦-೮೧ ರ ನಂತರ ಇನ್ನಿಲ್ಲ ಎಂದು ಹೇಗೆ ಹೇಳೋಣ ?' ಎಂದು ಭಾರವಾದ ಹೃದಯ ದಿಂದ ಕೇಳಿದ್ದಾರೆ.

ವರಕವಿ ಬೇಂದ್ರೆಯವರ ಜೀವನವನ್ನು ಈ ೫೧ ಪುಟಗಳ ಚಿಕ್ಕ ಪುಸ್ತಕದಲ್ಲಿ ಇಷ್ಟೊಂದು ಸಮಗ್ರವಾಗಿ ಪರಿಚಯಿಸಿರುವ ಎನ್ಕೆಯವರ ಲಲಿತವಾದ ನಿರೂಪಣಾ ಶೈಲಿ ಮನಸೆಳೆಯುವಂಥಹದಾಗಿದೆ. ಮುಖ್ಯವಾಗಿ ಬೇಂದ್ರೆ ಜೀವನವು ಸುಖ-ದುಃಖ ಸಂಗಮವಾದ ಹೃದ್ರಂಗವು ಪಾವನವೆಂಬ ನೋಟ ಇಲ್ಲಿ ಕಾಣುತ್ತದೆ. ಬೇಂದ್ರೆ

ಯವರ ಜೀವನದ ಬಗೆಗೆ ಹೇಳುವಾಗ ಅವರ ಕಾವ್ಯದ ಪಂಕ್ತಿಗಳನ್ನು ಉದ್ಧರಿಸಿ ನೆನಪಿಗೆ ತಂದುಕೊಟ್ಟಿರುವ ಬಗೆಯು ಅನುಕರಣೀಯವಾದದ್ದಾಗಿದೆ. ಬೇಂದ್ರೆಯವರು 'ಜಗದೇಳಿಗೆಯಾಗುವದಿದೆ ಕರ್ನಾಟಕದಿಂದೆ' ಎಂದು ಹೇಳಿದಂತೆಯೇ ಅವರ ಜೀವನ ಸಂದೇಶದ ಬಗೆಗೆ ಸಾಧನಕೇರಿಯ 'ಶ್ರೀಮಾತಾ'ದ ಕವಿನಿವಾಸದಲ್ಲಿರುವ ಅಪಾರವಾದ ಬೆರಗುಗೊಳಿಸುವ ಗ್ರಂಥರಾಶಿಯ ಬಗೆಗೆ, 'ಇಳಿದು ಬಾ ತಾಯಿ' ಎಂಬ ದೊಡ್ಡ ಅಭಿನಂದನ ಗ್ರಂಥದ ಉಲ್ಲೇಖ, ಬೇಂದ್ರೆ ಮಾತು ಇವುಗಳ ಬಗ್ಗೆ ಈ ಪುಸ್ತಕದಲ್ಲಿ ಬರೆಯಬಹುದಿತ್ತೆಂದು ಕೆಲವರಿಗೆ ತೋರಬಹುದು. ಆದರೆ ಕವಿ ಬೇಂದ್ರೆಯವರ ಬಗೆಗೆ ಹೇಳಬೇಕಾದದ್ದು ಬಹಳವಿದೆ. ಹಾಗೆ ಹೇಳಲು ಇರುವ ಮಿತಿಯಲ್ಲಿ ಎನ್ಕೆಯವರು ಬೇಂದ್ರೆಯವರ ಸಮಗ್ರ ಜೀವನ ಸಾಧನೆಯನ್ನು ಬಹು ಸಮರ್ಥವಾಗಿ ಪರಿಚಯಿಸಿದ್ದಾರೆ ಎನಿಸುತ್ತದೆ.

ಈ ಗ್ರಂಥದ ಉತ್ಕೃಷ್ಟತೆಯ ಬಗೆಗೆ ಇನ್ನೂ ಎರಡು ಮಾತುಗಳನ್ನು ಹೇಳಬಹುದು. ಮೊದಲನೆಯದಾಗಿ ಬೇಂದ್ರೆಯವರ ಜೀವನಕ್ಕೆ ಸಂಬಂಧಿಸಿದ ಸೊಗಸಾದ ರೇಖಾ ಚಿತ್ರಗಳು ಹಾಗೂ ಸುಂದರವಾದ ಮುದ್ರಣ. ಎರಡನೆಯದಾಗಿ ಇದಕ್ಕಿಂತ ಹೆಚ್ಚಾಗಿ ಆಕರ್ಷಕವಾದ ಶೀರ್ಷಿಕೆ. 'ಸಾವಿರದವರಕವಿ ಬೇಂದ್ರೆ' ಇದರಲ್ಲಿ ಸಾವು ಇರದ ವ ರ ಕ ವಿ ಬೇ ಂ ದ್ರೆ ಎಂದೂ, ಸಾವಿರದ ಕವನಗಳನ್ನು ಬರೆದ ವರಕವಿ ಬೇಂದ್ರೆ ಎಂದೂ ಸಾವಿರದ ವರ ಪಡೆದ ವರಕವಿ ಬೇಂದ್ರೆ ಎಂದೂ, ಧ್ವನಿತವಾಗುತ್ತದೆ. ಹೀಗಾಗಿ ಕನ್ನಡ ಕವಿಕಾವ್ಯ ಮಾಲೆಯಲ್ಲಿ ಎನ್ಕೆಯವರ ಬೇಂದ್ರೆ ಕವಿಜೀವನ ಚಿತ್ರವು ಸತತ ಆಕರ್ಷಣೆಯನ್ನು ನೀಡುವ ಸುಂದರ ಕೃತಿಯಾಗಿದೆ.

ನಾನಿಕಾಕಾ : ಎನ್ಕೆಬರೆಹ/೫೧೧

# 'ನಾನಿಯ ನೆನಹುಗಳು'

ಡಾ. ಸಿ. ವಿ. ವೇಣುಗೋಪಾಲ

'ನಾನಿಯ ನೆನಹುಗಳು' ಎನ್ಕೆ ಅವರ ಆತ್ಮಕಥನ. ಒಂದು ವಿಶಿಷ್ಟ ಕೃತಿ. ಆತ್ಮ ಕಥನಗಳಲ್ಲಿ ಹಲವು ಬಗೆ. ತಾವು ಹಿರಿಯರೆಂದೇ ಭಾವಿಸಿ ತಮ್ಮ ಹಿರಿಮೆಗೇ ಒತ್ತುಕೊಟ್ಟುಕೊಳ್ಳುವುವು ಹಲವು ತಮ್ಮ ಜೀವನದಲ್ಲಿ ಕೆಲವು. ಮೌಲ್ಯಗಳಿಗಾಗಿ ಹೋರಾಡಿ ಆ ಹೋರಾಟದ ಸ್ವರೂಪ, ಫಲಗಳನ್ನು ಇತರರಲ್ಲಿ ಹಂಚಿಕೊಳ್ಳುವ ಬಯಕೆ ಇನ್ನು ಹಲವರಿಗೆ. ತಮ್ಮ ಕಥೆಯನ್ನು ಪ್ರಾಸಂಗಿಕವಾಗಿಟ್ಟುಕೊಂಡು ಸಮಕಾಲೀನ ಸಮಾಜದ ವಿಶ್ಲೇಷಣೆ, ಚಿತ್ರವನ್ನು ಓದುಗರ ಮುಂದಿಡುವ ಪ್ರಯತ್ನ ಮತ್ತಿತರದು. ಇವುಗಳಲ್ಲಿ ಮೊದಲನೆಯದರ ಬಗ್ಗೆ ಯಾರೂ ತಲೆಕೆಡಿಸಿಕೊಳ್ಳಬೇಕಾಗಿಲ್ಲ. ಆದರೆ ಉಳಿದೆರಡೂ ಓದುಗನಿಗೆ ಅರ್ಥಪೂರ್ಣವಾಗಿಯೇ ಆಗುತ್ತವೆ-ಅವು ಪ್ರಾಮಾಣಿಕವಾಗಿದ್ದರೆ! ಇತರ ಎಲ್ಲ ಸಾಹಿತ್ಯ ಪ್ರಕಾರಗಳಿಗಿಂತಲೂ ಆತ್ಮಕಥನದಲ್ಲಿ ಲೇಖಕ ತನ್ನನ್ನು ತಾನು ಮುಚಿಸಿಕೊಳ್ಳುವುದು ಅಕ್ಷಮ್ಯ. ಪ್ರಾಮಾಣಿಕತೆಗೆ ಇನ್ನೊಂದು ಹೆಸರು ಎನ್ಕೆ. ಅವರು ಹೇಳಿಕೊಳ್ಳುವ ಅವರ ಕಥೆ ಈ ಕಾರಣದಿಂದ ನಮಗೆ ಪ್ರಿಯ. ಆದರೆ ಅವರ ಕೃತಿಯ ವೈಶಿಷ್ಟ್ಯಕ್ಕೆ ಮತ್ತೊಂದು ಕಾರಣವೇ ಇದೆ. ಅದು ಅವರು ತಮ್ಮನ್ನು ತಾವೇ ಸಂಪೂರ್ಣ ಅನ್ಯನಾಗಿ ನೋಡುವ ರೀತಿ. ಬರೆಹಗಾರ, ಸಂವೇದನಶೀಲ 'ನಾನಿ'ಯನ್ನು ಅವನ ಕವಚ-ತೊಗಲು, ರಕ್ತ, ಮಾಂಸಗಳಿಂದ ಕೂಡಿದ-ಎನ್ಕೆಯಿಂದ ಬೇರ್ಪಡಿಸಿ ನೋಡುವ ಅವರ ಬಗೆ ಆತ್ಮಕಥನದಲ್ಲಿ ಹಿಂದೆಂದೂ ಕಾಣದ ಬಗೆ, ಇದರಿಂದ ಅವರ ಆತ್ಮಕಥನಕ್ಕೆ - ಆತ್ಮಕಥೆಯ ಪ್ರಕಾರಕ್ಕೆ - ಆಗಿರುವ ಲಾಭ ಅಪಾರ. ಕೃತಿಗೆ ಸಾರ್ವತ್ರಿಕ ಮೌಲ್ಯ ದೊರಕಿಸಿಕೊಡುತ್ತದೆ. ಯಾವುದೇ ಬರೆಹಗಾರನ ಕಥೆಯಾಗುತ್ತದೆ. ನಾನಿಯ ಜೀವನದ 'ಕಟು-ಮಧುರ' ಅನುಭವಗಳು ಓದುಗರ ಜೀವನದ ಅನುಭವಗಳನ್ನೇ ಹೊಡೆದೆಬ್ಬಿಸಿ ನಾನಿಯನ್ನು ಆತ್ಮೀಯನನ್ನಾಗಿ ಮಾಡಿಸುತ್ತವೆ.

ಗದಗಿನಲ್ಲಿ ತಳೆದ ತಮ್ಮ ಜನ್ಮದ ನಂತರ ಹತ್ತಾರು ಊರು ತಿರುಗಿ ಹತ್ತಾರು ಬಗೆಯ ಅನುಭವಗಳಿಂದ ಇಲ್ಲಿಯವರೆಗೆ ಜೀವನದಲ್ಲಿ ಸುಖ-ದುಃಖಗಳಲ್ಲಿ ಸಮ

ಭಾಗಿಯಾಗಿ ಬೆಳೆದು ಬಂದಿರುವ ತಮ್ಮ ಬಾಳಿನ ಪುನಃಸ್ಮರಣೆ ಎನ್ಕೆ ಅವರ ಸಹಜ ಹಾಸ್ಯಪ್ರವೃತ್ತಿಯ ದೃಷ್ಟಿಕೋನದ ಬಲದಿಂದ ಉತ್ತಮ ಕಲಾಕೃತಿಯಾಗಿ ಹೊರ ಬಂದಿದೆ. ತಮ್ಮ ಬಾಲ್ಯವನ್ನೇ ಆಗಲೀ, ಯೌವನವನ್ನೇ ಆಗಲೀ ಅಥವಾ ಒಂದರ ಹಿಂದೊಂದರಂತೆ ಸಾವುಗಳನ್ನು ಕಂಡು ಪರಿಪಕ್ವವಾದ ಕಾಲವನ್ನೇ ಆಗಲೀ ನೆನಪಿಸಿಕೊಳ್ಳುವಾಗ ಎನ್ಕೆ ಮತ್ತೆ ಆ ಕಾಲಕ್ಕೇ ಜಿಗಿಯುತ್ತಾರೆ. ಬಾಲ್ಯ ಸಖ್ಯದ ಚಂಚಲತೆಯನ್ನು ಅವರ ಮತ್ತು ಬಾಪೂ ಸಾಬನ ಸಂಬಂಧ ಪರಿಪೂರ್ಣವಾಗಿ ನಮ್ಮ ಮುಂದಿಡುತ್ತದೆ. 'ಬಾಪೂ ಸಾಬನೊಡನೆ ಎರಡು ದಿನ ಪರಮಸಖ್ಯನಾದರೆ ಐದು ದಿನ 'ಪಾಲಾಫೂ!' ಹಾಗೆಯೇ ಬಾಲ್ಯದ ಮೌಲ್ಯಗಳ ಬಗ್ಗೆ ಅವರು ಹೊರ ಹೊಮ್ಮಿಸುವ ಸಂತಸೋದ್ಗಾರ- "ಆ ಜಕ್ಕಣಾಚಾರ್ಯರ ಭವ್ಯ ಕಟ್ಟಡದ ಮಹತ್ವ ಪ್ರಯೋಜನ ನನಗಿದ್ದುದು ನಮ್ಮ ಕ್ರೀಡಾಂಗಣದ ಮಟ್ಟಿಗೆ. ಸರಸ್ವತಿ ದೇವಸ್ಥಾನದ ಸಭಾಮಂಟಪದ ಕಟ್ಟೆಯ ಮೇಲೆ ನಾವು ಹುಲಿಮನೆ ಆಟವಾಡುತ್ತಿದ್ದರೂ ಅದರ ಹೊಯ್ಸಳ ಶಿಲ್ಪ ವೈಭವದ ಬಗ್ಗೆ ಪ್ರಜ್ಞಾಶೂನ್ಯರಾಗಿಯೇ ಇರುತ್ತಿದ್ದೆವು." ಕೀರ್ತನೆ ('ಕುತೂಹಲದ ಕಥೆಗಳು ನಾಟ್ಯವಾಡಿ ಹೋಗುತ್ತಿದ್ದವು.') ನಾಟಕಗಳಿಂದ ಆಕರ್ಷಿತನಾದ ಬಾಲಕ ಎನ್ಕೆ ಬಾಲ್ಯದ ಮುಗ್ಧತೆಯನ್ನು ನೆನಪಿಸಿಕೊಳ್ಳುವ ರೀತಿ – "ಹಿಂದಿನ ರಾತ್ರಿ ಚಕ್ರವ್ಯೂಹದಲ್ಲಿ ಮಡಿದ ವೀರ ಅಭಿಮನ್ಯು ಮರುದಿನ ಜೀವಂತನಾಗಿ ಹೋಟಲಿನಲ್ಲಿ ಭಜಿ ತಿನ್ನುತ್ತಿರುವಾಗ ಅಚ್ಚರಿಗಣ್ಣುಗಳಿಂದ ಆತನನ್ನೇ ನೋಡುತ್ತ ನಿಲ್ಲುತ್ತಿದ್ದೆ."

ಎನ್ಕೆ ಅವರ ಬಾಲ್ಯ ಜೀವನದ ಚಿತ್ರಣದಲ್ಲಿ ವಿಶೇಷವಾಗಿ ಕಂಡುಬರುವ ಮತ್ತೊಂದು ಗುಣ ಹಿರಿಯರನ್ನು, ಅವರ ವರ್ತನೆಗಳನ್ನು ಮಗುವಾಗಿ ನೋಡುವ ರೀತಿ. ಯಲ್ಲಮ್ಮ ಜೋಗತಿಗೆ ತಮ್ಮ ತಾಯಿ ಕೇಳುತ್ತಿದ್ದ ಪ್ರಶ್ನೆ ಎರಡೇ ಅಂತೆ – ತಂದೆಗೆ ಗದುಗಿಗೆ ವರ್ಗಾವಣೆ ಹಾಗೂ ಅವರ ಪ್ರಕೃತಿ, ಮತ್ತು ಅಕ್ಕನ ಭೂತ ಚೇಷ್ಟೆಗೆ ಪರಿಹಾರ. ಇದೇ ವೇಳೆಯಲ್ಲಿಯೇ ಅವರ ತಂದೆ ತೀರಿಕೊಂಡು ತಾಯಿ ವಿಧವೆಯಾದಾಗ ಇದೇ ಸಮಾಜವನ್ನೇ ಪರೋಕ್ಷವಾಗಿ ದೂಷಿಸುವ – ವಿಧವೆಯರನ್ನು ನಡೆಸಿಕೊಳ್ಳುವ ರೀತಿಗಾಗಿ – ಈ ಬಾಲಕನ ಭಾವನೆ ಎನ್ಕೆ ಶ್ರೇಷ್ಠ ಲೇಖಕರೆಂಬುವಕ್ಕೆ ಸಾಕ್ಷಿ. "ಹತ್ತು ದಿವಸದ ಸೂತಕ ಮುಗಿದಿತ್ತು. ಅಂದೂ ಮುಂಜಾನೆ ನಮ್ಮವ್ವನ ಮುಖ ನೋಡಲಿಕ್ಕಾಗಲಿಲ್ಲ ನನಗೆ. ಆ ಕಡೆಯ ಸಂದಿಯಿಂದ ಕಪ್ಪು ಮುಖದ ಒಬ್ಬ ಕ್ಷೌರಿಕ ಕಪ್ಪು ಕೂದಲ ನೀಳಜಡೆಯ ರಾಶಿಯ ಮುದ್ದೆ ಮಾಡಿ ಕೈಯಲ್ಲಿ ಹಿಡಿದುಕೊಂಡು ಹೋದುದು ನನ್ನ ಕಣ್ಣಿಗೆ ಬಿತ್ತು". ಎರಡು ಕಪ್ಪುಗಳಲ್ಲಿ ಎಷ್ಟು ಅಂತರ! ಈ ಘಟನೆಗೆ ಕಾರಣೀಭೂತವಾದ ಸಮಾಜದ ಕಪ್ಪು ಎಷ್ಟು ಘೋರ !

ನಾನಿಕಾಕಾ : ಎನ್ಕೆಬರೆಹ/೫೧೩

ನಾಸಿಯ ಯೌವ್ವನ, ಅವನಲ್ಲಿ ಪ್ರೇಮಾಂಕುರ, ವಿವಾಹ, ಮಧುಚಂದ್ರಕ್ಕೆ ಸಂಬಂಧಿಸಿದ ಪರ್ವಗಳು (ನಾಸಿಯ ನೆನಹುಗಳನ್ನು ೧೮ ಪರ್ವಗಳಾಗಿ ವಿಂಗಡಿಸಲಾಗಿದೆ - ನಾಸಿಯ ಭಾರತದ ಪರ್ವಗಳು!) ಎಂತಹವರನ್ನೂ ಪುಲಕಿತಗೊಳಿಸಬಲ್ಲವು. ನಿರ್ಭಿಡೆಯಿಂದ ಈ ಅವಸ್ಥೆಯ ಬಗ್ಗೆ ಹೇಳಿಕೊಳ್ಳುವ ಎನ್ಕೆ ಪ್ರಾಮಾಣಿಕತೆಯ ಶಿಖರವನ್ನೇ ಮುಟ್ಟಿದ್ದಾರೆ. ಒಂದೆರಡು ಉದಾಹರಣೆಗಳನ್ನು ಕೊಡದಿದ್ದರೆ ತೃಪ್ತಿಯಾಗದು, "ಪೈನಿ ತಿರುಗಿ ಗದುಗಿಗೆ ಬಂದಾಗ ಒಬ್ಬಳೇ ಬಂದಳು. ನಿಮ್ಮ ತಂಗಿ ಬರಲಿಲ್ಲವೇನು?' ಎಂದು ನಾನು ಪ್ರಶ್ನೆ ಮಾಡಿದ್ದಕ್ಕೆ ಏನೋ ಒಂದು ತರಹದ ತುಂಟ ನಗೆ ಬೀರಿದರು. ನಗೆ ತುಂಟಾಗಿದ್ದರೂ ನನಗೇನೋ ಆ ತುಂಟತನ ಆಪ್ಯಾಯಮಾನವಾಗಿತ್ತು." ಮಧುಚಂದ್ರ ಪರ್ವದಲ್ಲಿ ಬರುವ ಅವರು ನೆನಪಿಸಿಕೊಳ್ಳುವ ಸಂದರ್ಭ- "ಮದುವೆಯಾಗಿದ್ದರೂ ಮಧುಚಂದ್ರವನ್ನು ಮುಂದೆ ಹಾಕಲಾಗಿತ್ತು. ಮನೆಯ ಅಳಿಯನಾಗಿ ಕಣ್ಮುಂದೆಯೆ ದಿನಾಲು ಕೈಹಿಡಿದವಳನ್ನು ನೋಡುತ್ತಾ ಪತಿಯಾಗಿಯೂ ಆಕೆಗೆ ಪರಕೀಯನಾಗಿ ಉಳಿಯುವುದೆಂದರೆ? ಆಗಿನ ಕಾಲ ಅಂತಹುದು." ಮುಂದೆ ಪ್ರಥಮ ಬಾರಿಗೆ ಅವರಿಗಾದ ಪ್ರಣಯ ಸ್ಪರ್ಶದ ಪುಲಕ- ಅವರನ್ನೋದಿಯೇ ಸವಿಯಬೇಕು. ಹೌದು, ಇಂದಿನ ಯುವಕರು ಇದನ್ನೋದಿಯೇ ಸವಿಯಬೇಕು, ಅಲ್ಲವೇ? ಮನಸ್ಸು ಕೆಡಿಸಿಕೊಂಡು ತಲೆದಿಂಬಿನ ಪತ್ರವ್ಯವಹಾರ ಜೋರಾಗಿ ಕೊನೆಗೂ ಅತ್ತೆ, ಮಾವಂದಿರಿಂದ Line Clear ಮಾಡಿಕೊಂಡದ್ದಂತೂ ಲೇಖಕರಿಗೆ ಎಂದೂ ಮರೆಯಲಾರದ ಅನುಭವವೇ.

ಯೌವನದ ಈ ದಿನಗಳ ಚಿತ್ರಣದಲ್ಲಿ ಅವರ ನಿರ್ಭಿಡೆ ಸಹಜವೆಂದೆನಿಸಿದರೂ, ಮುಂದೆ ವಿಧುರರಾದ ನಂತರದ ಅವರ ಸ್ವಚಿತ್ರಣ ಎನ್ಕೆ ಅವರ ಬಗ್ಗೆ ನಮ್ಮಲ್ಲಿ ಆದರಭಾವವನ್ನೇ ಹುಟ್ಟಿಸುತ್ತದೆ– "ಧಾರವಾಡದ ವಿಧುರ ದಿನಗಳು ನನ್ನ ಮನಸ್ಸಿನಲ್ಲಿ ಏನೇನೋ, ಎಂತೆಂತಹುದೋ ಯೋಜನೆಗಳ ಕಲ್ಲೋಲ ಮಾಲೆಯನ್ನು ನಿರ್ಮಿಸಿ ನನ್ನನ್ನು ಅದರಲ್ಲಿ ಮುಳುಗಿಸಿದವು. ಹೆಣ್ಣಿನ ಕೋಮಲತೆ, ಸೌಕುಮಾರ್ಯ ಸ್ಪರ್ಶಗಳನ್ನೆ ಮರೆತ ಈ ಉಪ್ಪು ಹುಳಿ ಉಣ್ಣುವ ಜೀವ ಏನೇನೋ ನೀತಿ ಬಾಹಿರ ಸ್ವಪ್ನಗಳನ್ನು ಕಲ್ಪಿಸುವುದು. ಶರಚ್ಚಂದ್ರರ ದೇವದಾಸನಂತೆ ಒಬ್ಬ ಚಂದ್ರನನ್ನು ಪಡೆಯಬೇಕು. ಮದಿರೆಯ ಮಧುರ ಬಾಂಧವ್ಯ ಬೆಳೆಸಬೇಕು. ಕೊನೆಗೊಮ್ಮೆ ದೇವದಾಸನಂತೆ ಬೀದಿಯಲ್ಲಿ ಬಿದ್ದು ಹೋಗಬೇಕು. ಈ ಮನಸ್ಸು ಮೂಕಭಾವ ಯಂತ್ರವಾಗಿ, ಅದಕ್ಕೆ ನಾಲಗೆ ಇಲ್ಲವೆಂದು ಎಷ್ಟೋ ಸುರಕ್ಷಿತವಾಗಿದೆ, ಇಲ್ಲದಿದ್ದರೆ ತನಗೆನಿಸಿದುದನ್ನು ಮನಸ್ಸು ಹೇಳುತ್ತ ಹೊರಟವರೆ ಇಂದಿನ ನಾಗರಿಕ ಮನುಷ್ಯ ನಾಗರಿಕನೆಂದೆನಿಸಿಕೊಳ್ಳುತ್ತಿದ್ದನೆ." ನಾಗರಿಕರೆಂದೆನಿಸಿಕೊಳ್ಳುವವರಿಗೆ ಎನ್ಕೆ ಅವರ ಸವಾಲು ಇದು ಅಲ್ಲವೆ?

ನಾನಿಯ ಜೀವನ, ಬರೆಹ ಹಾಸು ಹೊಕ್ಕಾಗಿ ಬಂದಿರುವುದನ್ನು ಆತ್ಮಕಥೆ ಯುದ್ದಕ್ಕೂ ಕಾಣುತ್ತೇವೆ. ಜೀವನದಲ್ಲಿ ಕಂಡುಬಂದ ಸನಿಹದ ವ್ಯಕ್ತಿಗಳು ತಾವೇ ಮೊದಲಾಗಿ ವೈನಿ, ಅಣ್ಣಂದಿರು ಎಲ್ಲರೂ ಒಂದಿಲ್ಲೊಂದು ಕೃತಿಯಲ್ಲಿ ಸ್ಫೂರ್ತಿಯಾಗಿ ಬಂದಿರುವದನ್ನು ನೆನೆಸಿಕೊಳ್ಳುತ್ತಾರೆ. 'ವಸಂತ'ದ ಸಂಪಾದಕತ್ವ, ಕಾದಂಬರಿಗಳು, 'ಇಲೆಕ್ಷನ್' ದಿಂದ ಹಿಡಿದು ವರ್ಷಕ್ಕೊಂದರಂತೆ ಅವರು ಬರೆದ-ನಾಟಕಗಳು, ಮುಂಬೈ ಆಕಾಶವಾಣೀ ಜೀವನದಲ್ಲಿ ರಚಿಸಿದ ಮೌಲಿಕ ರೂಪಗಳು-'ಟೇಲರಿಂಗ್ ಮಾಡಿದ, Made to order ಬರವಣಿಗೆಯೊಳಗೂ ಒಮ್ಮೊಮ್ಮೆ ಮೌಲಿಕ ರಚನೆಗಳು ಮೂಡಿಬರುತ್ತವೆ.'(ಎನ್ಕೆ ಅವರ ನಿರಹಂಭಾವದ ಸಹಜತೆ)-ಅದರಿಂದ ರಚಿತವಾದ ಅನೇಕ ದೋಸೆ ಗೀತಗಳು, ಪ್ರಥಮ ಚಿತ್ರಗಳಲ್ಲೊಂದಾದ 'ಚಂದ್ರಹಾಸ'ದ ಕಥಾ ಸಂಭಾಷಣೆ ರಚನೆ, ಇವರಿಗೆ ಬಂದಿರುವ ಅನೇಕ ಪಾರಿತೋಷಕಗಳು ಇವೆಲ್ಲವುಗಳ ಹಿನ್ನೆಲೆಗಳ ಪರಿಚಯವಾದಾಗ ಎನ್ಕೆ ಅವರೆನ್ನುವಂತೆ 'ನಾನಿ ದೈವವಂಚಿತ' ಎನ್ನುವ ಉದ್ಗಾರ ನಮ್ಮಿಂದಲೂ ಬರುತ್ತದೆ. 'ಕಣ್ಣೀರು ನುಂಗಿ ನಗೆಯ ಸಾಹಿತ್ಯವನ್ನು ರಚಿಸುವ ಸ್ವಭಾವ ನನ್ನದು' ಎಂದು ಹೇಳಿಕೊಂಡರೂ, ನಾನಿಯ ನೆನಹುಗಳಲ್ಲಿಯೂ ನೋವನ್ನು ನೆನಪಿಸಿಕೊಳ್ಳುವಾಗಲೂ ನಮ್ಮನ್ನು ನಗಿಸಿದರೂ, ಅವರ ಹಲವು ಅನುಭವಗಳ ಕಟುತ್ವ ಅವರ ಹಾಸ್ಯ ಪ್ರವೃತ್ತಿಯನ್ನು ಒತ್ತಿ ಅವರಿಂದ ಒಂದೆರಡು ತೊಟ್ಟು ಕಣ್ಣೀರನ್ನು ಸುರಿಸಿಯೇ ಬಿಡುತ್ತದೆ. ಆ ಬಿಸಿ ನಮ್ಮನ್ನು ತಾಕುತ್ತದೆ. 'ಸ್ವಕರುಣೆ' ಎಂದು ನಾನಿ ಹೇಳಿಕೊಂಡರೂ ಸಮಾಜ ತನ್ನ ಜವಾಬ್ದಾರಿಯನ್ನು ಪಾಲಿಸಿಲ್ಲವೆಂಬ ಅನುಮಾನ ಬರುತ್ತದೆ. 'ಸಾಹಿತ್ಯ ವಿಮರ್ಶೆಯ ರಾಜಕಾರಣಿಗಳು ತೋರುತ್ತಿದ್ದ ಉಪೇಕ್ಷಭಾವ ಅವನನ್ನು ಅರ್ಬುದ ರೋಗದಂತೆ ಅರೆದು ತಿನ್ನುತ್ತಿತ್ತು' ಎನ್ನುವ ಅವರ ಹೃದಯ ಕಲಕುವ ಮಾತು ಎಲ್ಲರನ್ನೂ ನಕ್ಕು ನಲಿಸಿ, ಆದರೆ ವಿಮರ್ಶಕರ ತೀವ್ರ ಉಪೇಕ್ಷೆಗೊಳಗಾಗಿ ದಿನಗಳನ್ನು ಕಳೆದ ಅಮೇರಿಕದ ಹಾಸ್ಯ ಲೇಖಕ Edward Lear ನ್ನು ನೆನಪಿಗೆ ತರುತ್ತದೆ.

ಒಂದು ಮಾತ್ರ ಸತ್ಯ. ನಾನಿಯ ನೆನಹುಗಳು ಅದರಲ್ಲಿಯೇ ಬರುವ ಮೊದಲ ವಾಕ್ಯವನ್ನೇ ಅಸತ್ಯವಾಗಿ ಮಾಡಿದೆ. 'ನಾನಿ ಇನ್ನಿಲ್ಲ' ಎಂಬುದು ಸತ್ಯವಲ್ಲ. ಎನ್ಕೆ ಅವರ ಯಾವುದೇ ಕೃತಿಗಿಂತ, ಆತ್ಮಕಥಾ ಪ್ರಪಂಚದಲ್ಲಂತೂ ವಿಶಿಷ್ಟ ಸ್ಥಾನ ಗಳಿಸಿಕೊಳ್ಳುವ ನಾನಿಯ ನೆನಹುಗಳು ಈ ದಶಕದ ಉತ್ತಮ ಕಲಾಕೃತಿಗಳಲ್ಲೊಂದು.

# ನಮ್ಮ ಬರೆಹಗಾರರು

೧. ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್
ಳ೯, ಗವೀಪುರಂ ವಿಸ್ತರಣ, ಬೆಂಗಳೂರು-೫೬೦೦೧೯

೨. ಡಾ. ಶ್ರೀರಂಗ
೨೮, ೬ನೇ ಮುಖ್ಯಬೀದಿ, ಮಲ್ಲೇಶ್ವರಂ, ಬೆಂಗಳೂರು – ೨

೩. ಸ. ಸ. ಮಾಳವಾಡ ಮತ್ತು ಶಾಂತಾದೇವಿ ಮಾಳವಾಡ
'ಪ್ರಶಾಂತ', ಕಲ್ಯಾಣನಗರ, ಧಾರವಾಡ – ೭

೪. ಡಾ. ವಿ. ಕೃ. ಗೋಕಾಕ
ಕುಲಪತಿ, ಶ್ರೀ ಸತ್ಯಸಾಯಿ ಇನ್‌ಸ್ಟಿಟ್ಯೂಟ್ ಆಫ್ ಹೈಯರ್ ಲರ್‍ನಿಂಗ್,
ಪ್ರಶಾಂತ ನಿಲಯಂ, ಅಂಚೆ – ಜಿ. ವ್ಹಿ. ಅನಂತಪುರ-೫೧೫೧೩೪

೫. ಡಾ. ರಂ. ಶ್ರೀ. ಮುಗಳಿ
೯೫ ಬಿ, 'ಶ್ರೀ ಕಮಲಾಲಯ', ೧, ಎನ್ ಬ್ಲಾಕ್ – ರಾಜಾಜಿನಗರ,
ಬೆಂಗಳೂರು-೫೬೦೦೧೦

೬. ಶಾಂತಾದೇವಿ ಕಣವಿ ಮತ್ತು ಚೆನ್ನವೀರ ಕಣವಿ
'ಚೆಂಬೆಳಕು', ಕಲ್ಯಾಣನಗರ, ಧಾರವಾಡ – ೭

೭. ಗೌರೀಶ ಕಾಯ್ಕಿಣಿ
ಲೇಖಕ ಮತ್ತು ಪತ್ರಕರ್ತ, ಗೋಕರ್ಣ (ಉ. ಕ.)

೮. ಪ್ರಭಾ ಸಿರೂರ, ಆಕಾಶವಾಣಿ, ಧಾರವಾಡ – ೮

೯. ಚದುರಂಗ
೨೮೨೩, ಎಂಟನೆಯ ಅಡ್ಡ ಬೀದಿ, ವಿ. ವಿ. ಮೊಹಲ್ಲಾ, ಮೈಸೂರು-೫೭೦೦೦೨

೧೦. ಎಂ. ಎನ್. ಜೋಶಿ
ಮುಖ್ಯಸ್ಥರು, ಸಂಸ್ಕೃತ ವಿಭಾಗ. ಕರ್ನಾಟಕ ಕಲಾ ಮಹಾವಿದ್ಯಾಲಯ,
ಧಾರವಾಡ – ೧

೧೧. ಡಾ. ಸಿದ್ಧಯ್ಯ ಪುರಾಣಿಕ
'ಶ್ರೀಗಿರಿ', ೪/೫ – ಎ, ಅಲಿಅಸ್ಕರ ರೋಡ್, ಬೆಂಗಳೂರು – ೨

೧೨. ಜಯತೀರ್ಥ ರಾಜಪುರೋಹಿತ, ಅಂಚೆ : ರಾಯಚೂರು

೧೩. ವ್ಯಾಸರಾಯ ಬಲ್ಲಾಳ
೨, ರಾಮಭವನ, ಫ್ಲಾಟ ನಂ. ೧೪೨, ವಡಾಲಾ, ಮುಂಬೈ – ೩೧

೧೪. ಕೃಷ್ಣಮೂರ್ತಿ ಪುರಾಣಿಕ
'ಆಶೀರ್ವಾದ', ಸಾಹಿತ್ಯ ಸೇವಾ ಮಂದಿರ, ಗೋಕಾಕ
೧೫. ಗುರುನಾಥ ಜೋಶಿ, 'ಗಣೇಶಕುಂಜ', ಬಸವೇಶ್ವರ ನಗರ,
ಉದ್ಯಮನಗರ ಅಂಚೆ, ಹುಬ್ಬಳ್ಳಿ - ೨೦
೧೬. ಬಿ. ಎಚ್. ಶ್ರೀಧರ
ಲೇಖಕ ಮತ್ತು ಪತ್ರಕರ್ತ, ಶಿರಸಿ
೧೭. ಎಸ್. ಆರ್. ಮಳಗಿ
೧೦ ಬಿ, ಒಂದನೆಯ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦೦೧೦
೧೮. ಡಾ. ರಾ. ಯ. ಧಾರವಾಡಕರ
'ಸತ್ಯದೀಪ', ಸಾರಸ್ವತಪುರ, ಧಾರವಾಡ - ೨
೧೯. ಗೋ. ವೆಂ. ಚುಳಕಿ
೨೦೦/೩೩, ಹಿಂದವಾಡಿ, ಬೆಳಗಾವಿ
೨೦. ಶಾರದಾ ಜಡೆ
ರಾಜೇಶ್ವರಿ, ೧೧ನೆಯ ವಾರ್ಡ, ನೆಹರೂ ಸಹಕಾರಿ ಕಾಲನಿ, ಹೊಸಪೇಟೆ
೨೧. ಡಾ. ಪುಷ್ಪಾ ಜೋಶಿ
C/o ಡಾ. ಜೋಶಿ ಕ್ಲಿನಿಕ್, ಟ್ರಾಫಿಕ್ ಐಲ್ಯಾಂಡ್, ಹುಬ್ಬಳ್ಳಿ - ೨೮
೨೨. ಅನಂತ ಕುಲಕರ್ಣಿ, ಕಲ್ಯಾಣನಗರ, ಧಾರವಾಡ-೭
೨೩. ಅನುರಾಧಾ ಧಾರೇಶ್ವರ
ಆಕಾಶವಾಣಿ, ಧಾರವಾಡ - ೮
೨೪. ಭೀಮಸೇನ ಭಾರದ್ವಾಜ
ಎಂ. - ೯೫೫ ಬಿ, ಕೋಳ್ಸೆವಾಡಿ, ಕಲ್ಯಾಣ (ಮುಂಬೈ)-೪೨೧೩೦೬
೨೫. ಎಸ್. ವ್ಹಿ. ಸಬನೀಸ್
೫೨೩, 'ಆನಂದಮಯಿ', ಜೆ. ಪಿ. ನಗರ, ೩ನೆಯ ಘಟ್ಟ, ಬೆಂಗಳೂರು - ೭೮
೨೬. ಜೆ. ಎ. ಕುಲಕರ್ಣಿ
ಜನರಲ್ ಮ್ಯಾನೇಜರ, ಟ್ರೈವಾಕ್ ಉದ್ಯಮ ಸಂಸ್ಥೆ, ಧಾರವಾಡ - ೨
೨೭. ಡಾ. ವಾಮನ ಬೇಂದ್ರೆ, ರೀಡರ್ ಮತ್ತು ಮುಖ್ಯಸ್ಥ, ಕನ್ನಡ ವಿಭಾಗ,
ಕಿಟೆಲ್ ಮಹಾವಿದ್ಯಾಲಯ, ಧಾರವಾಡ
೨೮. ವ್ಹಿ. ಎಲ್. ಜೋಶಿ
'ಇಂದ್ರಪ್ರಸ್ಥ', ೧೧೬೫, ಕೊತವಾಲಗಲ್ಲಿ, ಬೆಳಗಾವಿ-೨
೨೯. ಜಿ. ವ್ಹಿ. ಹಿರೇಮಠ
ಬೆಳಗಾವಿ ರಸ್ತೆ, ಭಾವಸಾರ ಕ್ಷತ್ರಿಯ ಬೋರ್ಡಿಂಗ್ ಎದುರು, ಧಾರವಾಡ

೩೦. ಪರಿಮಳಾ ಬಾಡಗಂಡಿ
C/o. ಡಾ. ಸುಧಾಕರ ಕಟ್ಟಿ, ೩೦, ವಿಜಯನಗರ, ಹುಬ್ಬಳ್ಳಿ-೨೩

೩೧. ಕೆ. ಜಿ. ಕಾಟ್ವೆ
೬, ಆ್ಯಂಡ್ರೀ ರೋಡ್, ಶಾಂತಿನಗರ, ಬೆಂಗಳೂರ-೫೬೦೦೨೭

೩೨. ಎಚ್. ಎಸ್. ಪಾಟೀಲ
೨೧೩, ಮೊದಲನೇ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು ೧೦

೩೩. ಎಸ್. ಜಿ. ನಾಡಗೇರ
ಕೆ. ಇ. ಬೋರ್ಡ್ ಹೈಸ್ಕೂಲ್ ಕ್ವಾರ್ಟರ್ಸ್, ಧಾರವಾಡ-೭

೩೪. ಪ್ರೇಮಾ ಭಟ್
'ಶ್ರೀ ಗುರುಪ್ರಸಾದ', ನಂ. ೮೪೫, ೪ನೇ ಮುಖ್ಯ ರಸ್ತೆ
ವಿಜಯನಗರ, ಬೆಂಗಳೂರ-೪೦

೩೫. ಎ. ಎಂ. ಅಣ್ಣಿಗೇರಿ, ಪತ್ರಾವಳಿ ಚಾಳ, ಧಾರವಾಡ

೩೬. ಡಾ. ಸರೋಜಿನಿ ಶಿಂತ್ರಿ, ರಾಮನಗರ, ಧಾರವಾಡ

೩೭. ಎನ್. ಎಸ್. ವಾಮನ, ಮಹೇಂದ್ರಕರ ಚಾಳ, ಧಾರವಾಡ-೮

೩೮. ಅನಿಲ ಬೆಟಗೇರಿ, ಸಂಯುಕ್ತ ಕರ್ನಾಟಕ ವರದಿಗಾರ, ಧಾರವಾಡ

೩೯. ಎಚ್. ಜಿ. ಜೋಶಿ
ಎ-೧೬೬, 'ಜಾನಕೀ ಕೃಪಾ', ತೇಜಸ್ವಿನಗರ, ಧಾರವಾಡ-೨

೪೦. ಶಂಕರ ಪಾಟೀಲ
ಜಾಗೃತಿ ಪ್ರಿಂಟರ್ಸ್, ಜನತಾ ಬಜಾರ, ಹುಬ್ಬಳ್ಳಿ-೨೮

೪೧. ಎಸ್. ಜಿ. ರಘುರಾಂ
'ಜಯಲತಾ', ೬೬, ಜೋಡುರಸ್ತೆ, ಒಂದನೆಯ ಅಡ್ಡ ರಸ್ತೆ
ಸರಸ್ವತಿಪುರಂ, ಮೈಸೂರ-೯

೪೨. ಹ. ರಾ. ಕಿದಿಯೂರು. ಹೆಲ್ತ್ ಕ್ಯಾಂಪ್, ಗದಗ

೪೩. ಎನ್. ಎಸ್. ಗದಗಕರ
ನವಲೂರು ಅಗಸಿ, ಹೊಸಯಲ್ಲಾಪುರ, ಧಾರವಾಡ

೪೪. ಚಂದ್ರಮೌಳಿ ನಾಯ್ಕರ
ಸಂಸ್ಕೃತ ಅಧ್ಯಾಪಕ, ಕರ್ನಾಟಕ ಮಹಾವಿದ್ಯಾಲಯ, ಧಾರವಾಡ

೪೫. ಡಾ. ಬಿ. ಆರ್. ನಾಡಗೌಡ, ಆರೋಗ್ಯ ಕೇಂದ್ರ, ಸಿಂದಗಿ

೪೬. ಸ್ವಾ. ರಾ. ಕುಲಕರಣಿ
'ಹೇಮಾದ್ರಿ', ೮೭೨, ೪ನೆಯ ಟಿ ಬ್ಲಾಕ್
೩೮ನೆಯ ಅಡ್ಡ, ೧೯ನೆಯ ಮುಖ್ಯ ರಸ್ತೆ, ಜಯನಗರ, ಬೆಂಗಳೂರ-೪೧

೪೭. ಪಿ. ಪಿ. ತಾಂಬೆ
ಹೊಸ ಶಂಕರೀ ಗುಡಿ ಹತ್ತಿರ, ಪಾಲಾ ಬಾದಾಮಿ ರಸ್ತೆ, ಬೆಟಗೇರಿ, ಗದಗ
೪೮. ಡಾ. ಗಂಗೂಬಾಯಿ ಹಾನಗಲ್ಲ, ದೇಶಪಾಂಡೆನಗರ, ಹುಬ್ಬಳ್ಳಿ
೪೯. ಲೀನಾ ಶೆಣ್ವಿ
೫, ಬಾಗ್ರೇ ನಿವಾಸ, ರಾಂಬಾಗ್ ಲೇನ ನಂ. ೬, ಕಲ್ಯಾಣ-ಮುಂಬಯಿ
೫೦. ಜಿ. ಎನ್. ಜೋಶಿ
ಕಡಕೋಳ ಕಂಪೌಂಡ್, ಯು. ಬಿ. ಹಿಲ್ ರೋಡ್ – ೧, ಧಾರವಾಡ
೫೧. ಪದ್ಮಾ ಮುದಕವಿ
೧೧೫೦, ೧೪ನೆಯ ಮುಖ್ಯ ರಸ್ತೆ, ಕಾರ್ಡ್ ರೋಡ್ ಪಶ್ಚಿಮ, ೨ನೆಯಹಂತ
ರಾಜಾಜಿನಗರ ಬೆಂಗಳೂರು-೫೬೦೦೧೦
೫೨. ವತ್ಸಲಾ ಕುಲಕರ್ಣಿ, ಆಕಾಶವಾಣಿ, ಧಾರವಾಡ-೮
೫೩. ಲಲಿತ ರಾಮಣ್ಣ
೩೦/೨೧೦, ಕಪಿಲಾಶ್ರಮ, ವಿನ್ಸೆಂಟ್ ರೋಡ್, ಮಾತುಂಗಾ,
ಮುಂಬಯಿ-೪೦೦೦೧೯
೫೪. ಕೆ. ಎಸ್. ದೇಶಪಾಂಡೆ
ಗ್ರಂಥಪಾಲರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩
೫೫. ಶ್ರೀನಿವಾಸ ಕುಲಕರ್ಣಿ
ರೀಜನಲ್ ಆಫೀಸರ್, ನ್ಯಾಶನಲ್ ಫಿಲ್ಮ್ ಆರ್ಕೈವ್ಜ್ ಆಫ್ ಇಂಡಿಯಾ,
ಚೌಡಯ್ಯ ಮೆಮೋರಿಯಲ್ ಹಾಲ್, ಬೆಂಗಳೂರು-೩
೫೬. ಎಚ್. ಆರ್. ಲೀಲಾವತಿ
೭೬,ಜಯಲಲಿತ, ಡಬಲ್‌ರೋಡ್, ಒಂದನೆಯ ಅಡ್ಡ ಬೀದಿ, ಸರಸ್ವತಿಪುರಂ,
ಮೈಸೂರು-೫೭೦೦೦೯
೫೭. ದತ್ತಾತ್ರೇಯ ಕೆ. ಮೆಂಡನ್
ಸಾಧನಾ ವಠಾರ, ಪ್ರಾಸ್ಪೆಕ್ಟ್ ಬಿಲ್ಡಿಂಗ್,
೩೨೧, ಫ್ರೀರ್ ರೋಡ್, ಮುಂಬೈ-೩೮
೫೮. ಎಂ. ವಿ. ಸುಬ್ಬರಾಯ
ಕನ್ನಡ ಸಾಹಿತ್ಯ ಕುಟೀರ, ಬಿ ೭೭, ಸಮೀರಪುರ, ಚಾಮರಾಜ ಪೇಟೆ
(ಪಶ್ಚಿಮ). ಬೆಂಗಳೂರು-೫೬೦೦೧೮
೫೯. ಜಿ. ಎನ್. ಕುಂದರಗಿ
ರೀಡರ್, ತತ್ವಶಾಸ್ತ್ರ ವಿಭಾಗ, ಮಾನಸಗಂಗೋತ್ರಿ, ಮೈಸೂರು-೬

೬೦. ಶಾಮರಾಯ ರೋಹಿಡೇಕರ
೧೨, ಸ್ವಸ್ತಿಕ್ ಟಾಕೀಜ್ ಹಿಂಭಾಗ, ೨ನೆಯ ಮುಖ್ಯ ರಸ್ತೆ
ಶೇಷಾದ್ರಿಪುರ, ಬೆಂಗಳೂರು-೫೬೦೦೨೦

೬೧. ಗೀತಾ ಕುಲಕರ್ಣಿ, 'ರಾಜಹಂಸ', ರಜತಗಿರಿ, ಧಾರವಾಡ-೪

೬೨. ಸುರೇಂದ್ರ ದಾನಿ, 'ರುಕ್ಮಿಣೀಕೃಪಾ', ವಿದ್ಯಾನಗರ, ಹುಬ್ಬಳ್ಳಿ-೩೧

೬೩. ದ. ಪ. ಕರಮರಕರ, ವಿದ್ಯಾಗಿರಿ, ಧಾರವಾಡ-೪

೬೪. ಲೀಲಾ ಕೇಸರಿ, 'ಕೈಲಾಸ', ಸರ್ವೋದಯ ನಗರ, ಧಾರವಾಡ-೭

೬೫. ಮನೋಜ ಪಾಟೀಲ
ರಾಯರಮಠದ ಹತ್ತಿರ, ಪತ್ರಕರ್ತ, ಮಾಳಮಡ್ಡಿ, ಧಾರವಾಡ-೭

೬೬. ಪಾಟೀಲ ಪುಟ್ಟಪ್ಪ, ಸಂಪಾದಕರು, 'ಪ್ರಪಂಚ', ಹುಬ್ಬಳ್ಳಿ-೨೦

೬೭. ಬಿ. ಪಿ. ಭಟ್ ಎಂ. ಎ. (ಕ್ಯಾಂಟಬ್)
೩ ಕ್ರಾಸ್ ರೋಡ್ ಕ್ಯಾಂಪ್, ಪುಣೆ ೪೧೧೦೪೦

೬೮. ಜಿ. ಟಿ. ಐಯ್ಯಂಗಾರ, ನಿರ್ದೇಶಕರು, ಆಕಾಶವಾಣಿ, ಧಾರವಾಡ-೮

೬೯. ಎಸ್. ಸುಬ್ರಮಣಿ, ನಿರ್ದೇಶಕರು, ಆಕಾಶವಾಣಿ, ತಿರುಚಿನಾಪಳ್ಳಿ

೭೦. ಜಿ. ವಿ. ಕುಲಕರ್ಣಿ
೮-ಎ/೧೫, ಜವಾಹರ ಸೊಸೈಟಿ, ಬೋರಿವಲಿ (ಪಶ್ಚಿಮ), ಮುಂಬಯಿ-೨೨

೭೧. ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು,
ಜಗದ್ಗುರು ಮೂರುಸಾವಿರಮಠ, ಹುಬ್ಬಳ್ಳಿ

೭೨. ಕಮಲಾ ಕುಲಕರ್ಣಿ, ಮತ್ತು ಪ್ರಲ್ಹಾದ ಕುಲಕರ್ಣಿ
'ಮಾತೃಶ್ರೀ', ಮಹಿಷಿ ರಸ್ತೆ, ಧಾರವಾಡ-೭

೭೩. ರವಿ ಕುಲಕರ್ಣಿ
'ಪರಿಮಳ', ಗೂಡ್ಸ್‌ಶೆಡ್ ಹಿಂದೆ, ಧಾರವಾಡ-೭

೭೪. ಪದ್ಮಾ ಉಮ್ಮಡಿಕರ
೨೧, 'ಜೀವನ ಆಕಾಶ', ಫಾರ್ಜೆಟ್ ಹಿಲ್, ಮುಂಬಯಿ-೪೦೦೦೩೬

೭೫. ರಾಮಚಂದ್ರ ಕುಲಕರ್ಣಿ, ಕಮನಕಟ್ಟಿ, ಧಾರವಾಡ-೫೮೦೦೦೧

೭೬. ಪ್ರಮೀಲಾ ಚಳಗೇರಿ, 'ಲಕ್ಷ್ಮೀಸದನ', ಕೊಪ್ಪದ ಕೆರೆ, ಧಾರವಾಡ

೭೭. ಎನ್. ಕೆ. ಕುಲಕರ್ಣಿ, 'ಮಾತೃಶ್ರೀ', ಮಹಿಷಿ ರಸ್ತೆ, ಧಾರವಾಡ - ೭

೭೮. ಸಿದ್ಧಲಿಂಗ ಮಹಾಸ್ವಾಮಿಗಳು, ಜಗದ್ಗುರು ತೋಂಟದಾರ್ಯ ಮಠ, ಗದಗ

೭೯. ಮಾಧವ ನಾ. ಮಹಿಷಿ
ಸಹ ಸಂಪಾದಕರು, 'ಕಸ್ತೂರಿ', ಹುಬ್ಬಳ್ಳಿ - ೨೩

೭೦. ಶ್ಯಾಮಸುಂದರ ಬಿದರಕುಂದಿ
ಇಮ್ಯಾನುಯೆಲ್ ವಿಲ್ಲಾ, ಮಸಾರಿ, ಗದಗ

೭೧. ಡಿ. ಕೆ. ಜೋಶಿ
ಕಡೇಮನಿ ಕಂಪೌಂಡ್, ಮಾಳಮಡ್ಡಿ, ಧಾರವಾಡ – ೭

೭೨. ಚಿ. ಸೋಮಶೇಖರ, ಉಪವಿಭಾಗಾಧಿಕಾರಿ (ಕರಬೇತಿ), ಹುಬ್ಬಳ್ಳಿ

೭೩. ಡಾ. ಜಿ. ಎಂ. ಹೆಗಡೆ
ಕನ್ನಡ ಅಧ್ಯಾಪಕರು, ಕಿಟೆಲ್ ಕಾಲೇಜ, ಧಾರವಾಡ

೭೪. ಪ್ರೊ. ಎಚ್. ವ್ಹಿ. ನಾಗೇಶ, ಬಿ-೨, ವಿದ್ಯಾಗಿರಿ, ಧಾರವಾಡ – ೪

೭೫. ಡಾ. ವರದರಾಜ ಹುಯಿಲಗೋಳ, ಸಾಧನಕೇರಿ, ಧಾರವಾಡ - ೮

೭೬. ಕೀರ್ತಿನಾಥ ಕುರ್ತಕೋಟಿ
ಎಚ್/೧೦, ವಿಶ್ವವಿದ್ಯಾಲಯ ಸಿಬ್ಬಂದಿ ಭವನ,
ವಲ್ಲಭ ವಿದ್ಯಾನಗರ, ವ್ಹಾಯಾ ಆನಂದ-೩೮೮ ೧೨೦

೭೭. ಕೃಷ್ಣ ಕುಲಕರ್ಣಿ, ಶಿಕ್ಷಕರು, ಹೊಳೆಆಲೂರ

೭೮. ಗೋಪಾಲ ವಾಜಪೇಯಿ
ಉಪಸಂಪಾದಕ, 'ಕಸ್ತೂರಿ', ಹುಬ್ಬಳ್ಳಿ – ೨೩

೭೯. ಹೂಲಿ ಶೇಖರ್
೨೦/೧, ೭ನೇ ಟೈಪ್, ೧ನೇ ಕಾಲೋನಿ, ಅಂಬಿಕಾನಗರ (ಉ. ಕ.)

೮೦. ಜಿ. ಎಚ್. ರಾಘವೇಂದ್ರ
ಉಪಸಂಪಾದಕ, 'ಸಂಯುಕ್ತ ಕರ್ನಾಟಕ', ಹುಬ್ಬಳ್ಳಿ – ೨೩

೮೧. ಜಿ. ಎಸ್. ಗ್ರಾಮಪುರೋಹಿತ, ಆಕಾಶವಾಣಿ, ಧಾರವಾಡ – ೮

೮೨. ಡಾ. ವೀರಣ್ಣ ರಾಜೂರ
ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – ೩

೮೩. ದೇಶಪಾಂಡೆ ಸುಬ್ಬರಾಯ
೩೬, ಪಟಾಡಿಯಾ ಚಾಳ, ಕೇಶ್ವಾಪುರ, ಹುಬ್ಬಳ್ಳಿ

೮೪. ಪ್ರೊ. ವಸಂತ ಕುಷ್ಟಗಿ
ಪ್ರಿನ್ಸಿಪಾಲರು, ಎಂ ಎಸ್. ಐ. ಡಿಗ್ರಿ ಕಾಲೇಜು, ಕಲಬುರಗಿ

೮೫. ಡಾ. ಶಾಂತಿನಾಥ ದಿಬ್ಬದ
ಕನ್ನಡ ವಿಭಾಗ, ಕ. ವಿ. ಬೆಳಗಾವಿ ಆವರಣ, ಬೆಳಗಾವಿ

೮೬. ಡಾ. ಬಸವರಾಜ ಮಲಶೆಟ್ಟಿ
ಕನ್ನಡ ವಿಭಾಗ, ವಿಜಯನಗರ ಕಾಲೇಜು, ಹೊಸಪೇಟೆ

೯೭. ಸರೋಜ ಲೋಕೇಶ್
೧೭೯೮, ಚಂದ್ರವಿಲಾಸ, ೨ ನೇ ಮುಖ್ಯರಸ್ತೆ, ೩ ನೇ ಅಡ್ಡರಸ್ತೆ,
ಚಾಮುಂಡಿಪುರಂ, ಮೈಸೂರು-೪

೯೮. ಪ್ರೊ. ಜಿ. ಡಿ. ನಾಡಕರ್ಣಿ, ೨೩, ಅಶೋಕನಗರ, ಹುಬ್ಬಳ್ಳಿ

೯೯. ಎಸ್. ಪಿ. ಪಾಟೀಲ
ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩

೧೦೦. ಎಂ. ಜಿ. ವೆಂಕಟೇಶಯ್ಯ, ಬೆಂಗಳೂರು

೧೦೧. ಡಾ. ಚಿ. ನಾ. ದೇಶಪಾಂಡೆ, ಆನಂದನಗರ, ಧಾರವಾಡ-೭

೧೦೨. ನಾಗೇಶ ಶಾನಭಾಗ, ಆಕಾಶವಾಣಿ, ಧಾರವಾಡ-೮

೧೦೩. ಬಸವರಾಜ ವಕ್ಕುಂದ, ಮೂಲಕ: ಬಿ-೨, ವಿದ್ಯಾಗಿರಿ, ಧಾರವಾಡ-೪

೧೦೪. ಎಸ್. ಬಿ. ನರಗುಂದಕರ
ಪ್ರಾಧ್ಯಾಪಕರು, ಜನತಾ ಕಾಲೇಜು, ಧಾರವಾಡ-೪

೧೦೫. ಎಂ. ಎಸ್. ಕಾಮತ, ಮಾಳಮಡ್ಡಿ, ಧಾರವಾಡ-೭

೧೦೬. ಡಾ. ಜಿ. ಎಸ್. ಕಾಪಸೆ, ಪುರಂಧರೆ ಚಾಳ, ಸಪ್ತಾಪುರ, ಧಾರವಾಡ

೧೦೭. ಡಾ. ಸಿ. ವಿ. ವೇಣುಗೋಪಾಲ, ಕಲ್ಯಾಣನಗರ, ಧಾರವಾಡ-೭

# ಎನ್ಕೆ ಸನ್ಮಾನ

## 'ನಾನಿಕಾಕಾ': ಎನ್ಕೆ ಕುಲಕರ್ಣಿ ಅವರ
## ೭೧ ನೆಯ ಜನ್ಮದಿನ

೨೮/೨೯ ಅಗಸ್ಟ್ ೧೯೮೩

---

### ಸನ್ಮಾನ ಸಮಿತಿ

ಅಧ್ಯಕ್ಷರು :

ಶ್ರೀ ಮ. ಮಹೇಶನ್
ಜಿಲ್ಹಾಧಿಕಾರಿಗಳು, ಧಾರವಾಡ

ಸ್ವಾಗತಾಧ್ಯಕ್ಷರು :

ಶ್ರೀ ಸುಭಾಷ ಭರಣಿ
ಜಿಲ್ಲಾ ಪೋಲೀಸ ವರಿಷ್ಠಾಧಿಕಾರಿಗಳು, ಧಾರವಾಡ

ಕಾರ್ಯಾಧ್ಯಕ್ಷರು :

ಶ್ರೀ ಬಸವರಾಜ ನರೇಗಲ್ಲ
ಮಹಾನಗರ ಸಭೆಯ ಉಪಆಯುಕ್ತರು,
ಹುಬ್ಬಳ್ಳಿ-ಧಾರವಾಡ

ಕಾರ್ಯದರ್ಶಿ :

ಪ್ರೊ. ಶಿವಾನಂದ ಗಾಳಿ

ಸದಸ್ಯರು :

ಪಂಡಿತ ಜೆ. ಎ. ಕವಲಿ
ಪ್ರೊ. ಎಸ್. ಎಸ್. ಮಾಳವಾಡ
ಶ್ರೀ ಪಾಟೀಲ ಪುಟ್ಟಪ್ಪ
ಶ್ರೀಮತಿ ಗೀತಾ ಕುಲಕರ್ಣಿ
ಶ್ರೀ ಸುರೇಂದ್ರ ದಾನಿ
ಡಾ. ಆರ್. ಸಿ. ಹಿರೇಮಠ
ಪ್ರಿ. ನ. ವಜ್ರಕುಮಾರ
ಪ್ರೊ. ಕೆ. ಎಸ್. ದೇಶಪಾಂಡೆ
ಪ್ರೊ. ಆರ್. ಕೆ. ಕೊಪ್ಪರ
ಡಾ. ಜಿ. ಎಸ್. ಕಾಪಸೆ
ಪ್ರೊ. ಡಿ ಕೆ. ಜೋಶಿ

ಶ್ರೀ ಜಿ. ಬಿ. ಮನ್ವಾಚಾರ್
ಪ್ರೊ. ಸರೋಜಾ ನಾಯ್ಡು
ಶ್ರೀ ಜಿ. ಟಿ. ಐಯ್ಯಂಗಾರ
ಶ್ರೀ ಸುರೇಶ ಕುಲಕರ್ಣಿ
ಶ್ರೀ ಬಿ. ಮಹಾಬಲರಾವ್, ಗದಗ
ಪ್ರೊ. ಶ್ಯಾಮಸುಂದರ ಬಿದರಕುಂದಿ, ಗದಗ
ಶ್ರೀ ವಿಶ್ವನಾಥ ಬುಳ್ಳಾ, ಗದಗ
ಶ್ರೀ ವ್ಹಿ. ಎಸ್. ಕಾಶೆಟ್ಟಿ, ಹಾವೇರಿ
ಡಾ. ವಸಂತ ಕುಲಕರ್ಣಿ, ಅಥಣಿ
ಶ್ರೀ ಕೃಷ್ಣಮೂರ್ತಿ ಪುರಾಣಿಕ, ಗೋಕಾಕ
ಶ್ರೀ ಡಿ. ಕೆ. ಮೆಂಡನ್, ಮುಂಬಯಿ
ಪ್ರೊ. ಬಿ. ಬಿ. ಶೀಗೀಹಳ್ಳಿ, ಕಿತ್ತೂರ

ಗೌರವ ಗ್ರಂಥ ಸಂಪಾದಕ :

ಪ್ರೊ. ಸಿದ್ಧಲಿಂಗ ಪಟ್ಟಣಶೆಟ್ಟಿ

ಕಾರ್ಯದರ್ಶಿಯ ವಿಳಾಸ :

ಕಡೇಮನಿ ಕಂಪೌಂಡ್
ಮಾಳಮಡ್ಡಿ, ಧಾರವಾಡ - ೫೮೦ ೦೦೭

ಎನ್ಕೆ ಮಾಳಮಡ್ಡಿ, ಧಾರವಾಡ

N. K. KULKARNI, M.A., B.T. MALMADDI, DHARWAD

೧೨. ೨. '೮೩

ಶ್ರೀಯುತ ಶ್ರೀ.ಪ. ರವರಿಗೆ,

ಎನ್ಕೆ ನ ವಂದನೆಗಳು.

ನಿಮ್ಮ ೧೦. ೨. '೮೩ ರ ಓಲೆ. ಕೃತಜ್ಞ.

ನನ್ನ ಬಗ್ಗೆ ಒಂದು ಗೌರವಗ್ರಂಥ ಪ್ರಕಟಿಸುವ ನಿಮ್ಮ ಉದಾರ ವಿಚಾರ ತಿಳಿಯಿತು. ಗುಣವನ್ನು ಗುರುತಿಸಿ ಸಾಹಿತಿಯನ್ನು ಗೌರವಿಸಬೇಕೆನ್ನುವ ನಿಮ್ಮ ದೊಡ್ಡ ಮನಸ್ಸಿನ ಸಹೃದಯತ್ವಕ್ಕೆ ನನ್ನ ನಮನ.

ನೀವೂ ಪ್ರಿಯ ಗಾಳಿಯವರೂ ಸೋತ ಎತ್ತಿನ ಬಾಲ ಹಿಡಿದಿದ್ದೀರಿ. ಇದರಿಂದ ನಿಮಗೆ ದೊರಕಬಹುದಾದ ಪುರುಷಾರ್ಥ- ಸೋತಹದ್ದೇ ನಾನು ಬೇರೆ ಕಾಣೆ. ಅರ್ಥಹಾನಿ, ಮಾನಹಾನಿಗಳಿಗೆ ಪಕ್ಕಾಗದಿದ್ದರೆ ಸಾಕು, ದೇವರು ದೊಡ್ಡವ ಎನ್ನುವೆ.

ಒಬ್ಬ ಸಾಮಾನ್ಯ ಸಾಹಿತಿಗೆ ಈ ಬಗೆಯ ಸನ್ಮಾನವೆಂದರೆ ಬಹುಶಃ ಇದೇ ಪ್ರಥಮವೇನೋ. 'ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ' ಎಂದು ಮತ್ತೊಮ್ಮೆ ಹೇಳಿ ಈ ವಿಚಾರವನ್ನು ನಿಮ್ಮಲ್ಲಿ ಬಿಟ್ಟು, ಇನ್ನಿಲ್ಲವಾದ 'ಶೀ. ಗೋ.' ರವರನ್ನು ಧನ್ಯತೆಯಿಂದ ನೆನೆಯುತ್ತೇನೆ.

ನಿಮ್ಮವ,

ಎನ್ಕೆ